**ಐಕ್ಯಪರಸ್ಯ ವಾಕ್ಯಸ್ಯ ಅಖಂಡಾರ್ಥತ್ವೇ ತು— 'ತತ್ತ್ವಮಸೀತ್ಯಾದಿ ವಾಕ್ಯಂ ಅಖಂಡಾರ್ಥನಿಷ್ಠಂ, ಆತ್ಮಸ್ವರೂಪಮಾತ್ರನಿಷ್ಠಂ ವಾ। ಅಕಾರ್ಯಕಾರಣ ದ್ರವ್ಯಮಾತ್ರ ನಿಷ್ಠತ್ವೇ ಸತಿ ಸಮಾನಾಧಿಕರಣತ್ವಾತ್, ತನ್ಮಾತ್ರಪ್ರಶ್ನೋತ್ತರತ್ವಾದ್ವಾ, ಸೋಽಯಂ ದೇವದತ್ತ ಇತಿ ವಾಕ್ಯವತ್।'**

'ತತ್ತ್ವಮಸಿ' ಮುಂತಾದ ವಾಕ್ಯವು ಅಖಂಡಾರ್ಥಪರ. ಅಥವಾ ಆತ್ಮಸ್ವರೂಪಮಾತ್ರ ನಿಷ್ಠವಾಗಿದೆ. ಅಕಾರ್ಯಕಾರಣದ್ರವ್ಯಮಾತ್ರ ನಿಷ್ಠವಾಗಿದ್ದು ಸಮಾನಾಧಿಕರಣವಾಗಿರುವುದರಿಂದ ಅಥವಾ ಆತ್ಮಸ್ವರೂಪಮಾತ್ರದ ಪ್ರಶ್ನೆಗೆ ಉತ್ತರರೂಪವಾಗಿರುವುದರಿಂದ. 'ಅವನೇ ಈ ದೇವದತ್ತ' ಎಂಬ ವಾಕ್ಯದಂತೆ.' ಎಂದು.

ಇಲ್ಲಿ 'ಮೃತ್‌ಘಟಃ' 'ಮಣ್ಣೇ ಗಡಿಗೆ' ಎಂಬ ವಾಕ್ಯ 'ಗಡಿಗೆ–ಮಣ್ಣು' ಎಂಬ ಕಾರ್ಯಕಾರಣ ದ್ರವ್ಯಪರವಾಗಿದೆ. ಕಾರ್ಯಕಾರಣಭಾವರೂಪ ಸಂಸರ್ಗವನ್ನು ಹೇಳುವಲ್ಲಿ ಇದಕ್ಕೆ ತಾತ್ಪರ್ಯವಿದೆ. 'ಅ–ಕಾರ್ಯಕಾರಣ ದ್ರವ್ಯ' ಮಾತ್ರ ಪರವಲ್ಲ. ಆದರಿಂದ ಅಲ್ಲಿ ಅತಿವ್ಯಾಪ್ತಿ ಇಲ್ಲ.

'ನೀಲ ಉತ್ಪಲ' ಎಂಬಲ್ಲಿ ನೀಲ ಉತ್ಪಲಗಳು ಕಾರ್ಯಕಾರಣಗಳಾದರೂ ಕಾರ್ಯಕಾರಣ ದ್ರವ್ಯವಲ್ಲ, ನೀಲವು ಗುಣವಾಗಿದೆ. ಕಾರ್ಯಕಾರಣ ದ್ರವ್ಯ ಮಾತ್ರ ನಿಷ್ಠವಲ್ಲದ್ದರಿಂದ ಅತಿವ್ಯಾಪ್ತಿ ಇಲ್ಲ.

'ದೇವದತ್ತನ ಗ್ರಾಮ' ಎಂಬುದು ಅಕಾರ್ಯ ಕಾರಣದ್ರವ್ಯಗಳಾದ ದೇವದತ್ತ ಮತ್ತು ಗ್ರಾಮಗಳ ಸಂಬಂಧ ಪರವಾದರೂ ದೇವದತ್ತಸ್ಯ ಎಂದು ಷಷ್ಠೀವಿಭಕ್ತಿ, ಗ್ರಾಮ ಎಂದು ಪ್ರಥಮಾವಿಭಕ್ತಿಗಳಿವೆ. ಏಕವಿಭಕ್ತಿ ಇಲ್ಲವಾದ್ದರಿಂದ ಸಾಮಾನಾಧಿಕರಣ್ಯವಿಲ್ಲವಾದ್ದರಿಂದ ಅತಿವ್ಯಾಪ್ತಿ ಇಲ್ಲ.

**'ನ ಚಾಂತ್ಯಹೇತೋರಸಿದ್ಧಿಃ। ಕೋಽಹಮಿತ್ಯಾತ್ಮ ಸ್ವರೂಪ ಮಾತ್ರೇ ಬುಭುತ್ಸಿತೇ ಅಸ್ಯ ಪ್ರವೃತ್ತೇಃ'**

'ತನ್ಮಾತ್ರಪ್ರಶ್ನೋತ್ತರತ್ವಾತ್' ಎಂಬ ಅಂತಿಮ ಹೇತುವಿಗೆ ಅಸಿದ್ಧಿ ಇಲ್ಲ. 'ನಾನು ಯಾರು?' ಎಂಬ ಶ್ವೇತಕೇತುವಿನ ಪ್ರಶ್ನೆಗೆ ಉತ್ತರರೂಪವಾಗಿ 'ಅವನೇ ನೀನು' ಎಂದು ತತ್ತ್ವಮಸಿ ವಾಕ್ಯ ಹೊರಟಿರುವುದರಿಂದ ಆತ್ಮಸ್ವರೂಪಮಾತ್ರ ಪ್ರಶ್ನೋತ್ತರತ್ವರೂಪ ಹೇತುವು ತತ್ತ್ವಮಸಿವಾಕ್ಯರೂಪ ಪಕ್ಷದಲ್ಲಿ ಇದೆ.

**ನಚ ಹೇತುದ್ವಯೇಽಪಿ ದೃಷ್ಟಾಂತಃ ಸಾಧ್ಯವಿಕಲಃ। ಕೋಽಯಮಿತಿ ದೇವದತ್ತ ಸ್ವರೂಪ ಮಾತ್ರೇ ಪೃಷ್ಟೇ ಅಸ್ಯ ಪ್ರವೃತ್ತೇಃ।'**

ಎರಡೂ ಹೇತುಗಳಲ್ಲಿ 'ಸೋಽಯಂ ದೇವದತ್ತಃ' ಎಂಬ ದೃಷ್ಟಾಂತ ಸಾಧ್ಯವಿಕಲವಾಗಿದೆ

ಎನ್ನಲಾಗದು. ಏಕೆಂದರೆ ಇವನು ಯಾರು? ಎಂದು ಅಖಂಡವಾದ ದೇವದತ್ತಸ್ವರೂಪ ಮಾತ್ರದ ವಿಷಯದಲ್ಲಿ ಮಾಡಿದ ಪ್ರಶ್ನೆಗೆ ಉತ್ತರವಾಗಿ 'ಅವನೇ ಈ ದೇವದತ್ತ' ಎಂದು ಈ ವಾಕ್ಯ ಹೊರಟಿದೆ.

**'ವಿಪಕ್ಷೇ ಪ್ರಶ್ನೋತ್ತರಯೋರ್ವೈಯಧಿಕರಣ್ಯ ಪ್ರಸಂಗೋ ಬಾಧಕ ಇತಿ'**

ಅಖಂಡ ಆತ್ಮಸ್ವರೂಪ ವಿಷಯದಲ್ಲಿ ಮಾತ್ರವೇ ಪ್ರಶ್ನೆ ಬಂದಾಗ ಈ ಉತ್ತರ ಹೊರಟಿದ್ದು ನಿಜ, ಆದರೂ ಉತ್ತರ ಆತ್ಮಸ್ವರೂಪ ಮಾತ್ರ ನಿಷ್ಠವೆನ್ನಬೇಕಾಗಿಲ್ಲ, ಎಂದು ಅಪ್ರಯೋಜಕತ್ವ ಶಂಕೆ ಮಾಡಿದರೆ, ಪ್ರಶ್ನೆ ಹಾಗೂ ಉತ್ತರಗಳಿಗೆ ಭಿನ್ನ ವಿಷಯತ್ವರೂಪ ವೈಯಧಿಕರಣ್ಯ ಪ್ರಸಂಗವು ಬಾಧಕ ಎಂದು.



**अत्र ब्रूमः। आद्यलक्षणे संसर्गशब्देन संसर्गमात्रोक्तौ ''अप्राप्तयोः प्राप्तिः संयोग'', इत्यादिसंसर्गलक्षणवाक्ये अव्याप्तिः । पदस्मारितपदार्थसंसर्गोक्तौ तु विषं भुंक्ष्वेत्यादावतिव्याप्तिः, तस्य पदस्मारितपदार्थसंसर्गाप्रमापकत्वात् । न चेदमपि ''द्विषदन्नं न भोक्तव्यम्'' इति शास्त्रमूलकत्वात् शास्त्रीयपदस्मारितपदार्थसंसर्गप्रमापकम्, अस्य युक्तिमूलत्वेनाशास्त्रमूलत्वात् । प्रतिपिपादयिषितपदार्थसंसर्गोक्तौ च चंद्रब्रह्मादिशब्दार्थानां प्रश्नहेतुसंशयधर्मित्वेन प्रागेव सामान्यतो ज्ञाततया स्वरूपेणाप्रतिपिपादयिषितत्वात् । संसर्गप्रतियोगित्वेन तु प्रतिपिपादयिषितत्वे विवक्षिते संसर्गाप्रमापकत्वासंभवात् ।**

**संसर्गमात्रेति** ।। पदस्मारितपदार्थप्रतियोगित्वाद्यौदासीन्येन संसर्गोक्तावित्यर्थः ।। **संसर्गलक्षणेति** ।। संयोगलक्षणेत्यर्थः ।। **अव्याप्तिरिति** ।। अप्राप्तयोः प्राप्तिः संयोग इति प्राप्तिपदेनैव संसर्गस्य पदार्थविधयोपस्थापनादिति भावः ।। **पदस्मारितेति** ।। यद्यप्येवमप्यप्राप्तयोः प्राप्तिः संयोग इत्यादिलक्षणवाक्यानां गामानयेत्यादिवाक्यांतराणामिव पदस्मारितपदार्थप्रतियोगिकसंसर्गांतरगोचरप्रमाजनकत्वमस्ति । ततोऽपि संसर्गविधया तादृशसंसर्गांतरभानादित्युक्ताव्याप्तितादवस्थ्यम्. तथापि लक्षणवाक्यानां पदस्मारितपदार्थससंसर्गागोचरत्वमिति

पररीतिमनुसृत्योक्ताव्याप्तिपरिहाराय विशेषविवक्षेयमिति ध्येयम् ।। **तस्येति** ।। पुत्रादिकं प्रति परमाप्तेन पित्रादिनोक्तस्य वैरिगृहभोजननिवृत्तिपरस्य विषं भुंक्ष्वेत्यादिवाक्यस्य शक्त्या स्वगतविषादिपदस्मारितपदार्थसंसर्गाप्रमापकत्वादित्यर्थः।। **इदमपीति**।। विषं भुंक्ष्वेत्यादिवाक्यमपीत्यर्थः ।। **शास्त्रमूलकत्वादिति** ।। तथाच विषं भुंक्ष्वेत्यादिवाक्यं, वैरिगृहभोजनाकर्तव्यत्वपरम्, स्वमूलभूतशास्त्रस्मारकतया शास्त्रीयपदस्मारितपदार्थसंसर्गप्रमां प्रति प्रयोजकमिति तादृशप्रमाप्रयोजकत्वाभावलक्षणाभावान्नास्ति तस्मिन्वाक्येऽतिव्याप्तिरिति भावः ।। **अशास्त्रमूलत्वादिति** ।। शास्त्रानुसंधानरहितस्यापि विषं भुंक्ष्वेत्यादिवाक्यान्निवृत्तिदर्शनादिति भावः । प्रतिपिपादयिषितेति संसर्गविशेषणम् ।। **प्रागेवेति** ।। संशयस्य धर्मिज्ञानं विनानुदयादिति भावः ।।



ಹೀಗೆ ಅದ್ವೈತಿಗಳಿಗೆ ಅಭಿಮತವಾದ ಅಖಂಡಾರ್ಥತ್ವವನ್ನು ಅನುವಾದ ಮಾಡಿ ಮುಂದೆ **'ಅತ್ರಬ್ರೂಮಃ'** 'ಈ ವಿಷಯದಲ್ಲಿ ನಮ್ಮ ಆಕ್ಷೇಪಗಳನ್ನು ಹೇಳುತ್ತೇವೆ' ಎನ್ನುತ್ತಾರೆ.

**ಆದ್ಯಲಕ್ಷಣೇ ಸಂಸರ್ಗ ಶಬ್ದೇನ ಸಂಸರ್ಗಮಾತ್ರೋಕ್ತೌ ಅಪ್ರಾಪ್ತಯೋಃ ಪ್ರಾಪ್ತಿಃ ಸಂಯೋಗ' ಇತ್ಯಾದಿ ಸಂಸರ್ಗಲಕ್ಷಣ ವಾಕ್ಯೇ ಅವ್ಯಾಪ್ತಿಃ ।'**

ಆದ್ಯಲಕ್ಷಣದಲ್ಲಿ ಅಂದರೆ ಅಪರ್ಯಾಯ ಪದಾನಾಂ ಸಂಸರ್ಗಾಗೋಚರ ಪ್ರಮಾಜನಕತ್ವ ರೂಪ ಅಖಂಡಾರ್ಥತ್ವಲಕ್ಷಣದಲ್ಲಿ ಸಂಸರ್ಗ ಎಂದರೆ 'ಸಮಭಿವ್ಯಾಹೃತ ಸ್ವಸ್ವ ಪದ ಸ್ಮಾರಿತ ಪದಾರ್ಥ ಪ್ರತಿಯೋಗಿಕ ಸಂಸರ್ಗ' ಎನ್ನಬೇಕು. ಹಾಗೆ ಹೇಳದೆ 'ಸಂಸರ್ಗ' ಎಂದು ಮಾತ್ರ ಹೇಳಿದರೆ ಸಂಯೋಗ ಸಂಸರ್ಗದ ಲಕ್ಷಣವನ್ನು ಹೇಳುವ 'ಅಪ್ರಾಪ್ತಯೋಃ ಪ್ರಾಪ್ತಿಃ ಸಂಯೋಗಃ' ಎಂಬ ವಾಕ್ಯದಲ್ಲಿ ಅವ್ಯಾಪ್ತಿ. ಸಂಸರ್ಗಾಗೋಚರ ಪ್ರಮಾಜನಕತ್ವವೆಂಬ ಲಕ್ಷಣ ಅದರಲ್ಲಿ ಬರುವುದಿಲ್ಲ.

'ಪ್ರಾಪ್ತಿ' ಎಂದರೆ ಸಂಸರ್ಗ. ಅದು 'ಪ್ರಾಪ್ತಿ'ಪದಸ್ಮಾರಿತ ಪದಾರ್ಥರೂಪವಾಗಿಯೇ ಪ್ರಕಾರವಾಗಿ ಕಾಣುತ್ತದೆ. ಆದರಿಂದ 'ಪದಸ್ಮಾರಿತ ಪದಾರ್ಥ ಪ್ರತಿಯೋಗಿಕ ಸಂಸರ್ಗ'ವನ್ನೇ ವಿವಕ್ಷೆ ಮಾಡಬೇಕು. 'ಪ್ರಾಪ್ತಿ' ಶಬ್ದದಿಂದ ಕಾಣುವ ಸಂಸರ್ಗವು 'ಪ್ರಾಪ್ತಿ'ಪದಸ್ಮಾರಿತ 'ಪದಾರ್ಥ'ವೇ ಆಗಿದೆ ಹೊರತು ಅಂಥ ಪದಾರ್ಥಪ್ರತಿಯೋಗಿಕ'ವಲ್ಲ. ಅಖಂಡಾರ್ಥಪರವಾಗಿರುವುದರಿಂದ ಪದಾರ್ಥಪ್ರತಿಯೋಗಿಕ ಸಂಸರ್ಗಾಗೋಚರಪ್ರಮಾಜನಕತ್ವವೇ ಬರುವುದರಿಂದ ಅವ್ಯಾಪ್ತಿ ಇಲ್ಲ.

ಯದ್ಯಪಿ 'ಅಪ್ರಾಪ್ತಯೋಃ ಪ್ರಾಪ್ತಿಃ ಸಂಯೋಗಃ' ಎಂಬ ವಾಕ್ಯವೂ ಕೂಡ 'ಗಾಂ ಆನಯ' ಇತ್ಯಾದಿ ವಾಕ್ಯದಂತೆ ಸಂಸರ್ಗವಿಧಯಾ ಪದಸ್ಮಾರಿತ ಪದಾರ್ಥ ಪ್ರತಿಯೋಗಿಕ ಸಂಸರ್ಗ ಬೋಧಕವೇ ಆಗಿದೆ. 'ಅಪ್ರಾಪ್ತ'ಪದ ಮತ್ತು ಷಷ್ಠೀವಿಭಕ್ತಿ ಎಂಬ ಪದಗಳಿಂದ ಸ್ಮಾರಿತವಾದ ಪದಾರ್ಥಗಳ ಪರಸ್ಪರ ಅನ್ವಯರೂಪವಾದ ಸಂಸರ್ಗವು ಸಂಸರ್ಗವಿಧಯಾ ಶಾಬ್ದಬೋಧದಲ್ಲಿ ಕಾಣುತ್ತದೆ. ಸಂಸರ್ಗಾಗೋಚರಪ್ರಮಾಜನಕತ್ವವೆಂಬ ಲಕ್ಷಣ ಈ ವಾಕ್ಯದಲ್ಲಿಲ್ಲ. ಅವ್ಯಾಪ್ತಿ ಪರಿಹಾರವಾಗುವುದಿಲ್ಲ. ಆದರೂ ಅದ್ವೈತಿಯ ರೀತಿಯಿಂದ, ಲಕ್ಷಣ ವಾಕ್ಯಗಳು ಲಕ್ಷ್ಯಸ್ವರೂಪ ಮಾತ್ರ ವಿಷಯಕ ನಿರ್ವಿಕಲ್ಪಕ ಜ್ಞಾನ ಜನಕವೇ ಹೊರತು ಅವು ಲಕ್ಷ್ಯದಲ್ಲಿ ಲಕ್ಷಣವನ್ನು ಬೋಧಿಸುವುದಿಲ್ಲವಾದ್ದರಿಂದ ಅವರ ರೀತಿಯಿಂದ ಅಖಂಡಾರ್ಥಪರವಾಗಿರುವುದರಿಂದ ಸಂಸರ್ಗಾಗೋಚರ ಪ್ರಮಾಜನಕತ್ವಲಕ್ಷಣವೇ ಬರುತ್ತದೆ, ಅವ್ಯಾಪ್ತಿ ಇಲ್ಲ ಎಂದು ಅಭಿಪ್ರಾಯ.

'ನಿರ್ವಿಕಲ್ಪಕಜ್ಞಾನ'ವೆನ್ನುವುದೇ ಮೊದಲಕೊಂಬಿನಂತೆ ಅಪ್ರಾಮಾಣಿಕ. ವಾದಕ್ಕಾಗಿ ಅದನ್ನು ಒಪ್ಪಿಕೊಂಡು ವಿಚಾರಮಾಡುತ್ತಾರೆ.

**'ಪದಸ್ಮಾರಿತ ಪದಾರ್ಥಸಂಸರ್ಗೋಕ್ತೌ ತು ವಿಷಂ ಭುಂಕ್ಷ್ವೇತ್ಯಾದೌ ಅತಿವ್ಯಾಪ್ತಿಃ। ತಸ್ಯ ಪದಸ್ಮಾರಿತ ಪದಾರ್ಥ ಸಂಸರ್ಗಾಪ್ರಮಾಪಕತ್ವಾತ್'**

'ಪದಸ್ಮಾರಿತಪದಾರ್ಥ ಸಂಸರ್ಗೋಕ್ತೌ ತು' ಪದಸ್ಮಾರಿತ ಪದಾರ್ಥಪ್ರತಿಯೋಗಿಕ ಸಂಸರ್ಗವಿವಕ್ಷೆ ಮಾಡಿದಾಗ ಹಿಂದೆ ಹೇಳಿದ ಅವ್ಯಾಪ್ತಿ ಇಲ್ಲದಿದ್ದರೂ 'ವಿಷಂ ಭುಂಕ್ಷ್ವ' 'ವಿಷವನ್ನು ತಿನ್ನು' ಎಂಬ ಮಾತಿನಲ್ಲಿ ಅತಿವ್ಯಾಪ್ತಿ. ಶತ್ರುಗಳ ಮನೆ ಅನ್ನ ಉಣಲು ಹೊರಟ ಮಗನಿಗೆ ಪರಮ ಆಪ್ತನಾದ ತಂದೆ ಹೇಳುವ ಮಾತು ಇದು. 'ನಿಷಿದ್ಧವಾದ ಶತ್ರುವಿನ ಅನ್ನ ಉಣಲು ಹೊರಟಿದ್ದಾನೆ' ಎಂದು ಕೋಪ ಈ ಮಾತಿನಿಂದ ವ್ಯಕ್ತವಾಗುತ್ತಿದೆ. ಹೊರತು ಇದು ಲಕ್ಷಣವಾಕ್ಯವಲ್ಲ. 'ಶತ್ರುವಿನ ಮನೆ ಅನ್ನ ಉಣಬೇಡ' ಎಂದು ಈ ಮಾತಿಇನ ಅರ್ಥ. ಆದರಿಂದ 'ವಿಷ' ಪದ ಸ್ಮಾರಿತವಾದ ವಿಷದ ಸಂಸರ್ಗವನ್ನು ಈ ಮಾತು ಬೋಧಿಸುವುದಿಲ್ಲವಾದ್ದರಿಂದ 'ವಿಷ' ಪದಸ್ಮಾರಿತ ಪದಾರ್ಥಸಂಸರ್ಗ ಗೋಚರಪ್ರಮಾಜನಕತ್ವವಿಲ್ಲ. ಅಗೋಚರಪ್ರಮಾಜನಕತ್ವವೇ ಇರುವುದರಿಂದ ಅತಿವ್ಯಾಪ್ತಿ.

**'ನ ಚೇದಮಪಿ ದ್ವಿಷದನ್ನಂ ನ ಭೋಕ್ತವ್ಯಂ' ಇತಿ ಶಾಸ್ತ್ರಮೂಲಕತ್ವಾತ್ ಶಾಸ್ತ್ರೀಯ ಪದಸ್ಮಾರಿತಪದಾರ್ಥ ಸಂಸರ್ಗ ಪ್ರಮಾಪಕಂ। ಅಸ್ಯ ಯುಕ್ತಿಮೂಲತ್ವೇನ ಅಶಾಸ್ತ್ರಮೂಲತ್ವಾತ್ ।'**

'ವಿಷವನ್ನು ತಿನ್ನು' ಎಂಬ ಈ ಮಾತು ಕೂಡ ಪದಸ್ಮಾರಿತಪದಾರ್ಥಸಂಸರ್ಗಗೋಚರ ಪ್ರಮಾಜನಕವೆ ಎನಿಸುತ್ತಾನೆ ಅತಿವ್ಯಾಪ್ತಿ. ಏಕೆಂದರೆ 'ಪದ'ವೆಂದರೆ ಇಲ್ಲಿ 'ಶತ್ರುವಿನ ಅನ್ನ ಉಣಬೇಡವೆಂ'ದು ಅಭಿಪ್ರಾಯವಿರುವುದರಿಂದ ಅದಕ್ಕೆ ಮೂಲವಾದ 'ದ್ವಿಷದನ್ನಂ ನ ಭೋಕ್ತವ್ಯಂ' ಎಂಬ ಶಾಸ್ತ್ರವಚನದ ಪದಗಳೇ ಇಟ್ಟುಕೊಳ್ಳಬೇಕು. ಆ ಪದಗಳಿಂದ ಸ್ಮಾರಿತ ಪದಾರ್ಥಗಳ

ಸಂಸರ್ಗವನ್ನು ಈ ವಾಕ್ಯ ಬೋಧಿಸುವುದರಿಂದ ಪದಸ್ಮಾರಿತ ಪದಾರ್ಥ ಸಂಸರ್ಗಾ ಗೋಚರಪ್ರಮಾಜನಕತ್ವವಿಲ್ಲ, ಅತಿವ್ಯಾಪ್ತಿ ಇಲ್ಲ, ಎಂದು ಅದ್ವೈತಿ ಆಕ್ಷೇಪಿಸಬಹುದು.

ಆದರೆ ಇದು ಸರಿಯಲ್ಲ. ಇದು ಶಾಸ್ತ್ರಮೂಲಕವಲ್ಲ. ಯುಕ್ತಿಮೂಲಕವಾಗಿದೆ. ಏಕೆಂದರೆ ಶಾಸ್ತ್ರವಚನದ ಅನುಸಂಧಾನವಿಲ್ಲದವನಿಗೂ ಕೂಡ 'ವಿಷ ತಿನ್ನೆಂ'ದರೆ ಶತ್ರುವಿನ ಅನ್ನ ಉಣಬಾರದೆಂದೇ ತಿಳಿಯುತ್ತದೆ. ಪರಮ ಆಪ್ತನಾದ ತಂದೆ ಮಗನಿಗೆ 'ವಿಷ ತಿನ್ನೆಂ'ದು ಕೋಪದಿಂದ ಹೇಳಿದರೆ ಅದಕ್ಕೆ 'ಶತ್ರುವಿನ ಅನ್ನಉಣಬೇಡ' ಎಂದು ಹೇಳುವ ಅಭಿಪ್ರಾಯವಿರುವುದು ಸ್ಪಷ್ಟ. ಆದರಿಂದ ಶಾಸ್ತ್ರವಚನದ ಪದಗಳು ಇಲ್ಲಿ ಪದಾರ್ಥ ಸ್ಮಾರಕವಲ್ಲ. ಯುಕ್ತಿಯಿಂದಲೇ ಶತ್ರುವಿನ ಅನ್ನಉಣಬಾರದೆಂದು ಅಭಿಪ್ರಾಯ ತಿಳಿಯುತ್ತದೆ. ಹೀಗಾಗಿ 'ವಿಷ'ಪದಸ್ಮಾರಿತ ಸಂಸರ್ಗಾಗೋಚರ ಪ್ರಮಾಜನಕತ್ವವೇ ಬರುವುದರಿಂದ ಅತಿವ್ಯಾಪ್ತಿ ಇದೆ.

**'ಪ್ರತಿಪಿಪಾದಯಿಷಿತ ಪದಾರ್ಥ ಸಂಸರ್ಗೋಕ್ತೌ ಚ ಚಂದ್ರ ಬ್ರಹ್ಮಾದಿ ಶಬ್ದಾರ್ಥಾನಾಂ ಪ್ರಶ್ನಹೇತುಸಂಶಯ ಧರ್ಮಿತ್ವೇನ ಪ್ರಾಗೇವ ಸಾಮಾನ್ಯತೋ ಜ್ಞಾತತಯಾ ಸ್ವರೂಪೇಣ ಅ ಪ್ರತಿ ಪಿಪಾದಯಿಷಿತತ್ವಾತ್ ।'**

ವಿಷ ತಿನ್ನೆಂದರೆ ಶತ್ರುವಿನ ಅನ್ನ ಉಣಬೇಡವೆಂದು ಅರ್ಥವಾಗುವುದರಿಂದ 'ಶತ್ರುವಿನ ಮನೆಯ ಅನ್ನ' ಮುಂತಾದ ಪದಾರ್ಥವು ಈವಾಕ್ಯದಲ್ಲಿ ಪ್ರತಿಪಾದಿತವಾಗುತ್ತಿದೆ. ಪ್ರತಿಪಾದಿಸುವ ಅಭಿಪ್ರಾಯ ಇಲ್ಲಿ ಇದೆ. ಹಾಗೆ ಅಭಿಪ್ರೇತವಾದ ಪದಾರ್ಥಗಳ ಸಂಸರ್ಗವೇ ವಿಷ ತಿನ್ನೆಂಬ ವಾಕ್ಯದಲ್ಲಿ ಬೋಧಿತವಾಗುವುದರಿಂದ ಅಭಿಪ್ರೇತ ಪದಾರ್ಥಸಂಸರ್ಗಾಗೋಚರ ಪ್ರಮಾಜನಕತ್ವವಿಲ್ಲ. ಅತಿವ್ಯಾಪ್ತಿ ಇಲ್ಲ.

ಆದರೂ ಪ್ರಕೃಷ್ಟಪ್ರಕಾಶಾದಿ ವಾಕ್ಯದಲ್ಲಿಯೂ ಸತ್ಯಜ್ಞಾನಾದಿ ವಾಕ್ಯದಲ್ಲಿಯೂ ಅವ್ಯಾಪ್ತಿ ಬರುತ್ತದೆ. ಪ್ರಕೃಷ್ಟಾದಿ ವಾಕ್ಯದಲ್ಲಿ ಧರ್ಮಿಯಾದ ಚಂದ್ರನೂ ಸತ್ಯಾದಿ ವಾಕ್ಯದಲ್ಲಿ ಧರ್ಮಿಯಾದ ಬ್ರಹ್ಮನೂ ಮೊದಲೇ ಸಾಮಾನ್ಯತಃ ಜ್ಞಾತನೇ ಆಗಿರುವುದರಿಂದ ಅವರ ಬಗ್ಗೆ ಪ್ರತಿಪಾದನೆಗೆ ಈ ವಾಕ್ಯಗಳು ಹೊರಡುವುದಿಲ್ಲ. 'ಯಾರು ಚಂದ್ರ' 'ಯಾರು ಬ್ರಹ್ಮ' ಎಂದು ಪ್ರಶ್ನೆ ಮಾಡಬೇಕಾದರೆ ಚಂದ್ರಬ್ರಹ್ಮರ ಬಗ್ಗೆ ಸಂಶಯ ಬಂದಿರಬೇಕು. ಧರ್ಮಿಜ್ಞಾನವಿಲ್ಲದೆ ಸಂಶಯ ಬಾರದು. ಸಂಶಯದಲ್ಲಿ ಅವರು ಧರ್ಮಿಯಾಗಬೇಕಾದರೆ ಸಾಮಾನ್ಯತಃ ಜ್ಞಾತರಾಗಿರಬೇಕು. ಹೀಗೆ ಜ್ಞಾತರಾಗಿದ್ದಾರೆ ಎಂದಮೇಲೆ ಸ್ವರೂಪೇಣ ಪ್ರತಿಪಾದನೆ ಮಾಡುವ ಅಭಿಪ್ರಾಯವಿರಲಾರದು. ಪ್ರತಿಪಾದಿಸಲು ಅನಭಿಪ್ರೇತವಾದ ಪದಾರ್ಥಗಳ ಸಂಸರ್ಗಾಗೋಚರ ಪ್ರಮಾಜನಕತ್ವವೇ ಬಂದಿದ್ದ ರಿಂದ ಅಭಿಪ್ರೇತ ಪದಾರ್ಥಸಂಸರ್ಗಾಗೋಚರ ಪ್ರಮಾಜನಕತ್ವ ಬಾರದಿದ್ದುದರಿಂದ ಅವ್ಯಾಪ್ತಿ.

**'ಸಂಸರ್ಗ ಪ್ರತಿಯೋಗಿತ್ವೇನ ತು ಪ್ರತಿಪಿಪಾದಯಿಷಿತತ್ವೇ ವಿವಕ್ಷಿತೇ ಸಂಸರ್ಗಾಪ್ರಮಾಪಕತ್ವಾಸಂಭವಾತ್'**

'ಪ್ರತಿಪಾದಿಸಲು ಅಭಿಪ್ರೇತವಾದುದು' ಎಂದರೆ 'ಸಂಸರ್ಗಪ್ರತಿಯೋಗಿತ್ವೇನ ಪ್ರತಿಪಾದಿಸಲು ಅಭಿಪ್ರೇತ, ಇಷ್ಟ'ವೆಂದು ವಿವಕ್ಷೆ ಮಾಡಿದಾಗ, ಚಂದ್ರನಾಗಲಿ ಬ್ರಹ್ಮನಾಗಲಿ ಲಕ್ಷಣವಾಕ್ಯದಲ್ಲಿ ಲಕ್ಷಣದ ಸಂಸರ್ಗಪ್ರತಿಯೋಗಿತ್ವೇನ ಪ್ರತಿಪಾದಿಸಲು ಅಭಿಪ್ರೇತರೇ ಆಗಿದ್ದಾರೆ ಎಂದಂತಾಯಿತು. ಆಗ ಸಂಸರ್ಗವು ಪ್ರತಿಪಾದಿಸಲು ಅಭಿಪ್ರೇತವೆ. ಹೀಗಾಗಿ ಅಭಿಪ್ರೇತ ಸಂಸರ್ಗಗೋಚರ ಪ್ರಮಾಜನಕತ್ವವೇ ವಾಕ್ಯಕ್ಕೆ ಬರಬೇಕಾಗುತ್ತದೆ. ಅಭಿಪ್ರೇತ ಸಂಸರ್ಗಾ ಗೋಚರಪ್ರಮಾಜನಕತ್ವ ಬರುವುದು ಅಸಂಭವ. ಸಂಸರ್ಗಪ್ರಮಾಪಕವೇ ಆದ ಲಕ್ಷಣವಾಕ್ಯವು ಸಂಸರ್ಗಾಪ್ರಮಾಪಕ ಎನ್ನುವುದು ವ್ಯಾಹತವಾಗುವುದು.



**किंच शीतोष्णस्पर्शवंतौ पयःपावकावित्यादौ त्वद्रीत्या संसर्गाप्रतिपादकेऽनेकप्रातिपादिकार्थमात्रपरेऽतिव्याप्तिः । नच धर्मधर्मिभावासहमखंडार्थत्वं धर्मिभेदसहम् । किंच यौगिकार्थौपगवादिप्रश्नोत्तरे ''श्यामो दीर्घो लोहिताक्ष औपगव'' इत्यादौ, अनेकार्थात्मकवनसेनादिप्रश्नोत्तरे ''एकदेशस्था वृक्षा वनम्'' इत्यादौ च सखंडार्थे लक्षणवाक्येऽतिव्याप्तिः । प्रकृष्टादिवाक्येऽपि संसृष्टार्थत्वस्य वक्ष्यमाणत्वेनासंभवश्च । अत एवांत्यं लक्षणमप्ययुक्तम् असंभवात् सखंडार्थलक्षणवाक्येऽतिव्याप्तेश्च ।**

**अतिव्याप्तिरिति** ।। द्वितीयलक्षणे एकप्रातिपदिकार्थमात्रपर्यवसायित्वं वेति त्वयैव शीतोष्णस्पर्शवंतावित्यादिवाक्यस्य लक्ष्यबहिर्भावकरणादिति भावः । तस्य (लक्ष्यत्वे) बाधकांतरमप्याह—**न चेति** । **यौगिकार्थेति** ।। एतच्च प्रश्नस्य विशिष्टविषयत्वज्ञापनार्थम् । औपगवादिशब्दस्य उपगोरपत्यमिति विगृह्य तस्यापत्यमित्यस्मिन्नर्थे अण्प्रत्ययानुशासनेन विशिष्टनिष्ठत्वादिति भावः ।। **सखंडार्थे लक्षणवाक्य इति** ।। औपगवादिप्रश्नोत्तर इत्यर्थः ।



'ಕಿಂಚ ಶೀತೋಷ್ಣಸ್ಪರ್ಶವಂತೌ ಪಯಃಪಾವಕೌ ಇತ್ಯಾದೌ ತ್ವದ್ರೀತ್ಯಾ ಸಂಸರ್ಗಾಪ್ರತಿಪಾದಕೇ ಅನೇಕಪ್ರಾತಿಪದಿಕಾರ್ಥಮಾತ್ರಪರೇ ಅತಿವ್ಯಾಪ್ತಿಃ। ನ ಚ ಧರ್ಮಧರ್ಮಿಭಾವಾಸಹಂ ಅಖಂಡಾರ್ಥತ್ವಂ ಧರ್ಮಿಭೇದಸಹಂ।'

'ಶೀತ-ಉಷ್ಣ ಸ್ಪರ್ಶ ಉಳ್ಳವುಗಳು ನೀರು-ಬೆಂಕಿಗಳು' ಎಂಬ ವಾಕ್ಯವು ಅದ್ವೈತರೀತ್ಯಾ 'ಅಪರ್ಯಾಯ ಶಬ್ದಾನಾಂ ಏಕಪ್ರಾತಿಪದಿಕಾರ್ಥ ಮಾತ್ರ ಪರ್ಯವಸಾಯಿತ್ವಂ' ಎಂದು ಎರಡನೇ ಅಖಂಡಾರ್ಥಲಕ್ಷಣ ಬಾರದಿರುವುದರಿಂದ ಲಕ್ಷ್ಯದಲ್ಲಿ ಸೇರುವುದಿಲ್ಲ. ಸಖಂಡಾರ್ಥವೆ ಆಗಿದೆ. ಏಕೆಂದರೆ 'ಪಯಃ' 'ಪಾವಕ'ಗಳೆಂದು ಅನೇಕ ಪ್ರಾತಿಪದಿಕಾರ್ಥಪರ್ಯವಸಾಯಿಯಾಗಿದೆ. ಆದರೂ ಲಕ್ಷಣವಾಕ್ಯವಾಗಿರುವುದರಿಂದ ಅದ್ವೈತರೀತ್ಯಾ ಸಂಸರ್ಗಾಗೋಚರಪ್ರಮಾಜನಕವಾಗಿದೆ. ಹೀಗಾಗಿ ಅಪರ್ಯಾಯ ಪದಾನಾಂ ಸಂಸರ್ಗಾಗೋಚರಪ್ರಮಾಜನಕತ್ವರೂಪ ಅಖಂಡಾರ್ಥ ಲಕ್ಷಣಕ್ಕೆ ಇಲ್ಲಿ ಅತಿವ್ಯಾಪ್ತಿ.

'ಅನೇಕ ಪ್ರಾತಿಪದಿಕಾರ್ಥ ಪರ್ಯವಸಾಯಿಯಾದರೂ ಅಖಂಡಾರ್ಥವೆನ್ನುತ್ತೇನೆ' ಎಂದರೆ ಅದು ಸರಿಯಲ್ಲ. ಧರ್ಮಿ ಒಂದೇ ಇದ್ದರೂ ಕೂಡ ಅದರಲ್ಲಿ ಒಂದೇಒಂದು ಧರ್ಮ ಇರುವುದನ್ನು ಕೂಡ ಅಖಂಡಾರ್ಥತ್ವವು ಸಹಿಸುವುದಿಲ್ಲವೆಂದಮೇಲೆ ಧರ್ಮಿ ಅನೇಕವಿರುವುದನ್ನು ಅದು ಸಹಿಸೀತೆ? ಅದರಿಂದ ಅತಿವ್ಯಾಪ್ತಿದೋಷ ಅಪರಿಹಾರ್ಯ.

**'ಕಿಂಚ ಯೌಗಿಕಾರ್ಥೌಪಗವಾದಿ ಪ್ರಶ್ನೋತ್ತರೇ 'ಶ್ಯಾಮೋ ದೀರ್ಘೋ ಲೋಹಿತಾಕ್ಷಃ ಔಪಗವಃ, ಇತ್ಯಾದೌ, ಅನೇಕಾರ್ಥಾತ್ಮಕ ವನ ಸೇನಾದಿ ಪ್ರಶ್ನೋತ್ತರೇ 'ಏಕದೇಶಸ್ಥಾ ವೃಕ್ಷಾ ವನಂ' ಇತ್ಯಾದೌ ಚ ಸಖಂಡಾರ್ಥೇ ಲಕ್ಷಣವಾಕ್ಯೇಽತಿವ್ಯಾಪ್ತಿಃ'**

'ಉಪ-ಗು' ಎಂದರೆ ಗೋವಿನ ಸಮೀಪದಲ್ಲಿ ವಾಸಮಾಡುವವನು. ಅವನ ಮಗನು ಔಪಗವ ಎಂದು ಅಪತ್ಯಾರ್ಥಕ ಅಣ್‌ಪ್ರತ್ಯಯ ಬಂದಿರುವುದರಿಂದ ಔಪಗವಶಬ್ದವು ಯೌಗಿಕಾರ್ಥ ಉಳ್ಳದ್ದು. ಔಪಗವನು ಯಾರು ಎಂಬ ಪ್ರಶ್ನೆಗೆ 'ಕಪ್ಪಾಗಿ ಎತ್ತರವಾಗಿ ಇರುವವನು ಕೆಂಪು ಕಣ್ಣಿನವನು ಔಪಗವ' ಎಂದು ಲಕ್ಷಣ ಹೇಳುವ ಉತ್ತರವಾಕ್ಯ ಸಖಂಡಾರ್ಥವಾಗಿದೆ. ಏಕೆಂದರೆ ಪ್ರಶ್ನೆಯೂ ಉತ್ತರವೂ ವಿಶಿಷ್ಟವಿಷಯಕವೇ ಆಗಿವೆ. ಸಖಂಡಾರ್ಥಗಳಾಗಿವೆ.

ಅನೇಕ ಪದಾರ್ಥಗಳ ಸಮೂಹರೂಪವಾದ ವನ ಸೇನಾ ಮುಂತಾದವುಗಳ ವಿಷಯದಲ್ಲಿ ಪ್ರಶ್ನೆಗೆ ಉತ್ತರವಾಗಿ ಹೇಳುವ 'ಒಂದೆಡೆ ಗುಂಪಾಗಿ ಬೆಳೆದು ನಿಂತಿರುವ ಮರಗಳೇ ಕಾಡು' ಎಂದು ಮುಂತಾದ ವಾಕ್ಯಗಳು ಅನೇಕ ಪ್ರಾತಿಪದಿಕಾರ್ಥ ಪರ್ಯವಸಾಯಿಗಳಾಗಿರುವುದರಿಂದ ಸಖಂಡಾರ್ಥಗಳಾಗಿವೆ. ಇಲ್ಲಿ ಎಲ್ಲ ಕಡೆ ಅತಿವ್ಯಾಪ್ತಿ. ಏಕೆಂದರೆ ಅಪರ್ಯಾಯಪದಾನಾಂ ಸಂಸರ್ಗಾಗೋಚರ ಪ್ರಮಾಜನಕತ್ವಂ ಎಂಬ ಲಕ್ಷಣ ಎಲ್ಲಕಡೆ ಬರುತ್ತದೆ. ಲಕ್ಷಣವಾಕ್ಯವಾದ್ದರಿಂದ ಲಕ್ಷಣಸಂಸರ್ಗದಲ್ಲಿ ತಾತ್ಪರ್ಯವಿಲ್ಲವೆಂದಮೇಲೆ ಸಂಸರ್ಗಾಗೋಚರಪ್ರಮಾಜನಕತ್ವವೇ ಬರುತ್ತದೆ.

**'ಪ್ರಕೃಷ್ಟಾದಿವಾಕ್ಯೇಽಪಿ ಸಂಸೃಷ್ಟಾರ್ಥತ್ವಸ್ಯ ವಕ್ಷ್ಯಮಾಣತ್ವೇನ ಅಸಂಭವಶ್ಚ'**

ಪ್ರಕೃಷ್ಟಾದಿ ವಾಕ್ಯದಲ್ಲಿ ಲಕ್ಷಣಸಂಸರ್ಗಪ್ರತಿಪಾದನೆಯಲ್ಲಿ ತಾತ್ಪರ್ಯವಿರಲೇಬೇಕೆಂದು

ಮುಂದೆ ಹೇಳುವುದರಿಂದ ಸಂಸರ್ಗಾಗೋಚರಪ್ರಮಾಜನಕತ್ವವು ಯಾವ ಲಕ್ಷಣವಾಕ್ಯದಲ್ಲಿಯೂ ಬರುವುದಿಲ್ಲ. ಆದರಿಂದ ಲಕ್ಷಣಕ್ಕೆ ಅಸಂಭವ ದೋಷವೂ ಇದೆ.

**ಅತ ಏವಾಂತ್ಯಂ ಲಕ್ಷಣಮಪ್ಯಯುಕ್ತಂ। ಅಸಂಭವಾತ್। ಸಖಂಡಾರ್ಥ-ಲಕ್ಷಣವಾಕ್ಯೇಽತಿವ್ಯಾಪ್ತೇಶ್ಚ।'**

ಏಕಪ್ರಾತಿಪದಿಕಾರ್ಥ ಮಾತ್ರ ಪರ್ಯವಸಾಯಿತ್ವರೂಪ ಎರಡನೇ ಲಕ್ಷಣವೂ ಅಯುಕ್ತ. ಏಕೆಂದರೆ ಲಕ್ಷಣವಾಕ್ಯಗಳು ಲಕ್ಷಣ ಸಂಸರ್ಗವನ್ನು ಪ್ರತಿಪಾದಿಸುತ್ತವೆ ಎಂದು ಮುಂದೆ ಹೇಳುವುದರಿಂದಲೇ ಏಕಪ್ರಾತಿಪದಿಕಾರ್ಥ ಮಾತ್ರ ಪರ್ಯವಸಾಯಿತ್ವ ಕೂಡುವುದೇ ಇಲ್ಲ. ಲಕ್ಷಣ ಸಂಸರ್ಗದಲ್ಲಿಯೂ ತಾತ್ಪರ್ಯವಿರುತ್ತದೆ. ಹೀಗಾಗಿ ಲಕ್ಷಣಕ್ಕೆ ಅಸಂಭವ ದೋಷವಿದೆ.

ಔಪಗವಾದಿ ಸಖಂಡಾರ್ಥಗಳ ಲಕ್ಷಣವಾಕ್ಯಗಳೂ ಕೂಡ ಲಕ್ಷಣವಾಕ್ಯಗಳೇ ಆಗಿರುವುದರಿಂದ ಏಕಪ್ರಾತಿಪದಿಕಾರ್ಥಮಾತ್ರ ಪರ್ಯವಸಾಯಿಗಳೆಂದು ಅದ್ವೈತಿಗಳು ಒಪ್ಪಿರುವುದರಿಂದ ಅತಿವ್ಯಾಪ್ತಿ. ಅಖಂಡಾರ್ಥ ಲಕ್ಷಣವಾಕ್ಯಗಳಂತೆ ಸಖಂಡಾರ್ಥಲಕ್ಷಣ ವಾಕ್ಯಗಳೂ ಲಕ್ಷಣವಾಕ್ಯಗಳೇ ಆಗಿರುವುದರಿಂದ ಪ್ರಾತಿಪದಿಕಾರ್ಥಮಾತ್ರ ಪರ್ಯವಸಾಯಿಯೆ ತಾನೆ? ಹಾಗಿಲ್ಲದಿದ್ದರೆ ಅವು ಲಕ್ಷಣವಾಕ್ಯ ಹೇಗಾದಾವು?



## किंच प्रवृत्तिनिमित्ताभेदश्चेन्नापर्यायत्वं । तद्भेदस्त्विह नास्ति । अनंतत्वादीनां शुद्धादन्यत्रासंभवात्, अनंतादिशब्दानां लक्षणयाऽखंडार्थत्वे च शुद्धे तदसिद्धेः ।

किंच सत्यज्ञानादिपदप्रवृत्तिनिमित्तभूतसत्यत्वादीनां अभेदे तेषां पदानां अपर्यायत्वानुपपत्तेः, तत्पद घटितोक्ताखंडार्थलक्षणस्यासंभवपरिहाराय तेषां अपर्यायत्वं प्रवृत्तिनिमित्तभेदेनैव निर्वाह्यम् । नचेह तद्भेदोऽस्ति । तद्भेदे ब्रह्मणस्तल्लक्षणकत्वे च मानांतरासंभवेन ''सत्यं ज्ञानम्'' इत्यादिलक्षणवाक्यमेव प्रमाणं वाच्यमिति विशिष्टपरत्वप्रसंगात्। न च तेषां मुख्यवृत्त्या विशिष्टार्थपरत्वेऽपि लक्षणया शुद्धचैतन्यमात्रपरत्वमक्षतमिति वाच्यम् । सत्यत्वानंतत्वादीनां शुद्धादन्यत्रासंभवात् शुद्धे च तत्सिद्धत्वे प्रमाणाभावाच्च पर्यायत्वमेवापन्नमिति लक्षणद्वयसाधारणदूषणांतरमाह **किंचेति** ।।



**'ಕಿಂ ಚ ಪ್ರವೃತ್ತಿನಿಮಿತ್ತಾಭೇದಶ್ಚೇತ್ ನಾಪರ್ಯಾಯತ್ವಂ। ತದ್ಭೇದಸ್ತ್ವಿಹ ನಾಸ್ತಿ। ಅನಂತತ್ವಾದೀನಾಂ ಶುದ್ಧಾದನ್ಯತ್ರಾಸಂಭವಾತ್। ಅನಂತಾದಿ ಪದಾನಾಂ ಲಕ್ಷಣಯಾऽ-ಖಂಡಾರ್ಥತ್ವೇ ಚ ಶುದ್ಧೇ ತದಸಿದ್ಧೇಃ।'**

'ಅಖಂಡಾರ್ಥಲಕ್ಷಣಗಳೆರಡಲ್ಲಿಯೂ 'ಅಪರ್ಯಾಯಶಬ್ದಾನಾಂ' ಎಂದು ಸೇರಿದೆ. ಸತ್ಯಜ್ಞಾನಾದಿ ಶಬ್ದಗಳು ಅಖಂಡಾರ್ಥಪರವಾಗಬೇಕಾದರೆ ಅದ್ವೈತಿರೀತ್ಯಾ ಅವು ಪರ್ಯಾಯ ಪದಗಳೇ ಆಗಬೇಕು. ಆಗ ಅಪರ್ಯಾಯಪದ ಘಟಿತವಾದ ಎರಡೂ ಲಕ್ಷಣಗಳು ಅಸಂಭವಿಯೇ ಆಗುವುವು.

ಸತ್ಯಜ್ಞಾನಾದಿ ಪದಗಳ ಪ್ರವೃತ್ತಿ ನಿಮಿತ್ತವಾದ ಸತ್ಯತ್ವಾದಿಗಳು ಪರಸ್ಪರ ಅಭಿನ್ನವಾದರೆ ಭಿನ್ನಪ್ರವೃತ್ತಿ ನಿಮಿತ್ತವತ್ವರೂಪ ಅಪರ್ಯಾಯತ್ವ ಬರಲಾರದು. ಅವು ಭಿನ್ನವೆಂದೂ ಬ್ರಹ್ಮನ ಲಕ್ಷಣಗಳೆಂದೂ ಪ್ರತ್ಯಕ್ಷಾದಿ ಬೇರೆ ಪ್ರಮಾಣಗಳಿಂದ ಸಿದ್ಧವಾಗುವುದಿಲ್ಲ. ಸತ್ಯಂ ಜ್ಞಾನಮನಂತಂ ಎಂಬ ಶ್ರುತಿಯಿಂದಲೇ ಸಿದ್ಧವಾಗಬೇಕು. ಆದರೆ ಆಗ ಅವು ಮುಖ್ಯವೃತ್ತಿಯಿಂದ ವಿಶಿಷ್ಟಬ್ರಹ್ಮನ ಲಕ್ಷಣಗಳೆಂದೇ ಸಿದ್ಧವಾಗುವ ಪ್ರಸಂಗವಿದೆ. ಆದರಿಂದ ಸತ್ಯತ್ವಾದಿಗಳು ಭಿನ್ನವೆನ್ನಲು ಅದ್ವೈತಿಗಳಿಗೆ ಪ್ರಮಾಣವಿಲ್ಲ. ಅವು ಭಿನ್ನವಲ್ಲ. ಭಿನ್ನವಲ್ಲದಿದ್ದರೆ ಸತ್ಯಾದಿ ಪದಗಳು ಅಪರ್ಯಾಯ ಪದಗಳೆನಿಸುವುದಿಲ್ಲ. ಅಪರ್ಯಾಯ ಪದಘಟಿತ ಲಕ್ಷಣಕ್ಕೆ ಅಸಂಭವ ದೋಷವಿದ್ದೇ ಇದೆ.

'ಸತ್ಯಾದಿ ಪದಗಳು ಮುಖ್ಯವೃತ್ತಿಯಿಂದ ವಿಶಿಷ್ಟಾರ್ಥಪರವಾದ್ದರಿಂದ ಅಪರ್ಯಾಯವೆ. ವಿಶಿಷ್ಟಾರ್ಥ ಪರವಾದರೂ ಲಕ್ಷಣಯಾ ಶುದ್ಧ ಚೈತನ್ಯ ಮಾತ್ರ ಪರವಾಗಲು ಅಡ್ಡಿ ಇಲ್ಲವಾಗುವುದರಿಂದ ಏನೂ ದೋಷವಿಲ್ಲ. ಶುದ್ಧದಲ್ಲಿ ಅವು ಅಖಂಡಾರ್ಥಪರವೇ ಆಗುವುವು' ಎಂದರೆ, ಸತ್ಯತ್ವ ಅನಂತತ್ವಾದಿಗಳು ಅದ್ವೈತಿ ರೀತಿಯಿಂದ ಕೇವಲ ಶುದ್ಧದಲ್ಲಿಯೇ ಇರಬೇಕು, ಬೇರೆ ಎಲ್ಲಿಯೂ ಇರಲಾರದು. ಶುದ್ಧದಲ್ಲಿಯೂ, ಅಲ್ಲಿ ಅವು ಪರಸ್ಪರ ಭಿನ್ನವಾಗಿರಲಾರವು. ಬ್ರಹ್ಮಸ್ವರೂಪವಾಗಿದ್ದು ಅಭಿನ್ನವೇ ಆಗಿರುತ್ತವೆ ಎನ್ನಬೇಕು. ಭಿನ್ನವಾಗಿದ್ದರೆ ಅಖಂಡತ್ವಕ್ಕೆ ಹಾನಿ. ಆದರಿಂದ ಸತ್ಯಾದಿಪದಗಳು ಮುಖ್ಯವೃತ್ತಿಯಿಂದ ಸತ್ಯತ್ವಾದಿ ಭಿನ್ನ ಧರ್ಮಗಳನ್ನು ಹೇಳುವುದೇ ಶಕ್ಯವಿಲ್ಲ.

ಹೀಗಾಗಿ ಸತ್ಯಾದಿಪದಗಳು ಕೇವಲ ಲಕ್ಷಣಯಾ ಶುದ್ಧಸ್ವರೂಪವನ್ನೇ ಹೇಳುವುದಾದರೆ, ಗಂಗಾಪದವು ಲಕ್ಷಣಯಾ ತೀರವನ್ನು ಬೋಧಿಸಿದರೆ ಆದರಿಂದ ತೀರದಲ್ಲಿ ಗಂಗಾತ್ವವು ಸರ್ವಥಾ ಸಿದ್ಧವಾಗದು ತಾನೆ? ಹಾಗೇ, ಶುದ್ಧದಲ್ಲಿ ಆ ಅನಂತತ್ವಾದಿಗಳು ಸರ್ವಥಾ ಸಿದ್ಧವಾಗದಿರುವುದರಿಂದ ಅವು ಪರ್ಯಾಯಪದಗಳೇ ಆಗುತ್ತವೆ, ಅಪರ್ಯಾಯ ಪದಗಳಾಗುವುದಿಲ್ಲ. ಅಖಂಡಾರ್ಥದ ಲಕ್ಷಣಗಳೆರಡೂ ಹೀಗೆ ಅಸಂಭವ ದೋಷಗ್ರಸ್ತವಾದುವು.



## ಸತ್ಯಜ್ಞಾನಾದಿ ವಾಕ್ಯಾನಾಂ ಅಖಂಡಾರ್ಥತ್ವಾನುಮಾನಭಂಗಃ

**आद्यानुमाने चाप्रसिद्धविशेषणत्वम्, प्रत्यक्षादिनापीदमित्थमिति सप्रकारकज्ञानस्यैवोत्पत्तेः।**

ननु नाप्रसिद्धविशेषणत्वं। प्रत्यक्षस्य घटादिनिर्विकल्पकजनकत्वेन तत्रैव तत्प्रसिद्धिसंभवादित्यत आह–**प्रत्यक्षादिनापीति** ।। निर्विकल्पक एव प्रमाणाभावेन प्रत्यक्षादेस्तज्जनकत्वे मानाभावात्।

न तावत्तत्र प्रत्यक्षं मानम्। निर्विकल्पकमंगीकुर्वता तस्यैंद्रियकत्वानभ्युपगमात्। नच जन्यविशिष्टज्ञानस्य तथाविधानुभवस्य वा जन्यविशेषणज्ञानजन्यत्वनियमेन प्रत्यग्रोत्पन्नविषयकविशिष्टज्ञानहेतुभूतं विशेषणज्ञानं निर्विकल्पकमेव सिध्यतीति वाच्यम्। स्मृतावभावत्वादिप्रकारकाभावप्रत्यक्षे च व्यभिचारात्। नच पूर्वानुभवस्य संस्कारद्वारा विशेषणज्ञानत्वेनापि स्मृतिं प्रति हेतुत्वान्न व्यभिचार इति वाच्यम्। संस्कारस्य विशेषणज्ञानद्वारत्वायोगात्। विशेषणज्ञानस्य संस्कारं अजनयित्वापि विशिष्टज्ञानजनकत्वदर्शनात्। यदवच्छिन्नं यदवच्छिन्नं जनयित्वैव यदवच्छिन्नं जनयति तस्यैव तद्वारत्वात्। नच तज्जन्यत्वे सति तज्जन्यजनकत्वं द्वारत्वं लाघवादिति वाच्यम्। कुलालतत्पुत्रोभयजन्ये घटे कुलालजन्यघटनाशे च तत्पुत्रघटयोरपि तद्वारत्वापातात्। किंच जन्यविशिष्टज्ञानत्वस्य नीलघटत्ववदर्थवशसंपन्नत्वेन जन्यविशेषणज्ञानजन्यतानवच्छेदकत्वात्, जन्यज्ञानत्वशब्दितज्ञानत्वावांतरजातिविशेषस्यात्ममनोयोगादिरूपसामग्रीमात्रप्रयोज्यत्वात्। विशेषणवैशिष्ट्यावगाहित्वस्य च क्लृप्तविशेषणविशेष्योभयभानसामग्रीमात्रप्रयोज्यत्वाच्चेति भावः ।।



ಅಖಂಡಾರ್ಥವಿಷಯದಲ್ಲಿ ಲಕ್ಷಣವಿಲ್ಲ, ಮಾತ್ರವಲ್ಲ ಪ್ರಮಾಣವೂ ಇಲ್ಲ. ಆದರಿಂದ ಸತ್ಯಜ್ಞಾನಾದಿ ವಾಕ್ಯದಲ್ಲಿ ಅಖಂಡಾರ್ಥಪರತ್ವವಿಲ್ಲ. ಪ್ರಮಾಣವಿಲ್ಲ ಏಕೆಂದರೆ 'ಸತ್ಯಾದಿ ವಾಕ್ಯವು ಅಖಂಡಾರ್ಥನಿಷ್ಠ, ಅಂದರೆ ಸಂಸರ್ಗಾಗೋಚರ ಪ್ರಮಾಜನಕ, ಲಕ್ಷಣವಾಕ್ಯವಾಗಿರುವುದರಿಂದ ಪ್ರಕೃಷ್ಟಾದಿ ವಾಕ್ಯದಂತೆ' ಎಂದು ಒಂದು ಅನುಮಾನ, ಮತ್ತು 'ಸತ್ಯಾದಿವಾಕ್ಯವು

ಅಖಂಡಾರ್ಥನಿಷ್ಠ, ಅಂದರೆ ಏಕಪ್ರಾತಿಪದಿಕಾರ್ಥಮಾತ್ರ ಪರ್ಯವಸಾಯಿ, ತನ್ಮಾತ್ರಪ್ರಶ್ನೋತ್ತರ ರೂಪವಾದ್ದರಿಂದ, ಪ್ರಕೃಷ್ಟಾದಿ ವಾಕ್ಯದಂತೆ' ಎಂದು ಇನ್ನೊಂದು ಅನುಮಾನವನ್ನು ಹೇಳಿದ್ದಾರೆ. ಈ ಎರಡೂ ಅನುಮಾನಗಳಲ್ಲಿ ಅಪ್ರಸಿದ್ಧವಿಶೇಷಣತ್ವ ಅಸಿದ್ಧಿ ವಿರೋಧ ವ್ಯಭಿಚಾರ ಬಾಧ ಸತ್ಪ್ರತಿಪಕ್ಷ ಮತ್ತು ದೃಷ್ಟಾಂತದಲ್ಲಿ ಸಾಧ್ಯವೈಕಲ್ಯ ಎಂಬ ಎಲ್ಲ ದೋಷಗಳಿವೆ.

**'ಆದ್ಯಾನುಮಾನೇ ಚಾಪ್ರಸಿದ್ಧವಿಶೇಷಣತ್ವಂ, ಪ್ರತ್ಯಕ್ಷಾದಿನಾಪಿ 'ಇದಮಿತ್ಥಂ' ಇತಿ ಸಪ್ರಕಾರಕ ಜ್ಞಾನಸ್ಯೈವ ಉತ್ಪತ್ತೇಃ।'**

ಮೊದಲಿಗೆ, ಮೊದಲಿನ ಅನುಮಾನದಲ್ಲಿ ಅಪ್ರಸಿದ್ಧವಿಶೇಷಣತ್ವದೋಷ. ಏಕೆಂದರೆ ಸಂಸರ್ಗಾಗೋಚರಪ್ರಮಾಜನಕತ್ವವು ಸಾಧ್ಯ, ಸಂಸರ್ಗಾಗೋಚರವಾದ ಪ್ರಮಾ ಎಂಬುದೇ ಅಪ್ರಸಿದ್ಧ. ಅಪ್ರಾಮಾಣಿಕ. ಏಕೆಂದರೆ, ಪ್ರಮಾ ಎಂಬುದು ಸಂಸರ್ಗಗೋಚರವೇ ಆಗಿರುತ್ತದೆ. ಪ್ರತ್ಯಕ್ಷಾದಿ ಪ್ರಮಾಣವೆಲ್ಲವೂ 'ಇದು ಹೀಗೆ' 'ಇದು ಇಂಥ ಧರ್ಮಉಳ್ಳದ್ದು' ಎಂದು ಸಪ್ರಕಾರಜ್ಞಾನವನ್ನೇ ಉಂಟುಮಾಡುತ್ತದೆ, ನಿರ್ವಿಕಲ್ಪಕಜ್ಞಾನವನ್ನು ಯಾವ ಪ್ರಮಾಣವೂ ಉಂಟು ಮಾಡುವುದಿಲ್ಲ.

**ವಿವರಣೆ :** ಯದ್ಯಪಿ ನೈಯಾಯಿಕರು ಪ್ರತ್ಯಕ್ಷದಿಂದ ಘಟಾದಿನಿರ್ವಿಕಲ್ಪಕ ಜ್ಞಾನ ಬರುವುದೆಂದು ಒಪ್ಪುತ್ತಾರೆ. ಅದ್ವೈತಿಗಳಿಗೆ ಸಂಸರ್ಗಾಗೋಚರಪ್ರಮಾಜನಕತ್ವವು ಅಂಥ ಪ್ರತ್ಯಕ್ಷದಲ್ಲಿ ಪ್ರಸಿದ್ಧವಿದೆ ಎಂದು ತೋರಿಸಲು ಬರುತ್ತದೆ. ಆದರೆ ವಸ್ತುತಃ ನಿರ್ವಿಕಲ್ಪಕ ಜ್ಞಾನದ ವಿಷಯದಲ್ಲಿಯೇ ಪ್ರಮಾಣವಿಲ್ಲ. ತಜ್ಜನಕತ್ವವು ಪ್ರತ್ಯಕ್ಷದಲ್ಲಿದೆ ಎನ್ನುವುದು ದೂರಾಪಾಸ್ತ.

ನಿರ್ವಿಕಲ್ಪಕವನ್ನು ಒಪ್ಪುವ ನೈಯಾಯಿಕರೇ ಅದನ್ನು ಅತೀಂದ್ರಿಯವೆನ್ನುತ್ತಾರೆ. ಅನುಮಾನವನ್ನೇ ಅದಕ್ಕೆ ಸಾಧಕ ಪ್ರಮಾಣವಾಗಿ ತೋರಿಸುತ್ತಾರೆ. ಅದೂ ಸರಿಯಲ್ಲ. ಜನ್ಯವಿಶಿಷ್ಟಜ್ಞಾನವು ಜನ್ಯವಿಶೇಷಣಜ್ಞಾನ ಜನ್ಯ. ಈ ನಿಯಮದಂತೆ ಆಗತಾನೇ ಉತ್ಪನ್ನವಾಗಿರುವ ವಿಷಯದಲ್ಲಿ ಬರುವ ಜನ್ಯವಿಶಿಷ್ಟ ಜ್ಞಾನಕ್ಕೆ ಹೇತುವಾದ ಜನ್ಯವಿಶೇಷಣಜ್ಞಾನವು ನಿರ್ವಿಕಲ್ಪಕವೇ ಆಗಿರಬೇಕು ಎಂದು ಅನುಮಾನ ಮಾಡುತ್ತಾರೆ. ಈ ಅನುಮಾನಕ್ಕೆ ಸ್ಮೃತಿಯಲ್ಲಿ ವ್ಯಭಿಚಾರ. ಸ್ಮೃತಿಯು ಜನ್ಯವಿಶಿಷ್ಟಜ್ಞಾನವಾಗಿದೆ. ಅದಕ್ಕೆ ಹೇತು ಜನ್ಯವಿಶೇಷಣಜ್ಞಾನವಲ್ಲ. ಅದರ ಸಂಸ್ಕಾರವೇ ಹೇತು.

ಜನ್ಯ ಅಭಾವತ್ವಪ್ರಕಾರಕ ಅಭಾವಪ್ರತ್ಯಕ್ಷಜ್ಞಾನಕ್ಕೂ ಜನ್ಯವಿಶೇಷಣಜ್ಞಾನ ಕಾರಣವಲ್ಲ. 'ಭೂತಲೇ ಘಟಾಭಾವಃ' ಎಂದು ಮೊದಲಿಗೆ ಅಭಾವವಿಶೇಷ್ಯಕ ಭೂತಲವೃತ್ತಿತ್ವಪ್ರಕಾರಕಜ್ಞಾನ ಬಂದ ಬಳಿಕವೇ 'ಘಟಾಭಾವವದ್ ಭೂತಲಂ' ಎಂಬ ಅಭಾವತ್ವಪ್ರಕಾರಕ ಅಭಾವಪ್ರತ್ಯಕ್ಷಜ್ಞಾನ ರೂಪ ವಿಶಿಷ್ಟಜ್ಞಾನ ಬರುತ್ತದೆ. ಹೀಗಾಗಿ ಇಲ್ಲಿಯೂ ಜನ್ಯವಿಶೇಷಣಜ್ಞಾನ ಜನ್ಯತ್ವಕ್ಕೆ ವ್ಯಭಿಚಾರವಿದೆ.

'ಸ್ಮೃತಿಸ್ಥಳದಲ್ಲಿ ಸಂಸ್ಕಾರದಂತೆ ಸಂಸ್ಕಾರದ್ವಾರಾ ಪೂರ್ವಾನುಭವವೂ ಸ್ಮೃತಿಗೆ ಕಾರಣ

ವಾಗುವುದರಿಂದ ಪೂರ್ವಾನುಭವರೂಪ ಜನ್ಯವಿಶೇಷಣಜ್ಞಾನಜನ್ಯತ್ವ ಕೂಡುತ್ತದೆ' ಎಂದರೆ ಅದು ಸರಿಯಲ್ಲ. ವಿಶೇಷಣಜ್ಞಾನಕ್ಕೆ ಸಂಸ್ಕಾರವು ದ್ವಾರವಾಗುವುದಿಲ್ಲ.

ವಿಶೇಷಣ ಜ್ಞಾನವು ಬೇರೆ ಎಲ್ಲ ಕಡೆ ಸಂಸ್ಕಾರವನ್ನು ಹುಟ್ಟಿಸದೇ ನೇರವಾಗಿ ವಿಶಿಷ್ಟ ಜ್ಞಾನಕ್ಕೇ ಕಾರಣವಾಗುತ್ತಿರುವುದರಿಂದ, ಯಾವುದನ್ನು ಹುಟ್ಟಿಸಿಯೇ ಯಾವುದು ಕಾರ್ಯಕಾರಿ ಯಾಗುವುದೋ ಅದು ಅದಕ್ಕೆ ದ್ವಾರ ಎನ್ನುವ ನಿಯಮದಂತೆ ಪೂರ್ವಾನುಭವವು ಸಂಸ್ಕಾರದ್ವಾರಾ ಕಾರ್ಯಕಾರಿ ಎನ್ನುವಂತಿಲ್ಲ.

'ತಜ್ಜನ್ಯವಾಗಿದ್ದು ತಜ್ಜನ್ಯಜನಕವಾದ ಮಾತ್ರಕ್ಕೆ ಸಂಸ್ಕಾರವು ದ್ವಾರವೇ' ಎನ್ನಬಾರದು. ಕುಲಾಲ ತತ್ಪುತ್ರರು ಸೇರಿ ಘಟನಿರ್ಮಾಣ ಮಾಡಿದಾಗ ಕುಲಾಲನಿಗೆ ತತ್ಪುತ್ರನು ದ್ವಾರವಾಗುವುದಿಲ್ಲ. ಪುತ್ರನು ಕುಲಾಲಜನ್ಯನಾಗಿದ್ದು ತಜ್ಜನ್ಯ ಘಟಜನಕನೇ ಆಗಿದ್ದಾನೆ. ಆದರೂ ಆತ ದ್ವಾರನೆನಿಸುವುದಿಲ್ಲ.

ಕುಲಾಲನು ಘಟನಾಶ ಮಾಡಿದಾಗ, ಕುಲಾಲನೂ ಅದಕ್ಕೆ ಕಾರಣ, ಧ್ವಂಸಕ್ಕೆ ಪ್ರತಿಯೋಗಿಯು ಕಾರಣವಾಗುವುದರಿಂದ, ಘಟವೂ ಅದಕ್ಕೆ ಕಾರಣವೆ. ಹೀಗೆ ಕುಲಾಲಜನ್ಯ ವಾಗಿದ್ದು ತಜ್ಜನ್ಯಧ್ವಂಸಕ್ಕೆ ಜನಕವಾದರೂ ಘಟವು ಘಟನಾಶದಲ್ಲಿ ಕುಲಾಲನಿಗೆ ದ್ವಾರವಾಗಿಲ್ಲ.

ವಸ್ತುತಃ ಜನ್ಯವಿಶಿಷ್ಟಜ್ಞಾನಕ್ಕೆ ಜನ್ಯವಿಶೇಷಣಜ್ಞಾನವನ್ನು ಕಾರಣವೆನ್ನಲು ಶಕ್ಯವಿಲ್ಲ. ಏಕೆಂದರೆ 'ಜನ್ಯವಿಶಿಷ್ಟಜ್ಞಾನತ್ವ' ಎಂಬುದು ಕಾರ್ಯತಾವಚ್ಛೇದಕವಾಗುವುದೇ ಇಲ್ಲ. ಅದು ಅರ್ಥಸಮಾಜಗ್ರಸ್ತವಾದ್ದರಿಂದ ಗೌರವದೋಷದುಷ್ಟವಾಗಿದೆ.

ಜನ್ಯಜ್ಞಾನತ್ವವು ಒಂದು ಅವಾಂತರ ಜಾತಿವಿಶೇಷ ಎಂದು ಒಪ್ಪಿದರೂ ಅದಕ್ಕೆ ಆತ್ಮ ಮನಃಸಂಯೋಗಾದಿ ರೂಪವಾದ ಜನ್ಯಜ್ಞಾನಸಾಮಾನ್ಯಕಾರಣಸಾಮಗ್ರಿಯು ಪ್ರಯೋಜಕ. 'ವಿಶಿಷ್ಟಜ್ಞಾನ' ಎಂಬಲ್ಲಿ ಸೇರಿರುವ ವಿಶೇಷಣ ವೈಶಿಷ್ಟ್ಯಾವಗಾಹಿತ್ವ ಎಂಬ ಅಂಶವು ಕ್ಲಪ್ತವಾದ ವಿಶೇಷಣ ವಿಶೇಷ್ಯ ಉಭಯ ಭಾನಸಾಮಗ್ರೀ ಮಾತ್ರ ಪ್ರಯೋಜ್ಯವಾಗಿರುವ ಧರ್ಮವಾಗಿದೆ. ನೀಲಘಟದಲ್ಲಿ ಕಪಾಲನೈಲ್ಯಪ್ರಯೋಜ್ಯವಾದ ನೈಲ್ಯ ಮತ್ತು ಕಪಾಲ ಪ್ರಯೋಜ್ಯ ಘಟತ್ವಗಳು ಜೊತೆಗೆ ಸೇರಿರುವುದರಿಂದ ನೀಲಘಟತ್ವವೆಂಬುದು ಹೇಗೆ ಕಾರ್ಯತಾವಚ್ಛೇದಕವಾಗಲಾರದೋ ಹಾಗೇ ಜನ್ಯವಿಶಿಷ್ಟಜ್ಞಾನತ್ವವೂ ಕಾರ್ಯತಾವಚ್ಛೇದಕವಾಗಲಾರದು. ಅದರಿಂದ ಈ ಕಾರ್ಯಕಾರಣ ಭಾವವೇ ಅಪ್ರಾಮಾಣಿಕ. ಈ ಕಾರ್ಯಕಾರಣಭಾವದಿಂದ ನಿರ್ವಿಕಲ್ಪಕಸಾಧನೆ ಮಾಡುವುದು ಅಯುಕ್ತ.



**असिद्धिश्च । सत्यत्वज्ञानत्वादेः परापरजातित्वे तस्याब्रह्मण्यपि सत्त्वेनातिव्याप्तेः ।**

**अजातित्वेऽपि ब्रह्मण्यपि तस्य तात्त्विकस्य धर्मिज्ञानाबाध्यस्य चासंभवात्, अतात्त्विकस्य व्यावहारिकस्य चानात्मन्यपि सत्त्वात् ।**

**असिद्धिश्चेति ।।** सत्यत्वादेर्लक्षणत्वायोगेन सत्यज्ञानादिवाक्यस्य लक्षणवाक्यत्वाभावादिति भावः । सत्यत्वादेरलक्षणत्वमुपपादयति— **सत्यत्वेति । धर्मिज्ञानाबाध्यस्य चेति ।।** यद्यपि सत्यत्वादिकं ब्रह्मणि धर्मिज्ञानाबाध्यमुच्यमानं तात्त्विकमेव पर्यवस्यति । तथाप्येतद् व्यावहारिकसाधारणमित्यपौनरुक्त्यमिति ध्येयम् ।



**ಅಸಿದ್ಧಿಶ್ಚ। ಸತ್ಯತ್ವಜ್ಞಾನತ್ವಾದೇಃ ಪರಾಪರಜಾತಿತ್ವೇ ತಸ್ಯ ಅಬ್ರಹ್ಮಣ್ಯಪಿ ಸತ್ವೇನ ಅತಿವ್ಯಾಪ್ತೇಃ'**

'ಸತ್ಯಂ ಜ್ಞಾನಮನಂತಂ ಬ್ರಹ್ಮ' ಇತ್ಯಾದಿ ವಾಕ್ಯಗಳು ಹೇಳುವ ಸತ್ಯತ್ವ ಜ್ಞಾನತ್ವಾದಿಗಳು ಪರ ಅಥವಾ ಅಪರ ಜಾತಿರೂಪವೆನ್ನುವುದಾದರೆ ಅವು ಬ್ರಹ್ಮನಲ್ಲಿ ಮಾತ್ರವೆ ಅಲ್ಲದೆ ಬೇರೆ ಘಟಪಟಾದಿ ಪ್ರಪಂಚದಲ್ಲಿಯೂ ವ್ಯಾಪಿಸಿರುವುದರಿಂದ ಅತಿ ವ್ಯಾಪ್ತವಾಗಿದ್ದು ಅಲಕ್ಷಣವಾಗಿರುತ್ತವೆ. ಅದರಿಂದ ಸತ್ಯಾದಿ ವಾಕ್ಯ ಲಕ್ಷಣ ವಾಕ್ಯವಲ್ಲ ಎಂದಾಗುವುದರಿಂದ 'ಲಕ್ಷಣವಾಕ್ಯತ್ವಾತ್' ಎಂಬ ಹೇತು ಪಕ್ಷವಾದ ಸತ್ಯಾದಿವಾಕ್ಯದಲ್ಲಿಲ್ಲದಿರುವುದು ಸ್ವರೂಪಾಸಿದ್ಧಿ ಎಂಬ ಹೇತುದೋಷ.

ಸತ್ಯತ್ವವು ಹೆಚ್ಚು ವ್ಯಾಪಕವಾದ್ದರಿಂದ ಪರಜಾತಿ. ಜ್ಞಾನತ್ವವು ಅಷ್ಟು ವ್ಯಾಪಕವಲ್ಲದ್ದರಿಂದ ಅಪರಜಾತಿ ಎನಿಸುತ್ತದೆ.

ಘಟಃ ಸನ್ ಪಟಃ ಸನ್ ಇತ್ಯಾದಿ ಅನುಭವದಲ್ಲಿ ಘಟಪಟಾದಿಗಳು ವ್ಯವಹಾರಕಾಲದಲ್ಲಿ ಶುದ್ಧಚೈತನ್ಯದಲ್ಲಿ ಆರೋಪಿತವಾಗಿ ಕಾಣುವಾಗ 'ಸನ್' ಎಂದು ಸದ್ರೂಪವಾದ ಅಧಿಷ್ಠಾನಾನು ವೇಧವು ಆರೋಪ್ಯದಲ್ಲಿ ಕಾಣುತ್ತದೆ. ಇದು ವ್ಯಾವಹಾರಿಕ ಸತ್ತಾದ್ದರಿಂದ ಈ ಸತ್ತೆಯು ಪ್ರಪಂಚದಲ್ಲಿ ಎಲ್ಲೆಡೆ ವ್ಯಾಪಿಸಿ ಪರಜಾತಿ ಎನಿಸುತ್ತದೆ.

ಜ್ಞಾನತ್ವವು ಅಂತಃಕರಣವೃತ್ತಿಗಳಿಂದ ಉಪಹಿತವಾದ ಚೈತನ್ಯರೂಪಜ್ಞಾನಗಳಲ್ಲಿ ಎಲ್ಲ ಕಡೆ ಇರುವುದರಿಂದ, ಸತ್ತೆಗಿಂತ ಕಡಿಮೆ ವ್ಯಾಪ್ತಿ ಉಳ್ಳದ್ದಾದ್ದರಿಂದ, ಅದು ಅಪರಜಾತಿ ಎನಿಸುತ್ತದೆ.

ಉಪಹಿತವಾದ ಚೈತನ್ಯಗಳು ಶುದ್ಧಕ್ಕಿಂತ ಬೇರೆಯಾದ್ದರಿಂದ ಜ್ಞಾನತ್ವವು ಬೇರೆಬೇರೆ ಅನೇಕ ವ್ಯಕ್ತಿಗಳಲ್ಲಿರುವುದರಿಂದಲೆ ಜಾತಿಯೆನಿಸಿ ಬೇರೆ ವ್ಯಕ್ತಿಗಳಲ್ಲಿ ಇರುವುದರಿಂದಲೇ ಅತಿವ್ಯಾಪ್ತ ವೆನಿಸುತ್ತದೆ. ಬ್ರಹ್ಮನಿಗೆ ಅಲಕ್ಷಣವೆನಿಸುತ್ತದೆ. ಸತ್ಯತ್ವವೂ ಹೀಗೇ ಅಲಕ್ಷಣವೆನಿಸುತ್ತದೆ. ಸತ್ಯಾದಿವಾಕ್ಯ ಲಕ್ಷಣವಾಕ್ಯವೆನಿಸುವುದಿಲ್ಲ. ಲಕ್ಷಣವಾಕ್ಯತ್ವರೂಪ ಹೇತುವಿಗೆ ಅಸಿದ್ಧಿ ದೋಷಬರುತ್ತದೆ.

**'ಅಜಾತಿತ್ವೇऽಪಿ ಬ್ರಹ್ಮಣ್ಯಪಿ ತಸ್ಯ ತಾತ್ತ್ವಿಕಸ್ಯ ಧರ್ಮಿಜ್ಞಾನಾಬಾಧ್ಯಸ್ಯ ಚಾಸಂಭವಾತ್, ಅತಾತ್ತ್ವಿಕಸ್ಯ ವ್ಯಾವಹಾರಿಕಸ್ಯಚ ಅನಾತ್ಮನ್ಯಪಿ ಸತ್ತ್ವಾತ್ ।'**

'ಸತ್ಯತ್ವಜ್ಞಾನತ್ವಾದಿಗಳು ಪರಮಾರ್ಥಸದ್ರೂಪತ್ವ ಸ್ವಪ್ರಕಾಶತ್ವಾದಿ ರೂಪವಾಗಿದ್ದು ಬ್ರಹ್ಮನಿಗಿಂತ ಅನ್ಯತ್ರ ಇಲ್ಲದಿರುವುದರಿಂದ ಅತಿವ್ಯಾಪ್ತಿ ಇಲ್ಲ. ತಾತ್ತ್ವಿಕವಾಗಿದ್ದು ಬ್ರಹ್ಮಸ್ವರೂಪವೇ ಆದರೂ ಆರೋಪಿತ ಭೇದಪ್ರಯುಕ್ತ ಲಕ್ಷ್ಯಲಕ್ಷಣಭಾವವೂ ಕೂಡುತ್ತದೆ' ಎಂದರೆ ಅದು ಸರಿಯಲ್ಲ.

ತಾತ್ತ್ವಿಕವಾದ ಧರ್ಮವು ಅದ್ವಿತೀಯವೆನಿಸಿದ ಬ್ರಹ್ಮನಲ್ಲಿ ಸರ್ವಥಾ ಬರಲಾರದು. ಅದ್ವಿತೀಯಶ್ರುತಿಗೆ ಅದು ವಿರುದ್ಧವಾಗುತ್ತದೆ.

ಸತ್ಯತ್ವಾದಿಗಳನ್ನು ಧರ್ಮಿಜ್ಞಾನಾಬಾಧ್ಯವೆಂದು ಒಪ್ಪಿದರೂ ಬ್ರಹ್ಮನಲ್ಲಿ ಧರ್ಮಿಜ್ಞಾನಾಬಾಧ್ಯವಾದುದೆಂದರೆ ತಾತ್ತ್ವಿಕವೆಂದೇ ಪರ್ಯವಸಾನವಾಗುವುದರಿಂದ ಅದೇ ದೋಷ.

ಧರ್ಮಿಜ್ಞಾನಾಬಾಧ್ಯವು ಪ್ರಪಂಚದಲ್ಲಿ ವ್ಯಾವಹಾರಿಕವೂ ಆಗಬಹುದಾದ್ದರಿಂದ ತಾತ್ತ್ವಿಕತ್ವ ಮತ್ತು ಧರ್ಮಿಜ್ಞಾನಾಬಾಧ್ಯತ್ವಗಳಿಗೆ ಸ್ವಲ್ಪ ವೈಲಕ್ಷಣ್ಯವಿದ್ದೇ ಇದೆ ಎಂದು ಬೇರೆಬೇರೆಯಾಗಿ ಹೇಳಲಾಗಿದೆ.

ಈ ತಾತ್ತ್ವಿಕ ಸತ್ಯತ್ವಾದಿಗಳು ಪ್ರಪಂಚದಲ್ಲಿ ಮಾತ್ರವಲ್ಲದೆ ಬ್ರಹ್ಮದಲ್ಲಿಯೂ ಅಸಂಭವವಾಗುವುದರಿಂದ ಲಕ್ಷಣವೆನಿಸಲಾರವು.

ಅತಾತ್ತ್ವಿಕವಾದ ಅಥವಾ ವ್ಯಾವಹಾರಿಕವಾದ ಸತ್ಯತ್ವಾದಿಗಳೇ ಸತ್ಯಜ್ಞಾನಾದಿ ವಾಕ್ಯಗಳಲ್ಲಿ ಬ್ರಹ್ಮಲಕ್ಷಣವಾಗಿ ಉಕ್ತವಾಗುವುದಾದರೆ ಅವು ಅನಾತ್ಮದಲ್ಲಿ, ಘಟಪಟಾದಿ ಪ್ರಪಂಚದಲ್ಲಿಯೂ ಇರುವುದರಿಂದ ಅತಿವ್ಯಾಪ್ತವಾಗಿದ್ದು ಅಲಕ್ಷಣವೇ ಆಗಿರುತ್ತವೆ. ಹೀಗಾಗಿ ಲಕ್ಷಣವಾಕ್ಯತ್ವರೂಪ ಹೇತುವಿಗೆ ಅಸಿದ್ಧಿ ಅಪರಿಹಾರ್ಯ.



**विरुद्धत्वं च । असाधारणधर्मरूपलक्षणपरवाक्यत्वस्य सखंडार्थत्वेनैव व्याप्तेः ।**

**नच स्वरूपलक्षणस्य लक्ष्यानतिरेकात्तत्परत्व-मखंडार्थत्वाविरोधि । तस्य लक्ष्यमात्रत्वे लक्ष्यलक्षणभावायोगात् । अतिरेकेऽपि यावल्लक्ष्यभावित्वादिनैव स्वरूपलक्षणत्वोपपत्तेश्च ।**

**नच द्वारत्वेन लक्षणपरत्वं द्वारिणोऽखंडत्वाविरोधि, वक्ष्यमाणरीत्या लक्षणात्प्रागेव सामान्यतो ज्ञाते स्वरूपमात्रे तस्य द्वारत्वायोगात् ।**

**नच लक्षणपरत्वं न हेतुः किं त्वतत्परत्वेऽपि तत्प्रत्यायकत्वमात्रमिति वाच्यम् । अलक्षणवाक्यस्यापि तात्पर्यभ्रमादिना लक्षणप्रत्यायकत्वसंभवेन व्यभिचारात् ।।**

ननु लक्षणवाक्यत्वादित्यस्य स्वरूपलक्षणपरवाक्यत्वादित्यर्थ इति न विरोध इत्याशंक्य निराकरोति— **नचेति ।।** ननु लक्षणस्य लक्ष्यातिरेके स्वरूपलक्षणत्वमनुपपन्नमित्याशंक्यातिरेकेऽपि स्वरूपलक्षणव्यवहारस्य गतिमाह— **अतिरेकेऽपीति ।।** ननु सत्यज्ञानादिवाक्यस्य लक्षणोपस्थापना द्वारा लक्ष्योपस्थापकत्वान्नाखंडार्थत्वक्षतिः, बोध्यमानलक्ष्यस्वरूपस्याखंडत्वादित्याशंक्य निराकरोति– **नचेति ।। द्वारत्वायोगादिति ।।** तथाच तेन लक्ष्ये लक्षणवैशिष्ट्यमेव बोधनीयमिति विरुद्धत्वं तदवस्थमिति भावः ।। **अतत्परत्वेऽपीति ।।** तथाच लक्षणवैशिष्ट्यप्रतिपादकत्वेऽपि तस्य तत्र तात्पर्याभावेन लक्ष्यस्वरूपमात्रप्रति-पादनपरत्वेन नाखंडार्थत्वक्षतिरिति भावः ।। **अलक्षणवाक्येऽपीति ।।** द्रव्यं घट इत्यादिसखंडवाक्येऽपीत्यर्थः ।



**'ವಿರುದ್ಧತ್ವಂ ಚ । ಅಸಾಧಾರಣಧರ್ಮರೂಪ ಲಕ್ಷಣಪರ ವಾಕ್ಯತ್ವಸ್ಯ ಸಖಂಡಾರ್ಥತ್ವೇನೈವ ವ್ಯಾಪ್ತೇಃ ।'**

ಅಸಾಧಾರಣ ಧರ್ಮವೇ ಲಕ್ಷಣವೆನಿಸುತ್ತದೆ. 'ಸತ್ಯತ್ವಾದಿಗಳು ಬ್ರಹ್ಮನ ಲಕ್ಷಣ' ಎಂದರೆ ಅವು ಅಸಾಧಾರಣವಾಗಿ ಬ್ರಹ್ಮನಲ್ಲಿವೆ, ಅನ್ಯತ್ರ ಇಲ್ಲ ಎಂದರ್ಥ. ಈ ಅಸಾಧಾರಣಧರ್ಮತ್ವವನ್ನು ಲಕ್ಷಣವಾಕ್ಯವು ಬೋಧಿಸುತ್ತದೆ ಎಂದರೆ ಸತ್ಯತ್ವಾದಿ ಮತ್ತು ಬ್ರಹ್ಮಗಳಿಗೆ ಧರ್ಮಧರ್ಮಿಭಾವರೂಪ ಸಂಸರ್ಗವನ್ನು ಬೋಧಿಸುತ್ತದೆ ಎಂದಂತಾಯಿತು. ಹೀಗಾಗಿ ಸಂಸರ್ಗಾಪ್ರಮಾಪಕತ್ವರೂಪ ಅಖಂಡಾರ್ಥತ್ವಾಭಾವಕ್ಕೆ, ಸಖಂಡಾರ್ಥತ್ವಕ್ಕೆ ಅಂದರೆ ಸಾಧ್ಯಾಭಾವಕ್ಕೇ ವ್ಯಾಪ್ಯವಾಯಿತು ಲಕ್ಷಣವಾಕ್ಯತ್ವ ರೂಪಪ್ರಕೃತಹೇತು. ಆದರಿಂದ ವಿರುದ್ಧಹೇತುವೆನಿಸುತ್ತದೆ.

**ನ ಚ ಸ್ವರೂಪಲಕ್ಷಣಸ್ಯ ಲಕ್ಷ್ಯಾನತಿರೇಕಾತ್ ತತ್ಪರತ್ವಂ ಅಖಂಡಾರ್ಥತ್ವಾವಿರೋಧಿ । ತಸ್ಯ ಲಕ್ಷ್ಯಮಾತ್ರತ್ವೇ ಲಕ್ಷ್ಯಲಕ್ಷಣಭಾವಾಯೋಗಾತ್ । ಅತಿರೇಕೇಽಪಿ ಯಾವಲ್ಲಕ್ಷ್ಯಭಾವಿತ್ವಾದಿನೈವ ಸ್ವರೂಪಲಕ್ಷಣತ್ವೋಪಪತ್ತೇಶ್ಚ ।'**

ಸತ್ಯತ್ವಾದಿಗಳು ಬ್ರಹ್ಮನಿಗೆ ಸ್ವರೂಪಲಕ್ಷಣವೆಂದು ಒಪ್ಪಿದ್ದೇವೆ. ಸ್ವರೂಪಲಕ್ಷಣವು ಲಕ್ಷ್ಯಕ್ಕಿಂತ

ಬೇರೆ ಅಲ್ಲ. ಅದರಿಂದ ಅದು ಬ್ರಹ್ಮನ ಅಖಂಡಾರ್ಥತ್ವಕ್ಕೆ ವಿರೋಧಿಯಾಗುವುದಿಲ್ಲ. ಅದರಿಂದ 'ಲಕ್ಷಣವಾಕ್ಯತ್ವಾತ್' ಎಂದರೆ 'ಸ್ವರೂಪಲಕ್ಷಣಪರವಾಕ್ಯತ್ವಾತ್' ಎಂದು ಅಭಿಪ್ರಾಯ. ಅದರಿಂದ ಅಖಂಡಾರ್ಥತ್ವರೂಪ ಸಾಧ್ಯಾಭಾವವ್ಯಾಪ್ಯತ್ವರೂಪ ವಿರೋಧವು ಲಕ್ಷಣವಾಕ್ಯತ್ವರೂಪ ಹೇತುವಿಗೆ ಬಾರದಿರುವುದರಿಂದ ವಿರೋಧದೋಷವಿಲ್ಲ' ಎಂದರೆ ಅದು ಸರಿಯಲ್ಲ.

ಸ್ವರೂಪಲಕ್ಷಣವು ಲಕ್ಷ್ಯಕ್ಕಿಂತ ಬೇರೆಯಲ್ಲವಾದರೆ ಲಕ್ಷ್ಯ ಲಕ್ಷಣಭಾವವೇ ಕೂಡುವುದಿಲ್ಲ.

ಲಕ್ಷಣ ಲಕ್ಷಣವೆನಿಸುವುದೇ ಇಲ್ಲ. ಲಕ್ಷಣವೆನಿಸಬೇಕಾದರೆ ಅದು, ಜ್ಞಾತವಾಗಿರಬೇಕು, ಪ್ರಸಿದ್ಧವಾಗಿರಬೇಕು. ಅದರ ಮೂಲಕ ಅಜ್ಞಾತವಾದ ಅಪ್ರಸಿದ್ಧವಾದ ಲಕ್ಷ್ಯವನ್ನು ತಿಳಿಯುವಂತಾಗಬೇಕು.

ಲಕ್ಷಣವು ಲಕ್ಷ್ಯಕ್ಕಿಂತ ಬೇರೆಯೇ ಆಗಿರಬೇಕೆಂದರೆ ಸ್ವರೂಪಲಕ್ಷಣ ತಟಸ್ಥಲಕ್ಷಣವೆಂಬ ವ್ಯವಸ್ಥೆ ಹೇಗೆ? ಎಂದರೆ, ಲಕ್ಷಣವು ಯಾವಲ್ಲಕ್ಷ್ಯಭಾವಿಯಾದರೆ ಅದು ಸ್ವರೂಪಲಕ್ಷಣವೆಂದು ವ್ಯವಹಾರ. ಅಯಾವಲ್ಲಕ್ಷ್ಯಭಾವಿಯಾದರೆ ತಟಸ್ಥಲಕ್ಷಣವೆಂದು ವ್ಯವಹಾರವ್ಯವಸ್ಥೆ ಕೂಡುತ್ತದೆ. ಹೀಗಾಗಿ ಲಕ್ಷಣವು ಲಕ್ಷ್ಯಕ್ಕಿಂತ ಅತಿರಿಕ್ತವೇ ಆಗಬೇಕು ಎಂದಮೇಲೆ ಅದು ಅಖಂಡಾರ್ಥತ್ವಕ್ಕೆ ವಿರೋಧಿ, ಸಖಂಡಾರ್ಥಕ್ಕೇ ಅನುಕೂಲ. ಅದರಿಂದ ಲಕ್ಷಣವಾಕ್ಯತ್ವ ಹೇತು ಪ್ರಕೃತದಲ್ಲಿ ವಿರುದ್ಧ.

**ನಚ ದ್ವಾರತ್ವೇನ ಲಕ್ಷಣಪರತ್ವಂ ದ್ವಾರಿಣೋಽಖಂಡಾರ್ಥತಾವಿರೋಧಿ। ವಕ್ಷ್ಯಮಾಣರೀತ್ಯಾ ಲಕ್ಷಣಾತ್ ಪ್ರಾಗೇವ ಸಾಮಾನ್ಯತೋ ಜ್ಞಾತೇ ಸ್ವರೂಪಮಾತ್ರೇ ತಸ್ಯ ದ್ವಾರತ್ವಾಯೋಗಾತ್।**

'ಸತ್ಯಜ್ಞಾನಾದಿ ವಾಕ್ಯವು ಸತ್ಯತ್ವಾದಿಲಕ್ಷಣವನ್ನು ತಿಳಿಸುವ ಮೂಲಕ ಅಖಂಡಚೈತನ್ಯರೂಪ ಲಕ್ಷ್ಯವನ್ನು ತಿಳಿಸುತ್ತದೆ ಎನ್ನುತ್ತೇವೆ. ಲಕ್ಷಣಜ್ಞಾನವು ದ್ವಾರ. ಲಕ್ಷ್ಯಜ್ಞಾನವು ದ್ವಾರಿ. ದ್ವಾರವು ದ್ವಾರಿಗೆ ಅನುಕೂಲವೇ ಹೊರತು ವಿರೋಧಿಯಲ್ಲ. ದ್ವಾರಿಯಾದ ಲಕ್ಷ್ಯಸ್ವರೂಪವು ಇಲ್ಲಿ ಅಖಂಡವಾದ್ದರಿಂದ ಅಖಂಡಾರ್ಥತ್ವಕ್ಕೆ ಲಕ್ಷಣವಾಕ್ಯತ್ವ ಅನುಕೂಲವೇ ಹೊರತು ವಿರೋಧಿಯಲ್ಲ' ಎಂದರೆ, ಅದು ಸರಿಯಲ್ಲ. ಇನ್ನು ಮುಂದೆ ಹೇಳುವಂತೆ ಲಕ್ಷ್ಯಸ್ವರೂಪವು ಲಕ್ಷಣವನ್ನು ಹೇಳುವುದಕ್ಕಿಂತ ಮೊದಲೇ ಸಾಮಾನ್ಯತಃ ಜ್ಞಾತವೇ ಆಗಿದೆ. ಸರ್ವಥಾ ಅಜ್ಞಾತವಲ್ಲ. ಅದರಿಂದ ಲಕ್ಷಣವನ್ನು ಹೇಳುವುದು ಲಕ್ಷ್ಯಸ್ವರೂಪಜ್ಞಾನಕ್ಕೆ ದ್ವಾರವಾಗುವುದಿಲ್ಲ. ನೇರವಾಗಿ ಲಕ್ಷಣವಾಕ್ಯ ಲಕ್ಷ್ಯದಲ್ಲಿ ಲಕ್ಷಣಸಂಸರ್ಗವನ್ನೇ ತಿಳಿಸಬೇಕು. ಹೀಗಾಗಿ ಲಕ್ಷಣವಾಕ್ಯತ್ವವು ಲಕ್ಷಣಸಂಸರ್ಗ ಬೋಧಕತ್ವರೂಪ ಸಖಂಡಾರ್ಥತ್ವಕ್ಕೇ ಪ್ರಯೋಜಕ. ಅಖಂಡಾರ್ಥತ್ವಕ್ಕೆ ವಿರೋಧಿಯೇ ಆಗಿದೆ.

**ನಚ ಲಕ್ಷಣ ಪರತ್ವಂ ನ ಹೇತುಃ। ಕಿಂತು ಅತತ್ಪರತ್ವೇಽಪಿ ತತ್ಪ್ರತ್ಯಾಯಕತ್ವ ಮಾತ್ರಂ ಇತಿ ವಾಚ್ಯಂ। ಅಲಕ್ಷಣ ವಾಕ್ಯಸ್ಯಾಪಿ ತಾತ್ಪರ್ಯಭ್ರಮಾದಿನಾ ಲಕ್ಷಣ ಪ್ರತ್ಯಾಯಕತ್ವ ಸಂಭವೇನ ವ್ಯಭಿಚಾರಾತ್ ॥**

'ಲಕ್ಷಣವಾಕ್ಯ 'ಎಂದರೆ ಲಕ್ಷಣವನ್ನು ಹೇಳುವಲ್ಲಿ ತಾತ್ಪರ್ಯಉಳ್ಳ ವಾಕ್ಯ ಎಂದು ವಿವಕ್ಷಿತವಲ್ಲ. ತಾತ್ಪರ್ಯವಿಲ್ಲದಿದ್ದರೂ ಲಕ್ಷಣಸಂಸರ್ಗ ಪ್ರತೀತಿ ಉಂಟುಮಾಡುವ ವಾಕ್ಯವೆಂದರ್ಥ. ಇಂಥ ಲಕ್ಷಣವಾಕ್ಯತ್ವವನ್ನೇ ಹೇತುವಾಗಿ ಮಾಡುತ್ತೇವ. ಲಕ್ಷಣ ಸಂಸರ್ಗಪ್ರತೀತಿಯನ್ನು ಲಕ್ಷಣವಾಕ್ಯ ಉಂಟುಮಾಡಿದರೂ ಅದರಲ್ಲಿ ತಾತ್ಪರ್ಯವಿಲ್ಲದಿರುವುದರಿಂದ ಅಖಂಡಾರ್ಥತ್ವಕ್ಕೆ ಅದು ವಿರೋಧಿಯಾಗುವುದಿಲ್ಲ. ಲಕ್ಷಣ ಸಂಸರ್ಗಪ್ರತೀತಿ ಉಂಟುಮಾಡುವ ತಾತ್ಪರ್ಯವಿದ್ದರೆ ಮಾತ್ರ ಅದು ಅಖಂಡಾರ್ಥತ್ವಕ್ಕೆ ವಿರೋಧಿ ಎನ್ನಬಹುದು. ಅಂಥ ತಾತ್ಪರ್ಯವಿಲ್ಲದೆ ಲಕ್ಷ್ಯಸ್ವರೂಪ ಮಾತ್ರಪ್ರತಿಪಾದನ ತಾತ್ಪರ್ಯವಿರುವುದರಿಂದ ಅಖಂಡಾರ್ಥತ್ವಕ್ಕೆ ವಿರುದ್ಧವಾಗುವುದಿಲ್ಲ. ಅನುಕೂಲವೇ ಆಗುತ್ತದೆ.'

ಹೀಗೆ ಹೇಳಿದರೂ ಸರಿಯಾಗುವುದಿಲ್ಲ. 'ದ್ರವ್ಯಂ ಘಟಃ' ಇತ್ಯಾದಿ ಅಲಕ್ಷಣ ವಾಕ್ಯ ಸಖಂಡಾರ್ಥಕ. ಅದಕ್ಕೆ ಲಕ್ಷಣಸಂಸರ್ಗ ಪ್ರತಿಪಾದನೆಯಲ್ಲಿ ತಾತ್ಪರ್ಯವಿಲ್ಲದಿದ್ದರೂ ತಾತ್ಪರ್ಯ ಭ್ರಮದಿಂದ ಲಕ್ಷಣಸಂಸರ್ಗ ಪ್ರತೀತಿಜನಕತ್ವವಿರಬಹುದು. ಅಲಕ್ಷಣವಾಕ್ಯ ಸಖಂಡಾರ್ಥಕವಾಗಿರುವುದರಿಂದ ತಾತ್ಪರ್ಯಭ್ರಮಾದಿವಶದಿಂದ ಲಕ್ಷಣಸಂಸರ್ಗಪ್ರತೀತಿಜನಕತ್ವರೂಪಹೇತುವಿಗೆ ಸಖಂಡಾರ್ಥಕ ಅಲಕ್ಷಣವಾಕ್ಯದಲ್ಲಿ ವ್ಯಭಿಚಾರ ಬಂದೀತು. ಅದರಿಂದ ವಿರೋಧರೂಪ ಹೇತುದೋಷ ಅಪರಿಹಾರ್ಯವೇ.



**सखंडवनादिलक्षणवाक्ये, किं चंद्रलक्षणमित्यसाधारणधर्मप्रश्नोत्तरे प्रकृष्टादिवाक्ये च व्यभिचारश्च ।**

**नचाखंडलक्षणवाक्यत्वं हेतुः, असिद्धेः ।**

**नच धर्मे पृष्टे स्वरूपमात्रं वक्तुमुचितम् ।**

**नच प्रश्नविशेष्यविशेष्यकत्वं उत्तरत्वे तंत्रम्, किंतु तन्मूलसंशयविरोधित्वम् ।**

नन्वनेन वाक्येनापि स्वरूपमेव प्रत्याय्यम् । तस्यैव प्रश्नविषयत्वादित्याशंक्य निराकरोति— **नचेति** ।। प्रश्नमूलभूतसंशयधर्मिणोऽज्ञाने संशयाद्ययोगेन प्रश्नस्यापि धर्मविषयतया तत्प्रतिवचनभूतलक्षणवाक्यस्यापि धर्मपरत्वं दुर्निरसमिति भावः । ननु यदि धर्मप्रश्नः तर्हि सत्यं ज्ञानमिति ब्रह्मविशेष्यकमुत्तरं न स्यात् । समानविशेष्यकसमानप्रकारकनिश्चयस्यैव संशयविरोधित्वेन प्रश्नोत्तरयोरपि समानविशेष्यक-

त्वनियमादित्याशंक्य निराकरोति— **नचेति** ।। तथा च पर्वते वह्निरस्ति न वेति संशयस्य पर्वतो वह्निमानिति निश्चयेन निवृत्तिदर्शनादुक्तनियमोऽसिद्ध इति भावः । यद्वा किं चन्द्रलक्षणमिति प्रश्नोत्तरे प्रकृष्टप्रकाशादिवाक्ये न व्यभिचारः । तस्यापि स्वरूपमात्रप्रत्यायकत्वादित्याशंक्य निराकरोति– **नचेति** ।। ननु प्रकृष्टादिवाक्यस्य धर्मविशेष्यकत्वाभावात् न धर्मप्रश्नोत्तरत्वमित्याशंक्य निराकरोति— **नचेति** ।



'ಸಖಂಡ ವನಾದಿ ಲಕ್ಷಣವಾಕ್ಯೇ, ಕಿಂ ಚಂದ್ರಲಕ್ಷಣಮಿತ್ಯಸಾಧಾರಣ ಧರ್ಮ-ಪ್ರಶ್ನೋತ್ತರೇ ಪ್ರಕೃಷ್ಟಾದಿವಾಕ್ಯೇ ಚ ವ್ಯಭಿಚಾರಶ್ಚ ।'

ವನ ಸೇನಾ ಮುಂತಾದ ಅನೇಕಧರ್ಮಿ ಸಮೂಹವಿಷಯ ಲಕ್ಷಣವಾಕ್ಯದಲ್ಲಿ ಅಖಂಡಾರ್ಥ ಪರತ್ವ ಅಸಂಭವಿ. ಧರ್ಮಿಭೇದಪರತ್ವವೆ ಇಲ್ಲಿ ಆವಶ್ಯಕ. ಅಂಥ ಲಕ್ಷಣ ವಾಕ್ಯದಲ್ಲಿಯೂ ಲಕ್ಷಣವಾಕ್ಯತ್ವರೂಪಹೇತುವಿರುವುದರಿಂದ ವ್ಯಭಿಚಾರ.

ಧರ್ಮಿ ಏಕವಲ್ಲದಿದ್ದರೂ ಧರ್ಮಿತಾವಚ್ಛೇದಕ ವನತ್ವಾದಿ ಏಕವಾಗಿರುವುದರಿಂದ ಅಖಂಡಾರ್ಥವಾಗಬಹುದೆಂದರೆ, ಧರ್ಮಿತಾವಚ್ಛೇದಕೈಕ್ಯದಿಂದ ಧರ್ಮಿಗಳಿಗೆ ಐಕ್ಯ ಬರುವುದಿಲ್ಲ, ಧರ್ಮಿಭೇದವಿದ್ದೇ ಇರುತ್ತದೆ, ಜೊತೆಗೆ, ಧರ್ಮಿಭೇದದೊಂದಿಗೆ ಧರ್ಮಿ-ಧರ್ಮಿತಾವಚ್ಛೇದಕ ಭೇದವೂ ಸೇರುವುದರಿಂದ ಸಖಂಡಾರ್ಥತ್ವ ದೃಢವಾಗುತ್ತದೆ.

'ಕಿಂ ಚಂದ್ರ ಲಕ್ಷಣಂ?' ಎಂಬ ಪ್ರಶ್ನೆಗೆ ಉತ್ತರವಾಗಿ ಹೊರಟ ಪ್ರಕೃಷ್ಟಾದಿವಾಕ್ಯಕ್ಕೆ ಚಂದ್ರನ ಅಸಾಧಾರಣ ಧರ್ಮವಿಷಯದಲ್ಲಿಯೇ ಪ್ರಶ್ನೆ ಬಂದಿರುವುದರಿಂದ ಅಸಾಧಾರಣಧರ್ಮವನ್ನು ಹೇಳುವುದರಲ್ಲಿಯೇ ತಾತ್ಪರ್ಯವೆನ್ನಬೇಕಾಗುತ್ತದೆ. ಹೀಗೆ ಧರ್ಮಿವಿಷಯಕವಾದ ಪ್ರಕೃಷ್ಟಾದಿವಾಕ್ಯ ಅಖಂಡಪರವಾಗಲು ಶಕ್ಯವಿಲ್ಲ. ಅಖಂಡದಲ್ಲಿ ಧರ್ಮಧರ್ಮಿಭಾವ ಅಸಂಭವಿ. ಆದರಿಂದ ಅಖಂಡಾರ್ಥ ಪರವಲ್ಲದ ಈ ವಾಕ್ಯದಲ್ಲಿ ಲಕ್ಷಣವಾಕ್ಯತ್ವಹೇತುವಿಗೆ ವ್ಯಭಿಚಾರ.

'ನಚಾಖಂಡ ಲಕ್ಷಣ ವಾಕ್ಯತ್ವಂ ಹೇತುಃ । ಅಸಿದ್ಧೇಃ ।'

'ಪ್ರಕೃಷ್ಟ ಪ್ರಕಾಶಃ ಚಂದ್ರ' ಎಂಬುದು ಅಖಂಡ ಚಂದ್ರಸ್ವರೂಪ ಲಕ್ಷಣವಾಕ್ಯ. 'ಏಕದೇಶಸ್ಥಾ ವೃಕ್ಷಾ ವನಂ' 'ಒಂದೆಡೆ ಗುಂಪಾಗಿ ಬೆಳೆದು ನಿಂತಿರುವ ವೃಕ್ಷಗಳೇ ಕಾಡು' ಎಂಬ ವಾಕ್ಯ ಅನೇಕ ವೃಕ್ಷಗಳ ಸಮೂಹರೂಪ ಸಖಂಡ ಪದಾರ್ಥಕ್ಕೆ ಲಕ್ಷಣವಾಕ್ಯ. ಈ ಅಖಂಡಲಕ್ಷಣ ವಾಕ್ಯ ಮತ್ತು ಸಖಂಡ ಲಕ್ಷಣ ವಾಕ್ಯಗಳೆರಡೂ ಲಕ್ಷಣವಾಕ್ಯಗಳಾದ್ದರಿಂದ ಲಕ್ಷಣವಾಕ್ಯತ್ವ ಹೇತುವು ಸಖಂಡಲಕ್ಷಣ ವಾಕ್ಯದಲ್ಲಿ ವ್ಯಭಿಚರಿತವಾಯಿತು. ಆದಕ್ಕೆ ಅಖಂಡಲಕ್ಷಣವಾಕ್ಯತ್ವವನ್ನೇ ಹೇತುಮಾಡುತ್ತೇವೆ' ಎಂದರೆ ಅಸಿದ್ಧಿದೋಷ.

ಏಕೆಂದರೆ ಸತ್ಯಾದಿವಾಕ್ಯವು ಕೂಡ ಸಖಂಡಲಕ್ಷಣವಾಕ್ಯವೇ ಆಗಿದೆ. ಬ್ರಹ್ಮಸ್ವರೂಪ ಮಾತ್ರವು ಜ್ಞಾತವೇ ಆಗಿರುವುದರಿಂದ ಆ ವಿಷಯದಲ್ಲಿ ಪ್ರಶ್ನೆ ಕೂಡುವುದಿಲ್ಲ. ಸತ್ಯತ್ವಾದಿ ಧರ್ಮವಿಶಿಷ್ಟ ಬ್ರಹ್ಮನ ಬಗ್ಗೆಯೇ ಪ್ರಶ್ನೆ. ಅವನ ವಿಷಯದಲ್ಲಿಯೇ ಉತ್ತರ ಎನ್ನುವುದು ಮುಂದೆ ಸ್ಪಷ್ಟವಾಗುತ್ತದೆ. ಹೀಗಾಗಿ ಸತ್ಯಾದಿ ವಾಕ್ಯವೂ ಸಖಂಡಲಕ್ಷಣವಾಕ್ಯವೇ ಆಗಿರುವುದರಿಂದ ಅಖಂಡಲಕ್ಷಣ ವಾಕ್ಯತ್ವವನ್ನು ಹೇತುಮಾಡಿದರೆ ಅಸಿದ್ಧಿದೋಷ.

'ನ ಚ ಧರ್ಮೇ ಪೃಷ್ಟೇ ಸ್ವರೂಪಮಾತ್ರಂ ವಕ್ತುಮುಚಿತಂ'

'ಕಿಂ ಚಂದ್ರ ಲಕ್ಷಣಂ' ಎಂದು ಚಂದ್ರನ ಅಸಾಧಾರಣ ಧರ್ಮಪ್ರಶ್ನೆ. 'ಕಶ್ಚಂದ್ರಃ' ಎಂಬ ಪ್ರಶ್ನೆಗೆ ಚಂದ್ರಸ್ವರೂಪ ಮಾತ್ರವನ್ನೇ ಉತ್ತರವಾಗಿ ಹೇಳುವಂತೆ, ಈ ವಾಕ್ಯದಿಂದಲೂ ಚಂದ್ರನ ಧರ್ಮಸ್ವರೂಪ ಮಾತ್ರವನ್ನೇ ಉತ್ತರವಾಗಿ ಹೇಳುವುದು ಯುಕ್ತ. ಆದರಿಂದ ಅಸಾಧಾರಣಧರ್ಮ ಪ್ರಶ್ನೋತ್ತರ ರೂಪದ ಪ್ರಕೃಷ್ಟಾದಿ ವಾಕ್ಯವೂ ಕೂಡ ಅಖಂಡಾರ್ಥಕವೆ'—ಎಂದರೆ, ಅದು ಸರಿಯಲ್ಲ.

'ಚಂದ್ರನ ಲಕ್ಷಣವೇ'ನೆಂದು ಚಂದ್ರನ ಧರ್ಮವನ್ನು ಕೇಳಿದಾಗ ಚಂದ್ರನಿಗೂ ಅವನ ಲಕ್ಷಣಕ್ಕೂ ಧರ್ಮಧರ್ಮಿಭಾವ ಪ್ರತಿಪಾದನೆ ಮಾಡುವುದು ಆವಶ್ಯಕ. ಕೇವಲ ಲಕ್ಷಣ ಸ್ವರೂಪವನ್ನು ಮಾತ್ರ ಹೇಳುವುದು ಯುಕ್ತವಲ್ಲ. ಧರ್ಮ ಸ್ವರೂಪವೇನೆಂದು ಕೇಳಿಲ್ಲ, 'ಚಂದ್ರನ ಲಕ್ಷಣವೇ'ನೆಂದೇ ಕೇಳಿದ್ದಾನೆ. ಹೀಗಾಗಿ ಧರ್ಮಧರ್ಮಿಭಾವವನ್ನೇ ಹೇಳುತ್ತಿರುವುದರಿಂದ ಈ ವಾಕ್ಯ ಸಖಂಡಾರ್ಥವೇ. ಆದರಿಂದ ಹೇತುವಿಗೆ ಅಸಿದ್ಧಿದೋಷ ಅಪರಿಹಾರ್ಯ.

'ಚಂದ್ರನ ಅಸಾಧಾರಣ ಧರ್ಮದ ಬಗ್ಗೆ ಪ್ರಶ್ನೆ ಮಾಡಿದರೂ ಉತ್ತರವು ಚಂದ್ರಸ್ವರೂಪವನ್ನೇ ಹೇಳುತ್ತದೆ' ಎನ್ನುತ್ತೇನೆ ಎಂದರೂ, 'ನ ಚ ಧರ್ಮೇ ಪೃಷ್ಟೇ ಸ್ವರೂಪ ಮಾತ್ರಂ ವಕ್ತುಮುಚಿತಂ' ಎಂಬ ಈ ವಾಕ್ಯವೇ ಅವನಿಗೆ ಉತ್ತರ. ಚಂದ್ರನ ಧರ್ಮದ ಬಗ್ಗೆ ಕೇಳಿದಾಗ ಕೇವಲ ಚಂದ್ರಸ್ವರೂಪವನ್ನೇ ಹೇಳುವುದು ಯುಕ್ತವಲ್ಲ. ಪ್ರಶ್ನೆಯಲ್ಲಿ ಕೇಳಿದ್ದೇ ಬೇರೆ, ಉತ್ತರದಲ್ಲಿ ಹೇಳಿದ್ದೇ ಬೇರೆ, ಎನ್ನಲಾಗದು ತಾನೆ? ಎಂದು.

'ನ ಚ ಪ್ರಶ್ನವಿಶೇಷ್ಯವಿಶೇಷ್ಯಕತ್ವಂ ಉತ್ತರತ್ವೇ ತಂತ್ರಂ। ಕಿಂತು ತನ್ಮೂಲ ಸಂಶಯ ವಿರೋಧಿತ್ವಂ।'

ಅದ್ವೈತಿ ಪುನಃ ಆಕ್ಷೇಪಿಸಬಹುದು—'ಪ್ರಕೃಷ್ಟಾದಿ ವಾಕ್ಯವು ಧರ್ಮವಿಶೇಷ್ಯಕವಲ್ಲ. ಅದು ಧರ್ಮಪ್ರಶ್ನೋತ್ತರ ಹೇಗಾದೀತು? ಮತ್ತು ಧರ್ಮಪ್ರಶ್ನೆಗೆ ಉತ್ತರವಾಗಿ ಧರ್ಮಿಯ ಸ್ವರೂಪವನ್ನು ಮಾತ್ರ ಹೇಳುವುದೂ ವ್ಯಧಿಕರಣವಾಗುವುದಿಲ್ಲ. ಏಕೆಂದರೆ ಧರ್ಮಪ್ರಶ್ನೆಯಲ್ಲಿ ವಿಶೇಷ್ಯವಾಗಿ ಧರ್ಮಿಯೂ ಸೇರಿರುತ್ತದೆ. ವಿಶೇಷ್ಯವಾದ ಆ ಧರ್ಮಿಯ ಬಗ್ಗೆಯೇ ಉತ್ತರ ಹೊರಟರೆ ಅಸಂಗತ ಹೇಗೆ ಆಗುತ್ತದೆ?' ಎಂದು.

ಈ ಎರಡೂ ಪ್ರಶ್ನೆಗಳು ಸರಿಯಲ್ಲ. ಉತ್ತರ ಉತ್ತರವಾಗಬೇಕಾದರೆ, ಪ್ರಶ್ನೆಯ ವಿಶೇಷ್ಯವನ್ನೇ ಉತ್ತರದಲ್ಲಿ ಹೇಳಬೇಕೆನ್ನುವುದು ಸರಿಯಲ್ಲ. ಉತ್ತರವು ಪ್ರಶ್ನೆಗೆ ಮೂಲಭೂತವಾದ ಸಂಶಯವನ್ನು ಪರಿಹರಿಸುವಂತಿರಬೇಕು. ಸಂಶಯಕ್ಕೆ ವಿರೋಧಿಯಾಗಿರಬೇಕು. ಧರ್ಮವು ಧರ್ಮಿಯಲ್ಲಿ ಉಂಟೇ ಇಲ್ಲವೇ ಎಂಬ ಸಂಶಯ ಮೂಲಕವಾಗಿ ಪ್ರಶ್ನೆಮಾಡಿದಾಗ ಉತ್ತರವು ಧರ್ಮವು ಧರ್ಮಿಯಲ್ಲಿ ಉಂಟೆನ್ನಬೇಕು ಹೊರತು 'ಧರ್ಮಿಯ ಸ್ವರೂಪ ಹೀಗೆ' ಎಂದು ಹೇಳಿದರೆ ಸಂಶಯ ಪರಿಹಾರವಾಗಲಾರದು, ಉತ್ತರ ಉತ್ತರವೆನಿಸಲಾರದು.

'ಕಿಂ ಚಂದ್ರಲಕ್ಷಣಂ?' ಎಂಬ ಪ್ರಶ್ನೆಗುತ್ತರವಾಗಿ ಹೊರಟ ಪ್ರಕೃಷ್ಟಾದಿ ವಾಕ್ಯವು ಚಂದ್ರನ ಲಕ್ಷಣವಾಕ್ಯವಲ್ಲದಿದ್ದರೂ ಅದು ಚಂದ್ರನ ಸ್ವರೂಪವನ್ನೇ ತಿಳಿಸಬೇಕು. ಏಕೆಂದರೆ ಪ್ರಶ್ನೆಗೆ ವಿಷಯವು ಚಂದ್ರನ ಸ್ವರೂಪವೆ' ಎಂದರೆ, ಉತ್ತರ—

**'ನ ಚ ಧರ್ಮೇ ಪೃಷ್ಟೇ ಸ್ವರೂಪಮಾತ್ರಂ ವಕ್ತುಮುಚಿತಂ'**

'ಪ್ರಶ್ನೆಗೆ ಮೂಲಭೂತವಾದ ಸಂಶಯಕ್ಕೆ ಧರ್ಮಿ ಚಂದ್ರ. ಆದರೂ ಅದರ ಜ್ಞಾನವಿದೆ. ಜ್ಞಾನವಿಲ್ಲದೆ ಇದ್ದರೆ ಸಂಶಯವಾಗಲಿ ಪ್ರಶ್ನೆಯಾಗಲಿ ಬಾರದು. ಅದರಿಂದ ಅಜ್ಞಾತವಾದ ಧರ್ಮದ್ದೇ ಜಿಜ್ಞಾಸೆ. ಅದರಿಂದ ಅದಕ್ಕೆ ಉತ್ತರವಾಗಿ ಹೊರಟ ಲಕ್ಷಣವಾಕ್ಯವು ಧರ್ಮಪರವೆಂದೇ ಹೇಳಬೇಕು. ಧರ್ಮದ ಜಿಜ್ಞಾಸೆ ಇರುವಾಗ ಸ್ವರೂಪಮಾತ್ರವನ್ನು ಹೇಳುವುದಾಗದು.' ಎಂದು.

'ಧರ್ಮದ್ದೇ ಪ್ರಶ್ನೆ ಧರ್ಮದ್ದೇ ಜಿಜ್ಞಾಸೆ ಎಂದರೆ, ಉತ್ತರವು ಧರ್ಮವಿಶೇಷ್ಯಕವೇ ಆಗಬೇಕು. ಸತ್ಯತ್ವಾದಿ ಬ್ರಹ್ಮಧರ್ಮಜಿಜ್ಞಾಸೆಯಿಂದ ಪ್ರಶ್ನೆ ಮಾಡಿದಾಗ 'ಸತ್ಯಂ ಜ್ಞಾನಂ' ಎಂದು 'ಬ್ರಹ್ಮ ಸತ್ಯ'ವೆಂದು ಬ್ರಹ್ಮವಿಶೇಷ್ಯಕವಾದ ಉತ್ತರ ನೀಡುವುದು ಸರಿಯೆ? 'ಸತ್ಯತ್ವವು ಬ್ರಹ್ಮನ ಲಕ್ಷಣ' ಎಂದು ಸತ್ಯತ್ವವಿಶೇಷ್ಯಕ ಉತ್ತರ ನೀಡಿದರೇ ಸಮಂಜಸವಾಗುವುದು. ಸಮಾನವಿಶೇಷ್ಯಕ ಸಮಾನಪ್ರಕಾರಕವಾದ ನಿಶ್ಚಯವೆ ಸಂಶಯಕ್ಕೆ ವಿರೋಧಿ. ಅದರಿಂದ ಪ್ರಶ್ನೋತ್ತರಗಳೂ ಸಮಾನವಿಶೇಷ್ಯಕವೇ ಆಗಿರಬೇಕು ತಾನೆ?' ಎಂಬ ಪ್ರಶ್ನೆ ಬಂದರೆ—

**'ನ ಚ ಪ್ರಶ್ನವಿಶೇಷ್ಯ ವಿಶೇಷ್ಯಕತ್ವಂ ಉತ್ತರತ್ವೇ ತಂತ್ರಂ, ಕಿಂತು ತನ್ಮೂಲ ಸಂಶಯವಿರೋಧಿತ್ವಂ'**

ಎಂದು ಉತ್ತರ. 'ಪರ್ವತದಲ್ಲಿ ವಹ್ನಿ ಇದೆಯೆ ಇಲ್ಲವೆ?' ಎಂಬ ಸಂಶಯಕ್ಕೆ 'ಪರ್ವತ ವಹ್ನಿಮತ್ತಾಗಿದೆ' ಎಂಬ ನಿಶ್ಚಯವೂ ಕೂಡ ನಿವರ್ತಕವಾಗುವುದು ಕಂಡಿದೆ. ಅದರಿಂದ ಸಂಶಯ-ಉತ್ತರಗಳಿಗೆ ಸಮಾನ ವಿಶೇಷ್ಯ ಸಮಾನ ಪ್ರಕಾರಗಳೇ ಇರಬೇಕೆಂಬ ನಿಯಮವಿಲ್ಲ. ಉತ್ತರವು ಉತ್ತರವಾಗಬೇಕಾದರೆ ಪ್ರಶ್ನಕ್ಕೆ ಮೂಲವಾದ ಸಂಶಯಕ್ಕೆ ಅದು ವಿರೋಧಿಯಾದರೆ ಸಾಕು.' ಎಂದು.



**बाधश्च । धर्मिज्ञानाधीनसप्रकारकसंशयादिनिवर्तकं मोक्षहेतुं सप्रकारकं ब्रह्मज्ञानं प्रति साधनत्वेन वेदांतविचारविधानान्यथानुपपत्त्या बलवत्या वेदांतवाक्ये साध्याभावनिश्चयात् ।**

**धर्मिज्ञानाधीनेति** ।। स्वरूपज्ञानमात्रस्य संशयनिवर्तकत्वे च धर्मिज्ञानेनैव संशयनिवृत्तिः स्यादिति संशयनिवर्तकज्ञानस्य धर्मिज्ञानविषयविशेषविषयकत्वस्यावश्यकत्वादिति भावः ।।



**'ಬಾಧಶ್ಚ । ಧರ್ಮಿಜ್ಞಾನಾಧೀನ ಸಪ್ರಕಾರಕ ಸಂಶಯಾದಿ ನಿವರ್ತಕಂ ಮೋಕ್ಷ ಹೇತುಂ ಸಪ್ರಕಾರಕಂ ಬ್ರಹ್ಮಜ್ಞಾನಂ ಪ್ರತಿ ಸಾಧನತ್ವೇನ ವೇದಾಂತ ವಿಚಾರ ವಿಧಾನಾನ್ಯಥಾನುಪಪತ್ತ್ಯಾ ಬಲವತ್ಯಾ ವೇದಾಂತ ವಾಕ್ಯೇ ಸಾಧ್ಯಾಭಾವನಿಶ್ಚಯಾತ್'**

ಮೋಕ್ಷಹೇತುವಾದ ಬ್ರಹ್ಮಜ್ಞಾನ 'ಭಿದ್ಯತೇ ಹೃದಯ ಗ್ರಂಥಿಃ ಛಿದ್ಯಂತೇ ಸರ್ವಸಂಶಯಾಃ' ಎಂಬಂತೆ ಸರ್ವಸಂಶಯ ನಿವರ್ತಕವಾಗಬೇಕು. ಸಂಶಯವು ಸಪ್ರಕಾರವೇ ಇರುತ್ತದೆ. ಆದರಿಂದ ಸಪ್ರಕಾರಕ ಸಂಶಯ ನಿವರ್ತಕವಾದ ಬ್ರಹ್ಮಜ್ಞಾನ ಸಪ್ರಕಾರಕವೇ ಇರಬೇಕು. ನಿಷ್ಪ್ರಕಾರಕ ಬ್ರಹ್ಮಸ್ವರೂಪಜ್ಞಾನವಾಗಿರಬಾರದು. ಧರ್ಮಿಯಾದ ಬ್ರಹ್ಮನ ಸ್ವರೂಪಜ್ಞಾನ ಮೊದಲೇ ಇರುತ್ತದೆ. ಇಲ್ಲದಿದ್ದರೆ ಧರ್ಮಿಜ್ಞಾನಸಾಧ್ಯವಾದ ಸಂಶಯಾದಿ ಬರಲಾರದು. ಹೀಗಾಗಿ ಮೋಕ್ಷಹೇತುವಾದ ಸಪ್ರಕಾರಕ ಬ್ರಹ್ಮಜ್ಞಾನದ ಉದ್ದೇಶದಿಂದ ಅದಕ್ಕೆ ಸಾಧನವಾಗಿ ವೇದಾಂತವಿಚಾರ ವಿಹಿತವಾಗಿದೆ; 'ತದ್ವಿಜಿಜ್ಞಾಸಸ್ವ ತದ್ಬ್ರಹ್ಮ' ಎಂದು. ಆದರಿಂದ ಸತ್ಯಾದಿ ವೇದಾಂತವಾಕ್ಯ ಜನ್ಯ ಬ್ರಹ್ಮಜ್ಞಾನವು ಸಪ್ರಕಾರಕವೇ ಇರಬೇಕು. ಬಲವತ್ತಾದ ಈ ಅನ್ಯಥಾನುಪಪತ್ತಿಯಿಂದ ಸತ್ಯಾದಿವಾಕ್ಯ ಅಖಂಡಾರ್ಥಪರವಲ್ಲ ಎಂದು ನಿಶ್ಚಯವಾಗುತ್ತದೆ. ಅದನ್ನು ಅಖಂಡಾರ್ಥವೆಂದು ಸಾಧಿಸಲು ಹೊರಟರೆ ಅನುಮಾನವು ಬಾಧಿತವಾಗುತ್ತದೆ.

ಅಖಂಡ ಬ್ರಹ್ಮಸ್ವರೂಪಜ್ಞಾನಮಾತ್ರವೇ ಸಂಶಯಾದಿಗಳಿಗೆ ನಿವರ್ತಕವಾಗುವುದಾದರೆ ಧರ್ಮಿಜ್ಞಾನದಿಂದಲೇ ಸಂಶಯನಿವೃತ್ತಿಯಾದೀತು. ಆದರಿಂದ ಸತ್ಯಾದಿ ವಾಕ್ಯದಿಂದ ಬರುವ ಸಪ್ರಕಾರಕ ಸಂಶಯನಿವರ್ತಕ ಜ್ಞಾನವು ಧರ್ಮಿಜ್ಞಾನ ವಿಷಯವಾದ ಬ್ರಹ್ಮನಲ್ಲಿ ಸತ್ಯತ್ವಾದಿ ಅಸಾಧಾರಣ ಧರ್ಮಸಂಸರ್ಗ ಗೋಚರವಾಗುವುದು ಆವಶ್ಯಕ. ಸಂಸರ್ಗಾಗೋಚರ ಪ್ರಮಾಜನಕತ್ವವು ಸತ್ಯಾದಿವಾಕ್ಯಕ್ಕೆ ಸರ್ವಥಾ ಬರಲಾರದು.

**ಅದ್ವೈತಸಿದ್ಧಿಕಾರನ ಆಕ್ಷೇಪ :** 'ಸಪ್ರಕಾರಕ ಜ್ಞಾನವೇ ಸಂಶಯನಿವರ್ತಕ' ಎನ್ನುವುದು ಸರಿಯಲ್ಲ. ಭ್ರಮಕಾಲದಲ್ಲಿಯೂ ಅನುವೃತ್ತವಾದ ಇದಂತ್ವಾಕಾರಕ ಜ್ಞಾನ ಸಂಶಯ

ನಿವರ್ತಕವಾಗುವುದಿಲ್ಲ. ಭ್ರಮಕಾಲ ವ್ಯಾವೃತ್ತವಾದ ಶುಕ್ತಿತ್ವಪ್ರಕಾರಕ ಜ್ಞಾನವೇ ಸಂಶಯನಿವರ್ತಕ. ಅಖಂಡಾರ್ಥಜ್ಞಾನವು ಇಂಥ ವ್ಯಾವೃತ್ತಾಕಾರಜ್ಞಾನವಾಗಿರುವುದರಿಂದ ಅದೇ ಸಂಶಯ ನಿವರ್ತಕ, ಮೋಕ್ಷಹೇತು. ಹೊರತು, ಸಪ್ರಕಾರಕಜ್ಞಾನವು ಮೋಕ್ಷಹೇತುವಲ್ಲ. ಅದಕ್ಕೆ ಸಾಧನವಾಗಿ ವೇದಾಂತ ವಿಚಾರ ವಿಹಿತವಾಗಿಲ್ಲ, ಮತ್ತು ಜ್ಞಾನವು ಅಜ್ಞಾನ ನಿವರ್ತಕವಾಗಲು ಸಮಾನವಿಷಯತ್ವವೇ ಪ್ರಯೋಜಕ. ಸಮಾನ ಪ್ರಕಾರಕತ್ವವಲ್ಲ. ನಿಷ್ಪ್ರಕಾರಕವಾದ ಅಖಂಡಾರ್ಥಜ್ಞಾನವೇ ಅಜ್ಞಾನ ಸಮಾನ ವಿಷಯಕವಾದ್ದರಿಂದ ಅಜ್ಞಾನಕ್ಕೆ ನಿವರ್ತಕವಾಗುತ್ತದೆ' ಎಂದು ಅದ್ವೈತಸಿದ್ಧಿಕಾರನ ಆಕ್ಷೇಪವಿದೆ. ಇದು ಸರಿಯಲ್ಲ.

ವ್ಯಾವೃತ್ತಾಕಾರಜ್ಞಾನವೆಂದರೆ ವ್ಯಾವರ್ತಕಪ್ರಕಾರಕ ಅಥವಾ ವ್ಯಾವೃತ್ತಿಪ್ರಕಾರಕವೇ ಆಗಬೇಕು. ಶುದ್ಧ ಬ್ರಹ್ಮನಲ್ಲಿ ವ್ಯಾವರ್ತಕವನ್ನಾಗಲಿ ವ್ಯಾವೃತ್ತಿಯನ್ನಾಗಲಿ ಒಪ್ಪಿಲ್ಲ. ಬ್ರಹ್ಮಜ್ಞಾನದಲ್ಲಿ ತತ್ಪ್ರಕಾರಕತ್ವವನ್ನು ಒಪ್ಪಿಲ್ಲವೆಂದರೆ ಜ್ಞಾನವು ವ್ಯಾವೃತ್ತಾಕಾರವಾಗುವುದು ಹೇಗೆ?

ಮತ್ತು ಸಮಾನ ವಿಷಯಕ ಜ್ಞಾನವೇ ಅಜ್ಞಾನ ನಿವರ್ತಕವೆಂದರೆ ಧರ್ಮಿಜ್ಞಾನ ಕೂಡ ಅಜ್ಞಾನ ಸಂಶಯ ನಿವರ್ತಕವಾದೀತು. ಧರ್ಮಿಜ್ಞಾನ ಅಜ್ಞಾನಸಮಾನವಿಷಯಕವೆ ತಾನೆ?

'ಅಜ್ಞಾನವು ಶುದ್ಧ ಮಾತ್ರ ವಿಷಯಕ. ಧರ್ಮಿಜ್ಞಾನ ಅಜ್ಞಾನಕಲ್ಪಿತ ಪ್ರಕಾರವನ್ನೂ ಕೂಡ ವಿಷಯೀಕರಿಸುತ್ತದೆ, ಸಮಾನ ವಿಷಯಕತ್ವವಿಲ್ಲ' ಎಂದರೆ, ಅದೂ ಸರಿಯಲ್ಲ. ವಿಶೇಷ್ಯಾಂಶದಲ್ಲಿ ಜ್ಞಾನ ಅಜ್ಞಾನಗಳು ಸಮಾನ ವಿಷಯಕವೇ ಆಗಿವೆ. 'ಸಮಾನ ವಿಷಯಕವಲ್ಲ' ಎನ್ನುವಂತಿಲ್ಲ.

ವಸ್ತುತಃ ಅಜ್ಞಾನವು ಶುದ್ಧ ಚೈತನ್ಯ ಮಾತ್ರ ವಿಷಯಕವಲ್ಲ. 'ಅಹಮಜ್ಞಃ' ಎಂದು ಅಜ್ಞಾನವು ಜೀವಾಶ್ರಿತ ವಿಶಿಷ್ಟ ಜೀವ ವಿಷಯಕವಾಗಿಯೇ ಅನುಭವಸಿದ್ಧವಾಗಿದೆ.



सत्प्रतिपक्षत्वं च । सत्यादिवाक्यतात्पर्यविषयः संसृष्टरूपः संसर्गरूपो वा प्रमाणवाक्यतात्पर्यविषयत्वात् संमतवत् ।

सत्यादिवाक्यं स्वतात्पर्यविषयज्ञानाबाध्यसंसर्गपरं स्वतात्पर्यविषयज्ञानाबाध्यस्वकरणकप्रमितिविषयपदार्थनिरूप्यसंसर्गपरं वा प्रमाणवाक्यत्वात् ज्योतिष्टोमादिवाक्यवत् ।

विषं भुंक्ष्वेत्यादौ बाच्यार्थसंसर्गपरत्वाभावेऽप्युक्तसाध्यसद्भावान्न व्यभिचारः ।

खं छिद्रं, कोकिलः पिक इत्यादावपि अनतिभिन्नार्थत्वे सामानाधिकरण्यायोगेन छिद्रकोकिलादीनां खपिकादिशब्दवाच्यत्व-संसर्गपरत्वात् न तत्रापि व्यभिचारः ।

यद्वा वेदांतजन्या प्रमा सप्रकारिका विचारजन्यज्ञानत्वात् संशयविरोधित्वाच्च कर्मकांडजन्यज्ञानवत् । वेदांतजन्या प्रमा ब्रह्मनिष्ठप्रकारविषया, ब्रह्मधर्मिकसंशयविरोधिज्ञानत्वात् ब्रह्मविचार-जन्यज्ञानत्वाच्च यदेवं तदेवं यथा कर्मकांडविचारजन्यनिश्चय इत्यादिना प्रतिरोधात् ।

**प्रमाणवाक्येति** ।। अबाधितवाक्येत्यर्थः । एतच्च ''वह्निना सिंचेत्'' इति वाक्ये व्यभिचारवारणाय । प्रमाणवाक्यविषये पदार्थे द्वितीयसाध्याभावेन व्यभिचारवारणाय तात्पर्यविषयेति ।। **उक्तसाध्येति** ।। स्वकरणकप्रमितिविषय-पदार्थत्वस्य शक्यलाक्षणिकसाधारणत्वादिति भावः ।। **अनतिभिन्नार्थत्व इति** ।। अत्यंताभिन्नार्थत्व इत्यर्थः।। **वेदांतजन्यप्रमेति** ।। ज्ञेयब्रह्मपरवेदांतजन्यप्रमेत्यर्थः ।।



**'ಸತ್ಪ್ರತಿಪಕ್ಷತ್ವಂ ಚ । ಸತ್ಯಾದಿವಾಕ್ಯತಾತ್ಪರ್ಯ ವಿಷಯಃ ಸಂಸೃಷ್ಟರೂಪಃ । ಸಂಸರ್ಗರೂಪೋ ವಾ । ಪ್ರಮಾಣವಾಕ್ಯ ತಾತ್ಪರ್ಯವಿಷಯತ್ವಾತ್ ಸಮ್ಮತವತ್'**

'ಸತ್ಯಾದಿವಾಕ್ಯಂ ಸಂಸರ್ಗಾಗೋಚರಪ್ರಮಾಜನಕಂ । ಲಕ್ಷಣವಾಕ್ಯತ್ವಾತ್' ಎಂಬ ಅಖಂಡಾರ್ಥ ಸಾಧಕ ಅನುಮಾನಕ್ಕೆ ಪ್ರತಿಪಕ್ಷಾನುಮಾನವಿದು—'ಸತ್ಯಾದಿವಾಕ್ಯತಾತ್ಪರ್ಯ ವಿಷಯವು ಸಂಸೃಷ್ಟರೂಪವಾಗಿದೆ. ಅಥವಾ ಸಂಸರ್ಗರೂಪವಾಗಿದೆ, ಪ್ರಮಾಣ ವಾಕ್ಯ ತಾತ್ಪರ್ಯವಿಷಯವಾದ್ದರಿಂದ, ಉಭಯಸಮ್ಮತವಾದ ಅಗ್ನಿಹೋತ್ರವಿಧಾಯಕ ವಾಕ್ಯದಂತೆ' ಎಂದು. ಇಲ್ಲಿ ಪ್ರಮಾಣವಾಕ್ಯವೆಂದರೆ ಅಬಾಧಿತವಾಕ್ಯ. ನೀರೆರೆಯುವಂತೆ ಬೆಂಕಿಯನ್ನು ಎರೆಯಲಾಗದು. ಅದು ಬಾಧಿತ. ಬೆಂಕಿಗೂ ಎರೆಯುವ ಕ್ರಿಯೆಗೂ ಸಂಸರ್ಗವಿಲ್ಲ. ಅವು ಸಂಸೃಷ್ಟವಲ್ಲ. ವಾಕ್ಯತಾತ್ಪರ್ಯ ವಿಷಯತ್ವ ಅಲ್ಲಿ ಬರುತ್ತದೆ. ವ್ಯಭಿಚಾರ. ಅದರ ಪರಿಹಾರಕ್ಕಾಗಿ 'ಪ್ರಮಾಣವಾಕ್ಯ ತಾತ್ಪರ್ಯವಿಷಯತ್ವ'ವನ್ನು ಹೇತುಮಾಡಿದ್ದಾರೆ. ಆದರಿಂದ ವ್ಯಭಿಚಾರವಿಲ್ಲ.

ಸತ್ಯಾದಿವಾಕ್ಯದ ತಾತ್ಪರ್ಯವಿಷಯವು ಸಂಸೃಷ್ಟರೂಪವಾಗಿದೆ ಎಂದು ಸಾಧನೆ ಮಾಡಿದಾಗ

ಸತ್ಯಾದಿವಾಕ್ಯಕ್ಕೆ ಸಂಸರ್ಗಾಗೋಚರ ಪ್ರಮಾಜನಕತ್ವವಿಲ್ಲ, ಸಂಸೃಷ್ಟಪದಾರ್ಥದಲ್ಲಿಯೇ ತಾತ್ಪರ್ಯ ವಿರುವುದರಿಂದ ಸಂಸರ್ಗಗೋಚರಪ್ರಮಾವನ್ನೇ ಹುಟ್ಟಿಸುತ್ತದೆ ಎಂದಂತಾಗುವುದರಿಂದ ಪ್ರತಿಪಕ್ಷಾನುಮಾನವೆನಿಸುತ್ತದೆ. ಸತ್ಯಾದಿವಾಕ್ಯದ ತಾತ್ಪರ್ಯವಿಷಯವು ಸಂಸರ್ಗರೂಪವೆಂದು ಸಾಧನೆ ಮಾಡಿದರೆ ಸಂಸರ್ಗಗೋಚರ ಪ್ರಮಾವನ್ನೇ ಸತ್ಯಾದಿವಾಕ್ಯವು ಹುಟ್ಟಿಸುತ್ತದೆ ಎಂದಂತಾಗುವುದರಿಂದ ಪ್ರತಿಪಕ್ಷಾನುಮಾನವಾಗುವುದು.

ಯದ್ಯಪಿ ಸಿದ್ಧಿಕಾರನು ಆಕ್ಷೇಪ ಮಾಡುತ್ತಾನೆ—'ಸಂಸೃಷ್ಟರೂಪದಲ್ಲಿ ಸಂಸರ್ಗರೂಪತ್ವ ವೆಂಬ ಸಾಧ್ಯವಿಲ್ಲ, ಸಂಸರ್ಗರೂಪದಲ್ಲಿ ಸಂಸೃಷ್ಟರೂಪತ್ವವೆಂಬ ಸಾಧ್ಯವಿಲ್ಲ, ಎರಡರಲ್ಲಿಯೂ ಪ್ರಮಾಣವಾಕ್ಯತಾತ್ಪರ್ಯವಿಷಯತ್ವರೂಪ ಹೇತು ಬರುವುದರಿಂದ ಎರಡರಲ್ಲಿಯೂ ವ್ಯಭಿಚಾರ' ಎಂದು. ಇದು ಸರಿಯಲ್ಲ.

ಸಂಸರ್ಗರೂಪತ್ವವೆಂದರೆ ಸಂಸರ್ಗತ್ವವಲ್ಲ. 'ರೂಪ' ಅಂದರೆ 'ರೂಪಯತಿ' ನಿರೂಪಕ ಎಂದರ್ಥ. ಸಂಸರ್ಗ ನಿರೂಪಕವು ಸಂಸೃಷ್ಟವೇ ಆಗಿರುತ್ತದೆ. ಸಂಸೃಷ್ಟರೂಪತ್ವವೆಂಬ ಸಾಧ್ಯ ಅದರಲ್ಲಿದೆ.

ಅಥವಾ ಸಂಸರ್ಗವೆಂದರೆ ಸಂಯೋಗಾದಿ ಸಂಬಂಧಗಳು. ಅವು ಬೇರೆ ಸಂಬಂಧಗಳಿಂದ ಸಂಸೃಷ್ಟವೇ ಆಗಿರುತ್ತವೆ. ಹೀಗಾಗಿ ಅವುಗಳಲ್ಲಿ ಸಂಸೃಷ್ಟರೂಪತ್ವರೂಪವಾದ ಸಾಧ್ಯವಿದೆ. ಸಂಸೃಷ್ಟದಲ್ಲಿಯೂ ಸಂಸರ್ಗನಿರೂಪಕತ್ವರೂಪ ಸಾಧ್ಯವಿದೆ. ವ್ಯಭಿಚಾರವಿಲ್ಲ.

**'ಸತ್ಯಾದಿವಾಕ್ಯಂ ಸ್ವತಾತ್ಪರ್ಯವಿಷಯಜ್ಞಾನಾಬಾಧ್ಯ ಸಂಸರ್ಗಪರಂ, ಸ್ವತಾತ್ಪರ್ಯ ವಿಷಯಜ್ಞಾನಾಬಾಧ್ಯ ಸ್ವಕರಣಕ ಪ್ರಮಿತಿ ವಿಷಯ ಪದಾರ್ಥ ನಿರೂಪ್ಯ ಸಂಸರ್ಗಪರಂ ವಾ। ಪ್ರಮಾಣವಾಕ್ಯತ್ವಾತ್ ಜ್ಯೋತಿಷ್ಟೋಮಾದಿ ವಾಕ್ಯವತ್।'**

ಅದ್ವೈತಿಯು 'ಯಃ ಸರ್ವಜ್ಞಃ ಸರ್ವವಿತ್' ಇತ್ಯಾದಿ ವಾಕ್ಯಬೋಧ್ಯವಾದ ಸರ್ವಜ್ಞತ್ವಾದಿ ಧರ್ಮಸಂಸರ್ಗವನ್ನು ವಾಕ್ಯತಾತ್ಪರ್ಯ ವಿಷಯ ಶುದ್ಧಚೈತನ್ಯಜ್ಞಾನದಿಂದ ಬಾಧ್ಯವೆಂದು, ಮಿಥ್ಯೆ ಎಂದು ಹೇಳುತ್ತಾನೆ. ಅದಕ್ಕೆ 'ವಾಕ್ಯತಾತ್ಪರ್ಯವಿಷಯಜ್ಞಾನಾಬಾಧ್ಯಸಂಸರ್ಗವನ್ನೇ ಸತ್ಯಾದಿ ವೇದವಾಕ್ಯ ಹೇಳುತ್ತದೆ ಪ್ರಮಾಣ ವಾಕ್ಯವಾದ್ದರಿಂದ' ಎಂದು ಪ್ರತಿಪಕ್ಷಾನುಮಾನ ಮಾಡುತ್ತಾರೆ.

ಈ ಅನುಮಾನದಿಂದ ಅಬಾಧ್ಯಸಂಸರ್ಗಸ್ವರೂಪ ಮಾತ್ರ ಸಿದ್ಧವಾದರೆ ನಿಷ್ಪ್ರಕಾರಜ್ಞಾನದಲ್ಲಿಯೂ ಸ್ವರೂಪಮಾತ್ರ ಸಿದ್ಧವಾಗಬಹುದಾದ್ದರಿಂದ ಉದ್ದಿಷ್ಟವಾದ ಸಪ್ರಕಾರಜ್ಞಾನಸಿದ್ಧಿಗಾಗಿ ಇನ್ನೊಂದು ಅನುಮಾನ ಪ್ರಯೋಗ ಮಾಡುತ್ತಾರೆ. ಅದರಲ್ಲಿ ಸಂಸರ್ಗಕ್ಕೆ 'ಸ್ವತಾತ್ಪರ್ಯ ವಿಷಯ ಜ್ಞಾನಾಬಾಧ್ಯತ್ವ' ವಿಶೇಷಣದೊಂದಿಗೆ 'ಸ್ವಕರಣಕ ಪ್ರಮಿತಿವಿಷಯ ಪದಾರ್ಥ ನಿರೂಪ್ಯತ್ವ'ವನ್ನೂ ವಿಶೇಷಣವಾಗಿ ಕೊಡುತ್ತಾರೆ. ಅದರಿಂದ ಪದಾರ್ಥ ನಿರೂಪ್ಯತ್ವೇನ ಪ್ರಕಾರೇಣ ಸಂಸರ್ಗವು ಅನುಮಾನದಿಂದ ಸಿದ್ಧವಾಗುತ್ತದೆ.

ಸತ್ಯಾದಿ ವಾಕ್ಯವು ಅಖಂಡಾರ್ಥಪರವಲ್ಲ, ಸಂಸರ್ಗಪರ. ಸಂಸರ್ಗ ಸ್ವರೂಪ ಮಾತ್ರಪರವೂ ಅಲ್ಲ, ಸ್ವಕರಣಕಪ್ರಮಿತಿ ವಿಷಯಪದಾರ್ಥನಿರೂಪ್ಯತ್ವೇನ ಸಂಸರ್ಗವನ್ನು ಅದು ಹೇಳಬೇಕು. ಶಕ್ತಿಯಿಂದಾಗಲಿ ಲಕ್ಷಣೆಯಿಂದಾಗಲಿ ಅನುಮಾನರೂಪದಿಂದಾಗಲಿ ವಾಕ್ಯದಿಂದ ಬರುವ ಸಂಸರ್ಗಬೋಧವು ಸ್ವಕರಣಕ ಪ್ರಮಿತಿ.

**ದೃಷ್ಟಾಂತ :** 'ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ' 'ಜ್ಯೋತಿಷ್ಟೋಮಯಾಗದಿಂದ ಸ್ವರ್ಗಸುಖ ಪಡೆಯಬೇಕು' ಇಲ್ಲಿ ಯಾಗ ಸ್ವರ್ಗಗಳ ಹೇತು–ಹೇತುಮದ್ಭಾವ ರೂಪ ಸಂಸರ್ಗವು ಸತ್ಯವಾಗಿದೆ. ಅದ್ವೈತಿಗಳು ಹೇಳುವಂತೆ ಸತ್ಯಾದಿವಾಕ್ಯತಾತ್ಪರ್ಯವಿಷಯ ಅಖಂಡ ಚೈತನ್ಯಜ್ಞಾನದಿಂದ ಸತ್ಯತ್ವಾದಿ ಧರ್ಮಸಂಸರ್ಗವು ಬಾಧ್ಯವಾಗಿ ಮಿಥ್ಯೆ ಎನಿಸುವಂತೆ, ಜ್ಯೋತಿಷ್ಟೋಮ ವಾಕ್ಯತಾತ್ಪರ್ಯವಿಷಯಜ್ಞಾನದಿಂದ ಯಾಗ ಸ್ವರ್ಗ ಸಂಸರ್ಗವು ಬಾಧಿತವಾಗುವುದಿಲ್ಲ, ಅದು ಅಬಾಧ್ಯ. ಮತ್ತು ಜ್ಯೋತಿಷ್ಟೋಮವಾಕ್ಯಕರಣಕ ಶಾಬ್ದಬೋಧರೂಪಪ್ರಮಿತಿ ವಿಷಯ ಪದಾರ್ಥಗಳಾದ ಯಾಗಸ್ವರ್ಗಗಳಿಂದ ನಿರೂಪ್ಯವಾಗಿದೆ. ಆದರಿಂದ ಸಂಸರ್ಗಪರತ್ವರೂಪ ಸಾಧ್ಯವು ಜ್ಯೋತಿಷ್ಟೋಮವಾಕ್ಯದಲ್ಲಿದೆ, ಮತ್ತು ಪ್ರಮಾಣವಾಕ್ಯತ್ವರೂಪಹೇತುವೂ ಇದೆ. ಹಾಗೇ ಸತ್ಯಾದಿವಾಕ್ಯವೂ ಕೂಡ ಬ್ರಹ್ಮನಲ್ಲಿ ಸತ್ಯತ್ವಾದಿ ಧರ್ಮಸಂಸರ್ಗವನ್ನು ಬೋಧಿಸುತ್ತದೆ ಹೊರತು ಅಖಂಡವಸ್ತುವನ್ನಲ್ಲ. ಈ ಪ್ರತಿಪಕ್ಷಾನುಮಾನಗಳಿಗೆ ವ್ಯಭಿಚಾರವಿಲ್ಲ—

**'ವಿಷಂ ಭುಂಕ್ಷ್ವೇತ್ಯಾದೌ ವಾಚ್ಯಾರ್ಥಸಂಸರ್ಗ ಪರತ್ವಾಭಾವೇಽಪಿ ಉಕ್ತಸಾಧ್ಯ ಸದ್ಭಾವಾನ್ನ ವ್ಯಭಿಚಾರಃ।'**

'ವಿಷಂ ಭುಂಕ್ಷ್ವ' 'ವಿಷವನ್ನು ತಿನ್ನು' ಎಂದು ತಂದೆ ತನ್ನ ಪ್ರೀತಿಯ ಮಗನಿಗೆ ಹೇಳುವ ಮಾತಿಗೇ ವಿಷದಂತೆ ಅನರ್ಥಕಾರಿಯಾದ ಶತ್ರುವಿನ ಮನೆ ಅನ್ನವನ್ನು ಉಣಬೇಡ' ಎಂದರ್ಥ. ಇದು ಪ್ರಮಾಣ ವಾಕ್ಯ. ಈ ವಾಕ್ಯದಿಂದ ಶಕ್ತಿಯಿಂದಾಗಲಿ ಲಕ್ಷಣೆಯಿಂದಾಗಲಿ ಈ ಅರ್ಥ ಸಿಗುವುದಿಲ್ಲ, ತಂದೆ ಮಗನಿಗೆ ಅವನ ಹಿತಕ್ಕಾಗಿ ಹೇಳಿದ ಮಾತಾದ್ದರಿಂದ ಅದಕ್ಕೆ ಇದು ಅರ್ಥ ಎಂದು ಅನುಮಾನದಿಂದ ಸಿದ್ಧವಾಗುತ್ತದೆ. ಈ ವಾಕ್ಯವೆಂಬ ಅನುಮಾನವು ಕರಣ. ಆದರಿಂದ ಸ್ವಕರಣಕಪ್ರಮಿತಿ ವಿಷಯ ಪದಾರ್ಥಗಳು ಶತ್ರುಗೃಹಾನ್ನ ಭೋಜನ ಮತ್ತು ಅದರ ಅಕರ್ತವ್ಯತ್ವ ಇವುಗಳ ಸಂಸರ್ಗದಲ್ಲಿ ಈ ವಾಕ್ಯಕ್ಕೆ ತಾತ್ಪರ್ಯವಿದೆ. ವಾಚ್ಯಾರ್ಥ ಸಂಸರ್ಗಪರವಾಗದಿದ್ದರೂ ಈ ಸಂಸರ್ಗಪರವಾಗಿದೆ ವಾಕ್ಯ. ಆದರಿಂದ ವ್ಯಭಿಚಾರವಿಲ್ಲ.

ಶಬ್ದಕೋಶಗಳಲ್ಲಿ– 'ಖಂ ಛಿದ್ರಂ' 'ಕೋಕಿಲಃ ಪಿಕಃ' 'ಆಕಾಶವು ಛಿದ್ರ, ಕೋಗಿಲೆಯು ಪಿಕ' ಎಂದರೆ ಮೇಲುನೋಟಕ್ಕೆ 'ಗೇಟು ಬಾಗಿಲು' ಎಂಬಂತೆ ಅರ್ಥ ಒಂದೇ ಆದ್ದರಿಂದ ಒಂದು ಮಾತಿನಲ್ಲಿ ಎರಡು ಶಬ್ದಗಳು ಜೊತೆಗೆ ಸೇರದಿರುವುದರಿಂದ ಅರ್ಥ ಪ್ರತೀತಿ ಉಂಟಾಗುವುದಿಲ್ಲ.

ಬಳಿಕ 'ಆಕಾಶಕ್ಕೇ ಇನ್ನೊಂದು ಹೆಸರು 'ಛಿದ್ರ' ಕೋಗಿಲೆಗೇ ಇನ್ನೊಂದು ಹೆಸರು 'ಪಿಕ' ಎಂದು ಲಕ್ಷಣಾವೃತ್ತಿಯಿಂದ ಬೋಧ ಉಂಟಾಗುತ್ತದೆ. ಆಕಾಶದಲ್ಲಿ ಛಿದ್ರಶಬ್ದವಾಚ್ಯತ್ವ ಮತ್ತು ಕೋಗಿಲೆಯಲ್ಲಿ ಪಿಕಶಬ್ದವಾಚ್ಯತ್ವಗಳ ಸಂಸರ್ಗವನ್ನು ಹೇಳುವಲ್ಲಿ ಈ ಪ್ರಮಾಣ ವಾಕ್ಯಗಳಿಗೆ ತಾತ್ಪರ್ಯವಿದೆ. ಆದರಿಂದ ವ್ಯಭಿಚಾರವಿಲ್ಲ. ಎನ್ನುತ್ತಾರೆ—

**'ಖಂ ಛಿದ್ರಂ' 'ಕೋಕಿಲಃ ಪಿಕಃ' ಇತ್ಯಾದಾವಪಿ ಅನತಿಭಿನ್ನಾರ್ಥತ್ವೇ ಸಾಮಾನಾಧಿಕರಣ್ಯಾಯೋಗೇನ ಛಿದ್ರಕೋಕಿಲಾದೀನಾಂ ಖ ಪಿಕಾದಿ ಶಬ್ದವಾಚ್ಯತ್ವ ಸಂಸರ್ಗಪರತ್ವಾತ್ ನ ತತ್ರಾಪಿ ವ್ಯಭಿಚಾರಃ।'**

'ಅನತಿ ಭಿನ್ನಾರ್ಥತ್ವ'ವೆಂದರೆ ಅತ್ಯಂತಾಭಿನ್ನಾರ್ಥತ್ವ. 'ಘಟೋ ಘಟಃ' ಎಂಬಂತೆ ಅತ್ಯಂತಾಭೇದಸ್ಥಳದಲ್ಲಿ ಸಾಮಾನಾಧಿಕರಣ್ಯವಿಲ್ಲ, ಅಭೇದಾನ್ವಯ ಕೂಡುವುದಿಲ್ಲ. 'ನೀಲಂ ಉತ್ಪಲಂ' ಎಂಬಂತೆ ತಾದಾತ್ಮ್ಯವಿರುವಲ್ಲಿ ಅಂದರೆ ಭೇದಾಭೇದವಿರುವಲ್ಲಿ ಮಾತ್ರ ಅಭೇದಾನ್ವಯ. ಆದರಿಂದ ಪ್ರಕೃತ 'ಖಂ-ಛಿದ್ರಂ' ಎಂಬಲ್ಲಿ ಅತ್ಯಂತಾಭೇದಾಭಿಪ್ರಾಯವಿಲ್ಲ. 'ಆಕಾಶವು-ಛಿದ್ರಶಬ್ದ ವಾಚ್ಯ' ಎಂದು ತಾದಾತ್ಮ್ಯಬಿಪ್ರಾಯದಿಂದ ಈ ವಾಕ್ಯದಿಂದ ಶಾಬ್ದಬೋಧವು ಉಂಟಾಗುತ್ತದೆ. ವಾಕ್ಯಕರಣಕ ಪ್ರಮಿತಿವಿಷಯಪದಾರ್ಥ ನಿರೂಪ್ಯ ಸಂಸರ್ಗಪರತ್ವ ಯುಕ್ತವಾಗುತ್ತದೆ.

**'ಯದ್ವಾ ವೇದಾಂತಜನ್ಯಾ ಪ್ರಮಾ ಸಪ್ರಕಾರಿಕಾ, ವಿಚಾರಜನ್ಯ ಜ್ಞಾನತ್ವಾತ್ ಸಂಶಯ ವಿರೋಧಿತ್ವಾಚ್ಚ ಕರ್ಮಕಾಂಡ ಜನ್ಯ ಜ್ಞಾನವತ್।**

**ವೇದಾಂತಜನ್ಯಾ ಪ್ರಮಾ ಬ್ರಹ್ಮನಿಷ್ಠಪ್ರಕಾರವಿಷಯಾ, ಬ್ರಹ್ಮಧರ್ಮಿಕ ಸಂಶಯವಿರೋಧಿಜ್ಞಾನತ್ವಾತ್, ಬ್ರಹ್ಮವಿಚಾರಜನ್ಯ ಜ್ಞಾನತ್ವಾಚ್ಚ, ಯದೇವಂ ತದೇವಂ ಯಥಾ ಕರ್ಮಕಾಂಡ ವಿಚಾರಜನ್ಯನಿಶ್ಚಯಃ ಇತ್ಯಾದಿನಾ ಪ್ರತಿರೋಧಾತ್ ।'**

ಸತ್ಯಾದಿ ವೇದಾಂತ ವಾಕ್ಯಜನ್ಯ ಪ್ರಮಿತಿಯು ಅಖಂಡಾರ್ಥಪರವಾಗಲು ಸಾಧ್ಯವಿಲ್ಲ, ನಿಷ್ಪ್ರಕಾರಕವಾಗಲು ಸಾಧ್ಯವಿಲ್ಲ, ಸಪ್ರಕಾರಕವೇ ಆಗಬೇಕು. ಅಸಂದಿಗ್ಧ ಪ್ರಕಾರಕವೇ ಆಗಬೇಕು. ಏಕೆಂದರೆ ಅದು ವಿಚಾರಜನ್ಯಜ್ಞಾನವಾಗಿರುತ್ತದೆ.

ಯದ್ಯಪಿ ನಿಷ್ಪ್ರಕಾರಕಜ್ಞಾನವನ್ನು ಒಪ್ಪದಿರುವ ಸಿದ್ಧಾಂತಪಕ್ಷದಲ್ಲಿ ಎಲ್ಲ ಜ್ಞಾನವೂ ಸಪ್ರಕಾರವೆ. ಸಪ್ರಕಾರತ್ವಕ್ಕೆ ಜ್ಞಾನತ್ವವೆ ಪ್ರಯೋಜಕ ಸಾಕು. ವಿಚಾರಜನ್ಯತ್ವ ವಿಶೇಷಣವು ಅಪ್ರಯೋಜಕವೆನಿಸಬಹುದು. ಆದರೆ ಅಸಂದಿಗ್ಧ ಪ್ರಕಾರಕತ್ವಕ್ಕೆ ವಿಚಾರಜನ್ಯಜ್ಞಾನತ್ವವೆ ಪ್ರಯೋಜಕ.

ಇನ್ನೊಂದು ಹೇತು, 'ಸಂಶಯವಿರೋಧಿತ್ವ', ಅಂದರೆ, ಸಂಶಯವಿರೋಧಿಜ್ಞಾನತ್ವ. ಅಸಂದಿಗ್ಧಪ್ರಕಾರತ್ವವು ಜ್ಞಾನದಲ್ಲಿ ಬರಲು ಕೇವಲ ಜ್ಞಾನತ್ವ ಸಾಲದು, ಸಂಶಯವಿರೋಧಿಜ್ಞಾನತ್ವ ಬೇಕು.

ಮತ್ತು ಜ್ಞಾನ ಸಪ್ರಕಾರಕವಲ್ಲದಿದ್ದರೆ ವಿಚಾರಜನ್ಯವಾಗಿರಲಾರದು ಎಂದು ವಿಪಕ್ಷೇ ಬಾಧಕ ಸೂಚನೆಗಾಗಿಯೂ ವಿಚಾರಜನ್ಯತ್ವ ವಿಶೇಷಣಸಾರ್ಥಕ. ಜ್ಞಾನ ನಿಷ್ಪ್ರಕಾರಕವಾದರೆ ಅದು ಸಂಶಯ ವಿರೋಧಿಯಾಗದೆಂದೂ ವಿಪಕ್ಷೇ ಬಾಧಕ ಸೂಚನೆಗಾಗಿ ಸಂಶಯ ವಿರೋಧಿತ್ವ ವಿಶೇಷಣವೂ ಸಾರ್ಥಕವೆ.

ಯದ್ಯಪಿ ಅಸಂದಿಗ್ಧ ಪ್ರಕಾರತ್ವಕ್ಕೆ ಸಂದೇಹಾಭಾವವೂ ಕಾರಣವಾಗಬಹುದು. ಆದರಿಂದ ಸಂದೇಹಾಭಾವದಲ್ಲಿ ಸಂಶಯವಿರೋಧಿತ್ವವಿದೆ, ಸಪ್ರಕಾರತ್ವವಿಲ್ಲವೆಂದು ವ್ಯಭಿಚಾರಕ್ಕೆ ಆಸ್ಪದವಿದೆ. ಅದಕ್ಕೇ ಸಂದೇಹವಿರೋಧಿಜ್ಞಾನತ್ವವನ್ನು ಹೇತುಮಾಡಿದ್ದಾರೆ. ಆದರಿಂದ ವ್ಯಭಿಚಾರವಿಲ್ಲ.

ಕರ್ಮಕಾಂಡಗತ ಜ್ಯೋತಿಷ್ಟೋಮಾದಿ ವಾಕ್ಯಜನ್ಯ ಪ್ರಮಿತಿಯು ಅಸಂದಿಗ್ಧಪ್ರಕಾರಕ ವಾಗಿದೆ. ಏಕೆಂದರೆ ಅದು ಪೂರ್ವಮೀಮಾಂಸಾಶಾಸ್ತ್ರೋಕ್ತವಿಚಾರ ಜನ್ಯಜ್ಞಾನವಾಗಿದೆ. ಮತ್ತು ಸಂಶಯವಿರೋಧಿ ಜ್ಞಾನವೂ ಆಗಿದೆ. ವೇದಾಂತಜನ್ಯ ಪ್ರಮಿತಿಯಲ್ಲಿ ಬ್ರಹ್ಮನಿಷ್ಠ ಸತ್ಯತ್ವಾದಿ ಅಸಂದಿಗ್ಧ ಪ್ರಕಾರ ವಿಷಯಕತ್ವವಿರಲೇಬೇಕು. ಏಕೆಂದರೆ ಅದು ಬ್ರಹ್ಮಧರ್ಮಿಕ ಸಂಶಯ ವಿರೋಧಿ ಜ್ಞಾನವಾಗಿದೆ, ಬ್ರಹ್ಮವಿಚಾರಜನ್ಯಜ್ಞಾನವೂ ಆಗಿದೆ.

ಇಲ್ಲಿ ಸಾಮಾನ್ಯವ್ಯಾಪ್ತಿ ಇಟ್ಟುಕೊಳ್ಳಬೇಕು. ಯಾವುದು ಯದ್ಧರ್ಮಿಕ ಸಂಶಯವಿರೋಧಿ ಜ್ಞಾನವಾಗಿರುವುದೋ ಅದು ತನ್ನಿಷ್ಠ ಅಸಂದಿಗ್ಧ ಪ್ರಕಾರ ವಿಷಯಕವಾಗಿದೆ, ಯಾವುದು ಯದ್ವಿಚಾರಜನ್ಯಜ್ಞಾನವಾಗಿರುವುದೋ ಅದು ತನ್ನಿಷ್ಠ ಅಸಂದಿಗ್ಧಪ್ರಕಾರ ವಿಷಯಕವಾಗಿರುತ್ತದೆ. ಜ್ಯೋತಿಷ್ಟೋಮಯಾಗಾದಿಧರ್ಮ ಧರ್ಮಿಕ ಸಂಶಯವಿರೋಧಿಜ್ಞಾನವೂ ಧರ್ಮವಿಚಾರ ಜನ್ಯಜ್ಞಾನವೂ ಎರಡೂ ಧರ್ಮನಿಷ್ಠ ಅಸಂದಿಗ್ಧಪ್ರಕಾರ ವಿಷಯಕವಾಗಿದೆ. ಈ ದೃಷ್ಟಾಂತಾನುಸಾರ ಬ್ರಹ್ಮಧರ್ಮಿಕ ಸಂಶಯವಿರೋಧಿಜ್ಞಾನವೂ ಬ್ರಹ್ಮವಿಚಾರಜನ್ಯಜ್ಞಾನವೂ ಬ್ರಹ್ಮನಿಷ್ಠ ಅಸಂದಿಗ್ಧ ಪ್ರಕಾರ ವಿಷಯಕವೇ ಆಗಿದೆ.

ಅಖಂಡಾರ್ಥಪರತ್ವಾನುಮಾನಗಳಿಗೆ ಈ ಅನುಮಾನಗಳು ಪ್ರತಿಪಕ್ಷವಾಗಿವೆ.



**दृष्टांतस्य साध्यवैकल्यं च ।**

**तथाहि—प्रकृष्टादिवाक्यस्याखंडार्थत्वं न तावन्मुख्यवृत्त्या । लक्षणापि न तावत् गंगायां घोष इत्यादाविवान्वयानुपपत्त्या । चंद्रादौ प्रकृष्टे गुणरूपेण द्रव्यरूपेण वा प्रकाशेन संबंधस्य सत्वात्, चंद्रे प्रकृष्टप्रकाशादेः सत्त्वात् ।**

**नापि यष्टीः प्रवेशयेत्यादाविव तात्पर्यानुपपत्त्या, कश्चंद्र इति**

ಬಳಿಕ 'ಆಕಾಶಕ್ಕೇ ಇನ್ನೊಂದು ಹೆಸರು 'ಛಿದ್ರ' ಕೋಗಿಲೆಗೇ ಇನ್ನೊಂದು ಹೆಸರು 'ಪಿಕ' ಎಂದು ಲಕ್ಷಣಾವೃತ್ತಿಯಿಂದ ಬೋಧ ಉಂಟಾಗುತ್ತದೆ. ಆಕಾಶದಲ್ಲಿ ಛಿದ್ರಶಬ್ದವಾಚ್ಯತ್ವ ಮತ್ತು ಕೋಗಿಲೆಯಲ್ಲಿ ಪಿಕಶಬ್ದವಾಚ್ಯತ್ವಗಳ ಸಂಸರ್ಗವನ್ನು ಹೇಳುವಲ್ಲಿ ಈ ಪ್ರಮಾಣ ವಾಕ್ಯಗಳಿಗೆ ತಾತ್ಪರ್ಯವಿದೆ. ಆದರಿಂದ ವ್ಯಭಿಚಾರವಿಲ್ಲ. ಎನ್ನುತ್ತಾರೆ—

**'ಖಂ ಛಿದ್ರಂ' 'ಕೋಕಿಲಃ ಪಿಕಃ' ಇತ್ಯಾದಾವಪಿ ಅನತಿಭಿನ್ನಾರ್ಥತ್ವೇ ಸಾಮಾನಾಧಿಕರಣ್ಯಾಯೋಗೇನ ಛಿದ್ರಕೋಕಿಲಾದೀನಾಂ ಖ ಪಿಕಾದಿ ಶಬ್ದವಾಚ್ಯತ್ವ ಸಂಸರ್ಗಪರತ್ವಾತ್ ನ ತತ್ರಾಪಿ ವ್ಯಭಿಚಾರಃ।'**

'ಅನತಿ ಭಿನ್ನಾರ್ಥತ್ವ'ವೆಂದರೆ ಅತ್ಯಂತಾಭಿನ್ನಾರ್ಥತ್ವ. 'ಘಟೋ ಘಟಃ' ಎಂಬಂತೆ ಅತ್ಯಂತಾಭೇದಸ್ಥಳದಲ್ಲಿ ಸಾಮಾನಾಧಿಕರಣ್ಯವಿಲ್ಲ, ಅಭೇದಾನ್ವಯ ಕೂಡುವುದಿಲ್ಲ. 'ನೀಲಂ ಉತ್ಪಲಂ' ಎಂಬಂತೆ ತಾದಾತ್ಮ್ಯವಿರುವಲ್ಲಿ ಅಂದರೆ ಭೇದಾಭೇದವಿರುವಲ್ಲಿ ಮಾತ್ರ ಅಭೇದಾನ್ವಯ. ಆದರಿಂದ ಪ್ರಕೃತ 'ಖಂ-ಛಿದ್ರಂ' ಎಂಬಲ್ಲಿ ಅತ್ಯಂತಾಭೇದಾಭಿಪ್ರಾಯವಿಲ್ಲ. 'ಆಕಾಶವು-ಛಿದ್ರಶಬ್ದ ವಾಚ್ಯ' ಎಂದು ತಾದಾತ್ಮ್ಯಾಬಿಪ್ರಾಯದಿಂದ ಈ ವಾಕ್ಯದಿಂದ ಶಾಬ್ದಬೋಧವು ಉಂಟಾಗುತ್ತದೆ. ವಾಕ್ಯಕರಣಕ ಪ್ರಮಿತಿವಿಷಯಪದಾರ್ಥ ನಿರೂಪ್ಯ ಸಂಸರ್ಗಪರತ್ವ ಯುಕ್ತವಾಗುತ್ತದೆ.

**'ಯದ್ವಾ ವೇದಾಂತಜನ್ಯಾ ಪ್ರಮಾ ಸಪ್ರಕಾರಿಕಾ, ವಿಚಾರಜನ್ಯ ಜ್ಞಾನತ್ವಾತ್ ಸಂಶಯ ವಿರೋಧಿತ್ವಾಚ್ಚ ಕರ್ಮಕಾಂಡ ಜನ್ಯ ಜ್ಞಾನವತ್।**

**ವೇದಾಂತಜನ್ಯಾ ಪ್ರಮಾ ಬ್ರಹ್ಮನಿಷ್ಠಪ್ರಕಾರವಿಷಯಾ, ಬ್ರಹ್ಮಧರ್ಮಿಕ ಸಂಶಯವಿರೋಧಿಜ್ಞಾನತ್ವಾತ್, ಬ್ರಹ್ಮವಿಚಾರಜನ್ಯ ಜ್ಞಾನತ್ವಾಚ್ಚ, ಯದೇವಂ ತದೇವಂ ಯಥಾ ಕರ್ಮಕಾಂಡ ವಿಚಾರಜನ್ಯನಿಶ್ಚಯಃ ಇತ್ಯಾದಿನಾ ಪ್ರತಿರೋಧಾತ್ ।'**

ಸತ್ಯಾದಿ ವೇದಾಂತ ವಾಕ್ಯಜನ್ಯ ಪ್ರಮಿತಿಯು ಅಖಂಡಾರ್ಥಪರವಾಗಲು ಸಾಧ್ಯವಿಲ್ಲ, ನಿಷ್ಪ್ರಕಾರಕವಾಗಲು ಸಾಧ್ಯವಿಲ್ಲ, ಸಪ್ರಕಾರಕವೇ ಆಗಬೇಕು. ಅಸಂದಿಗ್ಧ ಪ್ರಕಾರಕವೇ ಆಗಬೇಕು. ಏಕೆಂದರೆ ಅದು ವಿಚಾರಜನ್ಯಜ್ಞಾನವಾಗಿರುತ್ತದೆ.

ಯದ್ಯಪಿ ನಿಷ್ಪ್ರಕಾರಕಜ್ಞಾನವನ್ನು ಒಪ್ಪದಿರುವ ಸಿದ್ಧಾಂತಪಕ್ಷದಲ್ಲಿ ಎಲ್ಲ ಜ್ಞಾನವೂ ಸಪ್ರಕಾರವೆ. ಸಪ್ರಕಾರತ್ವಕ್ಕೆ ಜ್ಞಾನತ್ವವೆ ಪ್ರಯೋಜಕ ಸಾಕು. ವಿಚಾರಜನ್ಯತ್ವ ವಿಶೇಷಣವು ಅಪ್ರಯೋಜಕವೆನಿಸಬಹುದು. ಆದರೆ ಅಸಂದಿಗ್ಧ ಪ್ರಕಾರಕತ್ವಕ್ಕೆ ವಿಚಾರಜನ್ಯಜ್ಞಾನತ್ವವೆ ಪ್ರಯೋಜಕ.

ಇನ್ನೊಂದು ಹೇತು, 'ಸಂಶಯವಿರೋಧಿತ್ವ', ಅಂದರೆ, ಸಂಶಯವಿರೋಧಿಜ್ಞಾನತ್ವ. ಅಸಂದಿಗ್ಧಪ್ರಕಾರತ್ವವು ಜ್ಞಾನದಲ್ಲಿ ಬರಲು ಕೇವಲ ಜ್ಞಾನತ್ವ ಸಾಲದು, ಸಂಶಯವಿರೋಧಿಜ್ಞಾನತ್ವ ಬೇಕು.

ಮತ್ತು ಜ್ಞಾನ ಸಪ್ರಕಾರಕವಲ್ಲದಿದ್ದರೆ ವಿಚಾರಜನ್ಯವಾಗಿರಲಾರದು ಎಂದು ವಿಪಕ್ಷೇ ಬಾಧಕ ಸೂಚನೆಗಾಗಿಯೂ ವಿಚಾರಜನ್ಯತ್ವ ವಿಶೇಷಣಸಾರ್ಥಕ. ಜ್ಞಾನ ನಿಷ್ಪ್ರಕಾರಕವಾದರೆ ಅದು ಸಂಶಯ ವಿರೋಧಿಯಾಗದೆಂದೂ ವಿಪಕ್ಷೇ ಬಾಧಕ ಸೂಚನೆಗಾಗಿ ಸಂಶಯ ವಿರೋಧಿತ್ವ ವಿಶೇಷಣವೂ ಸಾರ್ಥಕವೆ.

ಯದ್ಯಪಿ ಅಸಂದಿಗ್ಧ ಪ್ರಕಾರತ್ವಕ್ಕೆ ಸಂದೇಹಾಭಾವವೂ ಕಾರಣವಾಗಬಹುದು. ಅದರಿಂದ ಸಂದೇಹಾಭಾವದಲ್ಲಿ ಸಂಶಯವಿರೋಧಿತ್ವವಿದೆ, ಸಪ್ರಕಾರತ್ವವಿಲ್ಲವೆಂದು ವ್ಯಭಿಚಾರಕ್ಕೆ ಆಸ್ಪದವಿದೆ. ಅದಕ್ಕೇ ಸಂದೇಹವಿರೋಧಿಜ್ಞಾನತ್ವವನ್ನು ಹೇತುಮಾಡಿದ್ದಾರೆ. ಅದರಿಂದ ವ್ಯಭಿಚಾರವಿಲ್ಲ.

ಕರ್ಮಕಾಂಡಗತ ಜ್ಯೋತಿಷ್ಟೋಮಾದಿ ವಾಕ್ಯಜನ್ಯ ಪ್ರಮಿತಿಯು ಅಸಂದಿಗ್ಧಪ್ರಕಾರಕ ವಾಗಿದೆ. ಏಕೆಂದರೆ ಅದು ಪೂರ್ವಮೀಮಾಂಸಾಶಾಸ್ತ್ರೋಕ್ತವಿಚಾರ ಜನ್ಯಜ್ಞಾನವಾಗಿದೆ. ಮತ್ತು ಸಂಶಯವಿರೋಧಿ ಜ್ಞಾನವೂ ಆಗಿದೆ. ವೇದಾಂತಜನ್ಯ ಪ್ರಮಿತಿಯಲ್ಲಿ ಬ್ರಹ್ಮನಿಷ್ಠ ಸತ್ಯತ್ವಾದಿ ಅಸಂದಿಗ್ಧ ಪ್ರಕಾರ ವಿಷಯಕತ್ವವಿರಲೇಬೇಕು. ಏಕೆಂದರೆ ಅದು ಬ್ರಹ್ಮಧರ್ಮಿಕ ಸಂಶಯ ವಿರೋಧಿ ಜ್ಞಾನವಾಗಿದೆ, ಬ್ರಹ್ಮವಿಚಾರಜನ್ಯಜ್ಞಾನವೂ ಆಗಿದೆ.

ಇಲ್ಲಿ ಸಾಮಾನ್ಯವ್ಯಾಪ್ತಿ ಇಟ್ಟುಕೊಳ್ಳಬೇಕು. ಯಾವುದು ಯದ್ಧರ್ಮಿಕ ಸಂಶಯವಿರೋಧಿ ಜ್ಞಾನವಾಗಿರುವುದೋ ಅದು ತನ್ನಿಷ್ಠ ಅಸಂದಿಗ್ಧ ಪ್ರಕಾರ ವಿಷಯಕವಾಗಿದೆ, ಯಾವುದು ಯದ್ವಿಚಾರಜನ್ಯಜ್ಞಾನವಾಗಿರುವುದೋ ಅದು ತನ್ನಿಷ್ಠ ಅಸಂದಿಗ್ಧಪ್ರಕಾರ ವಿಷಯಕವಾಗಿರುತ್ತದೆ. ಜ್ಯೋತಿಷ್ಟೋಮಯಾಗಾದಿಧರ್ಮ ಧರ್ಮಿಕ ಸಂಶಯವಿರೋಧಿಜ್ಞಾನವೂ ಧರ್ಮವಿಚಾರ ಜನ್ಯಜ್ಞಾನವೂ ಎರಡೂ ಧರ್ಮನಿಷ್ಠ ಅಸಂದಿಗ್ಧಪ್ರಕಾರ ವಿಷಯಕವಾಗಿದೆ. ಈ ದೃಷ್ಟಾಂತಾನುಸಾರ ಬ್ರಹ್ಮಧರ್ಮಿಕ ಸಂಶಯವಿರೋಧಿಜ್ಞಾನವೂ ಬ್ರಹ್ಮವಿಚಾರಜನ್ಯಜ್ಞಾನವೂ ಬ್ರಹ್ಮನಿಷ್ಠ ಅಸಂದಿಗ್ಧ ಪ್ರಕಾರ ವಿಷಯಕವೇ ಆಗಿದೆ.

ಅಖಂಡಾರ್ಥಪರತ್ವಾನುಮಾನಗಳಿಗೆ ಈ ಅನುಮಾನಗಳು ಪ್ರತಿಪಕ್ಷವಾಗಿವೆ.



**दृष्टांतस्य साध्यवैकल्यं च ।**

**तथाहि—प्रकृष्टादिवाक्यस्याखंडार्थत्वं न तावन्मुख्यवृत्त्या । लक्षणापि न तावत् गंगायां घोष इत्यादाविवान्वयानुपपत्त्या । चंद्रादौ प्रकृष्टे गुणरूपेण द्रव्यरूपेण वा प्रकाशेन संबंधस्य सत्वात्, चंद्रे प्रकृष्टप्रकाशादेः सत्त्वात् ।**

**नापि यष्टीः प्रवेशयेत्यादाविव तात्पर्यानुपपत्त्या, कश्चंद्र इति**

स्वरूपमात्रस्य पृष्टत्वादिति वाच्यम् । अस्ति कश्चिचंद्रशब्दस्यार्थ इत्यज्ञाने तत्र धर्मिज्ञानसाध्याया बुभुत्सायाः संदेहस्य चानुपपत्तेः ।

चंद्र शब्दस्य प्रातिपदिकत्वानिश्चयेन सुब्विभक्तिप्रयोगायोगाच्च, चंद्र इत्यनूद्य क इति प्रश्नायोगाच्च । नह्यज्ञातमनुवादार्हम् ।

असंकीर्णं चंद्रस्वरूपं न ज्ञातमिति चेत् न। चंद्रस्वरूप-द्वयाभावात् । तदेव स्वरूपमसंकीर्णत्वेन न ज्ञातमिति चेत् न, असंकीर्णत्वस्य व्यावर्तकवैशिष्ट्यव्यावृत्तिवैशिष्ट्ययोरन्यतररूपत्वेन प्रश्नस्य विशिष्टपरत्वापातात् ।

एवं च—

सामान्यतोऽपि न ज्ञातो धर्मी चंद्रो यदा तदा ।
न बुभुत्सा न संदेहो नानुवादश्च युज्यते ।।
तस्माचंद्रस्येतरस्माद्भेदको धर्म एव हि ।
पृष्टस्तस्मात्प्रकृष्टादिवाक्यं नाखंडगोचरम् ।।

**न तावन्मुख्यवृत्त्येति** ।। प्रकृष्टत्वादिविशिष्टस्यैव मुख्यत्वादिति भावः । लक्षणापि किं अन्वयानुपपत्त्या तात्पर्यानुपपत्त्या वेति विकल्प्य क्रमेण दूषयति— **लक्षणापि न तावदित्यादिना** ।। स्वरूपस्य ज्ञातत्वान्न प्रश्नविषयत्वं किंतु व्यावर्तकधर्मविषयत्वम् । अन्यथा चंद्रपदार्थाज्ञाने बुभुत्सादिकं न स्यादित्याह–**अस्ति कश्चिदित्यादिना** ।। **चंद्रशब्दस्येति** ।। धातुप्रत्ययभिन्नार्थवच्छब्दत्वरूपप्राति-पदिकत्वस्यार्थज्ञानाभावे ज्ञातुमशक्यतया तज्ज्ञानाधीन सुपप्रयोगायोगादिति भावः । उक्तमर्थं कारिकाभ्यां संगृह्णाति— **एवंचेति** ।



'ದೃಷ್ಟಾಂತಸ್ಯ ಸಾಧ್ಯವೈಕಲ್ಯಂ ಚ। ತಥಾಹಿ ಪ್ರಕೃಷ್ಟಾದಿ ವಾಕ್ಯಸ್ಯ ಅಖಂಡಾರ್ಥತ್ವಂ ನ ತಾವತ್ ಮುಖ್ಯವೃತ್ತ್ಯಾ। ಲಕ್ಷಣಾಪಿ ನ ತಾವತ್ ಗಂಗಾಯಾಂ ಘೋಷ ಇತ್ಯಾದಾವಿವ ಅನ್ವಯಾನುಪಪತ್ತ್ಯಾ। ಚಂದ್ರಾದೌ ಪ್ರಕೃಷ್ಟೇ ಗುಣರೂಪೇಣ

**ದ್ರವ್ಯರೂಪೇಣ ವಾ ಪ್ರಕಾಶೇನ ಸಂಬಂಧಸ್ಯ ಸತ್ವಾತ್, ಚಂದ್ರೇ ಪ್ರಕೃಷ್ಟ ಪ್ರಕಾಶಾದೇಃ ಸತ್ವಾತ್ ।**

'ಸತ್ಯಾದಿ ವಾಕ್ಯವು ಅಖಂಡಾರ್ಥನಿಷ್ಠ, ಲಕ್ಷಣವಾಕ್ಯವಾದ್ದರಿಂದ ಮತ್ತು ತನ್ಮಾತ್ರ ಪ್ರಶ್ನೋತ್ತರವಾದ್ದರಿಂದ ಪ್ರಕೃಷ್ಟಾದಿವಾಕ್ಯದಂತೆ' ಎಂದು ಅಖಂಡಾರ್ಥತ್ವಕ್ಕೆ ಪ್ರಕೃಷ್ಟಾದಿವಾಕ್ಯವನ್ನು ದೃಷ್ಟಾಂತವಾಗಿ ಕೊಟ್ಟಿದ್ದಾರೆ. ಆದರೆ ಈ ದೃಷ್ಟಾಂತದಲ್ಲಿ ಅಖಂಡಾರ್ಥತ್ವರೂಪ ಸಾಧ್ಯವಿಲ್ಲ, ಸಂಸರ್ಗಾಗೋಚರಪ್ರಮಾಜನಕತ್ವವೂ ಇಲ್ಲ, ಏಕಪ್ರಾತಿಪದಿಕಾರ್ಥಮಾತ್ರ ಪರ್ಯವಸಾಯಿತ್ವವೂ ಇಲ್ಲ. ಏಕೆಂದರೆ ಪ್ರಕೃಷ್ಟಾದಿವಾಕ್ಯವು ಸಂಸರ್ಗಾಗೋಚರವಾದ ನಿಷ್ಪ್ರಕಾರಕವಾದ ಜ್ಞಾನಕ್ಕೆ ಜನಕವಲ್ಲ. ಪ್ರಕೃಷ್ಟಾದಿ ಶಬ್ದಗಳು ಮುಖ್ಯವೃತ್ತಿಯಿಂದ ಪ್ರಕೃಷ್ಟಾದಿ ವಿಶಿಷ್ಟವನ್ನೇ ಹೇಳುವುವು ಎಂಬುದು ಉಭಯಸಮ್ಮತವಾದ್ದರಿಂದ ಮುಖ್ಯವೃತ್ತಿಯಿಂದ ಈ ವಾಕ್ಯವು ಕೇವಲ ಲಕ್ಷ್ಯಸ್ವರೂಪಮಾತ್ರವನ್ನು ತಿಳಿಸುವುದಿಲ್ಲ. ಲಕ್ಷಣಾವೃತ್ತಿಯಿಂದ ತಿಳಿಸುತ್ತವೆ ಎನ್ನಲು ಮುಖ್ಯಾರ್ಥಾನುಪಪತ್ತಿಯನ್ನು ತೋರಿಸಬೇಕಾಗುತ್ತದೆ. ಮುಖ್ಯಾರ್ಥಾನುಪಪತ್ತಿ ಇಲ್ಲ.

'ಪ್ರಕೃಷ್ಟಪ್ರಕಾಶಃ' ಎಂಬಲ್ಲಿ 'ಪ್ರಕಾಶ' ಎಂದರೆ 'ಪ್ರಕಾಶಿಸುವವನು' ಎಂದರ್ಥ ವಿಟ್ಟುಕೊಂಡರೆ ಪ್ರಕೃಷ್ಟನಾಗಿದ್ದಾನೆ ಪ್ರಕಾಶನಾಗಿದ್ದಾನೆ ಚಂದ್ರ ಎಂದು ಕರ್ಮಧಾರಯ ಸಮಾಸ ಮಾಡಬಹುದು. ಪ್ರಕಾಶವೆಂದರೆ ಬೆಳಕೆಂದು ಅರ್ಥವಿಟ್ಟುಕೊಂಡರೆ ಪ್ರಕೃಷ್ಟವಾದ ಬೆಳಕುಳ್ಳವ ಚಂದ್ರನೆಂದು ಬಹುವ್ರೀಹಿ ಸಮಾಸ ಮಾಡಬಹುದು. ಆಗ ಈ ಎರಡೂ ಮುಖ್ಯಾರ್ಥಗಳು ಚಂದ್ರನ ವಿಷಯದಲ್ಲಿ ಕೂಡುವುದರಿಂದ ಮುಖ್ಯಾರ್ಥಾನುಪಪತ್ತಿ ಪ್ರಯುಕ್ತ ಲಕ್ಷಣಾವೃತ್ತಿ ಎನ್ನಲು ಬರುವುದಿಲ್ಲ. 'ಪ್ರಕಾಶ' ಬೆಳಕು, ದ್ರವ್ಯವೆಂದು ಗುಣವೆಂದು ಮತಗಳಿವೆ. ಎರಡೂ ಮತಾನುಸಾರ ಬೆಳಕು ಉಳ್ಳವನು ಚಂದ್ರನೆನ್ನಲು ಅಡ್ಡಿ ಇಲ್ಲ. ಪ್ರಕಾಶ ಸಂಬಂಧ ಚಂದ್ರನಲ್ಲಿ ಇರುವುದರಿಂದ ಲಕ್ಷಣಾ ಮಾಡಬೇಕಿಲ್ಲ.

**ನಾಪಿ 'ಯಷ್ಟೀಃ ಪ್ರವೇಶಯ' ಇತ್ಯಾದಾವಿವ ತಾತ್ಪರ್ಯಾನುಪಪತ್ತ್ಯಾ, ಕಶ್ಚಂದ್ರ ಇತಿ ಸ್ವರೂಪಮಾತ್ರಸ್ಯ ಪೃಷ್ಟತ್ವಾದಿತಿ ವಾಚ್ಯಂ । 'ಅಸ್ತಿ ಕಶ್ಚಿತ್ ಚಂದ್ರಶಬ್ದಸ್ಯಾರ್ಥಃ' ಇತ್ಯ ಜ್ಞಾನೇ ತತ್ರ ಧರ್ಮಿಜ್ಞಾನ ಸಾಧ್ಯಾಯಾಃ ಬುಭುತ್ಸಾಯಾಃ ಸಂದೇಹಸ್ಯ ಚ ಅನುಪಪತ್ತೇಃ॥**

'ಯಷ್ಟೀಃ ಪ್ರವೇಶಯ' ಎಂದು ಪ್ರಯೋಗವಿದೆ. 'ದಂಡಗಳನ್ನು ಒಳಗೆ ಕಳಿಸು' ಎನ್ನುವುದು ಈ ವಾಕ್ಯದ ಮುಖ್ಯಾರ್ಥ. ಇದಕ್ಕೆ ಅನುಪಪತ್ತಿ ಇಲ್ಲ. ದಂಡಗಳನ್ನು ಒಳಗೆ ಕಳಿಸಲು ಸಾಧ್ಯವಿದೆ. ಆದರೂ ತಾತ್ಪರ್ಯದ ಅನುಪಪತ್ತಿ ಇದೆ. ಎನ್ನುತ್ತಾರೆ ಅದ್ವೈತಿಗಳು. ದಂಡಧಾರಿಗಳನ್ನು ಭೋಜನಕ್ಕಾಗಿ ಭೋಜನ ಶಾಲೆಯೊಳಗೆ ಕಳಿಸುವ ತಾತ್ಪರ್ಯ ಇಲ್ಲಿ ವಕ್ತೃವಿಗೆ ಇದೆ. ಅದರ ಅನುಪಪತ್ತಿಯಿಂದ 'ದಂಡ'ಗಳೆಂದರೆ ದಂಡಧಾರಿಗಳೆಂದು ಲಕ್ಷಣಾ ಮಾಡುವುದು ಕಂಡಿದೆ. ಹಾಗೇ 'ಕಶ್ಚಂದ್ರಃ' 'ಯಾರು ಚಂದ್ರ?' ಎಂದರೆ, ಚಂದ್ರಸ್ವರೂಪಮಾತ್ರವನ್ನು ಕೇಳುವ ತಾತ್ಪರ್ಯ ವಿರುವುದರಿಂದ, ಪ್ರಕೃಷ್ಟಪ್ರಕಾಶಶ್ಚಂದ್ರಃ ಎಂಬ ವಾಕ್ಯಕ್ಕೆ ಚಂದ್ರಸ್ವರೂಪಮಾತ್ರದಲ್ಲಿ ಲಕ್ಷಣಾ

ಮಾಡಬೇಕು. ಮುಖ್ಯಾರ್ಥವಿಟ್ಟುಕೊಳ್ಳಬಾರದು' ಎಂದೆ ಅದ್ವೈತಿಗಳು ಹೇಳುತ್ತಾರೆ. ಇದು ಸರಿಯಲ್ಲ.

'ಯಾರು ಚಂದ್ರ? ಎಂಬ ಪ್ರಶ್ನೆ ಮಾಡುವವನು ಮೊದಲಿಗೆ 'ಚಂದ್ರ' ಶಬ್ದಕ್ಕೆ ಏನಾದರೂ ಒಂದು ಅರ್ಥವಿರುತ್ತದೆ.' ಎಂದು ಸಾಮಾನ್ಯವಾಗಿ ಚಂದ್ರಶಬ್ದಾರ್ಥಸ್ವರೂಪವನ್ನು ತಿಳಿದಿರುತ್ತಾನೆ. ತಿಳಿಯದಿದ್ದರೆ, ಚಂದ್ರಶಬ್ದಾರ್ಥ ಈ ಜ್ಯೋತಿಗಳ ಸಮೂಹಮಧ್ಯದಲ್ಲಿ ಯಾವುದು? ಎಂದು ಜಿಜ್ಞಾಸೆ ಮಾಡುವುದು, ಯಾವುದೆಂದು ಕೇಳುವುದು ಶಕ್ಯವಿಲ್ಲ. ಏನನ್ನು ಕೇಳುತ್ತಿರುವೆ? ಎಂದು ಇನ್ನೊಬ್ಬನು ಕೇಳಿದಾಗ 'ಚಂದ್ರ ಶಬ್ದಾರ್ಥವನ್ನು' ಎಂದು ಸಂದೇಹ ಜಿಜ್ಞಾಸೆಗಳ ಧರ್ಮಿಯನ್ನು ಅವನು ಹೇಳುತ್ತಾನೆ. ಆದ್ದರಿಂದ ಧರ್ಮಿಯಾದ ಚಂದ್ರಶಬ್ದಾರ್ಥಸ್ವರೂಪದ ಸಾಮಾನ್ಯಜ್ಞಾನ ಅವನಿಗೆ ಇದೆ.

'ಚಂದ್ರಶಬ್ದಾರ್ಥವು ಅಲ್ಪಪ್ರಕಾಶ ಉಳ್ಳುದೆ ಅಥವಾ ಮಹಾಪ್ರಕಾಶ ಉಳ್ಳದ್ದೆ?' ಎಂದು ವಿಶೇಷ ಜಿಜ್ಞಾಸೆಯಿಂದ ಅಸಾಧಾರಣ ಧರ್ಮಜಿಜ್ಞಾಸೆಯಿಂದ ಪ್ರಶ್ನೆ ಮಾಡುತ್ತಿದ್ದಾನೆ. ಉತ್ತರವು ಅದಕ್ಕೆ ಅನುಗುಣವಾಗಿ 'ಮಹಾಪ್ರಕಾಶ ಉಳ್ಳದ್ದು' ಎಂದು ಚಂದ್ರಶಬ್ದಾರ್ಥದ ಅಸಾಧಾರಣ ಧರ್ಮವನ್ನು ಹೇಳುತ್ತದೆ. ಚಂದ್ರಶಬ್ದಾರ್ಥದ ಸಾಮಾನ್ಯ ಸ್ವರೂಪವನ್ನೇ ಉತ್ತರವಾಗಿ ಹೇಳಿದರೆ ಪ್ರಶ್ನೆ ಉತ್ತರಗಳಿಗೆ ವೈಯಧಿಕರಣ್ಯ ಬರುತ್ತದೆ. ಪ್ರಶ್ನೆ ಮಾಡುವವನು ಕೇಳುವುದೊಂದನ್ನು, ಉತ್ತರಿಸುವವನು ಹೇಳುವುದು ಇನ್ನೊಂದನ್ನು ಎಂದಾಗುತ್ತದೆ.

'ಚಂದ್ರಶಬ್ದಾರ್ಥದ ಸ್ವರೂಪವನ್ನು ಕೇಳಿದಾಗ ಅದನ್ನು ಹೇಳದೆ ಅದರ ಅಸಾಧಾರಣ ಧರ್ಮವನ್ನು ಹೇಳಿದರೇ ವೈಯಧಿಕರಣ್ಯ' ಎಂದು ಅದ್ವೈತಿಗಳು ವಾದಿಸುತ್ತಾರೆ. ಇದೊಂದು ವಿಪರ್ಯಾಸ. ಕೇಳುವವನಿಗೆ ಮೊದಲಿಗೆ ಚಂದ್ರಶಬ್ದಾರ್ಥ ಸ್ವರೂಪಜ್ಞಾನವಿರುವುದಿಲ್ಲ, ಅದನ್ನೇ ಕೇಳುತ್ತಾನೆ ಎನ್ನುತ್ತಾರೆ, ಆದರೆ ಸಾಮಾನ್ಯವಾಗಿ ಸ್ವರೂಪದ ಜ್ಞಾನವಿಲ್ಲದಿದ್ದರೆ ಅದನ್ನು ಅವನು 'ಚಂದ್ರಶಬ್ದಾರ್ಥ'ವನ್ನು ಕೇಳುತ್ತಿದ್ದೇನೆ' ಎಂದು ಅನುವಾದ ಮಾಡುವುದಾದರೂ ಹೇಗೆ?

**ಚಂದ್ರ ಶಬ್ದಸ್ಯ ಪ್ರಾತಿಪದಿಕತ್ವಾನಿಶ್ಚಯೇನ ಸುಬ್‌ವಿಭಕ್ತಿ ಪ್ರಯೋಗಾಯೋಗಾಚ್ಚ ।**
**ಚಂದ್ರ ಇತ್ಯನೂದ್ಯ ಕ ಇತಿ ಪ್ರಶ್ನಾಯೋಗಾಚ್ಚ । ನ ಹ್ಯಜ್ಞಾತಮನುವಾದಾರ್ಹಂ ॥'**

ಅನುವಾದ ಮಾಡುವಾಗ 'ಚಂದ್ರಃ' 'ಚಂದ್ರಶಬ್ದಾರ್ಥವು' ಎಂದು ಚಂದ್ರಪ್ರಾತಿಪದಿಕವನ್ನು ಪ್ರಥಮೈಕವಚನ 'ಸು' ಪ್ರತ್ಯಯಾಂತವಾಗಿ ಹೇಳುತ್ತಾನೆ. ಚಂದ್ರಶಬ್ದವನ್ನು ಪ್ರಾತಿಪದಿಕ ಎಂದು ತಿಳಿದೇ ಅದಕ್ಕೆ ಪ್ರತ್ಯಯ ಸೇರಿಸುತ್ತಾನೆ. ತಿಳಿಯದೆ ಪ್ರತ್ಯಯವನ್ನು ಸೇರಿಸುವುದಿಲ್ಲ. ಏಕೆಂದರೆ ಪ್ರಾತಿಪದಿಕಕ್ಕೇ ಸು ಪ್ರತ್ಯಯ ವಿಹಿತವಾಗಿದೆ. ಪ್ರಾತಿಪದಿಕವಲ್ಲದ ಧಾತು ಮುಂತಾದವುಗಳಿಗೆ ಅದು ವಿಹಿತವಲ್ಲ.

ಪ್ರಾತಿಪದಿಕವೆಂದರೆ ಧಾತು ಮುಂತಾದವುಗಳಿಂದ ವ್ಯತಿರಿಕ್ತವಾದ ಅರ್ಥವತ್ತಾದ ಶಬ್ದ.

ಹೀಗಾಗಿ 'ಚಂದ್ರಶಬ್ದವನ್ನು ಪ್ರಾತಿಪದಿಕವೆಂದು ತಿಳಿದಿದ್ದಾನೆ' ಎಂದರೆ ಅದಕ್ಕೆ ಅರ್ಥವಿದೆ ಎಂದು ತಿಳಿದಿದ್ದಾನೆ ಎಂದೇ ಅರ್ಥ. ಹೀಗೆ ಚಂದ್ರಶಬ್ದಕ್ಕೆ ಅರ್ಥವಿದೆ ಎಂದು ಸಾಮಾನ್ಯವಾಗಿ ಅದರ ಸ್ವರೂಪವನ್ನು ತಿಳಿದೇ ಚಂದ್ರಶಬ್ದಾರ್ಥ ಏನು ಎಂದು ವಿಶೇಷವಾದ ಅಸಾಧಾರಣವಾದ ಧರ್ಮದ ಬಗ್ಗೆ ಪ್ರಶ್ನೆ ಮಾಡುತ್ತಾನೆ. ಆ ಪ್ರಶ್ನೆಗೆ ಉತ್ತರವಾಗಿ ತಿರುಗಿ ಚಂದ್ರಶಬ್ದಾರ್ಥ ಸ್ವರೂಪವನ್ನೇ ಹೇಳಿದರೆ ಅವನ ಸಂದೇಹ ನಿವೃತ್ತಿಯಾಗುವುದು ಹೇಗೆ?

ಅಲ್ಪಪ್ರಕಾಶ ಉಳ್ಳದ್ದೇ ಮಹಾಪ್ರಕಾಶ ಉಳ್ಳದ್ದೆ? ಎಂಬ ಸಂದೇಹಕ್ಕೆ ಮಹಾಪ್ರಕಾಶ ಉಳ್ಳದ್ದೆಂದು ಅಸಾಧಾರಣಧರ್ಮವನ್ನೇ ಉತ್ತರವಾಗಿ ಹೇಳಬೇಕಾಗುತ್ತದೆ, ಕೇವಲ ಸ್ವರೂಪವನ್ನಲ್ಲ.

**'ಅಸಂಕೀರ್ಣಂ ಚಂದ್ರಸ್ವರೂಪಂ ನ ಜ್ಞಾತಮಿತಿ ಚೇನ್ನ। ಚಂದ್ರ ಸ್ವರೂಪದ್ವಯಾಭಾವಾತ್। ತದೇವ ಸ್ವರೂಪಂ ಅಸಂಕೀರ್ಣತ್ವೇನ ನ ಜ್ಞಾತಮಿತಿ ಚೇನ್ನ। ಅಸಂಕೀರ್ಣತ್ವಸ್ಯ ವ್ಯಾವರ್ತಕವೈಶಿಷ್ಟ್ಯ ವ್ಯಾವೃತ್ತಿವೈಶಿಷ್ಟ್ಯಯೋಃ ಅನ್ಯತರರೂಪತ್ವೇನ ಪ್ರಶ್ನಸ್ಯ ವಿಶಿಷ್ಟ ಪರತ್ವಾಪಾತಾತ್।'**

'ಸಾಮಾನ್ಯತಃ ಚಂದ್ರಸ್ವರೂಪವು ಪ್ರಶ್ನೆ ಮಾಡುವವನಿಗೆ ಮೊದಲೇ ಜ್ಞಾತವಾಗಿದ್ದರೂ 'ಅಸಂಕೀರ್ಣ'ವಾದ ಅಂದರೆ ಇತರ ವ್ಯಾವರ್ತಕಧರ್ಮ ವಿಶಿಷ್ಟವಾದ ಅಥವಾ ಇತರವ್ಯಾವೃತ್ತಿ ವಿಶಿಷ್ಟವಾದ ಸ್ವರೂಪವು ಜ್ಞಾತವಾಗಿಲ್ಲ' ಎಂದು ಹೇಳಿದರೆ ಅದು ಸರಿಯಲ್ಲ. ಚಂದ್ರಸ್ವರೂಪ ಎರಡಿಲ್ಲ. ಒಬ್ಬ ಚಂದ್ರನಿಗೆ ಸಂಕೀರ್ಣ ಸ್ವರೂಪ ಅಸಂಕೀರ್ಣಸ್ವರೂಪವೆಂದು ಎರಡು ಸ್ವರೂಪವಿಲ್ಲ. ಆದರಿಂದ 'ಸ್ವರೂಪ ತಿಳಿದಿದೆ' ಎಂದರೆ 'ಅಸಂಕೀರ್ಣ ಸ್ವರೂಪ ತಿಳಿದಿದೆ' ಎಂದೇ ಅರ್ಥ. ಅದು ತಿಳಿದಿಲ್ಲ ಎನ್ನಬಾರದು.

'ಇದಕ್ಕೆ ಹೀಗೆ ಹೇಳುತ್ತೇನೆ—ಅಸಂಕೀರ್ಣಧರ್ಮಿಸ್ವರೂಪ ಜ್ಞಾತವೇ ಆಗಿದೆ ಎಂದು ಒಪ್ಪುತ್ತೇನೆ, ಆದರೆ ಅದೇ ಧರ್ಮಿಸ್ವರೂಪ ಅಸಂಕೀರ್ಣವೆಂದು ಜ್ಞಾತವಾಗಿಲ್ಲ. ಅದರಿಂದ ಪ್ರಶ್ನೆ'—ಇದು ಸರಿಯಲ್ಲ.

'ಅಸಂಕೀರ್ಣತ್ವ'ವೆಂದರೆ ವ್ಯಾವರ್ತಕವೈಶಿಷ್ಟ್ಯ ಅಥವಾ ವ್ಯಾವೃತ್ತಿವೈಶಿಷ್ಟ್ಯ ಇವೆರಡ ರಲ್ಲಿಯೇ ಒಂದು. ಹೊರತು, ಇನ್ನೊಂದಿಲ್ಲ. ಈ ವೈಶಿಷ್ಟ್ಯವನ್ನು ತಿಳಿದಿಲ್ಲವಾದ್ದರಿಂದ ಪ್ರಶ್ನೆ ಮಾಡುತ್ತಾನೆ ಎಂದರೆ ಪ್ರಶ್ನೆ ವಿಶಿಷ್ಟಧರ್ಮ ಪರವಾಯಿತು. ಕೇವಲ ಧರ್ಮಿಸ್ವರೂಪ ಪರವಲ್ಲವೆಂದಾಯಿತು.

**ಸಿದ್ಧಿಕಾರನ ಆಕ್ಷೇಪ :** 'ಅಸಂಕೀರ್ಣ'ಎಂದರೆ 'ವ್ಯಾವರ್ತಕವಿಶಿಷ್ಟ ಅಥವಾ ವ್ಯಾವೃತ್ತಿವಿಶಿಷ್ಟ' ಎನ್ನುವುದಿಲ್ಲ, ಒಂದೇ ಚಂದ್ರಸ್ವರೂಪ, ಚಂದ್ರನಲ್ಲಿ ಚಂದ್ರಭಿನ್ನತ್ವಭ್ರಮಕ್ಕೆ ಕೆಲವೊಮ್ಮೆ ವಿರೋಧಿ ಯಾಗಬಹುದು, ಕೆಲವೊಮ್ಮೆ ವಿರೋಧಿಯಾಗದಿರಬಹುದು. ವಿರೋಧಿಯಾಗುವ ಅವಸ್ಥೆ ಅಸಂಕೀರ್ಣತ್ವ, ವಿರೋಧಿಯಾಗದ ಅವಸ್ಥೆ ಸಂಕೀರ್ಣತ್ವ ಎನ್ನುತ್ತೇನೆ. ಉದಾ: ಬಿಳಿಯಾದ ಶಂಖ

ಒಬ್ಬನಿಗೆ ಅವನು ಆರೋಗ್ಯ ವಂತನಾಗಿರುವಾಗ ಬಿಳಿಯಾಗಿ, ಕಾಮಾಲೆಯ ರೋಗಿಯಾಗಿರುವಾಗ ಹಳದಿಯಾಗಿ ಕಾಣುತ್ತದೆ. ಅದರಲ್ಲಿರುವ ಒಂದೇ ಬಿಳಿಬಣ್ಣ ಹಳದಿ ಎಂಬ ಭ್ರಮಕ್ಕೆ ಒಮ್ಮೆ ಅವಿರೋಧಿಯೂ ಆಗಬಹುದು, ಒಮ್ಮೆ ವಿರೋಧಿಯೂ ಆಗಬಹುದು, ಅವಸ್ಥಾ ಭೇದದಿಂದ. ಹಾಗೇ ಚಂದ್ರಸ್ವರೂಪವೂ ಕೂಡ ಅವಸ್ಥಾ ಭೇದದಿಂದ ಭ್ರಮಕ್ಕೆ ವಿರೋಧಿ ಅವಿರೋಧಿ ಎರಡೂ ಆಗಬಹುದು' ಎಂದರೆ, ಇದೂ ಸರಿಯಲ್ಲ.

ಆರೋಗ್ಯಕಾಲದಲ್ಲಿ ಯಾವ ಅವಸ್ಥೆಯಲ್ಲಿ ಬಿಳಿಬಣ್ಣವಿತ್ತೋ ಅದೇ ಅವಸ್ಥೆಯಲ್ಲಿ ಅದು ರೋಗಕಾಲದಲ್ಲಿಯೂ ಇತ್ತು. ಇಲ್ಲಿ ಅವಸ್ಥಾಭೇದವಿಲ್ಲ.

'ಬಿಳಿಬಣ್ಣ ಆರೋಗ್ಯವಂತನಿಗೆ ಕಣ್ಣಿಗೆ ಕಾಣುವ ಅವಸ್ಥೆಯಲ್ಲಿ ಭ್ರಮಕ್ಕೆ ವಿರೋಧಿ. ರೋಗಬಂದಾಗ ಕಾಣದ ಅವಸ್ಥೆಯಲ್ಲಿ ಭ್ರಮಕ್ಕೆ ಅವಿರೋಧಿ'– ಇದು ಸರಿಯಲ್ಲ. ಭ್ರಮಕ್ಕೆ ಇಲ್ಲಿ ವಿರೋಧಿ ಅವಿರೋಧಿಗಳು ಬಿಳಿಬಣ್ಣ ಕಾಣುವ ಕಾಣದ ಅವಸ್ಥೆಗಳಲ್ಲ, ಕಾಣ್ಕೆ ಮತ್ತು ಅದರ ಅಭಾವಗಳೇ ಅನ್ವಯ ವ್ಯತಿರೇಕಗಳಿಂದ ವಿರೋಧಿ ಅವಿರೋಧಿಗಳು. ಆದರಿಂದ ಒಂದೇ ಚಂದ್ರಸ್ವರೂಪಕ್ಕೆ ಅವಸ್ಥಾಭೇದಗಳು ಸಂಕೀರ್ಣತ್ವ-ಅಸಂಕೀರ್ಣತ್ವಗಳೆನ್ನುವುದು ಅನುಭವಕ್ಕೆ ದೂರವಾದ ಮಾತು.

ಪ್ರಶ್ನೋತ್ತರಗಳಲ್ಲಿ ಈ ಅವಸ್ಥೆಗಳು ಶಬ್ದದಿಂದ ಪ್ರತೀತವಾಗುವುದೂ ಇಲ್ಲ.

ಏವಂಚ—

**ಸಾಮಾನ್ಯತೋಽಪಿ ನ ಜ್ಞಾತೋ ಧರ್ಮೀ ಚಂದ್ರೋ ಯದಾ ತದಾ ।**
**ನ ಬುಭುತ್ಸಾ, ನ ಸಂದೇಹೋ, ನಾನುವಾದಶ್ಚ ಯುಜ್ಯತೇ ॥**

**ತಸ್ಮಾಚ್ಚಂದ್ರಸ್ಯೇತರಸ್ಮಾದ್ ಭೇದಕೋ ಧರ್ಮ ಏವ ಹಿ ॥**
**ಪೃಷ್ಟಸ್ತಸ್ಮಾತ್ ಪ್ರಕೃಷ್ಟಾದಿ ವಾಕ್ಯಂ ನಾಖಂಡಗೋಚರಂ ॥**

'ಹೀಗಾಗಿ ಧರ್ಮಿಯಾದ ಚಂದ್ರನು ಸಾಮಾನ್ಯವಾಗಿಯೂ ಜ್ಞಾತನಲ್ಲದಿದ್ದರೆ ಜಿಜ್ಞಾಸೆ ಕೂಡಲಾರದು, ಸಂದೇಹ ಕೂಡಲಾರದು. 'ಚಂದ್ರ' ಎಂದು ಅನುವಾದವೂ ಕೂಡಲಾರದು. ಅದರಿಂದ ಚಂದ್ರನಲ್ಲಿ ಇತರದಿಂದ ವ್ಯಾವರ್ತಕವಾದ ಧರ್ಮವೇ ಜಿಜ್ಞಾಸಿತವಾಗಿದೆ. ಆದರಿಂದ ಪ್ರಕೃಷ್ಟಾದಿ ವಾಕ್ಯವು ಸಖಂಡಾರ್ಥನಿಷ್ಠವೇ ಹೊರತು ಅಖಂಡಾರ್ಥನಿಷ್ಠವಲ್ಲ.'

**ಸಿದ್ಧಿಕಾರನ ಆಕ್ಷೇಪ :** 'ಧರ್ಮಿಯಾದ ಚಂದ್ರನ ಸ್ವರೂಪವು ಜ್ಞಾತವಾಗಿದ್ದರೂ ತನಗೆ ಬಂದಿದ್ದ ಸಂದೇಹವನ್ನು ದೂರಮಾಡಬಲ್ಲ ಇನ್ನೊಂದು ಚಂದ್ರಸ್ವರೂಪಜ್ಞಾನ ಬರಲಿ ಎಂಬ ಅಭಿಪ್ರಾಯದಿಂದ ಪ್ರಶ್ನೆ ಮಾಡಬಹುದು. ಒಂದೇ ಚಂದ್ರಸ್ವರೂಪದ ವಿಷಯದಲ್ಲಿ ಹಿಂದೆ ಬಂದಿದ್ದ ಜ್ಞಾನವು ಸಂದೇಹ ನಿವರ್ತಕವಲ್ಲ, ಮುಂದೆ ಬರಲಿರುವ ಜ್ಞಾನವು ಸಂದೇಹ ನಿವರ್ತಕವಾಗುವುದು ಹೇಗೆ? ಎಂದರೆ, ಕಾಮಾಲೆ ರೋಗಿ ಶಂಖವು ಹಳದಿಯಲ್ಲ, ಬಿಳಿ ಎಂದು ಅನುಮಾನದಿಂದ

ತಿಳಿದರೂ ಅವನಿಗೆ ಮತ್ತೂ ಹಳದಿ ಕಾಣುತ್ತದೆ. ಅದು ನಿವೃತ್ತಿಯಾಗುವುದಿಲ್ಲ, ರೋಗಪರಿಹಾರವಾದ ಬಳಿಕ ಶಂಖ ಬಿಳಿಯೆ, ಹಳದಿಯಲ್ಲ ಎಂದು ಪ್ರತ್ಯಕ್ಷವಾಗಿ ಕಂಡಾಗ ಹಳದಿ ನಿವೃತ್ತಿಯಾಗುವುದು. ಇಲ್ಲಿ ಒಂದೇ ವಿಷಯದಲ್ಲಿ ಬರುವ ಪ್ರತ್ಯಕ್ಷ ಅನುಮಾನ ಜ್ಞಾನಗಳು ಸಂದೇಹಭ್ರಮಗಳಿಗೆ ವಿರೋಧಿ ಅವಿರೋಧಿಗಳಾಗುವುದು ಕಂಡಿದೆ. ಹಾಗೇ ಒಂದೇ ಚಂದ್ರ ಸ್ವರೂಪದ ವಿಷಯದಲ್ಲಿ ಬರುವ ಪೂರ್ವೋತ್ತರ ಜ್ಞಾನಗಳು ಸಂದೇಹಭ್ರಮಗಳಿಗೆ ವಿರೋಧಿ ಅವಿರೋಧಿಗಳಾಗಬಹುದು. ಅವಿರೋಧಿಯಾದ ಸ್ವರೂಪಜ್ಞಾನವಿರುವವನು ವಿರೋಧಿಯಾದ ಸ್ವರೂಪಜ್ಞಾನಕ್ಕಾಗಿ ಪ್ರಶ್ನೆ ಮಾಡಬಹುದು' ಎಂದು ಸಿದ್ಧಿಕಾರನು ಹೇಳುವುದು ಸರಿಯಲ್ಲ.

ಪ್ರತ್ಯಕ್ಷಾತ್ಮಕ ಭ್ರಮಕ್ಕೆ ಪ್ರತ್ಯಕ್ಷಾತ್ಮಕ ಪ್ರಮಿತಿಯೇ ನಿವರ್ತಕವಾಗುವುದು ನಿಯಮ. ಒಂದು ದಿಕ್ಕನ್ನು ಇನ್ನೊಂದು ದಿಕ್ಕೆಂದು ಭ್ರಮಿಸಿದಾಗ ಆ ಭ್ರಮೆಗೆ ಪ್ರತ್ಯಕ್ಷಾತ್ಮಕ ಪ್ರಮಿತಿಯೇ ನಿವರ್ತಕ ವಾಗುವುದು ಕಂಡಿದೆ. ಆದರಿಂದ ರೋಗದಿಂದ ಬಂದಿರುವ ಪ್ರತ್ಯಕ್ಷಾತ್ಮಕ ಶಂಖಪೀತತ್ವ ಭ್ರಮವು ಪ್ರತ್ಯಕ್ಷಾತ್ಮಕ ಶ್ವೇತತ್ವಪ್ರಮಿತಿಯಿಂದಲೇ ನಿವೃತ್ತವಾಗುತ್ತದೆ, ಶ್ವೇತತ್ವಾನುಮಾನದಿಂದ ನಿವೃತ್ತ ವಾಗುವುದಿಲ್ಲ. ಆದರೆ ಸಾಮಾನ್ಯತಃ ಒಂದು ಸ್ವರೂಪಜ್ಞಾನದಿಂದ ಬಂದಿದ್ದ ಸಂಶಯವು ಅದೇ ಸ್ವರೂಪದ ಇನ್ನೊಂದು ಜ್ಞಾನದಿಂದ ನಿವೃತ್ತವಾಗುವುದು ಎಲ್ಲಿಯೂ ಕಂಡಿಲ್ಲ, ಅನುಭವಾನುಸಾರ ವಾಗಿಯೇ ವ್ಯವಸ್ಥೆಯನ್ನು ಕಲ್ಪನ ಮಾಡಬೇಕು. ಇಲ್ಲದಿದ್ದರೆ 'ವಿಶೇಷಜ್ಞಾನದಿಂದಲೇ ಸಂದೇಹ, ಪುನಃ ಬರುವ ಸಾಮಾನ್ಯಜ್ಞಾನದಿಂದಲೇ ಅದರ ಪರಿಹಾರ' ಎಂದು ಮುಂತಾಗಿ ಏಕೆ ವ್ಯವಸ್ಥೆ ಮಾಡಬಾರದು?

ಉತ್ತರವಾಕ್ಯದಲ್ಲಿ ವ್ಯಾವೃತ್ತಿ ಬೋಧಕಪದವಿಲ್ಲದಿರುವುದರಿಂದ ಚಂದ್ರನಲ್ಲಿ ಇತರ ವ್ಯಾವೃತ್ತಿ ವೈಶಿಷ್ಟ್ಯಜ್ಞಾನ ಹೇಗೆ ಬರುತ್ತದೆ ಎಂದರೆ, ವ್ಯಾವರ್ತಕವಾದ ಪ್ರಕೃಷ್ಟಪ್ರಕಾಶಾದಿ ಧರ್ಮಗಳ ಜ್ಞಾನ ಉತ್ತರ ವಾಕ್ಯದಿಂದ ಬಂದಾಗ ವ್ಯಾವೃತ್ತಿ ವೈಶಿಷ್ಟ್ಯವು ಅನುಮಾನದಿಂದ ತಿಳಿಯುತ್ತದೆ. ಅದರಿಂದ ವ್ಯಾವೃತ್ತಿ ವೈಶಿಷ್ಟ್ಯವಿಷಯದಲ್ಲಿಯೇ ಉತ್ತರವಾಕ್ಯಕ್ಕೆ ತಾತ್ಪರ್ಯ.



**एवं प्रतिवचनस्य प्रकृष्टत्वादिविशिष्टे तात्पर्याभावे तात्पर्यतो यः कश्चिचंद्र इत्येव बोधनात्, अतात्पर्यविषयस्य च प्रतीतस्य त्यक्तत्वात्, वस्तुतो यस्य कस्यापि चंद्रत्वं स्यात् ।**

**तात्पर्यविषयेऽखंडेऽयं चंद्र इति लक्षणलक्ष्यरूपोद्देश्यविधेय-विभागाभावेन तात्पर्यतो यत्किंचिदित्येव बोधनात्तेन चंद्रबुभुत्सा-निवृत्त्यभावात्, कश्चंद्र इति प्रश्नस्योत्तरं च न स्यात् ।**

**सर्वेषामपि लक्षणवाक्यतात्पर्यजन्यज्ञानानां वस्तुगत्या परस्परभिन्नतत्तत्प्रातिपदिकार्थविषयत्वेऽपि प्रकारभेदाभावेन तेन तेन भिन्नभिन्नप्रकारकतत्तत्संदेहनिवृत्तिश्च न स्यात् । प्रकृष्टादिपदवैयर्थ्यं च स्यात्। व्यावर्त्यभेदेन सार्थक्यमित्येतन्निरसिष्यते ।**

**अतात्पर्यविषयस्य चेति** ।। प्रकृष्टप्रकाशत्वविशिष्टस्येति शेषः ।। **यस्य कस्यापीति** ।। तथाच व्यक्तिविशेषे चंद्रत्वनिर्धारणं न स्यादिति भावः । किंच यदि प्रकृष्टादिवाक्यं विशिष्टपरं न स्यात् तर्हि प्रश्नमूलबुभुत्साद्यनिवर्तकत्वेनोत्तरं च न स्यादित्याह– **तात्पर्यविषय इत्यादिना** ।। **तत्तत्संदेहनिवृत्तिश्च न स्यादिति** ।। न चान्यलक्षणवाक्यजन्यज्ञानस्य भिन्नविषयत्वेनैतत्संदेहानिवर्तकत्वेऽप्येतल्लक्षण-वाक्यजन्यज्ञानस्य निवर्तकत्वम् । निवर्तकत्वे समानविषयत्वस्यैव तंत्रत्वादिति वाच्यम् । इदं द्रव्यमिति ज्ञानानंतरं तत्रैव घटत्वादिप्रकारकसंदेहाद्यनापत्तेरिति । ननु प्रकृष्टप्रकाशपदयोर्नक्षत्रघटादिव्यावृत्तिरूपफलभेदसत्त्वान्न वैयर्थ्यमित्याशंक्याह— **व्यावर्त्यभेदेनेति** ।



**'ಏವಂ ಪ್ರತಿವಚನಸ್ಯ ಪ್ರಕೃಷ್ಟತ್ವಾದಿ ವಿಶಿಷ್ಟೇ ತಾತ್ಪರ್ಯಾಭಾವೇ ತಾತ್ಪರ್ಯತೋ 'ಯಃಕಶ್ಚಿತ್ ಚಂದ್ರ' ಇತ್ಯೇವ ಬೋಧನಾತ್, ಅತಾತ್ಪರ್ಯ ವಿಷಯಸ್ಯ ಚ ಪ್ರತೀತಸ್ಯ ತ್ಯಕ್ತತ್ವಾತ್ ವಸ್ತುತೋ ಯಸ್ಯಕಸ್ಯಾಪಿ ಚಂದ್ರತ್ವಂ ಸ್ಯಾತ್ ।'**

ಉತ್ತರವಾಕ್ಯವೂ ಕೂಡ ಅಖಂಡಾರ್ಥಪ್ರತಿಪಾದಕವಲ್ಲ. ಪ್ರಕೃಷ್ಟತ್ವಾದಿ ವಿಶಿಷ್ಟವನ್ನೇ ಪ್ರತಿಪಾದಿಸುತ್ತದೆ. ವಿಶಿಷ್ಟದಲ್ಲಿ ತಾತ್ಪರ್ಯವಿಲ್ಲದಿದ್ದರಿಂದ ಅದನ್ನು ಬಿಟ್ಟು ಅಖಂಡಸ್ವರೂಪವನ್ನೇ ಉತ್ತರವಾಕ್ಯವು ಪ್ರತಿಪಾದಿಸುತ್ತದೆ ಎಂದರೆ 'ಯಾವುದೇ ಒಂದು ಚಂದ್ರಸ್ವರೂಪ' ಎಂದು ಹೇಳಿದಂತಾಯಿತು. ಇದೇ ಚಂದ್ರಸ್ವರೂಪ ಎಂದಲ್ಲ. ಇದೇ ಚಂದ್ರಸ್ವರೂಪ, ಪ್ರಕೃಷ್ಟಾದಿಯೇ ಚಂದ್ರಸ್ವರೂಪ ಎಂದು ಸ್ಪಷ್ಟ ಹೇಳುತ್ತಿದ್ದರೂ ಅದರಲ್ಲಿ ತಾತ್ಪರ್ಯವಿಲ್ಲವೆಂದು ಅದನ್ನು ಬಿಟ್ಟೇ 'ವಸ್ತುತಃ ಯಾವುದಾದರೊಂದು ಚಂದ್ರಸ್ವರೂಪವೇ ನೀನು ಕೇಳಿದ ಚಂದ್ರ' ಎಂದು ಹೇಳಿದಂತಾದೀತು.

**'ತಾತ್ಪರ್ಯವಿಷಯೇ ಅಖಂಡೇ 'ಅಯಂ ಚಂದ್ರಃ' ಇತಿ ಲಕ್ಷಣ ಲಕ್ಷ್ಯ ರೂಪ ಉದ್ದೇಶ್ಯವಿಧೇಯ ವಿಭಾಗಾಭಾವೇನ ತಾತ್ಪರ್ಯತೋ ಯತ್ಕಿಂಚಿತ್ ಇತ್ಯೇವ**

**ಬೋಧನಾತ್ ತೇನ ಚಂದ್ರ ಬುಭುತ್ಸಾ ನಿವೃತ್ತ್ಯಭಾವಾತ್ ಕಶ್ಚಂದ್ರ ಇತಿ ಪ್ರಶ್ನಸ್ಯೋತ್ತರಂ ಚ ನ ಸ್ಯಾತ್'**

'ಅಸಾಧಾರಣ ಧರ್ಮವಿಶಿಷ್ಟ ಚಂದ್ರನಲ್ಲಿಯೇ ತಾತ್ಪರ್ಯವಿರುವುದಾದರೆ 'ಅಯಂ' ಅಸಾಧಾರಣ ಪ್ರಕೃಷ್ಟಾದಿ ಲಕ್ಷಣಉಳ್ಳದ್ದೇ ಈ 'ಚಂದ್ರಃ' ಚಂದ್ರನು' ಎಂದು ಚಂದ್ರರೂಪ ಲಕ್ಷ್ಯವು ಉದ್ದೇಶ್ಯ. ಅದರಲ್ಲಿ ಲಕ್ಷಣವು ವಿಧೇಯ ಎಂದು ವಿಭಾಗ ಸಾಧ್ಯ. ಆದರೆ ಚಂದ್ರಸ್ವರೂಪದಲ್ಲಿಯೇ ತಾತ್ಪರ್ಯವೆನ್ನುವುದಾದರೆ ಒಂದೇ ಸ್ವರೂಪದಲ್ಲಿ ಇದು ಉದ್ದೇಶ್ಯ ಇದು ವಿಧೇಯ ಎಂದು ವಿಭಾಗ ಕೂಡುವುದಿಲ್ಲ. ವಿಭಾಗವಿರಬೇಕಾದರೆ ಭೇದವಿರಬೇಕು. ಅಖಂಡ ನಿರ್ಭೇವ ಸ್ವರೂಪದಲ್ಲಿ ವಿಭಾಗ ಕೂಡುವುದಿಲ್ಲ. ಹೀಗಾಗಿ ಚಂದ್ರ ಯಾವುದು ಎಂಬ ಪ್ರಶ್ನೆಗೆ 'ಯಾವುದೋ ಒಂದು ವಸ್ತುಸ್ವರೂಪ' ಎನ್ನುವುದು ಉತ್ತರವಾಗದು. ಅದರಿಂದ ಯಾವುದೆಂಬ ಜಿಜ್ಞಾಸೆ ನಿವೃತ್ತಿಯಾಗದು. 'ಯಾವುದೋ ಒಂದು ವಸ್ತು ಚಂದ್ರ' ಎಂಬ ಜ್ಞಾನವಿರುವಾಗಲೇ 'ಯಾವುದು ಚಂದ್ರ?' ಎಂಬ ಪ್ರಶ್ನೆ ಬಂದಿರುವಾಗ ಅದಕ್ಕೆ ಉತ್ತರವಾಗಿ ತಿರುಗಿ 'ಯಾವುದೋ ಒಂದು ವಸ್ತು ಚಂದ್ರ' ಎಂದೇ ಉತ್ತರ ಹೇಳಿದರೆ, ಹೆಚ್ಚಿನ ವಿಷಯವೇನೂ ಹೇಳದಿದ್ದರೆ, ಅದು ಪ್ರಶ್ನೆಗೆ ಉತ್ತರವಾಗುವುದಿಲ್ಲ.

**ಸಿದ್ಧಿಕಾರನಆಕ್ಷೇಪ—** 'ಪ್ರಕೃಷ್ಟಾದಿ ವೈಶಿಷ್ಟ್ಯದಲ್ಲಿ ತಾತ್ಪರ್ಯವಿಲ್ಲದಿರುವುದರಿಂದ ಅದನ್ನು ಬಿಟ್ಟು ಲಕ್ಷಣಾದಿಂದ ಚಂದ್ರಸ್ವರೂಪವನ್ನು ಹೇಳಿದರೆ ಯಾವುದೋ ಒಂದು ವಸ್ತುಸ್ವರೂಪ ಪ್ರತೀತಿ ಬಂದೀತು, ಚಂದ್ರಸ್ವರೂಪ ಪ್ರತೀತಿಯಲ್ಲ' ಎಂದರೆ, 'ವ್ರೀಹೀನ್ ಪ್ರೋಕ್ಷತಿ' ಎಂಬಲ್ಲಿ ಪೂರ್ವಮೀಮಾಂಸೆಯಲ್ಲಿ ವಿಚಾರ ಮಾಡಿದಂತೆ, ವ್ರೀಹಿಗೆ ಪ್ರೋಕ್ಷಣ ಮಾಡುವಲ್ಲಿಯೇ ತಾತ್ಪರ್ಯವಿಲ್ಲ, ಅದು ವ್ಯರ್ಥ. ಪ್ರೋಕ್ಷಣದಿಂದ ಅಪೂರ್ವಸಾಧನ ದ್ರವ್ಯವನ್ನು ಸಂಪಾದನೆ ಮಾಡಬೇಕು. ಅದರಿಂದ 'ವ್ರೀಹಿತ್ವವನ್ನು ಬಿಟ್ಟು ಲಕ್ಷಣಯಾ 'ಪ್ರೋಕ್ಷಣ ಮಾಡಬೇಕು' ಎಂದಿಷ್ಟೇ ಹೇಳಿದರೆ, ಯಾವುದಕ್ಕಾದರೂ ಪ್ರೋಕ್ಷಣ ಮಾಡಬೇಕೆಂದು ಹೇಳಿದಂತಾದೀತು, ಘೃತಾದಿಗಳನ್ನು ಕೂಡ ಪ್ರೋಕ್ಷಿಸಬೇಕೆಂದಾದೀತು, ಎಂದು ಆಪತ್ತಿ ಬರುವುದಿಲ್ಲ, ಯವಾದಿ ಧಾನ್ಯವನ್ನು ಪ್ರೋಕ್ಷಿಸಬೇಕೆಂದು ತಿಳಿಯುತ್ತದೆ.

'ಗಂಗಾಯಾಂ ಘೋಷಃ ಎಂಬಲ್ಲಿಯೂ ಗಂಗಾಪ್ರವಾಹದಲ್ಲಿ ತಾತ್ಪರ್ಯವಿಲ್ಲವೆಂದು ಬಿಟ್ಟು ಲಕ್ಷಣಯಾ ತೀರವೆಂದು ಹೇಳಿದ ಮಾತ್ರಕ್ಕೆ ಯಾವುದೇ ನದೀತೀರವೆಂದಾಗುವುದಿಲ್ಲ. ಹಾಗೇ ಪ್ರಕೃಷ್ಟಪ್ರಕಾಶದಲ್ಲಿ ತಾತ್ಪರ್ಯವಿಲ್ಲವೆಂದು ಅದನ್ನು ಬಿಟ್ಟು ಸ್ವರೂಪದಲ್ಲಿ ಲಕ್ಷಣ ಮಾಡಿದ ಮಾತ್ರದಿಂದ ಯಾವುದೋ ಒಂದು ವಸ್ತುಸ್ವರೂಪವೆಂದು ಪ್ರತೀತಿ ಬರುವುದಿಲ್ಲ. ಚಂದ್ರಸ್ವರೂಪದ ಪ್ರತೀತಿಯೇ ಉಂಟಾಗುತ್ತದೆ.'

ಈ ಆಕ್ಷೇಪ ಸರಿಯಲ್ಲ. 'ವ್ರೀಹೀನ್ ಪ್ರೋಕ್ಷತಿ' ಎಂಬಲ್ಲಿ 'ವ್ರೀಹಿಧಾನ್ಯ'ದಲ್ಲಿ ತಾತ್ಪರ್ಯವಿಲ್ಲದಿರುವುದರಿಂದ 'ವ್ರೀಹಿ'ಯನ್ನು ಬಿಟ್ಟರೂ 'ಧಾನ್ಯ'ವನ್ನು ಬಿಟ್ಟುಬಿಡುವುದಿಲ್ಲ. ಆದರಿಂದ ಘೃತಾದಿಗಳಿಗೆ ಪ್ರೋಕ್ಷಣ ಪ್ರಸಂಗವಿಲ್ಲ ವ್ರೀಹಿಯವ ಮುಂತಾದ ಧಾನ್ಯಕ್ಕೇ ಪ್ರೋಕ್ಷಣ

ಉಕ್ತವಾಗುತ್ತದೆ. 'ಗಂಗಾಯಾಂ ಘೋಷಃ' ಎಂಬಲ್ಲಿಯೂ ಗಂಗಾಸಂಬಂಧಿಯಾದ ಪ್ರವಾಹದಲ್ಲಿ ತಾತ್ಪರ್ಯವಿಲ್ಲದಿರುವುದರಿಂದ ಅದನ್ನು ಬಿಟ್ಟರೂ ಗಂಗಾಸಂಬಂಧವನ್ನು ಬಿಡುವುದಿಲ್ಲ. ಅದರಿಂದ ಗಂಗಾಸಂಬಂಧಿ ತೀರವೇ ಲಕ್ಷಣಯಾ ಉಕ್ತವಾಗುತ್ತದೆ. ಪ್ರಕೃತ ಪ್ರಕೃಷ್ಟಾದಿ ವಿಶೇಷಣ ವೈಶಿಷ್ಟ್ಯವೆಲ್ಲವನ್ನೂ ಬಿಟ್ಟು ಅಖಂಡ ಸ್ವರೂಪವನ್ನೇ ಲಕ್ಷಣಯಾ ಹೇಳುತ್ತಿರುವುದರಿಂದ 'ಸ್ವರೂಪ'ವೆಂದು ಯಾವುದೇ ವಸ್ತುವಿನ ಸ್ವರೂಪವನ್ನು ಗ್ರಹಿಸಬಹುದೆಂಬ ಆಪತ್ತಿ ಇದೆ.

ಸಿದ್ಧಿಕಾರನ ಇನ್ನೊಂದು ಆಕ್ಷೇಪ—ಒಂದು ಚಂದ್ರಸ್ವರೂಪದಲ್ಲಿ ಉದ್ದೇಶ್ಯವಿಧೇಯ ಎಂಬ ವಿಭಾಗ ಕೂಡುವುದಿಲ್ಲ ನಿಜ. ಒಂದೇ ಪ್ರಾತಿಪದಿಕದಿಂದ ಉಪಸ್ಥಿತವಾಗುವ ಒಂದು ಸ್ವರೂಪದಲ್ಲಿ ಭೇದವಿಲ್ಲದಿರುವುದರಿಂದ ಉದ್ದೇಶ್ಯ ವಿಧೇಯವಿಭಾಗವಿಲ್ಲವೆನ್ನುವುದು ನ್ಯಾಯ. ಆದರೆ ಪ್ರಕೃತ 'ಪ್ರಕೃಷ್ಟ ಪ್ರಕಾಶ'ವೆಂಬ ಪ್ರಾತಿಪದಿಕವು ಲಕ್ಷಣರೂಪವಾದ ವಿಧೇಯ ಸಮರ್ಪಕ. 'ಚಂದ್ರ' ಪ್ರಾತಿಪದಿಕವು ಲಕ್ಷ್ಯರೂಪದ ಉದ್ದೇಶ್ಯ ಸಮರ್ಪಕ. ಹೀಗೆ ಪ್ರಾತಿಪದಿಕಗಳೆರಡು ಇರುವುದರಿಂದ ಉದ್ದೇಶ್ಯ ಚಂದ್ರ ಸಮರ್ಪಕ ಪ್ರಾತಿಪದಿಕದಿಂದ ಉಪಸ್ಥಿತವಾಗುವ ಚಂದ್ರಸ್ವರೂಪ ಉದ್ದೇಶ್ಯ. ವಿಧೇಯಪ್ರಕೃಷ್ಟಪ್ರಕಾಶ ಸಮರ್ಪಕ ಪ್ರಾತಿಪದಿಕದಿಂದ ಉಪಸ್ಥಿತವಾಗುವ ಪ್ರಕೃಷ್ಟಪ್ರಕಾಶಸ್ವರೂಪ ವಿಧೇಯ ಎಂದು ವಿಭಾಗ ಕೂಡುತ್ತದೆ.'

ಈ ಆಕ್ಷೇಪವೂ ಸರಿಯಲ್ಲ. ಪ್ರಕೃಷ್ಟಾದಿವಾಕ್ಯ ಸ್ಥಳದಲ್ಲಿ ಲಕ್ಷಣ ಸಮರ್ಪಕ ಪ್ರಾತಿಪದಿಕದಿಂದ ಉಪಸ್ಥಿತವಾಗುವ ಲಕ್ಷಣ ಸ್ವರೂಪವೇ ಬೇರೆ, ಲಕ್ಷ್ಯ ಸಮರ್ಪಕ ಪ್ರಾತಿಪದಿಕದಿಂದ ಉಪಸ್ಥಿತವಾಗುವ ಲಕ್ಷ್ಯಸ್ವರೂಪವೇ ಬೇರೆ. ಅವು ಅಖಂಡವಲ್ಲ, ನಿರ್ಭೇದವಲ್ಲ. ಅದರಿಂದ ಅವುಗಳಿಗೆ ಭೇದವಿರುವುದರಿಂದ ಉದ್ದೇಶ್ಯವಿಧೇಯಭಾವ ಕೂಡುತ್ತದೆ. ಆದರೆ ಸತ್ಯಾದಿ ವಾಕ್ಯದಲ್ಲಿ ಲಕ್ಷಣಲಕ್ಷ್ಯ ಸಮರ್ಪಕವಾದ ಎಲ್ಲ ಪ್ರಾತಿಪದಿಕಗಳಿಂದಲೂ ಉಪಸ್ಥಿತವಾಗುವ ಶುದ್ಧಚೈತನ್ಯ ಸ್ವರೂಪವು ಒಂದೇ, ಅಖಂಡ, ನಿರ್ಭೇದ. ಅದರಲ್ಲಿ ಭೇದವಿಲ್ಲದಿರುವುದರಿಂದ ಭೇದಸಾಧ್ಯವಾದ ಉದ್ದೇಶ್ಯ ವಿಧೇಯ ವಿಭಾಗವನ್ನು ಹೇಳುವುದು ವ್ಯಾಹತವಾಗುತ್ತದೆ. ಈ ವಿಭಾಗಕ್ಕೆ ಭೇದ ಬೇಕಾಗಿಲ್ಲವೆಂದರೆ ಉದ್ದೇಶ್ಯವೆ ವಿಧೇಯ, ವಿಧೇಯವೆ ಉದ್ದೇಶ್ಯವಾದೀತು.

ಪಾರಮಾರ್ಥಿಕ ಭೇದವಿಲ್ಲದಿದ್ದರೂ ಆರೋಪಿತವಾದ ಭೇದದಿಂದ ವಿಭಾಗ ಕೂಡುತ್ತದೆ ಎಂದರೆ ಆರೋಪಿತಭೇದ ಎಂದರೆ ಭೇದಾರೋಪ, ಪ್ರತೀತಿಯಲ್ಲಿ ಭೇದ ಆರೋಪಿತವಾಗಿ ಕಾಣುತ್ತದೆ ಎಂದಂತಾಯಿತು. ಆಗ ಅದು ಅಖಂಡಾರ್ಥಪ್ರತೀತಿಯಾಗುವುದಿಲ್ಲ, ಸಖಂಡಾರ್ಥ ಪ್ರತೀತಿಯೇ ಆಗುತ್ತದೆ. ಅಖಂಡಾರ್ಥವೆನ್ನುವುದು ವ್ಯಾಹತವಾಗುತ್ತದೆ.

**ಸರ್ವೇಷಾಮಪಿ ಲಕ್ಷಣವಾಕ್ಯ ತಾತ್ಪರ್ಯಜನ್ಯಜ್ಞಾನಾನಾಂ ಪರಸ್ಪರಭಿನ್ನ ತತ್ತತ್ ಪ್ರಾತಿಪದಿಕಾರ್ಥ ವಿಷಯತ್ವೇಪಿ ಪ್ರಕಾರಭೇದಾಭಾವೇನ ತೇನತೇನ ಭಿನ್ನಭಿನ್ನ ಪ್ರಕಾರಕ ತತ್ತತ್ ಸಂದೇಹ ನಿವೃತ್ತಿಶ್ಚ ನ ಸ್ಯಾತ್। ಪ್ರಕೃಷ್ಟಾದಿ ಪದ ವೈಯರ್ಥ್ಯಂ ಚ ಸ್ಯಾತ್। ವ್ಯಾವರ್ತ್ಯಭೇದೇನ ಸಾರ್ಥಕ್ಯಮಿತ್ಯೇತನ್ನಿರಸಿಷ್ಯತೇ।'**

'ಸಾಸ್ನಾದಿಮಾನ್ ಗೌಃ' 'ಕುಂಬುಗ್ರೀವಾದಿಮಾನ್ ಘಟಃ' ಇತ್ಯಾದಿ ಗೋಘಟ ಮುಂತಾದ ಸರ್ವಲಕ್ಷಣವಾಕ್ಯ ತಾತ್ಪರ್ಯಜನ್ಯಜ್ಞಾನಗಳು ಪರಸ್ಪರ ಭಿನ್ನವಾದ 'ಗೋ' 'ಘಟ' ಮುಂತಾದ ಪರಸ್ಪರ ಭಿನ್ನವಾದ ಆಯಾ ಪ್ರಾತಿಪದಿಕಗಳ ಅರ್ಥವನ್ನು ವಿಷಯೀಕರಿಸುತ್ತಿದ್ದರೂ ಎಲ್ಲವೂ ಪ್ರಕಾರವಾದ ಆಯಾ ಧರ್ಮಗಳನ್ನು ಬಿಟ್ಟು ಕೇವಲ ಧರ್ಮಿಸ್ವರೂಪವನ್ನೇ ವಿಷಯೀ ಕರಿಸುವುದರಿಂದ ಇದು ಗೋವು ಹೌದೆ ಅಲ್ಲವೆ, ಇದು ಘಟ ಹೌದೆ ಅಲ್ಲವೆ ಇತ್ಯಾದಿ ಆಯಾ ಭಿನ್ನ ಪ್ರಕಾರಕವಾದ ಆಯಾ ಸಂದೇಹಗಳು ಈ ಜ್ಞಾನಗಳಿಂದ ನಿವೃತ್ತವಾಗಲಾರವು.

'ಜ್ಞಾನವು ಸಂದೇಹ ನಿವರ್ತಕವಾಗದಿರುವುದು ಪ್ರಕಾರಗಳನ್ನು ವಿಷಯೀಕರಿಸ ದಿರುವುದರಿಂದಲ್ಲ, ಭಿನ್ನಧರ್ಮಿವಿಷಯಕವಾದ್ದರಿಂದ. ಪ್ರಕಾರವನ್ನು ವಿಷಯೀಕರಿಸದಿದ್ದರೂ ತದ್ಧರ್ಮಿವಿಷಯಕ ಜ್ಞಾನವು ತದ್ಧರ್ಮಿವಿಷಯಕಸಂದೇಹಕ್ಕೆ ನಿವರ್ತಕವಾಗಿಯೇ ತೀರುವುದು' ಎನ್ನುವುದು ಸರಿಯಲ್ಲ. 'ಇದಂ ದ್ರವ್ಯಂ' ಎಂಬ ಜ್ಞಾನಾನಂತರ 'ಇದು ಘಟ ಹೌದೇ ಅಲ್ಲವೆ' ಎಂಬ ಸಂದೇಹ ನಿವೃತ್ತವಾಗುವುದಿಲ್ಲ. 'ಅಯಂ ಘಟಃ' ಎಂದು ಪ್ರಕಾರ ಜ್ಞಾನಾನಂತರವೇ ಆ ಸಂದೇಹ ನಿವೃತ್ತವಾಗುವುದು. ಅದಕ್ಕೆ ಭಿನ್ನವಾದ ಆಯಾ ಪ್ರಕಾರಧರ್ಮಗಳನ್ನು ವಿಷಯೀಕರಿಸಿದರೆ ಅಖಂಡಾರ್ಥತ್ವವಿಲ್ಲವಾಗುತ್ತದೆ.

ಪ್ರಕಾರಧರ್ಮಗಳನ್ನು ತಾತ್ಪರ್ಯವಿಲ್ಲದಿರುವುದರಿಂದ ಬಿಡುವುದಾದರೆ ಅವುಗಳನ್ನು ಹೇಳುವ ಪ್ರಕೃಷ್ಟಾದಿಪದಗಳು ವ್ಯರ್ಥವಾಗುವುವು.

'ಪ್ರಕೃಷ್ಟಪದವು ಚಂದ್ರನಲ್ಲಿ ಅಪ್ರಕೃಷ್ಟನಕ್ಷತ್ರಾದಿ ವ್ಯಾವೃತ್ತಿಯನ್ನೂ, ಪ್ರಕಾಶಪದವು ಅಪ್ರಕಾಶಘಟಾದಿ ವ್ಯಾವೃತ್ತಿಯನ್ನೂ ಹೇಳುವುದರಿಂದ ಎಲ್ಲ ಪದಗಳೂ ಸಾರ್ಥಕವಾಗುವುವು' ಎನ್ನುವುದನ್ನು ಮುಂದೆ ನಿರಾಕರಿಸುತ್ತೇವೆ.

ಆದರಿಂದ ಪ್ರಕೃಷ್ಟಪದವೇ ಚಂದ್ರಸ್ವರೂಪವನ್ನು ಲಕ್ಷಣಯಾ ಹೇಳಬಲ್ಲುದು, ಪ್ರಕಾಶಪದ ಬೇರೆ ಏಕೆ? ಚಂದ್ರಪದವೇ ಚಂದ್ರಸ್ವರೂಪವನ್ನು ಹೇಳುವಾಗ ಪ್ರಕೃಷ್ಟಪದವೂ ಬೇಡ, ಪ್ರಕಾಶಪದವೂ ಬೇಡ ಎಂದಾದೀತು.



**एतेन ''प्रश्नोत्तरे तावचंद्रप्रातिपदिकार्थमात्रविषये । प्रकृष्टादि-विशेषणाश्रयभूता चासाधारणी विशेष्यव्यक्तिः चंद्रप्रातिपदिकार्थः, नतु तद्विशिष्टा । प्रकृष्टप्रकाशश्चंद्र इति सहप्रयोगाद्ययोगत् । विशेष्यव्यक्तिश्चाखंडेति अखंडार्थपरे प्रश्नोत्तरे'' इति निरस्तम्,**

**अस्या एवासाधारणव्यक्तेर्व्यावर्तकादिवैशिष्ट्यरूपेणासाधारण्ये-नाज्ञानेऽपि चंद्रप्रातिपदिकार्थत्वादिरूपेण प्रागेव ज्ञातत्वात् ।**

**एवं च गामानयेत्यादौ गोत्वस्यानयनेनेव प्रकृष्टत्वादेर्विधेयेन चंद्रप्रातिपदिकार्थत्वेनानन्वयेऽपि उद्देश्यत्वावच्छेदकत्वेन विवक्षित-त्वात्तद्वदेव विशिष्टार्थत्वं दुर्वारम् ।**

**अस्ति च पृथिवीत्ववती पृथिवीत्यादौ पृथिवीत्वस्य विधेयेन पृथिवीशब्दार्थत्वेनान्वयः। नहि पृथिवीत्वं न पृथिवीप्रातिपदिकार्थः । सहप्रयोगस्तु पृथिवीशब्दस्य तच्छब्देन व्यवहर्तव्यतापरत्वात् ।**

**तस्माद्धर्मिणश्चंद्रस्य सामान्यतो नक्षत्रादिव्यावर्तकव्यावृत्तिरूप-धर्मस्य च घटादौ प्रागेव ज्ञातत्वाद्विशिष्टविषये एव प्रश्नोत्तरे ।**

**न तु तद्विशिष्टेति** ।। प्रकृष्टत्वादिविशिष्टेत्यर्थः । तथाच तुल्यार्थत्वात् घटः कलश इत्यादिवत् सहाप्रयोगादिति भावः ।। **प्रागेव ज्ञातत्वादिति** ।। तथाच प्रश्नोत्तरयोर्न प्रातिपदिकार्थविषयत्वमिति भावः । ननु यदि प्रकृष्टादिवाक्यं विशिष्टपरं तदा प्रकृष्टत्वादिविशिष्टोद्देशेन चंद्रप्रातिपदिकार्थत्वविधाने विशिष्टान्वयिनो विशेषणान्वयित्वनियमेन प्रकृष्टत्वादावपि तदर्थत्वं स्यादित्याशंक्याह **एवंचेति** ।।

लक्षणवाक्ये विशिष्टस्योद्देश्यत्वे विशेषणस्यापि विधेयप्रातिपदिकार्थत्वा-न्वयोऽपि क्वचिदिष्ट इत्याह— **अस्ति चेति** ।। नन्वेवं तुल्यार्थत्वात्सहप्रयोगो न स्यादित्याशंक्याह— **सहप्रयोगस्त्विति** । **तच्छब्देनेति** ।। पृथिवीशब्देन पृथिवीतिव्यवहर्तव्यत्वस्य विवक्षितत्वादित्यर्थः । न तावच्चंद्रस्वरूपं प्रश्नविषयः । तस्य धर्मिज्ञानेन निश्चयात् । नापि नक्षत्रादिव्यावर्तकधर्मः तद्व्यावृत्तिर्वा । तयोरपि घटादौ निश्चयात् । तस्माद्व्यावर्तकधर्मवैशिष्ट्यस्य व्यावृत्तिवैशिष्ट्यस्य वा प्रश्नविषयत्वं वक्तव्यम् । प्रतिवचनस्य तु व्यावर्तकवैशिष्ट्यविषयत्वं सर्वत्र वक्तव्यमित्याह– **तस्मादिति** ।। इदं च यदा सामान्यतः किंचिच्चंद्रशब्दवाच्यमस्तीति निश्चित्य कश्चंद्र इति पृच्छति तदा । प्रत्यक्षतो ज्ञाने तु व्यावर्तकधर्मवैशिष्ट्यस्य वा

व्यावृत्तिवैशिष्ट्यस्य वा ज्ञातत्वेन तद्विषयकप्रश्नायोगात् । यदा तु प्रत्यक्षतो ज्योतिर्मंडलं सर्वं पश्यन्नेव कश्चंद्र इति पृच्छति तदा व्यक्तिविशेषे चंद्रशब्दवाच्यत्वमेव प्रश्नादिविषय इत्यवधेयम् ।



ಏತೇನ 'ಪ್ರಶ್ನೋತ್ತರೇ ತಾವತ್ ಚಂದ್ರಪ್ರಾತಿಪದಿಕಾರ್ಥ ಮಾತ್ರ ವಿಷಯೇ। ಪ್ರಕೃಷ್ಟಾದಿ ವಿಶೇಷಣಾಶ್ರಯಭೂತಾ ಚಾಸಾಧಾರಣೀ ವಿಶೇಷ್ಯವ್ಯಕ್ತಿಃ ಚಂದ್ರ ಪ್ರಾತಿಪದಿಕಾರ್ಥಃ, ನ ತು ತದ್ವಿಶಿಷ್ಟಾ। ಪ್ರಕೃಷ್ಟಪ್ರಕಾಶಶ್ಚಂದ್ರ ಇತಿ ಸಹ ಪ್ರಯೋಗಾದ್ಯ ಯೋಗಾತ್। ವಿಶೇಷ್ಯವ್ಯಕ್ತಿಶ್ಚಾಖಂಡೇತಿ, ಅಖಂಡಾರ್ಥಪರೇ ಪ್ರಶ್ನೋತ್ತರೇ' ಇತಿ ನಿರಸ್ತಂ ।

'ಪ್ರಶ್ನೆ ಮತ್ತು ಉತ್ತರಗಳು 'ಚಂದ್ರ' ಪ್ರಾತಿಪದಿಕಾರ್ಥಮಾತ್ರ ವಿಷಯದಲ್ಲಿ ಎನ್ನುವುದು ಸರ್ವಸಮ್ಮತ. 'ಚಂದ್ರ' ಪ್ರಾತಿಪದಿಕಾರ್ಥವು ಪ್ರಕೃಷ್ಟಾದಿವಿಶೇಷಣ ವಿಶಿಷ್ಟವ್ಯಕ್ತಿಯಲ್ಲ. ವಿಶಿಷ್ಟವ್ಯಕ್ತಿಯೇ 'ಚಂದ್ರ' ಪ್ರಾತಿಪದಿಕಾರ್ಥವೆನ್ನುವುದಾದರೆ 'ಪ್ರಕೃಷ್ಟಪ್ರಕಾಶ' ಪ್ರಾತಿಪದಿಕಕ್ಕೂ ಪ್ರಕೃಷ್ಟಾದಿವಿಶೇಷಣ ವಿಶಿಷ್ಟವ್ಯಕ್ತಿಯೇ ಅರ್ಥವಾಗಿರುವುದರಿಂದ ಅವೆರಡೂ ಪರ್ಯಾಯ ಪದಗಳೆನಿಸುವುದರಿಂದ 'ಪ್ರಕೃಷ್ಟಪ್ರಕಾಶಃ ಚಂದ್ರ' ಎಂದು ಜೊತೆಜೊತೆಯಾಗಿ ಅವುಗಳನ್ನು ಪ್ರಯೋಗ ಮಾಡುವುದು ಕೂಡಲಾರದು. ಆದರಿಂದ ಪ್ರಕೃಷ್ಟಾದಿ ವಿಶೇಷಣಕ್ಕೆ ಆಶ್ರಯಭೂತವಾದ ಅಸಾಧಾರಣ ವಿಶೇಷ್ಯವ್ಯಕ್ತಿಯೇ 'ಚಂದ್ರ' ಪ್ರಾತಿಪದಿಕಾರ್ಥ ಎನ್ನಬೇಕು. ವಿಶೇಷ್ಯವ್ಯಕ್ತಿಯು ಅಖಂಡ. ಹೀಗಾಗಿ ಪ್ರಶ್ನೆ ಹಾಗೂ ಉತ್ತರಗಳು ಅಖಂಡಾರ್ಥ ಪರವೆಂದೇ ಆಯಿತು' ಎಂದು ಕೆಲವರ ಆಕ್ಷೇಪವಿದೆ. ಅದೂ ಸರಿಯಲ್ಲ.

ಅಸ್ಯಾ ಏವಾಸಾಧಾರಣವ್ಯಕ್ತೇಃ ವ್ಯಾವರ್ತಕಾದಿ ವೈಶಿಷ್ಟ್ಯರೂಪೇಣ ಅಸಾಧಾರಣ್ಯೇನ ಅಜ್ಞಾನೇಽಪಿ ಚಂದ್ರಪ್ರಾತಿಪದಿಕಾರ್ಥತ್ವಾದಿರೂಪೇಣ ಪ್ರಾಗೇವ ಜ್ಞಾತತ್ವಾತ್।

ಏಕೆಂದರ ಪ್ರಶ್ನೆ ಮಾಡುವವನು ಈ ಅಸಾಧಾರಣ ವಿಶೇಷ್ಯವ್ಯಕ್ತಿಯನ್ನು ವ್ಯಾವರ್ತಕಧರ್ಮ ಅಥವಾ ವ್ಯಾವೃತ್ತಿ ವೈಶಿಷ್ಟ್ಯರೂಪದಿಂದ ವಿಶೇಷವಾಗಿ ತಿಳಿಯದಿದ್ದರೂ ಚಂದ್ರಪ್ರಾತಿಪದಿಕಾರ್ಥತ್ವ ರೂಪದಿಂದ ಸಾಮಾನ್ಯವಾಗಿ ತಿಳಿದೇ ಇರುತ್ತಾನೆ. ಆದರಿಂದ ಈ ಬಗ್ಗೆ ಪ್ರಶ್ನೆ ಕೂಡುವುದಿಲ್ಲ.

ಏವಂಚ ಗಾಮಾನಯೇತ್ಯಾದೌ ಗೋತ್ವಸ್ಯಾನಯನೇನೇವ ಪ್ರಕೃಷ್ಟತ್ವಾ ದೇರ್ವಿಧೇಯೇನ ಚಂದ್ರಪ್ರಾತಿಪದಿಕಾರ್ಥತ್ವೇನ ಅನನ್ವಯೇಽಪಿ, ಉದ್ದೇಶ್ಯತಾವಚ್ಛೇದ ಕತ್ವೇನ ವಿವಕ್ಷಿತತ್ವಾತ್ ತದ್ವದೇವ ವಿಶಿಷ್ಟಾರ್ಥತ್ವಂ ದುರ್ವಾರಂ।'

'ಪ್ರಕೃಷ್ಟಪ್ರಕಾಶಃ ಚಂದ್ರಃ' ಎಂಬಲ್ಲಿ ಪ್ರಕೃಷ್ಟಪ್ರಕಾಶತ್ವ ವಿಶಿಷ್ಟಾರ್ಥತ್ವವನ್ನು ಅಂಗೀಕರಿಸಲಾಗುವುದಿಲ್ಲ. ಏಕೆಂದರೆ ಪ್ರಕೃಷ್ಟಪ್ರಕಾಶತ್ವ ವಿಶಿಷ್ಟದಲ್ಲಿ ಚಂದ್ರತ್ವವನ್ನು ಅಂದರೆ ಚಂದ್ರ ಪ್ರಾತಿಪದಿಕಾರ್ಥತ್ವವನ್ನು ವಿಧಾನ ಮಾಡಿದರೆ ವಿಶಿಷ್ಟದಲ್ಲಿ ವಿಧಿನಿಷೇಧಗಳು ವಿಶೇಷಣದಲ್ಲಿಯೂ ಅನ್ವಯಿಸುವುದರಿಂದ ಪ್ರಕೃಷ್ಟಪ್ರಕಾಶತ್ವರೂಪವಿಶೇಷಣಕ್ಕೂ ಚಂದ್ರಪ್ರಾತಿಬಪದಿಕಾರ್ಥತ್ವರೂಪ ವಿಧೇಯಾನ್ವಯವನ್ನು ಒಪ್ಪಬೇಕಾಗುತ್ತದೆ. ಆದರೆ ಅದು ಕೂಡುವುದಿಲ್ಲ. ಪ್ರಕೃಷ್ಟಪ್ರಕಾಶತ್ವವು ಪ್ರಕೃಷ್ಟಪ್ರಕಾಶಪ್ರಾತಿಪದಿಕಾರ್ಥವೇ ಹೊರತು ಚಂದ್ರಪ್ರಾತಿಪದಿಕಾರ್ಥವಲ್ಲ. ಅದರಿಂದ ಪ್ರಕೃಷ್ಟಪ್ರಕಾಶಶ್ಚಂದ್ರ ಎಂಬಲ್ಲಿ ಪ್ರಕೃಷ್ಟಪ್ರಕಾಶತ್ವವಿಶಿಷ್ಟವು ವಿವಕ್ಷಿತವಲ್ಲ. ಅದನ್ನು ಬಿಟ್ಟು ಧರ್ಮಿಸ್ವರೂಪವನ್ನೇ ವಾಕ್ಯವು ತಾತ್ಪರ್ಯದಿಂದ ವಿಷಯೀಕರಿಸುತ್ತದೆ ಎನ್ನಬೇಕು' ಎಂದು ಆಕ್ಷೇಪ ಬಂದರೆ ಇದು ಸಮಾಧಾನ—

'ಗಾಂ ಆನಯ' 'ಹಸುವನ್ನು ತಾ' ಎಂಬಲ್ಲಿ ಗೋಪ್ರಾತಿಪದಿಕಾರ್ಥವು ಗೋತ್ವವಿಶಿಷ್ಟ. ಅದರಲ್ಲಿ ಆನಯನಾನ್ವಯ. ಗೋವಿನಲ್ಲಿ ಆನಯನಾನ್ವಯ ಕೂಡುತ್ತದೆ, ಗೋತ್ವದಲ್ಲಿ ಆನಯನಾನ್ವಯ ಕೂಡುವುದಿಲ್ಲ. ಆದರೆ ಈ ಕಾರಣದಿಂದ ಇಲ್ಲಿ ಗೋತ್ವರೂಪ ವಿಶೇಷಣವನ್ನು ಬಿಟ್ಟು ಕೇವಲ ವಿಶೇಷ್ಯ ಗೋವ್ಯಕ್ತಿಯಲ್ಲಿ ಲಕ್ಷಣಾ ಮಾಡುವುದಿಲ್ಲ. ಗೋವಿನಲ್ಲಿ ಆನಯನಾನ್ವಯ ಮಾಡುವಾಗ ಉದ್ದೇಶ್ಯವಾದ ಗೋವಿನಲ್ಲಿ ಉದ್ದೇಶ್ಯತಾವಚ್ಛೇದಕವಾಗಿ ಗೋತ್ವವನ್ನು ಇಟ್ಟುಕೊಳ್ಳುತ್ತೇವೆ. ಹಾಗೇ ಪ್ರಕೃಷ್ಟಪ್ರಕಾಶಶ್ಚಂದ್ರಃ ಎಂಬಲ್ಲಿಯೂ ಚಂದ್ರಪ್ರಾತಿಪದಿಕಾರ್ಥತ್ವ ವಿಧಾನಮಾಡುವಾಗ ಉದ್ದೇಶ್ಯವಾದ ಪ್ರಕೃಷ್ಟಪ್ರಕಾಶತ್ವವಿಶಿಷ್ಟದಲ್ಲಿ ಉದ್ದೇಶ್ಯತಾವಚ್ಛೇದಕವಾಗಿ ಪ್ರಕೃಷ್ಟಪ್ರಕಾಶತ್ವರೂಪವಿಶೇಷಣವು ವಿವಕ್ಷಿತವೇ ಆಗಿದೆ. ಹೀಗಾಗಿ ಈವಾಕ್ಯ ವಿಶಿಷ್ಟಪರವೇ ಆಗಿದೆ ಹೊರತು ಅಖಂಡಾರ್ಥಪರವಲ್ಲ.

**'ಅಸ್ತಿ ಚ 'ಪೃಥಿವೀತ್ವವತೀ ಪೃಥಿವೀ' ಇತ್ಯಾದೌ ಪೃಥಿವೀತ್ವಸ್ಯ ವಿಧೇಯೇನ ಪೃಥಿವೀಶಬ್ದಾರ್ಥತ್ವೇನ ಅನ್ವಯಃ। ನ ಹಿ ಪೃಥಿವೀತ್ವಂ ನ ಪೃಥಿವೀಪ್ರಾತಿಪದಿಕಾರ್ಥಃ। ಸಹ ಪ್ರಯೋಗಸ್ತು ಪೃಥಿವೀಶಬ್ದಸ್ಯ ತಚ್ಛಬ್ದೇನ ವ್ಯವಹರ್ತವ್ಯತಾಪರತ್ವಾತ್ '**

ಲಕ್ಷಣ ವಾಕ್ಯದಲ್ಲಿ ವಿಶಿಷ್ಟವು ಉದ್ದೇಶವಾಗಿರುವಾಗ ವಿಶೇಷಣಕ್ಕೂ ಕೂಡ ವಿಧೇಯವಾದ ಪ್ರಾತಿಪದಿಕಾರ್ಥತ್ವದ ಅನ್ವಯ ಕೆಲವೆಡೆ ಇರುತ್ತದೆ. ಉದಾ: 'ಪೃಥಿವೀತ್ವವತೀ ಪೃಥಿವೀ' ಎಂದು ಪೃಥಿವಿಗೆ ಪೃಥಿವೀತ್ವವನ್ನು ಲಕ್ಷಣವಾಗಿ ಹೇಳುವ ವಾಕ್ಯ. ಇಲ್ಲಿ ವಿಧೇಯವಾದ ಪೃಥಿವೀಶಬ್ದಾರ್ಥತ್ವದ ಅನ್ವಯವು ಉದ್ದೇಶ್ಯ ವಿಶೇಷಣವಾದ ಪೃಥಿವೀತ್ವಕ್ಕೂ ಉಂಟು. ಪೃಥಿವೀತ್ವವು ಪೃಥಿವೀಶಬ್ದವಾಚ್ಯವಲ್ಲ ಎನ್ನಲಾಗದು ತಾನೆ? ಹಾಗಾದರೆ 'ಪೃಥಿವೀತ್ವವತೀ' 'ಪೃಥಿವೀ' ಶಬ್ದಗಳೆರಡೂ ಏಕಾರ್ಥಕ, ಪರ್ಯಾಯವಾಗುವುದರಿಂದ 'ಪೃಥಿವೀತ್ವವತೀ ಪೃಥಿವೀ' ಎಂದು ಸಹಪ್ರಯೋಗ ಮಾಡುವುದು ಹೇಗೆ? ಎಂಬ ಪ್ರಶ್ನೆ ಬಂದರೆ, ಸಮಾಧಾನ—ಇಲ್ಲಿ 'ಪೃಥಿವೀ' ಶಬ್ದವು 'ಪೃಥಿವೀಶಬ್ದದಿಂದ ವ್ಯವಹರಿಸಲು ಯೋಗ್ಯ' ಎಂಬ ಅರ್ಥವಿವಕ್ಷೆಯಿಂದ

ಪ್ರಯುಕ್ತವಾಗುತ್ತದೆ. 'ಪೃಥಿವೀತ್ವವತ್ತಾದ ಪದಾರ್ಥವು ಪೃಥಿವೀ ಎಂದು ವ್ಯವಹರಿಸಲು ಯೋಗ್ಯ' ಎಂದು ವಾಕ್ಯದ ಅರ್ಥ.

ಇಲ್ಲಿ ಸಿದ್ಧಿಕಾರನ ಆಕ್ಷೇಪ—'ಪೃಥಿವೀ' ಎಂದರೆ 'ಪೃಥಿವೀತ್ವ ಜಾತಿ ವಿಶಿಷ್ಟ' ಎಂದು ತಿಳಿಯದಿದ್ದವನಿಗೆ 'ಪೃಥಿವೀತ್ವ' ಏನೆಂದು ತಿಳಿಯದು. ಆದರಿಂದ 'ಪೃಥಿವೀತ್ವವತೀ ಪೃಥಿವೀ' ಎಂಬ ಲಕ್ಷಣವಾಕ್ಯದಲ್ಲಿ ಪೃಥಿವೀಶಬ್ದವಾಚ್ಯತ್ವವೆಂಬ ವಿಧೇಯವನ್ನು ಪೃಥಿವೀತ್ವದಲ್ಲಿ ಅವನು ಅನ್ವಯಮಾಡುವುದಿಲ್ಲ. ಅನ್ವಯ ಮಾಡಬೇಕೆಂದರೆ 'ಪೃಥಿವೀತ್ವಜಾತಿ ವಿಶಿಷ್ಟವು ಪೃಥಿವೀಶಬ್ದಾರ್ಥ' ಎಂದು ಆತ ಮೊದಲೇ ತಿಳಿದಿರಬೇಕು. ಆಗ 'ಪೃಥಿವೀತ್ವವತೀ ಪೃಥಿವೀ' ಎಂಬ ಲಕ್ಷಣವಾಕ್ಯವೇ ಅವನಿಗೆ ವ್ಯರ್ಥವಾಗುತ್ತದೆ. ಆದರಿಂದ 'ಪೃಥಿವೀ' ಎಂದರೇನೆಂದು ಪ್ರಶ್ನೆಗೆ ಜಲಾದಿ ವ್ಯಾವೃತ್ತ ಗಂಧಸಮಾನಾಧಿಕರಣಜಾತಿ ಮತೀ ಪೃಥಿವೀ' ಎಂದು ಉತ್ತರ ಹೇಳಬೇಕು. ಆಗ ಪೃಥಿವೀಶಬ್ದವಾಚ್ಯತ್ವರೂಪ ವಿಧೇಯವು ಗಂಧಸಮಾನಾಧಿಕರಣ ಜಾತಿಮತ್ವದಲ್ಲಿ ಅನ್ವಯಿಸುವುದಿಲ್ಲ. ಆದರಿಂದ ಜಾತಿಮತ್ವರೂಪ ವಿಶೇಷಣವನ್ನು ಬಿಟ್ಟು ಕೇವಲ ಸ್ವರೂಪದಲ್ಲಿಯೇ ಲಕ್ಷಣಾ ಮಾಡಬೇಕಾಗುವುದರಿಂದ ಅಖಂಡಾರ್ಥತ್ವವೆ ಸಿದ್ಧವಾಗುತ್ತದೆ'.

—ಈ ಆಕ್ಷೇಪ ಸರಿಯಲ್ಲ. 'ಪೃಥಿವೀತ್ವಜಾತಿವಿಶಿಷ್ಟವು ಪೃಥಿವೀಶಬ್ದ ವಾಚ್ಯವೆಂದು ತಿಳಿದರೆ ಮಾತ್ರ ಪೃಥಿವೀತ್ವವೇನೆಂದು ತಿಳಿಯುತ್ತದೆ' ಎನ್ನುವುದೇ ಸರಿಯಲ್ಲ. 'ಪೃಥಿವೀತ್ವವು 'ಪೃಥಿವೀತ್ವ'ಶಬ್ದವಾಚ್ಯ' ಎಂದು ಆಪ್ತೋಪದೇಶದಿಂದ ಶಕ್ತಿಗ್ರಹವಾಗುವುದರಿಂದ ಅದಕ್ಕೆ ಪೃಥಿವೀಶಬ್ದಶಕ್ತಿಗ್ರಹ ಆವಶ್ಯಕವಾಗುವುದಿಲ್ಲ. ಹೀಗಾಗಿ 'ಪೃಥಿವೀತ್ವವತೀ ಪೃಥಿವೀ' ಎಂಬ ಲಕ್ಷಣವಾಕ್ಯದಲ್ಲಿ 'ಪೃಥಿವೀತ್ವ' ಶಬ್ದದಿಂದ ಪೃಥಿವೀತ್ವದ ಉಪಸ್ಥಿತಿ ಉಂಟಾಗುತ್ತದೆ. ಆದರಲ್ಲಿ ಪೃಥಿವೀಶಬ್ದವಾಚ್ಯತ್ವರೂಪ ವಿಧೇಯಾನ್ವಯಕ್ಕೆ ಯಾವ ಬಾಧಕವೂ ಇಲ್ಲ. ಆದರಿಂದ ಈ ಲಕ್ಷಣವಾಕ್ಯ ಪೃಥಿವೀತ್ವವಿಶಿಷ್ಟ ಪರವೇ ಹೊರತು ಅಖಂಡಾರ್ಥಪರವಲ್ಲ.

'ಪೃಥಿವೀತ್ವ ವಿಶಿಷ್ಟವು ಪೃಥಿವೀಶಬ್ದವಾಚ್ಯವಾದರೆ 'ಪೃಥಿವೀತ್ವವತೀ' 'ಪೃಥಿವೀ' ಶಬ್ದಗಳು ಪರ್ಯಾಯವಾಗುವುದರಿಂದ ಸಹಪ್ರಯೋಗವನ್ನು ಕೂಡಿಸಲು 'ಪೃಥಿವೀ' ಶಬ್ದಕ್ಕೆ 'ಪೃಥಿವಿ ಎಂದು ವ್ಯವಹರಿಸಲು ಯೋಗ್ಯ' ಎಂದು ಜಹಲ್ಲಕ್ಷಣಾ ಮಾಡಬೇಕಾಗುತ್ತದೆ. ಆದಕ್ಕಿಂತ ಸ್ವರೂಪಲಕ್ಷಣಾ ಒಳ್ಳೆಯದು. ಅದು ಜಹದಜಹಲ್ಲಕ್ಷಣಾ. ಆದರಿಂದ ಅಖಂಡಾರ್ಥತ್ವವೇ ಯುಕ್ತ' ಎಂದೂ ಅವನ ಆಕ್ಷೇಪವಿದೆ.

ಆದರೆ ಸ್ವರೂಪಲಕ್ಷಣಾ ಮಾಡಿದರೆ ಪ್ರಶ್ನೆ ಮಾಡಿದವನಿಗೆ ಸಂದೇಹನಿವರ್ತಕ ವಾಗದಿರುವುದರಿಂದ ಅದು ವ್ಯರ್ಥ. ಜಹಲ್ಲಕ್ಷಣೆಯೇ ಯುಕ್ತ.

**'ತಸ್ಮಾದ್ ಧರ್ಮಿಣಶ್ಚಂದ್ರಸ್ಯ ಸಾಮಾನ್ಯತೋ ಜ್ಞಾತತ್ವಾತ್ ನಕ್ಷತ್ರಾದಿ ವ್ಯಾವರ್ತಕ ವ್ಯಾವೃತ್ತಿರೂಪಧರ್ಮಸ್ಯಚ ಘಟಾದೌ ಪ್ರಾಗೇವ ಜ್ಞಾತತ್ವಾದ್ ವಿಶಿಷ್ಟ ವಿಷಯ ಏವ ಪೃಚ್ಛ್ಯತೇ'**

'ಪ್ರಶ್ನೆಯಲ್ಲಿಯೂ ಉತ್ತರದಲ್ಲಿಯೂ ಅಸಾಧಾರಣ ಧರ್ಮ ಮಾತ್ರ ಪರತ್ವವನ್ನೇಕೆ ಹೇಳಬಾರದು? ಅಸಾಧಾರಣ ಧರ್ಮ ವಿಶಿಷ್ಟಪರತ್ವ ಅನಾವಶ್ಯಕ. ಅದರಿಂದ ವಿಶಿಷ್ಟಾರ್ಥತ್ವ ಯುಕ್ತವಲ್ಲ.' ಎಂಬ ಆಕ್ಷೇಪಕ್ಕೆ, ತತ್ತ್ವೋದ್ಯೋತದಲ್ಲಿ ಶ್ರೀಮದಾಚಾರ್ಯರು, 'ನಕ್ಷತ್ರಾದಿವ್ಯತಿರೇಕ ಮಾತ್ರಸ್ಯಾಪಿ ಸಿದ್ಧತ್ವಾನ್ನ ವ್ಯತಿರೇಕಮಾತ್ರೇ' ಎಂದು ಉತ್ತರ ನೀಡಿದ್ದಾರೆ. ಅದರ ಅಭಿಪ್ರಾಯ ಹೀಗೆ— ಚಂದ್ರಸ್ವರೂಪವಂತೂ ಪ್ರಶ್ನೆಗೆ ವಿಷಯವಲ್ಲ. ಅದು ಧರ್ಮಿಜ್ಞಾನದಿಂದಲೇ ನಿಶ್ಚಿತ ವಾಗಿದೆ. ನಕ್ಷತ್ರಾದಿ ವ್ಯಾವರ್ತಕ ಧರ್ಮವಾಗಲಿ ನಕ್ಷತ್ರಾದಿ ವ್ಯಾವೃತ್ತಿಯಾಗಲಿ ಪ್ರಶ್ನವಿಷಯವಲ್ಲ. ಅವು ಕೂಡ ಘಟಾದಿಗಳಲ್ಲಿ ನಿಶ್ಚಿತವೇ ಆಗಿವೆ. ಘಟಾದಿಗಳಲ್ಲಿ ಕಂಬುಗ್ರೀವಾದಿಮತ್ವರೂಪ ಧರ್ಮಗಳಿವೆ. ಅವು ನಕ್ಷತ್ರಾದಿ ವ್ಯಾವರ್ತಕವಾಗಿವೆ. ಹೀಗೆ ಸಾಮಾನ್ಯತಃ ನಕ್ಷತ್ರಾದಿ ವ್ಯಾವರ್ತಕವೂ ವ್ಯಾವೃತ್ತಿಯೂ ಘಟಾದಿಗಳಲ್ಲಿ ಸಿದ್ಧವಾಗಿರುವುದರಿಂದ ನಕ್ಷತ್ರಾದಿ ವ್ಯಾವರ್ತಕ ವಿಷಯದಲ್ಲಿಯೂ ಪ್ರಶ್ನೆ ಇಲ್ಲ. ಚಂದ್ರನಲ್ಲಿ ನಕ್ಷತ್ರಾದಿವ್ಯಾವರ್ತಕ ವೈಶಿಷ್ಟ್ಯ ಹೇಗೆ, ಯಾವ ಅಸಾಧಾರಣ ಧರ್ಮವಿರುವುದರಿಂದ ಚಂದ್ರನು ವ್ಯಾವರ್ತಕ ವಿಶಿಷ್ಟನಾಗಿದ್ದಾನೆ ಎಂದು ವ್ಯಾವರ್ತಕ ಧರ್ಮವಿಶಿಷ್ಟದ ಬಗ್ಗೆಯೆ, ವ್ಯಾವೃತ್ತಿವಿಶಿಷ್ಟದ ಬಗ್ಗೆಯೇ ಪ್ರಶ್ನೆ, ಉತ್ತರಗಳು ಎನ್ನಬೇಕು. ವ್ಯಾವರ್ತಕಧರ್ಮಸ್ವರೂಪ ಮಾತ್ರದ ಬಗ್ಗೆ ಎನ್ನಬಾರದು.

ಇಲ್ಲಿ ವಿಶೇಷಾಂಶ— ಕಃ ಚಂದ್ರಃ? ಯಾವ ಅಸಾಧಾರಣ ಧರ್ಮವಿಶಿಷ್ಟನು ಚಂದ್ರ? ಎಂಬ ಈ ಪ್ರಶ್ನೆಯು ಸಾಮಾನ್ಯತಃ 'ಚಂದ್ರಶಬ್ದಕ್ಕೆ ಒಂದು ಅರ್ಥ ಇರುತ್ತದೆ' ಎಂದು ನಿಶ್ಚಯ ಮಾತ್ರ ಮಾಡಿಕೊಂಡು ಮಾಡುವ ಪ್ರಶ್ನೆ. ಪ್ರತ್ಯಕ್ಷವಾಗಿ ಜ್ಯೋತಿರ್ಮಂಡಲವನ್ನು ಕಾಣುತ್ತಿದ್ದರೆ ನಕ್ಷತ್ರಾದಿ ವ್ಯಾವರ್ತಕಧರ್ಮ ವೈಶಿಷ್ಟ್ಯವೂ ವ್ಯಾವೃತ್ತಿ ವೈಶಿಷ್ಟ್ಯವೂ ಆಗಲೇ ತಿಳಿದಿರುವುದರಿಂದ ಅದರ ಬಗ್ಗೆ ಪ್ರಶ್ನೆ ಕೂಡುವುದಿಲ್ಲ. ಅದರಿಂದ ಜ್ಯೋತಿರ್ಮಂಡಲವನ್ನು ಪ್ರತ್ಯಕ್ಷ ಕಾಣುತ್ತಲೇ 'ಯಾರು ಚಂದ್ರ?' ಎಂದು ಕೇಳಿದರೆ ಅದು 'ಇಲ್ಲಿ ಯಾವ ಆಕಾಶಗೋಲವು ಚಂದ್ರಶಬ್ದವಾಚ್ಯವಾಗಿದೆ?' ಎಂದೇ ಪ್ರಶ್ನೆ, 'ಈ ಆಕಾಶಗೋಲವು ಚಂದ್ರ ಶಬ್ದವಾಚ್ಯ' ಎಂದು ಉತ್ತರವೆಂದು ತಿಳಿಯಬೇಕು.



**तत्र यदि प्रष्ट्रा व्यावृत्तिवैशिष्ट्यमेव साक्षाद् बुभुत्सितं तदा वक्त्रा व्यावृत्तेरस्मादस्माच्च व्यावृत्त इति साक्षाज्जन्मशतेनापि दुर्बोधत्वात् धूमे उक्तेऽग्निमिव व्यावर्तके उक्ते व्यावृत्तिं ज्ञास्यतीति भावेन व्यवर्तकवैशिष्ट्यमेव तात्पर्यतः प्रतिपादयति ।**

**नह्यग्निबोधनार्थस्य धूमोऽस्तीतिवाक्यस्य न धूमे तात्पर्यं । न वा यागाक्षेपकस्य ''यदाग्नेयादि'' वाक्यस्य न द्रव्यदेवतासंबंधे ।**

**यदि तु प्रष्टैव व्यावृत्तिःप्रतियोगिनामानंत्येन साक्षात्प्रष्टुं वक्तुं चाशक्येति ज्ञात्वा कश्चंद्र इत्यनया वाचोभंग्या कैर्विशेषणैर्विशिष्ट इति पृष्टं, तदा सुतरां प्रश्नोत्तरे व्यावर्तकवैशिष्ट्यपरे इति न काप्यखंडार्थत्वम् ।**

ननु प्रतिवचने नायं नियमः। प्रश्नानुरोधेन क्वचिद्व्यावृत्तिवैशिष्ट्यमात्रबोधनसंभवादित्यत आह **तत्रेति। यदाग्नेय इति।।** अस्य द्रव्यदेवतासंबंधे तात्पर्याभावे द्रव्यदेवताविशिष्टकर्मविधानं न स्यादिति भावः ।

एतच्च नामधेयपादे चिंतितम्। ''तद्गुणास्तु विधीयेरन्नविभागाद्विधानार्थे न चेदन्येन शिष्टाः।'' (जै.सू:अ.१पा.४,अधि७,सू.९) ''यदाग्नेयोऽष्टाकपालोऽमावास्यायां च पौर्णमास्यां चाच्युतो भवति'' इत्यत्र किमाग्नेयशब्दः कर्मनामधेयमुत गुणविधिरिति संशये, अष्टाकपालशब्दितस्य अष्टसु कपालेषु संस्कृतस्य पुरोडाशद्रव्यस्याग्नेर्देवतायाश्च विधाने अनेकगुणविधानरूपगौरवप्रसंगात् द्रव्यमात्रविशिष्टो यगो विधीयते। आग्नेयपदं तु याज्यानुवाक्याकांडे अस्य यागस्य ''अग्निर्मूर्धा दिवः ककुत्'' ''भुवो यज्ञस्य रजसश्च नेता'' इति अग्निदैवत्ययाज्यानुवाक्यायुगलपाठात् तल्लब्धाग्निदैवत्यत्वरूपप्रवृत्तिनिमित्तं कर्मनामधेयमिति पूर्वः पक्षः। सिद्धान्तस्तु यदाग्नेयवाक्ये यागो न श्रूयत इति द्रव्यदेवतासंबंधेन यागाविनाभूतेनाक्षेप्यः। आक्षिप्ते च यागे मंत्रापेक्षायां मंत्रान्वयः। अतो मंत्रान्वयात् प्रागेव यजिकल्पनाद्देवतोपस्थितेर्वक्तव्यत्वात् आग्नेयशब्दो गुणविधिरिति ।।



**'ತತ್ರ ಯದಿ ಪ್ರಷ್ಟಾ ವ್ಯಾವೃತ್ತಿವೈಶಿಷ್ಟ್ಯಮೇವ ಸಾಕ್ಷಾದ್ ಬುಭುತ್ಸಿತಂ ತದಾ ವಕ್ತಾ ವ್ಯಾವೃತ್ತೇಃ 'ಅಸ್ಮಾದಸ್ಮಾಚ್ಚ ವ್ಯಾವೃತ್ತ' ಇತಿ ಸಾಕ್ಷಾತ್ ಜನ್ಮಶತೇನಾಪಿ ದುರ್ಬೋಧತ್ವಾತ್, ಧೂಮೇ ಉಕ್ತೇ ಅಗ್ನಿಮಿವ ವ್ಯಾವರ್ತಕೇ ಉಕ್ತೇ ವ್ಯಾವೃತ್ತಿಂ ಜ್ಞಾಸ್ಯತೀತಿ ಭಾವೇನ ವ್ಯಾವರ್ತಕ ವೈಶಿಷ್ಟ್ಯಮೇವ ತಾತ್ಪರ್ಯತಃ ಪ್ರತಿಪಾದಯತಿ।'**

ಪ್ರಶ್ನೆ ಮಾಡುವವನು ವ್ಯಾವೃತ್ತಿ ವೈಶಿಷ್ಟ್ಯವನ್ನೇ ನೇರವಾಗಿ ತಿಳಿಯಲು ಬಯಸಿದರೆ ಆಗ ಉತ್ತರ ಹೇಳುವವನು 'ಚಂದ್ರನು ಇದಕ್ಕಿಂತ ಭಿನ್ನ ಇದಕ್ಕಿಂತ ಭಿನ್ನ' ಎಂದು ನೇರವಾಗಿ ವ್ಯಾವೃತ್ತಿಯನ್ನು ನೂರು ಜನ್ಮವೆತ್ತಿದರೂ ಹೇಳಿ ಮುಗಿಸಲಾರ. ಆದರಿಂದ ಹೊಗೆ ಇದೆ ಎಂದು

ಹೇಳಿದರೆ ಬೆಂಕಿ ಇದೆ ಎಂದು ತಿಳಿಯುವಂತೆ ವ್ಯಾವರ್ತಕ ಧರ್ಮವನ್ನು ಹೇಳಿದರೆ ವ್ಯಾವೃತ್ತಿಯನ್ನು ಈತ ತಾನೆ ತಿಳಿಯುತ್ತಾನೆ' ಎಂಬ ಅಭಿಪ್ರಾಯದಿಂದ ವ್ಯಾವರ್ತಕ ವೈಶಿಷ್ಟ್ಯವನ್ನೆ ತಾತ್ಪರ್ಯಪೂರ್ವಕವಾಗಿ ಬೋಧಿಸುತ್ತಾನೆ.

**'ನ ಹ್ಯಗ್ನಿ ಬೋಧನಾರ್ಥಸ್ಯ ಧೂಮೋಽಸ್ತೀತಿ ವಾಕ್ಯಸ್ಯ ನ ಧೂಮೇ ತಾತ್ಪರ್ಯಂ। ನ ವಾ ಯಾಗಾಕ್ಷೇಪಕಸ್ಯ ಯದಾಗ್ನೇಯಾದಿ ವಾಕ್ಯಸ್ಯ ನ ದ್ರವ್ಯದೇವತಾ ಸಂಬಂಧೇ।'**

ಬೆಂಕಿ ಇದೆ ಎಂದು ತಿಳಿಸುವ ಉದ್ದೇಶದಿಂದ 'ಹೊಗೆ ಇದೆ' ಎಂದು ಹೇಳಿದರೆ ಆ ವಾಕ್ಯಕ್ಕೆ ಹೊಗೆಯ ವಿಷಯದಲ್ಲಿ ತಾತ್ಪರ್ಯವಿಲ್ಲ ಎನ್ನಲಾಗದು. ಬೆಂಕಿ ಇದೆ ಎಂದು ತಿಳಿಯುವುದು ಹೊಗೆಯಿಂದ ತಾನೆ? ಯಾಗವನ್ನು ವಿಧಿಸುವ 'ಯದಾಗ್ನೇಯೋ' ಇತ್ಯಾದಿ ವಾಕ್ಯಕ್ಕೆ ದ್ರವ್ಯದೇವತಾ ಸಂಬಂಧದಲ್ಲಿ ತಾತ್ಪರ್ಯವಿಲ್ಲವೆನ್ನಲಾಗದು. ದೇವತೋದ್ದೇಶೇನ ದ್ರವ್ಯತ್ಯಾಗವೇ ಯಾಗವಾದ್ದರಿಂದ ದ್ರವ್ಯದೇವತಾ ಸಂಬಂಧದಲ್ಲಿ ತಾತ್ಪರ್ಯವಿಲ್ಲವಾದರೆ ದ್ರವ್ಯದೇವತಾ ವಿಶಿಷ್ಟಯಾಗ ವಿಧಾನವೇ ಕೂಡಲಾರದು.

ಇದನ್ನು ನಾಮಧೇಯಪಾದದಲ್ಲಿ (1.4.7) ಪೂರ್ವಮೀಮಾಂಸೆಯಲ್ಲಿ ವಿಚಾರ ಮಾಡಿದ್ದಾರೆ. 'ತದ್‌ಗುಣಾಸ್ತು ವಿಧೇಯೇರನ್ ಅವಿಭಾಗಾದ್ ವಿಧಾನಾರ್ಥೇ ನ ಚೇದನ್ಯೇನ ಶಿಷ್ಟಾಃ' 'ಯಾಗವೂ ಅದರ ದ್ರವ್ಯದೇವತೆಗಳೂ ಆಗ್ನೇಯ ವಾಕ್ಯದಲ್ಲಿ ಜೊತೆಗೇ ವಿಹಿತವಾಗಬಹುದು. ವಿಧಾಯಕ ಲಿಙ್‌ಪ್ರತ್ಯಯದಲ್ಲಿ ಇದರದೇ ವಿಧಿ, ಇದರದಲ್ಲ ಎಂಬ ವ್ಯವಸ್ಥೆ ಏನಿಲ್ಲ. ಬೇರೆ ವಾಕ್ಯದಿಂದ ವಿಹಿತವಾಗಿಲ್ಲದಿದ್ದರೆ ಇದು ಹೀಗೆ.' ಎಂದು ಸೂತ್ರಾರ್ಥ.

'ಯದಾಗ್ನೇಯೋಽಷ್ಟಾಕಪಾಲೋಽಮಾವಾಸ್ಯಾಯಾಂ ಚ ಪೌರ್ಣಮಾಸ್ಯಾಂ ಚಾಚ್ಯುತೋ ಭವತಿ' ಎಂದು ದರ್ಶಪೂರ್ಣಮಾಸಪ್ರಕರಣದಲ್ಲಿ ಬರುವ ಶ್ರುತಿಯಲ್ಲಿ ಆಗ್ನೇಯ ಶಬ್ದವು ಕರ್ಮದ ನಾಮಧೇಯವೇ ಅಥವಾ ದೇವತಾರೂಪ ಗುಣವಿಧಿಯೆ? ಎಂದು ಸಂಶಯ ಬಂದಾಗ 'ಅಷ್ಟಾಕಪಾಲ' ಎಂಟು ಘಟಕಪಾಲಗಳಲ್ಲಿ ಪಾಕ ಮಾಡಿದ ಪುರೋಡಾಶ ರೂಪ ಹವಿಸ್ಸೆಂಬ ದ್ರವ್ಯವನ್ನೂ 'ಆಗ್ನೇಯ' ಎಂದು ಅಗ್ನಿ ಎಂಬ ದೇವತೆಯನ್ನೂ ವಿಧಾನ ಮಾಡುವ ಪಕ್ಷದಲ್ಲಿ ಅನೇಕ ಗುಣವಿಧಾನರೂಪವಾದ ಗೌರವ ದೋಷ ಬರುತ್ತದೆ. ಆದರಿಂದ ಅಷ್ಟಾಕಪಾಲ ದ್ರವ್ಯ ಮಾತ್ರ ಯುಕ್ತವಾದ ಯಾಗ ವಿಹಿತವಾಗುತ್ತದೆ. 'ಆಗ್ನೇಯ' ಎಂದು ಈ ಯಾಗಕ್ಕೆ ಹೆಸರು. ಹೊರತು ಅಗ್ನಿದೇವತಾರೂಪ ಗುಣವನ್ನು ವಿಧಾನಮಾಡುವುದಿಲ್ಲ. ಯಾಜ್ಯಾ ಮತ್ತು ಅನುವಾಕ್ಯಾ ಮಂತ್ರಗಳ ಸಂಗ್ರಹರೂಪವಾದ ವೇದದ ಕಾಂಡದಲ್ಲಿ 'ಅಗ್ನಿರ್ಮೂರ್ಧಾ ದಿವಃ ಕಕುತ್' 'ಭುವೋ ಯಜ್ಞಸ್ಯ ರಜಸಶ್ಚ ನೇತಾ' ಎಂದು ಅಗ್ನಿದೇವತಾಕವಾದ ಎರಡು ಯಾಜ್ಯಾ-ಅನುವಾಕ್ಯಾಮಂತ್ರಗಳಿರುವುದರಿಂದ ಅದರ ಬಲದಿಂದ ಈ ಯಾಗನಾಮಧೇಯಕ್ಕೆ ಅಗ್ನಿಯು ದೇವತೆ ಎಂದು ಪ್ರವೃತ್ತಿನಿಮಿತ್ತವು ತಿಳಿಯುತ್ತದೆ. ಅದನ್ನು ತಿಳಿಸುವ ಆಗ್ನೇಯ ಶಬ್ದವು ಈ ಯಾಗದ ನಾಮಧೇಯವಾಗಿದೆ ಎಂದು ಪೂರ್ವಪಕ್ಷ.

ಸಿದ್ಧಾಂತ ಹೀಗೆ—'ಯದಾಗ್ನೇಯೋಽಷ್ಟಾಕಪಾಲೋ' ಎಂಬ ವಾಕ್ಯದಲ್ಲಿ ಅಗ್ನಿದೇವತಾಕ ಅಷ್ಟಾಕಪಾಲ ದ್ರವ್ಯವು ಉಕ್ತವಾಗಿದೆ ಹೊರತು, ಆ ದ್ರವ್ಯದಿಂದ ಯಾಗಮಾಡಬೇಕೆಂದು ಹೇಳಿಲ್ಲ. ಆದರೆ ದ್ರವ್ಯ ಅಗ್ನಿದೇವತಾಕವಾಗಬೇಕಾದರೆ ಯಾಗ ಆವಶ್ಯಕ. ದೇವತೆಗೆ ದ್ರವ್ಯ ತ್ಯಾಗ ಮಾಡುವುದೇ ಯಾಗವಾದ್ದರಿಂದ ಅಂಥ ಯಾಗವಿಲ್ಲದೆ ದೇವತೆಗೆ ದ್ರವ್ಯದಿಂದ ಬೇರೆ ಸಂಬಂಧವಿಲ್ಲ. ದ್ರವ್ಯದೇವತಾ ಸಂಬಂಧವು ಯಾಗದಿಂದ ಅವಿನಾಭೂತವಾಗಿದೆ. ಆದರಿಂದ ಅಗ್ನಿಯಿಂದ ಅವಿನಾಭೂತವಾದ ಧೂಮದಿಂದ ಅಗ್ನಿಯಂತೆ, ಯಾಗದಿಂದ ಅವಿನಾಭೂತವಾದ ದ್ರವ್ಯದೇವತಾ ಸಂಬಂಧದಿಂದ ಯಾಗ ಅರ್ಥಾತ್ ತಿಳಿಯುತ್ತದೆ. ಆಗ ಯಾಗಕ್ಕೆ ಆವಶ್ಯಕವಾದ ಮಂತ್ರ ಅನ್ವಯಿಸುತ್ತದೆ. ಹೀಗೆ ಮಂತ್ರ ಅನ್ವಯಿಸುವ ಮೊದಲೇ ಯಾಗ ವಿಧಾನಮಾಡಬೇಕು. ಅದಕ್ಕೆ ದೇವತೆ ಯಾವುದೆಂದು ತಿಳಿಯಬೇಕು. ಅದಕ್ಕೆ 'ಆಗ್ನೇಯ' ಶಬ್ದವು ಅಗ್ನಿ ದೇವತೆಯನ್ನು ತಿಳಿಸುತ್ತದೆ. ಅಗ್ನಿ ದೇವತಾರೂಪಗುಣವಿಧಾನ ಮಾಡುತ್ತದೆ, ಹೊರತು ಮಂತ್ರದಿಂದ ತಿಳಿದುಬರುವ ಅಗ್ನಿ ದೇವತೆಯನ್ನು ಅನುವಾದ ಮಾಡುವ ಕರ್ಮನಾಮಧೇಯವಾಗುವುದಿಲ್ಲ ಎಂದು.

**'ಯದಿ ತು ಪ್ರಷ್ಟೈವ ವ್ಯಾವೃತ್ತಿಃಪ್ರತಿಯೋಗಿನಾಮಾನಂತ್ಯೇನ ಸಾಕ್ಷಾತ್ ಪ್ರಷ್ಟುಂ ವಕ್ತುಂ ಚಾಶಕ್ಯೇತಿ ಜ್ಞಾತ್ವಾ ಕಶ್ಚಂದ್ರ ಇತ್ಯನಯಾ ವಾಚೋ ಭಂಗ್ಯಾ ಕೈರ್ವಿಶೇಷಣೈರ್ವಿಶಿಷ್ಟ ಇತಿ ಪೃಷ್ಟಂ, ತದಾ ಸುತರಾಂ ಪ್ರಶ್ನೋತ್ತರೇ ವ್ಯಾವರ್ತಕ ವೈಶಿಷ್ಟ್ಯಪರೇ ಇತಿ ನ ಕ್ವಾಪ್ಯಖಂಡಾರ್ಥತ್ವಂ।'**

ಚಂದ್ರನು ಯಾವ ಯಾವ ಪದಾರ್ಥಗಳಿಗಿಂತ ವಿಲಕ್ಷಣ ಎಂದು ಕೇಳುವುದಾಗಲಿ, ಈ ಪದಾರ್ಥದಿಂದ ವಿಲಕ್ಷಣನೆಂದು ವ್ಯಾವೃತ್ತಿಯನ್ನು ಹೇಳುವುದಾಗಲೀ ಆ ಪದಾರ್ಥಗಳು ಅನಂತವಾಗಿರುವುದರಿಂದ ಅಶಕ್ಯವೆಂದು ಪ್ರಶ್ನೆ ಮಾಡುವವ ತಾನೇ ತಿಳಿದುಕೊಂಡು, ಯಾರು ಚಂದ್ರ ಎಂದು ಕೇಳುವ ಭಂಗಿಯಿಂದ ಯಾವ ವಿಶೇಷಣಗಳಿಂದ ಚಂದ್ರನು ವಿಶಿಷ್ಟನೆಂದೇ ಕೇಳಿದರೆ, ಆಗ ಪ್ರಶ್ನೆ ಉತ್ತರಗಳೆರಡೂ ಸುತರಾಂ ವ್ಯಾವರ್ತಕವಿಶೇಷಣ ವೈಶಿಷ್ಟ್ಯಪರವೇ ಆಗಿರುತ್ತವೆ. ಹೀಗೆ ಪ್ರಶ್ನೋತ್ತರಗಳಲ್ಲಿ ಎಲ್ಲಿಯೂ ಅಖಂಡಾರ್ಥಪರತ್ವವಿಲ್ಲ.



**असाधारणधर्मरूपलक्षणप्रश्नो ह्ययं। किंलक्षणकश्चंद्र इति असाधारणधर्मविषयकस्य, कतमश्चन्द्र इति जातिविषयस्य, अनयोः कतरश्चंद्र इति गुणक्रियाजातिभिः पृथक्करणरूपनिर्धारणविषयस्य च प्रश्नस्योत्तर इवात्रापि प्रतिवचने लक्षणोक्तेः। प्रश्नेऽपि प्रकृष्ट प्रकाशोऽप्रकृष्टप्रकशो वेत्यादिधर्मविषयविकल्पसूचककिंशब्दप्रयो-गाच्च।**

ननु प्रश्ने धर्मिवाचकपदाभावात् स्वरूपप्रश्न एवायम्। तदुत्तरमपि स्वरूपमात्रपरमित्याशंक्य लक्षणप्रश्नत्वात् धर्मविषय एवायम् कतरः श्चंद्र इत्यादि-प्रश्नवदित्याह— **असाधारणेति। अत्रापीति।** कश्चंद्र इति प्रश्नोत्तरेऽपीत्यर्थः।।



**'ಅಸಾಧಾರಣ ಧರ್ಮರೂಪಲಕ್ಷಣಪ್ರಶ್ನೋ ಹ್ಯಯಂ। ಕಿಂಲಕ್ಷಣಕಶ್ಚಂದ್ರ ಇತಿ ಅಸಾಧಾರಣಧರ್ಮವಿಷಯಕಸ್ಯ, ಕತಮಶ್ಚಂದ್ರ ಇತಿ ಜಾತಿವಿಷಯಸ್ಯ, ಅನಯೋಃ ಕತರಶ್ಚಂದ್ರ ಇತಿ ಗುಣಕ್ರಿಯಾ ಜಾತಿಭಿಃ ಪೃಥಕ್ ಕರಣರೂಪ ನಿರ್ಧಾರಣವಿಷಯಸ್ಯ ಚ ಪ್ರಶ್ನಸ್ಯ ಉತ್ತರ ಇವ ಅತ್ರಾಪಿ ಪ್ರತಿವಚನೇ ಲಕ್ಷಣೋಕ್ತೇಃ। ಪ್ರಶ್ನೇऽಪಿ 'ಪ್ರಕೃಷ್ಟ ಪ್ರಕಾಶೋ ವಾऽಪ್ರಕೃಷ್ಟಪ್ರಕಾಶೋ ವಾ ?' ಇತ್ಯಾದಿ ಧರ್ಮವಿಷಯ ವಿಕಲ್ಪಸೂಚಕ ಕಿಂಶಬ್ದಪ್ರಯೋಗಾಚ್ಚ।'**

'ಕಶ್ಚಂದ್ರಃ' ಎಂಬುದು ಅಸಾಧಾರಣ ಧರ್ಮರೂಪ ಲಕ್ಷಣ ಪ್ರಶ್ನೆಯೆ. ಏಕೆಂದರೆ ಉತ್ತರದಲ್ಲಿ ಲಕ್ಷಣ ಉಕ್ತವಾಗುತ್ತಿದೆ. ಯದ್ಯಪಿ ಉತ್ತರದಲ್ಲಿ ಹೇಳಿದ್ದೇ ಜಿಜ್ಞಾಸಿತವೆನ್ನುವಂತಿಲ್ಲ. ಬೆಂಕಿ ಉಂಟೆ? ಎಂಬ ಪ್ರಶ್ನೆಗೆ ಹೊಗೆ ಇದೆ ಎಂದು ಉತ್ತರ ಕಂಡಿದೆ. ಉತ್ತರದಲ್ಲಿ ಹೇಳಿದ ಹೊಗೆ ಪ್ರಶ್ನೆ ಮಾಡಿದವನಿಗೆ ಜಿಜ್ಞಾಸಿತವಲ್ಲ. ಆದರೆ ಪ್ರಶ್ನೆಯ ತಾತ್ಪರ್ಯ ಸಂದಿಗ್ಧವಾಗಿರುವಾಗ ಉತ್ತರವಾಕ್ಯದಲ್ಲಿ ಏನು ಹೇಳಿದೆಯೋ ಅದು ಪ್ರಶ್ನೆ ಮಾಡುವವನಿಗೆ ಜಿಜ್ಞಾಸಿತ, ಅದರಲ್ಲಿಯೇ ಪ್ರಶ್ನ ವಾಕ್ಯದ ತಾತ್ಪರ್ಯ ಎಂದು ತಿಳಿಯಬಹುದು. ಪ್ರಶ್ನೆಯ ತಾತ್ಪರ್ಯ ಸ್ಪಷ್ಟವಿರುವಾಗ ಉತ್ತರವಾಕ್ಯದಲ್ಲಿ ಬೇರೇನಾದರೂ ಹೇಳಿದ್ದರೆ ಅದು ಪ್ರಕೃತಕ್ಕೆ ಉಪಯೋಗಿ ಎಂದು ಸಮಾಧಾನ ಹೇಳಬೇಕು. ಹೀಗಾಗಿ ಉತ್ತರವಾಕ್ಯದಲ್ಲಿ ಹೇಳಿದ್ದೇ ಸಾಮಾನ್ಯವಾಗಿ ಪ್ರಶ್ನವಾಕ್ಯತಾತ್ಪರ್ಯ ವಿಷಯ.

ಪ್ರಕೃತದಲ್ಲಿ ಪ್ರಕೃಷ್ಟಪ್ರಕಾಶಶ್ಚಂದ್ರಃ ಎಂದು ಉತ್ತರವಾಕ್ಯದಲ್ಲಿ ಪ್ರಕೃಷ್ಟಾದಿ ಅಸಾಧಾರಣ ಧರ್ಮವೈಶಿಷ್ಟ್ಯ ಉಕ್ತವಾಗಿರುವುದರಿಂದ ಸಂದಿಗ್ಧವಾದ ಕಶ್ಚಂದ್ರ ಎಂಬ ಪ್ರಶ್ನವಾಕ್ಯವೂ ಅಸಾಧಾರಣಧರ್ಮವೈಶಿಷ್ಟ್ಯದಲ್ಲಿ ತಾತ್ಪರ್ಯ ಉಳ್ಳದ್ದೆಂದು ತೀರ್ಮಾನಿಸುವುದು ಯುಕ್ತ. 'ಕಿಂ ಲಕ್ಷಣಕಶ್ಚಂದ್ರಃ?' ಎಂದು ಲಕ್ಷಣ ವಿಷಯ ಪ್ರಶ್ನೆಗೆ ಉತ್ತರವಾಕ್ಯದಲ್ಲಿ ಪ್ರಕೃಷ್ಟಾದಿ ಲಕ್ಷಣವೇ ಉಕ್ತವಾಗುತ್ತದೆ. 'ಕತಮಶ್ಚಂದ್ರಃ?' ಎಂದು ಜಾತಿ ವಿಷಯ ಪ್ರಶ್ನೆಗೆ ಉತ್ತರದಲ್ಲಿ ಪ್ರಕೃಷ್ಟತ್ವಾದಿ ಜಾತಿಯೆ ಉಕ್ತವಾಗುತ್ತದೆ. 'ಅನಯೋಃ ಕತರಶ್ಚಂದ್ರಃ?' ಎಂದು ಗುಣ ಕ್ರಿಯೆ ಜಾತಿಗಳಿಂದ ಎರಡರಲ್ಲಿ ಒಂದಕ್ಕೆ ಇತರ ವೈಲಕ್ಷಣವನ್ನು ಹೇಳುವ ನಿರ್ಧಾರಣ ವಿಷಯ ಪ್ರಶ್ನೆಗೆ ಹಾಗೇ ನಿರ್ಧಾರಣ ಮಾಡುವ ಉತ್ತರವೇ ಬರುತ್ತದೆ.

'ವಾ ಬಹೂನಾಂ ಜಾತಿಪರಿಪ್ರಶ್ನೇ ಡತಮಚ್' 'ಕಿಂಯತ್ತದೋ ನಿರ್ಧಾರಣೇ

ದ್ವಯೋರೇಕಸ್ಯ ಡತರಚ್' ಎಂಬ ಪಾಣಿನಿ ಸೂತ್ರಪ್ರಕಾರ ಡತರ ಡತಮ ಪ್ರತ್ಯಯಾಂತವಾದ ಕತರ ಕತಮ ಶಬ್ದಗಳಿಗೆ ಜಾತ್ಯರ್ಥ ನಿರ್ಧಾರಣಾರ್ಥಗಳು ವ್ಯಾಕರಣ ಸಂಮತವಾಗಿವೆ.

'ಆದರೆ ಕಃ ಚಂದ್ರಃ ಎಂಬ ಪ್ರಶ್ನೆಯಲ್ಲಿ ಅಸಾಧಾರಣ ಧರ್ಮವೈಶಿಷ್ಟ್ಯ ಸೂಚಕ ಪದವಿಲ್ಲವಲ್ಲ! ಅಂಥ ಪದವತ್ತ್ವವು ಉಪಾಧಿ. ಪ್ರಶ್ನೆಯಲ್ಲಿ ಅಸಾಧಾರಣ ಧರ್ಮವಿಷಯತ್ವಕ್ಕೆ ತತ್ಸೂಚಕಪದವತ್ತ್ವವು ವ್ಯಾಪಕವಾಗಿದೆ' ಎಂದರೆ ಅದೂ ಸರಿಯಲ್ಲ. ಪ್ರಶ್ನೆಯಲ್ಲಿ ಕಿಂಶಬ್ದವಿದೆ. ಅದೇ ಚಂದ್ರನಲ್ಲಿ ಪ್ರಕೃಷ್ಟಾದಿ ಧರ್ಮ ತದಭಾವ ವಿಷಯಕ ವಿಕಲ್ಪವನ್ನೂ ತದ್ ವಿಷಯಕ ಜಿಜ್ಞಾಸೆಯನ್ನೂ ಸೂಚಿಸುತ್ತದೆ. ಆದರಿಂದ ಉಪಾಧಿಯು ಸಾಧನ ವ್ಯಾಪಕವೆ.



एतेन प्रश्ने धर्मवाचिपदं नेति निरस्तम् । तथात्वे चंद्रधर्मस्यैव लक्षणीयत्वापत्त्या तस्यानपेक्षितत्वात् । चंद्रप्रातिपदिकार्थस्य सामान्यतो ज्ञातत्वेन तद्बुभुत्साऽयोगात् लक्षणया वा प्रश्नस्थ-चंद्रपदस्यैव चंद्रासाधारणधर्मपरत्वस्य कल्प्यत्वाच्च ।

यद्वा लक्षणवाक्यं अनुमानत्वेनाप्तवाक्यत्वेन वा चंद्रव्यवहारकर्तव्यतावैशिष्ट्यपरमस्तु । चंद्रस्वरूपस्य प्रत्यक्षेणैव ज्ञातत्वात् । चंद्रव्यवहारशब्देन च चंद्रशब्दविशेषितो व्यवहारो विवक्ष्यते, न तु चंद्ररूपार्थविशेषितः येन तज्ज्ञाने वाक्यवैयर्थ्यं तदज्ञाने तु तस्य कर्तव्यताबोधनमशक्यमिति शंक्येत ।

नचैवं वृद्धव्यवहारादेव व्युत्पत्तिसंभवात् लक्षणवाक्यं व्यर्थम्, शृंगग्राहिकयोपदेशवदस्यापि व्युत्पत्तावुपायांतरत्वात् ।

एतेन मानांतरसिद्धं वैशिष्ट्यमखंडचंद्रसिद्धावुपायमात्रमिति कल्पतरूक्तं निरस्तम् । मानांतरेण चंद्रप्रातिपदिकार्थः प्रकृष्टत्वादिविशिष्ट इत्यज्ञानात्, अस्मिन् ज्योतिर्मंडले कश्चंद्र इति पृच्छता चंद्रस्वरूपस्य प्रत्यक्षेण सुतरां ज्ञातत्वाच्च । तस्मात्साध्यवैकल्यं दुष्परिहरमित्याद्यनुमानमयुक्तम् ।

**एतेनेति** ।। किंशब्दस्यैव धर्मविशिष्टवाचकत्वादिति भावः ।। **तथात्व इति** ।। प्रश्ने पृथक् धर्मवाचिपदसत्त्व इत्यर्थः ।। **तस्येति** ।। विशिष्टविषयोत्तरस्य वैयधिकरण्येनावक्तव्यत्वादिति भावः ।

ननु धर्मवाचकपदाभावात् प्रश्नस्य स्वरूपपरत्वं वक्तव्यमित्याशंक्य पूर्वोक्तदोषं स्मारयति–**चंद्रप्रातिपदिकार्थस्येति**।। किंच प्रश्ने धर्मवाचकपदाभावेऽपि चंद्रपदस्यैव तल्लक्षकस्य सत्त्वात् प्रश्नस्य धर्मविषयत्वं नानुपपन्नमित्याह— **लक्षणया वेति** । **अनुमानत्वेनेति** ।। अयं चंद्र इति व्यवहर्तव्यः, प्रकृष्टप्रकाशत्वात् व्यतिरेकेण घटवदित्यनुमानविधयेत्यर्थः ।। **चंद्रशब्दविशेषित इति** ।। वाच्यवाचकभावपरिच्छेद-रूपो व्यवहार इत्यर्थः ।। **चंद्ररूपार्थविशेषित इति** ।। अयं चंद्र इत्यादिरूप इत्यर्थः ।। **मानांतरसिद्धेति** ।। प्रत्यक्षसिद्धेत्यर्थः । तथाच लक्षणवाक्यस्य न तत्परत्वं वैयर्थ्यादिति भावः ।। **मानांतरेति** ।। मानांतरेण प्रकृष्टत्वादिविशिष्ट चंद्रप्रातिपदिकार्थत्वज्ञानादिति भावः ।। **साध्यवैकल्यमिति** ।। दृष्टांतस्येति शेषः ।।



**'ಏತೇನ ಪ್ರಶ್ನೇ ಧರ್ಮವಾಚಿಪದಂ ನೇತಿ ನಿರಸ್ತಂ। ತಥಾತ್ವೇ ಚಂದ್ರ ಧರ್ಮಸ್ಯೈವ ಲಕ್ಷಣೀಯತ್ವಾಪತ್ತ್ಯಾ ತಸ್ಯಾನಪೇಕ್ಷಿತತ್ವಾತ್। ಚಂದ್ರಪ್ರಾತಿಪದಿಕಾರ್ಥಸ್ಯ ಸಾಮಾನ್ಯತೋ ಜ್ಞಾತತ್ವೇನ ತದ್‌ಬುಭುತ್ಸಾಽಯೋಗಾತ್ ಲಕ್ಷಣಯಾ ವಾ ಪ್ರಶ್ನಸ್ಥ ಚಂದ್ರಪದಸ್ಯೈವ ಚಂದ್ರಾಸಾಧಾರಣಧರ್ಮಪರತ್ವಸ್ಯ ಕಲ್ಪ್ಯತ್ವಾಚ್ಚ।'**

ಪ್ರಶ್ನೆಯಲ್ಲಿ ಸಾಕ್ಷಾತ್ ಧರ್ಮವಾಚಕ ಪದವೇ ಬೇಕೆಂದು ಆಗ್ರಹಿಸಿದರೆ, ಚಂದ್ರಧರ್ಮವು ಸಾಮಾನ್ಯತಃ ಜ್ಞಾತವಾಗಿರದಿದ್ದರೆ ಯಾವುದು ಚಂದ್ರಧರ್ಮವೆಂದು ಜಿಜ್ಞಾಸೆ ಬಾರದಿರುವುದರಿಂದ, ಚಂದ್ರಧರ್ಮದ ಅಸಾಧಾರಣ ಧರ್ಮದ ಬಗ್ಗೆಯೆ ಪ್ರಶ್ನೆ ಎನ್ನಬೇಕು. ಆಗ ಉತ್ತರದಲ್ಲಿ ಅಸಾಧಾರಣ ಧರ್ಮದ ಲಕ್ಷಣವನ್ನೇ ಹೇಳಬೇಕಾದೀತು. ಚಂದ್ರನ ಲಕ್ಷಣವನ್ನಲ್ಲ. ಅದು ಅನಪೇಕ್ಷಿತವಾಗಿರುತ್ತದೆ. ಅದನ್ನು ಹೇಳಿದರೆ ಉತ್ತರ ವ್ಯಧಿಕರಣವಾದೀತು. ಅದರಿಂದ ಕಿಂ ಶಬ್ದವೇ ಚಂದ್ರಧರ್ಮವಿಷಯವಿಕಲ್ಪಸೂಚಕ ಎಂದು ಒಪ್ಪಬೇಕು. ಅಥವಾ ಚಂದ್ರಪ್ರಾತಿಪದಿಕಾರ್ಥವು ಸಾಮಾನ್ಯತಃ ಜ್ಞಾತವಾಗಿರುವುದರಿಂದ ಅದರ ಜಿಜ್ಞಾಸೆ ಕೂಡದಿರುವುದರಿಂದಲೇ ಪ್ರಶ್ನೆಯಲ್ಲಿರುವ ಚಂದ್ರಪದಕ್ಕೆ ಚಂದ್ರಪ್ರಾತಿಪದಿಕಾರ್ಥದಲ್ಲಿ ತಾತ್ಪರ್ಯವಿಲ್ಲದಿರುವುದರಿಂದ ಲಕ್ಷಣಯಾ ಚಂದ್ರಾಸಾಧರಣಧರ್ಮಪರತ್ವವನ್ನು ಅದಕ್ಕೆ ಊಹಿಸಿಕೊಳ್ಳಬೇಕು. ಆದರಿಂದ ಪ್ರಶ್ನವಾಕ್ಯವು

ಚಂದ್ರನ ಅಸಾಧಾರಣ ಧರ್ಮವೈಶಿಷ್ಟ್ಯದಲ್ಲಿಯೇ ತಾತ್ಪರ್ಯ ಉಳ್ಳದ್ದು ಹೊರತು ಅಖಂಡಾರ್ಥ ಪರವಲ್ಲ.

**'ಯದ್ವಾ ಲಕ್ಷಣವಾಕ್ಯಂ ಅನುಮಾನತ್ವೇನ ಆಪ್ತವಾಕ್ಯತ್ವೇನ ವಾ ಚಂದ್ರ ವ್ಯವಹಾರ ಕರ್ತವ್ಯತಾ ವೈಶಿಷ್ಟ್ಯಪರಮಸ್ತು, ಚಂದ್ರಸ್ವರೂಪಸ್ಯ ಪ್ರತ್ಯಕ್ಷತೋ ಜ್ಞಾತತ್ವಾತ್। ಚಂದ್ರವ್ಯವಹಾರ ಶಬ್ದೇನ ಚ ಚಂದ್ರಶಬ್ದ ವಿಶೇಷಿತೋ ವ್ಯವಹಾರೋ ವಿವಕ್ಷ್ಯತೇ। ನ ತು ಚಂದ್ರರೂಪಾರ್ಥವಿಶೇಷಿತಃ, ಯೇನ ತಜ್ಜ್ಞಾನೇ ವಾಕ್ಯವೈಯರ್ಥ್ಯಂ ತದಜ್ಞಾನೇ ತು ತಸ್ಯ ಕರ್ತವ್ಯತಾಬೋಧನಮಶಕ್ಯಂ ಇತಿ ಶಂಕ್ಯೇತ।'**

ಅಥವಾ ಪ್ರಕೃಷ್ಟಪ್ರಕಾಶಃ ಚಂದ್ರಃ' ಎಂಬ ಈ ಲಕ್ಷಣ ವಾಕ್ಯವು 'ಪ್ರಕೃಷ್ಟಪ್ರಕಾಶಉಳ್ಳ ಈ ತೇಜೋಗೋಲಕವು ಚಂದ್ರ ಎಂಬ ಹೆಸರುಳ್ಳದ್ದು, ಪ್ರಕೃಷ್ಟಪ್ರಕಾಶ ಉಳ್ಳದ್ದಾದ್ದರಿಂದ ವ್ಯತಿರೇಕೇಣ ನಕ್ಷತ್ರಾದಿಗಳಂತೆ ಅಥವಾ ಘಟಾದಿಗಳಂತೆ ಎಂದು ಅನುಮಾನರೂಪದಿಂದ ಪ್ರಕೃಷ್ಟಪ್ರಕಾಶಉಳ್ಳ ಗೋಲಕಕ್ಕೆ ಚಂದ್ರಪದ ವಾಚ್ಯತ್ವವನ್ನು ಬೋಧಿಸುತ್ತದೆ. ಅಥವಾ 'ಪ್ರಕೃಷ್ಟಪ್ರಕಾಶಉಳ್ಳ ಈ ಗೋಲಕವನ್ನು ಚಂದ್ರ ಎಂದು ಕರೆಯುತ್ತಾರೆ' ಎನ್ನುವ ಆಪ್ತವಾಕ್ಯರೂಪದಿಂದ ಚಂದ್ರಪದ ವಾಚ್ಯತ್ವವನ್ನು ಬೋಧಿಸುತ್ತದೆ. ಈ ಎರಡೂ ಪಕ್ಷಗಳಲ್ಲಿ ಲಕ್ಷಣವಾಕ್ಯ ವಿಶಿಷ್ಟಾರ್ಥಪರವೆ ಹೊರತು ಅಖಂಡಾರ್ಥಪರವಲ್ಲ. ಪ್ರಶ್ನವಾಕ್ಯಕ್ಕೂ 'ಯಾವುದು ಚಂದ್ರಪದವಾಚ್ಯ' ಎಂದು ಕೇಳುವಲ್ಲಿಯೆ ತಾತ್ಪರ್ಯವಿರುವುದರಿಂದ ಪ್ರಶ್ನೋತ್ತರಗಳಿಗೆ ವೈಯಧಿಕರಣ್ಯವಿಲ್ಲ. ಚಂದ್ರಸ್ವರೂಪ ಪರವಾಗಿಯೆ ವಾಕ್ಯ ಕೂಡುವಾಗ ಚಂದ್ರಪದವಾಚ್ಯತ್ವ ಪರವೆಂದೇಕೆ ಒಪ್ಪಬೇಕು ಎಂದರೆ ಚಂದ್ರಸ್ವರೂಪ ಪ್ರತ್ಯಕ್ಷದಿಂದ ಜ್ಞಾತವಾಗುತ್ತಿರುವಾಗ ಲಕ್ಷಣವಾಕ್ಯ ಅದನ್ನು ಹೇಳುವುದು ವ್ಯರ್ಥವಾಗುತ್ತದೆ. ಇಲ್ಲಿ 'ಚಂದ್ರವ್ಯವಹಾರ' ಎಂದರೆ 'ಚಂದ್ರನು ಚಂದ್ರ ಶಬ್ದವಾಚ್ಯ' ಎಂದು ಚಂದ್ರಶಬ್ದ ವಿಶೇಷಿತವಾದ ಚಂದ್ರಪದ ಶಕ್ತಿಜ್ಞಾನರೂಪ ವ್ಯವಹಾರವೇ ವಿವಕ್ಷಿತವಾಗಿದೆ. ಹೊರತು, 'ಇವನು ಚಂದ್ರ' ಎನ್ನುವ ಅರ್ಥವಿಶೇಷಿತ ಜ್ಞಾನಾದಿರೂಪ ವ್ಯವಹಾರವಲ್ಲ. ಅದನ್ನು ವಿವಕ್ಷೆ ಮಾಡಿದರೆ, 'ಅದು ಮೊದಲೇ ತಿಳಿದಿದ್ದರೆ ವಾಕ್ಯ ವ್ಯರ್ಥ, ತಿಳಿಯದಿದ್ದರೆ ಅದನ್ನು ಮಾಡಬೇಕೆಂದು ತಿಳಿಸುವುದು ಶಕ್ಯವಿಲ್ಲ' ಎಂಬ ಸಮಸ್ಯೆ ಬರುತ್ತದೆ.

**'ನ ಚೈವಂ ವೃದ್ಧವ್ಯವಹಾರಾದೇವ ವ್ಯುತ್ಪತ್ತಿ ಸಂಭವಾತ್ ಲಕ್ಷಣ ವಾಕ್ಯಂ ವ್ಯರ್ಥಂ, ಶೃಂಗಗ್ರಾಹಿಕಯಾ ಉಪದೇಶವತ್ ಅಸ್ಯಾಪಿ ವ್ಯುತ್ಪತ್ತೌ ಉಪಾಯಾಂತರತ್ವಾತ್।'**

ಹಾಗಾದರೆ ಈ ಲಕ್ಷಣವಾಕ್ಯ ಚಂದ್ರನನ್ನು ಚಂದ್ರಶಬ್ದವಾಚ್ಯನೆಂದು ತಿಳಿಸುವುದಕ್ಕಾಗಿ, ಚಂದ್ರಶಬ್ದವ್ಯುತ್ಪತ್ತಿಗಾಗಿ ಎಂದಂತಾಯಿತು. ವ್ಯುತ್ಪತ್ತಿಯು ವೃದ್ಧವ್ಯವಹಾರದಿಂದಲೇ ಉಂಟಾಗುತ್ತಿರುವಾಗ ಈ ಲಕ್ಷಣವಾಕ್ಯ ಬೇರೆ ಏಕೆ? ಅದು ವ್ಯರ್ಥವಲ್ಲವೆ? ಎಂಬ ಪ್ರಶ್ನೆ ಬಂದರೆ ಅದಕ್ಕೆ ಸಮಾಧಾನ—ವೃದ್ಧವ್ಯವಹಾರದಿಂದ ವ್ಯುತ್ಪತ್ತಿ ಉಂಟಾಗುತ್ತಿರುವಾಗಲೇ ಆಪ್ತೋಪದೇಶದಿಂದಲೂ

ವ್ಯುತ್ಪತ್ತಿ ಸಂಪಾದಿಸುವುದೂ ಕಂಡಿದೆ. ಶೃಂಗಗ್ರಾಹಿಕೆಯಿಂದ ಅಂದರೆ ಪ್ರತ್ಯೇಕವಾಗಿ ಗೋವ್ಯಕ್ತಿಗಳನ್ನು ತೋರಿಸಿ 'ಇದು ಗೋವು' ಎಂದು ಆಪ್ತನು ಉಪದೇಶಿಸಿದಾಗ ಗೋಪದಶಕ್ತಿಜ್ಞಾನ ಉಂಟಾಗುತ್ತದೆ. ಅದೂ ವ್ಯುತ್ಪತ್ತಿಗೆ ವೃದ್ಧವ್ಯವಹಾರದಂತೆ ಇನ್ನೊಂದು ಉಪಾಯ. ಹಾಗೇ ಲಕ್ಷಣವಾಕ್ಯವೂ ಆಪ್ತೋಪದೇಶರೂಪದಿಂದ ವ್ಯುತ್ಪತ್ತಿಗೆ ಸಾಧನವೆಂಬುದನ್ನು ತೋರಿಸಿರುವುದರಿಂದ ಅದೂ ವೃದ್ಧವ್ಯವಹಾರದಂತೆ ಇನ್ನೊಂದು ಉಪಾಯವಾಗುವುದರಿಂದ ವ್ಯರ್ಥವೆನಿಸುವುದಿಲ್ಲ.

ಶಕ್ತಿಗ್ರಹಂ ವ್ಯಾಕರಣೋಪಮಾನ ಕೋಶಾಪ್ತವಾಕ್ಯಾದ್ ವ್ಯವಹಾರತಶ್ಚ ।
ವಾಕ್ಯಸ್ಯ ಶೇಷಾದ್ ವಿವೃತೇರ್ವದಂತಿ ಸಾನ್ನಿಧ್ಯತಃ ಸಿದ್ಧಪದಸ್ಯ ವೃದ್ಧಾಃ ॥

ಎಂಬಂತೆ, ವ್ಯಾಕರಣ, ಉಪಮಾನ, ಕೋಶ, ಆಪ್ತವಾಕ್ಯ, ವೃದ್ಧವ್ಯವಹಾರ, ವಾಕ್ಯಶೇಷ, ವಿವರಣೆ, ಸಿದ್ಧಪದ ಸಾನ್ನಿಧ್ಯ ಈ ಎಂಟು ಸಾಧನಗಳಿಂದ ವ್ಯುತ್ಪತ್ತಿ ಲಭ್ಯವಿದೆ.

**'ಏತೇನ ಮಾನಾಂತರಸಿದ್ಧವೈಶಿಷ್ಟ್ಯಂ ಅಖಂಡಚಂದ್ರಸಿದ್ಧಾವುಪಾಯ ಮಾತ್ರಮಿತಿ ಕಲ್ಪತರೂಕ್ತಂ ನಿರಸ್ತಂ। ಮಾನಾಂತರೇಣ ಚಂದ್ರಪ್ರಾತಿಪದಿಕಾರ್ಥಃ ಪ್ರಕೃಷ್ಟತ್ವಾದಿವಿಶಿಷ್ಟ ಇತ್ಯಜ್ಞಾನಾತ್, ಅಸ್ಮಿನ್ ಜ್ಯೋತಿರ್ಮಂಡಲೇ ಕಶ್ಚಂದ್ರ ಇತಿ ಪೃಚ್ಛತಾ ಚಂದ್ರಸ್ವರೂಪಸ್ಯ ಪ್ರತ್ಯಕ್ಷೇಣ ಸುತರಾಂ ಜ್ಞಾತತ್ವಾಚ್ಚ। ತಸ್ಮಾತ್ ಸಾಧ್ಯವೈಕಲ್ಯಂ ದುಷ್ಪರಿಹರಮಿತಿ ಆದ್ಯಾನುಮಾನಮಯುಕ್ತಂ।'**

ಕಲ್ಪತರುವಿನಲ್ಲಿ ಹೀಗೆ ಹೇಳಿದೆ—'ಜ್ಯೋತಿರ್ಮಂಡಲವನ್ನು ಕಂಡಾಗ ಅದರಲ್ಲಿ ಚಂದ್ರನೂ ಅವನ ಪ್ರಕೃಷ್ಟಪ್ರಕಾಶವೂ ಅವರೆಡರ ವೈಶಿಷ್ಟ್ಯವೂ ಪ್ರತ್ಯಕ್ಷದಿಂದಲೇ ಪ್ರಶ್ನಕಾಲದಲ್ಲಿ ಸಿದ್ಧವಾಗಿರುವುದರಿಂದ ಲಕ್ಷಣವಾಕ್ಯವು ಅದನ್ನೇ ಬೋಧಿಸುವುದು ಅನಾವಶ್ಯಕ. ಅಖಂಡ ಚಂದ್ರಸ್ವರೂಪ ಸಿದ್ಧಿಗೇ ಈ ವೈಶಿಷ್ಟ್ಯವು ದ್ವಾರ ಮಾತ್ರವಾಗಿದೆ. ಅದರಿಂದ ಲಕ್ಷಣವಾಕ್ಯಕ್ಕೆ ಅದರಲ್ಲಿ ತಾತ್ಪರ್ಯವಿಲ್ಲ' ಎಂದು. ಆದರೆ ಲಕ್ಷಣವಾಕ್ಯವು ಚಂದ್ರಸ್ವರೂಪವನ್ನು ತಿಳಿಸಲು ಹೊರಟಿಲ್ಲ. ಚಂದ್ರನನ್ನು ಚಂದ್ರಶಬ್ದವಾಚ್ಯನೆಂದು ತಿಳಿಸಲೆಂದೇ ಹೊರಟಿದೆ ಎಂದಿದ್ದೇವೆ. ಮತ್ತು ಪ್ರತ್ಯಕ್ಷದಿಂದ ವೈಶಿಷ್ಟ್ಯವು ಸಾಮಾನ್ಯವಾಗಿ ಸಿದ್ಧವಾದರೂ ವಿಶೇಷವಾಗಿ ಸಿದ್ಧವಾಗಿಲ್ಲ, ಮತ್ತು ಚಂದ್ರಶಬ್ದಾರ್ಥವು ಪ್ರಕೃಷ್ಟತ್ವಾದಿ ವಿಶಿಷ್ಟವೇ ಎಂದೂ ಸಿದ್ಧವಾಗಿಲ್ಲ. ಅದರಿಂದ ವಿಶಿಷ್ಟದಲ್ಲಿ ತಾತ್ಪರ್ಯವಿಲ್ಲ ವೆನ್ನಲಾಗದು. 'ಈ ಜ್ಯೋತಿರ್ಮಂಡಲದಲ್ಲಿ ಚಂದ್ರ ಯಾರು' ಎಂದು ಪ್ರಶ್ನೆ ಮಾಡುವಾಗಲೆ ವೈಶಿಷ್ಟ್ಯವನ್ನು ತಿಳಿಯುವ ಮೊದಲೇ ಚಂದ್ರಸ್ವರೂಪವನ್ನು ಅವನು ಸುತರಾಂ ನೋಡಿರುತ್ತಾನೆ ಯಾದ್ದರಿಂದ 'ವೈಶಿಷ್ಟ್ಯವು ದ್ವಾರಮಾತ್ರ, ಸ್ವರೂಪದಲ್ಲಿಯೇ ತಾತ್ಪರ್ಯ'ವೆನ್ನುವುದೇ ಅಸಂಗತ. ಅದರಿಂದ ಸಾಧ್ಯವೈಕಲ್ಯ ದೃಷ್ಟಾಂತದಲ್ಲಿ ಅಪರಿಹಾರ್ಯವೆ.

**ಹೀಗಾಗಿ ಲಕ್ಷಣ ವಾಕ್ಯತ್ವಾತ್ ಎಂಬ ಮೊದಲನೆ ಅನುಮಾನ ಅಯುಕ್ತ.**



**तथा द्वितीयमपि । अप्रसिद्धविशेषणत्वबाधसत्प्रतिपक्षत्वदृष्टांतसाध्यवैकल्यादिदोषात्। प्रकृष्टादिवाक्ये उक्तरीत्या सत्यादिवाक्येऽपि बुभुत्साद्यनुपपत्त्या ब्रह्मस्वरूपमात्रप्रश्नोत्तरत्वस्यासिद्धेश्च ।**

**इह च कश्चंद्र इतिवत् क्लृप्तस्य प्रश्नस्याभावात्, कल्प्यस्य च क्लृप्तोत्तरानुसारेण धर्मविषयकस्यैव कल्प्यत्वाच्च ।**

**कतम आत्मेत्यत्र कतरः स आत्मेत्यत्र च त्वंपदार्थप्रश्ने ''वा बहूनां जातिपरिप्रश्ने डतमच्'', ''द्वयोरेकस्य निर्धारणे डतरच्'' इति सूत्राभ्यां जात्याद्यर्थकतमादिशब्दप्रयोगेण तत्प्रतिवचने योऽयं विज्ञानमय इत्यादौ पक्षत्वेन त्वदभिमते हेतोरसिद्धेश्च ।**

**द्वितीयमपीति ।।** तन्मात्र प्रश्नोत्तरत्वादित्यनुमानमित्यर्थः ।। **उक्तरीत्येति ।।** प्रकृष्टादिवाक्योक्तरीत्येत्यर्थः।। **इह चेति ।।** ''ब्रह्मविदाप्नोति परं'' इत्यादावित्यर्थः ।।



**ತಥಾ ದ್ವಿತೀಯಮಪಿ। ಅಪ್ರಸಿದ್ಧವಿಶೇಷಣತ್ವ ಬಾಧ ಸತ್ಪ್ರತಿಪಕ್ಷತ್ವ ದೃಷ್ಟಾಂತ ಸಾಧ್ಯವೈಕಲ್ಯಾದಿ ದೋಷಾತ್। ಪ್ರಕೃಷ್ಟಾದಿವಾಕ್ಯೇ ಉಕ್ತರೀತ್ಯಾ ಸತ್ಯಾದಿವಾಕ್ಯೇऽಪಿ ಬುಭುತ್ಸಾದ್ಯನುಪಪತ್ತ್ಯಾ ಬ್ರಹ್ಮಸ್ವರೂಪ ಮಾತ್ರ ಪ್ರಶ್ನೋತ್ತರತ್ವಸ್ಯಾಸಿದ್ಧೇಶ್ಚ।**

ತನ್ಮಾತ್ರ ಪ್ರಶ್ನೋತ್ತರತ್ವರೂಪವಾದ ಎರಡನೆ ಅನುಮಾನವೂ ಅಯುಕ್ತ. ಅದೂ ಕೂಡ ಅಪ್ರಸಿದ್ಧವಿಶೇಷಣತ್ವ ಬಾಧ ಸತ್ಪ್ರತಿಪಕ್ಷತ್ವ ದೃಷ್ಟಾಂತೇ ಸಾಧ್ಯವೈಕಲ್ಯ ಮುಂತಾದ ದೋಷಗಳಿಂದ ದುಷ್ಟವಾಗಿದೆ. ಪ್ರಕೃಷ್ಟಾದಿವಾಕ್ಯದಲ್ಲಿ ಹೇಳಿದಂತೆಯೇ ಸತ್ಯಾದಿವಾಕ್ಯದಲ್ಲಿಯೂ ಧರ್ಮಿಜ್ಞಾನ ಸಾಧ್ಯವಾದ ಜಿಜ್ಞಾಸೆ ಪ್ರಶ್ನೆ ಉತ್ತರಗಳು ಕೂಡುವುದಿಲ್ಲ. ಸ್ವರೂಪಮಾತ್ರವು ಮೊದಲೇ ಜ್ಞಾತವಾಗಿರುವುದರಿಂದ ತನ್ಮಾತ್ರ ವಿಷಯದಲ್ಲಿ ಪ್ರಶ್ನಾದಿಗಳು ಕೂಡುವುದಿಲ್ಲವೆಂದು ಹಿಂದೆಯೇ ಹೇಳಿದ್ದೇವೆ. ಆದರಿಂದ ತನ್ಮಾತ್ರ ಪ್ರಶ್ನೋತ್ತರತ್ವರೂಪ ಹೇತುವಿಗೆ ಅಸಿದ್ಧಿಯೂ ದೋಷವಾಗಿದೆ.

**'ಇಹಚ ಕಶ್ಚಂದ್ರ ಇತಿವತ್ ಕ್ಲಪ್ತಸ್ಯ ಪ್ರಶ್ನಸ್ಯಾಭಾವಾತ್, ಕಲ್ಪ್ಯಸ್ಯ ಚ ಕ್ಲಪ್ತೋತ್ತರಾನುಸಾರೇಣ ಧರ್ಮವಿಷಯಕಸ್ಯೈವ ಕಲ್ಪ್ಯತ್ವಾಚ್ಚ।'**

ಲೋಕದಲ್ಲಿ 'ಕಃ ಚಂದ್ರಃ' ಎಂದು ಪ್ರಶ್ನೆ ಕ್ಲಪ್ತವಾಗಿದೆ. ಸತ್ಯಾದಿ ವಾಕ್ಯದಲ್ಲಿ ಹಾಗೆ ಕ್ಲಪ್ತವಾಗಿ

ಶ್ರುತಿಯಲ್ಲಿ ಪ್ರಶ್ನೆ ಇಲ್ಲ. ಕಲ್ಪಿಸಬೇಕು. ಕಲ್ಪಿಸುವಾಗ ಕ್ಲಪ್ತವಾದ ಸತ್ಯಾದಿ ಧರ್ಮ ಪ್ರತಿಪಾದಕವಾದ ಉತ್ತರಕ್ಕೆ ಅನುಸಾರವಾಗಿ ಬ್ರಹ್ಮವು ಯಾವ ವಿಶೇಷಣಗಳಿಂದ ವಿಶಿಷ್ಟ ಎಂದು ಧರ್ಮವೈಶಿಷ್ಟ್ಯ ವಿಷಯಕ ಪ್ರಶ್ನೆಯನ್ನೇ ಕಲ್ಪಿಸಬೇಕಾಗುತ್ತದೆ. ಬ್ರಹ್ಮಸ್ವರೂಪ ಮಾತ್ರವಿಷಯಕ ಪ್ರಶ್ನೆಯನ್ನಲ್ಲ. ಹೀಗಾಗಿ ತನ್ಮಾತ್ರಪ್ರಶ್ನೋತ್ತರತ್ವ ಹೇತುವು ಅಸಿದ್ಧವೆ.

**'ಕತಮ ಆತ್ಮೇತ್ಯತ್ರ, ಕತರಃ ಸ ಆತ್ಮೇತ್ಯತ್ರ ಚ ತ್ವಂಪದಾರ್ಥ ಪ್ರಶ್ನೇ 'ವಾ ಬಹೂನಾಂ ಜಾತಿ ಪರಿಪ್ರಶ್ನೇ ಡತಮಚ್' 'ದ್ವಯೋ ರೇಕಸ್ಯ ನಿರ್ಧಾರಣೇ ಡತರಚ್' ಇತಿ ಸೂತ್ರಾಭ್ಯಾಂ ಜಾತ್ಯಾದ್ಯರ್ಥ ಕತಮಾದಿ ಶಬ್ದಪ್ರಯೋಗೇಣ ತತ್ಪ್ರತಿವಚನೇ ಯೋಽಯಂ ವಿಜ್ಞಾನಮಯ ಇತ್ಯಾದೌ ಪಕ್ಷತ್ವೇನ ತ್ವದಭಿಮತೇ ಹೇತೋರಸಿದ್ಧೇಶ್ಚ।'**

'ತತ್ತ್ವಂ ಅಸಿ' ಎಂಬಲ್ಲಿ ತತ್‌ಪದಾರ್ಥ ಬ್ರಹ್ಮ. ಅದರ ಸ್ವರೂಪ ನಿರ್ಣಯವಾಗುವುದು 'ಸತ್ಯಂ ಜ್ಞಾನ ಮನಂತಂ ಬ್ರಹ್ಮ' ಇತ್ಯಾದಿ ವಾಕ್ಯಗಳಲ್ಲಿ. ಈ ವಾಕ್ಯವನ್ನು ಪಕ್ಷ ಮಾಡಿಕೊಂಡು ಅದರಲ್ಲಿ ಲಕ್ಷಣವಾಕ್ಯತ್ವ ಸ್ವರೂಪಮಾತ್ರ ಪ್ರಶ್ನೋತ್ತರತ್ವ ಹೇತುಗಳಿಂದ ಅಖಂಡಾರ್ಥಪರತ್ವವನ್ನು ಅನುಮಾನ ಮಾಡುತ್ತಾರೆ. ಹಾಗೇ ತ್ವಂ ಪದಾರ್ಥ ಜೀವ. ಅದರ ಸ್ವರೂಪ ನಿರ್ಣಯವಾಗುವುದು 'ಯೋಽಯಂ ವಿಜ್ಞಾನಮಯಃ ಪ್ರಾಣೇಷು ಹೃದ್ಯಂತ ಜ್ಯೋತಿಃ ಪುರುಷಃ' 'ಯೇನ ವಾ ಪಶ್ಯತಿ ಯೇನ ವಾ ಶೃಣೋತಿ ಯೇನ ವಾ ಗಂಧಾನ್ ಜಿಘ್ರತಿ' ಇತ್ಯಾದಿ ವಾಕ್ಯಗಳಲ್ಲಿ. ಈ ವಾಕ್ಯಗಳನ್ನು ಪಕ್ಷಮಾಡಿಕೊಂಡು ಅವುಗಳಲ್ಲಿ ಲಕ್ಷಣವಾಕ್ಯತ್ವ ಮತ್ತು ಅಖಂಡಾರ್ಥಪ್ರಶ್ನೋತ್ತರತ್ವ ಹೇತುವಿನಿಂದ ಅಖಂಡಾರ್ಥಪರತ್ವವನ್ನು ಸಾಧನ ಮಾಡುತ್ತಾರೆ. ಈ ಲಕ್ಷಣ ವಾಕ್ಯಗಳು 'ಕತಮ ಆತ್ಮಾ?' 'ಕತರಃ ಸ ಆತ್ಮಾ?' ಎಂಬ ತ್ವಂ ಪದಾರ್ಥಪ್ರಶ್ನೆಗೆ ಉತ್ತರವಾಗಿ ಬಂದಿವೆ.

ಕತಮ ಕತರ ಶಬ್ದಗಳು ಡತಮಚ್ ಡತರಚ್ ಪ್ರತ್ಯಯಾಂತ ಕಿಂ ಶಬ್ದರೂಪಗಳು. 'ವಾ ಬಹೂನಾಂ ಜಾತಿ ಪರಿಪ್ರಶ್ನೇ ಡತಮಚ್' ಕಿಂ, ಯತ್, ತತ್ ಈ ಶಬ್ದಗಳಿಗೆ, ಜಾತಿಯನ್ನು ಕೇಳುವ ಅಭಿಪ್ರಾಯದಲ್ಲಿ ಡತಮಚ್ ಪ್ರತ್ಯಯ ಬರಬಹುದು, ಅಥವಾ ಅಕಚ್ ಪ್ರತ್ಯಯ ಬರಬಹುದು ಎಂದು ಪಾಣಿನಿಸೂತ್ರ, ಕಿಂ ಶಬ್ದಕ್ಕೆ ಡತಮಚ್ ಪ್ರತ್ಯಯ ಬಂದರೆ ಅದು ಡಿತ್ತಾದ್ದರಿಂದ ಟಿಲೋಪ ಮಾಡಿ 'ಕ್' ಅಂಶಕ್ಕೆ 'ಅತಮ' ಸೇರಿ ಕತಮಃ ಎಂದಾಗುತ್ತದೆ. 'ಅನೇಕರಲ್ಲಿ ಇವನು ಯಾವ ಜಾತಿಯವನು' ಎಂದರ್ಥ. ಹೀಗೆ ಯತ್ ತತ್ ಶಬ್ದಗಳಿಂದ ಯತಮಃ ತತಮಃ ಎಂದು ರೂಪಸಿದ್ಧಿ. 'ದ್ವಯೋರೇಕಸ್ಯ ನಿರ್ಧಾರಣೇ ಡತರಚ್' ಎಂಬುದು 'ಕಿಂಯತ್ತದೋ ನಿರ್ಧಾರಣೇ ದ್ವಯೋರೇಕಸ್ಯ ಡತರಚ್' ಎಂಬ ಪಾಣಿನಿ ಸೂತ್ರದ ಅರ್ಥಾನುವಾದ. ಜಾತಿ ಗುಣಾದಿಗಳಿಂದ ಇಬ್ಬರಲ್ಲೊಬ್ಬನೆಂದು ನಿರ್ಧಾರಣ ಮಾಡುವ ಅಭಿಪ್ರಾಯದಲ್ಲಿ ಕಿಂ ಯತ್ ತತ್ ಶಬ್ದಗಳಿಗೆ ಡತರಚ್ ಪ್ರತ್ಯಯ. ಕತರಃ ಯತರಃ ತತರಃ ಎಂದು ರೂಪಸಿದ್ಧಿ.

ಹೀಗೆ ಪ್ರಶ್ನೆಯಲ್ಲಿ ಜಾತ್ಯಾದ್ಯರ್ಥಕ ಕತಮಾದಿ ಶಬ್ದಪ್ರಯೋಗವಿದ್ದು ಜಾತ್ಯಾದಿಗಳಿಂದ ನಿರ್ಧಾರಣವೂ ವಿವಕ್ಷಿತವಾಗಿರುವುದರಿಂದ ಅದು ಸ್ವರೂಪಮಾತ್ರ ಪ್ರಶ್ನೆಯಾಗುವುದಿಲ್ಲ. ಅದಕ್ಕೆ

ಉತ್ತರವಾಗಿ ಬರುವ 'ಯೋಽಯಂ ವಿಜ್ಞಾನಮಯಃ' ವಾಕ್ಯ ಅದ್ವೈತಿಗೆ ಅಖಂಡಾರ್ಥತ್ವಾನುಮಾನದಲ್ಲಿ ಅಭಿಮತವಾದ ಪಕ್ಷ. ಈ ವಾಕ್ಯದಲ್ಲಿ ಸ್ವರೂಪ ಮಾತ್ರ ಪ್ರಶ್ನೋತ್ತರತ್ವರೂಪ ಹೇತುವಿಗೆ ಅಸಿದ್ಧಿ.



**किंच सर्वस्याप्युत्तरस्य प्रष्टृनिर्धारितप्रश्नधर्मिनिष्ठनिर्धारितैकप्रकारपरत्वाद्विरुद्धो हेतुः । यदि चोत्तरजन्यं ज्ञानं निष्प्रकारकं स्यात् तेन सप्रकारकसंदेहनिवृत्तिर्न स्यात् । यदि चोत्तरं प्रश्नादधिकविषयं न स्यात्तर्ह्युत्तरमेव न स्यात् । अन्यथा पश्न एवोत्तरं स्यात् ।**

**किं करोति? किमानेयम्? इत्यादिप्रश्नोत्तरेषु अध्ययनं करोति गामानयेत्यादिषु व्यभिचाराच्च । नहि तान्यप्यध्ययनत्वगोत्वादित्यागेन लक्षणया कर्मादिमात्रपराणि ।**

**एतेन सत्यादिवाक्यार्थः ब्रह्मप्रातिपदिकार्थमात्रं तन्मात्रप्रश्नोत्तरवाक्यार्थत्वादिति न्यायदीपावल्युक्तं व्यतिरेक्यनुमानं निरस्तम् ।**

**प्रष्टृनिर्धारितेति** ।। प्रष्ट्रा निर्धारितः प्रश्नधर्मिनिष्ठो यः प्रतिवक्त्रा निर्धारितः एकः प्रकारस्तत्परत्वादित्यर्थः ।। **संदेहनिवृत्तिर्न स्यादिति** ।। समानप्रकारकनिश्चयस्यैव संशयनिवारकत्वादिति भावः ।। तन्मात्रप्रश्नोत्तरवाक्यार्थत्वादिति हेतुवाक्यस्य, पृष्टमात्रोत्तरत्वादित्यर्थः । अखण्डार्थत्वे साध्ये व्यभिचारमाह— **किं करोतीति । एतेनेति** ।। उक्तबाधादिदोषग्रासेनेत्यर्थः ।। **तन्मात्रेति** ।। ब्रह्मप्रातिपदिकार्थमात्रप्रश्नोत्तरत्वादित्यर्थः ।



'ಕಿಂಚ ಸರ್ವಸ್ಯಾಪ್ಯುತ್ತರಸ್ಯ ಪ್ರಷ್ಟೃನಿರ್ಧಾರಿತ ಪ್ರಶ್ನಧರ್ಮಿನಿಷ್ಠ ನಿರ್ಧಾರಿತೈಕ ಪ್ರಕಾರ ಪರತ್ವಾದ್ ವಿರುದ್ಧೋ ಹೇತುಃ । ಯದಿಚೋತ್ತರಜನ್ಯಂ ಜ್ಞಾನಂ ನಿಷ್ಪ್ರಕಾರಕಂ ಸ್ಯಾತ್ ತೇನ 'ಸಪ್ರಕಾರಕ ಸಂದೇಹ ನಿವೃತ್ತಿ ರ್ನ ಸ್ಯಾತ್ । ಯದಿಚೋತ್ತರಂ ಪ್ರಶ್ನಾದಧಿಕವಿಷಯಂ ನ ಸ್ಯಾತ್ತರ್ಹ್ಯುತ್ತರಮೇವ ನ ಸ್ಯಾತ್ । ಅನ್ಯಥಾ ಪ್ರಶ್ನ ಏವೋತ್ತರಂ ಸ್ಯಾತ್ ।'

ತನ್ಮಾತ್ರಪ್ರಶ್ನೋತ್ತರತ್ವ ಅಂದರೆ, ಪೃಷ್ಟಮಾತ್ರೋತ್ತರತ್ವರೂಪ ಹೇತುವು ವಿರುದ್ಧವೂ ಹೌದು. ಏಕೆಂದರೆ ಎಲ್ಲ ಉತ್ತರ ವಾಕ್ಯಗಳೂ ನಿಯಮೇನ ಪೃಷ್ಟಮಾತ್ರೋತ್ತರವಾಗಬೇಕು. ಪೃಚ್ಛಕನಿಂದ ನಿರ್ಧಾರಿತವಾದ ಪ್ರಶ್ನಧರ್ಮಿಯಲ್ಲಿ ಉತ್ತರಿಸುವವನಿಂದ ನಿರ್ಧಾರಿತವಾದ ಏಕಧರ್ಮವೇ ಪ್ರಕಾರವಾಗಿ ವಿವಕ್ಷಿತವಾಗಿರಬೇಕು. ಸ್ವರೂಪಮಾತ್ರ ವಿವಕ್ಷೆ ಎಲ್ಲಿಯೂ ಇಲ್ಲ. ಪ್ರಕೃತ ಹೇತುವಿರುವಲ್ಲೆಲ್ಲ ಸಾಧ್ಯಾಭಾವವೇ ಇರುವುದರಿಂದ ಇದು ವಿರುದ್ಧ ಹೇತು. ಉತ್ತರ ಜನ್ಯ ಜ್ಞಾನವು ನಿಷ್ಪ್ರಕಾರಕವಾದರೆ ಸಮಾನಪ್ರಕಾರಕತ್ವವಿಲ್ಲವಾದ್ದರಿಂದ ಸಪ್ರಕಾರಕಸಂದೇಹ ಅದರಿಂದ ನಿವೃತ್ತಿಯಾಗದು. ಮತ್ತು ಪ್ರಶ್ನೆಗಿಂತ ಉತ್ತರವು ಹೆಚ್ಚು ವಿಷಯವನ್ನು ಹೇಳದಿದ್ದರೆ ಅದು ಉತ್ತರವೇ ಆಗದು. ಹೆಚ್ಚು ವಿಷಯ ಉತ್ತರದಲ್ಲಿ ಬೇಕಾಗಿಲ್ಲ ಎನ್ನುವುದಾದರೆ ಪ್ರಶ್ನೆಯೇ ಏಕೆ ಉತ್ತರವಾಗದು?

**'ಕಿಂ ಕರೋತಿ' 'ಕಿಮಾನೇಯಂ' ಇತ್ಯಾದಿ ಪ್ರಶ್ನೋತ್ತರೇಷು 'ಅಧ್ಯಯನಂ ಕರೋತಿ' 'ಗಾಮಾನಯ' ಇತ್ಯಾದಿಷು ವ್ಯಭಿಚಾರಾಚ್ಚ। ನ ಹಿ ತಾನ್ಯಪಿ ಅಧ್ಯಯನತ್ವ ಗೋತ್ವಾದಿ ತ್ಯಾಗೇನ ಲಕ್ಷಣಯಾ ಕರ್ಮಾದಿ ಮಾತ್ರ ಪರಾಣಿ।**

'ಏನು ಮಾಡುತ್ತಾನೆ? ಅಂದರೆ ಅವನ ಕೃತಿಗೆ ಕರ್ಮ ಯಾವುದು? ಏನು ತರಬೇಕು? ಅಂದರೆ, ಆನಯನಕ್ಕೆ ಕರ್ಮ ಯಾವುದು? ಎಂದು ಕೃತಿಕರ್ಮ ಆನಯನಕರ್ಮಗಳ ಬಗ್ಗೆ ಪ್ರಶ್ನೆ ಮಾಡಿದಾಗ ಉತ್ತರದಲ್ಲಿ ಅಧ್ಯಯನ ಮಾಡುತ್ತಾನೆ, ಗೋವನ್ನು ತರಬೇಕು ಎಂದೇ ಹೇಳುವುದರಿಂದ ಅಧ್ಯಯನ ಮತ್ತು ಗೋರೂಪ ಕರ್ಮಗಳ ಸ್ವರೂಪ ಮಾತ್ರವನ್ನು ಹೇಳುವುದಿಲ್ಲ. ಅಧ್ಯಯನತ್ವ ವಿಶಿಷ್ಟ, ಗೋತ್ವವಿಶಿಷ್ಟ ಕರ್ಮಗಳನ್ನೇ ಹೇಳುವುದು ಕಂಡಿದೆ. ಅದರಿಂದ ಸಖಂಡಾರ್ಥದಲ್ಲಿಯೇ ತಾತ್ಪರ್ಯ ಹೊರತು ಅಖಂಡಾರ್ಥದಲ್ಲಿ ತಾತ್ಪರ್ಯವಿಲ್ಲ. ಪೃಷ್ಟಮಾತ್ರೋತ್ತರತ್ವ ಹೇತುವು ಅಖಂಡಾರ್ಥಪರತ್ವಕ್ಕೆ ವ್ಯಾಪ್ಯವಾಗಿಲ್ಲ, ವ್ಯಭಿಚರಿತವಾಗಿದೆ. ಅಲ್ಲಿಯೂ ಕೂಡ ಅಧ್ಯಯನತ್ವ ಗೋತ್ವಾದಿಗಳಲ್ಲಿ ತಾತ್ಪರ್ಯವಿಲ್ಲವೆಂದು ಅವುಗಳನ್ನು ಬಿಟ್ಟು ಲಕ್ಷಣಾದಿಂದ ಕೇವಲ ಕರ್ಮಸ್ವರೂಪಪರವಾಗಿದೆ ಉತ್ತರವಾಕ್ಯ ಎಂದು ಯಾರೂ ಅಂಗೀಕರಿಸುವುದಿಲ್ಲ ತಾನೆ?

**'ಏತೇನ ''ಸತ್ಯಾದಿವಾಕ್ಯಾರ್ಥಃ ಬ್ರಹ್ಮಪ್ರಾತಿಪದಿಕಾರ್ಥ ಮಾತ್ರಂ, ತನ್ಮಾತ್ರ ಪ್ರಶ್ನೋತ್ತರ ವಾಕ್ಯಾರ್ಥತ್ವಾತ್'' ಇತಿ ನ್ಯಾಯದೀಪಾವಲ್ಯುಕ್ತಂ ವ್ಯತಿರೇಕ್ಯನುಮಾನಂ ನಿರಸ್ತಂ'**

ನ್ಯಾಯದೀಪಾವಲಿಯಲ್ಲಿ ಸತ್ಯಾದಿವಾಕ್ಯವನ್ನು ಪಕ್ಷಮಾಡದೆ ಅದರ ಅರ್ಥವನ್ನು ಪಕ್ಷಮಾಡಿ ಬ್ರಹ್ಮಪ್ರಾತಿಪದಿಕಾರ್ಥಮಾತ್ರತ್ವವನ್ನು ಸಾಧಿಸುವ ಅನುಮಾನವನ್ನು ಹೇಳಿದ್ದಾರೆ— ಸತ್ಯಾದಿವಾಕ್ಯಾರ್ಥವು ಬ್ರಹ್ಮಪ್ರಾತಿಪದಿಕಾರ್ಥ ಮಾತ್ರವೆ, ತನ್ಮಾತ್ರಪ್ರಶ್ನೆಯ ಉತ್ತರವಾಕ್ಯಾರ್ಥವಾದ್ದರಿಂದ ಎಂದು. ಇದು ವ್ಯತಿರೇಕಿ ಅನುಮಾನ. ವ್ಯತಿರೇಕೇಣ ಘಟವತ್ ಎಂದು ದೃಷ್ಟಾಂತ. ಈ ಅನುಮಾನಕ್ಕೂ ಬಾಧಾಸಿದ್ಧ್ಯಾದಿ ದೋಷವಿರುವುದರಿಂದ ಅಯುಕ್ತವಾಗಿದೆ.

ಇಲ್ಲಿ ಆಕ್ಷೇಪ— 'ಏಕಧೈವಾನು ದ್ರಷ್ಟವ್ಯಂ' ಬ್ರಹ್ಮಸ್ವರೂಪಮಾತ್ರವನ್ನೇ ಉಪಾಸನೆ

ಮಾಡಬೇಕು ಎಂದು ಮುಂತಾಗಿ ವಾಕ್ಯಗಳಿರುವುದರಿಂದ ವಿಶೇಷ್ಯಬ್ರಹ್ಮಸ್ವರೂಪಮಾತ್ರ ಜ್ಞಾನವೇ ಮೋಕ್ಷ ಸಾಧನವಾಗಿದೆ ಎಂದು ನಿರ್ಣಯವಾಗಿರುವುದ ರಿಂದ ವಿಶೇಷ್ಯಪರವೇ ಪ್ರಶ್ನೆ, ವಿಶೇಷ್ಯ ಪರವೇ ಉತ್ತರ ಆದರಿಂದ ಅಸಿದ್ಧಿ ಇಲ್ಲ' ಎಂದರೆ ಇದು ಸರಿಯಲ್ಲ.

'ಪೃಥಗಾತ್ಮಾನಂ ಪ್ರೇರಿತಾರಂ ಚ ಮತ್ವಾ' ಎಂದು ನಿರವಕಾಶವಾದ ಭೇದಜ್ಞಾನಮೋಕ್ಷ ಸಾಧನತ್ವಪರ ವಾಕ್ಯಗಳಿರುವುದರಿಂದ, 'ಏಕಧೈವ' ಎಂದರೆ 'ಏಕಮೇವ' 'ಬ್ರಹ್ಮ ಒಂದೆ ಎರಡಿಲ್ಲ' ಎಂಬರ್ಥದಲ್ಲಿ ಸಾವಕಾಶವಾಗಿರುವ 'ಏಕಧೈವಾನು ದ್ರಷ್ಟವ್ಯಂ' ವಾಕ್ಯ ವಿಶೇಷ್ಯಜ್ಞಾನಮಾತ್ರಕ್ಕೆ ಮೋಕ್ಷಸಾಧನತ್ವ ನಿರ್ಣಾಯಕವಾಗುವುದಿಲ್ಲ. ಹೀಗಾಗಿ ಪ್ರಶ್ನೋತ್ತರಗಳು ಬ್ರಹ್ಮಪ್ರಾತಿಪದಿಕಾರ್ಥ ಮಾತ್ರಪರ ಎನ್ನಲಾಗದು.



किंचैकप्रातिपदिकार्थप्रश्नोत्तरत्वेन कथमखंडार्थत्वम् ?

'स्वार्थो द्रव्यं तथा लिंगं संख्या कर्मादयोऽपि च ।
नामार्थपंचकं प्राहुराद्यं त्रिकमथापरे ।।'

इति वैयाकरणमते, त्वदेकदेशिभिः मया प्राभाकरैश्च स्वीकृतान्विताभिधानमते, अभिहितान्वयपक्षेऽपि जातिविशिष्टायां व्यक्तौ शक्तिरिति तार्किकमते च प्रातिपदिकार्थस्यैव विशिष्टत्वात्, जातावेव शक्तिर्व्यक्तिस्तु लक्ष्येति भाट्टानां तव च मते ब्रह्मप्रातिपदिकस्यैव यौगिकत्वेन तदर्थस्य विशिष्टत्वात् । नच प्रातिपदिकार्थे पृष्टे तदेकदेशोक्तिर्युक्ता ।

किंचाप्रयोजका हेतवः । तथाहि, विपक्षे बाधकं किं, ब्रह्मस्वरूपमात्रस्यैव बुभुत्सितत्वं? "एकधैवानुद्रष्टव्यं" इत्याद्यभेदविधायकवाक्यं वा? "उदरमंतरं कुरुत" इति भेदनिषेधकवाक्यं वा ? "केवलो निर्गुणश्च" इत्यादिगुणनिषेधकवाक्यं वा "एकमेवाद्वितीयम्" इत्यादिद्वितीयमात्रनिषेधकवाक्यं वा ? सर्वतोऽनवच्छिन्नवस्तुपरानंतब्रह्मशब्दौ वा ?

नाद्यः, निरस्तत्वात् । सत्यादिवाक्ये सत्सु विशेषणेषु

**सस्तुतिकविधिवाक्ये प्राशस्त्य इव रक्तपटन्यायेनाकांक्षाया उत्थाप-नीयत्वाच्च । उक्तं हि ''आकांक्षणीयाभावनिमित्तो ह्याकांक्षाभाव'' इति ।**

**निष्प्रकारकज्ञानस्याद्याप्यसिद्ध्या सप्रकारकज्ञानस्यैव मोक्षहेतुताया ''ब्रह्मविदाप्नोति परम्'' इत्यनेन प्रतीत्या ''तमेवं विद्वानमृत इह भवति'' इत्यादिश्रुत्या ''यो वेद निहितं'' इत्युत्तरवाक्येन चोक्त्या च मुमुक्षोः प्रकार एव धर्मिज्ञानसाध्यबुभु-त्सौचित्याच्च ।**

**यौगिकत्वेनेति ।** ''बृह बृहि वृद्धौ'' इति पाणिनिस्मरणात् ''बृहत्वाद्बृंहणत्वाच्च तद्ब्रह्मेत्यभिधीयते'' इति स्मृतेश्चेति भावः ।। **एकधैवेति ।।** एकत्वेनैवेत्यर्थः ।। **भेदनिषेधकवाक्यं वेति ।।** ''अथ तस्य भयं भवति'' इत्युत्तरवाक्ये भेददर्शिनो भयावेदनेनास्य तन्निषेधपरत्वावसायादिति भावः ।। **सर्वत इति ।** देशतः कालतो वस्तुतश्चेत्यर्थः ।। **तमेवं विद्वानिति ।।** उक्तगुणविशिष्टतया तं विद्वानित्यर्थः ।



'ಕಿಂಚ ಏಕಪ್ರಾತಿಪದಿಕಾರ್ಥ ಪ್ರಶ್ನೋತ್ತರತ್ವೇನ ಕಥಮಖಂಡಾರ್ಥತ್ವಂ?
ಸ್ವಾರ್ಥೋ ದ್ರವ್ಯಂ ತಥಾ ಲಿಂಗಂ ಸಂಖ್ಯಾ ಕರ್ಮಾದಯೋಽಪಿಚ ।
ನಾಮಾರ್ಥ ಪಂಚಕಂ ಪ್ರಾಹುರಾದ್ಯಂ ತ್ರಿಕಮಥಾಪರೇ ॥

ಇತಿ ವೈಯಾಕರಣಮತೇ, ತ್ವದೇಕದೇಶಿಭಿಃ ಮಯಾ ಪ್ರಾಭಾಕರೈಶ್ಚ ಸ್ವೀಕೃತಾನ್ವಿತಾಭಿಧಾನಮತೇ, ಅಭಿಹಿತಾನ್ವಯ ಪಕ್ಷೇಽಪಿ ಜಾತಿವಿಶಿಷ್ಟಾಯಂ ವ್ಯಕ್ತೌ ಶಕ್ತಿರಿತಿ ತಾರ್ಕಿಕ ಮತೇ ಚ ಪ್ರಾತಿಪದಿಕಾರ್ಥಸ್ಯೈವ ವಿಶಿಷ್ಟತ್ವಾತ್, ಜಾತಾವೇವ ಶಕ್ತಿರ್ವ್ಯಕ್ತಿಸ್ತು ಲಕ್ಷ್ಯೇತಿ ಭಾಟ್ಟಾನಾಂ ತವ ಚ ಮತೇ ಬ್ರಹ್ಮಪ್ರಾತಿಪದಿಕಸ್ಯೈವ ಯೌಗಿಕತ್ವೇನ ತದರ್ಥಸ್ಯ ವಿಶಿಷ್ಟತ್ವಾತ್ । ನಚ ಪ್ರಾತಿಪದಿಕಾರ್ಥೇ ಪೃಷ್ಟೇ ತದೇಕದೇಶೋಕ್ತಿರ್ಯುಕ್ತಾ ।'

ಪ್ರಾತಿಪದಿಕಾರ್ಥಮಾತ್ರ ಪರತ್ವವನ್ನು ಪ್ರಶ್ನೋತ್ತರಗಳಿಗೆ ಹೇಳಿದರೂ ಅಖಂಡಾರ್ಥತ್ವವು ಸಿದ್ಧಿಸುವುದಿಲ್ಲ. ಏಕೆಂದರೆ ಪ್ರಾತಿಪದಿಕಾರ್ಥ ಎಲ್ಲ ಕಡೆ ವಿಶಿಷ್ಟವೇ ಆಗಿರುತ್ತದೆ. ಹೀಗಾಗಿ

ಪ್ರಾತಿಪದಿಕಾರ್ಥಪರತ್ವವನ್ನು ಸಾಧಿಸಿದರೂ ಅಖಂಡಾರ್ಥಪರತ್ವರೂಪ ಉದ್ದೇಶ್ಯ ಸಿದ್ಧಿಯಾಗುವುದಿಲ್ಲ. ಅರ್ಥಾಂತರತ್ವ ಬರುತ್ತದೆ. ಪ್ರಾತಿಪದಿಕಾರ್ಥವಿಶೇಷ್ಯಮಾತ್ರ ಪರತ್ವವನ್ನೇ ಸಾಧಿಸುತ್ತೇವೆ ಅರ್ಥಾಂತರತ್ವವಿಲ್ಲ ಎನ್ನಲಾಗದು. ಪ್ರಾತಿಪದಿಕಾರ್ಥವನ್ನು ಕೇಳಿದರೆ ಅದರ ವಿಶೇಷ್ಯಮಾತ್ರವನ್ನು ಹೇಳುವುದು ವ್ಯಧಿಕರಣವಾಗುತ್ತದೆ.

ಪ್ರಾತಿಪದಿಕಾರ್ಥವು ಎಲ್ಲಕಡೆ ವಿಶಿಷ್ಟವೆನ್ನುವುದಕ್ಕೆ ವೈಯಾಕರಣರ ಈ ವಾಕ್ಯವೇ ಸಾಕ್ಷಿ—'ಸ್ವಾರ್ಥ ಅಂದರೆ ವಿಶೇಷಣವಾದ ಗೋತ್ವ, ದ್ರವ್ಯ ಅಂದರೆ ಗೋವ್ಯಕ್ತಿ, ಲಿಂಗ, ಸಂಖ್ಯಾ ಮತ್ತು ಕರ್ಮಾದಿಕಾರಕಗಳು ಇವು ಐದು ಪ್ರಾತಿಪದಿಕಾರ್ಥಗಳೆಂದು ಬಲ್ಲವರು ಹೇಳುತ್ತಾರೆ, ಕೆಲವರು ಮೊದಲಿನ ಮೂರು ಅಂದರೆ ಸ್ವಾರ್ಥ ದ್ರವ್ಯ ಲಿಂಗಗಳು ಪ್ರಾತಿಪದಿಕಾರ್ಥಗಳೆನ್ನುತ್ತಾರೆ' ಎಂದು.

'ಈ ಐದು ಅಥವಾ ಮೂರು ಅರ್ಥಗಳು ಕೈಬೆರಳುಗಳಂತೆ ಪ್ರತ್ಯೇಕವಾಗಿ ಶಬ್ದದಿಂದ ಪ್ರತೀತವಾಗುತ್ತವೆ, ವಿಶಿಷ್ಟವಾಗಿ ಅಲ್ಲ' ಎನ್ನಬಾರದು. ಮಹಾಭಾಷ್ಯದಲ್ಲಿ 'ಜ್ಯಾಪ್ ಪ್ರಾತಿಪದಿಕಾತ್' ಸೂತ್ರದಲ್ಲಿ 'ದ್ರವ್ಯಮಾಹ ಸಮವೇತಂ' ಅಂದರೆ, 'ಜಾತಿವಿಶಿಷ್ಟವ್ಯಕ್ತಿಯನ್ನು ಪ್ರಾತಿಪದಿಕವು ಹೇಳುತ್ತದೆ' ಎಂದೇ ವ್ಯಾಕರಣ ಮತ ಉಕ್ತವಾಗಿದೆ.

ಅದ್ವೈತಿಗಳಲ್ಲಿ ಕೆಲವರೂ, ದ್ವೈತಿಗಳೂ, ಪ್ರಾಭಾಕರರೂ ಒಪ್ಪಿರುವ ಅನ್ವಿತಾಭಿಧಾನ ಮತದಲ್ಲಿ ಇತರಾನ್ವಿತವಾದ ವಿಶಿಷ್ಟವಾದ ಪ್ರಾತಿಪದಿಕಾರ್ಥವನ್ನೇ ಪ್ರಾತಿಪದಿಕ ಹೇಳುತ್ತದೆ. ಅಭಿಹಿತಾನ್ವಯವಾದಿಮತದಲ್ಲಿಯೂ, ಜಾತಿವಿಶಿಷ್ಟವ್ಯಕ್ತಿಯಲ್ಲಿಯೆ ಪದಶಕ್ತಿ ಒಪ್ಪುವ ತಾರ್ಕಿಕ ಮತದಲ್ಲಿಯೂ ಪ್ರಾತಿಪದಿಕಾರ್ಥವು ವಿಶಿಷ್ಟವೆ. 'ಪದಗಳಿಗೆ ಜಾತಿಯಲ್ಲಿಯೇ ಶಕ್ತಿ, ವ್ಯಕ್ತಿಯಲ್ಲಿ ಲಕ್ಷಣಾ' ಎನ್ನುವ ಭಾಟ್ಟಮತ ಅದ್ವೈತಮತಗಳಲ್ಲಿಯೂ ಕೂಡ 'ಬ್ರಹ್ಮ' ಎಂಬ ಪ್ರಾತಿಪದಿಕವು ಯೌಗಿಕವಾದ್ದರಿಂದ ಅದರ ಅರ್ಥ ವಿಶಿಷ್ಟವೇ. 'ಬೃಹ ಬೃಹಿ ವೃದ್ಧೌ' ಎಂದು ಪಾಣಿನಿಸೂತ್ರವೂ 'ಬೃಹತ್ತ್ವಾದ್ ಬೃಂಹಣತ್ವಾಚ್ಚ ತದ್ ಬ್ರಹ್ಮೇತ್ಯಭಿಧೀಯತೇ' ಎಂದು ಸ್ಮೃತಿಯೂ ಬ್ರಹ್ಮಶಬ್ದ ಯೌಗಿಕವೆಂದು ಹೇಳುತ್ತಿದೆ.

**ಕಿಂಚಾಪ್ರಯೋಜಕಾ ಹೇತವಃ । ತಥಾಹಿ—ವಿಪಕ್ಷೇ ಬಾಧಕಂ ಕಿಂ ?**
**ಬ್ರಹ್ಮ ಸ್ವರೂಪಮಾತ್ರಸ್ಯೈವ ಬುಭುತ್ಸಿತತ್ವಂ ?**
**'ಏಕಧೈವಾನುದ್ರಷ್ಟವ್ಯಂ' ಇತ್ಯಾದ್ಯಭೇದವಿಧಾಯಕ ವಾಕ್ಯಂ ವಾ ?**
**'ಉದರಮಂತರಂ ಕುರುತ' ಇತ್ಯಾದಿ ಭೇದ ನಿಷೇಧಕ ವಾಕ್ಯಂ ವಾ ?**
**'ಕೇವಲೋ ನಿರ್ಗುಣಶ್ಚ' ಇತ್ಯಾದಿ ಗುಣ ನಿಷೇಧಕ ವಾಕ್ಯಂ ವಾ ?**
**'ಏಕಮೇವಾದ್ವಿತೀಯಂ' ಇತ್ಯಾದಿ ದ್ವಿತೀಯ ಮಾತ್ರ ನಿಷೇಧಕವಾಕ್ಯಂ ವಾ ?**
**ಸರ್ವತೋಽನವಚ್ಛಿನ್ನವಸ್ತುಪರ-ಅನಂತಬ್ರಹ್ಮಶಬ್ದೌ ವಾ ?'**

ಅಖಂಡಾರ್ಥತ್ವಕ್ಕೆ ತನ್ಮಾತ್ರ ಪ್ರಶ್ನೋತ್ತರತ್ವಾದಿ ಹೇತುಗಳು ಅಪ್ರಯೋಜಕವೂ ಆಗಿವೆ. ಏಕೆಂದರೆ ಅಖಂಡಾರ್ಥತ್ವವಿಲ್ಲದಿದ್ದರೆ ಏನು ಬಾಧಕವಿದೆ?

ಬ್ರಹ್ಮಸ್ವರೂಪ ಮಾತ್ರವೆ ಜಿಜ್ಞಾಸಿತವಾಗುತ್ತಿರುವುದು ಬಾಧಕವೆ?

'ಏಕಧೈವಾನುದ್ರಷ್ಟವ್ಯಂ' ಇತ್ಯಾದಿ ಅಭೇದಪ್ರತಿಪಾದಕ ವಾಕ್ಯವು ಬಾಧಕವೆ?

'ಉದರಮಂತರಂ ಕುರುತೇ ಅಥ ತಸ್ಯ ಭಯಂ ಭವತಿ।' 'ಭೇದವನ್ನು ತಿಳಿದರೆ ಅನರ್ಥವಿದೆ' ಎಂದು ಭೇದನಿಷೇಧ ಮಾಡುವ ವಾಕ್ಯವು ಬಾಧಕವೆ?

'ಕೇವಲೋ ನಿರ್ಗುಣಶ್ಚ' ಎಂದು ಗುಣನಿಷೇಧ ಮಾಡುವ ವಾಕ್ಯವು ಬಾಧಕವೆ?

'ಏಕಮೇವಾದ್ವಿತೀಯಂ' ಎಂದು 'ದ್ವಿತೀಯವಸ್ತು ಒಂದೂ ಸತ್ಯವಲ್ಲ' ಎಂದು ನಿಷೇಧಿಸುವ ವಾಕ್ಯ ಬಾಧಕವೆ?

'ಬ್ರಹ್ಮನು ಯಾವುದೇ ದೇಶಕಾಲ ವಸ್ತು ಪರಿಚ್ಛೇದದಿಂದ ರಹಿತ'ನೆಂದು ಹೇಳುವ 'ಅನಂತ' 'ಬ್ರಹ್ಮ' ಶಬ್ದಗಳು ಬಾಧಕವೆ?

**ನಾದ್ಯಃ। ನಿರಸ್ತತ್ವಾತ್। ಸತ್ಯಾದಿವಾಕ್ಯೇ ಸತ್ಸು ವಿಶೇಷಣೇಷು ಸಸ್ತುತಿಕ ವಿಧಿವಾಕ್ಯೇ ಪ್ರಾಶಸ್ತ್ಯ ಇವ ರಕ್ತಪಟ ನ್ಯಾಯೇನ ಆಕಾಂಕ್ಷಾಯಾ ಉತ್ಥಾಪನೀಯತ್ವಾಚ್ಚ। ಉಕ್ತಂ ಹಿ 'ಆಕಾಂಕ್ಷಣೀಯಾಭಾವ ನಿಮಿತ್ತೋ ಹ್ಯಾಕಾಂಕ್ಷಾಭಾವಃ' ಇತಿ।**

'ಬ್ರಹ್ಮಸ್ವರೂಪಮಾತ್ರವೇ ಪ್ರಶ್ನೆ ಮಾಡುವವನಿಗೆ ಜಿಜ್ಞಾಸಿತವಾಗಿರುವುದು ಅಖಂಡಾರ್ಥತ್ವವನ್ನು ಒಪ್ಪದಿರುವ ಪಕ್ಷದಲ್ಲಿ ಬಾಧಕ ಎನ್ನುವ ಮೊದಲನೆ ಪಕ್ಷ ಯುಕ್ತವಲ್ಲ.

ಧರ್ಮಿಸ್ವರೂಪವು ಸಾಮಾನ್ಯತಃ ಸಿದ್ಧವೇ ಆಗಿರುವುದರಿಂದ ಅದರ ವಿಷಯದಲ್ಲಿ ಜಿಜ್ಞಾಸೆ ಕೂಡುವುದಿಲ್ಲ. ಧರ್ಮದ ವಿಷಯದಲ್ಲಿಯೇ ಜಿಜ್ಞಾಸೆ ಯುಕ್ತ ಎಂದು ಹಿಂದೆಯೇ ಬ್ರಹ್ಮಸ್ವರೂಪ ಮಾತ್ರದ ಜಿಜ್ಞಾಸೆಯನ್ನು ನಿರಾಸ ಮಾಡಿದ್ದೇವೆ.

ತುಷ್ಯತು ದುರ್ಜನ ನ್ಯಾಯದಿಂದ ಬ್ರಹ್ಮಸ್ವರೂಪದಲ್ಲಿಯೇ ಜಿಜ್ಞಾಸೆ ಎಂದು ಒಪ್ಪಿದರೂ, ವಿಶೇಷಣಾಂಶದಲ್ಲಿ ಸ್ವರಸವಾಗಿ ಆಕಾಂಕ್ಷೆ ಇಲ್ಲವೆಂದು ಒಪ್ಪಿದರೂ, ಸತ್ಯಾದಿವಾಕ್ಯದಲ್ಲಿ ಸತ್ಯಾದಿ ವಿಶೇಷಣ ಪದಗಳಿರುವುದರಿಂದ, ಅವುಗಳ ಸಾರ್ಥಕ್ಯಕ್ಕಾಗಿ 'ಎಂಥ ಬ್ರಹ್ಮ?' ಎಂದು ಆಕಾಂಕ್ಷೆಯನ್ನು ಉತ್ಥಾಪನ ಮಾಡುವುದು ನ್ಯಾಯ.

'ವಾಯವ್ಯಂ ಶ್ವೇತಮಾಲಭೇತ' ಎಂದು ಯಾಗ ವಿಧಾನ ಮಾಡಿ 'ವಾಯುರ್ವೈ ಕ್ಷೇಪಿಷ್ಠಾ ದೇವತಾ' ಎಂದು ಯಾಗಪ್ರಶಂಸೆ ಮಾಡುವ ವಾಕ್ಯವೂ ಬರುತ್ತದೆ. 'ವಾಯುದೇವತಾಕ ಯಾಗ ಮಾಡಬೇಕು' ಎಂಬ ವಾಕ್ಯಕ್ಕೆ ಸ್ವರಸ ಆಕಾಂಕ್ಷಾ ನಿವೃತ್ತವಾಗಿದ್ದರೂ 'ವಾಯು ಎಂಥ ದೇವತೆ' ಎಂದು

ಆಕಾಂಕ್ಷೆಯನ್ನು ಎಬ್ಬಿಸಿ 'ವಾಯು ಕ್ಷೇಪಿಷ್ಠ, ಬಲು ವೇಗವುಳ್ಳ ಬೇಗನೆ ಫಲ ನೀಡುವ ದೇವತೆ' ಎಂದು ಸ್ತುತಿಯನ್ನು ಯಾಗಕ್ಕೆ ಅನ್ವಯಿಸುತ್ತೇವೆ. ಇಲ್ಲದಿದ್ದರೆ ಆ ವಾಕ್ಯ ವ್ಯರ್ಥವಾದೀತು.

'ಕೆಂಪು ಬಟ್ಟೆ ಇದೆ' ಎಂಬಲ್ಲಿ 'ಬಟ್ಟೆ ಇದೆ' ಎಂಬುದರಿಂದಲೆ 'ಬಟ್ಟೆ' ಎಂಬ ನಾಮಕ್ಕೆ 'ಇದೆ' ಎಂಬ ಆಖ್ಯಾತಾನ್ವಯದಿಂದ ಸ್ವರಸವಾದ ಆಕಾಂಕ್ಷೆ ಶಾಂತವಾಗಿದ್ದರೂ 'ಕೆಂಪು' ಶಬ್ದದ ಸಾರ್ಥಕ್ಯಕ್ಕಾಗಿ 'ಎಂಥ ಬಟ್ಟೆ' ಎಂದು ಆಕಾಂಕ್ಷೆಯನ್ನೆತ್ತಿಕೊಂಡು ಕೆಂಪುಶಬ್ದವನ್ನು ಬಟ್ಟೆಶಬ್ದಕ್ಕೆ ಅನ್ವಯಿಸುವುದುಂಟು. ಹಾಗೇ ಸತ್ಯಾದಿವಾಕ್ಯದಲ್ಲಿಯೂ ಆಕಾಂಕ್ಷೆಯನ್ನು ಎಬ್ಬಿಸಿ ಸತ್ಯಾದಿ ವಿಶೇಷಣಪದಾನ್ವಯ ಮಾಡುವುದು ಯುಕ್ತ.

ಆಕಾಂಕ್ಷೆ ಇಲ್ಲವೆಂದು ಸತ್ಯಾದಿ ಪದವನ್ನು ಬಿಡುವುದು ಯುಕ್ತವಲ್ಲ. 'ಉತ್ಥಾಪ್ಯ ಆಕಾಂಕ್ಷಾಕ್ಕೂ ಕೂಡ ಯೋಗ್ಯವಾದ ಪದವಿಲ್ಲದಿದ್ದರೆ ಮಾತ್ರ ಆಕಾಂಕ್ಷೆ ಇಲ್ಲವೆನ್ನಬೇಕು. ಅದು ಇರುವಾಗ 'ಆಕಾಂಕ್ಷೆ ಇಲ್ಲ' ಎನ್ನಬಾರದು ಎಂದು ಮೀಮಾಂಸಕರು ಹೇಳಿದ್ದಾರೆ. ಹೀಗಾಗಿ ಸತ್ಯಾದಿಪದಾನ್ವಯದಿಂದ ಸತ್ಯತ್ವಾದಿ ಧರ್ಮವಿಶಿಷ್ಟಬ್ರಹ್ಮವೇ ಸತ್ಯಾದಿವಾಕ್ಯಪ್ರತಿಪಾದ್ಯವಾಗಿರುತ್ತದೆ ಹೊರತು ಬ್ರಹ್ಮಸ್ವರೂಪ ಮಾತ್ರವೇ ಜಿಜ್ಞಾಸಿತವಾದ್ದರಿಂದ ಬ್ರಹ್ಮಸ್ವರೂಪ ಮಾತ್ರವೇ ಪ್ರತಿಪಾದ್ಯ ಎನ್ನುವುದು ಯುಕ್ತವಲ್ಲ.

**'ನಿಷ್ಪ್ರಕಾರಕಜ್ಞಾನಸ್ಯಾದ್ಯಾಪ್ಯಸಿದ್ಧ್ಯಾ ಸಪ್ರಕಾರಕಜ್ಞಾನಸ್ಯೈವ ಮೋಕ್ಷ ಹೇತುತಾಯಾ 'ಬ್ರಹ್ಮವಿದಾಪ್ನೋತಿ ಪರಂ' ಇತ್ಯನೇನ ಪ್ರತೀತ್ಯಾ 'ತಮೇವಂ ವಿದ್ವಾನಮೃತ ಇಹ ಭವತಿ' ಇತ್ಯಾದಿಶ್ರುತ್ಯಾ 'ಯೋ ವೇದ ನಿಹಿತಂ ಗುಹಾಯಾಂ' ಇತ್ಯುತ್ತರ ವಾಕ್ಯೇನ ಚೋಕ್ತ್ಯಾ ಚ ಮುಮುಕ್ಷೋಃ ಪ್ರಕಾರ ಏವ ಧರ್ಮಿಜ್ಞಾನಸಾಧ್ಯ ಬುಭುತ್ಸೋಚಿತ್ಯಾಚ್ಚ ।'**

ಅಭ್ಯುಪಗಮವಾದದಿಂದ ಈ ಉತ್ಥಾಪ್ಯಾಕಾಂಕ್ಷಾವನ್ನು ಹೇಳಿದ್ದೇವೆ. ವಸ್ತುತಃ ಮುಮುಕ್ಷುವಿಗೆ ಸತ್ಯತ್ವಾದಿ ಧರ್ಮವಿಶಿಷ್ಟವಿಷಯದಲ್ಲಿಯೆ ಜಿಜ್ಞಾಸೆ ಉಂಟಾಗುವುದು ಸಹಜ. ಏಕೆಂದರೆ ನಿಷ್ಪ್ರಕಾರಕ ಜ್ಞಾನವಿನ್ನೂ ಸಿದ್ಧವಾಗಿಲ್ಲ. ಆದರಿಂದ ಸಪ್ರಕಾರಕ ಜ್ಞಾನವೇ ಮೋಕ್ಷಹೇತು ಎಂಬುದು 'ಬ್ರಹ್ಮವಿದಾಪ್ನೋತಿ ಪರಂ' ಎಂಬ ವಾಕ್ಯದಿಂದ ತಿಳಿದು ಬರುತ್ತದೆ.

'ತಮೇವಂ ವಿದ್ವಾನಮೃತ ಇಹ ಭವತಿ' 'ಏವಂ' ಹೀಗೆ, ಸಹಸ್ರಶೀರ್ಷಾಪುರುಷಃ ಇತ್ಯಾದಿ ವಾಕ್ಯದಲ್ಲಿ ಹೇಳಿದ ಧರ್ಮವಿಶಿಷ್ಟನೆಂದು ಬ್ರಹ್ಮನನ್ನು ತಿಳಿದರೇ ಮೋಕ್ಷಪ್ರಾಪ್ತಿ ಎಂದು ಶ್ರುತಿ ಸ್ಪಷ್ಟವಾಗಿ ಇದನ್ನು ಹೇಳುತ್ತದೆ. ಇಲ್ಲಿಯೂ ಮುಂದೆ 'ಯೋ ವೇದ ನಿಹಿತಂ ಗುಹಾಯಾಂ' ಹೃದಯಗುಹಾ ವಾಸಿತ್ವ ಪ್ರಕಾರಕವಾಗಿ ಬ್ರಹ್ಮಜ್ಞಾನವನ್ನು ಸಂಪಾದಿಸಿದರೆ 'ಸೋಽಶ್ನುತೇ ಸರ್ವಾನ್ ಕಾಮಾನ್' ಮೋಕ್ಷಸುಖವನ್ನು ಗಳಿಸುತ್ತಾನೆ ಎಂದು ಸಪ್ರಕಾರಕ ಜ್ಞಾನವೇ ಮೋಕ್ಷ ಸಾಧನವೆಂದು ಹೇಳಿದೆ.

ಆದರಿಂದ ಮುಮುಕ್ಷುವಿಗೆ ಸತ್ಯತ್ವಾದಿ ಪ್ರಕಾರವಿಷಯದಲ್ಲಿಯೇ ಬ್ರಹ್ಮರೂಪ

ಧರ್ಮಜ್ಞಾನದಿಂದ ಜಿಜ್ಞಾಸೆ ಹುಟ್ಟುತ್ತದೆ ಎನ್ನುವುದು ಉಚಿತ. ಕೇವಲ ಧರ್ಮಿಸ್ವರೂಪದಲ್ಲಿಯೇ ಜಿಜ್ಞಾಸೆ ಸರ್ವಥಾ ಬರಲಾರದು.



**निर्गुणवाक्यवत् सगुणवाक्यस्यापि ब्रह्मबुभुत्सायां, कर्मकांडस्य च कर्मबुभुत्सायां, वैद्यादिशास्त्रस्याप्यौषधादिबुभुत्सायां प्रवृत्ततया लक्षणया सगुणवाक्यमप्यखंडब्रह्मपरं, कर्मकांडमप्यखंडकर्मपरं, वैद्यादिशास्त्रमप्यखंडौषधादिपरमित्यापाताच्च । अस्ति च धर्म इव ब्रह्मण्यप्यलक्षणरूपं वाक्यम् ।**

**न मध्यमाः ।**

**तेषां चैक्यभेदाभावादिविशिष्टार्थपरत्वे वेदांतमात्रस्याखंडार्थत्वासिद्धेः। सत्यशुद्धान्यमिथ्याविशिष्टार्थपरत्वे प्रामाण्यायोगाच्च । तेषामेव लक्षणयाऽखंडार्थता, सत्यादिवाक्यस्य तु सत्यत्वादिविशिष्टार्थपरतेति वैपरीत्यापाताच्च । उभयोरपि मुमुक्षुज्ञेयब्रह्मपरत्वाविशेषात् ।**

**नचास्यां दशायां ब्रह्मण्यभावरूप एव धर्मो मुमुक्षुणा ज्ञेयो नतु भावरूप इति सिद्धम् । तेषां लक्षणयाऽखंडार्थत्वे तु न तद्विरोधेन विशिष्टार्थस्य सत्यादिवाक्यस्य मुख्यार्थत्यागः । विशेष्यपरस्य विशिष्टपरेणाविरोधात् ।**

ननु ब्रह्मकांडस्य सर्वस्य लक्षणवाक्यत्वादखंडब्रह्मपरत्वम् । कर्मकांडस्य तु सर्वस्य लक्षणपरत्वाभावाद्वैषम्यमित्याशंक्याह– **अस्ति चेति । अलक्षणरूपमिति ।।** ''असन्नेव स भवति, ब्रह्म पुच्छं प्रतिष्ठा'' इत्यादिवाक्यमित्यर्थः । बाधकत्वेनाभिमतानामेकधेत्यादिवाक्यानां किमैक्यादिविशिष्टार्थपरत्वमुताखंडार्थपरत्वम् । आद्येऽपि किं विशिष्टं सत्यं मिथ्याभूतं वेति विकल्प्य आद्यं प्रत्याह– **तेषामिति ।।** द्वितीय आह– **सत्यशुद्धेति । अस्यामिति ।।** विचारदशायामित्यर्थः । अंत्य आह– **तेषामिति । विशेष्यपरस्येति ।।** अन्यथा 'पुरुषोऽस्ति' 'दंडी पुरुषोऽस्ती' त्यनयोरपि विरोधापत्तेरिति भावः ।

**ನಿರ್ಗುಣವಾಕ್ಯವತ್ ಸಗುಣವಾಕ್ಯಸ್ಯಾಪಿ ಬ್ರಹ್ಮಬುಭುತ್ಸಾಯಾಂ, ಕರ್ಮಕಾಂಡಸ್ಯ ಚ ಕರ್ಮಬುಭುತ್ಸಾಯಾಂ, ವೈದ್ಯಾದಿಶಾಸ್ತ್ರಸ್ಯಾಪಿ ಔಷಧಾದಿಬುಭುತ್ಸಾಯಾಂ ಪ್ರವೃತ್ತತಯಾ ಲಕ್ಷಣಯಾ ಸಗುಣವಾಕ್ಯಮಪಿ ಅಖಂಡ ಬ್ರಹ್ಮಪರಂ, ಕರ್ಮಕಾಂಡ ಮಪಿ ಅಖಂಡ ಕರ್ಮಪರಂ, ವೈದ್ಯಾದಿಶಾಸ್ತ್ರಮಪಿ ಅಖಂಡ ಔಷಧಾದಿಪರಂ ಇತ್ಯಾಪಾತಾಚ್ಚ। ಅಸ್ತಿ ಚ ಧರ್ಮ ಇವ ಬ್ರಹ್ಮಣ್ಯಪಿ ಅಲಕ್ಷಣರೂಪಂ ವಾಕ್ಯಂ।''**

ಬ್ರಹ್ಮಸ್ವರೂಪ ಜಿಜ್ಞಾಸೆಯಿರುವುದರಿಂದಲೇ ಸತ್ಯಾದಿವಾಕ್ಯ ಹೊರಟಿರುವುದರಿಂದ ಅದು ಅಖಂಡಾರ್ಥಪರ ಎಂದು ಒಪ್ಪಿದರೆ ಅದು ಅನೇಕ ಅತಿಪ್ರಸಂಗಕ್ಕೆ ಎಡೆಮಾಡಿಕೊಡುತ್ತದೆ. ನಿರ್ಗುಣ ವಾಕ್ಯದಂತೆ ಸಗುಣವಾಕ್ಯವೂ ಕೂಡ ಬ್ರಹ್ಮಸ್ವರೂಪಜಿಜ್ಞಾಸೆ ಇರುವುದರಿಂದಲೇ ಪ್ರವೃತ್ತವಾಗಿರುವುದರಿಂದ ಅದು ಕೂಡ ಲಕ್ಷಣಯಾ ಅಖಂಡಬ್ರಹ್ಮಪರವಾಗಬೇಕಾದೀತು. ಕರ್ಮಕಾಂಡವೂ ಕೂಡ ಕರ್ಮಜಿಜ್ಞಾಸೆಯಿಂದಲೆ ಪ್ರವೃತ್ತವಾದ್ದರಿಂದ ಅದು ಕೂಡ ಲಕ್ಷಣಯಾ ಅಖಂಡಕರ್ಮ ಪರವೆನ್ನಬೇಕಾದೀತು. ವೈದ್ಯಶಾಸ್ತ್ರವೂ ಕೂಡ ಔಷಧಾದಿ ಜಿಜ್ಞಾಸೆ ಇರುವುದರಿಂದಲೇ ಪ್ರವೃತ್ತ ವಾದ್ದರಿಂದ ಅದೂ ಕೂಡ ಅಖಂಡ ಔಷಧಾದಿಪರವೆಂದಾದೀತು.

'ಕರ್ಮಕಾಂಡ ವೈದ್ಯಶಾಸ್ತ್ರಾದಿಗಳಲ್ಲಿ ಎಲ್ಲ ವಾಕ್ಯಗಳೂ ಲಕ್ಷಣಪರವಾಗಿರುವುದಿಲ್ಲ. ಅಲಕ್ಷಣವಾಕ್ಯಗಳೂ ಬಹಳ ಇರುತ್ತವೆ. ಆದರಿಂದ ಎಲ್ಲ ವಾಕ್ಯಗಳು ಅಖಂಡಾರ್ಥ ಪರವೆನಿಸುವ ಪ್ರಸಂಗವಿಲ್ಲ' ಎಂದರೆ, ಬ್ರಹ್ಮಕಾಂಡದಲ್ಲಿಯೂ ಎಲ್ಲ ವಾಕ್ಯಗಳು ಬ್ರಹ್ಮಲಕ್ಷಣಪರವಾಗಿರುವುದಿಲ್ಲ. 'ಅಸನ್ನೇವ ಸ ಭವತಿ' 'ಬ್ರಹ್ಮಪುಚ್ಛಂ ಪ್ರತಿಷ್ಠಾ' 'ಸ ಯಥಾ ಶಕುನಿಃ' ಎಂದು ಮುಂತಾಗಿ ಅಲಕ್ಷಣ ವಾಕ್ಯಗಳೂ ಬಹಳ ಇರುತ್ತವೆ. ಅವೆಲ್ಲವನ್ನೂ ಅಖಂಡಬ್ರಹ್ಮಪರವೆನ್ನಲಾಗದು. ಹೀಗಾಗಿ ಸಮಸ್ತ ವೇದಾಂತವೂ ಅಖಂಡಾರ್ಥಪರವೆನ್ನುವುದು ಕೂಡುವುದಿಲ್ಲ.

**'ನ ಮಧ್ಯಮಾಃ।**

**ತೇಷಾಂ ಚ ಐಕ್ಯ ಭೇದಾಭಾವಾದಿ ವಿಶಿಷ್ಟಾರ್ಥಪರತ್ವೇ ವೇದಾಂತಮಾತ್ರಸ್ಯಾ ಖಂಡಾರ್ಥತ್ವಾಸಿದ್ಧೇಃ ಸತ್ಯಶುದ್ಧಾನ್ಯ ಮಿಥ್ಯಾವಿಶಿಷ್ಟಾರ್ಥಪರತ್ವೇ ಪ್ರಾಮಾಣ್ಯಾ ಯೋಗಾಚ್ಚ। ತೇಷಾಮೇವ ಲಕ್ಷಣಯಾ ಅಖಂಡಾರ್ಥತಾ, ಸತ್ಯಾದಿ ವಾಕ್ಯಸ್ಯ ತು ಸತ್ಯತ್ವಾದಿ ವಿಶಿಷ್ಟಾರ್ಥ ಪರತಾ ಇತಿ ವೈಪರೀತ್ಯಾಪಾತಾಚ್ಚ। ಉಭಯೋರಪಿ ಮುಮುಕ್ಷು ಜ್ಞೇಯ ಬ್ರಹ್ಮಪರತ್ವಾವಿಶೇಷಾತ್।'**

ಪ್ರಥಮ ಅಂತಿಮಗಳ ನಡುವಿನ ಪಕ್ಷಗಳು— ಅಖಂಡಾರ್ಥತ್ವವಿಲ್ಲವೆಂದರೆ 'ಏಕಧೈವಾನುದ್ರಷ್ಟವ್ಯಂ' 'ಉದರಮಂತರಂ ಕುರುತೇ' 'ಕೇವಲೋ ನಿರ್ಗುಣಶ್ಚ' 'ಏಕಮೇವಾ ದ್ವಿತೀಯಂ' ವಾಕ್ಯಗಳು ಬಾಧಕವಾಗುತ್ತವೆ ಎನ್ನುವ ನಾಲ್ಕೂ ಪಕ್ಷಗಳು ಅಯುಕ್ತ.

ಏಕೆಂದರೆ ಈ ವಾಕ್ಯಗಳಿಗೆ ಐಕ್ಯ ಭೇದಾಭಾವ ನಿರ್ಗುಣತ್ವ ಮತ್ತು ದ್ವಿತೀಯಾಭಾವಗಳೆಂಬ

ವಿಶಿಷ್ಟಾರ್ಥಗಳಲ್ಲಿ ತಾತ್ಪರ್ಯವೆನ್ನುವ ಪಕ್ಷದಲ್ಲಿ ವೇದಾಂತವಾಕ್ಯಗಳೆಲ್ಲವೂ ಅಖಂಡಾರ್ಥಪರವೆಂಬುದು ಸಿದ್ಧವಾಗದು.

'ಈ ಐಕ್ಯ ಭೇದಾಭಾವ ನಿರ್ಗುಣತ್ವ ಮತ್ತು ದ್ವಿತೀಯಾಭಾವಗಳು ಸತ್ಯ ಶುದ್ಧಸ್ವರೂಪ ವಲ್ಲ, ಮಿಥ್ಯಾಭೂತ ವಿಶಿಷ್ಟ ಪದಾರ್ಥಗಳು' ಎನ್ನುವುದಾದರೆ ಈ ವೇದಾಂತ ವಾಕ್ಯಗಳೆಲ್ಲವೂ ಅತತ್ತ್ವಾವೇದಕವೆಂದಾದೀತು. ಮತ್ತು ಐಕ್ಯಾದಿವಾಕ್ಯಗಳೇ ಲಕ್ಷಣೆಯಿಂದ ಅಖಂಡಾರ್ಥಪರ, ಸತ್ಯಾದಿವಾಕ್ಯವು ಸತ್ಯತ್ವಾದಿವಿಶಿಷ್ಟಪರ ಎಂದು ವಿಪರೀತವಾಗಿ ಏಕೆ ಹೇಳಬಾರದು ಎಂಬ ಪ್ರಶ್ನೆಯೂ ಬರುತ್ತದೆ.

**'ನ ಚಾಸ್ಯಾಂ ದಶಾಯಾಂ ಬ್ರಹ್ಮಣ್ಯಭಾವರೂಪ ಏವ ಧರ್ಮೋ ಮುಮುಕ್ಷುಣಾ ಜ್ಞೇಯೋ, ನ ತು ಭಾವರೂಪ ಇತಿ ಸಿದ್ಧಂ । ತೇಷಾಂ ಲಕ್ಷಣಯಾ ಅಖಂಡಾರ್ಥತ್ವೇ ತು ನ ತದ್ವಿರೋಧೇನ ವಿಶಿಷ್ಟಾರ್ಥಸ್ಯ ಸತ್ಯಾದಿವಾಕ್ಯಸ್ಯ ಮುಖ್ಯಾರ್ಥತ್ಯಾಗಃ । ವಿಶೇಷ್ಯ ಪರಸ್ಯ ವಿಶಿಷ್ಟಪರೇಣ ಅವಿರೋಧಾತ್ ॥**

ಈ ಅಖಂಡಾರ್ಥ ವಿಚಾರದೆಶೆಯಲ್ಲಿ 'ಬ್ರಹ್ಮನಲ್ಲಿ ಅಭಾವರೂಪ ಧರ್ಮವೇ ಮುಮುಕ್ಷು ತಿಳಿಯಬೇಕಾದುದು, ಭಾವರೂಪಧರ್ಮವಲ್ಲ' ಎನ್ನುವುದು ಇನ್ನೂ ಸಿದ್ಧವಾಗಿಲ್ಲ. ಅದರಿಂದ 'ಅಭಾವಧರ್ಮಗಳನ್ನು ಹೇಳುವ ಏಕದ್ವೈವಾದಿವಾಕ್ಯಗಳಿಗೆ ಲಕ್ಷಣಯಾ ಅಖಂಡಾರ್ಥಪರತ್ವವನ್ನು ಹೇಳಬೇಕಾಗಿಲ್ಲ. ಮುಮುಕ್ಷುಗಳು ಆ ಧರ್ಮಗಳನ್ನು ತಿಳಿಯಬಹುದು. ಮುಮುಕ್ಷುಗಳಿಗೆ ಜ್ಞೇಯವಲ್ಲದಿರುವ ಸತ್ಯತ್ವಾದಿ ಭಾವಧರ್ಮಗಳನ್ನು ಹೇಳುವ ಸತ್ಯಾದಿವಾಕ್ಯಗಳಿಗೇ ಲಕ್ಷಣಯಾ ಅಖಂಡಾರ್ಥ ಪರತ್ವವನ್ನು ಹೇಳಬೇಕೆಂ'ದು ವ್ಯವಸ್ಥೆ ಮಾಡುವುದು ಸರಿಯಲ್ಲ.

ಏಕದ್ವೈವಾದಿವಾಕ್ಯಗಳಿಗೆ ಲಕ್ಷಣಯಾ ವಿಶೇಷ್ಯಮಾತ್ರ ಪರತ್ವವನ್ನು ಅಂಗೀಕರಿಸುವ ಪಕ್ಷದಲ್ಲಿ ವಿಶಿಷ್ಟಾರ್ಥಪರ ಸತ್ಯಾದಿ ವಾಕ್ಯಗಳಿಗೆ ಲಕ್ಷಣಯಾ ಮುಖ್ಯಾರ್ಥತ್ಯಾಗಮಾಡಿ ಅಖಂಡಾರ್ಥವನ್ನು ಹೇಳಬೇಕಾಗಿಲ್ಲ. ವಿಶೇಷ್ಯಪರ ವಾಕ್ಯಕ್ಕೆ ವಿಶಿಷ್ಟಪರ ವಾಕ್ಯದಿಂದ ವಿರೋಧವಿಲ್ಲ ತಾನೆ? ದೇವದತ್ತನಿದ್ದಾನೆ ದಂಡಿದೇವದತ್ತನಿದ್ದಾನೆ ಎಂಬ ವಾಕ್ಯಗಳಿಗೆ ವಿರೋಧವಿಲ್ಲ. ಅದರಿಂದ ಏಕದ್ವೈವಾದಿ ವಾಕ್ಯವಿರೋಧದಿಂದ ಸತ್ಯಾದಿವಾಕ್ಯಕ್ಕೆ ಲಕ್ಷಣಾ ಮಾಡುವುದು ಯುಕ್ತವಲ್ಲ.



**ननु ऐक्यादेर्द्वारत्वेनोपादानाद्विरोध इति चेन्न, द्वारीभूतस्य ब्रह्मान्यस्य ऐक्यादेर्मिथ्यात्वे सत्यत्वादिधर्मपारमार्थ्याविरोधित्वात् । सत्यत्वे चापसिद्धांतात् । द्वारत्वानुपपत्तेर्वक्ष्यमाणत्वाच्च । अत्रापि सत्यत्वादेर्द्वारत्वेनोपादानेन तेषामेवैतद्विरोधापाताच्च ।**

**नांत्यः । त्वन्मतेऽनंतब्रह्मशब्दयोरपि लक्षणया विशेष्यमात्रपरत्वेनाविरोधित्वात् । ''अथ कस्मादुच्यते ब्रह्मेति बृहंतो ह्यस्मिन् गुणा'' इति श्रुत्या ''महद्गुणत्वाद्यमनंतमाहुः'' इत्यादिस्मृत्या च ताभ्यां सद्गुणत्वस्यैव सिद्धेश्च ।**

नन्वेकधेत्यादिवाक्यमैक्यमात्रपरम् ऐक्यादि च सत्यादिवाक्यस्याखंडार्थत्वं विनानुपपन्नमिति तदखंडार्थत्वसिद्धिरविकलेति शंकते— **ननु ऐक्यादेरिति । तेषामिति ।।** एकधेत्यादिवाक्यानामित्यर्थः ।



**'ನನು ಐಕ್ಯಾದೇರ್ದ್ವಾರತ್ವೇನೋಪಾದಾನಾದ್ ವಿರೋಧ ಇತಿ ಚೇನ್ನ । ದ್ವಾರೀಭೂತಸ್ಯ ಬ್ರಹ್ಮಾನ್ಯಸ್ಯ ಐಕ್ಯಾದೇರ್ಮಿಥ್ಯಾತ್ವೇ ಸತ್ಯತ್ವಾದಿ ಧರ್ಮ ಪಾರಮಾರ್ಥ್ಯಾವಿರೋಧಿತ್ವಾತ್ । ಸತ್ಯತ್ವೇ ಚಾಪಸಿದ್ಧಾಂತಾತ್ । ದ್ವಾರತ್ವಾನುಪಪತ್ತೇರ್ವಕ್ಷ್ಯಮಾಣತ್ವಾಚ್ಚ । ಅತ್ರಾಪಿ ಸತ್ಯತ್ವಾದೇಃ ದ್ವಾರತ್ವೇನೋಪಾದಾನೇನ ತೇಷಾಮೇವೈತದ್ ವಿರೋಧಾಪಾತಾಚ್ಚ ।'**

'ಏಕಧೈವಾದಿ ವಾಕ್ಯವು ಐಕ್ಯಾದಿ ಮಾತ್ರಪರ. ಅದು ಹೇಳುವ ಐಕ್ಯಾದಿಗಳು ಸತ್ಯಾದಿವಾಕ್ಯಕ್ಕೆ ಅಖಂಡಾರ್ಥವಿಲ್ಲದೆ ಕೂಡುವುದಿಲ್ಲ. ಆದರಿಂದ ಸತ್ಯಾದಿವಾಕ್ಯಕ್ಕೆ ಅಖಂಡಾರ್ಥತ್ವ ಸಿದ್ಧವಾಗುತ್ತದೆ. ಐಕ್ಯಾದಿಗಳನ್ನು ಅಖಂಡಾರ್ಥಸಿದ್ಧಿಗೆ ದ್ವಾರವಾಗಿ ಸ್ವೀಕರಿಸುವುದರಿಂದ ನಾವು ಅವುಗಳನ್ನು ತ್ಯಾಗಮಾಡುವುದಿಲ್ಲ. ಅವುಗಳ ವಿರೋಧದಿಂದ ಸತ್ಯಾದಿ ವಾಕ್ಯಕ್ಕೇ ಅಖಂಡಾರ್ಥದಲ್ಲಿ ಲಕ್ಷಣಾ ಮಾಡುತ್ತೇವೆ' ಎಂದರೆ ಇದು ಸರಿಯಲ್ಲ.

ದ್ವಾರಭೂತ ಐಕ್ಯಾದಿಗಳು ಬ್ರಹ್ಮಾನ್ಯವಾಗಿದ್ದು ಮಿಥ್ಯಾ ಆದ್ದರಿಂದ ಸತ್ಯಾದಿ ವಾಕ್ಯವು ಹೇಳುವ ಸತ್ಯತ್ವಾದಿಗಳ ಪಾರಮಾರ್ಥಿಕತ್ವಕ್ಕೆ ಆ ಐಕ್ಯಾದಿಗಳು ವಿರೋಧಿಯಾಗುವುದಿಲ್ಲ. ಆದರಿಂದ ಸತ್ಯಾದಿವಾಕ್ಯಕ್ಕೆ ಅಖಂಡಾರ್ಥದಲ್ಲಿ ಲಕ್ಷಣಾ ಮಾಡುವ ಆವಶ್ಯಕತೆ ಇಲ್ಲ.

ಬ್ರಹ್ಮಭಿನ್ನವಾದ ಐಕ್ಯಾದಿಗಳನ್ನು ಸತ್ಯವೆಂದು ಅಂಗೀಕರಿಸಿದರೆ ಅಪಸಿದ್ಧಾಂತ. ಐಕ್ಯಾದಿ ಬ್ರಹ್ಮನಿಗೆ ಅಭಿನ್ನವೆಂದರೆ ಅವು ದ್ವಾರವೆನಿಸಲಾರವು. ಅಭೇದವಿದ್ದರೆ ದ್ವಾರದ್ವಾರಿಭಾವ ಕೂಡಲಾರದು ಎಂದು ಮುಂದೆ ಹೇಳುತ್ತೇವೆ.

ಸತ್ಯಾದಿ ವಾಕ್ಯದಲ್ಲಿಯೂ ಹೀಗೇ ಸತ್ಯತ್ವಾದಿಗಳನ್ನು ದ್ವಾರವೆಂದು ಅಂಗೀಕರಿಸಿದರೆ ಏಕಧೈವಾದಿ ವಾಕ್ಯಗಳಿಗೇ ಸತ್ಯಾದಿವಾಕ್ಯದಿಂದ ವಿರೋಧ ಬಂದೀತು. ಅವುಗಳಿಗೆ ಸ್ವಾರ್ಥದಲ್ಲಿ ತಾತ್ಪರ್ಯವಿಲ್ಲವಾದೀತು.

'ನಾಂತ್ಯಃ। ತ್ವನ್ಮತೇ ಅನಂತ ಬ್ರಹ್ಮ ಶಬ್ದಯೋರಪಿ ಲಕ್ಷಣಯಾ ವಿಶೇಷ್ಯ ಮಾತ್ರ ಪರತ್ವೇನ ಅವಿರೋಧಿತ್ವಾತ್। ಅಥ ಕಸ್ಮಾದುಚ್ಯತೇ ಬ್ರಹ್ಮೇತಿ ಬೃಹಂತೋ ಹ್ಯಸ್ಮಿನ್‌ಗುಣಾಃ' ಇತಿ ಶ್ರುತ್ಯಾ 'ಮಹದ್‌ಗುಣತ್ವಾದ್ ಯಮನಂತ ಮಾಹುಃ' ಇತ್ಯಾದಿ ಸ್ಮೃತ್ಯಾಚ ತಾಭ್ಯಾಂ ಸದ್‌ಗುಣತ್ವಸ್ಯೈವ ಸಿದ್ಧೇಶ್ಚ।'

'ಸತ್ಯಾದಿ ವಾಕ್ಯಗಳಿಗೆ ಅಖಂಡಾರ್ಥತ್ವವಿಲ್ಲದಿದ್ದರೆ ವಿಶಿಷ್ಟಾರ್ಥಪರತ್ವವನ್ನೇ ಅಂಗೀಕರಿಸಿದರೆ ಅನಂತ ಬ್ರಹ್ಮಶಬ್ದಗಳ ವಿರೋಧ. ಏಕೆಂದರೆ ಈ ಶಬ್ದಗಳು ಬ್ರಹ್ಮನಲ್ಲಿ ದೇಶ ಕಾಲ ವಸ್ತು ಪರಿಚ್ಛೇದರಾಹಿತ್ಯವನ್ನು ಹೇಳುತ್ತವೆ ಅಂದರೆ ನಿರ್ಭೇದತ್ವರೂಪ ಅಖಂಡತ್ವವನ್ನು ಹೇಳುತ್ತೇವೆ' ಎಂದು ಹೇಳುವ ಅಂತ್ಯಪಕ್ಷವೂ ಸರಿಯಲ್ಲ.

ಏಕೆಂದರೆ ಅದ್ವೈತಮತದಲ್ಲಿ ಅನಂತ ಬ್ರಹ್ಮಶಬ್ದಗಳೂ ಕೂಡ ಲಕ್ಷಣಯಾ ವಿಶೇಷ್ಯಮಾತ್ರ ಪರವಾಗಿರುವುದರಿಂದ ಅವುಗಳ ವಿರೋಧ ವಿಶಿಷ್ಟಾರ್ಥಪರ ಸತ್ಯಾದಿವಾಕ್ಯಕ್ಕೆ ಬರುವುದಿಲ್ಲ. ಮತ್ತು 'ಅಥ ಕಸ್ಮಾದುಚ್ಯತೇ ಬ್ರಹ್ಮೇತಿ ಬೃಹಂತೋ ಹ್ಯಸ್ಮಿನ್ ಗುಣಾಃ' 'ಬ್ರಹ್ಮನು ಗುಣಪೂರ್ಣನಾದ್ದರಿಂದ ಬ್ರಹ್ಮನೆನಿಸುತ್ತಾನೆ.' 'ಮಹದ್‌ಗುಣತ್ವಾದ್ ಯಮನಂತಮಾಹುಃ' 'ಅನಂತಗುಣಪೂರ್ಣನಾದರಿಂದ ಬ್ರಹ್ಮ ಅನಂತನೆನಿಸುತ್ತಾನೆ' ಎಂದು ಶ್ರುತಿಸ್ಮೃತಿಗಳಿರುವುದರಿಂದ ಬ್ರಹ್ಮ ಅನಂತ ಶಬ್ದಗಳೂ ಕೂಡ ಸದ್‌ಗುಣಪೂರ್ಣತ್ವವನ್ನೇ ಹೇಳುವುದರಿಂದ, ಸತ್ಯಾದಿ ವಾಕ್ಯವು ಸತ್ಯತ್ವಾದಿಗುಣಪೂರ್ಣತ್ವ ಪರವಾದರೆ ವಿರೋಧವಿಲ್ಲ.



**प्रतिकूलतर्कपराहतिश्च । तथाहि द्विविधमपि वेदांतवाक्यं तद्दृष्टांतीभूतं प्रकृष्टादिवाक्यं सोऽयमित्यादिवाक्यं च यदि संसृष्टार्थं न स्यात्, वाक्यमेव न स्यात्, आकांक्षासंनिधियोग्यतानामभावात् । आकांक्षा ह्यभिधानापर्यवसानम् । यस्य च येन विना न स्वार्थान्वयानुभावकत्वं तदेव च तस्यापर्यवसानम् ।**

**वाक्यमेवेति ।।** प्रमाणवाक्यमेवेत्यर्थः ।। **यस्य चेति ।।** इतरपदव्यतिरेकप्रयुक्तस्वार्थान्वयाननुभावकत्वमित्यर्थः । पदपदं च तदुपस्थितिपरं, तेन पदस्य स्मारकत्वेन स्वत एवाननुभावकत्वम्, नन्वितरपदव्यतिरेकप्रयुक्तमिति शंका गलहस्तिता । ननु राजपदं पुत्रपदसाकांक्षं न स्यात् । तद्व्यतिरेकेऽपि पुरुषपदेन स्वार्थान्वयानुभावकत्वादिति चेन्न । अन्वये तात्पर्यविषयत्वस्य विवक्षितत्वात् । घटः कर्मत्वमित्यादावतिव्याप्तिवारणाय इतरपदव्यतिरेकप्रयुक्तेति ।

**ಪ್ರತಿಕೂಲತರ್ಕ ಪರಾಹತಿಶ್ಚ। ತಥಾಹಿ ದ್ವಿವಿಧಮಪಿ ವೇದಾಂತವಾಕ್ಯಂ ತದ್‌ದೃಷ್ಟಾಂತೀಭೂತಂ ಪ್ರಕೃಷ್ಟಾದಿವಾಕ್ಯಂ ಸೋಯಮಿತ್ಯಾದಿ ವಾಕ್ಯಂ ಚ ಯದಿ ಸಂಸೃಷ್ಟಾರ್ಥಂ ನ ಸ್ಯಾತ್, ವಾಕ್ಯಮೇವ ನ ಸ್ಯಾತ್। ಆಕಾಂಕ್ಷಾ ಸನ್ನಿಧಿ ಯೋಗ್ಯತಾನಾಮಭಾವಾತ್। ಆಕಾಂಕ್ಷಾ ಹ್ಯಭಿಧಾನಾಪರ್ಯವಸಾನಂ। ಯಸ್ಯ ಯೇನ ವಿನಾ ನ ಸ್ವಾರ್ಥಾನ್ವಯಾನುಭಾವಕತ್ವಂ ತದೇವ ಚ ತಸ್ಯಾಪರ್ಯವಸಾನಂ।'**

ಅಖಂಡಾರ್ಥಾನುಮಾನಗಳಿಗೆ ಪ್ರತಿಕೂಲತರ್ಕಪರಾಹತಿಯೂ ಉಂಟು. ಅದು ಹೀಗೆ— ಎರಡೂ ಬಗೆಯ ವೇದಾಂತವಾಕ್ಯವು, ಅವುಗಳಿಗೆ ದೃಷ್ಟಾಂತಭೂತವಾದ ಪ್ರಕೃಷ್ಟಾದಿವಾಕ್ಯ ಸೋಯಮಿತ್ಯಾದಿ ವಾಕ್ಯಗಳು ಸಂಸೃಷ್ಟಾರ್ಥಪರವಲ್ಲದಿದ್ದರೆ ಪ್ರಮಾಣವಾಕ್ಯವೇ ಆಗಲಾರವು. ಏಕೆಂದರೆ ಆಗ ಅವುಗಳಿಗೆ ಆಕಾಂಕ್ಷಾ ಸನ್ನಿಧಿ ಯೋಗ್ಯತೆಗಳು ಇಲ್ಲವಾಗುತ್ತವೆ.

ಆಕಾಂಕ್ಷೆ ಅಭಿಧಾನಾಪರ್ಯವಸಾನವೆ. ಅಂದರೆ, ಒಂದು ಪದಕ್ಕೆ ಜೊತೆಯಾಗಿ ಇನ್ನೊಂದು ಪದವಿಲ್ಲದಿದ್ದರೆ ಅನ್ವಯಬೋಧಕತ್ವವಿಲ್ಲದೆ ಹೋಗುವುದು. ಅಖಂಡಾರ್ಥ ವಾಕ್ಯದಲ್ಲಿ ಈ ಆಕಾಂಕ್ಷೆ ಇಲ್ಲದ್ದರಿಂದ ಅದು ವಾಕ್ಯವೆ ಅಲ್ಲ.

ಆಕಾಂಕ್ಷಾಲಕ್ಷಣದಲ್ಲಿ 'ಅನ್ವಯಾಬೋಧಕತ್ವಂ' ಎಂದು ಅನ್ವಯಾಂಶ ಬೇಡ. ಅಖಂಡಾರ್ಥತ್ವಾನುಸಾರವಾಗಿ ತಾತ್ಪರ್ಯವಿಷಯಾಬೋಧಕತ್ವಂ ಎನ್ನೋಣ' ಎಂದರೆ ಶಕ್ತಿಗ್ರಹಕಾಲದಲ್ಲಿಯೇ ಪದಾರ್ಥವು ಜ್ಞಾತವಾಗಿರುವುದರಿಂದ ಅನ್ವಯಾಂಶದಲ್ಲಿಯೇ ತಾತ್ಪರ್ಯ ಎನ್ನಬೇಕು. ಆದರಿಂದ ಅಂಖಂಡ ವಾದ ಪದಾರ್ಥದಲ್ಲಿ ಬೋಧಕತ್ವಕ್ಕೆ ಆಕಾಂಕ್ಷೆ ಹೇಳಲಾಗದು. ಲಾಕ್ಷಣಿಕ ಪದಾರ್ಥವೂ ಕೂಡ ಉಪಸ್ಥಿತವಾದರೇ ಅದರಲ್ಲಿ ಲಕ್ಷಣಾ. ಆದರಿಂದ ಅದೂ ಪೂರ್ವದಲ್ಲೇ ಜ್ಞಾತವೆನ್ನಬೇಕು. ಆದರಿಂದ ಅದರಲ್ಲಿಯೂ ತಾತ್ಪರ್ಯ ಕೂಡುವುದಿಲ್ಲ.

**ವಿವರಣೆ :** ಇಲ್ಲಿ 'ಪದ'ವೆಂದರೆ ಪದದ ಉಪಸ್ಥಿತಿ ವಿವಕ್ಷಿತವಾಗಿದೆ. ಇಲ್ಲದಿದ್ದರೆ 'ಪದವು ಪದಾರ್ಥ ಸ್ಮಾರಕವೇ ಹೊರತು ಅನ್ವಯಾನುಭಾವಕವಾಗುವುದಿಲ್ಲ. ಅನನುಭಾವಕತ್ವ ಅದಕ್ಕೆ ಸ್ವಾಭಾವಿಕವೇ ಹೊರತು ಇನ್ನೊಂದು ಪದದ ಅಭಾವಪ್ರಯುಕ್ತವಲ್ಲ' ಎಂಬ ಶಂಕೆಗೆ ಆಸ್ಪದವಿದೆ.

ಇಲ್ಲಿ ಪ್ರಶ್ನೆ ಬರುತ್ತದೆ—'ರಾಜಪದಕ್ಕೆ ಪುತ್ರಪದದಿಂದ ಆಕಾಂಕ್ಷೆ ಇದೆ ಎನ್ನಲಾಗುವುದಿಲ್ಲ. ಏಕೆಂದರೆ ಪುತ್ರಪದವಿಲ್ಲದಿದ್ದರೂ ಪುರುಷಪದವಿರುವಾಗ ಅದು ಅನ್ವಯಾನುಭಾವಕವಾಗುತ್ತದೆ' ಎಂದು. ಅದಕ್ಕೆ 'ಅನ್ವಯ'ವೆಂದರೆ ಇಲ್ಲಿ ತಾತ್ಪರ್ಯವಿಷಯವಾದ ಅನ್ವಯವು ವಿವಕ್ಷಿತವೆನ್ನಬೇಕು. ರಾಜಪದಕ್ಕೆ ಪುತ್ರಪದದಿಂದ ಅನ್ವಯ ವಿವಕ್ಷಿತವಾಗಿರುವಾಗ ಪುತ್ರಪದವಿಲ್ಲದಿದ್ದರೆ ವಿವಕ್ಷಿತ ಪುತ್ರಪದಾನ್ವಯಾನುಭಾವಕತ್ವವಿರುವುದಿಲ್ಲ. ಈ ಪುತ್ರಪದಾನ್ವಯಾನನುಭಾವಕತ್ವವು ಪುತ್ರಪದಾಭಾವಪ್ರಯುಕ್ತವಾಗಿದೆ. 'ಘಟಃ ಕರ್ಮತ್ವಂ' ಇತ್ಯಾದಿ ಸ್ಥಳದಲ್ಲಿ ಘಟಪದಕ್ಕೆ

ಸ್ವಾರ್ಥಾನ್ವಯಾನುಭಾವಕತ್ವವಿಲ್ಲ. 'ಸ್ವಾರ್ಥಾನ್ವಯಾನನು ಭಾವಕತ್ವವು ಆಕಾಂಕ್ಷಾ' ಎಂದು ಮಾತ್ರ ಆಕಾಂಕ್ಷಾಲಕ್ಷಣ ಹೇಳಿದರೆ ಈ ಲಕ್ಷಣ ಈ ಸ್ಥಳದಲ್ಲಿ ಘಟಪದಕ್ಕಿರುವ ಸ್ವಾರ್ಥಾನ್ವಯಾನನುಭಾವಕತ್ವದಲ್ಲಿ ಅತಿ ವ್ಯಾಪ್ತವಾಗುತ್ತದೆ. ಈ ಸ್ವಾರ್ಥಾನ್ವಯಾನನುಭಾವಕತ್ವವು ಆಕಾಂಕ್ಷಾ ಅಲ್ಲ. ಅದಕ್ಕೆ 'ಇತರ ಪದ ವ್ಯತಿರೇಕಪ್ರಯುಕ್ತ' ಎಂದು ವಿಶೇಷಣ ಕೊಡಬೇಕು. ಪ್ರಕೃತ ಘಟಪದಕ್ಕಿರುವ ಸ್ವಾರ್ಥಾನ್ವಯಾನನುಭಾವಕತ್ವವು ಇತರ ಪದವ್ಯತಿರೇಕ ಪ್ರಯುಕ್ತವಲ್ಲ. ಅದರಿಂದ ಅತಿವ್ಯಾಪ್ತಿ ಇಲ್ಲ.



**संनिधिस्त्वव्यवधानेनान्वयप्रतियोग्युपस्थितिः । योग्यता च इतर पदार्थसंसर्गेऽपरपदार्थनिष्ठात्यंताभावप्रतियोगितावच्छेदक-धर्मशून्यत्वम् । प्रमाणाबाधो योग्यतेति चेन्न,पदार्थमात्राबाधस्य वाक्याभासेऽपि सत्त्वात्, संसर्गाबाधस्य चेहाप्यभावात् । तात्पर्यविषयाबाधो योग्यतेति चेन्न, पदार्थमात्रे वाक्यतात्पर्यायोगात्।**

**अव्यवधानेनेति** ।। अन्वयप्रतीत्यननुगुणानंतरितान्वयप्रतियोग्युपस्थितिरित्यर्थः । तेन कुलकश्लोकादौ व्यवहितेनापि क्रियादिनान्वयबोधेऽपि नाव्याप्तिरिति ध्येयम् ।। **इतरेति** ।। एतच्च पदविशेषणम् । तेन प्रमेयत्वे प्रमेयत्वमित्यादौ नाव्याप्तिः । पदत्वं च शक्तत्वम् । येनाकारेण शक्तत्वं तेनाकारेण इतरेतिशब्दोक्तभेदो विवक्षितः । तेन गामित्यादौ प्रकृतिप्रत्ययार्थयोः पचतीत्यादौ कृतिवर्तमानत्वयोश्चान्वययोग्यत्वं अविकलमिति ध्येयम् । अत्यंताभावपदं च विरोधिपरम् । तेन गंधप्रागभावकालीनो घटो गंधवानित्यादौ नातिव्याप्तिः । सामानाधिकरण्यबोधे तु योग्यतास्तीति बोध्यम् । व्यासज्यवृत्तिप्रतियोगितानंगीकर्तुर्मतेनेदम् । तेन आकाशः सेकसंसर्गश्च जलनिष्ठात्यंताभावप्रतियोगिनावित्यनुभवाद्वित्वावच्छिन्नप्रतियोगिकात्यंताभावप्रतियोगितावच्छेदकधर्मवत्त्वेन जलेन सिंचतीत्यादावव्याप्तिरिति निरस्तम् । नच प्रतियोगितावच्छेदकपदवैयर्थ्यम् । अखंडाभावे व्यर्थत्वशंकानवकाशादिति । किं पदार्थस्य बाधः किंवा संसर्गस्य उत तात्पर्यविषयस्य वेति विकल्प्याद्यं प्रत्याह— **पदार्थेति** ।। द्वितीयं प्रत्याह— **संसर्गाबाधस्य चेति** ।। तृतीयमाशंकते— **तात्पर्यविषयेति** । **पदार्थेति** ।। तस्यैकपदादेवोपस्थितिसंभवेनोत्तरपदवैयर्थ्यं

स्यात् । वाक्यार्थस्य तात्पर्यविषयत्वे तु संसर्गस्यैव वाक्यार्थत्वेनाखंडार्थत्वहानिरिति भावः ।



'ಸನ್ನಿಧಿಸ್ತು ಅವ್ಯಧಾನೇನ ಅನ್ವಯಪ್ರತಿಯೋಗ್ಯುಪಸ್ಥಿತಿಃ । ಯೋಗ್ಯತಾ ಚ ಇತರ ಪದಾರ್ಥ ಸಂಸರ್ಗೇऽಪರಪದಾರ್ಥನಿಷ್ಠಾತ್ಯಂತಾಭಾವ ಪ್ರತಿಯೋಗಿತಾವಚ್ಛೇದಕ ಧರ್ಮಶೂನ್ಯತ್ವಂ । ಪ್ರಮಾಣಾಬಾಧೋ ಯೋಗ್ಯತೇತಿ ಚೇನ್ನ । ಪದಾರ್ಥ ಮಾತ್ರ ಬಾಧಸ್ಯ ವಾಕ್ಯಾಭಾಸೇऽಪಿ ಸತ್ವಾತ್ । ಸಂಸರ್ಗಾಬಾಧಸ್ಯ ಚ ಇಹಾಪ್ಯಭಾವಾತ್ । ತಾತ್ಪರ್ಯ ವಿಷಯಾಬಾಧೋ ಯೋಗ್ಯತೇತಿ ಚೇನ್ನ । ಪದಾರ್ಥಮಾತ್ರೇ ವಾಕ್ಯತಾತ್ಪರ್ಯಾಯೋಗಾತ್ ।'

ಸನ್ನಿಧಿ ಎಂದರೆ 'ವ್ಯವಧಾನವಿಲ್ಲದೆ ಶಾಬ್ದಬೋಧಕ್ಕೆ ಅನುಕೂಲವಾದ ಉಪಸ್ಥಿತಿ' ಎನ್ನೋಣ. ಇದು ಅಖಂಡಾರ್ಥ ಪದಕ್ಕೂ ಇರುತ್ತದೆ. ಅನ್ವಯಪ್ರತಿಯೋಗಿಯ ಉಪಸ್ಥಿತಿ ಎನ್ನುವುದು ಬೇಡ, ಎಂದರೆ ಉಪಸ್ಥಿತಿಯು ಶಾಬ್ದಬೋಧಕ್ಕೆ ಅನುಕೂಲವಾಗುವುದು ಅನ್ವಯಪ್ರತಿಯೋಗಿ ವಿಷಯಕ ವಾದಾಗಲೆ. ಆದರಿಂದ ನೇರವಾಗಿ 'ಅನ್ವಯಪ್ರತಿಯೋಗಿಯ ಉಪಸ್ಥಿತಿ' ಎನ್ನುವುದೇ ಯುಕ್ತ.

ವ್ಯವಧಾನವಿಲ್ಲದೆ ಅನ್ವಯ ಪ್ರತಿಯೋಗಿಯ ಉಪಸ್ಥಿತಿ ಬರುವುದು ಅಂದರೆ, 'ಅನ್ವಯಪ್ರತೀತಿಗೆ ಅನನುಗುಣವಾದ ಪದಗಳ ವ್ಯವಧಾನವಿಲ್ಲದೆ ಬರುವ ಅನ್ವಯ ಪ್ರತಿಯೋಗ್ಯುಪಸ್ಥಿತಿಯು ಸನ್ನಿಧಿ' ಎಂದು ಹೇಳಬೇಕು. ಆದರಿಂದ 'ಕುಲಕ ಶ್ಲೋಕಾದಿಗಳಲ್ಲಿ ವ್ಯವಧಾನವಿದ್ದರೂ ಕ್ರಿಯಾದಿಗಳಿಂದ ಅನ್ವಯ ಬೋಧ ಬರುವುದರಿಂದ ಅಲ್ಲಿ ವ್ಯವಧಾನದಿಂದ ಬರುವ ಅನ್ವಯಪ್ರತಿಯೋಗ್ಯುಪಸ್ಥಿತಿಯು ಸನ್ನಿಧಿಯೇ ಆಗಿರುತ್ತದೆ. ಆದರಲ್ಲಿ ಲಕ್ಷಣಕ್ಕೆ ಅವ್ಯಾಪ್ತಿ' ಎಂಬ ಶಂಕೆಗೆ ಅವಕಾಶವಿಲ್ಲ. ಅಲ್ಲಿ ವ್ಯವಧಾನವಿದ್ದರೂ ಅದು ಅನ್ವಯ ಪ್ರತೀತಿಗೆ ಅನನುಗುಣವಾದ ಪದಗಳ ವ್ಯವಧಾನವಲ್ಲ. ಅನನುಗುಣವಾದ ಪದಗಳ ವ್ಯವಧಾನವಿಲ್ಲದೆ ಅನ್ವಯಪ್ರತಿ ಯೋಗ್ಯುಪಸ್ಥಿತಿ ಬರುವುದರಿಂದ ಅದು ಸನ್ನಿಧಿಯೆ. ಆದರಲ್ಲಿ ಲಕ್ಷಣ ಸಮನ್ವಯವಾಗುತ್ತದೆ.

ಯೋಗ್ಯತಾ ಎಂದರೆ 'ಒಂದು ಪದದ ಅರ್ಥಸಂಸರ್ಗ'ದಲ್ಲಿ, 'ಇನ್ನೊಂದು ಪದದ ಅರ್ಥ'ದಲ್ಲಿರುವ ಅತ್ಯಂತಾಭಾವದ ಪ್ರತಿಯೋಗಿತಾವಚ್ಛೇದಕಧರ್ಮವಿಲ್ಲದಿರುವುದು. ವಹ್ನಿಯಲ್ಲಿ ಸೇಕಕರಣತ್ವವಿಲ್ಲ. ಸೇಕರಣತ್ವವು ವಹ್ನಿನಿಷ್ಠ ಅತ್ಯಂತಾಭಾವ ಪ್ರತಿಯೋಗಿ. ಪ್ರತಿಯೋಗಿತಾವಚ್ಛೇದಕ ಧರ್ಮವು ಆದರಲ್ಲಿದೆ. ಆದರಿಂದ ಯೋಗ್ಯತೆ ಇಲ್ಲ. 'ವಹ್ನಿನಾ ಸಿಂಚತಿ' ಎಂಬಲ್ಲಿ ಯೋಗ್ಯತಾ ಇಲ್ಲದ ಪ್ರಯುಕ್ತ ಅದು ಪ್ರಮಾಣವಾಕ್ಯವೆನಿಸುವುದಿಲ್ಲ 'ನೀಲಂ ಕಮಲಂ' ಎಂಬಲ್ಲಿ ಕಮಲದಲ್ಲಿ ನೈಲ್ಯಾಭಾವವಿಲ್ಲ. ನೈಲ್ಯ ಅಭಾವ ಪ್ರತಿಯೋಗಿಯಲ್ಲ. ಪ್ರತಿಯೋಗಿತಾವಚ್ಛೇದಕ ಧರ್ಮ

ನೈಲ್ಯದಲ್ಲಿ ಇಲ್ಲ. ಆದರಿಂದ ಯೋಗ್ಯತೆ ಇದೆ. ಹೀಗಾಗಿ 'ನೀಲಂ ಕಮಲಂ' ಎಂಬುದು ಪ್ರಮಾಣವಾಕ್ಯವೆನಿಸುತ್ತದೆ.

'ಒಂದು ಪದಾರ್ಥ ಸಂಸರ್ಗ'ದಲ್ಲಿ 'ಇನ್ನೊಂದು ಪದಾರ್ಥ'ದಲ್ಲಿರುವ ಅತ್ಯಂತಾಭಾವದ ಪ್ರತಿಯೋಗಿತಾವಚ್ಛೇದಕ ಧರ್ಮವಿಲ್ಲದಿರುವುದೆಂದೇ ಲಕ್ಷಣ ಹೇಳಿದರೆ, ಪ್ರಮೇಯತ್ವೇ ಪ್ರಮೇಯತ್ವಂ ಎಂಬಲ್ಲಿ ಯೋಗ್ಯತೆಯಿದೆ, ಆದರಲ್ಲಿ ಲಕ್ಷಣ ಸಮನ್ವಯವಾಗುವುದಿಲ್ಲ, ಅವ್ಯಾಪ್ತಿ. ಏಕೆಂದರೆ ಪ್ರಮೇಯತ್ವವು ಪ್ರಮೇಯತ್ವಕ್ಕಿಂತ 'ಇತರವಾದ ಪದಾರ್ಥ'ವಲ್ಲ. ಪ್ರಮೇಯತ್ವ ಒಂದೇ ಕೇವಲಾನ್ವಯಿ ಧರ್ಮವಾಗಿದೆ. ಪದದಲ್ಲಿ ಇತರತ್ವವನ್ನು ಹೇಳಿದರೆ ಪ್ರಮೇಯತ್ವೇ ಪ್ರಮೇಯತ್ವಂ ಎಂಬಲ್ಲಿ ಪದಾರ್ಥ ಒಂದೇ ಆದರೂ ಪ್ರಮೇಯತ್ವಪದಗಳು ಎರಡು ಬೇರೆಬೇರೆ.

ಪದತ್ವವು ಶಕ್ತತ್ವರೂಪವಾದುದು ವಿವಕ್ಷಿತ ಹೊರತು ಸುಪ್‌ತಿಙಂತತ್ವವಲ್ಲ.

ಯಾವ ಆಕಾರದಿಂದ ಪದವು ಶಕ್ತವಾಗಿರುವುದೋ ಆ ಆಕಾರದಿಂದ ಪದವು ಇತರ ಎಂದು ವಿವಕ್ಷಿತ. ಹೀಗೆ ಹೇಳದಿದ್ದರೆ 'ಗಾಂ' ಎಂಬಲ್ಲಿ ಪ್ರಕೃತಿ ಪ್ರತ್ಯಯಾರ್ಥಗಳಿಗೆ ಮತ್ತು 'ಪಚತಿ' ಎಂಬಲ್ಲಿ ಕೃತಿ ವರ್ತಮಾನತ್ವಗಳಿಗೆ ಅನ್ವಯಯೋಗ್ಯತ್ವವನ್ನು ಹೇಳಲು ಶಕ್ಯವಾಗಲಾರದು. ಅಮ್ ಪ್ರತ್ಯಯ ಬಂದಾಗ ಗೋಶಬ್ದವು ಗಾಂ ಎಂದಾಗಿದೆ. ಈ 'ಗಾಮ್' ಆಕಾರದ ಗೋಶಬ್ದಕ್ಕಿಂತ ಇತರವಾದ ಅಮ್‌ಪದವೇ ಇಲ್ಲ. 'ಪಚತಿ' ಎಂಬಲ್ಲಿಯೂ ಕೃತ್ಯರ್ಥಕವಾದ 'ತಿ' ಪ್ರತ್ಯಯಕ್ಕಿಂತ ಬೇರೆಯಾಗಿ ವರ್ತಮಾನತ್ವಾರ್ಥಕವಾದ ತಿ ಪದವಿಲ್ಲ. ಆದರೆ ಒಂದು ಪದಕ್ಕೆ ಅರ್ಥ ಎರಡಿರುವಾಗ ಶಕ್ತತಾವಚ್ಛೇದಕ ರೂಪಗಳೂ ಎರಡು. ಆ ರೂಪಗಳಿಂದ ಪದದಲ್ಲಿ ಭೇದ. ಗೋ ಎಂಬ ಆಕಾರದಿಂದ ಗಾಂ ಪದವು ಶಕ್ತ. ಈ ಆಕಾರದಿಂದ ವಿಶಿಷ್ಟವಾದ ಗಾಂ ಪದವು ಅಮ್ ಆಕಾರದಿಂದ ಶಕ್ತವಾಗಿರುವ ಅದೇ ಗಾಮ್ ಪದಕ್ಕಿಂತ ಬೇರೆ. ಮತ್ತು ಆಖ್ಯಾತತ್ವಾಕಾರದಿಂದ ಕೃತಿಯಲ್ಲಿ ಶಕ್ತವಾದ 'ತಿ' ಶಬ್ದಕ್ಕಿಂತ ಲಟ್‌ತ್ವಾಕಾರೇಣ ವರ್ತಮಾನತ್ವಾರ್ಥದಲ್ಲಿ ಶಕ್ತವಾದ ಅದೇ 'ತಿ' ಶಬ್ದ ಬೇರೆ. ಭಿನ್ನ ಆಕಾರಗಳಲ್ಲಿ ಒಂದೇ ಪದ ತನಗಿಂತ ತಾನು ಭಿನ್ನ. ಆದರಿಂದ ಲಕ್ಷಣ ಸಮನ್ವಯವಾಗುತ್ತದೆ.

ಲಕ್ಷಣದಲ್ಲಿ 'ಅತ್ಯಂತಾಭಾವ' ಶಬ್ದವು 'ವಿರೋಧಿ' ಎಂಬ ಅರ್ಥದಲ್ಲಿ ವಿವಕ್ಷಿತ. ಹಾಗೆ ಹೇಳದಿದ್ದರೆ 'ಗಂಧಪ್ರಾಗಭಾವ ಕಾಲೀನವಾದ ಘಟ ಗಂಧವತ್ತಾಗಿದೆ' ಎಂಬ ಅಪ್ರಮಾಣ ವಾಕ್ಯದಲ್ಲಿ ಯೋಗ್ಯತೆ ಇದೆ ಎಂದಾದೀತು. ಏಕೆಂದರೆ ಘಟದಲ್ಲಿ ಗಂಧಾತ್ಯಂತಾಭಾವವಿಲ್ಲ ದಿರುವುದರಿಂದ ಘಟನಿಷ್ಠಾತ್ಯಂತಾಭಾವ ಪ್ರತಿಯೋಗಿತಾವಚ್ಛೇದಕಧರ್ಮ ಗಂಧದಲ್ಲಿಲ್ಲ. 'ಅತ್ಯಂತಾಭಾವ' ಎಂದು ವಿರೋಧಿ ವಿವಕ್ಷೆ ಮಾಡಿದಾಗ ಗಂಧ ಪ್ರಾಗಭಾವವಿಶಿಷ್ಟ ಘಟದಲ್ಲಿ ಗಂಧ ಸಂಸರ್ಗಕ್ಕೆ ವಿರೋಧಿಯಾದ ಗಂಧಪ್ರಾಗಭಾವವಿರುವುದರಿಂದ ತತ್‌ಪ್ರತಿಯೋಗಿತಾವಚ್ಛೇದಕ ಗಂಧತ್ವ ಗಂಧದಲ್ಲಿ ಇದೆಯಾದ್ದರಿಂದ ಯೋಗ್ಯತೆ ಇಲ್ಲ ಎನ್ನಲು ಬರುತ್ತದೆ.

'ಗಂಧಪ್ರಾಗಭಾವವಾನ್ ಘಟಃ ಗಂಧವಾನ್' ಎಂಬಲ್ಲಿ ಕೇವಲ ಸಾಮಾನಾಧಿಕರಣ್ಯ

ಬೋಧದ ವಿವಕ್ಷೆ ಇದ್ದರೆ ಯೋಗ್ಯತೆ ಇದೆ. ಗಂಧಪ್ರಾಗ ಭಾವವು ಗಂಧಕ್ಕೆ ಆಗ ವಿರೋಧಿಯಲ್ಲ. ವಿರೋಧಿಪದದಿಂದ ಪ್ರಾಗಭಾವವಿಟ್ಟುಕೊಳ್ಳುವಂತಿಲ್ಲ. ಅತ್ಯಂತಾಭಾವವಿಟ್ಟುಕೊಳ್ಳಬೇಕು. ಗಂಧಪ್ರಾಗಭಾವ ವಿಶಿಷ್ಟ ಘಟದಲ್ಲಿ ಗಂಧದ ಅತ್ಯಂತಾಭಾವವಿಲ್ಲದಿರುವುದರಿಂದ ಘಟನಿಷ್ಠಾತ್ಯಂತಾಭಾವಪ್ರತಿಯೋಗಿತಾವಚ್ಛೇದಕ ಧರ್ಮ ಗಂಧದಲ್ಲಿಲ್ಲ. ಆದರಿಂದ ಯೋಗ್ಯತೆ ಇದೆ ಎನ್ನಬೇಕು.

ವ್ಯಾಸಜ್ಯ ವೃತ್ತಿ ಪ್ರತಿಯೋಗಿತಾವನ್ನು ಅಂಗೀಕಾರಮಾಡದಿರುವ ಮತಪ್ರಕಾರ ಈ ಲಕ್ಷಣ ಉಕ್ತವಾಗಿದೆ ಎಂದು ತಿಳಿಯಬೇಕು. ಇಲ್ಲದಿದ್ದರೆ 'ಆಕಾಶ ಮತ್ತು ಸೇಕಸಂಸರ್ಗಗಳೆರಡು ಜಲನಿಷ್ಠ ಅತ್ಯಂತಾಭಾವ ಪ್ರತಿಯೋಗಿಗಳು' ಎಂದು ಅನುಭವಾನುಸಾರ, ದ್ವಿತ್ವಾವಚ್ಛಿನ್ನ ಪ್ರತಿಯೋಗಿತಾಕ ಅತ್ಯಂತಾಭಾವ ಪ್ರತಿಯೋಗಿತಾದಲ್ಲಿ ಅವಚ್ಛೇದಕವಾದ ಸೇಕಸಂಸರ್ಗತ್ವವೇ ಸೇಕಸಂಸರ್ಗದಲ್ಲಿದೆ. ಆದರಿಂದ 'ಜಲೇನ ಸಿಂಚತಿ' ಎಂಬಲ್ಲಿ ಪ್ರಮಾಣವಾಕ್ಯದಲ್ಲಿ ಅವ್ಯಾಪ್ತಿ ಬಂದೀತು.

'ಆಕಾಶ ಸೇಕಸಂಸರ್ಗಗಳೆರಡರಲ್ಲಿ ಒಂದು ದ್ವಿತ್ವಾವಚ್ಛಿನ್ನಪ್ರತಿಯೋಗಿತಾವು ವ್ಯಾಸಜ್ಯವೃತ್ತಿಯಾಗಿಲ್ಲ' ಎಂಬ ಮತವಿಟ್ಟುಕೊಂಡರೆ, ಆಕಾಶ ನಿಷ್ಠ ಪ್ರತಿಯೋಗಿತಾ ಬೇರೆ, ಸೇಕಸಂಸರ್ಗನಿಷ್ಠಪ್ರತಿಯೋಗಿತಾ ಬೇರೆ. ಸೇಕಸಂಸರ್ಗತ್ವವು ಜಲನಿಷ್ಠ ಅತ್ಯಂತಾಭಾವ ಪ್ರತಿಯೋಗಿತಾದಲ್ಲಿ ಅವಚ್ಛೇದಕವಾಗದಿರುವುದರಿಂದ ಅವಚ್ಛೇದಕಧರ್ಮವು ಸೇಕಸಂಸರ್ಗದಲ್ಲಿಲ್ಲ ಯೋಗ್ಯತಾವು ಸೇಕಸಂಸರ್ಗದಲ್ಲಿದೆ. 'ಜಲೇನ ಸಿಂಚತಿ' ಎಂಬ ವಾಕ್ಯಪ್ರಮಾಣವಾಕ್ಯವೆನಿಸುತ್ತದೆ.

ಪ್ರತಿಯೋಗಿತಾಶೂನ್ಯತ್ವವನ್ನು ಹೇಳಿದರೆ ಸಾಕಾಗಿತ್ತು. ಪ್ರತಿಯೋಗಿತಾವಚ್ಛೇದಕಧರ್ಮ ಶೂನ್ಯತ್ವವೆಂದು ಹೇಳಬೇಕಾಗಿರಲಿಲ್ಲ. ಆದರೂ ಪ್ರತಿಯೋಗಿತಾ ಶೂನ್ಯತ್ವ ಬೇರೆ, ಪ್ರತಿಯೋಗಿತಾ ವಚ್ಛೇದಕಧರ್ಮಶೂನ್ಯತ್ವ ಬೇರೆ. ಎರಡೂ ಬೇರೆಬೇರೆ ಅಖಂಡಾಭಾವಗಳು. ಪ್ರತಿಯೋಗಿತಾ ಭಾವತ್ವವು ಲಘುಧರ್ಮವಾದರೂ ಅದು ಪ್ರತಿಯೋಗಿತಾವಚ್ಛೇದಕಧರ್ಮಾಭಾವದಲ್ಲಿ ಇಲ್ಲ. ಹೀಗಾಗಿ ಲಕ್ಷಣದಲ್ಲಿ ಅವಚ್ಛೇದಕಧರ್ಮವನ್ನು ಸೇರಿಸಿದ್ದರಿಂದ ಗೌರವದೋಷ, ವೈಯರ್ಥ್ಯ ಎಂದು ಹೇಳಲಾಗುವುದಿಲ್ಲ.

'ಪ್ರಮಾಣಾಬಾಧವೇ ಯೋಗ್ಯತಾ' ಎಂದೇಕೆ ಹೇಳಬಾರದು ಆಗ ಅಖಂಡಾರ್ಥ ವಾಕ್ಯದಲ್ಲಿಯೂ ಯೋಗ್ಯತಾ ಇದೆ ಎನ್ನಲು ಬರುತ್ತದೆ. ಎಂದರೆ ಅಪ್ರಮಾಣವಾಕ್ಯದಲ್ಲಿಯೂ ಸಂಸರ್ಗಕ್ಕೆ ಬಾಧವಿದ್ದರೂ ಪದಾರ್ಥಮಾತ್ರಕ್ಕೆ ಬಾಧವಿರುವುದಿಲ್ಲ. ಆದರಿಂದ ಅತಿವ್ಯಾಪ್ತಿ. ಸಂಸರ್ಗಾಬಾಧವನ್ನೇ ಯೋಗ್ಯತಾ ಎನ್ನುತ್ತೇನೆ ಎಂದರೆ ಸತ್ಯಾದಿವಾಕ್ಯದಲ್ಲಿ ಸಂಸರ್ಗಬಾಧವನ್ನೇ ನೀನು ಒಪ್ಪುವುದರಿಂದ, ಸಂಸರ್ಗಾಗೋಚರಪ್ರಮಾಜನಕತ್ವವನ್ನೇ ನೀನು ಒಪ್ಪುವುದರಿಂದ ಸತ್ಯಾದಿ ವಾಕ್ಯವು ಅಪ್ರಮಾಣವಾಕ್ಯವೇ ಆದೀತು.

ಇಲ್ಲಿ ಸಂಸರ್ಗದಲ್ಲಿ ತಾತ್ಪರ್ಯವಿಲ್ಲದಿರುವುದರಿಂದ ಅದು ಬಾಧಿತವಾದರೂ ವಾಕ್ಯವು

ಪ್ರಮಾಣವೆ. ತಾತ್ಪರ್ಯಾವಿಷಯಾಬಾಧವನ್ನೇ ಯೋಗ್ಯತಾ ಎನ್ನುತ್ತೇನೆ, ಎಂದರೆ ತಾತ್ಪರ್ಯ ವಿಷಯ ಯಾವುದು? ಪದಾರ್ಥವೆ? ವಾಕ್ಯಾರ್ಥವೆ? ಪದಾರ್ಥದಲ್ಲಿ ವಾಕ್ಯತಾತ್ಪರ್ಯವೆಂದರೆ ಆ ಪದಾರ್ಥವು ವಾಕ್ಯದ ಮೊದಲಿನ ಒಂದು ಪದದಿಂದಲೇ ಉಪಸ್ಥಿತವಾಗುವಾಗ ಮುಂದಿನ ಪದಗಳೆಲ್ಲವೂ ವ್ಯರ್ಥವೆನಿಸುತ್ತವೆ. ವಾಕ್ಯಾರ್ಥದಲ್ಲಿ ವಾಕ್ಯತಾತ್ಪರ್ಯವೆನ್ನುವ ಪಕ್ಷದಲ್ಲಿ ವಾಕ್ಯವು ಅಖಂಡಾರ್ಥತಾತ್ಪರ್ಯಕವಾಗುವುದು ವ್ಯಾಹತವಾಗುತ್ತದೆ.



**ननु यत्र पदार्थः प्रमितः तत्र स इतरपदार्थविशिष्टः प्रतिपाद्यः । यत्र त्वज्ञातः तत्र स नान्यैः शक्यो विशेष्टुमिति तत्र स एव प्रतिपाद्यः । प्रमिते च तस्मिन् वाक्यसमाप्तेर्न विशिष्टपरत्वमिति चेन्न, उक्तरीत्या चंद्रब्रह्मादिप्रातिपदिकार्थानां सामान्यतो ज्ञात-त्वेनेतरव्यावृत्त्यर्थं प्रकृष्टत्वसत्यत्वादिना विशिष्यैव बोध्यत्वात् ।।**

ननु यत्र पदार्थः प्रसिद्धस्तत्रोक्तरीत्या तन्मात्रतात्पर्यायोगेनेतरवैशिष्ट्ये तात्पर्यं कल्पनीयम् । यत्र तु न प्रसिद्धस्तत्र पदार्थस्येतरवैशिष्ट्यबोधनायोगात् तन्मात्रपरत्वं कल्पनीयम् । तावता तस्य सप्रयोजनत्वात् । इह तु ब्रह्मणोऽलौकिकत्वेन प्रागप्रसिद्धत्वात् अखंडार्थत्वमिति शंकते— **नन्विति । उक्तरीत्येति ।।** बुभुत्सानुरोधेन चंद्रब्रह्मादिशब्दार्थानां सामान्यज्ञानावश्यंभावादिति भावः ।



'ನನು ಯತ್ರ ಪದಾರ್ಥಃ ಪ್ರಮಿತಃ ತತ್ರ ಸ ಇತರ ಪದಾರ್ಥ ವಿಶಿಷ್ಟಃ ಪ್ರತಿಪಾದ್ಯಃ। ಯತ್ರ ತ್ವಜ್ಞಾತಃ ತತ್ರ ಸ ನಾನ್ಯೈಃ ಶಕ್ಯೋ ವಿಶೇಷ್ಟುಮಿತಿ ತತ್ರ ಸ ಏವ ಪ್ರತಿಪಾದ್ಯಃ। ಪ್ರಮಿತೇ ಚ ತಸ್ಮಿನ್ ವಾಕ್ಯಸಮಾಪ್ತೇರ್ನ ವಿಶಿಷ್ಟಪರತ್ವಮಿತಿ ಚೇನ್ನ। ಉಕ್ತರೀತ್ಯಾ ಚಂದ್ರಬ್ರಹ್ಮಾದಿ ಪ್ರಾತಿಪದಿಕಾರ್ಥಾನಾಂ ಸಾಮಾನ್ಯತೋ ಜ್ಞಾತತ್ವೇನ ಇತರವ್ಯಾವೃತ್ತ್ಯರ್ಥಂ ಪ್ರಕೃಷ್ಟತ್ವ ಸತ್ಯತ್ವಾದಿನಾ ವಿಶಿಷ್ಯೈವ ಬೋಧ್ಯತ್ವಾತ್ ।'

'ಪದಾರ್ಥ ಮೊದಲೇ ಪ್ರಸಿದ್ಧವಾಗಿದ್ದರೆ ಕೇವಲ ಅದರಲ್ಲಿ ತಾತ್ಪರ್ಯ ಎನ್ನಲಾಗದು. ಅದರಲ್ಲಿ ಇತರ ವೈಶಿಷ್ಟ್ಯವನ್ನು ಹೇಳುವಲ್ಲಿಯೇ ತಾತ್ಪರ್ಯ ಎನ್ನಬೇಕು. ಪದಾರ್ಥ ಅಪ್ರಸಿದ್ಧ ಅಜ್ಞಾತವಾಗಿದ್ದರೆ ಅದರಲ್ಲಿ ಇತರ ವೈಶಿಷ್ಟ್ಯವನ್ನು ಬೋಧಿಸಲು ಶಕ್ಯವಾಗದು. ಆ ಪದಾರ್ಥ ಮಾತ್ರದಲ್ಲಿ ತಾತ್ಪರ್ಯ ಎನ್ನಬೇಕು. ಅದನ್ನು ಬೋಧಿಸುವುದರಲ್ಲಿಯೇ ವಾಕ್ಯವು ಸಾರ್ಥಕ ವೆನಿಸುವುದು. ಪ್ರಕೃತ ಬ್ರಹ್ಮ ಅಲೌಕಿಕ ಪದಾರ್ಥವಾದ್ದರಿಂದ ಮೊದಲಿಗೆ ಅಜ್ಞಾತವಾಗಿರುವುದರಿಂದ

ಅದರಲ್ಲಿಯೇ ವಾಕ್ಯ ತಾತ್ಪರ್ಯವನ್ನು ಒಪ್ಪಬೇಕು. ಹೀಗಾಗಿ ವಾಕ್ಯ ಅಖಂಡಾರ್ಥಪರ' ಎಂದರೆ ಇದು ಸರಿಯಲ್ಲ. ಹಿಂದೆ ಹೇಳಿದಂತೆ ಚಂದ್ರ, ಬ್ರಹ್ಮ ಮುಂತಾದ ಪ್ರಾತಿಪದಿಕಾರ್ಥ ವಿಷಯದಲ್ಲಿ ಜಿಜ್ಞಾಸೆ ಬರಬೇಕೆಂದರೆ ಮೊದಲಿಗೆ ಅದು ಸಾಮಾನ್ಯತಃ ಜ್ಞಾತವಾಗಿರಲೇಬೇಕು. ಅದರಿಂದ ಅದರಲ್ಲಿ ಇತರ ವ್ಯಾವೃತ್ತಿಯನ್ನು ಬೋಧಿಸುವುದಕ್ಕಾಗಿ ಪ್ರಕೃಷ್ಟತ್ವ ಸತ್ಯತ್ವಾದಿ ವ್ಯಾವರ್ತಕ ವಿಶೇಷಣ ವಿಶಿಷ್ಟತ್ವವನ್ನೇ ಹೇಳಬೇಕು.



**वेदांतानां निर्विषयत्वं च स्यात् । अखंडवाक्यार्थस्य स्वप्रकाशचिन्मात्रस्याविद्या(द्य)ध्यासाधिष्ठानत्वेन तत्साक्षित्वेन च नित्यसिद्धत्वात्।**

**निर्निमित्तं सर्ववेदांतानां मुख्यार्थत्यागश्च स्यात्, एकरसत्वादिश्रुतीनामपि विशेष्यमात्रपरत्वेन मुख्यार्थबाधकाभावात् ।**

**वेदांतजन्यज्ञानं च निष्प्रकारकं चेत् ज्ञानमेव न स्यात्, ज्ञानस्येच्छादेरिव सविषयकत्ववत्सप्रकारकत्वस्यापि नियतत्वात्, कंचित्प्रकारं विना वस्तुनो बुद्धावनारोहाच्च । इदमित्थमिति हि धीः।**

**वेदांतानामबुभुत्सितार्थत्वं च स्यात्, बुभुत्सायाः धर्मिज्ञानाधीनत्वात् ।**

**निर्विषयत्वमिति** ।। स्वप्रकाशे ब्रह्मणि वेदांतप्रकाश्यत्वायोगात् अज्ञातस्यैव विषयत्वेन स्वरूपस्याज्ञाततत्वाभावाच्चेति भावः।। **निर्निमित्तमिति** ।। गुणादिनिषेधवाक्यानां बाधकत्वायोगस्योक्तत्वादिति भावः । किंच वेदांतानां स्वरूपमात्रपरत्वं चेत् तदा तत्स्वरूपं बुध्दं न वा । आद्ये न तत्र बुभुत्सा । तद्विषयस्य सिद्धत्वात् । अंत्ये धर्मिज्ञानाभावात् न बुभुत्सेत्युभयथापि वेदांतानामबुभुत्सितार्थत्वं स्यादित्यभिप्रेत्याह— **वेदांतानामिति** ।



'ವೇದಾಂತಾನಾಂ ನಿರ್ವಿಷಯತ್ವಂ ಚ ಸ್ಯಾತ್ । ಅಖಂಡವಾಕ್ಯಾರ್ಥಸ್ಯ ಸ್ವಪ್ರಕಾಶ ಚಿನ್ಮಾತ್ರಸ್ಯ ಅವಿದ್ಯಾದ್ಯಧ್ಯಾಸಾಧಿಷ್ಠಾನತ್ವೇನ ತತ್‌ಸಾಕ್ಷಿತ್ವೇನ ಚ ನಿತ್ಯ ಸಿದ್ಧತ್ವಾತ್ ।

**ನಿರ್ನಿಮಿತ್ತಂ ಸರ್ವವೇದಾಂತಾನಾಂ ಮುಖ್ಯಾರ್ಥತ್ಯಾಗಶ್ಚ ಸ್ಯಾತ್ । ಏಕರಸತ್ವಾದಿ ಶ್ರುತೀನಾಮಪಿ ವಿಶೇಷ್ಯ ಮಾತ್ರ ಪರತ್ವೇನ ಮುಖ್ಯಾರ್ಥ ಬಾಧಕಾಭಾವಾತ್ ।'**

ಅಖಂಡಾರ್ಥಪರತ್ವ ಪಕ್ಷದಲ್ಲಿ ವೇದಾಂತ ವಾಕ್ಯಗಳಿಗೆ ವಿಷಯವೇ ಇಲ್ಲವೆಂದಾದೀತು. ಏಕೆಂದರೆ ಅಖಂಡ ವಾಕ್ಯಾರ್ಥವಾಗಿರುವ ಸ್ವಪ್ರಕಾಶ ಚಿನ್ಮಾತ್ರವು ಆತ್ಮನಲ್ಲಿ ಅವಿದ್ಯಾದ್ಯಾರೋಪ ಮಾಡುವುದಕ್ಕೆ ಅಧಿಷ್ಠಾನವಾಗಿ ಸ್ವಪ್ರಕಾಶವಾಗಿ ನಿತ್ಯಸಿದ್ಧವೇ ಆಗಿದೆ. 'ಅಹಮಜ್ಞಃ' ಎಂದು ಅವಿದ್ಯೆಯ ಅನುಭವಕ್ಕೆ ಸಾಕ್ಷಿಯಾಗಿಯೂ ಅದು ನಿತ್ಯಸಿದ್ಧವಾಗಿದೆ. ಆದರಿಂದ ವೇದಾಂತವು ಅದನ್ನು ಬೋಧಿಸುವುದು ಅಯುಕ್ತ. ಅಜ್ಞಾತವಾದುದನ್ನೇ ವಾಕ್ಯವು ಬೋಧಿಸಬೇಕು. 'ಅಪ್ರಾಪ್ತೇ ಶಾಸ್ತ್ರಮರ್ಥವತ್' ಎನ್ನುವುದು ಪ್ರಸಿದ್ಧ.

ಅಖಂಡಾರ್ಥಪರತ್ವಪಕ್ಷದಲ್ಲಿ ಎಲ್ಲ ವೇದಾಂತ ವಾಕ್ಯಗಳಿಗೂ ವಿನಾಕಾರಣ ಮುಖ್ಯಾರ್ಥ ತ್ಯಾಗ ಮಾಡಬೇಕಾಗುತ್ತದೆ. 'ಏಕರಸತ್ವಾದಿ' ಶ್ರುತಿ ವಿರೋಧದಿಂದ ಮುಖ್ಯಾರ್ಥತ್ಯಾಗ ಎನ್ನಲಾಗದು. ಆ ಶ್ರುತಿಯು ಲಕ್ಷಣಯಾ ವಿಶೇಷ್ಯ ಚಿನ್ಮಾತ್ರಪರವಾದ್ದರಿಂದ ಮುಖ್ಯಾರ್ಥವಾದ ಸತ್ಯತ್ವಾದಿ ವಿಶೇಷಣ ವೈಶಿಷ್ಟ್ಯವನ್ನು ಬೋಧಿಸುವಲ್ಲಿ ಏನೂ ಬಾಧಕವಿಲ್ಲ.

'ಏಕರಸತ್ವಾದಿ' ಶ್ರುತಿ ಎಂದರೆ 'ಸ ಯಥಾ ಸೈಂಧವಘನೋಽನಂತರೋಽಬಾಹ್ಯಃ ಕೃತ್ಸ್ನೋ ರಸಘನ ಏವ, ಏವಂ (ಬೃ.ಉ.6.5.13) 'ಉಪ್ಪಿನ ಹರಳು ಒಳಗೂ ಹೊರಗೂ ಪೂರ್ತಿ ಉಪ್ಪೆ. ಹಾಗೇ ಆತ್ಮನೂ ಪೂರ್ತಿಯಾಗಿ ಜ್ಞಾನಸ್ವರೂಪನೆ'.

**'ವೇದಾಂತಜನ್ಯಂ ಜ್ಞಾನಂ ನಿಷ್ಪ್ರಕಾರಕಂ ಚೇತ್ ಜ್ಞಾನಮೇವ ನ ಸ್ಯಾತ್ । ಜ್ಞಾನಸ್ಯ ಇಚ್ಛಾದೇರಿವ ಸವಿಷಯಕತ್ವವತ್ ಸಪ್ರಕಾರತ್ವಸ್ಯಾಪಿ ನಿಯತತ್ವಾತ್ । ಕಂಚಿತ್ಪ್ರಕಾರಂ ವಿನಾ ವಸ್ತುನೋ ಬುದ್ಧಾವನಾರೋಹಾಚ್ಚ । ಇದಮಿತ್ಥಮಿತಿ ಹಿ ಧೀಃ ।**

ವೇದಾಂತಜನ್ಯವಾದ ಜ್ಞಾನವು ಅಖಂಡಾರ್ಥವಿಷಯಕ, ನಿಷ್ಪ್ರಕಾರಕ ಎನ್ನುವುದಾದರೆ ಅದು ಜ್ಞಾನವೇ ಅಲ್ಲ ಎಂದಾದೀತು. ಇಚ್ಛಾದಿಗಳಂತೆ ಜ್ಞಾನವೂ ಕೂಡ ನಿಯಮೇನ ಸವಿಷಯಕ ವಾಗಿಯೇ ಇರುವಂತೆ ನಿಯಮೇನ ಸಪ್ರಕಾರಕವೂ ಆಗಿರುತ್ತದೆ. ಮತ್ತು ಯಾವುದೇ ವಸ್ತುವು ಒಂದೂ ಪ್ರಕಾರವಿಲ್ಲದೆ ಬುದ್ಧಿಯಲ್ಲಿ ಗೋಚರಿಸುವುದೇ ಇಲ್ಲ. 'ಈ ವಸ್ತು ಹೀಗೆ' ಎಂದೇ ಬುದ್ಧಿಯು ವಸ್ತುವನ್ನು ಗ್ರಹಿಸುತ್ತದೆ.

**ವೇದಾಂತಾನಾಮಬುಭುತ್ಸಿತಾರ್ಥತ್ವಂ ಚ ಸ್ಯಾತ್ । ಬಭುತ್ಸಾಯಾ ಧರ್ಮಿಜ್ಞಾನಾಧೀನತ್ವಾತ್ ।'**

ವೇದಾಂತವಾಕ್ಯಗಳು ಅಖಂಡಸ್ವರೂಪಮಾತ್ರ ಬೋಧಕವೆನ್ನುವುದಾದರೆ, ಮೊದಲಿಗೆ ಸ್ವರೂಪವು ಸಾಮಾನ್ಯತ ಜ್ಞಾತವಾಗಿರದಿದ್ದರೆ ಅದರ ಜಿಜ್ಞಾಸೆ ಉಂಟಾಗದು. ಧರ್ಮಿಜ್ಞಾನವೆ

ಇಲ್ಲದಿದ್ದರೆ ಅದರ ಬಗ್ಗೆ ಸಂಶಯ ಜಿಜ್ಞಾಸೆಗಳು ಬರಲು ಶಕ್ಯವಿಲ್ಲ. ಸಾಮಾನ್ಯತಃ ಜ್ಞಾತವೆ ಎಂದರೆ ತಿಳಿಯಬೇಕಾದುದು ತಿಳಿದೇ ಇರುವುದರಿಂದ ವಾಕ್ಯವು ಮತ್ತೆ ಅದನ್ನೇ ಬೋಧಿಸಲಾರದು.



''श्रोतव्यो मंतव्य'' इति विचारविधिश्चायुक्तः स्यात्, तस्याप्यापातदर्शनजन्यसंशयनिवर्तकसप्रकारकनिश्चयार्थत्वात् ।

शुद्धब्रह्मविचारकाणामाद्याध्यायतृतीयपादीयाधिकरणानां अनारंभश्च स्यात्, विषयादिपंचकाभावात् । विशिष्याज्ञातो हि विषयः, साधारणधर्मधीजन्यश्च संशयः, मिथ्यासत्यैकप्रकारावलंबिनौ च पूर्वपक्षसिद्धांतौ, एकतरप्रकारनिर्धारणाधीनं च प्रयोजनं । तच्च पंचकं निर्विशेषे कथं स्यात् ?

''ब्रह्मविदाप्नोति'' इति पूर्ववाक्य एव ब्रह्मणः सामान्येन ज्ञाततया सत्यादिवाक्यवैयर्थ्यं च स्यात् । सत्यादिवाक्यस्य सत्यत्वादिविशिष्टे तात्पर्याभावे तात्पर्यतो यत्किंचिद्ब्रह्मेत्येव बोधनाद्यस्य कस्यचित् ब्रह्मत्वं च स्यात् ।

**सत्यादिवाक्यवैयर्थ्यमिति ।।** पूर्ववाक्ये स्थितब्रह्मशब्दार्थत्वादधिकस्याभावादिति भावः ।। **यस्य कस्यचिदिति ।।** तथाच ब्रह्मनिर्धारणं न स्यादित्यर्थः ।



'ಶ್ರೋತವ್ಯೋ ಮಂತವ್ಯಃ ಇತಿ ವಿಚಾರವಿಧಿಶ್ಚಾಯುಕ್ತಃ ಸ್ಯಾತ್ । ತಸ್ಯಾಪಿ ಆಪಾತದರ್ಶನಜನ್ಯ ಸಂಶಯ ನಿವರ್ತಕ ಸಪ್ರಕಾರಕ ನಿಶ್ಚಯಾರ್ಥತ್ವಾತ್ ।

ಶುದ್ಧಬ್ರಹ್ಮ ವಿಚಾರಕಾಣಾಂ ಆದ್ಯಾಧ್ಯಾಯ ತೃತೀಯಪಾದೀಯಾಧಿಕರಣಾನಾಂ ಅನಾರಂಭಶ್ಚ ಸ್ಯಾತ್ । ವಿಷಯಾದಿಪಂಚಕಾಭಾವಾತ್ । ವಿಶಿಷ್ಯಾಜ್ಞಾತೋ ಹಿ ವಿಷಯಃ । ಸಾಧಾರಣಧರ್ಮಧೀಜನ್ಯಶ್ಚ ಸಂಶಯಃ । ಮಿಥ್ಯಾಸತ್ಯೈಕಪ್ರಕಾರಾವಲಂಬಿನೌ ಚ ಪೂರ್ವಪಕ್ಷ ಸಿದ್ಧಾಂತೌ । ಏಕತರ ಪ್ರಕಾರ ನಿರ್ಧಾರಣಾಧೀನಂ ಚ ಪ್ರಯೋಜನಂ । ತಚ್ಚ ಪಂಚಕಂ ನಿರ್ವಿಶೇಷೇ ಕಥಂ ಸ್ಯಾತ್ ?'

ವೇದಾಂತಜನ್ಯಜ್ಞಾನ ಅಖಂಡಾರ್ಥವಿಷಯ ನಿಷ್ಪ್ರಕಾರಕವಾದರೆ 'ಶ್ರೋತವ್ಯೋ ಮಂತವ್ಯಃ'

ಎಂದು ವೇದದಲ್ಲಿ ವೇದವಿಚಾರವನ್ನು ವಿಧಾನಮಾಡಿದ್ದು ಕೂಡಲಾರದೆ ಹೋದೀತು. ಏಕೆಂದರೆ ವಿಚಾರವಿಧಿಯೂ ಕೂಡ ಸಮಾನಧರ್ಮದರ್ಶನ ಜನ್ಯ ಸಂಶಯ ನಿವೃತ್ತಿಗಾಗಿ ವಿಶೇಷಧರ್ಮ ಪ್ರಕಾರಕನಿಶ್ಚಯ ಉಂಟುಮಾಡುವುದಕ್ಕಾಗಿ ಇದೆ.

ಅದ್ವೈತ ಭಾಷ್ಯಪ್ರಕಾರ ಪ್ರಥಮಾಧ್ಯಾಯ ತೃತೀಯಪಾದೀಯ ಅಧಿಕರಣಗಳು ಶುದ್ಧಬ್ರಹ್ಮವಿಚಾರಕ್ಕೆ ಹೊರಟಿವೆ. ಅವು ಕೂಡಲಾರದು.

ವಿಷಯೋ ವಿಶಯಶ್ಚೈವ ಪೂರ್ವಪಕ್ಷಸ್ತಥೋತ್ತರಃ ।
ಪ್ರಯೋಜನಂ ಚ ವಕ್ತವ್ಯಂ ಪೂರ್ವಸಿದ್ಧಾಂತಪಕ್ಷಯೋಃ ॥

ಎಂದು ಹೇಳಿದಂತೆ ವಿಷಯಾದಿ ಐದು ಅಂಗಗಳು ಅಖಂಡಾರ್ಥತ್ವಪಕ್ಷದಲ್ಲಿ ಇಲ್ಲವಾಗುವುದ ರಿಂದ ಅಖಂಡಾರ್ಥವಿಚಾರವೇ ನಡೆಯಲಾರದು. ಏಕೆಂದರೆ ವಿಶೇಷಧರ್ಮಯುಕ್ತವಾಗಿ ತಿಳಿಯದಿದ್ದುದೇ ವಿಷಯ. ಸಮಾನಧರ್ಮಜ್ಞಾನ ಜನ್ಯವಾದುದು ಸಂಶಯ. ಮಿಥ್ಯಾಪ್ರಕಾರವನ್ನೇ ಹಿಡಿದು ವಾದಿಸುವುದು ಪೂರ್ವಪಕ್ಷ. ಸತ್ಯಪ್ರಕಾರವನ್ನೇ ಸಾಧಿಸುವುದು ಸಿದ್ಧಾಂತಪಕ್ಷ. ಈ ಮಿಥ್ಯಾಸತ್ಯಪ್ರಕಾರಗಳಲ್ಲಿ ಯಾವುದು ಸರಿ ಎಂದು ನಿರ್ಧಾರಣದಿಂದಲೇ ಎರಡೂ ಪಕ್ಷಗಳಲ್ಲಿ ಪ್ರಯೋಜನಸಿದ್ಧಿ. ಹೀಗೆ ಈ ಐದು ವಿಚಾರಾಂಗಗಳು ನಿರ್ವಿಶೇಷ ಅಖಂಡಚಿನ್ಮಾತ್ರವಿಷಯದಲ್ಲಿ ಹೇಗೆ ಲಭ್ಯವಾಗುವುವು?

**'ಬ್ರಹ್ಮವಿದಾಪ್ನೋತಿ' ಇತಿ ಪೂರ್ವ ವಾಕ್ಯ ಏವ ಬ್ರಹ್ಮಣಃ ಸಾಮಾನ್ಯೇನ ಜ್ಞಾತತಯಾ ಸತ್ಯಾದಿ ವಾಕ್ಯ ವೈಯರ್ಥ್ಯಂ ಚ ಸ್ಯಾತ್। ಸತ್ಯಾದಿವಾಕ್ಯಸ್ಯ ಸತ್ಯತ್ವಾದಿ ವಿಶಿಷ್ಟೇ ತಾತ್ಪರ್ಯಾಭಾವೇ ತಾತ್ಪರ್ಯತೋ 'ಯತ್ಕಿಂಚಿತ್ ಬ್ರಹ್ಮ' ಇತ್ಯೇವ ಬೋಧನಾತ್ ಯಸ್ಯಕಸ್ಯಚಿತ್ ಬ್ರಹ್ಮತ್ವಂ ಚ ಸ್ಯಾತ್।'**

'ಬ್ರಹ್ಮವಿದಾಪ್ನೋತಿ ಪರಂ' ಎಂಬ ಮೊದಲನೆ ವಾಕ್ಯದಲ್ಲಿಯೇ ಬ್ರಹ್ಮನು ಸಾಮಾನ್ಯತಃ ಜ್ಞಾತನಾಗಿರುವುದರಿಂದ ಸತ್ಯಾದಿ ವಾಕ್ಯ ಹೆಚ್ಚೇನನ್ನೂ ಹೇಳದಿರುವುದರಿಂದ ವ್ಯರ್ಥವಾದೀತು. ಸತ್ಯಾದಿ ವಾಕ್ಯಕ್ಕೆ ಸತ್ಯತ್ವಾದಿ ವಿಶಿಷ್ಟದಲ್ಲಿ ತಾತ್ಪರ್ಯವಿಲ್ಲದಿದ್ದರೆ ಅದು ತಾತ್ಪರ್ಯದಿಂದ 'ಬ್ರಹ್ಮವೆಂದರೆ ಯಾವುದೋ ಒಂದು ವಸ್ತು' ಎಂದಿಷ್ಟೇ ಹೇಳುವುದರಿಂದ 'ಯಾವುದೋ ಒಂದು ವಸ್ತು ಬ್ರಹ್ಮ' ಎಂದಾದೀತು. 'ಇದೇ ಬ್ರಹ್ಮ' ಎಂದು ನಿರ್ಧಾರಣವೆ ಇಲ್ಲವೆಂದಾದೀತು.



**तात्पर्यविषयस्याखंडत्वेन इदं ब्रह्मेति लक्षणलक्ष्यरूपोद्देश्य-विधेय विभागाभावेन तात्पर्यतो यत्किंचिदित्येव बोधनात्, तेन च ब्रह्मबुभुत्सानिवृत्त्यभावात्, किं ब्रह्मेति प्रश्नोत्तरं च न स्यात् ।**

**नचोद्देश्यविधेयभावेऽसत्यपि अप्राप्तविधेयमात्रपरत्वादखंडार्थत्वाहानिः । विधेयस्यापि स्वरूपेण ज्ञातत्वेनोद्देश्यसंसृष्टतयैव बोधनीयतया वाक्यांतरवत्सखंडार्थत्वापातात् ।**

**उक्तं हि—**

**''किंचिद्विधीयतेऽनूद्य वाक्येनेति सतां स्थितिः ।**
**सत्यज्ञानादिवाक्येन कथ्यतां किं विधीयते ।।**
**अज्ञातं बोध्यते किंचित् वाक्येनेति सतां स्थितिः ।**
**सत्यज्ञानादिशब्दैस्तु किमज्ञातं प्रबोध्यत ।।'' इति ।।**

**सत्यादिपदानां लक्षणा च न स्यात् । अशक्यासदृशान्वयप्रतियोग्युपस्थितिर्लक्षणेति पक्षे लक्षणाया एवासंभवात् । शक्यसंबंधो लक्षणेतिपक्षेऽन्वयानुपपत्तिरूपलक्षणाबीजाभावात् ।**

दूषणांतमाह— **तात्पर्यविषयस्येति** ।। ननूद्देश्यविधेयभावासत्त्वेऽप्युद्देश्यस्य मानांतरसिद्धत्वादप्राप्तविधेयमात्रपरत्वान्न तस्याखंडार्थत्वहानिरित्याशंक्य निराकरोति– **नचेति** । **वाक्यांतरवदिति** ।। ''ज्योतिष्टोमेन स्वर्गकामो यजेत'' इत्यादिवाक्यवदित्यर्थः । गौणवृत्तावतिव्याप्तिवारणाय– **असदृशेति** । **अन्वयानुपपत्तिरूपेति** ।। तात्पर्यविषयान्वयानुपपत्तिरूपेत्यर्थः । न च लाघवात्तात्पर्यानुपपत्तिरेव लक्षणाबीजमिति वाच्यम् । पदार्थमात्रे तात्पर्यासंभवात् वाक्यार्थस्य प्रकृते असंभवादिति भावः ।।



'ತಾತ್ಪರ್ಯವಿಷಯಸ್ಯ ಅಖಂಡಾರ್ಥತ್ವೇನ ಇದಂ ಬ್ರಹ್ಮೇತಿ ಲಕ್ಷಣ ಲಕ್ಷ್ಯರೂಪ ಉದ್ದೇಶ್ಯವಿಧೇಯ ವಿಭಾಗಾಭಾವೇನ ತಾತ್ಪರ್ಯತೋ 'ಯತ್ಕಿಂಚಿತ್' ಇತ್ಯೇವ ಬೋಧನಾತ್, ತೇನ ಚ ಬ್ರಹ್ಮ ಬುಭುತ್ಸಾ ನಿವೃತ್ತ್ಯಭಾವಾತ್, ಕಿಂ ಬ್ರಹ್ಮೇತಿ ಪ್ರಶ್ನೋತ್ತರಂ ಚ ನ ಸ್ಯಾತ್ ।'

'ತಾತ್ಪರ್ಯವಿಷಯವು ಅಖಂಡಾರ್ಥವಾಗಿರುವುದರಿಂದ 'ಇದು ಬ್ರಹ್ಮ' ಎಂದು 'ಒಂದು

ಲಕ್ಷಣ, ಇನ್ನೊಂದು ಲಕ್ಷ್ಯ' ಎಂದು ಎರಡು ಉದ್ದೇಶ್ಯ ವಿಧೇಯಗಳೆಂಬ ಭೇದವಿಲ್ಲದಿರುವುದರಿಂದ ವೇದಾಂತವಾಕ್ಯವು ಅದನ್ನು ತಾತ್ಪರ್ಯದಿಂದ 'ಯಾವುದೋ ಒಂದು' ಎಂದೇ ಬೋಧಿಸುತ್ತದೆ. 'ಯಾವುದೋ ಒಂದು' ಎಂದು ಜ್ಞಾನ ಮೊದಲಿಗೆ ಇದ್ದರೇ ಬ್ರಹ್ಮಜಿಜ್ಞಾಸೆ ಉಂಟಾಗುತ್ತದೆ. ಇನ್ನೂ ಹೆಚ್ಚೇನನ್ನೂ ಬೋಧಿಸದಿದ್ದರೆ ಅದರಿಂದ ಬ್ರಹ್ಮಜಿಜ್ಞಾಸೆ ಶಾಂತವಾಗುವುದಿಲ್ಲ. 'ಯಾವುದು ಬ್ರಹ್ಮ' ಎಂಬ ಪ್ರಶ್ನೆಗೆ ಸತ್ಯಾದಿವಾಕ್ಯ ಉತ್ತರವಾಗುವುದಿಲ್ಲ. ತನ್ಮಾತ್ರ ಪ್ರಶ್ನೋತ್ತರತ್ವರೂಪ ಹೇತು ಇಲ್ಲವಾಗುತ್ತದೆ.

**'ನ ಚ ಉದ್ದೇಶ್ಯವಿಧೇಯಭಾವೇಽಸತ್ಯಪಿ ಅಪ್ರಾಪ್ತವಿಧೇಯ ಮಾತ್ರ ಪರತ್ವಾತ್ ಅಖಂಡಾರ್ಥತ್ವಾಹಾನಿಃ। ವಿಧೇಯಸ್ಯಾಪಿ ಸ್ವರೂಪೇಣ ಜ್ಞಾತತ್ವೇನ ಉದ್ದೇಶ್ಯ ಸಂಸೃಷ್ಟತಯೈವ ಬೋಧನೀಯತಯಾ ವಾಕ್ಯಾಂತರವತ್ ಸಖಂಡಾರ್ಥತ್ವಾಪಾತಾತ್।'**

'ಉದ್ದೇಶ್ಯವಿಧೇಯ ವಿಭಾಗವಿಲ್ಲದಿದ್ದರೂ ಅಪ್ರಾಪ್ತವಾದ ವಿಧೇಯವನ್ನು ಮಾತ್ರವೆ ಸತ್ಯಾದಿ ವಾಕ್ಯವು ಹೇಳುವುದರಿಂದ ಅಖಂಡಾರ್ಥತ್ವಕ್ಕೆ ಹಾನಿ ಇಲ್ಲ' ಎನ್ನುವುದು ಸರಿಯಲ್ಲ. ವಿಧೇಯವೂ ಕೂಡ ಸಾಮಾನ್ಯವಾಗಿ ಯಾವ ವಿಶೇಷಣವೂ ಇಲ್ಲದೆ ಸ್ವಪ್ರಕಾಶತ್ವೇನ ಜ್ಞಾತವೇ ಆಗಿರುವುದರಿಂದ 'ಈ ಉದ್ದೇಶಕ್ಕೆ ಸಂಬಂಧಿಸಿದುದು' ಎಂದೇ ಅದನ್ನು ವಿಶೇಷವಾಗಿ ಬೋಧಿಸಬೇಕು. ಆಗ 'ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ' 'ನೀಲಂ ಉತ್ಪಲಂ' ಇತ್ಯಾದಿ ಸಂಸರ್ಗಬೋಧಕವಾದ ಬೇರೆ ವಾಕ್ಯಗಳಂತೆ ಸತ್ಯಾದಿವಾಕ್ಯವೂ ಸಖಂಡಾರ್ಥಪರವೆನಿಸುವುದು.

**ಉಕ್ತಂ ಹಿ—**

**ಕಿಂಚಿದ್ವಿಧೀಯತೇಽನೂದ್ಯ ವಾಕ್ಯೇನೇತಿ ಸತಾಂ ಸ್ಥಿತಿಃ।**
**ಸತ್ಯಜ್ಞಾನಾದಿವಾಕ್ಯೇನ ಕಥ್ಯತಾಂ ಕಿಂ ವಿಧೀಯತೇ ॥**

**ಅಜ್ಞಾತಂ ಬೋಧ್ಯತೇ ಕಿಂಚಿತ್ ವಾಕ್ಯೇನೇತಿ ಸತಾಂ ಸ್ಥಿತಿಃ।**
**ಸತ್ಯಜ್ಞಾನಾದಿ ಶಬ್ದೈಸ್ತು ಕಿಮಜ್ಞಾತಂ ಪ್ರಬೋಧ್ಯತೇ? ಇತಿ ॥**

**ಸತ್ಯಾದಿ ಪದಾನಾಂ ಲಕ್ಷಣಾ ಚ ನ ಸ್ಯಾತ್। ಅಶಕ್ತ-ಅಸದೃಶ-ಅನ್ವಯ ಪ್ರತಿಯೋಗ್ಯುಪಸ್ಥಿತಿರ್ಲಕ್ಷಣೇತಿ ಪಕ್ಷೇ ಲಕ್ಷಣಾಯಾ ಏವಾಸಂಭವಾತ್। ಶಕ್ಯ ಸಂಬಂಧೋ ಲಕ್ಷಣೇತಿ ಪಕ್ಷೇಽನ್ವಯಾನುಪಪತ್ತಿರೂಪ ಲಕ್ಷಣಾ ಬೀಜಾಭಾವಾತ್।'**

ಇದನ್ನು ಪ್ರಾಚೀನರು ಹೀಗೆ ಹೇಳಿದ್ದಾರೆ—'ಎಲ್ಲ ವಾಕ್ಯವೂ ಉದ್ದೇಶ್ಯವನ್ನು ಅನುವಾದಮಾಡಿ ಏನಾದರೂ ವಿಧಾನ ಮಾಡುತ್ತದೆ. ಅಖಂಡಾರ್ಥತ್ವಪಕ್ಷದಲ್ಲಿ ಸತ್ಯಜ್ಞಾನಾದಿ ವಾಕ್ಯವು ಏನು ವಿಧಾನ ಮಾಡುತ್ತದೆ ಹೇಳಿರಿ. ವಾಕ್ಯವು, ತಿಳಿಯದಿದ್ದ ಒಂದು ವಿಷಯವನ್ನು ತಿಳಿಸುವುದಕ್ಕಾಗಿ ಇದೆ ಎಂದು ಸಜ್ಜನರಲ್ಲಿ ನಿಯಮವಿದೆ. ಸತ್ಯಜ್ಞಾನಾದಿ ಶಬ್ದಗಳು ಏನು ತಿಳಿಯದಿದ್ದುದನ್ನು ತಿಳಿಸುತ್ತವೆ ಹೇಳಿರಿ' ಎಂದು.

ಸತ್ಯಾದಿವಾಕ್ಯ ಅಖಂಡಾರ್ಥ ಪರವಾದರೆ ಸತ್ಯಾದಿಪದಗಳಿಗೆ ಲಕ್ಷಣಾ ಕೂಡಲಾರದು. ಏಕೆಂದರೆ 'ಲಕ್ಷಣಾ' ಎಂದರೆ ಅಶಕ್ಯವಾದ, ಅಸದೃಶವಾದ ಅನ್ವಯಪ್ರತಿಯೋಗಿಯ ಉಪಸ್ಥಿತಿ ಎಂದು ಒಂದು ಪಕ್ಷವಿದೆ. ಅನ್ವಯಪ್ರತಿಯೋಗಿಯು ಶಕ್ಯವಾದರೆ ಅದರ ಉಪಸ್ಥಿತಿ ಶಕ್ತಿವೃತ್ತಿಯಿಂದಲೇ ಆಗುತ್ತದೆ. ಅಲ್ಲಿ ಲಕ್ಷಣಾಕ್ಕೆ ಅವಕಾಶವಿಲ್ಲ. ಅಶಕ್ಯವಾದರೆ ಮಾತ್ರ ಲಕ್ಷಣಾ ಅಲ್ಲಿ ಪ್ರವೃತ್ತಿ ಮಾಡುತ್ತದೆ. ಗಂಗಾಪದಕ್ಕೆ ತೀರ ಅಶಕ್ಯವಾದ್ದರಿಂದ ಲಕ್ಷಣಾ ಮಾಡುತ್ತೇವೆ. ಅಗ್ನಿರ್ಮಾಣವಕಃ ಎಂಬ ಗೌಣೀ ವೃತ್ತಿ ಸ್ಥಳದಲ್ಲಿ 'ಅಗ್ನಿ' ಶಬ್ದಕ್ಕೆ ಅಗ್ನಿಸದೃಶದಲ್ಲಿ ಗೌಣೀವೃತ್ತಿ. ಅನ್ವಯ ಪ್ರತಿಯೋಗಿಯು ಸದೃಶವಾಗಿದ್ದರೆ ಅಲ್ಲಿ ಗೌಣಿಯೆ ಹೊರತು ಲಕ್ಷಣೆಯಲ್ಲ. ಆದರಿಂದ ಅಸದೃಶವಾದ ಅನ್ವಯಪ್ರತಿಯೋಗಿಯ ಉಪಸ್ಥಿತಿಯೇ ಲಕ್ಷಣಾ. ಹೀಗೆ ಲಕ್ಷಣಾ ಸ್ವರೂಪವನ್ನು ಹೇಳುವ ಪಕ್ಷದಲ್ಲಿ ಅನ್ವಯಪ್ರತಿಯೋಗಿಯ ಉಪಸ್ಥಿತಿ ಬೇಕು. ಅಖಂಡಾರ್ಥದಲ್ಲಿ ಲಕ್ಷಣಾ ಶಕ್ಯವಿಲ್ಲ. ಅನ್ವಯವೇ ಇಲ್ಲದಿರುವುದರಿಂದ ಅನ್ವಯಪ್ರತಿಯೋಗ್ಯುಪಸ್ಥಿತಿಗೆ ಅವಕಾಶವಿಲ್ಲ.

ಶಕ್ಯಸಂಬಂಧವು ಲಕ್ಷಣಾ ಎನ್ನುವ ಇನ್ನೊಂದು ಪಕ್ಷದಲ್ಲಿಯೂ ಕೂಡ ಅನ್ವಯಾನುಪಪತ್ತಿಯು ಲಕ್ಷಣಾ ಬೀಜವಾಗಿದೆ. ಅನ್ವಯವೇ ಇಲ್ಲದಿರುವ ಅಖಂಡಾರ್ಥವಾಕ್ಯದಲ್ಲಿ ಅನ್ವಯಾನುಪಪತ್ತಿಗೆ ಅವಕಾಶವಿಲ್ಲ. 'ಯಷ್ಟೀಃ ಪ್ರವೇಶಯ' ಇತ್ಯಾದಿ ಸ್ಥಳದಲ್ಲಿ ತಾತ್ಪರ್ಯಾನುಪಪತ್ತಿಯಿಂದ ಲಕ್ಷಣಾ ಎನ್ನುತ್ತಾರೆ, ಅದು ಸರಿಯಲ್ಲ. ತಾತ್ಪರ್ಯಜ್ಞಾನಕ್ಕೂ ಹೇತುವಾಗಿ ಆವಶ್ಯಕವಾಗಿರುವ ಪ್ರಕರಣಾದಿವಶದಿಂದಲೇ 'ಪ್ರವೇಶಯ' ಎಂಬಲ್ಲಿ ಹೇಳುವ ಪ್ರವೇಶವು ಭೋಕ್ತೃಕರ್ತೃಕವಾದ ಪ್ರವೇಶವೆಂದು ತಾತ್ಪರ್ಯ ತಿಳಿದಿರುವುದರಿಂದ ತಾತ್ಪರ್ಯ ವಿಷಯವಾದ ಈ ಭೋಕ್ತೃಕರ್ತೃಕ ಪ್ರವೇಶದಲ್ಲಿ ಯಷ್ಟಿಕರ್ತೃಕತ್ವಾನ್ವಯ ಕೂಡುವುದಿಲ್ಲ. ಹೀಗೆ ತಾತ್ಪರ್ಯವಿಷಯಾನ್ವಯಾನುಪತ್ತಿಯೇ ಲಕ್ಷಣಾ ಬೀಜವಾಗಿದೆ. ತಾತ್ಪರ್ಯಾನುಪಪತ್ತಿಯಲ್ಲ.

'ತಾತ್ಪರ್ಯವಿಷಯಾನ್ವಯಾನುಪಪತ್ತಿಯು ಲಕ್ಷಣಾಬೀಜ ಎನ್ನುವುದಕ್ಕಿಂತ, ಅನ್ವಯವನ್ನು ಸೇರಿಸದೆ, ತಾತ್ಪರ್ಯಾನುಪಪತ್ತಿಯನ್ನೇ ಲಕ್ಷಣಾಬೀಜವೆಂದರೆ ಲಾಘವವಿದೆ ತಾನೆ? ಇದು ಅಖಂಡಾರ್ಥಪರ ವಾಕ್ಯದಲ್ಲಿಯೂ ಇದೆ.' ಎಂದರೆ, ಪದಾರ್ಥ ಮಾತ್ರದಲ್ಲಿ ತಾತ್ಪರ್ಯ ಅಸಂಭವ. ಇನ್ನು ವಾಕ್ಯಾರ್ಥದಲ್ಲಿ ತಾತ್ಪರ್ಯವೆನ್ನಬೇಕು. ಆದರೆ ಅನ್ವಯವೇ ವಾಕ್ಯಾರ್ಥ. ಅಖಂಡಾರ್ಥವಾಕ್ಯದಲ್ಲಿ ಪದಾರ್ಥಗಳಿಗೆ ಅನ್ವಯವಿಲ್ಲದಿರುವುದರಿಂದ ವಾಕ್ಯಾರ್ಥವೇ ಅಸಂಭವ. ಹೀಗಾಗಿ ತಾತ್ಪರ್ಯಾನುಪಪತ್ತಿಗೆ ಅವಕಾಶವಿಲ್ಲ.



सत्यादिपदानां पर्यायत्वं च स्यात्। नच कुंभाद्यनुगतसत्ता परजातिः। अंतःकरणवृत्त्युपधानलब्धभेदचिदानंदविशेषानुगते

ज्ञानत्वानंदत्वे चापरजाती। एवं च सत्यज्ञानानंदशब्दानां लक्ष्यार्थाभेदेऽपि क्रमेणोक्तजातिवाचित्वान्न पर्यायतेति कल्पतरूक्तं युक्तम्।

कुंभाद्यनुगतसत्ताया ब्रह्मलक्षणत्वायोगात्। मिथ्यासत्यानुगतसत्तासामान्याभावाच्च। तयाऽनृताद्व्यावृत्त्यसिद्धेश्च।

कालत्रयाबाध्यत्वरूपं पारमार्थिकं सत्त्वं ब्रह्मणि श्रौतमिति त्वन्मतभंगाच्च। धर्मिसमसत्ताकभेदं विनौपाधिकभेदमात्रेणाऽऽकाशत्वादेरिव ज्ञानत्वादेरपि जातित्वायोगाच्च। योगे वा ज्ञानत्वादेर्धर्मिसमसत्ताकभेदवदुपहितवृत्तित्वे च शुद्धलक्षणत्वायोगात्।

एतेन सत्त्वादिविशिष्टशबलब्रह्मवाचिनां सत्यादिशब्दानां शुद्धब्रह्मणि लक्षणेति न पर्यायत्वमिति निरस्तम्। अनृतास्वप्रकाशपरिच्छिन्नरूपे शबले सत्यत्वादेरयोगात्। योगे वा तस्यैवानृतादिव्यावृत्तिः स्यान्न तु शुद्धस्य। तस्मात्सत्यत्वादीनां शुद्धादन्यत्रासंभवात् सत्यादिवाक्यस्य लक्षणयाऽखंडार्थत्वे च शुद्धे तदसिद्धेः पर्यायत्वं दुर्वारम्।

**सत्यादिपदानामिति ।।** सर्वेषामेकप्रातिपदिकार्थकत्वादिति भावः ।। **कुंभाद्यनुगतेति ।।** सत्यत्वादीनां प्रत्येकलक्षणत्वे सत्यत्वादेः परजातिरूपत्वेऽतिव्याप्तिप्रसंगात्, मिलितस्य लक्षणत्वे तु ज्ञानानन्द पदयोरनंतपदस्य वा वैयर्थ्यप्रसंगादिति भावः। किंच किं ज्ञानत्वादिकमौपाधिकभेदशुद्धवृत्ति उत उपहितवृत्तीति विकल्प्य नाद्य इत्याह– **धर्मिसमसत्ताकेति** ।। न द्वितीय इत्याह– **ज्ञानत्वादेरिति** ।।



ಸತ್ಯಾದಿಪದಾನಾಂ ಪರ್ಯಾಯತ್ವಂ ಚ ಸ್ಯಾತ್। ನ ಚ 'ಕುಂಭಾದ್ಯನುಗತ ಸತ್ತಾ ಪರಜಾತಿಃ। ಅಂತಃಕರಣವೃತ್ತ್ಯುಪಧಾನಲಬ್ಧಭೇದ ಚಿದಾನಂದ ವಿಶೇಷಾನುಗತೇ

**ಜ್ಞಾನತ್ವಾನಂದತ್ವೇ ಚಾಪರಜಾತೀ। ಏವಂ ಚ ಸತ್ಯ ಜ್ಞಾನಾನಂದ ಶಬ್ದಾನಾಂ ಲಕ್ಷ್ಯಾರ್ಥಾಭೇದೇऽಪಿ ಕ್ರಮೇಣ ಉಕ್ತಜಾತಿ ವಾಚಿತ್ವಾತ್, ನ ಪರ್ಯಾಯತೇ'ತಿ ಕಲ್ಪತರೂಕ್ತಂ ಯುಕ್ತಂ।**

ಸತ್ಯಾದಿ ವಾಕ್ಯ ಅಖಂಡಾರ್ಥಪರವಾದರೆ, ಸತ್ಯಾದಿ ಪದಗಳು ಪರ್ಯಾಯವೆನಿಸುವುವು. ಒಂದು ವಾಕ್ಯದಲ್ಲಿ ಅವುಗಳನ್ನು ಜೊತೆಯಾಗಿ ಹೇಳುವುದು ಕೂಡುವುದಿಲ್ಲ. ಇಲ್ಲಿ ಕಲ್ಪತರು ಹೀಗೆ ಹೇಳಿದೆ—ಸತ್ಯಾದಿ ಪದಗಳು ಪರ್ಯಾಯ ಶಬ್ದಗಳಲ್ಲ. ಅವುಗಳಿಗೆ ಬೇರೆಬೇರೆ ಪ್ರವೃತ್ತಿ ನಿಮಿತ್ತಗಳಿವೆ. 'ಸತ್ಯಂ' ಎಂದರೆ ಘಟಾದಿಗಳಲ್ಲಿ ಅನುಗತವಾದ ಸತ್ತಾ ಎಂಬ ಪರಜಾತಿ ಉಳ್ಳದ್ದು ಬ್ರಹ್ಮ ಎಂದರ್ಥ. 'ಜ್ಞಾನಂ' ಎಂದರೆ, 'ಆನಂದಂ' ಎಂದರೆ, ಅಂತಃಕರಣವೃತ್ತಿ ರೂಪವಾದ ಉಪಾಧಿಯಿಂದ ಬೇರೆಬೇರೆಯಾಗಿರುವ ಜ್ಞಾನವಿಶೇಷ ಆನಂದವಿಶೇಷಗಳಲ್ಲಿ ಅನುಗತವಾಗಿರುವ ಜ್ಞಾನತ್ವ ಆನಂದತ್ವರೂಪ ಅಪರಜಾತಿ ಉಳ್ಳವನು ಬ್ರಹ್ಮ ಎಂದರ್ಥ. ಹೀಗಾಗಿ ಸತ್ಯ ಜ್ಞಾನ ಆನಂದ ಶಬ್ದಗಳಿಗೆ ಲಕ್ಷ್ಯಾರ್ಥ ಅಖಂಡವೇ ಆದರೂ ಅವುಗಳ ವಾಚ್ಯಾರ್ಥ ಬೇರೆಬೇರೆ, ಅವು ಸತ್ತಾ ಜ್ಞಾನತ್ವ ಆನಂದತ್ವ ಜಾತಿವಾಚಿಯಾಗಿವೆ' ಎಂದು, ಇದು ಸರಿಯಲ್ಲ, ಏಕೆಂದರೆ—

**'ಕುಂಭಾದ್ಯನುಗತ ಸತ್ತಾಯಾ ಬ್ರಹ್ಮಲಕ್ಷಣತ್ವಾಯೋಗಾತ್। ಮಿಥ್ಯಾಸತ್ಯಾನುಗತ ಸತ್ತಾ ಸಾಮಾನ್ಯಾಭಾವಾಚ್ಚ। ತಯಾ ಅನೃತಾದ್ ವ್ಯಾವೃತ್ತ್ಯಸಿದ್ಧೇಶ್ಚ।'**

ಘಟಾದ್ಯನುಗತವಾದ ಸತ್ತಾ ಎಂಬ ಪರಜಾತಿ ಬ್ರಹ್ಮ ಎಂಬ ಒಂದು ವ್ಯಕ್ತಿಗೆ ಲಕ್ಷಣವಾಗುವುದು ಶಕ್ಯವಿಲ್ಲ. ಘಟಾದಿಗಳೆಲ್ಲೆಲ್ಲ ಅದು ಅತಿವ್ಯಾಪ್ತವಾಗುವುದು. ಅದಕ್ಕೆ, ಸತ್ತಾ ಬ್ರಹ್ಮನಿಗೆ ಪ್ರತ್ಯೇಕಲಕ್ಷಣವಲ್ಲ, ಜ್ಞಾನತ್ವ ಆನಂದತ್ವಗಳೊಂದಿಗೆ ಸೇರಿ ಲಕ್ಷಣವಾಗುತ್ತದೆ ಎಂದರೆ 'ಸತ್ಯಂ' ಎಂಬ ಪದ ಈ ಮಿಲಿತವಾದ ಲಕ್ಷಣವನ್ನೇ ಹೇಳುತ್ತದೆ ಎಂದರೆ, 'ಜ್ಞಾನಂ' 'ಆನಂದ' 'ಅನಂತಂ' ಶಬ್ದಗಳು ವ್ಯರ್ಥವಾಗುವುವು.

ಸತ್ಯವಾದ ಬ್ರಹ್ಮ ಮತ್ತು ಮಿಥ್ಯೆಯಾದ ಘಟಾದಿಗಳಲ್ಲಿ ಅನುಗತವಾಗಿ ಸತ್ತಾ ಜಾತಿಯೂ ಬರುವುದಿಲ್ಲ.

ಅನೃತದಲ್ಲಿಯೂ ಬರುವ ಈ ಸತ್ತಾ ಎಂಬ ಲಕ್ಷಣ ಬ್ರಹ್ಮನಲ್ಲಿ ಅನೃತವ್ಯಾವೃತ್ತಿಯನ್ನು ತಿಳಿಸುವುದೂ ಶಕ್ಯವಿಲ್ಲ.

ಯದ್ಯಪಿ 'ಘಟಃ ಸನ್' ಇತ್ಯಾದಿ ವ್ಯವಹಾರವೂ ಘಟಾರೋಪಾಧಿಷ್ಠಾನವಾದ ಬ್ರಹ್ಮನ ಸತ್ತಾನುವೇಧವನ್ನು ಘಟಾದಿಗಳಲ್ಲಿ ಹೇಳುತ್ತದೆ ಹೊರತು ಘಟದಲ್ಲಿ ಸತ್ತಾಜಾತಿ ಇದೆ ಎನ್ನುವುದಿಲ್ಲ. ಹೀಗಾಗಿ 'ಪರಜಾತಿಯು ಘಟಾದ್ಯನುಗತ' ಎಂದು ಕಲ್ಪತರು ಹೇಳುವುದು ವ್ಯವಹಾರ ದೃಷ್ಟಿಯಿಂದ. ಬ್ರಹ್ಮಸತ್ತಾ ಬ್ರಹ್ಮಸ್ವರೂಪವೆ. ಅದಕ್ಕೆ ಘಟಾದಿಗಳಲ್ಲಿ ಅನುಗತತ್ವವಿಲ್ಲ. ಅತಿವ್ಯಾಪ್ತಿ ಇಲ್ಲ ಎನ್ನುತ್ತಾರೆ. ಆದರೂ ಬ್ರಹ್ಮಸ್ವರೂಪವೇ ಆಗಿರುವ ಸತ್ತಾ ಬ್ರಹ್ಮನ ಲಕ್ಷಣ ಹೇಗಾಗುತ್ತದೆ? ಲಕ್ಷ್ಯ

ಲಕ್ಷಣಗಳು ಭಿನ್ನವಾಗಿದ್ದು ಅಪ್ರಸಿದ್ಧ, ಪ್ರಸಿದ್ಧಗಳಾಗಿರಬೇಕು. ಉದ್ದೇಶ್ಯ ವಿಧೇಯಗಳಾಗಿರಬೇಕು. ಅಖಂಡದಲ್ಲಿ ಈ ಭೇದಕ್ಕೆ ಅವಕಾಶವಿಲ್ಲ. ಸತ್ತಾ ಬ್ರಹ್ಮಸ್ವರೂಪವೆಂದ ಮೇಲೆ ಸತ್ಯಶಬ್ದ ಬ್ರಹ್ಮಶಬ್ದಗಳು ಪರ್ಯಾಯವೇ ಆಗುವುದರಿಂದ 'ಅದು ಜಾತಿವಾಚಿ, ಅದರಿಂದ ಪರ್ಯಾಯವಲ್ಲ' ಎನ್ನುವುದು ಅಸಂಗತ.

ಸತ್ತಾವನ್ನು ಜಾತಿತ್ವೇನ ಸತ್ಯಶಬ್ದ ಹೇಳುತ್ತಿದ್ದರೆ ಜಾತಿತ್ವ ಮತ್ತು ಬ್ರಹ್ಮತ್ವರೂಪ ಪ್ರವೃತ್ತಿನಿಮಿತ್ತ ಭೇದದಿಂದ ಅಪರ್ಯಾಯತ್ವವನ್ನು ಹೇಳಬಹುದಿತ್ತು. ಆದರೆ ಸತ್ಯ ಶಬ್ದವು ಜಾತಿತ್ವವಾಚಿಯಲ್ಲ, ಜಾತಿವಾಚಿಯಾಗಿದೆ ಎಂದಿದ್ದಾರೆ. ಸತ್ತಾವು ಬ್ರಹ್ಮಸ್ವರೂಪವೆಂದ ಮೇಲೆ ಅದು ಬ್ರಹ್ಮಾಶ್ರಿತವಲ್ಲ, ಅದು ಬ್ರಹ್ಮದಲ್ಲಿಯೂ ಘಟಾದಿಗಳಲ್ಲಿಯೂ ಸರ್ವತ್ರ ಅನುಗತವೆನ್ನುವುದು, ಪರಜಾತಿ ಎನ್ನುವುದು ದೂರಾಪಾಸ್ತ.

**ಕಾಲತ್ರಯಾಬಾಧ್ಯತ್ವರೂಪಂ ಪಾರಮಾರ್ಥಿಕಂ ಸತ್ವಂ ಬ್ರಹ್ಮಣಿ ಶ್ರೌತಮಿತಿ ತ್ವನ್ಮತಭಂಗಾಚ್ಚ। ಧರ್ಮಿಸಮಸತ್ತಾಕಭೇದಂ ವಿನಾ ಔಪಾಧಿಕ ಭೇದ ಮಾತ್ರೇಣ ಆಕಾಶತ್ವಾದೇರಿವ ಜ್ಞಾನತ್ವಾದೇರಪಿ ಜಾತಿತ್ವಾಯೋಗಾಚ್ಚ। ಯೋಗೇ ವಾ ಜ್ಞಾನತ್ವಾದೇಃ ಧರ್ಮಿಸಮಸತ್ತಾಕ ಭೇದವದುಪಹಿತ ವೃತ್ತಿತ್ವೇ ಚ ಶುದ್ಧಲಕ್ಷಣತ್ವಾಯೋಗಾತ್।**

ಕಲ್ಪತರುವಿನಲ್ಲಿ ಹೇಳಿದಂತೆ ಸತ್ತಾ ಪರಜಾತಿ ಎಂದರೆ ಅವರ ಅದ್ವೈತಸಿದ್ಧಾಂತಕ್ಕೇ ಭಂಗಬರುತ್ತದೆ. ಅವರ ಸಿದ್ಧಾಂತ ಪ್ರಕಾರ ಬ್ರಹ್ಮಸತ್ತಾ ಕಾಲತ್ರಯಾಬಾಧ್ಯತ್ವರೂಪವಾದುದು, ಪಾರಮಾರ್ಥಿಕತ್ವರೂಪವಾದುದು. ಅದೇ 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಎಂದು ಶ್ರುತಿಯಲ್ಲಿ ಉಕ್ತವಾಗಿದೆ. ಅದು ಘಟಾದಿಗಳಲ್ಲಿ ಅನುಗತ ಎನ್ನಲಾಗದು. ಜ್ಞಾನತ್ವ ಆನಂದತ್ವಗಳೂ ಜಾತಿಯಲ್ಲ. ಅವು ಅನೇಕ ವ್ಯಕ್ತಿಗಳಲ್ಲಿ ಇರುವಂಥವಲ್ಲ. ಜ್ಞಾನ ವ್ಯಕ್ತಿ ಬ್ರಹ್ಮ ಒಂದೇ. ಆನಂದವ್ಯಕ್ತಿಯೂ ಬ್ರಹ್ಮ ಒಂದೇ.

ಅಂತಃಕರಣವೃತ್ತ್ಯುಪಾಧಿ ವಶದಿಂದ ಜ್ಞಾನದಲ್ಲಿ ಆನಂದದಲ್ಲಿ ಔಪಾಧಿಕ ಭೇದ ಬಂದರೂ ಅದರಿಂದ ಜ್ಞಾನತ್ವ ಆನಂದತ್ವಗಳು ಜಾತಿಯೆನಿಸುವುದಿಲ್ಲ. ಅದಕ್ಕೆ ಧರ್ಮಿಸಮಸತ್ತಾಕ ಭೇದ ಬೇಕು. ಬ್ರಹ್ಮ ಧರ್ಮಿ. ತತ್ಸಮಸತ್ತಾಕ ಭೇದವಿಲ್ಲ. ಆದರೂ ಔಪಾಧಿಕ ಭೇದದಿಂದಲೇ ಜಾತಿ ಸಿದ್ಧಿ ಎಂದರೆ, ಆಕಾಶದಲ್ಲಿ ಘಟಾದ್ಯುಪಾಧಿಗಳಿಂದ ಔಪಾಧಿಕಭೇದ ಉಂಟಾಗುತ್ತದೆ. ಆದರೂ ಘಟಾಕಾಶ ಮಠಾಕಾಶಾದ್ಯನುಗತವಾದ ಆಕಾಶತ್ವವು ಜಾತಿ ಎಂದು ಒಪ್ಪಿಲ್ಲ.

ಔಪಾಧಿಕಭೇದವೂ ಜಾತಿಸಾಧಕವೆನ್ನುವುದಾದರೆ, ಧರ್ಮಿಸಮಸತ್ತಾಕಭೇದಉಳ್ಳ ಅಂತಃಕರಣವೃತ್ತ್ಯುಪಹಿತ ಜ್ಞಾನವ್ಯಕ್ತಿಗಳಲ್ಲಿ ಜ್ಞಾನತ್ವವು ಅನುಗತವಾದ್ದರಿಂದ ಜಾತಿ ಎಂದೊಪ್ಪಿದರೆ, ಪ್ರಕೃತ ಸತ್ಯಾದಿ ವಾಕ್ಯದಲ್ಲಿ ಆ ಜಾತಿ ಇಟ್ಟುಕೊಂಡು ಅಪರ್ಯಾಯತ್ವವನ್ನು ಹೇಳಲಾಗುವುದಿಲ್ಲ. ಉಪಹಿತವೃತ್ತಿಯಾದ ಜ್ಞಾನತ್ವ ಆನಂದತ್ವಗಳು ಶುದ್ಧಲಕ್ಷಣವಾಗುವುದಿಲ್ಲ. ಉಪಹಿತ ವೃತ್ತಿಧರ್ಮವು

ಉಪಧೇಯದಲ್ಲಿ ಶುದ್ಧದಲ್ಲಿಯೂ ಇರುತ್ತದೆ ಎನ್ನುವುದು ಲೋಕದಲ್ಲಿ ಕಂಡಿಲ್ಲ. ಮಹಾಕಾಶವನ್ನು ಘಟಾಕಾಶವೆನ್ನುವುದಿಲ್ಲ.

**'ಏತೇನ ಸತ್ವಾದಿ ವಿಶಿಷ್ಟ ಶಬಲ ಬ್ರಹ್ಮವಾಚಿನಾಂ ಸತ್ಯಾದಿ ಶಬ್ದಾನಾಂ ಶುದ್ಧಬ್ರಹ್ಮಣಿ ಲಕ್ಷಣಾ ಇತಿ ನ ಪರ್ಯಾಯತ್ವಂ ಇತಿ ನಿರಸ್ತಂ। ಅನೃತ–ಅಸ್ವಪ್ರಕಾಶ–ಪರಿಚ್ಛಿನ್ನರೂಪೇ ಶಬಲೇ ಸತ್ಯತ್ವಾದೇರಯೋಗಾತ್। ಯೋಗೇ ವಾ ತಸ್ಯೈವ ಅನೃತಾದಿ ವ್ಯಾವೃತ್ತಿಃ ಸ್ಯಾತ್, ನ ತು ಶುದ್ಧಸ್ಯ। ತಸ್ಮಾತ್ ಸತ್ಯತ್ವಾದೀನಾಂ ಶುದ್ಧಾದನ್ಯತ್ರಾಸಂಭವಾತ್ ಸತ್ಯಾದಿ ವಾಕ್ಯಸ್ಯ ಲಕ್ಷಣಯಾ ಅಖಂಡಾರ್ಥತ್ವೇ ಚ ಶುದ್ಧೇ ತದಸಿದ್ಧೇಃ ಪರ್ಯಾಯತ್ವಂ ದುರ್ವಾರಂ ॥**

ಕೆಲವು ಅದ್ವೈತಿಗಳು ಹೀಗೆ ಹೇಳುತ್ತಾರೆ. ಶಬಲಬ್ರಹ್ಮವು ಸತ್ಯತ್ವಾದಿ ವಿಶಿಷ್ಟವಾಗಿದೆ. ಅದನ್ನು ಹೇಳುವ ಸತ್ಯಾದಿ ಶಬ್ದಗಳಿಗೆ ಶುದ್ಧದಲ್ಲಿ ಲಕ್ಷಣಾ. ಶಬಲದಲ್ಲಿ ಸತ್ಯತ್ವ ಜ್ಞಾನತ್ವಾದಿ ಧರ್ಮಗಳಿರುವುದರಿಂದ ಅದನ್ನು ಹೇಳುವ ಸತ್ಯಾದಿ ಪದಗಳು ಅಪರ್ಯಾಯ ಶಬ್ದಗಳೆನಿಸುತ್ತವೆ' ಎಂದು. ಇದೂ ಸರಿಯಲ್ಲ. ಶಬಲವು ಅನೃತ, ಅಸ್ವಪ್ರಕಾಶ ಮತ್ತು ಪರಿಚ್ಛಿನ್ನ. ಅದರಲ್ಲಿ ಸತ್ಯತ್ವ ಆನಂದತ್ವ ಅನಂತತ್ವವಿರಲು ಶಕ್ಯವಿಲ್ಲ. ಇದೆ ಎನ್ನುವುದಾದರೆ, ಶಬಲದಲ್ಲಿ ಸತ್ಯತ್ವವಿರುವುದರಿಂದ ಅನೃತತ್ವವ್ಯಾವೃತ್ತಿ ಅದರಲ್ಲಿಯೇ ಇದೆ ಎನ್ನಬೇಕಾದೀತು. ಜ್ಞಾನತ್ವವಿರುವುದರಿಂದ ಜಡ ಅಸ್ವಪ್ರಕಾಶ ವ್ಯಾವೃತ್ತಿಯೂ, ಅನಂತತ್ವವಿರುವುದರಿಂದ ಪರಿಚ್ಛಿನ್ನವ್ಯಾವೃತ್ತಿಯೂ ಅದರಲ್ಲಿಯೇ ಬರಬೇಕಾದೀತು. ಶುದ್ಧದಲ್ಲಿ ಅನೃತ ಅಸ್ವಪ್ರಕಾಶ ಪರಿಚ್ಛಿನ್ನ ವ್ಯಾವೃತ್ತಿಗಳು ಇಲ್ಲವೆನ್ನಬೇಕಾದೀತು. ಹೀಗಾಗಿ ಸತ್ಯತ್ವಾದಿಗಳು ಶುದ್ಧಕ್ಕಿಂತ ಅನ್ಯತ್ರ ಅಸಂಭವಿಯಾದ್ದರಿಂದ ಶಬಲದಲ್ಲಿಲ್ಲ. ಸತ್ಯಾದಿ ವಾಕ್ಯಕ್ಕೆ ಲಕ್ಷಣಯಾ ಅಖಂಡಪರತ್ವವನ್ನು ಒಪ್ಪಿದಾಗ ಶುದ್ಧದಲ್ಲಿಯೂ ಅವು ಸಿದ್ಧವಾಗದಿರುವುದರಿಂದ ಸತ್ಯಾದಿ ಪದಗಳಿಗೆ ಸತ್ಯತ್ವಜ್ಞಾನತ್ವಾದಿ ಭಿನ್ನಪ್ರವೃತ್ತಿನಿಮಿತ್ತಗಳಿಲ್ಲವಾಗಿ ಅವುಗಳನ್ನು ಪರ್ಯಾಯ ಶಬ್ದಗಳೆಂದೇ ಹೇಳಬೇಕಾಗುತ್ತದೆ. ಇದು ಅಪರಿಹಾರ್ಯ.



पदांतरवैयर्थ्यं च स्यात् । नच प्रातिपदिकप्रथमयोरिवैकार्थ्येऽपि पदांतरावैयर्थ्यमिति वाच्यम्, तत्र महाभाष्य एव ''किं पुनरत्र प्रथमया'' इति वैयर्थ्यमाशंक्य ''ग्राम उच्चैस्ते स्वम्'' ''ग्राम उच्चैस्तव स्वम्'' इत्यत्र ''सपूर्वायाः प्रथमाया'' इत्येषा विधिर्यथा स्यादित्यर्थवत्त्वोक्तेः ।

नच प्रतिपदमारोपितासत्यत्वादिव्यावृत्तिरूपफलभेदादवैयर्थ्यम्, व्यावर्तकस्य सत्यत्वादेस्तात्पर्यतोऽनर्पणे व्यावृत्त्यसिद्धेः ।

नच सत्यत्वादेरतात्पर्य विषयत्वेऽपि लक्षणातः प्रागभिधाकाले प्रतीतिमात्रेण तत्सिद्धिः । ''नद्यां घोष'' इत्यत्र तीरस्यानदीतः ''यजमानः प्रस्तरः'' इत्यत्र प्रस्तरस्यायजमानाच्च व्यावृत्त्यापातात् ।

नचातात्पर्याविशेषेऽपि सत्यत्वादिकं व्यावहारिकं यजमानत्वादिकं तु प्रातिभासिकमिति युक्तम् ।

नचौपनिषदे ब्रह्मणि सत्यत्वादिकं प्रत्यक्षादिप्राप्तं, येन व्यावहारिकं स्यात् । नच तत्वपरात्प्रतीतं व्यावहारिकं, अतत्वपरात्तु प्रतीतं प्रातिभासिकमिति व्यवस्था, ''असद्वा इदमग्र आसीत्'' इति तत्त्वपरेण प्रतीतस्य मूलकारणासत्त्वस्य व्यावहारिकत्वापातात् ।

नच सत्यत्वादिकं तत्त्वावेदकबाधितत्वात् व्यावहारिकं, यजमानत्वादिकं तु व्यावहारिकबाधितत्वात् प्रातिभासिकमिति युक्तम् । तत्त्वावेदकस्यापि विशेष्यमात्रपरत्वेन सत्यत्वाद्यबाधकत्वात्, व्यावहारिकबाधितस्याद्वैतवत्पारमार्थिकत्वोपपत्तेश्च।

नच लक्षणाबीजे मुख्यार्थबाधके तुल्येऽपि सत्यादिपदस्य वाच्यार्थेऽवांतरतात्पर्यं यजमानपदस्य तु तन्नेत्यत्र हेतुरस्ति, येनोक्तव्यवस्था स्यात् ।

**प्रातिपदिकप्रथमयोरिवेति** ।।''प्रातिपदिकार्थलिंगपरिमाणवचनमात्रे प्रथमा'' इति पाणिनीयस्मृत्या प्रथमायाः प्रातिपदिकतुल्यार्थकत्वेऽपि अन्यतरावैयर्थ्यमिव सत्यादिपदानामवैयर्थ्योपपत्तिरित्यर्थः ।। **सपूर्वाया इति** ।। पूर्वसहितात्प्रथमांतात् परयोर्युष्मदस्मदोस्तेमे इत्यादेशौ स्तो विकल्पेनेति सूत्रार्थः। तथा च तुल्यार्थत्वेऽपि अवैयर्थ्ये भाष्यकारेण प्रयोजनांतरोक्तिर्न स्यात् । प्रयोगस्तु ''न केवला प्रकृतिः'' इति न्यायेन साधुत्वार्थः इति भावः । आरोपितेति व्यावृत्तिविशेषणम् ।

ननु सत्यत्वादेर्व्यावहारिकत्वादसत्यादिव्यावर्तकत्वं, यजमानत्वादेस्तु प्रातीतिकत्वान्न व्यावर्तकतेत्याशंक्य निराकरोति— **नचेति** ।। किञ्च सत्यत्वादेः

व्यावहारिकत्वमेवासिद्धम्, येन व्यावर्तकत्वं स्यादित्याह-**नचेति। तत्त्वपरादिति ।।** ब्रह्मपरवेदांतादित्यर्थः ।। **अतत्वपरादिति ।।** धर्म्मपरकर्मकांडादित्यर्थः ।। **तत्वावेदकबाधितत्वादिति ।।** ''केवलो निर्गुणश्च'' इति वाक्यबाधितत्त्वादित्यर्थः ।। **व्यावहारिकबाधितत्वादिति ।।** प्रत्यक्षादिबाधितत्वादित्यर्थः । ननु सत्यादिपदानां सत्यत्वादाववांतरतात्पर्यसत्त्वात् ततो व्यावृत्तिः सिध्यति, यजमानादिशब्दस्य तु तदभावान्नैवमित्याशंक्याह— **नचेति ।।**



**'ಪದಾಂತರ ವೈಯರ್ಥ್ಯಂ ಚ ಸ್ಯಾತ್। ನ ಚ ಪ್ರಾತಿಪದಿಕ ಪ್ರಥಮಯೋರಿವ ಐಕಾರ್ಥ್ಯೇಽಪಿ ಪದಾಂತರಾವೈಯರ್ಥ್ಯಮಿತಿ ವಾಚ್ಯಂ। ತತ್ರ, ಮಹಾಭಾಷ್ಯಏವ 'ಕಿಂ ಪುನರತ್ರ ಪ್ರಥಮಯಾ ?' ಇತಿ ವೈಯರ್ಥ್ಯ ಮಾಶಂಕ್ಯ 'ಗ್ರಾಮ ಉಚ್ಚೈಸ್ತೇ ಸ್ವಂ' 'ಗ್ರಾಮ ಉಚ್ಚೈಸ್ತವ ಸ್ವಂ' ಇತ್ಯತ್ರ 'ಸಪೂರ್ವಾಯಾಃ ಪ್ರಥಮಾಯಾಃ' ಇತ್ಯೇಷ ವಿಧಿರ್ಯಥಾ ಸ್ಯಾತ್' ಇತ್ಯರ್ಥವತ್ತ್ವೋಕ್ತೇಃ।'**

ಸತ್ಯಾದಿ ವಾಕ್ಯ ಅಖಂಡಾರ್ಥಪರವೆನ್ನುವ ಪಕ್ಷದಲ್ಲಿ 'ಸತ್ಯ' ಪದ ಅಖಂಡಾರ್ಥವನ್ನು ಲಕ್ಷಣಯಾ ಹೇಳಿತೆಂದರೆ ಮುಂದೆ ಲಕ್ಷಣಯಾ ಅದೇ ಅಖಂಡಾರ್ಥವನ್ನು ಹೇಳುವ ಜ್ಞಾನಾದಿ ಪದಗಳು ಅನಾವಶ್ಯಕ, ವ್ಯರ್ಥವಾಗುತ್ತವೆ.

ಯದ್ಯಪಿ 'ಪ್ರಾತಿಪದಿಕಾರ್ಥ ಲಿಂಗ ಪರಿಮಾಣ ವಚನ ಮಾತ್ರೇ ಪ್ರಥಮಾ' ಎಂದು ಪಾಣಿನಿ ಸೂತ್ರದಂತೆ ಪ್ರಥಮಾವಿಭಕ್ತಿಯು ಪ್ರಾತಿಪದಿಕಾರ್ಥ ಲಿಂಗ ಪರಿಮಾಣ ವಚನ–ಈ ಅರ್ಥಗಳಲ್ಲಿ ಪ್ರಾತಿಪದಿಕಕ್ಕೆ ವಿಹಿತವಾಗಿದೆ. ಪ್ರಾತಿಪದಿಕಾರ್ಥದಲ್ಲಿ ಪ್ರಾತಿಪದಿಕದ ಮುಂದೆ ಪ್ರಥಮಾ ಬರುವುದರಿಂದ ಪ್ರಾತಿಪದಿಕ ಪ್ರಥಮಾಗಳಿಗೆ ಏಕಾರ್ಥಕತ್ವವೇ ಇದೆ. ಆದರೂ ಪ್ರಾತಿಪದಿಕ ಮತ್ತು ಪ್ರಥಮಾ ಇವೆರಡರಲ್ಲಿ ಒಂದು ವ್ಯರ್ಥವೆಂಬ ಶಂಕೆ ಬರುವುದಿಲ್ಲ. ಎರಡನ್ನೂ ಪ್ರಯೋಗ ಮಾಡುತ್ತಾರೆ. ಹಾಗೇ ಸತ್ಯಾದಿ ಪದಗಳಿಗೂ ಏಕಾರ್ಥಕತ್ವವಿದ್ದರೂ ವ್ಯರ್ಥವೆನ್ನುವುದು ಸರಿಯಲ್ಲ, ಜೊತೆಗೆ ಪ್ರಯೋಗ ಮಾಡುವುದು ತಪ್ಪಾಗುವುದಿಲ್ಲ.

ಆದರೆ ಹೀಗೆ ಹೇಳುವುದು ಸರಿಯಲ್ಲ. ಮಹಾಭಾಷ್ಯದಲ್ಲಿ 'ಪ್ರಥಮಾವಿಭಕ್ತಿಯಿಂದೇನು ಪ್ರಯೋಜನ?' ಎಂದು ವೈಯರ್ಥ್ಯವನ್ನು ಹೇಳಿ ಬೇರೆ ಪ್ರಯೋಜನವನ್ನು ಹೇಳಿದ್ದಾನೆ. 'ಗ್ರಾಮ ಉಚ್ಚೈಸ್ತೇ ಸ್ವಂ' 'ಗ್ರಾಮ ಉಚ್ಚೈಸ್ತವ ಸ್ವಂ' 'ಗ್ರಾಮದಲ್ಲಿ ನಿನ್ನ ಸಂಪತ್ತೇ ದೊಡ್ಡದು' ಎನ್ನುವಲ್ಲಿ 'ನಿನ್ನ' ಎಂಬರ್ಥದ ಷಷ್ಠ್ಯಂತಯುಷ್ಮತ್ ಶಬ್ದಕ್ಕೆ 'ತೇ' 'ತವ' ಎಂದು ಎರಡು ರೂಪಗಳನ್ನು ಹೇಳಿ 'ತೇ' ಶಬ್ದಪ್ರಯೋಗವೆಲ್ಲಿ ಬರುತ್ತದೆ ಎನ್ನುವುದನ್ನು 'ಸಪೂರ್ವಾಯಾಃ ಪ್ರಥಮಾಯಾ ವಿಭಾಷಾ' ಎಂಬ ಪಾಣಿನಿ ಸೂತ್ರವೆ ಹೇಳಿದೆ ಎಂದಿದ್ದಾನೆ.

ಉಚ್ಚೈಃ ಎಂಬ ಅವ್ಯಯ ಪ್ರಥಮಾಂತ. ಪ್ರಥಮಾವಿಭಕ್ತಿ ಬಂದು ಲೋಪವಾಗಿದೆ. ಈ ಪ್ರಥಮಾವಿಭಕ್ತಿಯು ಪ್ರಾತಿಪದಿಕವಾದ 'ಉಚ್ಚೈಃ' ಶಬ್ದದ ಪರದಲ್ಲಿ 'ಉಚ್ಚೈಃ' ಎಂಬ ಅರ್ಥದಲ್ಲಿಯೇ ಬರುತ್ತದೆ. ಬೇರೆ ಅರ್ಥವಿಲ್ಲ. ಪ್ರಾತಿಪದಿಕವಾದ ಉಚ್ಚೈಃ ಶಬ್ದಕ್ಕಿಂತ ಹೆಚ್ಚೇನನ್ನೂ ಈ ವಿಭಕ್ತಿ ಹೇಳುವುದಿಲ್ಲ. ವ್ಯರ್ಥ. ಆದರೆ ಒಂದು ರೀತಿಯಿಂದ ವ್ಯರ್ಥವಲ್ಲ ಎನ್ನುತ್ತಾನೆ ಮಹಾಭಾಷ್ಯಕಾರ. ಏಕೆಂದರೆ ಉಚ್ಚೈಃ ಶಬ್ದದ ಹಿಂದೆ 'ಗ್ರಾಮೇ' ಎಂಬ ಶಬ್ದವಿದೆ. ಹೀಗೆ ಹಿಂದೆ ಒಂದು ಶಬ್ದವಿದ್ದರೆ ಅದರ ಮುಂದೆ ಇರುವ ಪ್ರಥಮಾಂತವಾದ ಶಬ್ದದ ಪರದಲ್ಲಿ ಬರುವ 'ತವ' ಎಂಬ ಯುಷ್ಮತ್ ಶಬ್ದರೂಪಕ್ಕೆ ವಿಕಲ್ಪವಾಗಿ 'ತೇ' ಆದೇಶ ಬರುತ್ತದೆ ಎನ್ನುತ್ತಾನೆ.

ಇಲ್ಲಿ 'ಉಚ್ಚೈಃ' ಶಬ್ದಕ್ಕೆ ಪ್ರಥಮಾ ಬಾರದಿರುತ್ತಿದ್ದರೆ ಪ್ರಥಮಾಂತವಲ್ಲದ ಆ ಶಬ್ದದ ಮುಂದೆ ಬರುವ 'ತವ'ಶಬ್ದಕ್ಕೆ 'ತೇ' ಆದೇಶ ಬಾರದೆ ಹೋಗುತ್ತಿತ್ತು.

ಏಕಾರ್ಥತ್ವವಿದ್ದರೆ ಸತ್ಯಾದಿಪದಗಳಿಗೆ ವೈಯರ್ಥ್ಯವನ್ನು ನಾವು ಆಪಾದನೆ ಮಾಡುವುದು ತಪ್ಪಲ್ಲ. ಮಹಾಭಾಷ್ಯಕಾರನೇ ಪ್ರಾತಿಪದಿಕಾರ್ಥದಲ್ಲಿ ಬರುವ ಪ್ರಥಮಾವಿಭಕ್ತಿ ವ್ಯರ್ಥವೆಂದು ಹೇಳಿದ್ದಾನೆ. ಹಾಗಾದರೆ ವ್ಯರ್ಥವಾದ ಪ್ರಥಮಾವಿಭಕ್ತಿಯನ್ನು ಏಕೆ ಪ್ರಯೋಗಮಾಡಬೇಕು? ಎಂದರೆ 'ನ ಕೇವಲಾ ಪ್ರಕೃತಿಃ ಪ್ರಯೋಕ್ತವ್ಯಾ ನಾಪಿ ಪ್ರತ್ಯಯಃ' ಕೇವಲ ಪ್ರಕೃತಿಯನ್ನಾಗಲಿ ಕೇವಲ ಪ್ರತ್ಯಯವನ್ನಾಗಲಿ ಪ್ರಯೋಗಿಸುವುದು ಸಾಧುವಲ್ಲ. ಆದರಿಂದ ಶಬ್ದ ಸಾಧುತ್ವಾರ್ಥವಾಗಿ ಪ್ರಥಮಾವಿಭಕ್ತಿಯನ್ನು ಪ್ರಯೋಗಿಸಬೇಕು.

**'ನ ಚ ಪ್ರತಿಪದಂ ಆರೋಪಿತಅಸತ್ಯತ್ವಾದಿ ವ್ಯಾವೃತ್ತಿರೂಪ ಫಲಭೇದಾತ್ ಅವೈಯರ್ಥ್ಯಂ। ವ್ಯಾವರ್ತಕಸ್ಯ ಸತ್ಯತ್ವಾದೇಸ್ತಾತ್ಪರ್ಯತೋಽನರ್ಪಣೇ ವ್ಯಾವೃತ್ಯ-ಸಿದ್ಧೇಃ।'**

'ಸತ್ಯಪದದಿಂದ ಆರೋಪಿತವಾದ ಅಸತ್ಯತ್ವವ್ಯಾವೃತ್ತಿಯು ಬೋಧಿತವಾಗುತ್ತದೆ. ಜ್ಞಾನಪದದಿಂದ ಆರೋಪಿತವಾದ ಜಡತ್ವವ್ಯಾವೃತ್ತಿಯು ಬೋಧಿತವಾಗುತ್ತದೆ. ಹೀಗೆ ಪ್ರತಿಪದಕ್ಕೂ ಬೇರೆಬೇರೆ ಪ್ರಯೋಜನವಿರುವುದರಿಂದ ವ್ಯರ್ಥವಲ್ಲ' ಎಂದರೆ ಇದು ಸರಿಯಲ್ಲ. ವ್ಯಾವರ್ತಕವಾದ ಸತ್ಯತ್ವದಿಂದ ಅಸತ್ಯತ್ವ ವ್ಯಾವೃತ್ತಿ ಲಭ್ಯವಾಗಬೇಕಾದರೆ ಸತ್ಯತ್ವವನ್ನು ಹೇಳುವಾಗ ಇದರಿಂದ ವ್ಯಾವೃತ್ತಿ ಬೋಧ ಬರಲಿ ಎಂದು ಬ್ರಹ್ಮನಲ್ಲಿ ಅದನ್ನು ತಾತ್ಪರ್ಯಪೂರ್ವಕ ಹೇಳಬೇಕು. ಅದರಲ್ಲಿ ತಾತ್ಪರ್ಯವಿಲ್ಲದಿದ್ದರೆ ಅದು ಬ್ರಹ್ಮನಲ್ಲಿ ವ್ಯಾವೃತ್ತಿ ಬೋಧಕವಾಗುವುದಿಲ್ಲ. ಅಖಂಡಾರ್ಥತ್ವ ಪಕ್ಷದಲ್ಲಿ ಬ್ರಹ್ಮನಲ್ಲಿ ಸತ್ಯತ್ವಾದಿಗಳನ್ನು ಹೇಳುವ ತಾತ್ಪರ್ಯವಿಲ್ಲ. ತಾತ್ಪರ್ಯವಿದೆ ಎಂದರೆ ಸಖಂಡಾರ್ಥತ್ವವೆ ಬರುತ್ತದೆ.

**'ನ ಚ ಸತ್ಯತ್ವಾದೇಃ ಅತಾತ್ಪರ್ಯವಿಷಯತ್ವೇಽಪಿ ಲಕ್ಷಣಾತಃ ಪ್ರಾಕ್ ಅಭಿಧಾಕಾಲೇ ಪ್ರತೀತಿಮಾತ್ರೇಣ ತತ್‌ಸಿದ್ಧಿಃ। 'ನದ್ಯಾಂ ಘೋಷ' ಇತ್ಯತ್ರ ತೀರಸ್ಯ ಅನದೀತಃ 'ಯಜಮಾನಃ ಪ್ರಸ್ತರಃ' ಇತ್ಯತ್ರ ಪ್ರಸ್ತರಸ್ಯ ಅಯಜಮಾನಾಚ್ಚ ವ್ಯಾವೃತ್ತ್ಯಾಪಾತಾತ್।'**

'ಸತ್ಯತ್ವಾದಿಗಳನ್ನು ತಾತ್ಪರ್ಯಪೂರ್ವಕ ಲಕ್ಷ್ಯಾರ್ಥ ಬ್ರಹ್ಮನಲ್ಲಿ ಹೇಳದಿದ್ದರೂ ಲಕ್ಷಣಾಕ್ಕಿಂತ ಪೂರ್ವದಲ್ಲಿ ಸತ್ಯತ್ವವಿಶಿಷ್ಟರೂಪ ಮುಖ್ಯಾರ್ಥೋಪಸ್ಥಿತಿಕಾಲದಲ್ಲಿ ಸತ್ಯತ್ವವು ಬ್ರಹ್ಮನಲ್ಲಿ ಪ್ರತೀತವಾಗುತ್ತದೆ. ಆದರಿಂದಲೇ ಬ್ರಹ್ಮನಲ್ಲಿ ಅಸತ್ಯತ್ವಾದಿ ವ್ಯಾವೃತ್ತಿ ಸಿದ್ಧವಾಗುತ್ತದೆ' ಎಂದರೆ ಇದು ಸರಿಯಲ್ಲ.

ಸತ್ಯತ್ವವನ್ನು ಬ್ರಹ್ಮನಲ್ಲಿ ಹೇಳಿದರೆ ಸತ್ಯತ್ವವಿಶಿಷ್ಟ ಬ್ರಹ್ಮನಲ್ಲಿಯೆ ಅಸತ್ಯತ್ವ ವ್ಯಾವೃತ್ತಿ ಸಿದ್ಧವಾದೀತು, ಲಕ್ಷ್ಯವಾದ ಶುದ್ಧದಲ್ಲಿ ಅಲ್ಲ. ಮತ್ತು 'ನದಿಯಲ್ಲಿ ಘೋಷ' ಎಂದಾಗ ಲಕ್ಷಣಾಕ್ಕಿಂತ ಪೂರ್ವದಲ್ಲಿ ನದೀತ್ವ ಪ್ರತೀತಿ ಉಂಟಾಗುವುದರಿಂದ ಲಕ್ಷಣಾಕಾಲದಲ್ಲಿ ಲಕ್ಷ್ಯವಾದ ತೀರದಲ್ಲಿ ಅನದೀತ್ವ ವ್ಯಾವೃತ್ತಿಪ್ರತೀತಿ ಬಂದೀತು. 'ಯಜಮಾನನು ದರ್ಭಮುಷ್ಟಿ' ಎಂಬಲ್ಲಿಯೂ ತತ್ಸಿದ್ಧಿರೂಪ ಗೌಣಾರ್ಥ ಉಪಸ್ಥಿತಿಗಿಂತ ಪೂರ್ವದಲ್ಲಿ ಮುಖ್ಯಾರ್ಥದ ಉಪಸ್ಥಿತಿಕಾಲದಲ್ಲಿ ದರ್ಭೆಯಲ್ಲಿ ಯಜಮಾನತ್ವ ಪ್ರತೀತಿ ಉಂಟಾಗುವುದರಿಂದ ಲಕ್ಷಣಾಕಾಲದಲ್ಲಿ ದರ್ಭೆಯಲ್ಲಿ ಅಯಜಮಾನತ್ವ ವ್ಯಾವೃತ್ತಿ ಪ್ರತೀತಿ ಪ್ರಸಂಗ.

**'ನ ಚಾತಾತ್ಪರ್ಯಅವಿಶೇಷೇऽಪಿ ಸತ್ಯತ್ವಾದಿಕಂ ವ್ಯಾವಹಾರಿಕಂ, ಯಜಮಾನತ್ವಾದಿಕಂ ಪ್ರಾತಿಭಾಸಿಕಂ ಇತಿ ಯುಕ್ತಂ।'**

'ಸತ್ಯಪದ ಯಜಮಾನಪದಗಳಿಗೆ ಸತ್ಯತ್ವವಿಶಿಷ್ಟಬ್ರಹ್ಮ ಯಜಮಾನತ್ವವಿಶಿಷ್ಟಧರ್ಮ ಬೋಧನೆಯಲ್ಲಿ ತಾತ್ಪರ್ಯವಿಲ್ಲದಿರುವುದು ಸಮಾನವೇ ಆದರೂ ಸತ್ಯತ್ವಾದಿ ವ್ಯಾವಹಾರಿಕ, ಯಜಮಾನತ್ವಾದಿ ಪ್ರಾತಿಭಾಸಿಕ' ಎಂದು ಹೇಳಲು ವಿಶೇಷಕಾರಣವಿಲ್ಲ. ಆದರಿಂದ 'ಬ್ರಹ್ಮನಲ್ಲಿ ಸತ್ಯತ್ವವ್ಯಾವಹಾರಿಕವಾದ್ದರಿಂದ ಅಸತ್ಯತ್ವ ವ್ಯಾವೃತ್ತಿಪ್ರತೀತಿ. ದರ್ಭೆಯಲ್ಲಿ ಯಜಮಾನತ್ವ ಪ್ರಾತಿಭಾಸಿಕವಾದ್ದರಿಂದ ಅಯಜಮಾನತ್ವ ವ್ಯಾವೃತ್ತಿಯು ದರ್ಭೆಯಲ್ಲಿ ಬೋಧಿತವಾಗುವುದಿಲ್ಲ' ಎಂದು ಸಮಾಧಾನ ಹೇಳಲು ಬರುವುದಿಲ್ಲ.

**'ನ ಚೌಪನಿಷದೇ ಬ್ರಹ್ಮಣಿ ಸತ್ಯತ್ವಾದಿಕಂ ಪ್ರತ್ಯಕ್ಷಾದಿ ಪ್ರಾಪ್ತಂ, ಯೇನ ವ್ಯಾವಹಾರಿಕಂ ಸ್ಯಾತ್। ನ ಚ ತತ್ವಪರಾತ್ ಪ್ರತೀತಂ ವ್ಯಾವಹಾರಿಕಂ, ಅತತ್ವಪರಾತ್ತು ಪ್ರತೀತಂ ಪ್ರಾತಿಭಾಸಿಕಮಿತಿ ವ್ಯವಸ್ಥಾ। 'ಅಸದ್ವಾ ಇದಮಗ್ರ ಆಸೀತ್' ಇತಿ ತತ್ವಪರೇಣ ಪ್ರತೀತಸ್ಯ ಮೂಲಕಾರಣ ಅಸತ್ವಸ್ಯ ವ್ಯಾವಹಾರಿಕತ್ವಾಪಾತಾತ್।'**

'ವ್ಯಾವಹಾರಿಕ ಪ್ರಮಾಣದಿದಂದ ಸಿದ್ಧವಾಗಿರುವುದರಿಂದ ಸತ್ಯತ್ವವು ವ್ಯಾವಹಾರಿಕ ಎನ್ನುತ್ತೇನೆ' ಎಂದರೆ ಅದೂ ಸರಿಯಲ್ಲ. 'ಔಪನಿಷದ' ಎನಿಸಿದ ಉಪನಿಷದೇಕ ವೇದ್ಯನಾದ ಬ್ರಹ್ಮನಲ್ಲಿ ಸತ್ಯತ್ವಾದಿಗಳು ಪ್ರತ್ಯಕ್ಷಾದಿ ವ್ಯಾವಹಾರಿಕ ಪ್ರಮಾಣಗಳಿಂದ ಸಿದ್ಧವಾಗುವುದಿಲ್ಲ. ಅವುಗಳನ್ನು ವ್ಯಾವಹಾರಿಕವೆನ್ನಲಾಗುವುದಿಲ್ಲ. 'ಘಟಃ ಸನ್' ಎಂಬ ಪ್ರತ್ಯಕ್ಷದಿಂದ 'ಸತ್' ಎಂದು ಅಧಿಷ್ಠಾನ ಬ್ರಹ್ಮನೇ ಕಾಣುವುದರಿಂದ ಬ್ರಹ್ಮನೂ ವ್ಯಾವಹಾರಿಕವಾಗಬೇಕಾದೀತು.

'ಬ್ರಹ್ಮನಲ್ಲಿ ಸತ್ಯತ್ವಾದಿಗಳು ವ್ಯಾವಹಾರಿಕ, ದರ್ಭೆಯಲ್ಲಿ ಯಜಮಾನತ್ವ

ಪ್ರಾತಿಭಾಸಿಕವೆನ್ನಲು ವಿಶೇಷ ಹೇತು ಹೀಗೆ—ಬ್ರಹ್ಮತತ್ತ್ವಪರವಾದ ವೇದಾಂತ ಹೇಳಿದ್ದು ಸತ್ಯತ್ವಾದಿ ವ್ಯಾವಹಾರಿಕ, ಅತತ್ತ್ವಧರ್ಮ ಪರವಾದ ಕರ್ಮಕಾಂಡ ಹೇಳಿದ್ದು ಯಜಮಾನತ್ವಾದಿ ಪ್ರಾತಿಭಾಸಿಕ ಎಂದು ವ್ಯವಸ್ಥೆಯನ್ನು ಹೇಳುತ್ತೇನೆ' ಎಂದರೆ ಇದೂ ಸರಿಯಲ್ಲ. ತತ್ತ್ವಪರವಾದ ವೇದಾಂತವೇ 'ಅಸದ್ವಾ ಇದಮಗ್ರ ಆಸೀತ್' 'ಸೃಷ್ಟಿಗೆ ಪೂರ್ವದಲ್ಲಿದ್ದುದು ಅಸತ್' ಎಂದು ಹೇಳುವುದರಿಂದ ಮೂಲಕಾರಣದ ಅಸತ್ತ್ವ ವ್ಯಾವಹಾರಿಕವೆಂದಾದೀತು.

**'ನ ಚ ಸತ್ಯತ್ವಾದಿಕಂ ತತ್ತ್ವಾವೇದಕ ಬಾಧಿತತ್ವಾತ್ ವ್ಯಾವಹಾರಿಕಂ, ಯಜಮಾನತ್ವಾದಿಕಂ ತು ವ್ಯಾವಹಾರಿಕ ಬಾಧಿತತ್ವಾತ್ ಪ್ರಾತಿಭಾಸಿಕಮಿತಿ ಯುಕ್ತಂ। ತತ್ತ್ವಾವೇದಕಸ್ಯಾಪಿ ವಿಶೇಷ್ಯಮಾತ್ರಪರತ್ವೇನ ಸತ್ಯತ್ವಾದ್ಯಬಾಧಕತ್ವಾತ್। ವ್ಯಾವಹಾರಿಕ ಬಾಧಿತಸ್ಯ ಅದ್ವೈತವತ್ ಪಾರಮಾರ್ಥಿಕತ್ವೋಪಪತ್ತೇಶ್ಚ।'**

'ಸತ್ಯತ್ವಾದಿಯು ತತ್ತ್ವಾವೇದಕವಾದ 'ಕೇವಲೋ ನಿರ್ಗುಣಶ್ಚ' 'ನೇಹ ನಾನಾಸ್ತಿ ಕಿಂಚನ' ಇತ್ಯಾದಿ ಶ್ರುತಿಬಾಧಿತವಾದ್ದರಿಂದ ವ್ಯಾವಹಾರಿಕ, ಯಜಮಾನತ್ವಾದಿ ವ್ಯಾವಹಾರಿಕ ಪ್ರತ್ಯಕ್ಷಾದಿ ಗಳಿಂದ ಬಾಧಿತವಾದ್ದರಿಂದ ಪ್ರಾತಿಭಾಸಿಕ ಎನ್ನುತ್ತೇನೆ' ಎಂದರೂ ಸರಿಯಲ್ಲ. ತತ್ತ್ವಾವೇದಕವಾದ 'ನೇಹ ನಾನಾಸ್ತಿ ಕಿಂಚನ' ಇತ್ಯಾದಿ ವಾಕ್ಯವು ಕೂಡ ನಿನ್ನ ಮತದಲ್ಲಿ ಲಕ್ಷಣಯಾ ವಿಶೇಷ್ಯಚಿತ್ ಮಾತ್ರ ಪರವಾಗಿರುವುದರಿಂದ ಸತ್ಯತ್ವಾದಿ ವೈಶಿಷ್ಟ್ಯವನ್ನು ಅದು ಬಾಧಿಸುವುದಿಲ್ಲ. ಇವನು 'ದೇವದತ್ತ' ಎಂದಮಾತ್ರಕ್ಕೆ 'ದಂಡಿ ಅಲ್ಲ' ಎಂದಾಗುವುದಿಲ್ಲ. ದೇವದತ್ತ ಎಂಬ ವಿಶೇಷ್ಯಕ್ಕೆ ದಂಡಿತ್ವರೂಪ ವಿಶೇಷಣ ವಿರೋಧಿಯಲ್ಲ. ವಿಶೇಷ್ಯವು ವಿಶೇಷಣವನ್ನು ಬಾಧಿಸುವುದಿಲ್ಲ. ಹಾಗೇ ನೇಹನಾನಾವಾಕ್ಯ ಸತ್ಯಂಜ್ಞಾನಂ ಎಂಬ ಸತ್ಯತ್ವಾದಿ ವೈಶಿಷ್ಟ್ಯವನ್ನು ಹೇಳುವ ವಾಕ್ಯವನ್ನು ಬಾಧಿಸುವುದಿಲ್ಲ.

'ವ್ಯಾವಹಾರಿಕ ಪ್ರತ್ಯಕ್ಷಾದಿ ಪ್ರಮಾಣ ಬಾಧಿತವಾದುದು ಪ್ರಾತಿಭಾಸಿಕ' ಎಂದು ಹೇಳಿದರೆ ಈಗ ವ್ಯಾವಹಾರಿಕ ಪ್ರತ್ಯಕ್ಷಾದಿ ಪ್ರಮಾಣ ಬಾಧಿತವಾದ ಅದ್ವೈತವು ಪ್ರಾತಿಭಾಸಿಕವಾದೀತು. ಆದರೂ ಅದನ್ನು ಪಾರಮಾರ್ಥಿಕ ಎಂದು ನೀನು ಒಪ್ಪಿರುವುದರಿಂದ, ವ್ಯಾವಹಾರಿಕ ಪ್ರತ್ಯಕ್ಷಾದಿ ಪ್ರಮಾಣಬಾಧಿತವಾದರೂ ದರ್ಭೆಯಲ್ಲಿ ಯಜಮಾನತ್ವಾದಿಯನ್ನು ಪಾರಮಾರ್ಥಿಕವೆಂದು ಒಪ್ಪಬೇಕು.

**'ನ ಚ ಲಕ್ಷಣಾಬೀಜೇ ಮುಖ್ಯಾರ್ಥಬಾಧಕೇ ತುಲ್ಯೇಽಪಿ ಸತ್ಯಾದಿ ಪದಸ್ಯ ವಾಚ್ಯಾರ್ಥೇ ಅವಾಂತರತಾತ್ಪರ್ಯಂ, ಯಜಮಾನಪದಸ್ಯ ತು ತನ್ನ ಇತ್ಯತ್ರ ಹೇತುರಸ್ತಿ। ಯೇನ ಉಕ್ತವ್ಯವಸ್ಥಾ ಸ್ಯಾತ್।'**

'ಸತ್ಯಾದಿ ವಾಕ್ಯಕ್ಕೆ ಲಕ್ಷ್ಯವಾದ ಶುದ್ಧದಲ್ಲಿ ಮಹಾತಾತ್ಪರ್ಯವಿದ್ದರೂ ವಾಚ್ಯವಾದ ಸತ್ಯತ್ವಾದಿಗಳಲ್ಲಿ ಅವಾಂತರ ತಾತ್ಪರ್ಯವಿರುವುದರಿಂದ ಅವುಗಳಿಗೆ ವ್ಯಾವಹಾರಿಕತ್ವವು ಯುಕ್ತ.

ಯಜಮಾನ ಪ್ರಸ್ತರವಾಕ್ಯಕ್ಕೆ 'ಪ್ರಸ್ತರದಲ್ಲಿ ಯಜಮಾನತ್ವವಿದೆ' ಎನ್ನುವುದರಲ್ಲಿ ಅವಾಂತರ ತಾತ್ಪರ್ಯವಿಲ್ಲ. ಆದರಿಂದ ಅದು ಪ್ರಾತಿಭಾಸಿಕ.' ಎಂದರೆ 'ಅದೂ ಸರಿಯಲ್ಲ. ಲಕ್ಷಣಾಬೀಜವಾದ ಮುಖ್ಯಾರ್ಥಬಾಧಕವು ಎರಡೂ ಕಡೆ ಸಮಾನವಾಗಿರುವಾಗ ಸತ್ಯಾದಿಪದಕ್ಕೆ ಮಾತ್ರ ವಾಚ್ಯಾರ್ಥದಲ್ಲಿ ಅವಾಂತರ ತಾತ್ಪರ್ಯವಿದೆ, ಯಜಮಾನಪದಕ್ಕೆ ಅದು ಇಲ್ಲ ಎನ್ನಲು ಕಾರಣವಿಲ್ಲ. ಇರುತ್ತಿದ್ದರೆ ನೀನು ಹೇಳಿದ ವ್ಯವಸ್ಥೆ ಕೂಡುತ್ತಿತ್ತು.



किंच व्यावृत्तयः सत्या मिथ्या वा ?

आद्ये व्यावर्तकानामपि सत्त्वं स्यात् व्यावहारिकैर्व्यावर्तकैः पारमार्थिकव्यावृत्त्यसिद्धेः । किंच तासां ब्रह्माभेदे ब्रह्मपदेनैव तत्सिद्धेरितरवैयर्थ्यं । व्यावर्तकधर्माणामपि सत्त्वं ब्रह्माभिन्नत्वं च स्यात्, अविशेषात् ।

एवं व्यावृत्तीनामन्योन्यमभेदे सत्यपदेनैवाज्ञानादिव्यावृत्तिसिद्धेर्ज्ञानादिपदवैयर्थ्यम् । तासां ब्रह्मणा परस्परं भेदे चाद्वैतहानिः, अभावद्वैतस्य निरासात् ।

नांत्यः । शुक्तेः शुक्तितो व्यावृत्तेर्मिथ्यात्वे शुक्तित्वस्य शुक्तिसमानसत्ताकत्ववदनृतव्यावृत्तेर्मिथ्यात्वेऽनृतत्वस्य ब्रह्मसमसत्ताकत्वापातात् । तत्वजिज्ञासुं मुमुक्षुं प्रति मिथ्याबोधनायोगात् ।

नचानृतत्वादिभ्रांतिनिवृत्त्यर्थं तद्बोधनम्, अधिष्ठानब्रह्मतत्वज्ञानेनैव तन्निवृत्तिसंभवे भ्रांत्यंतरोत्पादायोगात् । नहि वल्मीके स्थाणुत्वभ्रांतिः पुंस्त्वस्योपदेशेन निवर्त्या, किंतु वल्मीकत्वस्य ।

नचात्मनि कल्पितेनापि ब्राह्मण्येन मिथ्याशंकिताब्राह्मण्यस्येव व्यावहारिक्या व्यावृत्त्या प्रातिभासिकानृतत्वभ्रांतिनिवृत्तिरिति वाच्यम् । ब्राह्मण्यस्य देहविशेषसंबंधित्वे आत्मनि ब्राह्मण्यस्य, जातिविशेषत्वेऽब्राह्मण्यस्य सत्यत्वेन द्वयोः कल्पितत्वायोगात् ।

**असद्व्यावृत्तेर्व्यावहारिकत्वेऽनपोदितप्रामाण्येन ''असद्वा इदमग्र आसीत्'' इति वाक्येनासत्त्वस्य पारमार्थिकत्वापत्तेश्च ।**

**व्यावहारिकैरिति ।।** असतः साधकत्वनिरासेन पारमार्थिकस्यैव साधकत्वसमर्थनादिति भावः ।। **तासामिति ।।** व्यावृत्तीनां ब्रह्मणा अन्योन्यं च भेदाभ्युपगम इत्यर्थः । ननु भावाद्वैतस्याभ्युपगमान्नाद्वैतहानिरित्यत आह— **अभावद्वैतस्येति । शुक्तेरिति ।।** शुक्तित्वेन प्रतीयमानस्येत्यर्थः ।। **शुक्तिसमानसत्ताकत्ववदिति ।।** शुक्तित्वेन प्रतीयमानसमसत्ताकत्ववदित्यर्थः ।। **अनृतव्यावृत्तेरिति ।।** सत्यत्वेन प्रतीयामानब्रह्मनिष्ठानृतव्यावृत्तेरित्यर्थः ।। **जातिविशेषत्वे त्विति ।।** शरीरगतजातिविशेषत्वे त्वित्यर्थः ।



**'ಕಿಂಚ ವ್ಯಾವೃತ್ತಯಃ ಸತ್ಯಾ ಮಿಥ್ಯಾ ವಾ?**

**ಆದ್ಯೇ ವ್ಯಾವರ್ತಕಾನಾಮಪಿ ಸತ್ವಂ ಸ್ಯಾತ್। ವ್ಯಾವಹಾರಿಕೈರ್ವ್ಯಾವರ್ತಕೈಃ ಪಾರಮಾರ್ಥಿಕ ವ್ಯಾವೃತ್ಯಸಿದ್ಧೇಃ। ಕಿಂ ಚ ತಾಸಾಂ ಬ್ರಹ್ಮಾಭೇದೇ ಬ್ರಹ್ಮಪದೇನೈವ ತತ್‌ಸಿದ್ಧೇರಿತರ ವೈಯರ್ಥ್ಯಂ। ವ್ಯಾವರ್ತಕಧರ್ಮಾಣಾಮಪಿ ಸತ್ವಂ, ಬ್ರಹ್ಮಾಭಿನ್ನತ್ವಂ ಚ ಸ್ಯಾತ್ ಅವಿಶೇಷಾತ್।'**

'ವ್ಯಾವೃತ್ತಿಗಳು ಸತ್ಯವೆ ಮಿಥ್ಯೆಯೆ?

ಸತ್ಯ ಎನ್ನುವ ಮೊದಲನೆ ಪಕ್ಷದಲ್ಲಿ ವ್ಯಾವರ್ತಕವಾದ ಸತ್ಯತ್ವಾದಿ ಧರ್ಮಗಳೂ ಕೂಡ ಸತ್ಯವೆನ್ನಬೇಕಾಗುವುದು. ವ್ಯಾವೃತ್ತಿ ವ್ಯಾವರ್ತಕಗಳು ಏಕಸತ್ತಾಕವಾಗಿರಬೇಕು ತಾನೆ?

'ಕಾರಣವು ಕಾರ್ಯದಲ್ಲಿ ವ್ಯಾವೃತ್ತಿ ಬೋಧಜನಕ. ಸ್ವಾಪ್ನಕಾಮಿನಿಯು ಸ್ವಜನ್ಯ ಸುಖದಲ್ಲಿ ಸುಖಾಂತರ ವ್ಯಾವೃತ್ತಿ ಬುದ್ಧಿಜನಕಳಾಗುವುದು ಕಂಡಿದೆ. ಇಲ್ಲಿ ಕಾರಣ ಮತ್ತು ಕಾರ್ಯವ್ಯಾವರ್ತಕಗಳಿಗೆ 'ಸಮಸತ್ತಾಕತ್ವವಿಲ್ಲ' ಎಂದು ಹೇಳುವುದು ಸರಿಯಲ್ಲ. ಸ್ವಾಪ್ನಕಾಮಿನಿಯು ಸುಖಜನಕಳೂ ಅಲ್ಲ, ಸುಖವ್ಯಾವರ್ತಕಳೂ ಅಲ್ಲ, ಅವಳ ಜ್ಞಾನವೇ ಕಾರಣ. ಅದರಿಂದ ವ್ಯಾವೃತ್ತಿ ಮತ್ತು ವ್ಯಾವೃತ್ತಿ ಬುದ್ಧಿಜನಕಗಳಿಗೆ ಸಮಸತ್ತಾಕತ್ವನಿಯಮಕ್ಕೆ ವ್ಯಭಿಚಾರವಿಲ್ಲ. ವ್ಯಾವಹಾರಿಕ ವ್ಯಾವರ್ತಕ ಧರ್ಮಗಳಿಂದ ಪಾರಮಾರ್ಥಿಕ ವ್ಯಾವೃತ್ತಿ ಸಿದ್ಧವಾಗದು. ಏಕೆಂದರೆ, ಅಸತ್ತಿಗೆ ಸಾಧಕತ್ವವನ್ನು ನಿರಾಸಮಾಡಿರುವುದರಿಂದ ಪಾರಮಾರ್ಥಿಕವೇ ಸಾಧಕ.

ವ್ಯಾವೃತ್ತಿಗಳು ಬ್ರಹ್ಮನಿಂದ ಅಭಿನ್ನವೆನ್ನುವುದಾದರೆ ಬ್ರಹ್ಮಪದದಿಂದಲೇ ಅವು ಉಕ್ತ

ವಾಗುವುದರಿಂದ ಇತರ ಪದಗಳೂ ವ್ಯರ್ಥವಾಗುವುವು. ವ್ಯಾವೃತ್ತಿಗಳು ಸತ್ಯ ಬ್ರಹ್ಮಾಭಿನ್ನವಾದರೆ ವ್ಯಾವರ್ತಕಗಳೂ ಸತ್ಯ ಬ್ರಹ್ಮಾಭಿನ್ನವೇ ಆಗಬೇಕು, ಸಮಾನನ್ಯಾಯವಾಗಿರುವುದರಿಂದ ವ್ಯತ್ಯಾಸ ಮಾಡಲಾಗದು.

**'ಏವಂ ವ್ಯಾವೃತ್ತೀನಾಂ ಅನ್ಯೋನ್ಯಮಭೇದೇ ಸತ್ಯಪದೇನೈವ ಅಜ್ಞಾನಾದಿ ವ್ಯಾವೃತ್ತಿಸಿದ್ಧೇಃ ಜ್ಞಾನಾದಿ ಪದವೈಯರ್ಥ್ಯಂ। ತಾಸಾಂ ಪರಸ್ಪರಂ ಭೇದೇ ಚ ಅದ್ವೈತಹಾನಿಃ। ಅಭಾವ ದ್ವೈತಸ್ಯ ನಿರಾಸಾತ್।'**

ಅಸತ್ಯತ್ವ ವ್ಯಾವೃತ್ತಿ, ಅಸ್ವಪ್ರಕಾಶತ್ವ ವ್ಯಾವೃತ್ತಿ ಮುಂತಾದ ಎಲ್ಲ ವ್ಯಾವೃತ್ತಿಗಳೂ ಪರಸ್ಪರ ಅಭಿನ್ನವಾದರೆ ಒಂದು ಸತ್ಯಪದಿಂದಲೇ ಅಸ್ವಪ್ರಕಾಶತ್ವಾದಿ ವ್ಯಾವೃತ್ತಿಗಳು ಕೂಡ ಸಿದ್ಧವಾಗುವುದರಿಂದ ಜ್ಞಾನಾದಿ ಪದಗಳು ವ್ಯರ್ಥವಾಗುವುವು. ಅವುಗಳಿಗೆ ಪರಸ್ಪರ ಭೇದವಿದೆ ಎಂದರೆ ಅದ್ವೈತಹಾನಿ. ವ್ಯಾವೃತ್ತಿಗಳು ಅಭಾವರೂಪವಾದ್ದರಿಂದ ಅವುಗಳಿಂದ ಅದ್ವೈತಕ್ಕೆ ಹಾನಿ ಇಲ್ಲ ಎನ್ನಲಾಗದು. ಅಭಾವದ್ವೈತವನ್ನು ನಾವು ನಿರಾಸಮಾಡಿದ್ದೇವೆ.

**'ನಾಂತ್ಯಃ। ಶುಕ್ತೇಃ ಶುಕ್ತಿತೋ ವ್ಯಾವೃತ್ತೇರ್ಮಿಥ್ಯಾತ್ವೇ ಶುಕ್ತಿತ್ವಸ್ಯ ಶುಕ್ತಿಸಮಾನ ಸತ್ತಾಕತ್ವವತ್ ಅನೃತವ್ಯಾವೃತ್ತೇರ್ಮಿಥ್ಯಾತ್ವೇ ಅನೃತತ್ವಸ್ಯ ಬ್ರಹ್ಮ ಸಮಸತ್ತಾಕತ್ವಾ ಪಾತಾತ್। ತತ್ವಜಿಜ್ಞಾಸು ಮುಮುಕ್ಷುಂ ಪ್ರತಿ ಮಿಥ್ಯಾ ಬೋಧನಾಯೋಗಾತ್।'**

ವ್ಯಾವೃತ್ತಿಗಳು ಮಿಥ್ಯಾ ಎನ್ನುವ ಎರಡನೇ ಪಕ್ಷವೂ ಸರಿಯಲ್ಲ. ಶುಕ್ತಿಗೆ ಶುಕ್ತಿಯಿಂದ ವ್ಯಾವೃತ್ತಿ ಮಿಥ್ಯಾ ಆದರೆ ಶುಕ್ತಿತ್ವವು ಶುಕ್ತಿಸಮಾನಸತ್ತಾಕವಾಗಿದೆ. ಹಾಗೇ ಬ್ರಹ್ಮನಲ್ಲಿ ಅನೃತವ್ಯಾವೃತ್ತಿಯು ಮಿಥ್ಯಾ ಆದರೆ ಅನೃತತ್ವವು ಬ್ರಹ್ಮಸಮಾನ ಸತ್ತಾಕವಾಗಬೇಕಾದೀತು. ಮತ್ತು ವ್ಯಾವೃತ್ತಿ ಮಿಥ್ಯಾತ್ವಪಕ್ಷದಲ್ಲಿ ಅದನ್ನು ವೇದಾಂತ ಹೇಳಬಾರದು. ತತ್ವಜಿಜ್ಞಾಸುವಿಗೆ ಮಿಥ್ಯಾಬೋಧನ ಮಾಡುವುದು ಉಚಿತವಲ್ಲ.

'ವ್ಯಾವೃತ್ತಿ ಮತ್ತು ಅದರ ಪ್ರತಿಯೋಗಿಗಳಿಗೆ ವ್ಯಾವೃತ್ತ ಸಮಸತ್ತಾಕತ್ವವನ್ನು ಎಲ್ಲಕಡೆ ಹೇಳಲಾಗದು. ವ್ಯಾವೃತ್ತಿಯ ಬಾಧಕದಿಂದ ಅಬಾಧ್ಯವಾದ ಪ್ರತಿಯೋಗಿಗೇ ವ್ಯಾವೃತ್ತ ಸಮಸತ್ತಾಕತ್ವವನ್ನು ಹೇಳಬೇಕು. ಪ್ರಕೃತ ಅನೃತತ್ವ ವ್ಯಾವೃತ್ತಿಯೂ ಅದರ ಪ್ರತಿಯೋಗಿಯಾದ ಅನೃತತ್ವವೂ, 'ನೇಹನಾನಾ' ಎಂಬ ಒಂದೇ ಬಾಧಕದಿಂದ ಬಾಧ್ಯವಾಗಿದೆ. ಆದರಿಂದ ಪ್ರತಿಯೋಗಿಯಾದ ಅನೃತತ್ವಕ್ಕೆ ವ್ಯಾವೃತ್ತವಾದ ಬ್ರಹ್ಮ ಸಮಸತ್ತಾಕತ್ವ ಬರುವ ಪ್ರಸಂಗವಿಲ್ಲ'ಎಂದು ಹೇಳಿದರೆ ಅದು ಸರಿಯಲ್ಲ.

ವ್ಯಾವೃತ್ತಿಗೂ ಅದರ ಪ್ರತಿಯೋಗಿಗೂ ಏಕಬಾಧಕ ಬಾಧ್ಯತ್ವ ಎಲ್ಲೂ ಕಂಡಿಲ್ಲ. ನೇಹನಾನಾವಾಕ್ಯವು ಲಕ್ಷಣಯಾ ವಿಶೇಷ್ಯಮಾತ್ರಪರವಾದ್ದರಿಂದ ಅದು ವ್ಯಾವೃತ್ತಿಯನ್ನಾಗಲಿ ಅದರ ಪ್ರತಿಯೋಗಿಯನ್ನಾಗಲಿ ಬಾಧಿಸುತ್ತಿಲ್ಲ.

'ಕಲ್ಪಿತರಜತದಲ್ಲಿ ಕಲ್ಪಿತ ರಜತವ್ಯಾವೃತ್ತಿ ಮಿಥ್ಯಾ. ಇಲ್ಲಿ ವ್ಯಾವೃತ್ತಿ ಮತ್ತು ಪ್ರತಿಯೋಗಿರಜತ ಎರಡೂ ಶುಕ್ತಿಜ್ಞಾನರೂಪವಾದ ಏಕಬಾಧಕಬಾಧ್ಯವಾಗುವುದು ಕಂಡಿದೆ' ಎಂದರೆ, ಧರ್ಮಿಸತ್ತ್ವೇ ಆತದ್ ವ್ಯಾವೃತ್ತಿಯು ಎಲ್ಲಿ ಮಿಥ್ಯಾ ಅಲ್ಲಿ ವ್ಯಾವೃತ್ತಿಗಿಂತ ಪ್ರತಿಯೋಗಿ ಅಧಿಕಸತ್ತಾಕವಾಗುತ್ತದೆ ಎಂದೇ ನಿಯಮ. ಪ್ರಕೃತ ಕಲ್ಪಿತರಜತರೂಪ ಧರ್ಮಿ ಸತ್ತಲ್ಲ. ಆದರಿಂದ ಅಲ್ಲಿ ವ್ಯಭಿಚಾರ ಹೇಳಬಾರದು.

ಎಲ್ಲಿ ಯಾವುದರ ವ್ಯಾವೃತ್ತಿ ಮಿಥ್ಯೆಯೋ ಅಲ್ಲಿ ಆ ಪ್ರತಿಯೋಗಿಯು ಧರ್ಮಿಜ್ಞಾನಾಬಾಧ್ಯ, ಸತ್ಯ.

ಹೀಗಾಗಿ ಬ್ರಹ್ಮನಲ್ಲಿ ಅನೃತತ್ವ ವ್ಯಾವೃತ್ತಿ ಮಿಥ್ಯಾ. ಆದ್ದರಿಂದ ಪ್ರತಿಯೋಗಿ ಅನೃತತ್ವವು ಧರ್ಮಿಜ್ಞಾನಾಬಾಧ್ಯ, ಸತ್ಯವೆಂದಾಗುವುದು.

**'ನ ಚ ಅನೃತತ್ವಾದಿಭ್ರಾಂತಿ ನಿವೃತ್ತ್ಯರ್ಥಂ ತದ್ಬೋಧನಂ। ಅಧಿಷ್ಠಾನ ಬ್ರಹ್ಮತತ್ವಜ್ಞಾನೇನೈವ ತನ್ನಿವೃತ್ತಿ ಸಂಭವೇ ಭ್ರಾಂತ್ಯಂತರೋತ್ಪಾದಾಯೋಗಾತ್। ನ ಹಿ ವಲ್ಮೀಕೇ ಸ್ಥಾಣುತ್ವಭ್ರಾಂತಿಃ ಪುಂಸ್ತ್ವಸ್ಯೋಪದೇಶೇನ ನಿವರ್ತ್ಯಾ। ಕಿಂತು ವಲ್ಮೀಕತ್ವಸ್ಯ।'**

'ವ್ಯಾವೃತ್ತಿ ಮಿಥ್ಯಾತ್ವಪಕ್ಷದಲ್ಲಿ ಅದನ್ನು ವೇದಾಂತವು ಹೇಳಬಾರದು ಏಕೆ? ಅನೃತತ್ವಾದಿ ಭ್ರಾಂತಿ ನಿವೃತ್ತಿಗಾಗಿ ಅನೃತತ್ವವ್ಯಾವೃತ್ತಿ ಬೋಧನವು ಯುಕ್ತವೆ.' ಎಂದರೆ ಅದೂ ಸರಿಯಲ್ಲ. ಬ್ರಹ್ಮನಲ್ಲಿ ಅನೃತತ್ವಾದಿ ಭ್ರಾಂತಿ ಬಂದಾಗ ವೇದಾಂತವು ಅಧಿಷ್ಠಾನ ಬ್ರಹ್ಮದ ಯಥಾರ್ಥ ಜ್ಞಾನದಿಂದಲೇ ಆ ಭ್ರಾಂತಿಯನ್ನು ಹೋಗಲಾಡಿಸಬಹುದು. ಅದನ್ನು ಬಿಟ್ಟು ಮುಮುಕ್ಷುವಿಗೆ ಬ್ರಹ್ಮನಲ್ಲೇ ಅನೃತತ್ವಾದಿವ್ಯಾವೃತ್ತಿ ವಿಷಯಕವಾದ ಇನ್ನೊಂದು ಭ್ರಾಂತಿಯನ್ನು ವೇದಾಂತ ಏಕೆ ಹುಟ್ಟಿಸಬೇಕು? ಹುತ್ತದಲ್ಲಿ ಸ್ಥಾಣು ಎಂಬ ಭ್ರಮ ಬಂದಾಗ ಪುರುಷನೆಂದು ಬೋಧಿಸಿ ಪುರುಷತ್ವಭ್ರಮದಿಂದ ಅದನ್ನು ಕಳೆಯಬೇಕೇನು? ಹುತ್ತ ಎಂದು ಅಧಿಷ್ಠಾನಯಾಥಾತ್ಮ್ಯವನ್ನು ಉಪದೇಶಿಸಿ ಕಳೆಯಬೇಕು ತಾನೆ?

'ಅಧಿಷ್ಠಾನ ತತ್ವಸಾಕ್ಷಾತ್ಕಾರಕ್ಕೆ ಅನೃತತ್ವ ವ್ಯಾವೃತ್ತಿಭ್ರಾಂತಿಯು ದ್ವಾರವಾಗಿ ಸಾಧನವಾಗುವುದರಿಂದ ಸಾಕ್ಷಾತ್ಕಾರಕ್ಕಾಗಿ ಭ್ರಾಂತಿಯ ಉಪದೇಶ ಯುಕ್ತ' ಎನ್ನುತ್ತಾರೆ. ಅದು ಸರಿಯಲ್ಲ. ಚಿನ್ಮಾತ್ರ ರೂಪವಾದ ಸ್ವಪ್ರಕಾಶ ನಿತ್ಯಸಿದ್ಧವಾದ ಅಧಿಷ್ಠಾನದ ಸಾಕ್ಷಾತ್ಕಾರಕ್ಕೆ ಸಾಧನ ಒಂದು ಬೇಕಾಗಿಲ್ಲ.

**'ನ ಚಾತ್ಮನಿ ಕಲ್ಪಿತೇನಾಪಿ ಬ್ರಾಹ್ಮಣ್ಯೇನ ಮಿಥ್ಯಾಶಂಕಿತಾಬ್ರಾಹ್ಮಣ್ಯಸ್ಯೇವ ವ್ಯಾವಹಾರಿಕ್ಯಾ ವ್ಯಾವೃತ್ತ್ಯಾ ಪ್ರಾತಿಭಾಸಿಕಾನೃತತ್ವ ಭ್ರಾಂತಿ ನಿವೃತ್ತಿರಿತಿ ವಾಚ್ಯಂ। ಬ್ರಾಹ್ಮಣ್ಯಸ್ಯ ದೇಹವಿಶೇಷ ಸಂಬಂಧಿತ್ವೇ ಆತ್ಮನಿ ಬ್ರಾಹ್ಮಣ್ಯಸ್ಯ, ಜಾತಿ ವಿಶೇಷತ್ವೇ ಅಬ್ರಾಹ್ಮಣ್ಯಸ್ಯ ಸತ್ಯತ್ವೇನ ದ್ವಯೋಃ ಕಲ್ಪಿತತ್ವಾಯೋಗಾತ್। ಅಸದ್ ವ್ಯಾವೃತ್ತೇ-**

**ವ್ಯಾವಹಾರಿಕತ್ವೇ ಅನಪೋದಿತ ಪ್ರಾಮಾಣ್ಯೇನ 'ಅಸದ್ವಾ ಇದಮಗ್ರ ಆಸೀತ್' ಇತಿ ವಾಕ್ಯೇನ ಅಸತ್ವಸ್ಯ ಪಾರಮಾರ್ಥಿಕತ್ವಾಪತ್ತೇಶ್ಚ।'**

'ಆತ್ಮನಲ್ಲಿ ಕಲ್ಪಿತವಾದ ಬ್ರಾಹ್ಮಣ್ಯದಿಂದಲೂ ಕೂಡ ಕಲ್ಪಿತವೂ ಶಂಕಿತವೂ ಆಗಿರುವ ಅಬ್ರಾಹ್ಮಣ್ಯವು ನಿವೃತ್ತಿಯಾಗುವುದು ಕಂಡಿದೆ. ಹಾಗೇ ಮಿಥ್ಯಾಭೂತವಾದ ವ್ಯಾವಹಾರಿಕವಾದ ವ್ಯಾವೃತ್ತಿಯಿಂದಲೂ ಪ್ರಾತಿಭಾಸಿಕ ಅನೃತತ್ವದ ಭ್ರಾಂತಿ ನಿವೃತ್ತಿ ಹೊಂದಬಹುದು' ಎಂದರೆ ಇದು ಸರಿಯಲ್ಲ.

ಬ್ರಾಹ್ಮಣ್ಯ ಅಬ್ರಾಹ್ಮಣ್ಯವೆರಡೂ ಕಲ್ಪಿತವೆನ್ನಲಾಗದು. ದೇಹ ವಿಶೇಷ ಸಂಬಂಧಿತ್ವವೇ ಆತ್ಮನಲ್ಲಿ ಬ್ರಾಹ್ಮಣ್ಯ ಎನ್ನುವ ಪಕ್ಷದಲ್ಲಿ ಆತ್ಮನಲ್ಲಿ ಅದು ಇರುವುದರಿಂದ ಬ್ರಾಹ್ಮಣ್ಯ ಸತ್ಯ. ದೇಹಗತ ಜಾತಿವಿಶೇಷವೇ ಬ್ರಾಹ್ಮಣ್ಯವೆನ್ನುವ ಪಕ್ಷದಲ್ಲಿ ಅದು ಆತ್ಮನಲ್ಲಿಲ್ಲದ್ದರಿಂದ ಅಬ್ರಾಹ್ಮಣ್ಯ ಸತ್ಯ. ಎರಡೂ ಕಲ್ಪಿತವೆನ್ನಲಾಗದು.

ಬ್ರಹ್ಮನಲ್ಲಿ ಅಸದ್‌ವ್ಯಾವೃತ್ತಿ ವ್ಯಾವಹಾರಿಕವಾದರೆ ಅದರ ಪ್ರತಿಯೋಗಿಯಾಗಿರುವ ಅಸತ್ವವು ಪಾರಮಾರ್ಥಿಕವಾದೀತು. ಏಕೆಂದರೆ ಪ್ರತಿಯೋಗಿ ತದಭಾವಗಳು ಭಿನ್ನಸತ್ತಾಕವಾಗಿರುವುದರಿಂದ ವ್ಯಾವಹಾರಿಕ ವ್ಯಾವೃತ್ತಿಯ ಪ್ರತಿಯೋಗಿ ಪ್ರಾತಿಭಾಸಿಕವೋ ಪಾರಮಾರ್ಥಿಕವೋ ಆಗಬೇಕು. 'ಅಸದ್ವಾ ಇದಮಗ್ರ ಆಸೀತ್' ಎಂದು ಶ್ರುತಿ ಇದೆ. ಶ್ರುತಿಪ್ರಾಮಾಣ್ಯ ಅಪವಾದ ರಹಿತವಾದ್ದರಿಂದ ಅದು ಪ್ರಮಾಣವೆ. ಪ್ರಾತಿಭಾಸಿಕವಾದ ಅಸತ್ವವನ್ನು ಹೇಳಿದರೆ ಅದಕ್ಕೆ ಪ್ರಾಮಾಣ್ಯವಿಲ್ಲ ವಾಗುವುದು. ಆದರಿಂದ ಶ್ರುತಿಯು ಹೇಳುವ ಅಸತ್ಯತ್ವವು ಪಾರಮಾರ್ಥಿಕವೇ ಎಂದಾಗುವುದು.



**ननु मीमांसकमतेऽनृतस्याप्यर्थवादार्थस्य सत्ये प्राशस्त्ये इव मिथ्याभूतानामपि व्यावृत्तीनां सत्ये ब्रह्मणि द्वारत्वेन बोधनं युक्तम् । उक्तं हि—''सत्यादिशब्दा असत्यादिव्यावृत्तिद्वारा लक्ष्ये ब्रह्मणि पर्यवस्यंति'' इति चेन्न,**

**ब्रह्मस्वरूपमात्रस्य श्रुतिं विना प्रागेवाविद्याद्यध्यासाधिष्ठानत्वादिना ज्ञातस्य पुनरपि 'ब्रह्मविदाप्नोति' इति पूर्ववाक्ये सामान्यतोऽत्र च सत्यादिशब्दैः सत्यत्वादिविशिष्टतया ज्ञातत्वेन तज्ज्ञानस्य व्यावृत्तिज्ञानासाध्यत्वात्, व्यावृत्तिज्ञानस्यैव च धर्मिज्ञानसाध्यत्वेन वैपरीत्यापाताच्च ।**

**शाब्देऽर्थे आर्थिकार्थस्य द्वारत्वानुपपत्तेश्च । नीलमुत्पल-मित्यादेरपि अनीलव्यावृत्तिद्वारा स्वरूपमात्रपरत्वमित्यापाताच्च । नच प्रागज्ञातो व्यावृत्त्या ज्ञाप्यो विशेषस्त्वन्मतेऽस्ति ।**

**नच प्राग्ब्रह्मणो ज्ञानेऽप्यन्याविषयकं तज्ज्ञानमसिद्धमिति वाच्यम् । व्यावृत्तिज्ञानस्यान्याज्ञाने द्वारत्वापत्त्या ब्रह्मज्ञाने द्वारत्वा-योगात् । व्यावर्त्यज्ञानं व्यावृत्तिज्ञाने द्वारमिति वैपरीत्यापाताच्च । प्राचीने ब्रह्माज्ञाननिवर्तके ब्रह्मापरोक्षज्ञाने तदज्ञानकार्यस्यान्यस्य भानायोगाच्च । ब्रह्मप्रातिपदिकार्थबुभुत्सायामेतद्वाक्यं प्रवृत्तमिति स्वप्रक्रियाविरोधाच्च ।**

ननु मिथ्यैव व्यावृत्तिस्तद्बोधनं तु सत्यब्रह्मबोधनाय । अतो न तद्बोधकत्वेनाप्रामाण्यम् । न च मिथ्यावस्तुनः सत्यप्रतिपादनद्वारत्वानुपपत्तिः । अर्थवादगतात्मवपोत्खननादेर्मिथ्याभूतस्यापि सत्यप्राशस्त्यबोधकताया दृष्टत्वादित्या-शंकते– **नन्विति । शाब्द इति ।।** आर्थिकार्थस्य शाब्दार्थप्रतीत्यनंतरभावित्वादिति भावः ।। **अन्याज्ञान इति ।।** ज्ञानस्यान्याविषयकत्व इत्यर्थः ।। **व्यावृत्तिज्ञाने इति ।।** व्यावृत्तिज्ञानमितराविषयकज्ञान एव हेतुरिति वदतो व्यावृत्तेरपि इतरत्वेन व्यावृत्तिज्ञानं व्यावृत्त्यज्ञाने हेतुरिति लोकविरुद्धमापद्येतेत्यर्थः । किंच ब्रह्मज्ञानमात्रस्येतरविषयत्वासंभवान्न व्यावृत्तिज्ञानद्वारत्वमित्याह– **प्राचीन इति ।।** किंचान्याविषयकज्ञाने व्यावृत्तिज्ञानस्य हेतुत्वे सत्यादिवाक्यं स्वरूपमात्र-बोधकमित्युक्तं स्यात् । तच्च स्वप्रक्रियाविरुद्धम् । धर्मिज्ञानाभावे बुभुत्साद्ययोगा-दित्याह— **ब्रह्मप्रातिपदिकार्थेति ।।**

❖❖❖

'ನನು ಮೀಮಾಂಸಕಮತೇ ಅನೃತಸ್ಯಾಪ್ಯರ್ಥವಾದಾರ್ಥಸ್ಯ ಸತ್ಯೇ ಪ್ರಾಶಸ್ತ್ಯೇ ಇವ ಮಿಥ್ಯಾಭೂತಾನಾಮಪಿ ವ್ಯಾವೃತ್ತೀನಾಂ ಸತ್ಯೇ ಬ್ರಹ್ಮಣಿ ದ್ವಾರತ್ವೇನ ಬೋಧನಂ ಯುಕ್ತಂ। ಉಕ್ತಂ ಹಿ 'ಸತ್ಯಾದಿಶಬ್ದಾ ಅಸತ್ಯಾದಿವ್ಯಾವೃತ್ತಿದ್ವಾರಾ ಲಕ್ಷ್ಯೇ ಬ್ರಹ್ಮಣಿ ಪರ್ಯವಸ್ಯಂತೀ'ತಿ ಚೇನ್ನ।

'ಮೀಮಾಂಸಕಮತದಲ್ಲಿ ಅರ್ಥವಾದಾರ್ಥ ಅನೃತವಾಗಿರುವುದುಂಟು. ಉದಾ: 'ಪ್ರಜಾಪತಿರಾತ್ಮನೋ ವಪಾಮುದಖಿದತ್' 'ಪ್ರಜಾಪತಿಯು ವಪಾಹೋಮಕ್ಕಾಗಿ ತನ್ನ ಉದರವನ್ನು ಬಗಿದು ವಪೆಯನ್ನು ಕತ್ತರಿಸಿ ತೆಗೆದನು' ಇದು ಅನೃತ. ಆದರೂ 'ವಪಾಹೋಮ ಎಷ್ಟು ಪ್ರಶಸ್ತವೆಂದರೆ ಆ ಹೋಮಕ್ಕಾಗಿ ಪ್ರಜಾಪತಿ ತನ್ನ ವಪೆಯನ್ನು ಕಿತ್ತನು' ಎಂದು, ಸತ್ಯವಾದ ಪ್ರಾಶಸ್ತ್ಯವನ್ನು ತಿಳಿಸಲು ದ್ವಾರನಾಗಿ ಅನೃತವಾದ ಈ ಆತ್ಮವಪೋತ್ಖನನವು ಉಕ್ತವಾಗಿದೆ. ಹೀಗೇ ಮಿಥ್ಯಾಭೂತವಾದ ಅನೃತಾದಿವ್ಯಾವೃತ್ತಿಗಳೂ ಕೂಡ ಸತ್ಯವಾದ ಬ್ರಹ್ಮನನ್ನು ತಿಳಿಸಲು ದ್ವಾರವಾಗುತ್ತವೆ ಎನ್ನುವುದು ಯುಕ್ತ. ಇದು ತತ್ವಪ್ರದೀಪಿಕಾದಲ್ಲಿ ಉಕ್ತವಾಗಿದೆ—ಸತ್ಯಾದಿಶಬ್ದಗಳಿಗೆ ಅಸತ್ಯಾದಿವ್ಯಾವೃತ್ತಿದ್ವಾರಾ ಲಕ್ಷ್ಯವಾದ ಶುದ್ಧಬ್ರಹ್ಮನನ್ನು ತಿಳಿಸುವಲ್ಲಿಯೆ ತಾತ್ಪರ್ಯ ಎಂದು.' ಇದೂ ಸರಿಯಲ್ಲ.

**'ಬ್ರಹ್ಮಸ್ವರೂಪಮಾತ್ರಸ್ಯ ಶ್ರುತಿಂ ವಿನಾ ಪ್ರಾಗೇವ ಅವಿದ್ಯಾದ್ಯಧ್ಯಾಸಾಧಿಷ್ಠಾನತ್ವಾದಿನಾ ಜ್ಞಾತಸ್ಯ, ಪುನರಪಿ 'ಬ್ರಹ್ಮವಿದಾಪ್ನೋತಿ' ಇತಿ ಪೂರ್ವವಾಕ್ಯೇ 'ಸಾಮಾನ್ಯತಃ ಅತ್ರಚ ಸತ್ಯಾದಿಶಬ್ದೈಃ ಸತ್ಯತ್ವಾದಿ ವಿಶಿಷ್ಟತಯಾ ಚ ಜ್ಞಾತತ್ವೇನ, ತಜ್ಞಾನಸ್ಯ ವ್ಯಾವೃತ್ತಿ ಜ್ಞಾನಾಸಾಧ್ಯತ್ವಾತ್। ವ್ಯಾವೃತ್ತಿ ಜ್ಞಾನಸ್ಯೈವ ಚ ಧರ್ಮಿಜ್ಞಾನಸಾಧ್ಯತ್ವೇನ ವೈಪರೀತ್ಯಾಪಾತಾಚ್ಚ।'**

'ಇದು ಸರಿಯಲ್ಲ. ಏಕೆಂದರೆ, ಬ್ರಹ್ಮಸ್ವರೂಪಮಾತ್ರವು ಶ್ರುತಿಯ ಸತ್ಯಾದಿ ಪದಬೋಧ್ಯವಾದ ವ್ಯಾವೃತ್ತಿ ರೂಪದ್ವಾರದ ಅಪೇಕ್ಷೆ ಇಲ್ಲದೆ ಮೊದಲೇ ಅವಿದ್ಯಾದಿ ಅಧ್ಯಾಸಕ್ಕೆ ಅಧಿಷ್ಠಾನವಾಗಿ ಜ್ಞಾತವೇ ಆಗಿದೆ. ಪುನಃ ಸತ್ಯಾದಿ ವಾಕ್ಯಕ್ಕಿಂತ ಪೂರ್ವದಲ್ಲಿರುವ 'ಬ್ರಹ್ಮವಿದಾಪ್ನೋತಿ' ಎಂಬ ವಾಕ್ಯದಲ್ಲಿ ಸಾಮಾನ್ಯತಃ ಜ್ಞಾತವಾಗಿದೆ. ಮತ್ತು ಈ ಸತ್ಯಾದಿ ವಾಕ್ಯದಲ್ಲಿ ಪುನಃ ಸತ್ಯಾದಿಶಬ್ದಗಳಿಂದ ಸತ್ಯತ್ವಾದಿ ವಿಶಿಷ್ಟವಾಗಿ ಜ್ಞಾತವಾಗಿದೆ. ಹೀಗಿರುವಾಗ ಬ್ರಹ್ಮಸ್ವರೂಪ ಜ್ಞಾನಕ್ಕೆ ವ್ಯಾವೃತ್ತಿ ಜ್ಞಾನವು ಸಾಧನ ಹೇಗಾದೀತು? ಅಭಾವ ಜ್ಞಾನಕ್ಕೆ ಅಧಿಕರಣಜ್ಞಾನವು ಕಾರಣವಾದ್ದರಿಂದ ವ್ಯಾವೃತ್ತಿಜ್ಞಾನಕ್ಕೇ ಬ್ರಹ್ಮಸ್ವರೂಪಜ್ಞಾನವು ಧರ್ಮಿಜ್ಞಾನ ರೂಪದಿಂದ ಸಾಧನವಾಗಿರುವುದರಿಂದ 'ಬ್ರಹ್ಮಸ್ವರೂಪ ಜ್ಞಾನಕ್ಕೆ ವ್ಯಾವೃತ್ತಿಜ್ಞಾನವು ಸಾಧನ' ಎನ್ನುವುದು ವಿಪರೀತವಾಗುವುದು. ಅಂದರೆ ತಿರುವು ಮುರುವಾಗುವುದು.

**ಶಾಬ್ದೇಽರ್ಥೇ ಆರ್ಥಿಕಾರ್ಥಸ್ಯ ದ್ವಾರತ್ವಾನುಪಪತ್ತೇಶ್ಚ। ನೀಲಮುತ್ಪಲಂ ಇತ್ಯಾದೇರಪಿ ಅನೀಲ ವ್ಯಾವೃತ್ತಿದ್ವಾರಾ ಸ್ವರೂಪ ಮಾತ್ರಪರತ್ವಮಿತ್ಯಾಪಾತಾಚ್ಚ।**

**ನ ಚ ಪ್ರಾಗಜ್ಞಾತೋ ವ್ಯಾವೃತ್ತ್ಯಾ ಜ್ಞಾಪ್ಯೋ ವಿಶೇಷಸ್ತ್ವನ್ಮತೇಽಸ್ತಿ।**

ಶಾಬ್ದಾರ್ಥದಲ್ಲಿ ಆರ್ಥಿಕಾರ್ಥವು ದ್ವಾರವಾಗುವುದೂ ಯುಕ್ತವಲ್ಲ. ಶುದ್ಧ ಬ್ರಹ್ಮವು ಬ್ರಹ್ಮ ಎಂಬ ಶಬ್ದದಿಂದ ಲಕ್ಷಣಯಾ ತಿಳಿದು ಬರುವುದರಿಂದ ಅದು ಶಾಬ್ದಾರ್ಥ. ಆದರಿಂದ ಅದಕ್ಕೆ

ಶಾಬ್ದಾರ್ಥವನ್ನೇ ದ್ವಾರವೆನ್ನಬೇಕು. ವ್ಯಾವೃತ್ತಿಯನ್ನಲ್ಲ. ಮೊದಲಿಗೆ ಸತ್ಯಾದಿಪದದಿಂದ ಸತ್ಯತ್ವಾದಿ ವಿಶಿಷ್ಟದ ಬೋಧನಾನಂತರವೇ ನಿರ್ಗುಣಶ್ರುತಿವಿರೋಧದಿಂದ ಅನ್ಯಥಾನುಪಪತ್ತಿಯಿಂದ ಅದನ್ನು ಪರಿತ್ಯಾಗ ಮಾಡಿ ವ್ಯಾವೃತ್ತಿಯನ್ನು ಕಲ್ಪಿಸಬೇಕು. ಅದರಿಂದ ಅದು ಅಶಾಬ್ದ. ಏಕೆಂದರೆ 'ಯಶ್ಚ ಅರ್ಥಾದರ್ಥೋ ನ ಸ ಚೋದನಾರ್ಥಃ' ಎಂದು ಮೀಮಾಂಸಾನ್ಯಾಯವಿದೆ. ಆರ್ಥಿಕಾರ್ಥ ವಾಗಿರುವ ವ್ಯಾವೃತ್ತಿಯು ಶಾಬ್ದಾರ್ಥ ಪ್ರತೀತ್ಯನಂತರ ಭಾವಿಯಾದ್ದರಿಂದ ಅದು ಶಾಬ್ದಾರ್ಥ ಬ್ರಹ್ಮಸ್ವರೂಪ ಬೋಧನದಲ್ಲಿ ದ್ವಾರವಾಗದು.

ಹೀಗೆ ವ್ಯಾವೃತ್ತಿಯು ಬ್ರಹ್ಮಸ್ವರೂಪ ಬೋಧನೆಗೆ ದ್ವಾರವೆಂದರೆ, 'ನೀಲಮುತ್ಪಲಂ' 'ಕಮಲವು ನೀಲವರ್ಣದ್ದಾಗಿದೆ' ಎಂಬ ವಾಕ್ಯದಲ್ಲಿಯೂ ನೀಲಶಬ್ದವು ನೀಲತ್ವಸಂಸರ್ಗ ಬೋಧಕವಾದರೂ ಅನೀಲವ್ಯಾವೃತ್ತಿ ಬೋಧನದ್ವಾರಾ ಉತ್ಪಲ ಸ್ವರೂಪಮಾತ್ರ ಬೋಧನಪರ ವಾಗುವುದರಿಂದ ಅಖಂಡಾರ್ಥಪರವೆಂದಾದೀತು.

ಬ್ರಹ್ಮಸ್ವರೂಪಜ್ಞಾನಕ್ಕೆ ವ್ಯಾವೃತ್ತಿಯು ದ್ವಾರವೆಂದರೆ ಬ್ರಹ್ಮಸ್ವರೂಪದಲ್ಲಿ ಹಿಂದೆ ತಿಳಿಯದಿದ್ದ ವಿಶೇಷ ಒಂದು, ವ್ಯಾವೃತ್ತಿಯಿಂದ ತಿಳಿದುಬರುತ್ತದೆ ಎನ್ನಬೇಕಾಗುತ್ತದೆ. ಇಲ್ಲದಿದ್ದರೆ ಸ್ವರೂಪಮಾತ್ರವು ಹಿಂದೆ ತಿಳಿದಿದ್ದೇ. ಅದಕ್ಕೆ ದ್ವಾರ ಬೇಕಾಗಿಲ್ಲ. ಅದರಿಂದ ಹಿಂದೆ ತಿಳಿಯದಿದ್ದು, ವ್ಯಾವೃತ್ತಿದ್ವಾರಾ ಅನಂತರ ತಿಳಿದುಬರುವ ವಿಶೇಷ ಒಂದು ಬ್ರಹ್ಮನಲ್ಲಿ ಬೇಕು. ಅದು ನಿನ್ನ ಮತದಲ್ಲಿಲ್ಲ.

**'ನ ಚ ಪ್ರಾಗ್ ಬ್ರಹ್ಮಣೋ ಜ್ಞಾನೇಽಪಿ ಅನ್ಯಾವಿಷಯಕಂ ತಜ್ಜ್ಞಾನಮಸಿದ್ಧಂ ಇತಿ ವಾಚ್ಯಂ। ವ್ಯಾವೃತ್ತಿಜ್ಞಾನಸ್ಯ ಅನ್ಯಾಜ್ಞಾನೇ ದ್ವಾರತ್ವಾಪತ್ತ್ಯಾ ಬ್ರಹ್ಮಜ್ಞಾನೇ ದ್ವಾರತ್ವಾ ಯೋಗಾತ್। ವ್ಯಾವರ್ತ್ಯಜ್ಞಾನಂ ವ್ಯಾವೃತ್ತಿಜ್ಞಾನೇ ದ್ವಾರಮಿತಿ ವೈಪರೀತ್ಯಾಪಾತಾಚ್ಚ। ಪ್ರಾಚೀನೇ ಬ್ರಹ್ಮಾಜ್ಞಾನ ನಿವರ್ತಕೇ ಬ್ರಹ್ಮಾಪರೋಕ್ಷಜ್ಞಾನೇ ತದಜ್ಞಾನಕಾರ್ಯಸ್ಯಾನ್ಯಸ್ಯ ಭಾನಾಯೋಗಾಚ್ಚ। ಬ್ರಹ್ಮ ಪ್ರಾತಿಪದಿಕಾರ್ಥ ಬಭುತ್ಸಾಯಾಂ ಏತದ್‌ವಾಕ್ಯಂ ಪ್ರವೃತ್ತಮಿತಿ ಸ್ವಪ್ರಕ್ರಿಯಾವಿರೋಧಾಚ್ಚ।'**

'ದ್ವಾರಭೂತ ವ್ಯಾವೃತ್ತಿ ಬೋಧನಕ್ಕಿಂತ ಹಿಂದೆ ಬ್ರಹ್ಮಜ್ಞಾನ ಬಂದಿದ್ದರೂ ಅದು ಸಪ್ರಕಾರಕವಾಗಿತ್ತು. ಅದರಲ್ಲಿ ಅಧ್ಯಾಸಾಧಿಷ್ಠಾನತ್ವಾದಿ ಅನ್ಯವೂ ವಿಷಯವಾಗಿತ್ತು. ಅನ್ಯ ಅವಿಷಯಕವಾದ ನಿಷ್ಪ್ರಕಾರಕ ಜ್ಞಾನ ಬಂದಿರಲಿಲ್ಲ. ಅದಕ್ಕೆ ವ್ಯಾವೃತ್ತಿಯು ದ್ವಾರವಾಗಿ ಅಪೇಕ್ಷಿತ ವಾಗಿದೆ' ಎಂದರೆ ಅದೂ ಸರಿಯಲ್ಲ. ಅನ್ಯಾವಿಷಯಕಜ್ಞಾನಕ್ಕೆ ವ್ಯಾವೃತ್ತಿಯು ದ್ವಾರವೆಂದರೆ ಜ್ಞಾನದಲ್ಲಿ ಅನ್ಯ ಕಾಣಿಸಬಾರದು. ಅನ್ಯವು ಅಜ್ಞಾತವಾಗಿರಬೇಕು ಬ್ರಹ್ಮಮಾತ್ರ ಜ್ಞಾತವಾಗಿರಬೇಕು ಎಂದಂತಾಗುವುದರಿಂದ ವ್ಯಾವೃತ್ತಿಯು ಅನ್ಯಾಜ್ಞಾನಕ್ಕೇ ದ್ವಾರವೆಂದಂತಾಗುವುದು. ಅನ್ಯಜ್ಞಾನ ಪ್ರತಿಬಂಧದ್ವಾರಾ ಬ್ರಹ್ಮಜ್ಞಾನಕ್ಕೇ ದ್ವಾರ ಎಂಬ ಸಿದ್ಧಾಂತಕ್ಕೆ ಇದು ವಿರುದ್ಧವಾಗುವುದು. ಏಕೆಂದರೆ,

ವಿಶೇಷಣವಾದ ಅನ್ಯಜ್ಞಾನಪ್ರತಿಬಂಧದಲ್ಲಿಯೇ ಅದು ಕ್ಷೀಣಶಕ್ತಯಾಗುವುದರಿಂದ ವಿಶೇಷ್ಯವಾದ ಬ್ರಹ್ಮಜ್ಞಾನದಲ್ಲಿಯೂ ಅದು ದ್ವಾರವೆನಿಸಲಾರದು.

ಹೀಗಾಗಿ ವ್ಯಾವೃತ್ತಿಜ್ಞಾನವು ವ್ಯಾವರ್ತ್ಯಸ್ವರೂಪ ಜ್ಞಾನಕ್ಕೆ ದ್ವಾರವಲ್ಲ, ವ್ಯಾವರ್ತ್ಯ ಸ್ವರೂಪಜ್ಞಾನವೇ ಅಧಿಕರಣಜ್ಞಾನರೂಪದಿಂದ ವ್ಯಾವೃತ್ತಿ ಜ್ಞಾನಕ್ಕೆ ಕಾರಣವಾಗುವುದರಿಂದ ದ್ವಾರವೆಂದರೆ ತಪ್ಪಾಗಲಾರದು.

ವ್ಯಾವೃತ್ತಿ ಜ್ಞಾನವು ವಿಶಿಷ್ಟ ಜ್ಞಾನದಿಂದಲೇ ಬರುವುದರಿಂದ ಅದಕ್ಕೆ ಸ್ವರೂಪ ಜ್ಞಾನದ ಆವಶ್ಯಕತೆ ಇಲ್ಲ ಎನ್ನುವುದಾದರೆ, ಸ್ವರೂಪಜ್ಞಾನವೂ ಅಧ್ಯಾಸಾಧಿಷ್ಠಾನತಯಾ ಮೊದಲೇ ಬಂದಿರುವುದರಿಂದ ಅದಕ್ಕೆ ವ್ಯಾವೃತ್ತಿಜ್ಞಾನದ ಅಪೇಕ್ಷೆ ಇಲ್ಲ ಎನ್ನಲು ಬರುತ್ತದೆ ತಾನೆ?

**ವಿಶೇಷಾಂಶ—** 'ವ್ಯಾವೃತ್ತಿಜ್ಞಾನಂ ವ್ಯಾವೃತ್ತ್ಯಜ್ಞಾನೇ ದ್ವಾರಮಿತಿ ವೈಪರೀತ್ಯಾಪಾತಾಚ್ಚ।' ಎಂದು ಆಮೋದಕ್ಕೆ ಸಮ್ಮತವಾದ ನ್ಯಾಯಾಮೃತ ಮೂಲಪಾಠ. ಕಂಟಕೋದ್ಧಾರಕ್ಕೂ ಇದೇ ಪಾಠ ಸಮ್ಮತ. ಇದರ ಅಭಿಪ್ರಾಯ ಹೀಗೆ—'ಹಿಂದೆ ಬಂದಿದ್ದ ಬ್ರಹ್ಮಜ್ಞಾನದಲ್ಲಿ ಅನ್ಯವೂ ವಿಷಯವಾಗಿತ್ತು. ಅನ್ಯಾವಿಷಯಕ ಬ್ರಹ್ಮಜ್ಞಾನ ಬೇಕಾಗಿದೆ. ವ್ಯಾವೃತ್ತಿಜ್ಞಾನವು ಅನ್ಯವಿಷಯ ಪ್ರತಿಬಂಧದ್ವಾರಾ ಅನ್ಯವಿಷಯಕವಾಗದ ಕೇವಲ ಬ್ರಹ್ಮಜ್ಞಾನಕ್ಕೆ ಕಾರಣ' ಎಂದು ಅದ್ವೈತಿ ಹೇಳುತ್ತಾನೆ. ವ್ಯಾವೃತ್ತಿಯೂ ಅನ್ಯಪದಾರ್ಥ. ಅದರಿಂದ ಅದು ತನಗೆ ತಾನೇ ಪ್ರತಿಬಂಧಕ ವಾಗುವುದು. ವ್ಯಾವೃತ್ತಿಜ್ಞಾನವು ವ್ಯಾವೃತ್ತಿಯ ಅಜ್ಞಾನಕ್ಕೆ ಕಾರಣವೆಂದರೆ ಇದು ವಿಪರೀತ, ಲೋಕವಿರುದ್ಧ!

ವ್ಯಾವೃತ್ತಿ ಜ್ಞಾನಕ್ಕಿಂತ ಮೊದಲಿಗೆ ಸತ್ಯತ್ವಾದಿ ವಿಶಿಷ್ಟಜ್ಞಾನವೇ ವಿಚಾರದಿಂದ ಬ್ರಹ್ಮಪರವೆಂದು ಸಿದ್ಧವಾಗಿರುವ ಸತ್ಯಾದಿ ವಾಕ್ಯದಿಂದ ಬಂದಿರುತ್ತದೆ. ಬ್ರಹ್ಮಾಜ್ಞಾನ ನಿವೃತ್ತಿಗೆ ಅದನ್ನು ಬಿಟ್ಟು ಇನ್ನೊಂದು ಅಪ್ರಾಮಾಣಿಕವಾದ ನಿಷ್ಪ್ರಕಾರಕ ಜ್ಞಾನವನ್ನು ಕಲ್ಪಿಸಿ ಅದರಲ್ಲಿ ವಿಚಾರ ಜನ್ಯತ್ವಾದಿ ಕಲ್ಪನ ಮಾಡುವುದು ಯುಕ್ತವಲ್ಲ. ಅದರಿಂದ ವಿಶಿಷ್ಟಜ್ಞಾನವೇ ಬ್ರಹ್ಮಾಜ್ಞಾನ ನಿವರ್ತಕವಾದ ಬ್ರಹ್ಮಾಪರೋಕ್ಷ ಎಂದು ಒಪ್ಪಬೇಕು. ಅಜ್ಞಾನ ನಿವರ್ತಕವಾದ ಆ ಅಪರೋಕ್ಷಜ್ಞಾನದಲ್ಲಿ ಅಜ್ಞಾನ ಕಲ್ಪಿತವಾದ ಸತ್ಯತ್ವಾದಿ ಅನ್ಯವಿಷಯಗಳ ಭಾನ ಅಸಂಭವ. ಅದರಿಂದ ಅದೇ ಅನ್ಯಾವಿಷಯಕ ಜ್ಞಾನ. ಅದು ವ್ಯಾವೃತ್ತಿ ಜ್ಞಾನ ಸಾಧ್ಯವಲ್ಲ.

'ಬ್ರಹ್ಮಪ್ರಾತಿಪದಿಕಾರ್ಥ ಮಾತ್ರವನ್ನು ತಿಳಿಯುವ ಇಚ್ಛೆ ಮುಮುಕ್ಷುವಿಗೆ ಬಂದಾಗ ಅದನ್ನು ತಿಳಿಸಲು ಸತ್ಯಾದಿ ವಾಕ್ಯ ಹೊರಟಿದೆ' ಎಂದು ಅದ್ವೈತಪ್ರಕ್ರಿಯೆ. ಅದಕ್ಕೆ ವಿರುದ್ಧವಾಗಿ ಪ್ರಶ್ನೆ–ಉತ್ತರಗಳು ವ್ಯಧಿಕರಣವಾಗುವಂತೆ ಈಗ 'ಸತ್ಯಾದಿ ವಾಕ್ಯ ಸತ್ಯತ್ವಾದಿ ವಿಶಿಷ್ಟ ಜ್ಞಾನದ್ವಾರಾ ವ್ಯಾವೃತ್ತಿ ಜ್ಞಾನವನ್ನು ಉಂಟುಮಾಡುತ್ತದೆ, ವ್ಯಾವೃತ್ತಿ ಜ್ಞಾನವು ಅನ್ಯಾಜ್ಞಾನಕ್ಕೆ ಕಾರಣವಾಗುತ್ತದೆ' ಎಂದು ಹೇಳಿದರೆ ಸ್ವಪ್ರಕ್ರಿಯಾವಿರೋಧ. ಮತ್ತು 'ಸತ್ಯಾದಿವಾಕ್ಯವು ಬ್ರಹ್ಮಸ್ವರೂಪಮಾತ್ರ

ಬೋಧಕ'ವೆನ್ನುತ್ತಿದ್ದಾನೆ. ಸ್ವರೂಪಜ್ಞಾನವಿಲ್ಲದೆ ಸ್ವರೂಪದ ಬಗ್ಗೆ ತಿಳಿಯುವ ಇಚ್ಛೆಬಾರದು. ಎಂದಮೇಲೆ, ಸ್ವರೂಪಜ್ಞಾನವನ್ನು ಉಂಟುಮಾಡುವ ಮೂಲಕ ತಿಳಿಯುವ ಇಚ್ಛೆಗೇ ಸತ್ಯಾದಿವಾಕ್ಯವು ಕಾರಣವೆಂದಂತಾಗುವುದು ಹೊರತು ತಿಳಿಯುವ ಇಚ್ಛೆಬಂದಾಗ ತಿಳಿಸಲು ಈ ವಾಕ್ಯ ಹೊರಟಿಲ್ಲ ಎಂದಾಗುವುದು. ಇದು ಸ್ವಪ್ರಕ್ರಿಯಾಕ್ಕೇ ವಿರುದ್ಧವಾಗಿದೆ.



**किंच सत्यशब्देनासद्व्यावृत्तिद्वारा यद्बोधितं तदेव ज्ञानादिपदेनाज्ञानादिव्यावृत्तिद्वारा बोध्यतेऽन्यद्वा? आद्ये ज्ञानादिपदवैयर्थ्यम् । द्वितीये सविशेषत्वम् ।**

**नच द्वारविकल्पः, सत्यादिशब्दानां नित्यवच्छ्रवणात् । एकस्मिन्प्रयोगे व्रीहियवयोरिवैकस्मिन्वाक्ये सत्याद्यनेकपदोपादानायोगाच्च । अनृतत्वादिभ्रांतिनिवृत्तिरूपदृष्टकार्याणां भिन्नत्वेन व्रीहियवादिवद्विकल्पप्रयोजकस्यैककार्यत्वस्याभावाच्च ।**

**नापि समुचितद्वारत्वं । ''विज्ञानमानंदं ब्रह्म'' इत्यादौ अनृतव्यावृत्तेरबोधनेऽपि ब्रह्मप्रतीतेः । ''आनंदादयः प्रधानस्य'' इतिसूत्रे त्वद्भाष्योक्तन्यायेनोपासनायां शाखांतरोक्तगुणोपसंहारेऽपि ब्रह्मप्रमितौ वाक्यस्य शाखांतरानपेक्षत्वाच्च ।**

**सत्यादिपदानां प्रत्येकं लक्षकत्वेन प्रत्येकं लक्ष्यब्रह्मबोधकत्वाच्च । सत्यत्वादेः प्रत्येकं लक्षणत्वाच्च । नहि प्रकृष्टत्वादिकमिव सत्यत्वादिकं प्रत्येकमतिव्याप्तं। तस्मान्न व्यावृत्तिर्द्वारम् ।**

**एतेन चंद्रं शाखेव ब्रह्म व्यावृत्तिर्द्वारतया बोधयतीति निरस्तम्।**

किंच व्यावृत्तीनां विकल्पेन द्वारत्वं उत समुच्चयेनेति विकल्प्याद्यं दूषयति– **नचेति** ।। दूषणांतरमाह— **एकस्मिन्निति** ।। एकजातीयकार्यजनकत्वरूपस्य विकल्पप्रयोजनस्याभावाच्च। नापि विकल्पसंभव इत्याह– **अनृतत्वादीति** ।। द्वितीयं निराह–**नापीति** ।। ननु विज्ञानादिवाक्यं गुणोपसंहारन्यायेन शाखांतरगतसत्यत्वाद्युपसंहारेणैव स्वार्थबोधकमिति नोक्तदोष इत्यत आह— **आनंदादय इति**।।

उपासनायां तदुपसंहारेऽपि वाक्यस्य निराकांक्षत्वेनात्र तदुपसंहारे प्रमाणाभाव इति भावः ।। **एतेनेति** ।। अनृतादिव्यावृत्तेः द्वारात्वायोगेनेत्यर्थः ।



**'ಕಿಂಚ ಸತ್ಯಶಬ್ದೇನ ಅಸದ್‌ವ್ಯಾವೃತ್ತಿ ದ್ವಾರಾ ಯದ್ ಬೋಧಿತಂ ತದೇವ ಜ್ಞಾನಾದಿಪದೇನ ಅಜ್ಞಾನಾದಿ ವ್ಯಾವೃತ್ತಿದ್ವಾರಾ ಬೋಧ್ಯತೇ, ಅನ್ಯದ್ವಾ? ಆದ್ಯೇ ಜ್ಞಾನಾದಿ ಪದವೈಯರ್ಥ್ಯಂ। ದ್ವಿತೀಯೇ ಸವಿಶೇಷತ್ವಂ। ನಚ ದ್ವಾರವಿಕಲ್ಪಃ, ಸತ್ಯಾದಿಶಬ್ದಾನಾಂ, ನಿತ್ಯವತ್ ಶ್ರವಣಾತ್। ಏಕಸ್ಮಿನ್ ಪ್ರಯೋಗೇ ವ್ರೀಹಿಯವಯೋರಿವ, ಏಕಸ್ಮಿನ್ ವಾಕ್ಯೇ ಸತ್ಯಾದ್ಯನೇಕಪದೋಪಾದಾನಾಯೋಗಾಚ್ಚ। ಅನೃತತ್ವಾದಿ ಭ್ರಾಂತಿನಿವೃತ್ತಿರೂಪ ದೃಷ್ಟ ಕಾರ್ಯಾಣಾಂ ಭಿನ್ನತ್ವೇನ ವ್ರೀಹಿಯವಾದಿವತ್ ವಿಕಲ್ಪಪ್ರಯೋಜಕಸ್ಯ ಏಕಕಾರ್ಯತ್ವಸ್ಯಾ ಭಾವಾಚ್ಚ।'**

ಸತ್ಯ ಶಬ್ದದಿಂದ ಅಸದ್‌ವ್ಯಾವೃತ್ತಿದ್ವಾರಾ ಯಾವುದು ಬೋಧಿತವಾಗುವುದೋ ಅದನ್ನೇ ಜ್ಞಾನಾದಿಪದಗಳು ಅಜ್ಞಾನಾದಿ ವ್ಯಾವೃತ್ತಿದ್ವಾರಾ ಬೋಧಿಸುವುವೋ ಅಥವಾ ಬೇರೆ ವಿಷಯಗಳನ್ನು ಬೋಧಿಸುವುವೊ? ಅದನ್ನೇ ಬೋಧಿಸುತ್ತವೆ ಎನ್ನುವ ಮೊದಲಿನ ಪಕ್ಷದಲ್ಲಿ ಜ್ಞಾನಾದಿ ಪದಗಳು ವ್ಯರ್ಥ.

ಬೇರೆ ವಿಷಯಗಳನ್ನು ಬೋಧಿಸುತ್ತವೆ ಎನ್ನುವ ಎರಡನೇ ಪಕ್ಷದಲ್ಲಿ ಏಕಪ್ರಾತಿಪದಿಕಾರ್ಥ ಮಾತ್ರ ಪರತ್ವರೂಪ ಅಖಂಡಾರ್ಥತ್ವಕ್ಕೆ ಹಾನಿ. ಬೇರೆ ವಿಷಯಗಳಿಂದ ಯುಕ್ತವಾಗುವುದರಿಂದ ಸವಿಶೇಷತ್ವವೇ ಸಖಂಡಾರ್ಥತ್ವವೇ ಪ್ರಾಪ್ತವಾಗುತ್ತದೆ.

'ದ್ವಾರಗಳ ವಿಕಲ್ಪ ಅಂದರೆ ಸ್ವರೂಪಜ್ಞಾನಕ್ಕೆ ಸತ್ಯಪದವು ಅನೃತವ್ಯಾವೃತ್ತಿದ್ವಾರಾ ಕಾರಣವಾಗಬಹುದು. ಅಥವಾ ಜ್ಞಾನಪದವು ಅಜ್ಞಾನ ವ್ಯಾವೃತ್ತಿದ್ವಾರಾ ಕಾರಣವಾಗಬಹುದು ಎಂದು ವಿಕಲ್ಪ. ಆದರಿಂದ ಏಕಪ್ರಾತಿಪದಿಕಾರ್ಥ ಮಾತ್ರ ಪರತ್ವಕ್ಕೆ ಹಾನಿ ಇಲ್ಲ' ಎಂದರೆ ಅದೂ ಸರಿಯಲ್ಲ. ಏಕೆಂದರೆ, 'ಸತ್ಯಂ ವಾ ಜ್ಞಾನಂ ವಾ ಬ್ರಹ್ಮ' ಎಂದು ವಿಕಲ್ಪ ಸೂಚಕವಾದ ವಾಕಾರಪ್ರಯೋಗವಿಲ್ಲದೆ ನಿತ್ಯದಂತೆ ಸತ್ಯಾದಿ ಪದಪ್ರಯೋಗ ಕಾಣುತ್ತದೆ.

ವ್ರೀಹ್ಯನುಷ್ಠಾನದಲ್ಲಿ ವ್ರೀಹಿಯನ್ನು, ಯವಾನುಷ್ಠಾನದಲ್ಲಿ ಯವವನ್ನು ವೇದ ಹೇಳುತ್ತದೆ ಹೊರತು ಒಂದು ಅನುಷ್ಠಾನದಲ್ಲಿ ವ್ರೀಹಿಯವಗಳೆರಡನ್ನೂ ಜೊತೆಯಾಗಿ ಹೇಳುವುದಿಲ್ಲ. ಇದು ವಿಕಲ್ಪ. ಹಾಗೇ ವೇದಾಂತದಲ್ಲಿ ಸತ್ಯಂ ಬ್ರಹ್ಮ, ಜ್ಞಾನಂ ಬ್ರಹ್ಮ, ಅನಂತಂ ಬ್ರಹ್ಮ ಎಂದು ಒಂದು ವಾಕ್ಯದಲ್ಲಿ ಸತ್ಯಾದಿಗಳಲ್ಲಿ ಯಾವುದಾದರೂ ಒಂದು ಪದವನ್ನು ಹೇಳಬೇಕಿತ್ತು. ಮೂರೂ ಪದಗಳನ್ನು ಒಂದು ಸತ್ಯಾದಿ ವಾಕ್ಯದಲ್ಲಿ ಹೇಳಿದರೆ ಅದು ವಿಕಲ್ಪವಾಗುವುದಿಲ್ಲ.

ಸತ್ಯಪದಕ್ಕೆ ಅನೃತತ್ವಭ್ರಾಂತಿ ನಿವೃತ್ತಿಯು ಕಾರ್ಯ. ಜ್ಞಾನಪದಕ್ಕೆ ಅದಕ್ಕಿಂತ

ವಿಜಾತೀಯವಾದ ಅಜ್ಞಾನತ್ವಭ್ರಾಂತಿ ನಿವೃತ್ತಿಯು ಕಾರ್ಯ. ಹೀಗೆ ಬೇರೆಬೇರೆ ಬಗೆಯ ಕಾರ್ಯಗಳೇ ಇರುವಾಗ ವಿಕಲ್ಪ ಕೂಡುವುದೂ ಇಲ್ಲ. ವ್ರೀಹಿಯವಗಳಿಗೆ ಏಕಜಾತೀಯವಾದ ಯಾಗ ನಿಷ್ಪಾದನ ರೂಪವಾದ ಕಾರ್ಯ ಇದೆ. ಆದರಿಂದ ವಿಕಲ್ಪ. ಸತ್ಯಾದಿಪದಗಳಿಗೆ ವಿಕಲ್ಪ ಪ್ರಯೋಜಕವಾದ ಏಕಜಾತೀಯ ಕಾರ್ಯಕಾರಿತ್ವವಿಲ್ಲ. 'ಏಕಾರ್ಥಾಸ್ತು ವಿಕಲ್ಪೇರನ್'(ಜೈ.ಸೂತ್ರ. 12.3.10) ಎಂಬ ಜೈಮಿನಿ ಸೂತ್ರದಲ್ಲಿ ಏಕಜಾತೀಯಕಾರ್ಯಕಾರಿಗಳಿಗೇ ವಿಕಲ್ಪ ಎನ್ನಲಾಗಿದೆ.

**ನಾಪಿ ಸಮುಚ್ಚಿತ ದ್ವಾರತ್ವಂ। 'ವಿಜ್ಞಾನಮಾನಂದಂ ಬ್ರಹ್ಮ' ಇತ್ಯಾದೌ ಅನೃತವ್ಯಾವೃತ್ತೇರಬೋಧನೇऽಪಿ ಬ್ರಹ್ಮಪ್ರತೀತೇಃ। ಆನಂದಾದಯಃ ಪ್ರಧಾನಸ್ಯ (ಬ್ರ.ಸೂ.3.3.12) ಇತಿ ಸೂತ್ರೇ ತ್ವದ್ಭಾಷ್ಯೋಕ್ತನ್ಯಾಯೇನ ಉಪಾಸನಾಯಂ ಶಾಖಾಂತರೋಕ್ತಗುಣೋಪಸಂಹಾರೇऽಪಿ ಬ್ರಹ್ಮಪ್ರಮಿತೌ ವಾಕ್ಯಸ್ಯ ಶಾಖಾಂತರಾನಪೇಕ್ಷತ್ವಾಚ್ಚ।'**

'ಸತ್ಯಾದಿ ಪದಬೋಧ್ಯವಾದ ವ್ಯಾವೃತ್ತಿಗಳೆಲ್ಲವೂ ಜೊತೆಗೂಡಿ ಸಮುಚ್ಚಿತವಾಗಿ ಬ್ರಹ್ಮಸ್ವರೂಪಬೋಧನದಲ್ಲಿ ದ್ವಾರವಾಗುವುವು. ಆದರಿಂದ ಪದಾಂತರ ವೈಯರ್ಥ್ಯವಿಲ್ಲ' ಎನ್ನುವ ಸಮುಚ್ಚಯ ಪಕ್ಷವೂ ಸಮಂಜಸವಲ್ಲ.

'ವಿಜ್ಞಾನಮಾನಂದಂ ಬ್ರಹ್ಮ' (ಬೃ.ಉ.5.9.28) ಇತ್ಯಾದಿ ಬೃಹದಾರಣ್ಯಕ ವಾಕ್ಯಗಳಲ್ಲಿ ತೈತ್ತಿರೀಯಶಾಖೋಕ್ತ ಅನೃತವ್ಯಾವೃತ್ತಿಯು ಬ್ರಹ್ಮಸ್ವರೂಪ ಬೋಧನದಲ್ಲಿ ದ್ವಾರವಾಗಿಲ್ಲ. ಅಲ್ಲಿ ಸತ್ಯಾದಿ ಪದವಿಲ್ಲ. ಸತ್ಯಾದಿ ವಾಕ್ಯದಲ್ಲಿ ಆನಂದ ಪದವಿಲ್ಲ ದುಃಖ ವ್ಯಾವೃತ್ತಿಬೋಧವಿಲ್ಲ. ಆದರೂ ಬ್ರಹ್ಮಪ್ರತೀತಿ ಇದೆ.

'ಆನಂದಾದಯಃ ಪ್ರಧಾನಸ್ಯ' ಸೂತ್ರದ ಅದ್ವೈತಭಾಷ್ಯಪ್ರಕಾರ ಗುಣೋಪಸಂಹಾರ ನ್ಯಾಯದಿಂದ ಪುರುಷಪ್ರಯತ್ನಸಾಧ್ಯವಾದ ಉಪಾಸನೆಯಲ್ಲಿ ಶಾಖಾಂತರಗತ ಸತ್ಯತ್ವಾದ್ಯುಪಸಂಹಾರ ವಿದ್ದರೂ, ಪುರುಷಪ್ರಯತ್ನಸಾಧ್ಯವಲ್ಲದ ಶಾಬ್ದಬೋಧದಲ್ಲಿ ವಾಕ್ಯವು ನಿರಾಕಾಂಕ್ಷವಾದ್ದರಿಂದ ಬ್ರಹ್ಮವನ್ನು ಬೋಧಿಸುವಲ್ಲಿ ವಾಕ್ಯಕ್ಕೆ ಶಾಖಾಂತರದ ಅಪೇಕ್ಷೆಯಿಲ್ಲ. ವಿಶೇಷ್ಯ ಮಾತ್ರ ಪ್ರತೀತಿಯು ಲಕ್ಷಣಯಾ ಒಂದು ಪದದಿಂದಲೂ ಸಾಧ್ಯ.

**'ಸತ್ಯಾದಿವಾಕ್ಯಾನಾಂ ಪ್ರತ್ಯೇಕಂ ಲಕ್ಷಕತ್ವೇನ ಪ್ರತ್ಯೇಕಂ ಲಕ್ಷ್ಯಬ್ರಹ್ಮ ಬೋಧಕತ್ವಾಚ್ಚ। ಸತ್ಯತ್ವಾದೇಃ ಪ್ರತ್ಯೇಕಂ ಲಕ್ಷಣತ್ವಾಚ್ಚ। ನ ಹಿ ಪ್ರಕೃಷ್ಟತ್ವಾದಿಕಮಿವ ಸತ್ಯತ್ವಾದಿಕಂ ಪ್ರತ್ಯೇಕಮತಿವ್ಯಾಪ್ತಂ। ತಸ್ಮಾತ್ ನ ವ್ಯಾವೃತ್ತಿರ್ದ್ವಾರಂ।**

**ಏತೇನ ಚಂದ್ರಂ ಶಾಖೇವ ಬ್ರಹ್ಮ ವ್ಯಾವೃತ್ತಿಃ ದ್ವಾರತಯಾ ಬೋಧಯತೀತಿ ನಿರಸ್ತಂ।'**

ಸತ್ಯಾದಿ ವಾಕ್ಯಗಳು ಸ್ವತಂತ್ರವಾಗಿ ಪ್ರತ್ಯೇಕ ಲಕ್ಷಣವಾಕ್ಯಗಳಾದ್ದರಿಂದ ಪ್ರತ್ಯೇಕವಾಗಿಯೇ ಲಕ್ಷ್ಯ ಬ್ರಹ್ಮ ಬೋಧಕವಾಗತ್ತದೆ. ಶಾಖಾಂತರಸ್ಥ ಲಕ್ಷಣವಾಕ್ಯಗಳ ಆಕಾಂಕ್ಷೆ ಅವುಗಳಿಗೆ ಇಲ್ಲ.

ಸತ್ಯತ್ವಾದಿಗಳೂ ಕೂಡ ಪ್ರತ್ಯೇಕ ಲಕ್ಷಣಗಳು. 'ಪ್ರಕೃಷ್ಟಪ್ರಕಾಶಃ ಚಂದ್ರಃ' ಎಂಬ ಚಂದ್ರಲಕ್ಷಣವಾಕ್ಯದಲ್ಲಿ ಪ್ರಕೃಷ್ಟತ್ವವು 'ಪ್ರಕೃಷ್ಟ ಜಲಾಶಯಃ ಸಮುದ್ರಃ' ಎನ್ನುವುದರಿಂದ ಅತಿವ್ಯಾಪ್ತ. ಪ್ರಕಾಶತ್ವವು ಮಿಣುಕು ಹುಳದಲ್ಲಿಯೂ ಇರುವುದರಿಂದ ಅತಿವ್ಯಾಪ್ತ. ಮಿಲಿತವಾದ ಪ್ರಕೃಷ್ಟಪ್ರಕಾಶತ್ವವು ಅಲ್ಲಿ ಅತಿವ್ಯಾಪ್ತವಲ್ಲ. ಆದರೆ ಸತ್ಯತ್ವಾದಿಗಳು ಹಾಗೆ ಪ್ರತ್ಯೇಕವಾಗಿ ಅತಿವ್ಯಾಪ್ತವಾಗಿಲ್ಲ. ಏಕೆಂದರೆ ಸತ್ಯತ್ವವು ಘಟಾದಿಗಳಲ್ಲಿರುವ ಸತ್ಯತ್ವ ವಿವಕ್ಷಿತವಲ್ಲ. ತ್ರಿಕಾಲಾಬಾಧ್ಯ ಸ್ವರೂಪತ್ವ ರೂಪ ಸತ್ಯತ್ವ ವಿವಕ್ಷಿತ. ಅದು ಬ್ರಹ್ಮನಲ್ಲಿ ಮಾತ್ರವೆ ಇದೆ. ಜ್ಞಾನತ್ವವು ವೃತ್ತಿಜ್ಞಾನದಲ್ಲಿರುವುದು ವಿವಕ್ಷಿತವಲ್ಲ. ಸ್ವಪ್ರಕಾಶತ್ವರೂಪ ಜ್ಞಾನತ್ವ ವಿವಕ್ಷಿತ. ಅದು ಬ್ರಹ್ಮನಲ್ಲಿ ಮಾತ್ರ ಇದೆ. ಹೀಗೆ ಸತ್ಯತ್ವಾದಿಗಳು ಪ್ರತ್ಯೇಕವಾಗಿ ಅತಿವ್ಯಾಪ್ತ್ಯಾದಿ ದೋಷರಹಿತ ಲಕ್ಷಣ ವಾಗಿರುವುದರಿಂದ ಸಮುಚ್ಚಿತ ದ್ವಾರತ್ವಪಕ್ಷವೂ ಕೂಡ ಸಮಂಜಸವಲ್ಲ.

ಹೀಗೆ ವ್ಯಾವೃತ್ತಿಗಳು ಪ್ರತ್ಯೇಕವಾಗಿಯೂ ದ್ವಾರವಲ್ಲ, ಸಮುಚ್ಚಿತವಾಗಿಯೂ ದ್ವಾರವಲ್ಲ ವಾದ್ದರಿಂದ ದ್ವಾರವೇ ಅಲ್ಲ.

'ಶೂನ್ಯದಲ್ಲಿ ಸತ್ಯತ್ವಾದಿಗಳಿಗೆ ಪ್ರತ್ಯೇಕವಾಗಿ ಅತಿವ್ಯಾಪ್ತಿ ಇದೆ, ಆದರಿಂದ ಸಮುಚ್ಚಯ ಪಕ್ಷವೇ ಗ್ರಾಹ್ಯ' ಎಂದರೆ ಅದೂ ಸರಿಯಲ್ಲ. ಶೂನ್ಯದಲ್ಲಿ ಸತ್ಯತ್ವಾದಿಗಳಿಗೆ ಪ್ರತ್ಯೇಕವಾಗಿಯೂ ಅತಿವ್ಯಾಪ್ತಿ, ಸಮುಚ್ಚಿತವಾಗಿಯೂ ಅತಿವ್ಯಾಪ್ತಿಯೆ. ಏಕೆಂದರೆ ಶೂನ್ಯ ಅದ್ವೈತವಾದಗಳಿಗೆ ಏನೂ ವ್ಯತ್ಯಾಸವಿಲ್ಲ.

'ಶಾಖೆಯು ದ್ವಾರವಾಗಿ ಚಂದ್ರನನ್ನು ಬೋಧಿಸುವಂತೆ ವ್ಯಾವೃತ್ತಿಯು ದ್ವಾರವಾಗಿ ಬ್ರಹ್ಮವನ್ನು ಬೋಧಿಸುತ್ತದೆ' ಎಂದು ಹೇಳುವುದೂ ಕೂಡ ಅಯುಕ್ತವೆ. ವ್ಯಾವೃತ್ತಿಯು ದ್ವಾರವಾಗುವುದಿಲ್ಲ ತಾನೆ?



एतेन सत्यत्वादिकं व्यावृत्तिर्वा ब्रह्मबोधने उपलक्षणतयोपादीयत इति निरस्तम्, काकवद् गृहमित्यादिवत् सखंडार्थत्वापत्तेः, उपलक्षणात्प्रागेव ब्रह्मणो ज्ञातत्वेनोपलक्ष्यत्वायोगाच्च । तदुक्तं-

''सत्यज्ञानादिकेऽप्येवं न व्यावृत्त्या प्रयोजनम् ।
व्यावृत्तस्याविशेषत्वे तदखंडं च खंडितम् ।।'' इति ।

व्यावृत्त्या द्वारभूतयेत्यर्थः ।

टीकायां तु व्यावृत्तिः किं ब्रह्मविशेषणत्वेन बोध्या? स्वतंत्रा

**वा? आद्ये सखंडत्वम्, अंत्ये ब्रह्मजिज्ञासुं प्रति तदुपदेशोऽसंगत इति व्याख्यातम् ।**

**नचात्र व्यावृत्तिवैशिष्ट्यस्यार्थिकत्वेन शाब्दार्थस्य न सखंडत्वं, ''यश्चार्थादर्थो न स चोदनार्थ'' इति न्यायात्, ''मानांतरादपोहस्तु न शाब्दस्तेन स स्मृत'' इति सुरेश्वरोक्तेश्चेति वाच्यम्। आर्थिकेनापि विशेषणेन ब्रह्मणोऽखंडत्वहानेः । अनंतशब्देनांतवद्व्यावृत्तेः साक्षादुक्तेश्च । शब्दस्य व्यावर्तकवैशिष्ट्यातात्पर्ये आर्थिकव्यावृत्त्यसिद्धेरुक्तत्वाच्च । एतेन**

**''लक्ष्यार्थभेदाभावेऽपि व्यवच्छेद्य विभेदतः ।**
**विज्ञानानंदपदयोः पर्यायव्यर्थते कुतः ।।''**

**इत्यानंदबोधोक्तमपास्तम् ।**

सत्यज्ञानादिवाक्यस्य व्यावृत्तिविशिष्टबोधकत्वे बाधकमाह— **तदिति ।।** टीकोक्तार्थमनुवदति— **टीकायां त्विति ।।** तामाशंक्य निराकरोति— **नचेति ।। मानांतरादिति ।।** अर्थापत्तिरूपादित्यर्थः । अपोहः व्यावृत्तिः ।। **लक्ष्यार्थेति ।।** वाच्यार्थभेदसत्त्वात् व्यावर्त्यभेदसत्त्वाच्च न पर्यायत्वव्यर्थत्वे इति भावः ।।



**ಏತೇನ 'ಸತ್ಯತ್ವಾದಿಕಂ ವ್ಯಾವೃತ್ತಿರ್ವಾ ಬ್ರಹ್ಮಬೋಧನೇ ಉಪಲಕ್ಷಣತಯಾ ಉಪಾದೀಯತೇ' ಇತಿ ನಿರಸ್ತಂ। 'ಕಾಕವದ್ ಗೃಹಂ' ಇತ್ಯಾದಿವತ್ ಸಖಂಡಾರ್ಥತ್ವಾಪತ್ತೇಃ। ಉಪಲಕ್ಷಣಾತ್ ಪ್ರಾಗೇವ ಬ್ರಹ್ಮಣೋ ಜ್ಞಾತತ್ವೇನ ಉಪಲಕ್ಷ್ಯತ್ವಾಯೋಗಾಚ್ಚ।**

ನಾನು 'ಸತ್ಯತ್ವಾದಿಗಳಾಗಲಿ ವ್ಯಾವೃತ್ತಿಯಾಗಲಿ ಬ್ರಹ್ಮನಲ್ಲಿ ವಿಶೇಷಣ'ವೆನ್ನುವುದಿಲ್ಲ. ಉಪಲಕ್ಷಣವಾಗಿ ಅವುಗಳನ್ನು ಬ್ರಹ್ಮಬೋಧನದಲ್ಲಿ ದ್ವಾರವಾಗಿ ಒಪ್ಪುತ್ತೇನೆ' ಎಂದು ಅದ್ವೈತಿ ಹೇಳುವುದೂ ಸರಿಯಲ್ಲ. 'ಕಾಕವದ್ ಗೃಹಂ' ಎಂಬಲ್ಲಿ ಕಾಕವು ಗೃಹಕ್ಕೆ ವಿಶೇಷಣವಲ್ಲ, ಉಪಲಕ್ಷಣವಾಗಿದೆ. ಆದರೂ ಅದು ಗೃಹಜ್ಞಾನದಲ್ಲಿ ಪ್ರಕಾರವಾಗಿ ಕಾಣುತ್ತದೆ. ಹಾಗೇ ಸತ್ಯತ್ವಾದಿಗಳಾಗಲಿ ವ್ಯಾವೃತ್ತಿಯಾಗಲಿ ಉಪಲಕ್ಷಣವಾದರೂ ಬ್ರಹ್ಮಜ್ಞಾನದಲ್ಲಿ ಪ್ರಕಾರವಾಗಿ ಅವಶ್ಯ ಕಾಣುತ್ತವೆ. ಆದರಿಂದ ಶ್ರುತಿಗೆ ಅಖಂಡಾರ್ಥಪರತ್ವ ಕೂಡುವುದಿಲ್ಲ. ಸಖಂಡಾರ್ಥತ್ವ ಬರುತ್ತದೆ.

ವಸ್ತುತಃ ಸತ್ಯತ್ವಾದಿಗಳು ಉಪಲಕ್ಷಣವೇ ಅಲ್ಲ. ಅವುಗಳ ಜ್ಞಾನ ಬರುವುದಕ್ಕೆ ಮೊದಲೇ ಅಧ್ಯಾಸಾಧಿಷ್ಠಾನತ್ವೇನ ಬ್ರಹ್ಮಸ್ವರೂಪವು ಜ್ಞಾತವಾಗಿರುವುದರಿಂದ ಅದು ಸತ್ಯತ್ವಾದಿ ಉಪಲಕ್ಷಣಗಳಿಂದ ಉಪಲಕ್ಷ್ಯವಾಗುವುದಿಲ್ಲ.

**ತದುಕ್ತಂ—**

**ಸತ್ಯಜ್ಞಾನಾದಿಕೇಽಪ್ಯೇವಂ ನ ವ್ಯಾವೃತ್ತ್ಯಾ ಪ್ರಯೋಜನಂ ।**
**ವ್ಯಾವೃತ್ತಸ್ಯಾವಿಶೇಷತ್ವೇ ತದಖಂಡಂ ಚ ಖಂಡಿತಂ ಇತಿ ॥**

**ವ್ಯಾವೃತ್ತ್ಯಾ ದ್ವಾರಭೂತಯಾ ಇತ್ಯರ್ಥಃ ।**

**ಟೀಕಾಯಾಂ ತು ವ್ಯಾವೃತ್ತಿಃ ಕಿಂ ಬ್ರಹ್ಮವಿಶೇಷಣತ್ವೇನ ಬೋಧ್ಯಾ, ಸ್ವತಂತ್ರಾ ವಾ? ಆದ್ಯೇ ಸಖಂಡತ್ವಂ। ಅಂತ್ಯೇ ಬ್ರಹ್ಮಜಿಜ್ಞಾಸುಂ ಪ್ರತಿ ತದುಪದೇಶೋಽಸಂಗತ ಇತಿ ವ್ಯಾಖ್ಯಾತಂ ।**

ಸ್ವರೂಪಜ್ಞಾನಕ್ಕೆ ವ್ಯಾವೃತ್ತಿಯು ದ್ವಾರವಾಗುವುದಿಲ್ಲ ಎನ್ನುವುದು ಜನ್ಮಾಧಿಕರಣದ ಅನುವ್ಯಾಖ್ಯಾನದಲ್ಲಿ ಉಕ್ತವಾಗಿದೆ— 'ಸತ್ಯಜ್ಞಾನಾದಿಕೇಽಪ್ಯೇವಂ' 'ತತ್ವಮಸಿ ವಾಕ್ಯದಂತೆ ಸತ್ಯಜ್ಞಾನಾದಿ ವಾಕ್ಯದಲ್ಲಿಯೂ ಕೂಡ ಸತ್ಯತ್ವಾದಿ 'ಹೀಗೆಯೇ' ಧರ್ಮಗಳು ಬ್ರಹ್ಮನಿಗಿಂತ ಭಿನ್ನ–ಅಭಿನ್ನ– ಭಿನ್ನಾಭಿನ್ನ ಎನ್ನುವ ಎಲ್ಲ ಪಕ್ಷಗಳಲ್ಲಿಯೂ ದೋಷವಿದೆ. ಮತ್ತು ಅನೃತಾದಿ ವ್ಯಾವೃತ್ತಿಗಳು ಬ್ರಹ್ಮನಲ್ಲಿ ವಿಶೇಷಣವೆ ಸ್ವತಂತ್ರವೆ? ವಿಶೇಷಣವೆಂದರೆ 'ತದಖಂಡಂಚ ಖಂಡಿತಂ' ಬ್ರಹ್ಮವು ಸಖಂಡವೆಂದಾಗುವುದು. 'ವ್ಯಾವೃತ್ತಸ್ಯಾವಿಶೇಷತ್ವೇ ನ ವ್ಯಾವೃತ್ತ್ಯಾ ಪ್ರಯೋಜನಂ' ಬ್ರಹ್ಮನ ಸಂಬಂಧವಿಲ್ಲದೆ ಸ್ವತಂತ್ರವಾಗಿ ಅವು ಕಂಡರೆ ಬ್ರಹ್ಮವನ್ನು ತಿಳಿಯಲು ಬಯಸುವ ಮುಮುಕ್ಷುವಿಗೆ ಅವು ಅನುಪಯುಕ್ತವಾಗುವುದರಿಂದ ಅವುಗಳನ್ನು ಶ್ರುತಿಯು ಉಪದೇಶಿಸುವುದು ಅಸಂಗತ. 'ತದಖಂಡಂ ಚ ಖಂಡಿತಂ' ವ್ಯಾವೃತ್ತವಾಗಿ ಕಾಣುವ ಬ್ರಹ್ಮ ನಿರ್ವಿಶೇಷ ಹೇಗೆ? ಅದರಿಂದ ಅಖಂಡಾರ್ಥತ್ವಹಾನಿಯೇ ಆಗುವುದು.' ಇದು ನ್ಯಾಯಸುಧಾದಲ್ಲಿ ಹೇಳಿರುವ ಅರ್ಥ.

ಇನ್ನೊಂದು ಅರ್ಥವನ್ನು ನ್ಯಾಯಾಮೃತವು ಹೇಳುತ್ತಿದೆ—'ವ್ಯಾವೃತ್ತ್ಯಾ' ಎಂದರೆ, 'ವ್ಯಾವೃತ್ತಿಯನ್ನು ಬ್ರಹ್ಮಸ್ವರೂಪ ಜ್ಞಾನದಲ್ಲಿ ದ್ವಾರವಾಗಿ ಒಪ್ಪಿದರೆ' ಅದನ್ನು ವಿಶೇಷಣವಾಗಿ ಒಪ್ಪಿದರೆ ಅಖಂಡಾರ್ಥತ್ವ ಹಾನಿಯೇ ಹೊರತು ಪ್ರಯೋಜನವೇನಿಲ್ಲ, ಉಪಲಕ್ಷಣವಾಗಿ ಒಪ್ಪಿದರೂ ಇದೇ ದೋಷ ಬರುತ್ತದೆ ಎಂದು.

**'ನ ಚಾತ್ರ ವ್ಯಾವೃತ್ತಿ ವೈಶಿಷ್ಟ್ಯಸ್ಯ ಆರ್ಥಿಕತ್ವೇನ ಶಾಬ್ದಾರ್ಥಸ್ಯ ನ ಸಖಂಡತ್ವಂ। 'ಯಶ್ಚಾರ್ಥಾದರ್ಥೋ ನ ಸ ಚೋದನಾರ್ಥಃ' ಇತಿ ನ್ಯಾಯಾತ್। 'ಮಾನಾಂತರಾದ-ಪೋಹಸ್ತು ನ ಶಾಬ್ದಸ್ತೇನ ಸ ಸ್ಮೃತಃ' ಇತಿ ಸುರೇಶ್ವರೋಕ್ತೇಶ್ಚ' ಇತಿ ವಾಚ್ಯಂ। ಆರ್ಥಿಕೇನಾಪಿ ವಿಶೇಷಣೇನ ಬ್ರಹ್ಮಣೋಽಖಂಡತ್ವ ಹಾನೇಃ। ಅನಂತ ಶಬ್ದೇನ**

**ಅಂತವದ್ವ್ಯಾವೃತ್ತೇಃ ಸಾಕ್ಷಾದುಕ್ತೇಶ್ಚ। ಶಬ್ದಸ್ಯ ವ್ಯಾವರ್ತಕವೈಶಿಷ್ಟ್ಯಾತಾತ್ಪರ್ಯೇ ಆರ್ಥಿಕವ್ಯಾವೃತ್ತ್ಯಸಿದ್ಧೇರುಕ್ತತ್ವಾಚ್ಚ।**

ಆಕ್ಷೇಪ—'ವ್ಯಾವೃತ್ತಿಯನ್ನು ಬ್ರಹ್ಮನಲ್ಲಿ ವಿಶೇಷಣವಾಗಿ ಬೋಧಿಸುವುದರಿಂದ ಬ್ರಹ್ಮ ಸಖಂಡವೆನಿಸುತ್ತದೆ' ಎನ್ನುವುದು ಸರಿಯಲ್ಲ. ಏಕೆಂದರೆ ಸತ್ಯಾದಿ ಪದಗಳಿಂದ ಶಬ್ದವೃತ್ತಿಯಿಂದ ಸತ್ಯತ್ವಾದಿ ವಿಶಿಷ್ಟವು ಬೋಧಿತವಾದರೂ ನಿರ್ಗುಣತ್ವ ಶ್ರುತಿಗೆ ವಿರುದ್ಧವಾಗುವುದರಿಂದ ಬಳಿಕ ಅರ್ಥಾಪತ್ತಿಯಿಂದ ವ್ಯಾವೃತ್ತಿಯು ಬೋಧಿತವಾಗುತ್ತದೆ. ಆದರಿಂದ ಅದು ಆರ್ಥಿಕ ಹೊರತು ಶಾಬ್ದವಲ್ಲ. ಆರ್ಥಿಕವಾದ ಈ ವ್ಯಾವೃತ್ತಿವೈಶಿಷ್ಟ್ಯವು ಶಾಬ್ದಾರ್ಥವಾದ ಬ್ರಹ್ಮಸ್ವರೂಪವನ್ನು ಸಖಂಡಗೊಳಿಸುವುದಿಲ್ಲ. 'ಯಾವುದು ಆರ್ಥಿಕಾರ್ಥವೋ ಅದು ಶಾಬ್ದಾರ್ಥವೆನಿಸುವುದಿಲ್ಲ' ಎಂದು ನ್ಯಾಯವಿದೆ ಮತ್ತು ಸುರೇಶ್ವರವಾರ್ತಿಕದಲ್ಲಿಯೂ 'ಅರ್ಥಾಪತ್ತಿರೂಪ ಪ್ರಮಾಣಾಂತರದಿಂದ ಸಿದ್ಧವಾಗುವ ವ್ಯಾವೃತ್ತಿಯು ವಾಕ್ಯಾರ್ಥವೆನಿಸುವುದಿಲ್ಲ' ಎಂದಿದೆ' ಎಂದು ಆಕ್ಷೇಪ.

ಈ ಆಕ್ಷೇಪ ಸರಿಯಲ್ಲ. ವ್ಯಾವೃತ್ತಿಯು ಶಬ್ದವೃತ್ತಿಯಿಂದ ಸಿದ್ಧವಾಗದೆ ಅರ್ಥಾಪತ್ತಿರೂಪ ಪ್ರಮಾಣಾಂತರದಿಂದ ಸಿದ್ಧವಾಗಿದೆ ಎಂದ ಮಾತ್ರಕ್ಕೆ ಅದು ಅಖಂಡಾರ್ಥತ್ವಕ್ಕೆ ಹಾನಿಕರವಲ್ಲ ಎನ್ನುವಂತಿಲ್ಲ. ಏಕೆಂದರೆ ಅದು ಶಾಬ್ದಜ್ಞಾನದಲ್ಲಿ ಬ್ರಹ್ಮನಿಗೆ ವಿಶೇಷಣವಾಗಿ ಕಾಣದಿರಬಹುದು. ಜ್ಞಾನವು ನಿಷ್ಪ್ರಕಾರಕವಾಗಿರಬಹುದು. ಆದರೆ ವಸ್ತುತಃ ಆರ್ಥಿಕವಾದ ಆ ವಿಶೇಷಣವು ಬ್ರಹ್ಮನಿಗೆ ವಿಶೇಷಣವೆ ತಾನೆ? ಅದು ಬ್ರಹ್ಮಸ್ವರೂಪವನ್ನು ವಿಶಿಷ್ಟವಾಗಿಸುವುದು, ಸಖಂಡವಾಗಿಸುವುದು. ಅಂಥ ಸಖಂಡ ಬ್ರಹ್ಮಸ್ವರೂಪದ ಶಾಬ್ದಜ್ಞಾನವು ನಿಷ್ಪ್ರಕಾರಕವಾದರೂ ಸಖಂಡಾರ್ಥವಿಷಯಕವೇ ಆಗುವುದು.

ನೈಯಾಯಿಕರು ನಿರ್ವಿಕಲ್ಪಕಜ್ಞಾನವನ್ನು ಒಪ್ಪುತ್ತಾರೆ. ಆದರೆ ಅದರಲ್ಲಿ ಕಾಣುವ ವಸ್ತುಸ್ವರೂಪವನ್ನು ನಿರ್ವಿಶೇಷಣಕ, ಅಖಂಡ ಎನ್ನುವುದಿಲ್ಲ. ಏಕೆಂದರೆ ಅದೇ ವಸ್ತುಸ್ವರೂಪ ಬೇರೆ ಸವಿಕಲ್ಪಕಜ್ಞಾನದಿಂದ ಸಖಂಡವೆಂದು ಸಿದ್ಧವಾಗುವುದು.

ಸತ್ಯಾದಿ ಶಬ್ದದಿಂದ ವ್ಯಾವೃತ್ತಿ ಅರ್ಥಾಪತ್ತಿಯಿಂದಲೇ ಸಿದ್ಧವಾಗುವುದೆಂದು ಒಪ್ಪಿದರೂ 'ಅನಂತ' ಶಬ್ದದಿಂದ ಸ್ಪಷ್ಟವಾಗಿ ಶಬ್ದವೃತ್ತಿಯಿಂದಲೇ ಅಂತವದ್ವ್ಯಾವೃತ್ತಿಯು ಬೋಧಿತವಾಗುವುದರಿಂದ ಆ ವ್ಯಾವೃತ್ತಿಯು ಅಖಂಡಾರ್ಥತ್ವಕ್ಕೆ ಹಾನಿಕರವೇ ಆಗುವುದು.

'ಅನಂತೇನಾಂತವದ್ ವಸ್ತು ವ್ಯಾವೃತ್ತ್ಯೈವ ವಿಶೇಷಿತಂ'

'ಅನಂತಶಬ್ದದಿಂದ ಅಂತವದ್ವಸ್ತುವ್ಯಾವೃತ್ತಿಯಿಂದ ವಿಶಿಷ್ಟವಾಗಿಯೇ ಬ್ರಹ್ಮಸ್ವರೂಪವು ಬೋಧಿತವಾಗುವುದೆಂ'ದು ಸಾಕ್ಷಾತ್ ತೈತ್ತಿರೀಯವಾರ್ತಿಕವು ಹೇಳಿದೆ.

'ಸತ್ಯಾದಿ ಶಬ್ದಕ್ಕೆ ಸತ್ಯತ್ವಾದಿ ವ್ಯಾವರ್ತಕ ವೈಶಿಷ್ಟ್ಯದಲ್ಲಿ ತಾತ್ಪರ್ಯವಿಲ್ಲ'ವೆಂದರೆ ಆದರಿಂದ ಆರ್ಥಿಕ ವ್ಯಾವೃತ್ತಿ ಸಿದ್ಧಿಯಾಗದೆಂದೂ ಹೇಳಿದ್ದೇವೆ.

'ನ ವ್ಯಾವೃತ್ತ್ಯಾ ಪ್ರಯೋಜನಂ, ವ್ಯಾವೃತ್ತಸ್ಯಾ ವಿಶೇಷತ್ವೇ'

ಎಂಬ ಅನುವ್ಯಾಖ್ಯಾನಕ್ಕೆ 'ವ್ಯಾವೃತ್ತನಾಗುತ್ತಿರುವ ಬ್ರಹ್ಮನಿಗೆ ವಿಶೇಷಣವಾಗಿ ವ್ಯಾವರ್ತಕವನ್ನು ಹೇಳುವ ತಾತ್ಪರ್ಯ ಶಬ್ದಕ್ಕೆ ಇಲ್ಲವಾದರೆ, ವ್ಯಾವೃತ್ತಿಯಿಂದ ಪ್ರಯೋಜನವಿಲ್ಲ', ಅಂದರೆ, ವ್ಯಾವೃತ್ತಿಯನ್ನು ಸತ್ಯಾದಿ ಶಬ್ದಕ್ಕೆ ಪ್ರಯೋಜನವೆನ್ನಲು ಬರುವುದಿಲ್ಲ. ಸತ್ಯಾದಿ ಶಬ್ದದಿಂದ ಆರ್ಥಿಕವಾಗಿಯೂ ವ್ಯಾವೃತ್ತಿ ಸಿದ್ಧಿಸುವುದಿಲ್ಲ ಎಂದರ್ಥ. 'ನದ್ಯಾಂ ಘೋಷಃ' ಎಂಬಲ್ಲಿ ನದೀಶಬ್ದಕ್ಕೆ ನದಿಯಲ್ಲಿ ನದೀತ್ವವನ್ನು ಹೇಳುವ ತಾತ್ಪರ್ಯವಿದ್ದರೂ ತೀರದಲ್ಲಿ ನದೀತ್ವವನ್ನು ಹೇಳುವ ತಾತ್ಪರ್ಯವಿಲ್ಲ. ಆದರಿಂದಲೇ ತಾನೆ ಅದು ತೀರದಲ್ಲಿ ಅನದೀತ್ವವ್ಯಾವೃತ್ತಿಯನ್ನು ಹೇಳುವುದಿಲ್ಲ? ಎಂಬುದು ಸುಧಾಗ್ರಂಥದ ಆಶಯ.

ಏತೇನ—

**ಲಕ್ಷ್ಯಾರ್ಥಭೇದಾಭಾವೇऽಪಿ ವ್ಯವಚ್ಛೇದ್ಯ ವಿಭೇದತಃ ।**
**ವಿಜ್ಞಾನಾನಂದ ಪದಯೋಃ ಪರ್ಯಾಯ ವ್ಯರ್ಥತೇ ಕುತಃ ॥**

**ಇತ್ಯಾನಂದಬೋಧೋಕ್ತಮಪಾಸ್ತಂ।'**

'ಲಕ್ಷ್ಯಾರ್ಥವಾದ ಬ್ರಹ್ಮಸ್ವರೂಪದಲ್ಲಿ ಭೇದವಿಲ್ಲದಿದ್ದರೂ ವಾಚ್ಯಾರ್ಥಭೇದವಿದೆ ಮತ್ತು ವ್ಯವಚ್ಛೇದ್ಯ ಭೇದವಿದೆ. ಸತ್ಯಪದಕ್ಕೆ ಅಸತ್ಯವು ವ್ಯವಚ್ಛೇದ್ಯ. ಜ್ಞಾನಪದಕ್ಕೆ ಅಜ್ಞಾನವು ವ್ಯವಚ್ಛೇದ್ಯ. ಹೀಗೆ ವಾಚ್ಯಾರ್ಥಭೇದ ಹಾಗೂ ವ್ಯಾವರ್ತ್ಯಭೇದವಿರುವುದರಿಂದ ಸತ್ಯಾದಿ ಪದಗಳಿಗೆ ಪರ್ಯಾಯತ್ವ-ವ್ಯರ್ಥತ್ವಗಳಿಲ್ಲ' ಎಂದು ಆನಂದಬೋಧನು ಹೇಳಿದ್ದೂ ಕೂಡ ಅಯುಕ್ತ ಎಂಬುದು 'ನ ವ್ಯಾವೃತ್ತ್ಯಾ ಪ್ರಯೋಜನಂ ತದಖಂಡಂ ಚ ಖಂಡಿತಂ' ಎಂಬುದರಿಂದಲೇ ನಿರಸ್ತವಾಗಿದೆ.



## ಸತ್ಯಜ್ಞಾನಾದಿ ವಾಕ್ಯ ಲಕ್ಷಣಾ ಯುಕ್ತವಲ್ಲ

नवीनास्तु— गंभीरायां नद्यां घोष इत्यत्र गंभीरनद्योरन्योन्यमन्वयबोधानंतरं गंभीरनदीपदयोरिव समुदितानां सत्यादिपदानां लक्षकत्वान्न वैयर्थ्यम्, तत्राप्येकैकस्यैव लक्षकत्वे शक्यासंबंधिनो गंभीरनदीतीरस्याप्रतीतिप्रसंगादित्याहुः ।

तन्न । तत्र गंभीरनद्योरिवेह सत्यज्ञानयोरन्योन्यमन्वयाबोधनात् । ''सत्यं ज्ञानं'' ''विज्ञानमानंदं ब्रह्म'' इत्यादाव न्योन्यानपेक्षाणामेव सत्यादिपदानां ब्रह्मलक्षकत्वदर्शनाच्च । गंभीरपदेन गंभीरसंबंधितीरस्येव इह पदांतरेणाधिकस्यालाभाच्च । तत्रापि गंभीरनद्योरन्वयबोधानंतरं गंभीरान्वितनदीबोधके नदीपद एव लक्षणया सर्वोपपत्तौ पदद्वये एकस्या लक्षणाया लक्षणाद्वयस्य वाऽकल्प्यत्वाच्च । लक्षणापि हि पदवृत्तिः, वृत्तित्वात्, शक्तिवत् ।

एवमन्यत्राप्यूह्यम् । ''गच्छ गच्छसि चेत्कांत'' इत्यत्र तु जन्मना मृत्यनुमितिः । प्रियामृतिहेतुत्वाच्च गमनं न कार्यमित्यनुमितानुमितिरेव, न तु वाक्ये लक्षणा । अनन्यलभ्यो हि शब्दार्थः ॥

**तत्रेति** ॥ परस्परान्वयबोधसत्त्वादस्तु तत्र वाक्यस्य लक्षकत्वं इह तु तदभावान्न वाक्यलक्षणेति भावः । किंच न समुदितानां सत्यादिपदानां लक्षकत्वम् । एतत्पदासमभिव्याहृतपदांतरस्य ब्रह्मलक्षकत्वदर्शनादित्याह **सत्यं ज्ञानमिति** ॥

ननु ''गच्छ गच्छसि चेत्कांत पंथानः संतु ते शिवाः ।
ममापि जन्म तत्रैव भूयाद्यत्र गतो भवान् ॥

इति गमननिषेधः प्रतीयते । तत्प्रतीतिश्च न वाक्यलक्षणामंतरेण संभवति । इतरपदवैयर्थ्यप्रसंगेन पदानां प्रत्येकं लक्षकत्वायोगादित्याशंक्याह— **गच्छ गच्छसि**

**चेदिति ।।** तत्र हि जन्मप्रतीत्या प्रियामरणमनुमाय तत्र च स्वगमनस्य हेतुत्वं प्रत्येति । ततश्च गमनं न कर्तव्यमित्यनुमित्या स्निग्धो नायको न गंतुमुद्युङ्क्त इति भावः । लक्षणयैव गमनाभावप्रतीत्युपपत्तौ किमेवं कल्पनयेत्याशंक्याह– **अनन्यलभ्यो हीति ।।**



**ನಲೀನಾಸ್ತು—ಗಂಭೀರಾಯಾಂ ನದ್ಯಾಂ ಘೋಷ ಇತ್ಯತ್ರ ಗಂಭೀರನದ್ಯೋಃ ಅನ್ಯೋನ್ಯಂ ಅನ್ವಯಭೋದಾನಂತರಂ ಗಂಭೀರನದೀಪದಯೋರಿವ ಸಮುದಿತಾನಾಂ ಸತ್ಯಾದಿಪದಾನಾಂ ಲಕ್ಷಕತ್ವಾನ್ನ ವೈಯರ್ಥ್ಯಂ । ತತ್ರಾಪಿ ಏಕೈಕಸ್ಯೈವ ಲಕ್ಷಕತ್ವೇ ಶಕ್ಯಾಸಂಬಂಧಿಸೋ ಗಂಭೀರ ನದೀ ತೀರಸ್ಯ ಅಪ್ರತೀತಿ ಪ್ರಸಂಗಾದಿತ್ಯಾಹುಃ ।**

ವಾಕ್ಯಲಕ್ಷಣಾಪಕ್ಷದಲ್ಲಿ ದ್ವಾರಭೂತ ಅವಾಂತರ ವಾಕ್ಯಾರ್ಥ ಬೋಧಕ್ಕೆ ಅನೇಕ ಪದಗಳು ಬೇಕು. ಉದಾ: 'ಗಭೀರಾಯಾಂ ನದ್ಯಾಂ ಘೋಷಃ' ಆಳವಾದ ನದಿಯಲ್ಲಿ ಗೊಲ್ಲರಹಳ್ಳಿ. ಇಲ್ಲಿ 'ಗಭೀರ'ಪದ 'ನದೀ'ಪದಗಳಿಂದ 'ಆಳವಾದ ನದಿ' ಎಂದು ಮೊದಲಿಗೆ ಅವಾಂತರ ಅನ್ವಯಬೋಧ ಬಂದ ಬಳಿಕ 'ಗಭೀರ' 'ಆಳವಾದ' 'ನದಿ' ಎಂಬ ಆ ಎರಡು ಪದ ಸಮೂಹಕ್ಕೆ ವಿಶಿಷ್ಟನದೀಸಂಬಂಧಿ 'ತೀರದಲ್ಲಿ ಲಕ್ಷಣಾ. ಹೀಗಾಗಿ ವಾಕ್ಯಲಕ್ಷಣಾ ಬೇಕು. ಅದಕ್ಕೆ ದ್ವಾರವಾಗಿ ಅವಾಂತರಾನ್ವಯ ಬೋಧಕ್ಕಾಗಿ ಅನೇಕ ಪದಗಳೂ ಬೇಕು. ಹಾಗೇ 'ಸತ್ಯಂ ಜ್ಞಾನಂ ಅನಂತಂ ಬ್ರಹ್ಮ' ಎಂಬಲ್ಲಿಯೂ 'ಸತ್ಯ' 'ಜ್ಞಾನ' 'ಅನಂತ' ಪದಗಳಿಗೆ ಪರಸ್ಪರ ವಿಶಿಷ್ಟಾರ್ಥವಿಷಯ ಬೋಧ ಬಂದ ಬಳಿಕವೇ ಆ ಶಬ್ದಸಮೂಹಕ್ಕೆ ಸ್ವಜ್ಞಾಪ್ಯ ವಿಶಿಷ್ಟಾರ್ಥಸಂಬಂಧಿ ಅಖಂಡ ಚೈತನ್ಯದಲ್ಲಿ ಲಕ್ಷಣಾ. ಹೀಗಾಗಿ ಸತ್ಯಾದಿ ಮೂರು ಪದಗಳು ಬೇಕು. ಅವುಗಳಿಗೆ ವಿಶಿಷ್ಟಾರ್ಥಪ್ರತಿಪಾದನರೂಪ ಪ್ರಯೋಜನಗಳಿವೆ. ಸತ್ಯಪದ ಒಂದೇ ಸಾಕು ಎನ್ನುವಂತಿಲ್ಲ.

ಪದಸಮೂಹಕ್ಕೆ ಲಕ್ಷಣಾ ಮಾಡದೆ ಪ್ರತ್ಯೇಕ ಪದಕ್ಕೇ ಲಕ್ಷಣಾ ಮಾಡಿದರೆ ಉದ್ದಿಷ್ಟ ಪ್ರತೀತಿ ಬರಲಾರದು. 'ಆಳ' ಎಂಬುದರಿಂದ 'ಆಳದ ಜಲಾಶಯ ಸಂಬಂಧಿ'ಬೋಧ, 'ನದೀ' ಎಂಬುದರಿಂದ 'ನದೀಸಂಬಂಧಿ' ಬೋಧ. ಪ್ರತ್ಯೇಕವಾಗಿ ಶಕ್ಯಸಂಬಂಧಿಯಾದ 'ಆಳವಾದ ನದಿಯ ಸಂಬಂಧಿ' ತೀರದ ಬೋಧ ಪ್ರತ್ಯೇಕವಾಗಿ ಯಾವ ಪದಲಕ್ಷಣಾದಿಂದಲೂ ಬರಲಾರದು' ಎಂದು ನವೀನಮತ.

**ತನ್ನ। ತತ್ರ ಗಂಭೀರನದ್ಯೋರಿವ ಇಹ ಸತ್ಯಜ್ಞಾನಯೋಃ ಅನ್ಯೋನ್ಯಂ ಅನ್ವಯಾಬೋಧನಾತ್ ।**

ಇದು ಸರಿಯಲ್ಲ. 'ಆಳ' 'ನದಿ' ಶಬ್ದಗಳಿಗೆ ಪರಸ್ಪರ ಅನ್ವಯ[illegible] 'ಗಂಭೀರಾಯಾಂ ನದ್ಯಾಂ ಘೋಷಃ' ಎಂಬಲ್ಲಿ ಮೊದಲಿಗೆ ಅವಾಂತರ ಖಂಡವಾಕ್ಯಾರ್ಥಬೋಧ ದ್ವಾರಭೂತವಾಗಿ

ಬರುವುದರಿಂದ ಅಲ್ಲಿ ಪದಸಮೂಹರೂಪ ವಾಕ್ಯವು ಅಖಂಡವಾಕ್ಯಾರ್ಥದಲ್ಲಿ ಲಕ್ಷಕವಾಗಲಿ, ಆದರೆ ಇಲ್ಲಿ 'ಸತ್ಯಂ ಜ್ಞಾನಂ' ಎಂಬಲ್ಲಿ ಅಂಥ ಅವಾಂತರವಾಕ್ಯಾರ್ಥ ಬೋಧ ಬಾರದಿರುವುದರಿಂದ ವಾಕ್ಯಕ್ಕೆ ಲಕ್ಷಣಾ ಇಲ್ಲ.

**ಅನ್ಯೋನ್ಯಾನಪೇಕ್ಷಾಣಾಮೇವ ಸತ್ಯಾದಿಪದಾನಾಂ ಬ್ರಹ್ಮಲಕ್ಷಕತ್ವದರ್ಶನಾಚ್ಚ ।**

ಏಕೆಂದರೆ ಇಲ್ಲಿ 'ಸತ್ಯವು ಬ್ರಹ್ಮ', 'ಜ್ಞಾನವು ಬ್ರಹ್ಮ', 'ಅನಂತವು ಬ್ರಹ್ಮ' ಎಂದು ಪ್ರತಿಯೊಂದು ಪದವು ಪ್ರತ್ಯೇಕವಾಗಿ ಪರಸ್ಪರ ನಿರಪೇಕ್ಷವಾಗಿಯೇ ಬ್ರಹ್ಮಲಕ್ಷಣವನ್ನು ಹೇಳುವುದರಿಂದ ಪ್ರತ್ಯೇಕ ಬೋಧಗಳೇ ಬರುತ್ತವೆ ಹೊರತು ಅವುಗಳಿಂದ ವ್ಯತಿರಿಕ್ತವಾಗಿ ಮೂರು ಪದಗಳ ಸಮೂಹದಿಂದ ಒಂದು ಲಕ್ಷಣ ಬೋಧವು ಬರುವುದಿಲ್ಲ. ತೈತ್ತಿರೀಯದಲ್ಲಿ 'ಸತ್ಯಂ ಜ್ಞಾನಂ ಅನಂತಂ ಬ್ರಹ್ಮ' ಎಂಬಂತೆ ಬೃಹದಾರಣ್ಯಕದಲ್ಲಿ 'ವಿಜ್ಞಾನಮಾನಂದಂ ಬ್ರಹ್ಮ' ಎಂದೂ, ಬೇರೆ ಬ್ರಹ್ಮಲಕ್ಷಣ ವಾಕ್ಯವಿದೆ. ಅದು ಈ ಸತ್ಯಾದಿವಾಕ್ಯವನ್ನು ಬಿಟ್ಟು ಸ್ವತಂತ್ರವಾಗಿಯೇ ಬ್ರಹ್ಮಲಕ್ಷಕ ವಾಗುತ್ತದೆ. ಹೀಗೇ ತೈತ್ತಿರೀಯದಲ್ಲಿಯೂ ಎಲ್ಲ ಸತ್ಯಾದಿ ಮೂರೂ ಪದಗಳೂ ಸೇರಿ ಒಂದು ಲಕ್ಷಣಬೋಧವನ್ನುಂಟು ಮಾಡುವುದಿಲ್ಲ.

**ಗಂಭೀರ ಪದೇನ ಗಂಭೀರ ಸಂಬಂಧಿ ತೀರಸ್ಯೇವ ಇಹ ಪದಾಂತರೇಣ ಅಧಿಕಸ್ಯಾಲಾಭಾಚ್ಚ ।**

'ಗಂಭೀರ' ಎಂದು 'ನದಿ'ಗೆ ವಿಶೇಷಣ ಸೇರಿಸಿದಾಗ ಆಳವಾದ ನದಿಯ ಸಂಬಂಧವೇ ತೀರದಲ್ಲಿ ಕಾಣುತ್ತದೆ. 'ಆಳ' ಎಂದು ಗಂಭೀರಪದವು ಹೇಳುವುದರಿಂದ ತೀರದಲ್ಲಿ ಆಳವಾದ ನದಿಯ ತೀರವೆಂದು ಆ ವಿಶೇಷಣ ಅಧಿಕವಾಗಿ ಕಾಣುತ್ತದೆ.

ಇಲ್ಲಿ ಹೀಗೆ ಆಕ್ಷೇಪಿಸಬಹುದು—'ಒಂದು ಪದಕ್ಕೆ ಯುಗಪತ್ ವೃತ್ತಿದ್ವಯ ಅನ್ಯಾಯ. ಗಂಭೀರ ಪದಕ್ಕೆ ಶಕ್ತಿವೃತ್ತಿಯಿಂದ 'ಗಂಭೀರತ್ವ' ಬೋಧಕತ್ವವಿರುವಾಗಲೇ ಲಕ್ಷಣಾವೃತ್ತಿಯಿಂದಲೂ 'ಗಂಭೀರನದೀಸಂಬಂಧಿ' ಬೋಧಕತ್ವವು ಸರಿಯಲ್ಲ' ಎಂದು. ಆದರೆ 'ನದ್ಯಾಂ ಘೋಷಃ' ಎಂಬಲ್ಲಿಯೇ ನದೀಶಬ್ದಕ್ಕೆ ಲಕ್ಷಣಯಾ ನದೀತೀರಬೋಧಕತ್ವವಿರುವಾಗ ಶಕ್ಯಾನದೀಬೋಧಕತ್ವವೂ ಕೂಡ ಇದೆ. ವಿರೋಧವಿಲ್ಲ. ಶಕ್ಯಾ ನದೀಬೋಧಕತ್ವವಿರುವುದರಿಂದಲೇ ಲಕ್ಷಣಯಾ ನದೀತೀರ ಬೋಧಕತ್ವ. ಆದರಿಂದ ಯುಗಪತ್ ವೃತ್ತಿದ್ವಯ ಅನ್ಯಾಯವಲ್ಲ. ಕೇವಲ 'ನದ್ಯಾಂ ಘೋಷಃ' ಎಂದರೆ, ಗಂಭೀರವೆಂದು ವಿಶೇಷಣ ಸೇರಿಸದಿದ್ದರೆ, ಅಧಿಕಾರ್ಥವು ಪ್ರತೀತಿಯಲ್ಲಿ ಕಾಣುವುದಿಲ್ಲ. ವಿಶೇಷಣ ಸೇರಿಸಿದರೆ ಅಧಿಕಾರ್ಥ ತೋರುತ್ತದೆ. ಆದರೆ ಸತ್ಯಾದಿ ವಾಕ್ಯದಲ್ಲಿ ಜ್ಞಾನಪದಿಂದ ಏನು ಅಖಂಡ ಬೋಧಬರುವುದೋ ಅದೇ ಬೋಧವು ಸತ್ಯಪದ ಸೇರಿದಾಗಲೂ ಬರುತ್ತದೆ. ಹೆಚ್ಚಿಗೆ ಏನೂ ತಿಳಿಯುವುದಿಲ್ಲ. ಆದರಿಂದ ಈ ವಾಕ್ಯದಲ್ಲಿ ಬ್ರಹ್ಮ ಎಂಬ ಒಂದು ಪದವೆ ಅಖಂಡಬೋಧವನ್ನು ಉಂಟುಮಾಡುವಾಗ ಉಳಿದ ಸತ್ಯಾದಿಪದಗಳೆಲ್ಲವೂ ವ್ಯರ್ಥ.

**ತತ್ರಾಪಿ ಗಂಭೀರನದ್ಯೋರನ್ವಯಬೋಧಾನಂತರಂ ಗಂಭೀರಾನ್ವಿತನದೀಬೋಧಕೇ ನದೀಪದೇ ಏವ ಲಕ್ಷಣಯಾ ಸರ್ವೋಪಪತ್ತೌ ಪದದ್ವಯೇ ಏಕಸ್ಯಾ ಲಕ್ಷಣಾಯಾ ಲಕ್ಷಣಾದ್ವಯಸ್ಯ ವಾ ಅಕಲ್ಪ್ಯತ್ವಾಚ್ಚ ।**

ವಸ್ತುತಃ 'ಗಭೀರಾಯಾಂ ನದ್ಯಾಂ ಘೋಷಃ' ಎಂಬಲ್ಲಿ 'ಗಭೀರ' 'ನದೀ' ಪದಗಳಿಗೆ ಅನ್ವಯಬೋಧ ಬಂದ ಬಳಿಕ ಗಭೀರನದೀ ಬೋಧಕವಾದ ನದೀಪದಕ್ಕೇ ಗಭೀರನದೀ ಸಂಬಂಧಿ ತೀರದಲ್ಲಿ ಲಕ್ಷಣಾ. ಗಭೀರಪದ ಆಗ ಲಕ್ಷಣಾ ಹೇತುವಾದ ತಾತ್ಪರ್ಯಕ್ಕೆ ಜ್ಞಾಪಕಮಾತ್ರ. ಹೀಗೆ ಹೇಳಿದಾಗ ಗಭೀರಪದಕ್ಕೆ ವೈಯರ್ಥ್ಯವು ಬರುವುದಿಲ್ಲ. ಸಾರ್ಥಕ್ಯದೃಷ್ಟಿಯಿಂದ 'ಗಭೀರ' 'ನದೀ' ಪದಗಳೆರಡಕ್ಕೂ ಸೇರಿ ಒಂದು ಲಕ್ಷಣಾ ಎಂದೂ ಎನ್ನುವುದಿಲ್ಲ, ಎರಡು ಬೇರೆಬೇರೆ ಲಕ್ಷಣೆಗಳೆಂದೂ ಹೇಳುವುದಿಲ್ಲ. ಹಾಗೆ ಹೇಳುವುದು ಬೇಕಾಗಿಲ್ಲ.

**ಲಕ್ಷಣಾಪಿ ಹಿ ಪದವೃತ್ತಿಃ । ವೃತ್ತಿತ್ವಾತ್ ಶಕ್ತಿವತ್ ।**

ಲಕ್ಷಣಾ ಎಂಬುದು ಪದವೃತ್ತಿಯೇ ಹೊರತು ವಾಕ್ಯವೃತ್ತಿಯಲ್ಲ. ಏಕೆಂದರೆ ಅದೂ ಕೂಡ ಶಕ್ತಿಯಂತೆ ಒಂದು ವೃತ್ತಿಯೆನಿಸಿದೆ. ಹೀಗಾಗಿ 'ವಾಕ್ಯಕ್ಕಾಗಲಿ ಪದಸಮೂಹಕ್ಕಾಗಲಿ ಲಕ್ಷಣಾವೃತ್ತಿ' ಎನ್ನುವುದು ಅಪ್ರಾಮಾಣಿಕ.

**'ಏವಮನ್ಯತ್ರಾಪ್ಯೂಹ್ಯಂ'**

'ಗಭೀರಾಯಾಂ ನದ್ಯಾಂ ಘೋಷಃ' ಇತ್ಯಾದಿ ಸ್ಥಳಗಳಲ್ಲಿ ಹೇಗೋ ಹಾಗೇ 'ಗಚ್ಛ ಗಚ್ಛಸಿ ಚೇತ್ ಕಾಂತ' ಇತ್ಯಾದಿ ಬೇರೆ ವಾಕ್ಯಲಕ್ಷಣೋದಾಹರಣ ಸ್ಥಳಗಳಲ್ಲಿಯೂ ವಾಕ್ಯೇ ಲಕ್ಷಣಾ ಇಲ್ಲ.

ಯದ್ಯಪಿ ಪದಕ್ಕೆ ಸ್ವಶಕ್ಯಸಂಬಂಧವು ಲಕ್ಷಣಾ. ವಾಕ್ಯಕ್ಕೆ ಶಕ್ತಿ ಇಲ್ಲದಿರುವುದರಿಂದ ಸ್ವಶಕ್ಯಸಂಬಂಧವು ಲಕ್ಷಣಾ ಅಲ್ಲ. ಅದರ ಬದಲು ಪದವಾಕ್ಯಗಳಿಗೆ ಸಾಧಾರಣವಾಗಿ ಸ್ವಜ್ಞಾಪ್ಯಸಂಬಂಧವನ್ನು ಅಂದರೆ ಸ್ವಬೋಧ್ಯಸಂಬಂಧವನ್ನು ಲಕ್ಷಣಾ ಎನ್ನುತ್ತೇವೆ. ಎಂದು ವಾಕ್ಯಲಕ್ಷಣಾವಾದಿಗಳು ಹೇಳಬಹುದು. ಆದರೆ 'ಸ್ವಬೋಧ್ಯ ಸಂಬಂಧ' ಎನ್ನುವುದು ಲಕ್ಷಣಾವೃತ್ತಿಯ ಲಕ್ಷಣವಾಗಲಾರದು. ಏಕೆಂದರೆ 'ಗಂಗಾಯಾಂ ಘೋಷಃ' ಎಂಬಲ್ಲಿ ಗಂಗಾ ಶಬ್ದವು ಪ್ರವಾಹವನ್ನು ಅನ್ವಯಪ್ರತಿಯೋಗಿಯಾಗಿ ಬೋಧಿಸುವುದಿಲ್ಲ. ಬೋಧಿಸಿದರೆ ಅದಕ್ಕೆ ಘೋಷಪದದಿಂದ ಅನ್ವಯಕೂಡುವುದಿಲ್ಲ. ಅನ್ವಯಾನುಪಪತ್ತಿ ಇರುವುದರಿಂದ ಲಕ್ಷಣಾವೃತ್ತಿಯಿಂದ ಅದು ತೀರವನ್ನೇ ಅನ್ವಯಪ್ರತಿಯೋಗಿಯಾಗಿ ಬೋಧಿಸುತ್ತದೆ. ತೀರವೇ ಸ್ವಬೋಧ್ಯ. ತೀರದಸಂಬಂಧ ತೀರದಲ್ಲಿ ಎನ್ನಲಾಗುವುದಿಲ್ಲ. ಹೀಗಾಗಿ ಈ ಲಕ್ಷಣಕ್ಕೆ ಅವ್ಯಾಪ್ತಿದೋಷವಿದೆ.

ಅನ್ವಯಾನುಪಪತ್ತಿಯಿಂದ ಪದಲಕ್ಷಣಾದಂತೆ ತಾತ್ಪರ್ಯಾನುಪಪತ್ತಿಯಿಂದ ವಾಕ್ಯಲಕ್ಷಣಾವನ್ನೂ ಒಪ್ಪಬೇಕು ಎಂದು ವಾದವಿದೆ. ಇದಕ್ಕೆ ಉದಾಹರಣೆ—

ಗಚ್ಛ ಗಚ್ಛಸಿ ಚೇತ್ ಕಾಂತ ಪಂಥಾನಃ ಸಂತು ತೇ ಶಿವಾಃ ।
ಮಮಾಪಿ ಜನ್ಮ ತತ್ರೈವ ಭೂಯಾದ್ ಯತ್ರ ಗತೋ ಭವಾನ್ ॥

'ಹೇ ಕಾಂತ! ನೀನು ಹೋಗಲೇಬೇಕಾಗಿದೆ ಎಂದರೆ ಹೋಗು. ನಿನ್ನ ಪ್ರಯಾಣ ಸುಖಕರವಾಗಲಿ. ನೀನೆಲ್ಲಿಗೆ ಹೋಗುತ್ತಿರುವೆಯೋ ಅಲ್ಲಿಯೇ ನನಗೆ ಇನ್ನು ಪುನರ್ಜನ್ಮ ಬರಲಿ'

ಇಲ್ಲಿ ನಾಯಿಕೆಯ ಈ ಮಾತಿನ ಅರ್ಥ, 'ನೀನು ನನ್ನನ್ನು ಬಿಟ್ಟುಹೋದರೆ ನನಗೆ ಮರಣ ನಿಶ್ಚಿತ. ಆದರಿಂದ ಹೋಗಬೇಡ.' ಎಂದು. ಇದು ನೇರವಾದ ಅರ್ಥವಲ್ಲ, ವಾಕ್ಯವು ಲಕ್ಷಣಾವೃತ್ತಿಯಿಂದ ತಿಳಿಸುವ ಅರ್ಥ. ಆದರಿಂದ ವಾಕ್ಯಲಕ್ಷಣಾ ಅಪ್ರಾಮಾಣಿಕವಲ್ಲ, ಎನ್ನುತ್ತಾರೆ. ಶಬ್ದಾರ್ಥಕ್ಕಿಂತ ಬೇರೆ ತಾತ್ಪರ್ಯಾರ್ಥವೂ ಉಂಟೆನ್ನುತ್ತಾರೆ ಮೀಮಾಂಸಕರು.

ವಸ್ತುತಃ ತಾತ್ಪರ್ಯಜ್ಞಾನವೆಲ್ಲಿಯೂ ಲಕ್ಷಣಾವೃತ್ತಿಗೆ ಹೇತುವಲ್ಲ. ಅನ್ವಯಾನುಪತ್ತಿಯೊಂದೇ ಲಕ್ಷಣಾಕ್ಕೆ ಹೇತು. ವಕ್ತೃ ಆಪ್ತನಾಗಿದ್ದರೆ ಅವನು ಆಡುವ ಮಾತಿನಲ್ಲಿ ಅನ್ವಯ ಕಾಣದಿದ್ದಾಗ ಈತ ಆಪ್ತನಾಗಿರುವುದರಿಂದ ಅನನ್ವಿತವಾಗಿ ಮಾತನಾಡಲಾರ, ಆದರಿಂದ ಪರಿಶೇಷದಿಂದ ಅವನಿಗೆ ಲಕ್ಷಣಾ ವಿವಕ್ಷೆ ಇದೆ ಎನ್ನುವುದು ತಿಳಿಯುವುದು. ಇದು 'ಗಂಗಾಯಾಂ ಘೋಷಃ' ಮುಂತಾದ ಸ್ಥಳದಲ್ಲಿ ಕಂಡಿದೆ. ಪ್ರಕೃತ 'ಗಚ್ಛ' ಹೋಗು ಎಂದರೆ 'ಹೋಗಬೇಡ' ಎಂದು ವಿಪರೀತಲಕ್ಷಣಾ ಮಾಡಿದರೆ ಅದಕ್ಕೆ ಮುಂದೆ ಶ್ಲೋಕದಲ್ಲಿ ಅನ್ವಯ ಕಾಣುವುದಿಲ್ಲ. ಮತ್ತು ಇದು ಇಡೀ ಶ್ಲೋಕಕ್ಕೆ ಲಕ್ಷಣಾ ಆಗುವುದೂ ಇಲ್ಲ, 'ಗಚ್ಛ' ಎಂಬಲ್ಲಿ ಆಖ್ಯಾತ ಪ್ರತ್ಯಯವು ಪ್ರಾರ್ಥನಾರ್ಥಕವಾಗಿದ್ದು ಶಕ್ಯಾರ್ಥಬೋಧಕವೇ ಆಗಿದೆ.

ವಸ್ತುತಃ ಇದು ಲಕ್ಷಣೆಯೇ ಅಲ್ಲ. 'ಅನನ್ಯ ಲಭ್ಯಃ ಶಬ್ದಾರ್ಥಃ' ಅನುಮಾನಾದಿ ಬೇರೆ ಪ್ರಮಾಣಗಳಿಂದ ಸಿಗದೇ ಇರುವ ಅರ್ಥವನ್ನು ಮಾತ್ರ 'ಶಬ್ದಾರ್ಥ' ಶಬ್ದ ಲಭ್ಯವಾದ ಅರ್ಥ ಎಂದು ಸ್ವೀಕರಿಸಬೇಕು. ಇಲ್ಲದಿದ್ದರೆ ಅಪೂರ್ವತಾಭಂಗ. 'ಬೆಟ್ಟದಲ್ಲಿ ಹೊಗೆ ಇದೆ' ಎಂದರೆ 'ಹೊಗೆ' ಶಬ್ದಕ್ಕೆ 'ಬೆಂಕಿ' ಎಂಬ ಅರ್ಥದಲ್ಲಿ ಲಕ್ಷಣಾಮಾಡಿ ಆ ಶಬ್ದದಿಂದ 'ಬೆಟ್ಟದಲ್ಲಿ ಬೆಂಕಿ' ಇದೆ ಎಂದು ನಾವು ತಿಳಿಯುವುದಿಲ್ಲ. ನೇರವಾಗಿ 'ಹೊಗೆ ಇರುವುದರಿಂದ ಬೆಂಕಿ ಇದೆ' ಎಂದು ಅನುಮಾನವನ್ನೇ ಮಾಡುತ್ತೇವೆ.

**'ಗಚ್ಛ ಗಚ್ಛಸಿ ಚೇತ್ ಕಾಂತೇ'ತ್ಯತ್ರ ತು—**

**ಜನ್ಮನಾ ಮೃತ್ಯನುಮಿತಿಃ । ಪ್ರಿಯಾಮೃತಿಹೇತುತ್ವಾಚ್ಚ ಗಮನಂ ನ ಕಾರ್ಯಮಿತಿ ಅನುಮಿತಾನುಮಿತಿರೇವ । ನತು ವಾಕ್ಯೇ ಲಕ್ಷಣಾ । ಅನನ್ಯ ಲಭ್ಯೋ ಹಿ ಶಬ್ದಾರ್ಥಃ ।**

ಪ್ರಕೃತದಲ್ಲಿಯೂ ನಾಯಕಿಯು ಹೇಳುವ 'ಪುನರ್ಜನ್ಮ'ದಿಂದ ಅವಳ ಮರಣವಾಗುವುದನ್ನು ನಾಯಕ ಅನುಮಾನದಿಂದ ತಿಳಿದು, ಈ ಮರಣಕ್ಕೆ ತನ್ನ ಗಮನವೇ ಹೇತುವೆಂದೂ ತಿಳಿಯುತ್ತಾನೆ. 'ತನಗೆ ಪ್ರಿಯಳಾದ ನಾಯಕಿಯ ಮರಣಕ್ಕೆ ಹೇತುವಾಗಬಲ್ಲ ಈ ಗಮನ ನನಗೆ ಉಚಿತವಲ್ಲ' ಎಂದೂ ಅನುಮಾನ ಮಾಡುತ್ತಾನೆ.

ಯದ್ಯಪಿ ವಾಕ್ಯಲಕ್ಷಣಾವಾದಿಗಳು ಹೇಳಬಹುದು—ನಾಯಕನ ಗಮನವೇ ನಾಯಕಿಯ ಮರಣಕ್ಕೆ ಹೇತುವೆಂದು ಅನುಮಾನ ಶಕ್ಯವಿಲ್ಲ. ಅವಳ ಮರಣ ರೋಗಾದಿ ಅನ್ಯಕಾರಣಗಳಿಂದಲೂ

ಆಗಬಹುದು. ಮತ್ತು ತನ್ನ ಗಮನ ನಾಯಕಿಯ ಮರಣಕ್ಕೆ ಕಾರಣವಾಗುವುದೆಂದು ತಿಳಿದರೂ ನಾಯಕನು ಗುರೂಪದೇಶದಿಂದಾಗಲಿ ವೈರಾಗ್ಯಾದಿ ವೈಯಕ್ತಿಕ ಕಾರಣಗಳಿಂದಾಗಲಿ ಗಮನದಲ್ಲಿಯೇ ಪ್ರವೃತ್ತಿ ಮಾಡಬಹುದು. ಹೀಗೆ ವ್ಯಭಿಚರಿತವಾದ ಹೇತುಗಳಿಂದ ಅನುಮಿತಿ ಕೂಡುವುದಿಲ್ಲ. ಅನ್ಯಲಭ್ಯವಾಗದಿದ್ದರಿಂದ ಗಮನನಿಷೇಧವು ಶಬ್ದಾರ್ಥವಾಗಬಹುದು' ಎಂದು.

ಆದರೆ ನಾಯಕಿಗೆ ರೋಗಾದಿ ಇತರ ಮರಣಕಾರಣಗಳಿಲ್ಲವೆಂದು ತಿಳಿದಿರುವ ನಾಯಕ, ನಾಯಕಿಯ ಪುನರ್ಜನ್ಮಕ್ಕೆ ಮರಣವೇ ಕಾರಣ, ಆವಳ ಮರಣಕ್ಕೆ ತನ್ನ ಗಮನವೇ ಕಾರಣವೆಂದು ಊಹಿಸಬಹುದು. ಗುರೂಪದೇಶಾದಿ ಕಾರಣಗಳಿಲ್ಲದಿದ್ದಾಗ, ನಾಯಕಿಯ ಮರಣಕ್ಕೆ ಕಾರಣವಾಗಬಲ್ಲ ಗಮನದಲ್ಲಿ ನಾಯಕ ಪ್ರವೃತ್ತಿಮಾಡದಿರಬಹುದು. ಅಥವಾ 'ಪ್ರೀತಿಯ ನಾಯಕಿಯ ಮರಣಾದಿಗಳಿಗೆ ಹೇತುವಾಗಬಲ್ಲ ತನ್ನ ಗಮನಾದಿ ಪ್ರವೃತ್ತಿ ವಿವೇಕಿಯಾದ ತನಗೆ ಶೋಭಿಸುವುದಿಲ್ಲ' ಎಂದು ನಾಯಕ ಅನುಮಾನ ಮಾಡಬಹುದು. ಹೀಗೆ ಇದು ಅನುಮಿತಾನುಮಿತಿಯೇ ಹೊರತು ವಾಕ್ಯಲಕ್ಷಣಾ ಅಲ್ಲ. ಅನುಮಾನಾದಿ ಅನ್ಯಪ್ರಮಾಣಗಳಿಂದ ಲಭ್ಯವಾಗದ ಅರ್ಥವನ್ನೇ ಶಬ್ದಪ್ರಮಾಣದಿಂದ ಲಭ್ಯವೆನ್ನಬೇಕು ತಾನೆ?



**विषं भुंक्ष्वेत्यादावपि प्रकृताच्छत्रुगृहभोजनात् विषभक्षणस्येष्टसाधनतोक्त्या भोजनस्यानिष्टसाधनता आक्षिप्यते । न तु वाक्येन भोजनाकर्तव्यता लक्ष्यते । यद्वा तत्र विषशब्देनानिष्टसाधने विधिप्रत्ययेन च निषेधे लक्षिते, निषेध्ये भोजने भुजिधातुर्मुख्य एवेति न सर्वपदानामेकार्थलक्षकता ।**

ननु विषं भुंक्ष्वेत्यत्र शत्रुगृहभोजनाकर्तव्यताप्रतीतिर्नोक्तविधानुमानेन, लिंगाभावात् । नापि प्रत्येकपदलक्षणया, विशिष्टार्थालाभात् । तथाच वाक्ये एव लक्षणावश्यकीत्याशंक्याह— **विषं भुङ्क्ष्वेति** ।। नीरपानप्रस्तावे क्षीरं पिबेत्यत्र नीरपानस्यानिष्टसाधनत्वप्रतीतावप्यनिष्टसाधनत्वेन प्रमितस्य विषभक्षणस्येष्टसाधनत्वोक्त्या एतदपेक्षयापि वैरिगृहभोजनस्यानिष्टसाधनत्वमाक्षिप्यत इत्यर्थः । ननु लक्षणाबीजानुपपत्त्यैव यद्यर्थसिद्धिः गंगायामित्यत्रापि लक्षणा न स्यादित्यत आह– **यद्वेति** ।। तथा चानिष्टसाधनत्वात्प्रकृतशत्रुगृहभोजनं न कर्तव्यमिति तात्पर्यतोऽवगम्यत इति भावः ।



**'ವಿಷಂ ಭುಂಕ್ಷ್ವ' ಇತ್ಯಾದಾವಪಿ ಪ್ರಕೃತಾತ್ ಶತ್ರುಗೃಹಭೋಜನಾತ್ ವಿಷಭಕ್ಷಣಸ್ಯ ಇಷ್ಟಸಾಧನತೋಕ್ತ್ಯಾ ಭೋಜನಸ್ಯ ಅನಿಷ್ಟಸಾಧನತಾ ಆಕ್ಷಿಪ್ಯತೇ। ನ ತು ವಾಕ್ಯೇನ ಭೋಜನ-ಅಕರ್ತವ್ಯತಾ ಲಕ್ಷ್ಯತೇ।**

'ವಿಷಂ ಭುಂಕ್ಷ್ವ' 'ವಿಷವನ್ನು ತಿನ್ನು' ಎಂಬಲ್ಲಿ ಶತ್ರುಗೃಹ ಭೋಜನ ಅಕರ್ತವ್ಯವೆಂದು ಪ್ರತೀತವಾಗುತ್ತವೆ. ಆದರೆ ಇದು ಹಿಂದೆ ಹೇಳಿದಂತೆ ಅನುಮಾನದಿಂದ ತಿಳಿಯುವುದಿಲ್ಲ. ಏಕೆಂದರೆ ಅನುಮಾನಕ್ಕೆ ಬೇಕಾದ ಹೇತುವಿಲ್ಲ. ಎಂದರೆ ಹೇಳುತ್ತಾರೆ—ನೀರು ಕುಡಿಯಲು ಹೊರಟವನಿಗೆ ಹಾಲು ಕುಡಿ ಎಂದರೆ ನೀರು ಕುಡಿಯುವುದು ಹಾಲು ಕುಡಿಯುವಷ್ಟು ಇಷ್ಟಸಾಧನವಲ್ಲವೆಂದು ತಿಳಿಯುತ್ತದೆ. ಆದರೆ ಅನಿಷ್ಟಸಾಧನವೆಂದೇ ಪ್ರಸಿದ್ಧವಾದ ವಿಷವನ್ನು ತಿನ್ನೆಂದು ಹೇಳಿದಾಗ ಶತ್ರುಗೃಹ ಭೋಜನವು ವಿಷಭಕ್ಷಣಕ್ಕಿಂತಲೂ ಅಧಿಕ ಅನಿಷ್ಟಸಾಧನ ಎಂದಂತಾಗುವುದು, ಇದು ಆಕ್ಷೇಪಲಭ್ಯ ಹೊರತು ವಾಕ್ಯದಿಂದ ಶತ್ರುಗೃಹ ಭೋಜನ ಅಕರ್ತವ್ಯವೆಂದು ತಿಳಿಯುವುದಿಲ್ಲ.

ಇಲ್ಲಿ ಹೀಗೆ ಆಕ್ಷೇಪ ಬರುತ್ತದೆ, ಅನಿಷ್ಟಸಾಧನವೆಂದು ಪ್ರಸಿದ್ಧವಾದ ವಿಷಭಕ್ಷಣವನ್ನು ಇಷ್ಟಸಾಧನವೆಂದು ಹೇಳಿದ್ದು ಅನುಪಪನ್ನ. ಈ ಅನುಪಪತ್ತಿ ಲಕ್ಷಣಾಬೀಜ. ಗಂಗಾಯಾಂ ಘೋಷಃ ಎಂಬಲ್ಲಿ ಗಂಗಾಪ್ರವಾಹದಲ್ಲಿ ಹಳ್ಳಿ ಎಂದುದು ಅನುಪಪನ್ನ. ಈ ಅನುಪಪತ್ತಿಯಿಂದ 'ಗಂಗಾ' ಪದಕ್ಕೆ ಗಂಗಾತೀರದಲ್ಲಿ ಲಕ್ಷಣಾ ಮಾಡುತ್ತೇವೆ. ಈಗ ಈ ಅನುಪಪತ್ತಿಯಿಂದಲೆ ವಿಷಭಕ್ಷಣ ಅಕರ್ತವ್ಯ ಎನ್ನುವ ಅಭಿಪ್ರಾಯ ಆಕ್ಷೇಪದಿಂದ ಲಭ್ಯವಾಗುತ್ತದೆ ಎಂದು ನೀವು ಹೇಳಿದರೆ, ಗಂಗಾಯಾಂ ಘೋಷಃ ಎಂಬಲ್ಲಿಯೂ ಪ್ರವಾಹಕ್ಕೆ ಘೋಷಾಧಾರತ್ವಾನುಪಪತ್ತಿಯಿಂದ ತೀರಕ್ಕೆ ಘೋಷಾಧಾರತ್ವವು ಆಕ್ಷೇಪಲಭ್ಯವೆಂದೇಕೆ ಹೇಳಬಾರದು? ಲಕ್ಷಣಾಕ್ಕೆ ಬೀಜಭೂತವಾದ ಅನುಪಪತ್ತಿಯಿಂದಲೆ ವಿವಕ್ಷಿತಾರ್ಥ ಸಿದ್ಧಿಯಾಗುವಾಗ ಅಲ್ಲಿ ಲಕ್ಷಣಾ ಏಕೆ ಎಂದು ಕೇಳುತ್ತೇವೆ ಎಂದು.

ಇದು ಸರಿಯಲ್ಲ. 'ಮುಖ್ಯಾರ್ಥಾನುಪಪತ್ತಿಯಿಂದಲೇ ಆಕ್ಷೇಪಲಭ್ಯ ಹೊರತು ಲಕ್ಷಣಾಕ್ಕೆ ಅಲ್ಲಿ ಅವಕಾಶವಿಲ್ಲ' ಎನ್ನುವುದು ನಮ್ಮ ಅಭಿಪ್ರಾಯವಲ್ಲ. ಇಲ್ಲಿಯೂ ವಿಷಶಬ್ದಕ್ಕೂ ತಿನ್ನು ಎಂಬಲ್ಲಿರುವ ವಿಧಿಗೂ ಲಕ್ಷಣಾ ಮಾಡುವುದು ನ್ಯಾಯವೆ.

**ಯದ್ವಾ ತತ್ರ ವಿಷಶಬ್ದೇನ ಅನಿಷ್ಟಸಾಧನೇ, ವಿಧಿಪ್ರತ್ಯಯೇನ ಚ ನಿಷೇಧೇಲಕ್ಷಿತೇ ನಿಷೇಧ್ಯೇ ಭೋಜನೇ ಭುಜಿಧಾತುಃ ಮುಖ್ಯ ಏವ ಇತಿ ನ ಸರ್ವಪದಾನಾಂ ಏಕಾರ್ಥಲಕ್ಷಕತಾ।**

ಅಥವಾ 'ವಿಷ' ಎಂದರೆ ಲಕ್ಷಣಯಾ ಅನಿಷ್ಟಸಾಧನವಾದ ಅನ್ನವೆಂದರ್ಥ. ವಿಧಿಗೆ ಲಕ್ಷಣಯಾ ನಿಷೇಧ ಅರ್ಥ. ನಿಷೇಧ್ಯವಾದ ಭೋಜನದಲ್ಲಿ ಭುಜಿಧಾತು ಮುಖ್ಯವೆ. ಆದಕ್ಕೆ ಲಕ್ಷಣಾ ಮಾಡುವುದು ಬೇಡ. ಹೀಗಾಗಿ 'ಅನಿಷ್ಟ ಸಾಧನವಾದ್ದರಿಂದ ಶತ್ರು ಗೃಹಾನ್ನವನ್ನು ಉಣಬೇಡ'

ಎಂದರ್ಥ. ಆದರೂ ಇಲ್ಲಿ ಅಮುಖ್ಯಾರ್ಥದಲ್ಲಿ ಎಲ್ಲ ಪದಗಳಿಗ. ಅಂದರೆ ವಾಕ್ಯಕ್ಕೆ ಲಕ್ಷಣಾ ಇಲ್ಲ. 'ಸತ್ಯಜ್ಞಾನಾದಿ ವಾಕ್ಯಕ್ಕೆ, ಅಂದರೆ ಆದರಲ್ಲಿರುವ ಎಲ್ಲ ಪದಗಳಿಗೆ ಲಕ್ಷಣಯಾ ಬೋಧಕತ್ವ ವಿದೆಯಾದ್ದರಿಂದ ಯಾವ ಪದವೂ ವ್ಯರ್ಥವಲ್ಲ' ಎಂದು ಅದ್ವೈತಿ ಹೇಳುವುದು ಯುಕ್ತವಲ್ಲ.



**वस्तुतस्त्वयमिदानीं मह्यं क्रुद्धः, आप्तत्वे सति प्रमाण-विरुद्धकर्तव्यताभिधायित्वात् । क्रोधश्चास्य संनिहितभोजनादेव । दृष्टहेतुत्यागेनादृष्टकल्पनायोगात् । अतो मयेदं न कार्यमित्यनु-मितिरेवात्र, न लक्षणा । अर्धमंतर्गृहमर्धं बहिर्गृहमित्यत्रापि धूमेनाग्निरिवार्धस्यांतस्त्वे सति अर्धस्य बहिष्ट्वेन वाक्यार्थे-नांतरालप्रदेश आक्षिप्यते । नतु समुदाये लक्षणा । अनन्य-लभ्यत्वाभावात् । एवमर्धमंतर्वेदि मातव्यमर्धं वहिर्वेदीति वैदिकोदाहरणमपि नेयम् । तत्राप्यंततो लिङादेरभिधायकत्वाच्च ।**

ननु प्रकृतभोजनकर्तव्यतानिषेधेनैव न कलंजं भक्षयेदित्यादाविवानिष्टसाधन-ताप्रतीतेः किं विषपदस्यानिष्टसाधनलक्षणयेत्यतः पक्षांतरमाह— **वस्तुतस्त्विति । आक्षिप्यत इति ।।** अंतरालदेशप्राप्तिं विना अर्धस्यांतस्त्वं अर्धस्य बहिष्ट्वं च नोपपद्यत इति तदाक्षेप इति भावः । नन्वेवमपि अर्धमंतर्वेदि, अर्धं बहिर्वेदि इत्यत्र वाक्ये लक्षणा न स्यात्, नचेष्टापत्तिः । तथा यूपस्य वेदिरित्यत्राग्नीषोमीयपशौ यूपं प्रकृत्य श्रूयते । अस्मिन् वाक्ये किमन्तर्वेद्येकदेशो यूपांगत्वेन चोद्यते उत बहिर्वेद्येकदेशसहितः स यूपांगमंतरालदेशं लक्षयतीति संदिह्य लक्षणाया अन्याय्यत्वादंतर्वेद्येकदेश एव विधीयते । अर्धं बहिर्वेदीत्येतत्तु अर्धस्यांतस्त्वे अर्धं बहिरेव भवतीति अनुवाद इति पूर्वपक्षयित्वा अर्धमंतर्वेदि मातव्यमित्येता-वन्मात्रविधावर्धान्तरं बहिरित्यविधानादप्रतिषेधाच्च तस्यांतर्बहिर्वा मानं स्यात् । ततश्चार्धं बहिरिति पाक्षिकानुवादो भवेदिति नित्यवच्छ्रवणविरोधः स्यात्, तस्यापि विधौ वाक्यभेदप्रसंगाच्च यत्र देशे मीयमानस्यार्धमंतरर्धं बहिश्च भवेत्तत्र मिनुयादित्युभयलक्षितांतरालदेशविधिरिति सिद्धांतितत्वेन तत्र लक्षणायाः स्वीकृ-

तत्वादित्याशंक्याह— **एवमिति ।।** नच सूत्रविरोधः । तदर्थस्य लक्षणां विनाप्युपपत्तेरिति भावः ।



ವಸ್ತುತಃ 'ನ ಕಲಂಜಂ ಭಕ್ಷಯೇತ್' ಎಂಬಲ್ಲಿ ಭಕ್ಷಣ ನಿಷೇಧದಿಂದಲೆ ಕಲಂಜಭಕ್ಷಣ ಅನಿಷ್ಟಸಾಧನವೆಂದು ಅನುಮಾನದಿಂದಲೇ ತಿಳಿಯುತ್ತದೆ. ಲಕ್ಷಣಾ ಇಲ್ಲ. ಹಾಗೇ ಪ್ರಕೃತ 'ವಿಷಂ ಭುಂಕ್ಷ್ವ' ಎಂಬಲ್ಲಿಯೂ ಅನುಮಾನದಿಂದಲೇ, ಶತ್ರು ಗೃಹಭೋಜನ ಅನಿಷ್ಟಸಾಧನವಾದ್ದರಿಂದ ಮಾಡಬಾರದೆಂದು ತಾತ್ಪರ್ಯವಿರುವುದು ತಿಳಿಯತ್ತದೆ. ಆದರಿಂದ ಲಕ್ಷಣಾ ಬೇಡ.

**ವಸ್ತುತಸ್ತು 'ಅಯಮಿದಾನೀಂ ಮಹ್ಯಂ ಕ್ರುದ್ಧಃ। ಆಪ್ತತ್ವೇ ಸತಿ ಪ್ರಮಾಣವಿರುದ್ಧ ಕರ್ತವ್ಯತಾಭಿಧಾಯಿತ್ವಾತ್ । ಕ್ರೋಧಶ್ಚಾಸ್ಯ ಸನ್ನಿಹಿತ ಭೋಜನಾದೇವ। ದೃಷ್ಟ ಹೇತುತ್ಯಾಗೇನ ಅದೃಷ್ಟಕಲ್ಪನಾಯೋಗಾತ್। ಅತೋ ಮಯೇದಂ ನ ಕಾರ್ಯಂ' ಇತ್ಯನುಮಿತಿರೇವ ಅತ್ರ । ನ ಲಕ್ಷಣಾ ।**

'ನನ್ನ ತಂದೆ ನನ್ನಲ್ಲಿ ಕುಪಿತನಾಗಿದ್ದಾನೆ. ಆದರಿಂದಲೇ ಆಪ್ತನಾಗಿದ್ದೂ ಭ್ರಮಾದಿ ರಹಿತನಾಗಿದ್ದೂ ಪ್ರಮಾಣ ವಿರುದ್ಧವಾಗಿ ವಿಷಭಕ್ಷಣವು ಕರ್ತವ್ಯವೆಂದು ನನಗೆ ಉಪದೇಶಿಸುತ್ತಿದ್ದಾನೆ. ಅವನ ಈ ಕೋಪಕ್ಕೆ ಕಾರಣವೇನಿರಬಹುದು? ನಾನು ಶತ್ರುಗೃಹ ಭೋಜನಕ್ಕೆ ಹೊರಟಿರುವುದೇ ಕಾರಣ ಹೊರತು ಬೇರೆ ಇಲ್ಲ. ದೃಷ್ಟವಾದ ಹೇತುವನ್ನು ಪರಿತ್ಯಾಗ ಮಾಡಿ ಅದೃಷ್ಟವಾದ ಬೇರೆ ಹೇತುವನ್ನು ಕಲ್ಪಿಸಿಕೊಳ್ಳುವುದು ಸರಿಯಲ್ಲ. ಆದರಿಂದ ನಾನು ಶತ್ರುಗೃಹಭೋಜನ ಮಾಡಬೇಡವೆಂದೇ ತಂದೆಯ ಮಾತಿನ ಅಭಿಪ್ರಾಯ' ಎಂದು ಅನುಮಾನ ಮಾಡುವುದು ಸಹಜ. ಲಕ್ಷಣಾ ಮಾಡುವುದಿಲ್ಲ. ಹೀಗಾಗಿ 'ವಿಷಪದಕ್ಕೆ ಅನಿಷ್ಟಸಾಧನತ್ವದಲ್ಲಿ ಲಕ್ಷಣಾ, ವಿಧಿಗೆ ನಿಷೇಧಲಕ್ಷಣಾ ಎಂದು ಎರಡು ಪದಗಳಿಗೆ ಎರಡು ಲಕ್ಷಣಾ ಮಾಡುವುದಕ್ಕಿಂತ ಒಂದು ವಾಕ್ಯಕ್ಕೆ ಶತ್ರುಗೃಹಭೋಜನ ಅಕರ್ತವ್ಯವೆಂದು ಒಂದು ಲಕ್ಷಣಾ ಮಾಡಿದರೇ ಲಾಘವವಲ್ಲವೆ?' ಎಂಬ ಆಕ್ಷೇಪಕ್ಕೆ ಎಡೆ ಇಲ್ಲ.

**'ಅರ್ಧಂ ಅಂತರ್ಗೃಹಂ, ಅರ್ಧಂ ಬಹಿರ್ಗೃಹಂ' ಇತ್ಯತ್ರಾಪಿ ಧೂಮೇನ ಅಗ್ನಿರಿವ ಅರ್ಧಸ್ಯ ಅಂತಸ್ತ್ವೇ ಸತಿ ಅರ್ಧಸ್ಯ ಬಹಿಷ್ಟ್ವೇನ ವಾಕ್ಯಾರ್ಥೇನ ಅಂತರಾಲಪ್ರದೇಶಃ ಆಕ್ಷಿಪ್ಯತೇ। ನ ತು ಸಮುದಾಯೇ ಲಕ್ಷಣಾ। ಅನನ್ಯ ಲಭ್ಯತ್ವಾಭಾವಾತ್।**

'ದೇವದತ್ತನು ಕುಳಿತಿರುವುದು, ಅರ್ಧ ಮನೆಯೊಳಗೆ, ಅರ್ಧ ಮನೆಯ ಹೊರಗೆ' ಎಂದರೆ, ಅರ್ಧ ಒಳಗೆ ಅರ್ಧ ಹೊರಗೆ ಇರಬೇಕಾದರೆ ಅದು ಮಧ್ಯದ ಹೊಸ್ತಿಲಲ್ಲಿ ಎನ್ನುವುದು ಅರ್ಥಾತ್ ಸಿದ್ಧವಾಗುತ್ತದೆ, ಹೊಗೆ ಇದೆ ಎಂದರೆ ಅರ್ಥಾತ್ ಬೆಂಕಿ ಇದೆ ಎಂದೇ ಅರ್ಥ. ಆದರಿಂದ 'ಅರ್ಧ ಒಳಗೆ ಅರ್ಧ ಹೊರಗೆ' ಎಂಬ ಲೌಕಿಕ ವಾಕ್ಯಕ್ಕೆ 'ಮಧ್ಯದಲ್ಲಿ' ಎಂದು ಲಕ್ಷಣಾ ಮಾಡಬೇಕಾಗಿಲ್ಲ.

ಬೇರೆ ಪ್ರಮಾಣದಿಂದ ಅದು ಅಲಭ್ಯವೇನಲ್ಲ. ನೇರವಾಗಿಯೇ ಎರಡು ವಾಕ್ಯಾರ್ಥಗಳಿಂದ ಮಧ್ಯಪ್ರದೇಶ ಆಕ್ಷೇಪಲಭ್ಯ. ಮಧ್ಯಪ್ರದೇಶದ ಸಂಬಂಧವಿಲ್ಲದೆ ಅರ್ಧ ಒಳಗೆ ಅರ್ಧ ಹೊರಗೆ ಎನ್ನುವುದು ಕೂಡುವುದಿಲ್ಲ ತಾನೆ? ಎಂದು.

ಹಾಗಾದರೆ 'ಯೂಪ ನೆಡುವ ಸ್ಥಳವು ಅರ್ಧ ಯಾಗಶಾಲೆಯೊಳಗೆ, ಅರ್ಧ ಯಾಗಶಾಲೆಯ ಹೊರಗೆ' ಎಂಬ ವೈದಿಕ ವಾಕ್ಯಕ್ಕೂ ಲಕ್ಷಣಾ ಇಲ್ಲವೆಂದಾದೀತು. 'ಇಷ್ಟಾಪತ್ತಿ, ಲಕ್ಷಣಾ ಇಲ್ಲವೆಂದೇ ಹೇಳುತ್ತೇವೆ' ಎಂದರೆ 'ತಥಾ ಯೂಪಸ್ಯ ವೇದಿಃ' ಎಂಬ ಪೂರ್ವಮೀಮಾಂಸಾ ಸೂತ್ರ (3.7.13)ದ ವಿರೋಧ—

**ಏವ'ಮರ್ಧಮಂತರ್ವೇದಿ ಮಾತವ್ಯಂ, ಅರ್ಧಂ ಬಹಿರ್ವೇದಿ' ಇತಿ ವೈದಿಕೋದಾಹರಣಮಪಿ ನೇಯಂ ।**

ಅಗ್ನೀಷೋಮೀಯ ಪಶುಯಾಗದಲ್ಲಿ ಯೂಪವನ್ನು ನೆಡುವ ಸ್ಥಳದ ವಿಷಯದಲ್ಲಿ 'ಯೂಪಂ ಮಿನೋತಿ' ಎಂದು ಪ್ರಾರಂಭಿಸಿ, 'ಅರ್ಧಮಂತರ್ವೇದಿ ಮಿನೋತಿ ಅರ್ಧಂ ಬಹಿರ್ವೇದಿ' ಎಂದು ಶ್ರುತಿ ಇದೆ. 'ಮಿನೋತಿ' ಎಂಬಲ್ಲಿ 'ಡುಮಿಞ್ ಪ್ರಕ್ಷೇಪಣೇ' ಧಾತು. ಯೂಪವನ್ನು ನೆಡುವುದೆಂದರ್ಥ. ಯೂಪದ ಬುಡದ ಭಾಗ ಚೋಟಿನಷ್ಟು ಉದ್ದಗಲವಿದೆ. ಅದನ್ನು ನೆಡುವ ಸ್ಥಳ ಎಲ್ಲಿ ಎಂದರೆ, ವೇದಿಯೊಳಗೆ ಅರ್ಧ, ವೇದಿಯ ಹೊರಗೆ ಅರ್ಧ. ವೇದಿ ಎಂದರೆ ಇಲ್ಲಿ ಯಾಗಶಾಲೆಗಾಗಿ ಸಂಸ್ಕರಿಸಲಾಗಿರುವ ನೆಲ. 'ವೇದ್ಯಾಂ ಸದೋ ಮಿನೋತಿ ಹವಿರ್ಧಾನಂ ಮಿನೋತಿ ವೇದ್ಯಾಮುತ್ತರವೇದಿಂ ನಿವಪತಿ' ಎನ್ನುವಂತೆ ಸದಸ್ಸಂಬ ಮಂಟಪ, ಹವಿರ್ಧಾನ ಮಂಟಪ ಮತ್ತು ಉತ್ತರವೇದಿ ನಿರ್ಮಿಸುವ ಸ್ಥಳ, ಅಂದರೆ ಇಡಿ ಯಾಗಶಾಲೆ. ಇದರ ಒಳಗೆ ಅರ್ಧಭಾಗ, ಹೊರಗೆ ಅರ್ಧಭಾಗ ಬರುವಂತೆ, ಮಧ್ಯಭಾಗದಲ್ಲಿ ಯೂಪ ನೆಡಬೇಕು.

ಮೀಮಾಂಸಾದಲ್ಲಿ ಇಲ್ಲಿ ಹೀಗೆ ವಿಚಾರವಿದೆ— ಈ ಶ್ರುತಿಯಲ್ಲಿ 'ಅರ್ಧಮಂತರ್ವೇದಿ ಮಿನೋತಿ' ಎಂಬ ವಾಕ್ಯ ಮಾತ್ರ ವಿಧಿಯೇ? ಅಥವಾ 'ಅರ್ಧಂ ಬಹಿರ್ವೇದಿ' ಎಂಬ ವಾಕ್ಯವೂ ಸೇರಿ ಎರಡು ವಾಕ್ಯಗಳು ಮಧ್ಯಭಾಗವನ್ನು ಲಕ್ಷಣಾವೃತ್ತಿಯಿಂದ ಹೇಳುವುದೆ? ಎಂದು ಸಂಶಯ.

ಪೂರ್ವಪಕ್ಷ ಹೀಗೆ—ಲಕ್ಷಣಾ ಮಾಡುವುದು ನ್ಯಾಯವಲ್ಲ. ವೇದಿಯೊಳಗಿನ ಸ್ವಲ್ಪ ಭಾಗವೆ ಯೂಪದ ಬುಡಕ್ಕೆ ಅರ್ಧಭಾಗವಾಗಿ ವಿಹಿತವಾಗುತ್ತದೆ. ಯೂಪವನ್ನು ವೇದಿಯೊಳಗೆ ಅರ್ಧಭಾಗದಲ್ಲಿ ನೆಟ್ಟಾಗ ಅದರ ಇನ್ನೊಂದು ಅರ್ಧಭಾಗ ವೇದಿಯ ಹೊರಗೆ ಇರುತ್ತದೆ ಎಂಬುದು ಅರ್ಥಾತ್ ಸಿದ್ಧವಾಗುವುದನ್ನು 'ಅರ್ಧಂ ಬಹಿರ್ವೇದಿ' ಎಂಬ ವಾಕ್ಯವು ಅನುವಾದ ಮಾಡುತ್ತದೆ, ವಿಧಾನ ಮಾಡುವುದಿಲ್ಲ. ವಿಧಾನ ಮಾಡಿದರೆ ವಾಕ್ಯಭೇದ ದೋಷ ಎಂದು.

ಸಿದ್ಧಾಂತ ಹೀಗೆ—'ಅರ್ಧವು ವೇದಿಯೊಳಗೆ ಬರುವಂತೆ ಯೂಪವನ್ನು ನೆಡಬೇಕು' ಎಂದು ಮಾತ್ರ ವಿಧಾನ ಮಾಡಿದರೆ, ವೇದಿಯೊಳಗೇ ಬರುವಂತೆ ಎಂದು ಏವಕಾರ ಹಾಕದಿದ್ದರೆ, ಇನ್ನೊಂದು

ಅರ್ಧವನ್ನು ಹೊರಗೆ ನೆಡಬೇಕೆಂದು ವಿಧಾನಮಾಡುವುದೂ ಇಲ್ಲ, ನಿಷೇಧ ಮಾಡುವುದೂ ಇಲ್ಲ ಎಂದರೆ ಒಳಗಾಗಲಿ ಹೊರಗಾಗಲಿ ಅದನ್ನು ನೆಡಬಹುದೆಂದಾಗುತ್ತದೆ. ಆಗ 'ಹೊರಗಾಗಲಿ ಒಳಗಾಗಲಿ' ಎಂದು ಪಾಕ್ಷಿಕವಾಗಿ ವಾಕಾರಾರ್ಥಯುಕ್ತವಾಗಿ ಅನುವಾದ ಮಾಡಬೇಕಿತ್ತು. ಹಾಗೆ ಮಾಡಿಲ್ಲ. ನಿಯಮೇನ 'ಹೊರಗೇ' ಎಂಬ ಅಭಿಪ್ರಾಯ ಬರುವಂತೆ 'ಅರ್ಧಂ ಬಹಿಃ' ಎಂದು ವಾಕಾರರಹಿತವಾಗಿ ಅನುವಾದ ಕಾಣುತ್ತದೆ. ಹೊರಗೆ ನೆಡಬೇಕು ಎಂದೂ ವಿಧಾನಮಾಡಿದರೆ 'ಒಳಗೆ ನೆಡಬೇಕು ಮತ್ತು ಹೊರಗೆ ನೆಡಬೇಕೆಂ'ದು ವಾಕ್ಯಭೇದ ಬರುತ್ತದೆ. ಹೀಗಾಗಿ ಯಾವ ಸ್ಥಳದಲ್ಲಿ ಯೂಪವನ್ನು ನೆಟ್ಟರೆ ಅದರ ಅರ್ಧಭಾಗ ವೇದಿಯೊಳಗೂ ಅರ್ಧಭಾಗ ಹೊರಗೂ ಬರುವುದೋ ಅಂಥ ಮಧ್ಯದ ಸ್ಥಳದಲ್ಲಿಯೇ ಯೂಪವನ್ನು ನೆಡಬೇಕು ಎಂದು ವಿಧಿ. ವೇದಿಯ ಒಳಗೆ, ಹೊರಗೆ, ಎಂಬ ಎರಡು ವಾಕ್ಯಗಳು ಸೇರಿ ಲಕ್ಷಣಾವೃತ್ತಿಯಿಂದ ಮಧ್ಯಸ್ಥಳವನ್ನು ಬೋಧಿಸುತ್ತವೆ ಎಂದು. ಮೀಮಾಂಸಕರು ಒಪ್ಪಿದ್ದಾರೆ, ಅದರಿಂದ ಅದರ ವಿರೋಧ.

ಹೀಗೆ ಹೇಳುವುದು ಸರಿಯಲ್ಲ. 'ಮಧ್ಯಸ್ಥಳದ ಸಂಬಂಧವಿಲ್ಲದೆ ಅರ್ಧ ಒಳಗೆ ಅರ್ಧ ಹೊರಗೆ ಎನ್ನುವುದು ಕೂಡುವುದಿಲ್ಲ' ಎಂದು ಆಕ್ಷೇಪದಿಂದಲೇ ನೇರವಾಗಿ ಮಧ್ಯಸ್ಥಳಪ್ರಾಪ್ತಿ ತಿಳಿಯುತ್ತದೆ. ಅದಕ್ಕೆ 'ಒಳಗೆ' 'ಹೊರಗೆ' ಎನ್ನುವ ಎರಡು ವಾಕ್ಯಗಳಿಗೆ ಮಧ್ಯಸ್ಥಳದಲ್ಲಿ ಲಕ್ಷಣಾ ಮಾಡಿ ಅವುಗಳಿಂದ ಮಧ್ಯಸ್ಥಳ ಪ್ರಾಪ್ತಿಯನ್ನು ತಿಳಿಯಬೇಕಾದ ಆವಶ್ಯಕತೆ ಇರುವುದಿಲ್ಲ. ಹೊಗೆ ಇದೆ ಎಂದರೆ ಬೆಂಕಿ ಇದೆ ಎಂದು ಆಕ್ಷೇಪದಿಂದಲೆ ತಿಳಿಯುತ್ತದೆ, 'ಹೊಗೆ' ಶಬ್ದಕ್ಕೆ 'ಬೆಂಕಿ' ಎಂದರ್ಥದಲ್ಲಿ ಲಕ್ಷಣಾ ಮಾಡಬೇಕಿಲ್ಲ.

ಹಾಗಾದರೆ ಸೂತ್ರವಿರೋಧ ಬರುತ್ತದೆ ತಾನೆ? ಎಂದರೆ ಸೂತ್ರವು ಸ್ಪಷ್ಟವಾಗಿ ಲಕ್ಷಣಾವನ್ನು ಹೇಳುತ್ತಿಲ್ಲ, ವ್ಯಾಖ್ಯಾನಕಾರರು ಹೇಳುತ್ತಾರಷ್ಟೆ. ವಸ್ತುತಃ ಅರ್ಥಾಪತ್ತಿಯ ಅಭಿಪ್ರಾಯದಿಂದಲೇ ಅದು ಕೂಡುತ್ತದೆ—'ಅರ್ಧಮಂತರ್ವೇದಿ ಮಾತವ್ಯಂ, ಅರ್ಧಂ ಬಹಿರ್ವೇದಿ' ಎಂಬ ಎರಡು ವಾಕ್ಯಗಳಿಂದ ತಿಳಿಯುವ 'ಅರ್ಧಒಳಗೆ ಅರ್ಧಹೊರಗೆ' ಎಂಬ ವಾಕ್ಯಾರ್ಥದಿಂದ ಅರ್ಥಾತ್ ತಿಳಿಯುವ ಮಧ್ಯಸ್ಥಳದಲ್ಲಿಯೇ ಯೂಪವನ್ನು ನೆಡಬೇಕೆಂದು ವಿಧಿ' ಎನ್ನುವುದು ಸೂತ್ರಾರ್ಥ. ಹೊರತು, 'ಎರಡು ವಾಕ್ಯಗಳಿಗೆ ಮಧ್ಯಸ್ಥಳದಲ್ಲಿ ಲಕ್ಷಣಾ ಮಾಡಿ, ಅವು ಹೇಳುವ ಮಧ್ಯಸ್ಥಳದಲ್ಲಿ ಯೂಪ ನೆಡಬೇಕೆಂದು ವಿಧಿ' ಎಂಬುದು ಸೂತ್ರಾಭಿಪ್ರೇತವಿಲ್ಲ.

**ತತ್ರಾಪಿ ಅಂತತೋ ಲಿಙಾದೇಃ ಅಭಿಧಾಯಕತ್ವಾಚ್ಚ ।**

'ಅರ್ಧಮಂತರ್ವೇದಿ ಮಾತವ್ಯಂ ಅರ್ಧಂ ಬಹಿರ್ವೇದಿ' ಎಂಬಲ್ಲಿ 'ಅರ್ಧಮಂತರ್ವೇದಿ' 'ಅರ್ಧಂ ಬಹಿರ್ವೇದಿ' ಎಂಬ ಪದಗಳಿಗೆ ಒಂದುವೇಳೆ ಲಕ್ಷಣಾ ಮಾಡಿದರೂ, ಮಧ್ಯಸ್ಥಳದಲ್ಲಿ ಯೂಪವನ್ನು 'ನೆಡಬೇಕು' 'ಮಾತವ್ಯಂ' ಎಂದು ವಿಧಿಯು ಲಕ್ಷಣಾಲಭ್ಯವಾದ ಅರ್ಥವಲ್ಲ, 'ಮಾತವ್ಯಂ' ಎಂಬ ಲಿಙಾದಿ ಪದದಿಂದ ಶಕ್ತಿಯಿಂದಲೇ ಲಭ್ಯ ಎಂದು ಒಪ್ಪಲೇಬೇಕು. ಇಲ್ಲದಿದ್ದರೆ ಯೂಪವನ್ನು ನೆಡುವುದು ವೇದ ವಿಹಿತವಲ್ಲ ಎಂದಾದೀತು. ಹೀಗಾಗಿ ಇಲ್ಲಿಯೂ ಇಡೀ ವಾಕ್ಯಕ್ಕೆ

ಲಕ್ಷಣಾ ಇಲ್ಲ. ಕೆಲವು ಪದಗಳಿಗೆ ಮಾತ್ರ ಲಕ್ಷಣಾ ಇದೆ. ವಾಕ್ಯಲಕ್ಷಣಾಕ್ಕೆ ಇದು ಉದಾಹರಣೆ ಯಾಗುವುದಿಲ್ಲ.

**ವಿಶೇಷಾಂಶ—** 'ಜಿಜ್ಞಾಸಾ' ಶಬ್ದವು ಜ್ಞಾಧಾತು ಮತ್ತು ಸನ್‌ಪ್ರತ್ಯಯಗಳ ಸಮೂಹ ರೂಪವಾಗಿದ್ದು ವಾಕ್ಯತುಲ್ಯವಾಗಿದೆ. ಈ ಧಾತು ಪ್ರತ್ಯಯಗಳಿಂದ ಜ್ಞಾನೇಚ್ಛಾ ಎಂಬ ಅರ್ಥವು ಶಕ್ತಿಯಿಂದ ಬರುತ್ತದೆ. ಬಳಿಕ, 'ಜ್ಞಾನೇಚ್ಛೆ ಉಂಟಾದರೆ ಜ್ಞಾನಕ್ಕಾಗಿ ವಿಚಾರ ಉಂಟಾಗುತ್ತದೆಯಾದ್ದರಿಂದ ಜಿಜ್ಞಾಸಾ ಶಬ್ದವು ಲಕ್ಷಣಯಾ ವಿಚಾರವನ್ನು ಬೋಧಿಸುತ್ತದೆ' ಎಂದು ಬ್ರಹ್ಮಸೂತ್ರಶಾಂಕರಭಾಷ್ಯ ವಿವರಣದಲ್ಲಿ ಹೇಳಿದೆ. ಇದೂ ಸರಿಯಲ್ಲ. ಜ್ಞಾನೇಚ್ಛೆ ಬಂದರೆ ಅವಶ್ಯ ವಿಚಾರ ಉಂಟಾಗುತ್ತದೆ ಎಂದಮೇಲೆ ಜ್ಞಾನೇಚ್ಛೆಯಿಂದ ಅರ್ಥಾಪತ್ತಿಯಿಂದಲೇ ನೇರವಾಗಿ ವಿಚಾರ ಲಭ್ಯವಿದೆ. ಅದಕ್ಕೆ ಜಿಜ್ಞಾಸಾ ಶಬ್ದಕ್ಕೆ ವಿಚಾರದಲ್ಲಿ ಲಕ್ಷಣಾ ಮಾಡುವುದು, ಬಳಿಕ ಆ ಜಿಜ್ಞಾಸಾಶಬ್ದದಿಂದ ವಿಚಾರಬೋಧವನ್ನು ಪಡೆಯುವುದು ಅನಾವಶ್ಯಕ. ಜ್ಞಾನೇಚ್ಛೆಯನ್ನು ಜಿಜ್ಞಾಸಾ ಶಬ್ದವು ಹೇಳಿದರೆ ಸಾಕು. ಬಳಿಕ ವಿಚಾರವನ್ನೂ ಕೂಡ ಅದು ಲಕ್ಷಣೆಯಿಂದ ಹೇಳುವುದು ಸರಿಯಲ್ಲ. 'ಅನನ್ಯಲಭ್ಯಃ ಶಬ್ದಾರ್ಥಃ' ಅನ್ಯವಾದ ಅರ್ಥಾಪತ್ತಿಯಿಂದ ಲಭ್ಯವಾಗುವ ವಿಚಾರವನ್ನು ಶಬ್ದವು ಹೇಳಲಾರದು.

ಸಂಕ್ಷೇಪಶಾರೀರಕದಲ್ಲಿ 'ಯಜ್ಞಾಯುಧಿ' ಶಬ್ದವು ಸಮಾಸಹೊಂದಿದ ವಾಕ್ಯರೂಪ ವಾದ್ದರಿಂದ ವಾಕ್ಯ ಲಕ್ಷಣಯಾ ಯಜಮಾನನನ್ನು ಹೇಳುತ್ತದೆ ಎಂದಿದ್ದಾರೆ, ಅದೂ ಸರಿಯಲ್ಲ. ಯಜ್ಞೋಪಯುಕ್ತವಾದ ಸ್ಫ್ಯ-ಕಪಾಲ-ಶೂರ್ಪ-ಅಗ್ನಿಹೋತ್ರಹವಣೀ ಮುಂತಾದ ಹತ್ತು ಬಗೆಯ ಯಜ್ಞದ ಸಲಕರಣೆಗಳುಳ್ಳವನು ಎಂದು 'ಯಜ್ಞಾಯುಧಿ' ಶಬ್ದವು ಹೇಳಿದಾಗ ಯಜ್ಞಪ್ರಕರಣ ವಾದ್ದರಿಂದ ಯಜಮಾನನೇ 'ಯಜ್ಞಾಯುಧಿ' ಎಂದು ಆಕ್ಷೇಪದಿಂದ ಲಭ್ಯವಾಗುತ್ತದೆ. ಯಜಮಾನ ಎಂಬ ಅರ್ಥದಲ್ಲಿ ಲಕ್ಷಣಾ ಮಾಡುವುದು ಸರಿಯಲ್ಲ. ಅನನ್ಯಲಭ್ಯಃ ಶಬ್ದಾರ್ಥ ಎಂಬ ನ್ಯಾಯಕ್ಕೆ ವ್ಯತಿರಿಕ್ತವಾಗುವುದು. ವಾಕ್ಯಲಕ್ಷಣಾಕ್ಕೆ ಇದೂ ಉದಾಹರಣೆಯಾಗಲಾರದು.



''वायुर्वै क्षेपिष्ठा'' इत्याद्यार्थवादिकपदसंघस्याप्यावयोर्मते कर्मणि क्षिप्रदेवताप्रसादहेतुत्वरूपतत्तत्पदार्थसंसर्गबोधकत्वमेव, नतु तदन्यप्राशस्त्यलक्षकत्वम् । किंच तत्र लिङाद्यभिधेयकार्यान्वयानुपपत्तिरिवेह सर्वपदानामपि लक्षकत्वान्नाभिधेयान्वयानुपपत्तिरूपं लक्षणाबीजमस्ति । अपिच सर्वपदानां लक्षकत्वे लक्षकपदान्यननुभावकानीतिपक्षे सत्यादिवाक्यस्यानुभावकत्वं न स्यात् । यदिच

**लक्ष्यपरं ब्रह्मपदं वाचकं तर्हि यौगिकं तदेव सखंडार्थं स्यात् । ब्रह्मपदस्य पदार्थांतरान्वयार्थमेव लक्षणाश्रयणेन पदार्थांतरान्वितस्वार्थपरं च स्यात् । नच ''यष्टीः प्रवेशय'' इत्यादाविव तात्पर्यानुपपत्त्यैव लक्षणा नत्वन्वयानुपपत्त्येति वाच्यम् । तत्रापि भोजनादिकर्तृत्वेन प्रकृतानां प्रवेशनान्वयानुपपत्तेरेव तद्बीजत्वात् । इह प्राप्ते पदार्थमात्रे तात्पर्यायोगादित्युक्तत्वाच्च । एतेन वाक्यप्रामाण्यानुपपत्तिर्लक्षणाबीजमिति निरस्तम् ।।**

नन्वेवं यदि वाक्ये न लक्षणा तर्हि अर्थवादानां प्राशस्त्यलाक्षणिकत्वं कथमित्याशंक्य न कथमपीत्याह— **वायुर्वा इति । इहेति** ।। सत्यज्ञानादिवाक्ये इत्यर्थः । ब्रह्मपदलाक्षणिकत्वेऽपि सखंडार्थत्वं दुर्वारम् । अन्वयानुपपत्तिमूलकलक्षणायास्तदन्वयबोधनार्थत्वादित्याह– **ब्रह्मपदस्येति** ।। ननु भोजनादिकर्तृत्वेन प्रकृतानां प्रवेशान्वयानुपपत्तिरिति वदता तात्पर्यविषयीभूतान्वयानुपपत्तिस्तद्बीजमित्युक्तं स्यात्, तथाच लाघवात्तात्पर्यानुपपत्तिरेव तथास्त्वित्यतो दोषान्तरमाह— **इहेति** ।। **एतेनेति** । पदार्थमात्रे तात्पर्यायोगेनेत्यर्थः । तथा च तात्पर्यविषयीभूतार्थ एव शब्दस्य प्रामाण्यात् पदार्थमात्रे च तात्पर्याभावात् न प्रामाण्यानुपपत्तिस्तद्बीजमिति भावः ।



'ವಾಯುರ್ವೈ ಕ್ಷೇಪಿಷ್ಠಾ ದೇವತಾ' ಇತ್ಯಾದಿ ಅರ್ಥವಾದಗಳಿಗೆ ಯಾಗ ಪ್ರಾಶಸ್ತ್ಯದಲ್ಲಿ ಲಕ್ಷಣಾ ಇದೆ. ವಾಕ್ಯಕ್ಕೆ ಲಕ್ಷಣಾ ಎಂಬುದೇ ಇಲ್ಲವೆಂದರೆ ಇದು 'ಹೇಗೆ ಕೂಡುತ್ತದೆ?' ಎಂದು ಪ್ರಶ್ನೆಗೆ 'ಹೇಗೂ ಕೂಡುವುದೇ ಇಲ್ಲ' ಆದರಿಂದ ಅನಿಷ್ಟವೇನಿಲ್ಲ, ಎಂದು ಸಮಾಧಾನ. 'ಅರ್ಥವಾದಿಕ ಪದಸಮೂಹಕ್ಕೆ ಕಾರ್ಯಾನ್ವಯವಾದಿ ಪ್ರಾಭಾಕರ ಮೀಮಾಂಸಕರು ಪ್ರಾಶಸ್ತ್ಯದಲ್ಲಿ ಲಕ್ಷಣಾ ಹೇಳಿದರೂ ಅನ್ವಿತಾಭಿಧಾನವಾದಿಗಳಾದ ದ್ವೈತಿಅದ್ವೈತಿಗಳು ನಾವಿಬ್ಬರೂ 'ವಾಯುರ್ವೈ ಕ್ಷೇಪಿಷ್ಠಾ ದೇವತಾ ವಾಯುಮೇವ ಸ್ವೇನ ಭಾಗಧೇಯೇನೋಪಧಾವತಿ ಸ ಏವೈನಂ ಭೂತಿಂ ಗಮಯತಿ' 'ವಾಯುದೇವನು ಕ್ಷಿಪ್ರಪ್ರವೃತ್ತಿ ಉಳ್ಳವನು. ಅವನಿಗೆ ಆಹುತಿ ನೀಡುವ ಯಜಮಾನನು ಆಹುತಿರೂಪದಿಂದ ತಾನೇ ಆವನ ಬಳಿಗೆ ಹೋಗುತ್ತಾನೆ, ಆದರಿಂದ ಸಂತುಷ್ಟನಾಗುವ ವಾಯುದೇವನು ಯಜಮಾನನಿಗೆ ಬಯಸಿದ ಸಂಪತ್ತೆಲ್ಲವನ್ನೂ ಬೇಗನೆ ನೀಡುತ್ತಾನೆ' ಎಂದು ಶ್ರುತಿಯು ಆಯಾ ಪದಾರ್ಥ ಸಂಸರ್ಗವನ್ನು ಬೋಧಿಸುತ್ತದೆ ಎಂದೇ ಒಪ್ಪಿದ್ದೇವೆ.

'ವಾಯವ್ಯಶ್ವೇತಪಶ್ವಾಲಂಭನ ಕರ್ಮವು ಕ್ಷಿಪ್ರಪ್ರವೃತ್ತಿ ಉಳ್ಳ ವಾಯುದೇವನಿಗೆ ಸಂತೋಷಕರವಾಗಿದೆ' ಆದರಿಂದ ಕ್ಷಿಪ್ರಫಲಕವಾಗಿದೆ. ಎಂಬುದು ಕರ್ಮದ ಪ್ರಾಶಸ್ತ್ಯ. ಅರ್ಥವಾದವು ಅದನ್ನು ಶಕ್ತಿವೃತ್ತಿಯಿಂದಲೇ ಹೇಳುತ್ತದ ಎಂದು ಒಪ್ಪಿರುತ್ತೇವೆ. ಏಕೆಂದರೆ ನಾವಿಬ್ಬರೂ ಅನ್ವಿತಾಭಿಧಾನವಾದಿಗಳು. ಅನ್ವಯದಲ್ಲಿ ಶಕ್ತಿಯನ್ನು ಒಪ್ಪುವವರು. ಆದರಿಂದ ದೇವತಾಪ್ರಸಾದಹೇತುತ್ವರೂಪ ಪ್ರಾಶಸ್ತ್ಯದಲ್ಲಿ ಅರ್ಥವಾದಿಕ ಪದ ಸಮೂಹಕ್ಕೆ ಲಕ್ಷಣೆ ಬೇಡ. ಬೇರೆ ಪ್ರಾಶಸ್ತ್ಯವನ್ನು ನಾವು ಒಪ್ಪಿಲ್ಲ. ಒಪ್ಪಿದರೂ 'ಈ ಕರ್ಮಪ್ರಶಸ್ತ, ಶೀಘ್ರಫಲಪ್ರದ ವಾಯುದೇವತಾಕ ವಾದ್ದರಿಂದ' ಎಂದು ಅನುಮಾನವೇ ಸಾಕು. ಆದರಿಂದ ಅರ್ಥವಾದವೂ ವಾಕ್ಯಲಕ್ಷಣೆಗೆ ಉದಾಹರಣೆಯಲ್ಲ—

**ವಾಯುರ್ವೈ ಕ್ಷೇಪಿಷ್ಠಾ ದೇವತಾ ಇತ್ಯಾದ್ಯಾರ್ಥವಾದಿಕ ಪದಸಂಘಸ್ಯಾಪಿ ಅವಯೋರ್ಮತೇ ಕರ್ಮಣಿ ಕ್ಷಿಪ್ರದೇವತಾ ಪ್ರಸಾದಹೇತುತ್ವರೂಪ ತತ್ತತ್ಪದಾರ್ಥ ಸಂಸರ್ಗ ಬೋಧಕತ್ವಮೇವ । ನ ತು ತದನ್ಯ ಪ್ರಾಶಸ್ತ್ಯ ಲಕ್ಷಕತ್ವಂ ।**

ಬೇರೆ ಪ್ರಾಶಸ್ತ್ಯವನ್ನು ಲಕ್ಷಣಯಾ ಅರ್ಥವಾದವು ಹೇಳುತ್ತದೆ ಎನ್ನುವ ಪ್ರಾಭಾಕರ ಮತದಲ್ಲಿಯೂ ಲಿಙ್ ಲೋಟ್ ತವ್ಯಾದಿ ಅಭಿಧೇಯವಾದ, ಅವುಗಳು ಹೇಳುವ ಕಾರ್ಯದಲ್ಲಿ ಅರ್ಥವಾದ ವಾಕ್ಯಗಳಿಗೆ ಅನ್ವಯಾನುಪಪತ್ತಿ ಉಂಟೆಂದೇ ಅರ್ಥವಾದಗಳಿಗೆ ಪ್ರಾಶಸ್ತ್ಯದಲ್ಲಿ ಲಕ್ಷಣಾ ಮಾಡುತ್ತಾರೆ. ಲಿಙಾದಿ ಅಭಿಧೇಯವಾದ ಕಾರ್ಯದಲ್ಲಿ ಅರ್ಥವಾದಗಳಿಗೆ ಅನ್ವಯಾನುಪಪತ್ತಿ ಇರುವುದು ಲಕ್ಷಣಾಬೀಜ. ಪ್ರಕೃತ ಸತ್ಯಜ್ಞಾನಾದಿವಾಕ್ಯದಲ್ಲಿ ಎಲ್ಲ ಪದಗಳೂ ಲಕ್ಷಕವೇ ಆಗಿರುವುದರಿಂದ ಅಭಿಧೇಯಪದಾರ್ಥವೇ ಇಲ್ಲವೆಂದಮೇಲೆ ಅಭಿಧೇಯಾನ್ವಯಾನುಪಪತ್ತಿರೂಪ ಲಕ್ಷಣಾ ಬೀಜವಿಲ್ಲ—

**ಕಿಂಚ ತತ್ರ ಲಿಙಾದ್ಯಭಿಧೇಯ ಕಾರ್ಯಾನ್ವಯಾನುಪಪತ್ತಿರಿವ ಇಹ ಸರ್ವ ಪದಾನಾಮಪಿ ಲಕ್ಷಕತ್ವಾತ್ ನಾಭಿಧೇಯಾನ್ವಯಾನುಪಪತ್ತಿರೂಪಂ ಲಕ್ಷಣಾ ಬೀಜಮಸ್ತಿ ।**

ಎಲ್ಲ ಪದಗಳೂ ಲಕ್ಷಕವೆನ್ನುವ ಅದ್ವೈತ ಮತಪ್ರಕಾರ, ಲಾಕ್ಷಣಿಕಪದವು ಅನ್ವಯಬೋಧದ ಅನುಭವ ಉಂಟುಮಾಡುವುದಿಲ್ಲ, ಅನನುಭಾವಕ, ಎನ್ನುವ ಪಕ್ಷದಲ್ಲಿ, ಸತ್ಯಾದಿವಾಕ್ಯದಲ್ಲಿ ಅನುಭವ ಉಂಟುಮಾಡುವ ಪದವು ಒಂದೂ ಇಲ್ಲವೆಂದಮೇಲೆ ಅದು ಅನುಭವ ಜನಕವಾಗಲಾರದು. 'ನದ್ಯಾಂ ಘೋಷಃ' ಎಂಬಲ್ಲಿ ಘೋಷಪದ ವಾಚಕವಾಗಿದೆ—

**ಅಪಿ ಚ ಸರ್ವ ಪದಾನಾಂ ಲಕ್ಷಕತ್ವೇ ಲಕ್ಷಕ ಪದಾನ್ಯನನುಭಾವಕಾನೀತಿ ಪಕ್ಷೇ ಸತ್ಯಾದಿವಾಕ್ಯಸ್ಯ ಅನುಭಾವಕತ್ವಂ ನ ಸ್ಯಾತ್ ।**

ಲಕ್ಷಣ ಪರ ಸತ್ಯಾದಿ ಪದಗಳು ಎಲ್ಲವೂ ಲಾಕ್ಷಣಿಕವಾದರೂ ಲಕ್ಷ್ಯಪರವಾದ ಬ್ರಹ್ಮಶಬ್ದ ಒಂದಾದರೂ ವಾಚಕವಾಗಿರುವುದರಿಂದ ವಾಕ್ಯವು ಶಾಬ್ದಬೋಧದ ಅನುಭವ ಜನಕವಾಗಬಹುದು.

**लक्ष्यपरं ब्रह्मपदं वाचकं तर्हि यौगिकं तदेव सखंडार्थं स्यात् । ब्रह्मपदस्य पदार्थांतरान्वयार्थमेव लक्षणाश्रयणेन पदार्थांतरान्वितस्वार्थपरं च स्यात् । नच ''यष्टीः प्रवेशय'' इत्यादाविव तात्पर्यानुपपत्त्यैव लक्षणा नत्वन्वयानुपपत्त्येति वाच्यम् । तत्रापि भोजनादिकर्तृत्वेन प्रकृतानां प्रवेशनान्वयानुपपत्तेरेव तद्बीजत्वात् । इह प्राप्ते पदार्थमात्रे तात्पर्यायोगादित्युक्तत्वाच्च । एतेन वाक्यप्रामाण्यानुपपत्तिर्लक्षणाबीजमिति निरस्तम् ।।**

नन्वेवं यदि वाक्ये न लक्षणा तर्हि अर्थवादानां प्राशस्त्यलाक्षणिकत्वं कथमित्याशंक्य न कथमपीत्याह— **वायुर्वा इति । इहेति ।।** सत्यज्ञानादिवाक्ये इत्यर्थः । ब्रह्मपदलाक्षणिकत्वेऽपि सखंडार्थत्वं दुर्वारम् । अन्वयानुपपत्तिमूलकलक्षणायास्तदन्वयबोधनार्थत्वादित्याह– **ब्रह्मपदस्येति ।।** ननु भोजनादिकर्तृत्वेन प्रकृतानां प्रवेशान्वयानुपपत्तिरिति वदता तात्पर्यविषयीभूतान्वयानुपपत्तिस्तद्बीजमित्युक्तं स्यात्, तथाच लाघवात्तात्पर्यानुपपत्तिरेव तथास्त्वित्यतो दोषान्तरमाह— **इहेति ।। एतेनेति ।** पदार्थमात्रे तात्पर्यायोगेनेत्यर्थः । तथा च तात्पर्यविषयीभूतार्थ एव शब्दस्य प्रामाण्यात् पदार्थमात्रे च तात्पर्याभावात् न प्रामाण्यानुपपत्तिस्तद्बीजमिति भावः ।



'ವಾಯುರ್ವೈ ಕ್ಷೇಪಿಷ್ಠಾ ದೇವತಾ' ಇತ್ಯಾದಿ ಅರ್ಥವಾದಗಳಿಗೆ ಯಾಗ ಪ್ರಾಶಸ್ತ್ಯದಲ್ಲಿ ಲಕ್ಷಣಾ ಇದೆ. ವಾಕ್ಯಕ್ಕೆ ಲಕ್ಷಣಾ ಎಂಬುದೇ ಇಲ್ಲವೆಂದರೆ ಇದು 'ಹೇಗೆ ಕೂಡುತ್ತದೆ?' ಎಂದು ಪ್ರಶ್ನೆಗೆ 'ಹೇಗೂ ಕೂಡುವುದೇ ಇಲ್ಲ' ಅದರಿಂದ ಅನಿಷ್ಟವೇನಿಲ್ಲ. ಎಂದು ಸಮಾಧಾನ. 'ಅರ್ಥವಾದಿಕ ಪದಸಮೂಹಕ್ಕೆ ಕಾರ್ಯಾನ್ವಯವಾದಿ ಪ್ರಾಭಾಕರ ಮೀಮಾಂಸಕರು ಪ್ರಾಶಸ್ತ್ಯದಲ್ಲಿ ಲಕ್ಷಣಾ ಹೇಳಿದರೂ ಅನ್ವಿತಾಭಿಧಾನವಾದಿಗಳಾದ ದ್ವೈತಿಅದ್ವೈತಿಗಳು ನಾವಿಬ್ಬರೂ 'ವಾಯುರ್ವೈ ಕ್ಷೇಪಿಷ್ಠಾ ದೇವತಾ ವಾಯುಮೇವ ಸ್ವೇನ ಭಾಗಧೇಯೇನೋಪಧಾವತಿ ಸ ಏವೈನಂ ಭೂತಿಂ ಗಮಯತಿ' 'ವಾಯುದೇವನು ಕ್ಷಿಪ್ರಪ್ರವೃತ್ತಿ ಉಳ್ಳವನು. ಅವನಿಗೆ ಆಹುತಿ ನೀಡುವ ಯಜಮಾನನು ಆಹುತಿರೂಪದಿಂದ ತಾನೇ ಅವನ ಬಳಿಗೆ ಹೋಗುತ್ತಾನೆ, ಅದರಿಂದ ಸಂತುಷ್ಟನಾಗುವ ವಾಯುದೇವನು ಯಜಮಾನನಿಗೆ ಬಯಸಿದ ಸಂಪತ್ತೆಲ್ಲವನ್ನೂ ಬೇಗನೆ ನೀಡುತ್ತಾನೆ' ಎಂದು ಶ್ರುತಿಯು ಆಯಾ ಪದಾರ್ಥ ಸಂಸರ್ಗವನ್ನು ಬೋಧಿಸುತ್ತದೆ ಎಂದೇ ಒಪ್ಪಿದ್ದೇವೆ.

'ವಾಯವ್ಯಶ್ವೇತಪಶ್ವಾಲಂಭನ ಕರ್ಮವು ಕ್ಷಿಪ್ರಪ್ರವೃತ್ತಿ ಉಳ್ಳ ವಾಯುದೇವನಿಗೆ ಸಂತೋಷಕರವಾಗಿದೆ' ಅದರಿಂದ ಕ್ಷಿಪ್ರಫಲಕವಾಗಿದೆ. ಎಂಬುದು ಕರ್ಮದ ಪ್ರಾಶಸ್ತ್ಯ. ಅರ್ಥವಾದವು ಅದನ್ನು ಶಕ್ತಿವೃತ್ತಿಯಿಂದಲೇ ಹೇಳುತ್ತವೆ ಎಂದು ಒಪ್ಪಿರುತ್ತೇವೆ. ಏಕೆಂದರೆ ನಾವಿಬ್ಬರೂ ಅನ್ವಿತಾಭಿಧಾನವಾದಿಗಳು. ಅನ್ವಯದಲ್ಲಿ ಶಕ್ತಿಯನ್ನು ಒಪ್ಪುವವರು. ಅದರಿಂದ ದೇವತಾಪ್ರಸಾದಹೇತುತ್ವರೂಪ ಪ್ರಾಶಸ್ತ್ಯದಲ್ಲಿ ಅರ್ಥವಾದಿಕ ಪದ ಸಮೂಹಕ್ಕೆ ಲಕ್ಷಣೆ ಬೇಡ. ಬೇರೆ ಪ್ರಾಶಸ್ತ್ಯವನ್ನು ನಾವು ಒಪ್ಪಿಲ್ಲ. ಒಪ್ಪಿದರೂ 'ಈ ಕರ್ಮಪ್ರಶಸ್ತ, ಶೀಘ್ರಫಲಪ್ರದ ವಾಯುದೇವತಾಕ ವಾದ್ದರಿಂದ' ಎಂದು ಅನುಮಾನವೇ ಸಾಕು. ಅದರಿಂದ ಅರ್ಥವಾದವೂ ವಾಕ್ಯಲಕ್ಷಣೆಗೆ ಉದಾಹರಣೆಯಲ್ಲ—

**ವಾಯುರ್ವೈ ಕ್ಷೇಪಿಷ್ಠಾ ದೇವತಾ ಇತ್ಯಾದ್ಯಾರ್ಥವಾದಿಕ ಪದಸಂಘಸ್ಯಾಪಿ ಆವಯೋರ್ಮತೇ ಕರ್ಮಣಿ ಕ್ಷಿಪ್ರದೇವತಾ ಪ್ರಸಾದಹೇತುತ್ವರೂಪ ತತ್ತತ್ಪದಾರ್ಥ ಸಂಸರ್ಗ ಬೋಧಕತ್ವಮೇವ । ನ ತು ತದನ್ಯ ಪ್ರಾಶಸ್ತ್ಯ ಲಕ್ಷಕತ್ವಂ ।**

ಬೇರೆ ಪ್ರಾಶಸ್ತ್ಯವನ್ನು ಲಕ್ಷಣಯಾ ಅರ್ಥವಾದವು ಹೇಳುತ್ತದೆ ಎನ್ನುವ ಪ್ರಾಭಾಕರ ಮತದಲ್ಲಿಯೂ ಲಿಜ್ ಲೋಟ್ ತವ್ಯಾದಿ ಅಭಿಧೇಯವಾದ, ಅವುಗಳು ಹೇಳುವ ಕಾರ್ಯದಲ್ಲಿ ಅರ್ಥವಾದ ವಾಕ್ಯಗಳಿಗೆ ಅನ್ವಯಾನುಪಪತ್ತಿ ಉಂಟೆಂದೇ ಅರ್ಥವಾದಗಳಿಗೆ ಪ್ರಾಶಸ್ತ್ಯದಲ್ಲಿ ಲಕ್ಷಣಾ ಮಾಡುತ್ತಾರೆ. ಲಿಜಾದಿ ಅಭಿಧೇಯವಾದ ಕಾರ್ಯದಲ್ಲಿ ಅರ್ಥವಾದಗಳಿಗೆ ಅನ್ವಯಾನುಪಪತ್ತಿ ಇರುವುದು ಲಕ್ಷಣಾಬೀಜ. ಪ್ರಕೃತ ಸತ್ಯಜ್ಞಾನಾದಿವಾಕ್ಯದಲ್ಲಿ ಎಲ್ಲ ಪದಗಳೂ ಲಕ್ಷಕವೇ ಆಗಿರುವುದರಿಂದ ಅಭಿಧೇಯಪದಾರ್ಥವೇ ಇಲ್ಲವೆಂದಮೇಲೆ ಅಭಿಧೇಯಾನ್ವಯಾನುಪಪತ್ತಿರೂಪ ಲಕ್ಷಣಾ ಬೀಜವಿಲ್ಲ—

**ಕಿಂಚ ತತ್ರ, ಲಿಜಾದ್ಯಭಿಧೇಯ ಕಾರ್ಯಾನ್ವಯಾನುಪಪತ್ತಿರಿವ ಇಹ ಸರ್ವ ಪದಾನಾಮಪಿ ಲಕ್ಷಕತ್ವಾತ್ ನಾಭಿಧೇಯಾನ್ವಯಾನುಪಪತ್ತಿರೂಪಂ ಲಕ್ಷಣಾ ಬೀಜಮಸ್ತಿ ।**

ಎಲ್ಲ ಪದಗಳೂ ಲಕ್ಷಕವೆನ್ನುವ ಅದ್ವೈತ ಮತಪ್ರಕಾರ, ಲಾಕ್ಷಣಿಕಪದವು ಅನ್ವಯಬೋಧದ ಅನುಭವ ಉಂಟುಮಾಡುವುದಿಲ್ಲ, ಅನನುಭಾವಕ, ಎನ್ನುವ ಪಕ್ಷದಲ್ಲಿ, ಸತ್ಯಾದಿವಾಕ್ಯದಲ್ಲಿ ಅನುಭವ ಉಂಟುಮಾಡುವ ಪದವು ಒಂದೂ ಇಲ್ಲವೆಂದಮೇಲೆ ಅದು ಅನುಭವ ಜನಕವಾಗಲಾರದು. 'ನದ್ಯಾಂ ಘೋಷಃ' ಎಂಬಲ್ಲಿ ಘೋಷಪದ ವಾಚಕವಾಗಿದೆ—

**ಅಪಿ ಚ ಸರ್ವ ಪದಾನಾಂ ಲಕ್ಷಕತ್ವೇ ಲಕ್ಷಕ ಪದಾನ್ಯನನುಭಾವಕಾನೀತಿ ಪಕ್ಷೇ ಸತ್ಯಾದಿವಾಕ್ಯಸ್ಯ ಅನುಭಾವಕತ್ವಂ ನ ಸ್ಯಾತ್ ।**

ಲಕ್ಷಣ ಪರ ಸತ್ಯಾದಿ ಪದಗಳು ಎಲ್ಲವೂ ಲಾಕ್ಷಣಿಕವಾದರೂ ಲಕ್ಷ್ಯಪರವಾದ ಬ್ರಹ್ಮಶಬ್ದ ಒಂದಾದರೂ ವಾಚಕವಾಗಿರುವುದರಿಂದ ವಾಕ್ಯವು ಶಾಬ್ದಬೋಧದ ಅನುಭವ ಜನಕವಾಗಬಹುದು.

ಏಕೆಂದರೆ ಲಾಕ್ಷಣಿಕಪದವು ಲಕ್ಷ್ಯಾರ್ಥಸ್ಮಾರಕ. ಅನ್ವಯ ಪ್ರತಿಯೋಗಿಯಾದ ಲಕ್ಷ್ಯಾರ್ಥ ಸ್ಮರಣೆ ಬಂದಾಗ ಅದೇ ವಾಕ್ಯದಲ್ಲಿರುವ ಶಕ್ತಪದವು ಲಕ್ಷ್ಯಾರ್ಥ ಪ್ರತಿಯೋಗಿಕ ಅನ್ವಯದ ಅನುಭವವನ್ನುಂಟುಮಾಡುತ್ತದೆ. ಆದರಿಂದ ಸತ್ಯಾದಿವಾಕ್ಯದಲ್ಲಿ ಬ್ರಹ್ಮಶಬ್ದವು ಹೀಗೆ ಅನುಭಾವಕವಾಗುತ್ತದೆ' ಎನ್ನುವುದಾದರೆ, ಬ್ರಹ್ಮಪದವು ಯೌಗಿಕ, ಬೃಹಿ ವೃದ್ಧೌ ಧಾತುವಿಗೆ ಮನಿನ್‌ಪ್ರತ್ಯಯದಿಂದ ನಿಷ್ಪನ್ನ, ವಾಕ್ಯತುಲ್ಯವಾದ್ದರಿಂದ, ವೃದ್ಧಿರೂಪ ಧರ್ಮದ ಸಂಸರ್ಗವನ್ನು ಬೋಧಿಸುತ್ತದೆ. ಹೀಗಾಗಿ ಸಖಂಡಾರ್ಥಕವೆನಿಸುತ್ತದೆ, ಅಖಂಡಾರ್ಥತ್ವಕ್ಕೆ ಹಾನಿ ಉಂಟಾಗುತ್ತದೆ—

**ಯದಿಚ ಲಕ್ಷ್ಯಪರಂ ಬ್ರಹ್ಮಪದಂ ವಾಚಕಂ ತರ್ಹಿ ಯೌಗಿಕಂ ತದೇವ ಸಖಂಡಾರ್ಥಂ ಸ್ಯಾತ್ ।**

ಬ್ರಹ್ಮಪದವು ರೂಢವೆಂದಿಟ್ಟುಕೊಂಡರೂ ಸಖಂಡಾರ್ಥತ್ವವೇ. ಏಕೆಂದರೆ, ವಾಚಕವಾದ ಆ ಒಂದು ಬ್ರಹ್ಮಪದವು ವಾಕ್ಯದಲ್ಲಿ ಅನ್ವಯ ಬೋಧಾನುಭವ ಜನಕವಾಗಲು ಅದಕ್ಕೆ ಅನ್ವಯಪ್ರತಿಯೋಗ್ಯುಪಸ್ಥಾಪಕವಾದ ಸತ್ಯಾದಿಪದಾನ್ವಯವಾಗಬೇಕು. ಆ ಅನ್ವಯಕ್ಕೆ ಅನುಪಪತ್ತಿ ಇರುವುದರಿಂದ ಅನುಪಪತ್ತಿ ಪರಿಹಾರಕ್ಕೆ ಸತ್ಯಾದಿ ಪದಗಳಿಗೆ ಲಕ್ಷಣಾ ಮಾಡಬೇಕು. ಹೀಗೆ ಸತ್ಯಾದಿಪದಗಳಿಗೆ ಲಕ್ಷಣಾಶ್ರಯಣಮಾಡಿದ್ದರಿಂದ ಬ್ರಹ್ಮಪದಕ್ಕೆ ಸತ್ಯಾದಿ ಪದಾನ್ವಯ ಲಭ್ಯವಾಗಿದೆ ಎಂದಮೇಲೆ ಅದು ಪದಾರ್ಥಾಂತರಾನ್ವಿತ ಸ್ವಾರ್ಥ ಪರವಾಗಿ ಸಖಂಡಾರ್ಥವೇ ಆಯಿತು—

**ಬ್ರಹ್ಮಪದಸ್ಯ ಪದಾರ್ಥಾಂತರಾನ್ವಯಾರ್ಥಮೇವ ಲಕ್ಷಣಾಶ್ರಯಣೇನ ಪದಾರ್ಥಾಂತರಾನ್ವಿತ ಸ್ವಾರ್ಥಪರಂ ಚ ಸ್ಯಾತ್ ।**

ಬ್ರಹ್ಮಪದವನ್ನು ಲಾಕ್ಷಣಿಕವೆಂದಿಟ್ಟುಕೊಂಡರೂ ಸಖಂಡಾರ್ಥತ್ವವು ಅಪರಿಹಾರ್ಯವೇ. ಏಕೆಂದರೆ ಅದನ್ನು ಲಾಕ್ಷಣಿಕವೆಂದು ಒಪ್ಪುವುದು, ಅನ್ವಯಾನುಪಪತ್ತಿಪರಿಹಾರಕ್ಕಾಗಿ. ಹೀಗಾಗಿ ಲಕ್ಷಣಾಶ್ರಯಣವು ಬ್ರಹ್ಮಪದಕ್ಕೆ ಸತ್ಯಾದಿ ಪದಗಳ ಅನ್ವಯಾನುಪಪತ್ತಿಯನ್ನು ಪರಿಹರಿಸಲೇಬೇಕು. ಬ್ರಹ್ಮಪದಕ್ಕೆ ಪದಾರ್ಥಾಂತರದ ಅನ್ವಯ ಲಭ್ಯವಾಗುವಂತೆ ಮಾಡಬೇಕು. ಆಗ ಬ್ರಹ್ಮಪದವು ಪದಾರ್ಥಾಂತರಾನ್ವಿತಸ್ವಾರ್ಥಪರವಾಗಿ ಸಖಂಡಾರ್ಥವೆನಿಸುವುದು.

'ಲಾಕ್ಷಣಿಕಪದವು ಶಾಬ್ದಬೋಧಜನಕವಲ್ಲದಿದ್ದರೆ ಅನುಭಾವಕವಲ್ಲವೆಂದಾದರೆ ಅನುಭಾವಕ ಪದವು ಯಾವುದು? ಶಕ್ತಪದವೆ? ಹಾಗಾದರೆ, ಲಾಕ್ಷಣಿಕ ಪದವೂ ಕೂಡ ಲಕ್ಷಣಾ ಇಲ್ಲದ ಕಡೆ ಶಕ್ತಪದವಾಗಿಯೇ ಇರುತ್ತದೆ. 'ತಚ್ಛಕ್ತ ಪದವು ತದನುಭವಜನಕ' ಎನ್ನುವುದಾದರೆ ಗೌರವ. ಆದರಿಂದ ಲಾಕ್ಷಣಿಕಪದವು ಅನುಭಾವಕವಲ್ಲ ಎನ್ನುವುದು ಅಸಂಗತ'— ಎನ್ನುವುದು ತೀರ ಅಸಂಗತ. ಏಕೆಂದರೆ ತಚ್ಛಕ್ತಪದವು ತದನುಭವಜನಕ ಎಂದು ವಿಶೇಷ ಕಾರ್ಯಕಾರಣಭಾವ. ಸಾಮಾನ್ಯವಾಗಿ ಶಕ್ತಪದವು ಕಾರಣವೆ. ಲಾಕ್ಷಣಿಕ ಸ್ಥಳದಲ್ಲಿ ಗಂಗಾಶಬ್ದವು ತೀರಶಕ್ತಪದವಲ್ಲ, ತೀರಶಕ್ತಪದರೂಪ ವಿಶೇಷಕಾರಣ ವಿಲ್ಲದ್ದರಿಂದ ಅದು ತೀರಾನುಭವಜನಕವಾಗಲಿಲ್ಲ.

ಸಾಮಾನ್ಯಕಾರಣಸ್ಥಳದಲ್ಲಿ ವಿಶೇಷಕಾರಣವನ್ನು ಒಪ್ಪದಿದ್ದರೆ, ವಿಶೇಷ್ಯಸನ್ನಿಕರ್ಷವು ವಿಶಿಷ್ಟಪ್ರತ್ಯಕ್ಷಕ್ಕೆ ಸಾಮಾನ್ಯ ಕಾರಣ. ಹೀಗೆಂದ ಮಾತ್ರಕ್ಕೆ ಅನ್ಯವಿಶೇಷ್ಯಪ್ರತ್ಯಕ್ಷದಿಂದ ಅನ್ಯವಿಶಿಷ್ಟ ಪ್ರತ್ಯಕ್ಷ ಬರಲಿ ಎಂದು ಆಪಾದಿಸಲಾಗದು. ತದ್ವಿಶೇಷ್ಯಸನ್ನಿಕರ್ಷವು ತದ್ವಿಶಿಷ್ಟಪ್ರತ್ಯಕ್ಷಕ್ಕೆ ವಿಶೇಷಕಾರಣ. ಅದರಿಂದ ಅತಿಪ್ರಸಕ್ತಿ ಇಲ್ಲ. ಹಾಗೇ ಪ್ರಕೃತದಲ್ಲಿ ಪ್ರವಾಹ ಶಕ್ತಪದವು ತೀರಾನುಭವಜನಕವಾಗಲೆನ್ನುವಂತಿಲ್ಲ.

ಇಲ್ಲಿ ಆಕ್ಷೇಪ–''ಯಷ್ಟೀಃ ಪ್ರವೇಶಯ' ಎಂಬಲ್ಲಿ ಯಷ್ಟಿಗಳನ್ನು ದಂಡಗಳನ್ನು ಒಳಗೆ ಕಳಿಸು' ಎಂಬಲ್ಲಿ ದಂಡಧಾರಿಗಳನ್ನು ಭೋಜನಕ್ಕಾಗಿ ಭೋಜನಶಾಲೆಯೊಳಗೆ ಕಳಿಸೆನ್ನುವ ತಾತ್ಪರ್ಯವಿರುವುದರಿಂದ ಅದರ ಅನುಪಪತ್ತಿಯೇ ಲಕ್ಷಣಾಬೀಜ ಹೊರತು ಸಮಭಿವ್ಯಾಹೃತ ದಂಡಪ್ರವೇಶನಾನ್ವಯ ಅನುಪಪತ್ತಿಯು ಲಕ್ಷಣಾಕ್ಕೆ ಕಾರಣವಲ್ಲ. ಹಾಗೆಯೇ ಪ್ರಕೃತದಲ್ಲಿ ಸ್ವರೂಪಮಾತ್ರ ತಾತ್ಪರ್ಯಾನುಪತ್ತಿಯಿಂದ ಸರ್ವಪದ ಲಕ್ಷಣಾ ಎಂದು ಹೇಳಬೇಕು. ಹೊರತು ಅಭಿಧೇಯಾನ್ವಯಾನುಪತ್ತಿಯಿಂದಲ್ಲ.'

ಈ ಆಕ್ಷೇಪ ಸರಿಯಲ್ಲ 'ಯಷ್ಟೀಃ ಪ್ರವೇಶಯ' ಎಂಬಲ್ಲಿಯೂ ಭೋಜನ ಕರ್ತೃಗಳಾಗಿ ಪ್ರಕೃತರಾದ ದಂಡಧಾರಿಗಳ ಪ್ರವೇಶನಾನ್ವಯಾನುಪತ್ತಿಯೇ ಲಕ್ಷಣಾಬೀಜ. ಮತ್ತು ಪ್ರಕೃತದಲ್ಲಿ ಪದಾರ್ಥ ಸ್ವರೂಪಮಾತ್ರದಲ್ಲಿ ತಾತ್ಪರ್ಯವಿರುತ್ತಿದ್ದರೆ ಅದರ ಅನ್ಯಥಾನುಪಪತ್ತಿಯಿಂದ ಸರ್ವಪದಲಕ್ಷಣಾ ಯುಕ್ತವಾಗುತ್ತಿತ್ತು. ಪದಾರ್ಥಸ್ವರೂಪವು ಸಿದ್ಧವೇ ಆಗಿದೆ ಅದರಲ್ಲಿ ತಾತ್ಪರ್ಯವಿರಲು ಅವಕಾಶವಿಲ್ಲ—

**ನ ಚ ಯಷ್ಟೀಃ ಪ್ರವೇಶಯ ಇತ್ಯಾದಾವಿವ ತಾತ್ಪರ್ಯಾನುಪಪತ್ತ್ಯೈವ ಲಕ್ಷಣಾ, ನ ತ್ವನ್ವಯಾನುಪಪತ್ತ್ಯೇತಿ ವಾಚ್ಯಂ। ತತ್ರಾಪಿ ಭೋಜನಾದಿ ಕರ್ತೃತ್ವೇನ ಪ್ರಕೃತಾನಾಂ ಪ್ರವೇಶನಾನ್ವಯ–ಅನುಪಪತ್ತೇರೇವ ತದ್‌ಬೀಜತ್ವಾತ್। ಇಹ ಪ್ರಾಪ್ತೇ ಪದಾರ್ಥಮಾತ್ರೇ ತಾತ್ಪರ್ಯಾಯೋಗಾದಿತ್ಯುಕ್ತತ್ವಾಚ್ಚ।**

ಇಲ್ಲಿ 'ಭೋಜನಕರ್ತೃಗಳಾಗಿ ಪ್ರಕೃತರಾದವರು' ಅಂದರೆ ಪ್ರಕರಣಸಿದ್ಧತಾತ್ಪರ್ಯ ಗೋಚರರೆಂದೇ ಅರ್ಥ. 'ತಾತ್ಪರ್ಯಗೋಚರರಾದ ದಂಡಧಾರಿಗಳ ಪ್ರವೇಶನಾನ್ವಯ ಅನುಪಪತ್ತಿ' ಯನ್ನು ಲಕ್ಷಣಾಬೀಜ ಎನ್ನುವುದಕ್ಕಿಂತ 'ತಾತ್ಪರ್ಯಾನುಪಪತ್ತಿ'ಯನ್ನೇ ಲಕ್ಷಣಾಬೀಜವೆಂದರೆ ಲಾಘವ' ಎಂದು ಆಕ್ಷೇಪಕ್ಕೆ ಅವಕಾಶವಿದೆ. ಆದರೆ 'ಭೋಕ್ತೃಕರ್ತೃಕಪ್ರವೇಶನಾನ್ವಯ ತಾತ್ಪರ್ಯದ ಅನುಪಪತ್ತಿ'ಗಿಂತ 'ಭೋಕ್ತೃಕರ್ತೃಕಪ್ರವೇಶನಾನ್ವಯದ ಅನುಪಪತ್ತಿ'ಯೇ ಲಘು ಎನ್ನಲು ಬರುತ್ತದೆ. ತಾತ್ಪರ್ಯಜ್ಞಾನಕ್ಕೆ ಬೇಕಾಗುವ ಪ್ರಕರಣಾದಿಗಳ ಅನುಪಪತ್ತಿಯಿಂದಲೇ ಲಕ್ಷಣಾ ಎನ್ನಲೂ ಬರುತ್ತದೆ. ಸಿದ್ಧವೇ ಆಗಿರುವ ಪದಾರ್ಥಸ್ವರೂಪಮಾತ್ರದಲ್ಲಿ ತಾತ್ಪರ್ಯಾನುಪಪತ್ತಿ ಎಂಬುದು ಎಲ್ಲೂ ಕಂಡಿಲ್ಲವೆಂದು ಹಿಂದೆಯೇ ಹೇಳಿದ್ದೇವೆ—

**ಏತೇನ ವಾಕ್ಯಪ್ರಾಮಾಣ್ಯಾನುಪಪತ್ತಿರ್ಲಕ್ಷಣಾಬೀಜಮಿತಿ ನಿರಸ್ತಂ।**

ಪದಾರ್ಥಮಾತ್ರದಲ್ಲಿ ತಾತ್ಪರ್ಯವೇ ಕೂಡುವುದಿಲ್ಲವೆಂದಮೇಲೆ ಆ ವಿಷಯದಲ್ಲಿ ವಾಕ್ಯಕ್ಕೆ ಪ್ರಾಮಾಣ್ಯವೆನ್ನುವುದೇ ಅಸಂಗತವಾಗುವುದರಿಂದ ವಾಕ್ಯಪ್ರಾಮಾಣ್ಯವನ್ನು ಕೂಡಿಸಲು ಲಕ್ಷಣಾ ಎಂದೂ, ವಾಕ್ಯಪ್ರಾಮಾಣ್ಯಾನುಪಪತ್ತಿ ಲಕ್ಷಣಾ ಬೀಜವೆಂದೂ ಹೇಳುವುದು ಅಸಂಗತವೆ. ಹೀಗಾಗಿ 'ವಾಕ್ಯಪ್ರಾಮಾಣ್ಯಾನುಪಪತ್ತಿಯು ಲಕ್ಷಣಾಬೀಜ' ಎನ್ನುವುದೂ ಸರಿಯಲ್ಲವೆಂಬುದು ಇಷ್ಟರಿಂದಲೇ ಸ್ಪಷ್ಟವಾಗುವುದು.

ಸತ್ಯಾದಿ ವಾಕ್ಯದಲ್ಲಿ ಪ್ರಾಮಾಣ್ಯವನ್ನು ಕೂಡಿಸಲು ಪದಾರ್ಥಸ್ವರೂಪ ಮಾತ್ರದಲ್ಲಿ ಲಕ್ಷಣಾ ಮಾಡಿದರೆ, ಪದಾರ್ಥಸ್ವರೂಪವು ಸ್ವಪ್ರಕಾಶತ್ವಾದಿನಾ ಮೊದಲೇ ಸಿದ್ಧವೇ ಇರುವುದರಿಂದ ಅನಧಿಗತಾರ್ಥಗಂತೃತ್ವರೂಪವಾದ ಅದ್ವೈತಿ ಸಮ್ಮತವಾದ ಪ್ರಾಮಾಣ್ಯಕೂಡುವುದಿಲ್ಲ. ಮತ್ತು ಪದಾರ್ಥಮಾತ್ರವು ಬಾಧಿತವಾದ ವಾಕ್ಯದಲ್ಲಿಯೂ ಅಬಾಧಿತವಾಗಿ ಇರುತ್ತದೆ, 'ಶಶವಿಷಾಣಂ' ಎಂಬಲ್ಲಿಯೂ ಕೂಡ ಶಶವೂ ಅಬಾಧಿತ, ವಿಷಾಣವೂ ಅಬಾಧಿತವೆ. ಇದು ವಾಕ್ಯಪ್ರಾಮಾಣ್ಯವಲ್ಲ. ಅದೇರೀತಿ, ಸತ್ಯಾದಿವಾಕ್ಯವೂ ಪದಾರ್ಥಪರವಾಗಿ ಪ್ರಮಾಣವೆ ಎನ್ನಬಹುದೆ?



**वाक्यस्यान्वयलक्षकता तु न संमता। अन्विताभिधानांगीकारात्। अभिहितान्वयवादिभिस्तार्किकैरप्यन्वये लक्षणानंगीकाराच्च। अन्वयो लक्ष्यत इति पक्षेऽपि पदांतरैः प्रतियोग्युपस्थितौ प्रधानस्यैकपदस्य अन्वयलक्षकत्वोपपत्तेश्च। गामानयेत्यस्मात् गामानय शुक्लां दंडेनेति वाक्यस्येवेह पदांतरप्रयुक्तस्य अधिकलक्षकत्वाभावाच्च।**

ननु यदि वाक्यगतसकलपदानामेव लाक्षणिकत्वं न स्यात्कथं तर्ह्यशक्यस्यान्वयस्य भानम्। नचैवमपि एकमेव पदं लक्षकमस्त्विति वाच्यम्, विनिगमनाविरहादित्याशंक्याह— **वाक्यस्येति** ।



'ವಾಕ್ಯಸ್ಯಾನ್ವಯ ಲಕ್ಷಕತಾ ತು ನ ಸಮ್ಮತಾ'

'ಭಾಟ್ಟಮೀಮಾಂಸಕರು ವಾಕ್ಯಕ್ಕೆ ಅನ್ವಯದಲ್ಲಿ ಲಕ್ಷಣಾವನ್ನೇ ಅಂಗೀಕರಿಸಿದ್ದಾರೆ. ಪ್ರವಾಹವಾಚಕವಾದ ನದೀಶಬ್ದಕ್ಕೆ ತತ್‌ಸಂಬಂಧಿತೀರ ಲಾಕ್ಷಣಿಕತ್ವವನ್ನು ಒಪ್ಪುವಂತೆ ವಾಕ್ಯದಲ್ಲಿ ಆಯಾ ಪದಾರ್ಥವಾಚಕವಾದ ಎಲ್ಲ ಪದಗಳಿಗೂ ಪದಾರ್ಥಸಂಬಂಧಿ ಅನ್ವಯದಲ್ಲಿ ಲಕ್ಷಣಾ

ಒಪ್ಪಿದ್ದಾರೆ. ಆದರೂ ಅನನುಭಾವಕತ್ವವನ್ನು ಒಪ್ಪಿಲ್ಲ. ಹಾಗೇ ಸತ್ಯಾದಿ ವಾಕ್ಯದಲ್ಲಿಯೂ ಎಲ್ಲ ಪದಗಳು ಲಾಕ್ಷಣಿಕವಾದರೂ ಅನುಭಾವಕವಾಗಬಹುದು. ಅನನುಭಾವಕತ್ವಾಪತ್ತಿ ಇಲ್ಲ' ಎಂದು ಅದ್ವೈತಿ ಆಕ್ಷೇಪಿಸಿದರೆ ಅದೂ ಸರಿಯಲ್ಲ. ಏಕೆಂದರೆ ಅನ್ವಯದಲ್ಲಿ ಲಕ್ಷಣಾ ಮಾಡಲು ಲಕ್ಷಣಾಬೀಜವಿಲ್ಲ. ಶಕ್ಯಸಂಬಂಧಿತ್ವೇನ ಲಕ್ಷ್ಯದ ಉಪಸ್ಥಿತತ್ವ ಮತ್ತು ಅನ್ವಯಾನುಪಪತ್ತಿ ಇವೆರಡು ಲಕ್ಷಣಾಬೀಜಗಳು, ಅವೆರಡೂ ಅನ್ವಯದಲ್ಲಿ ಲಕ್ಷಣಾಮಾಡಲು ಲಭ್ಯವಿಲ್ಲ. ಅನ್ವಯವು ಶಕ್ಯಸಂಬಂಧಿತ್ವೇನ ಉಪಸ್ಥಿತವಾಗಿರುವುದಿಲ್ಲ. ಪ್ರತೀತ ಅನ್ವಯಕ್ಕೆ ಅನುಪಪತ್ತಿ ಬರಬೇಕೆಂದರೆ ಅನ್ವಯವು ಮೊದಲಿಗೆ ಪ್ರತೀತವಾಗಿರಬೇಕು, ಪ್ರತೀತವಾಗಿರುವುದಿಲ್ಲ, ಅನ್ವಯವು ಲಕ್ಷಣಾದಿಂದ ಮಾತ್ರ ಪ್ರತೀತವಾಗಲು ಸಾಧ್ಯ. ಹೀಗಾಗಿ ಅನ್ವಯ ಲಕ್ಷ್ಯತ್ವಪಕ್ಷವೇ ಅಸಂಗತ. ನಮಗೆ ಅದು ಸಮ್ಮತವಲ್ಲ. ಅದರಿಂದ ಆ ಪಕ್ಷವನ್ನು ಅವಲಂಬಿಸಿ ಲಾಕ್ಷಣಿಕ ಪದವೂ ಅನುಭಾವಕವಾಗ ಬಹುದೆಂದು ಆಕ್ಷೇಪಿಸುವುದು ಯುಕ್ತವಲ್ಲ.

**'ಅನ್ವಿತಾಭಿಧಾನಾಂಗೀಕಾರಾತ್'**

ನಾವು ಅನ್ವಯದಲ್ಲಿ ಲಕ್ಷಣಾ ಎಂದು ಒಪ್ಪುವುದಿಲ್ಲ. ಯೋಗ್ಯೇತರಾನ್ವಿತ ಸ್ವಾರ್ಥದಲ್ಲಿ ಪದಕ್ಕೆ ಶಕ್ತಿಯನ್ನೇ ಒಪ್ಪುತ್ತೇವೆ. ಅದ್ವೈತಿಗಳೂ ಅನ್ವಿತಾಭಿಧಾನವನ್ನು ಒಪ್ಪಿದ್ದಾರೆ.

'ವಾಕ್ಯಗತವಾದ ಎಲ್ಲ ಪದಗಳಿಗೂ ಅನ್ವಯದಲ್ಲಿ ಲಕ್ಷಣಾ ಒಪ್ಪದಿದ್ದಲ್ಲಿ ಅಶಕ್ಯವಾದ ಅನ್ವಯಕ್ಕೆ ವಾಕ್ಯಾರ್ಥಬೋಧದಲ್ಲಿ ಭಾನ ಹೇಗೆ, ಎಂಬ ಪ್ರಶ್ನೆಗೆ 'ಎಲ್ಲ ಪದಗಳಿಗೂ ಲಕ್ಷಣಾ ಎಂಬ ನಿಯಮ ಬೇಡ, ಯಾವುದಾದರೊಂದು ಪದಕ್ಕೆ ಮಾತ್ರ ಲಕ್ಷಣಾ ಎನ್ನೋಣ, ಆಗ ಈ ಪ್ರಶ್ನೆಗೆ ಅವಕಾಶವಿಲ್ಲದಂತಾಗುವುದು' ಎಂದರೆ, ವಿನಿಗಮನವಿಲ್ಲದಿರುವುದರಿಂದ ಎಲ್ಲ ಪದಗಳೂ ಲಾಕ್ಷಣಿಕವೇ ಆಗಬೇಕಾಗುವುದು'—ಈ ಆಕ್ಷೇಪಕ್ಕೆ ಸಮಾಧಾನವಾಗಿ ಹೇಳುತ್ತೇವೆ– 'ಎಲ್ಲ ಪದಗಳಿಗೆ ಅನ್ವಯದಲ್ಲಿ ಲಕ್ಷಣಾವನ್ನು ನಾವು ಒಪ್ಪುವುದಿಲ್ಲ, ಅನ್ವಿತಾಭಿಧಾನವಾದದಂತೆ ಶಕ್ತಿಯಿಂದಲೇ ಅನ್ವಯಭಾನ ಎನ್ನುತ್ತೇವೆ, ಅನ್ವಯವನ್ನು ಅಶಕ್ಯವೆಂದು ಒಪ್ಪುವುದಿಲ್ಲ.' ಎಂದು.

ಅಭಿಹಿತಾನ್ವಯವಾದದಲ್ಲಿ ಪದಗಳಿಂದ ಶಕ್ತಿವೃತ್ತಿಯಿಂದ ಅಭಿಹಿತವಾದ ಪದಾರ್ಥಗಳು ಲಕ್ಷಣಾವೃತ್ತಿಯಿಂದ ಅನ್ವಯವನ್ನು ಹೇಳುತ್ತವೆ ಎಂದಮೇಲೆ ವಾಕ್ಯಲಕ್ಷಣಾ ಆವಶ್ಯಕವೆ, ಲಾಕ್ಷಣಿಕ ಪದವು ಅನುಭಾವಕವೆಂದೂ ಒಪ್ಪಬೇಕು.'ಎಂದರೆ—

**ಅಭಿಹಿತಾನ್ವಯ ವಾದಿಭಿಸ್ತಾರ್ಕಿಕೈರಪ್ಯನ್ವಯೇ ಲಕ್ಷಣಾನಂಗೀಕಾರಾಚ್ಚ ।**

ಅಭಿಹಿತಾನ್ವಯವಾದಿ ಮೀಮಾಂಸಕರು ಅನ್ವಯದಲ್ಲಿ ಲಕ್ಷಣಾ ಅಂಗೀಕಾರ ಮಾಡಿದರೂ ಅಭಿಹಿತಾನ್ವಯವಾದಿಗಳೇ ಆದ ತಾರ್ಕಿಕರೂ ಕೂಡ ಅನ್ವಯದಲ್ಲಿ ಲಕ್ಷಣಾವನ್ನು ಒಪ್ಪಿಲ್ಲ. ಸಮಭಿವ್ಯಾಹಾರ ವಶದಿಂದಲೆ ಅನ್ವಯವು ಶಾಬ್ದಬೋಧದಲ್ಲಿ ಕಾಣುತ್ತದೆ ಎಂದೇ ಒಪ್ಪಿದ್ದಾರೆ. ಅದರಿಂದ ವಾಕ್ಯಲಕ್ಷಣಾಕ್ಕೆ ಪ್ರಸಕ್ತಿ ಇಲ್ಲ. ಹೀಗೆ ಹೇಳದಿದ್ದರೆ 'ಅನನ್ಯಲಭ್ಯಃ ಶಬ್ದಾರ್ಥಃ' ಎಂಬ

ನ್ಯಾಯವಿರೋಧ. ಸಮಭಿವ್ಯಾಹಾರದಿಂದಲೇ ಅನ್ವಯಭಾನ ಶಕ್ಯವಿರುವಾಗ ಅದರಲ್ಲಿ ಲಕ್ಷಣಾ ವನ್ನು ಹೇಳುವುದು ಯುಕ್ತವಾಗುವುದಿಲ್ಲ.

**ಅನ್ವಯೋ ಲಕ್ಷ್ಯತ ಇತಿ ಪಕ್ಷೇಽಪಿ ಪದಾಂತರೈಃ ಪ್ರತಿಯೋಗ್ಯುಪಸ್ಥಿತೌ ಪ್ರಧಾನಸ್ಯೈಕ ಪದಸ್ಯ ಅನ್ವಯಲಕ್ಷಕತ್ವೋಪಪತ್ತೇಶ್ಚ ।**

ಅನ್ವಯವು ಲಕ್ಷ್ಯ ಎನ್ನುವ ಪಕ್ಷದಲ್ಲಿಯೂ ವಾಕ್ಯಲಕ್ಷಣಾ ಇಲ್ಲ. ಇತರ ಎಲ್ಲ ಪದಗಳಿಂದ ಅನ್ವಯ ಪ್ರತಿಯೋಗಿಯ ಉಪಸ್ಥಿತಿ ಉಂಟಾದಾಗ ಕೊನೆಗೆ ಉಳಿದ ಒಂದು ಪ್ರಧಾನ ಪದವೇ ಅನ್ವಯ ಲಕ್ಷಕವಾಗುತ್ತದೆ. ಲಕ್ಷಣಯಾ ಅನ್ವಯಾನುಭವ ಉಂಟುಮಾಡುತ್ತದೆ. ಉದಾ: ಅರ್ಥವಾದಗಳಲ್ಲಿರುವ ಎಲ್ಲ ಪದಗಳೂ ಕರ್ಮಪ್ರಾಶಸ್ತ್ಯವನ್ನು ಲಕ್ಷಣಯಾ ಬೋಧಿಸಿದಾಗ ಅವುಗಳೊಂದಿಗೆ ಏಕವಾಕ್ಯತ್ವವನ್ನು ಹೊಂದಿರುವ ವಿಧಿ ವಾಚಕವಾದ ಲಿಙಾದಿ ಪ್ರಧಾನ ಪದವು ಆ ಪ್ರಾಶಸ್ತ್ಯದ ಅನ್ವಯವನ್ನು ಕರ್ಮದಲ್ಲಿ ಬೋಧಿಸುತ್ತದೆ. ವಿಧಿಪದವು ಅನ್ವಯಾನುಭಾವಕ ವಾಗುತ್ತದೆ. ಲಾಕ್ಷಣಿಕ ಪದಗಳು ಅನ್ವಯಾನುಭಾವಕವಾಗುವುದಿಲ್ಲ. ಪ್ರಾಶಸ್ತ್ಯರೂಪವಾದ ಅನ್ವಯ ಪ್ರತಿಯೋಗಿಯ ಉಪಸ್ಥಿತಿಯನ್ನು ಮಾತ್ರ ಉಂಟುಮಾಡುತ್ತದೆ. ಇದನ್ನು 'ವಿಧಿನಾ ತ್ವೇಕವಾಕ್ಯತ್ವಾತ್ ಸ್ತುತ್ಯರ್ಥೇನ ವಿಧೀನಾಂ ಸ್ಯುಃ' ಎಂಬ ಮೀಮಾಂಸಾ ಸೂತ್ರವು ಹೇಳುತ್ತಿದೆ.

ಪ್ರಕೃತ ಸತ್ಯಾದಿವಾಕ್ಯದಲ್ಲಿಯೂ ಲಕ್ಷಣಪರವಾದ ಸತ್ಯಾದಿ ಪದಗಳು ಅನ್ವಯ ಪ್ರತಿಯೋಗಿಯಾದ ಸತ್ಯತ್ವಾದಿ ಲಕ್ಷಣಗಳ ಉಪಸ್ಥಿತಿಯನ್ನು ಉಂಟುಮಾಡಿದಾಗ ಲಕ್ಷ್ಯಪರವಾದ ಬ್ರಹ್ಮವಾಚಕವಾದ ಪ್ರಧಾನ ಬ್ರಹ್ಮಪದವು ಆ ಲಕ್ಷಣಗಳ ಅನ್ವಯವನ್ನು ಲಕ್ಷ್ಯ ಬ್ರಹ್ಮನಲ್ಲಿ ಹೇಳಿ ಅನ್ವಯಾನುಭವಜನಕವಾಗಬೇಕು. ಆದರೆ ಅದ್ವೈತರೀತಿಯಿಂದ ಆ ಬ್ರಹ್ಮಶಬ್ದವೂ ಲಾಕ್ಷಣಿಕವೆಂದರೆ ಅದು ಅನ್ವಯಾನುಭಾವಕವಾಗುವುದಿಲ್ಲ.

'ಗಂಗಾಯಾಂ ಘೋಷಃ' ಎಂಬಲ್ಲಿಯೂ ಗಂಗಾಪದವು ತೀರವನ್ನು ಲಕ್ಷಣಯಾ ತಿಳಿಸಿದಾಗ ಅದರ ಅನ್ವಯವನ್ನು ಪ್ರಧಾನವಾದ ಘೋಷಪದವು ಹೇಳಿ ಅನ್ವಯಾನುಭಾವಕವಾಗುತ್ತದೆ. ಅದು ಪ್ರಧಾನ ಏಕೆಂದರೆ ಶಾಬ್ದಬೋಧದಲ್ಲಿ ಮುಖ್ಯವಿಶೇಷ್ಯವಾದ ಘೋಷಕ್ಕೆ ಸಮರ್ಪಕವಾಗಿದೆ. ಶಾಬ್ದಬೋಧದಲ್ಲಿ ಘೋಷವು ಮುಖ್ಯವಿಶೇಷ್ಯವಾಗಿ ಭಾನವಾಗಲು ಪ್ರಯೋಜಕವಾಗಿದೆ.

**'ಗಾಮಾನಯೇ'ತ್ಯಸ್ಮಾತ್ 'ಗಾಮಾನಯ ಶುಕ್ಲಾಂ ದಂಡೇನ' ಇತಿ ವಾಕ್ಯಸ್ಯೇವ ಇಹ ಪದಾಂತರ ಪ್ರಯುಕ್ತಸ್ಯ ಅಧಿಕಲಕ್ಷಕತ್ವಸ್ಯಾಭಾವಾಚ್ಚ ।**

'ಗಾಮಾನಯ' 'ಹಸುವನ್ನು ತಾ' ಎಂಬ ವಾಕ್ಯಕ್ಕಿಂತ 'ಗಾಮಾನಯ ಶುಕ್ಲಾಂ ದಂಡೇನ' 'ದಂಡದಿಂದ ಬಿಳಿಹಸುವನ್ನು ತಾ' ಎಂಬ ವಾಕ್ಯದಲ್ಲಿ, ಶುಕ್ಲ ದಂಡ ಎಂಬ ಅಧಿಕಪದಗಳು ಪ್ರಯುಕ್ತ ವಾಗಿರುವುದರಿಂದ ಕೇವಲ ಹಸುವನ್ನು ತರುವುದಕ್ಕಿಂತ ಅಧಿಕವಾಗಿ ಬಿಳಿಹಸುವನ್ನು ದಂಡದಿಂದ ತರುವ ಕ್ರಿಯೆಯ ಅನ್ವಯ ಕಾಣುತ್ತದೆ. ಪ್ರಕೃತ ಹಾಗೇ 'ವಿಜ್ಞಾನಮಾನಂದಂ ಬ್ರಹ್ಮ' ಎಂಬುದಕ್ಕಿಂತ

'ಸತ್ಯಂಜ್ಞಾನಮನಂತಂ ಬ್ರಹ್ಮ' ಎಂಬಲ್ಲಿ ಸತ್ಯಾದಿ ಅಧಿಕಪದಪ್ರಯುಕ್ತವಾಗಿ ಸತ್ಯತ್ವಾದಿ ಅಧಿಕ ಲಕ್ಷಣಗಳ ಪ್ರತೀತಿ ಉಂಟಾಗಬೇಕು. ಆಗುತ್ತಿಲ್ಲ. ವಾಕ್ಯಕ್ಕೆ ಲಕ್ಷಣಯಾ ಬೋಧಕತ್ವವನ್ನು ಹೇಳಿ ಏನೂ ಪ್ರಯೋಜನವಿಲ್ಲ. ಎರಡೂ ವಾಕ್ಯಗಳು ಒಂದೇ ಅಖಂಡ ಚೈತನ್ಯ ಸ್ವರೂಪವನ್ನು ಬೋಧಿಸುತ್ತಿವೆ. ಆದರಿಂದ ವಾಕ್ಯಲಕ್ಷಣಾದಿಂದ ಅಂದರೆ ಸತ್ಯಾದಿ ಎಲ್ಲಪದಗಳಿಗೂ ಲಾಕ್ಷಣಿಕತ್ವವನ್ನು ಒಪ್ಪಿದ್ದರಿಂದ ಏನೂ ಪ್ರಯೋಜನವಿಲ್ಲವಾಗಿದೆ. ಬ್ರಹ್ಮಪದ ಒಂದೇ ಸಾಕು, ಸತ್ಯಾದಿ ಪದಾಂತರಗಳು ವ್ಯರ್ಥ ಎಂಬ ದೋಷ ಪರಿಹಾರವಾಗಿಲ್ಲ.

'ವಿಜ್ಞಾನಮಾನಂದಂ ಬ್ರಹ್ಮ' ಎಂಬುದು ವಿಜ್ಞಾನ ಆನಂದಸ್ವರೂಪವನ್ನು ಮಾತ್ರ ಹೇಳುತ್ತದೆ, 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಎಂಬುದು ಅನೃತ ಜಡಾದಿ ವ್ಯಾವೃತ್ತಿಯನ್ನು ಅಧಿಕವಾಗಿ ಹೇಳುತ್ತದೆ ಎಂದಾದರೆ ಮಾತ್ರ ಸತ್ಯಾದಿ ಪದಗಳು ಸಾರ್ಥಕವಾಗುವುವು. ಅವೂ ಕೇವಲ ಬ್ರಹ್ಮಸ್ವರೂಪವನ್ನೇ ಹೇಳಿದರೆ ಅದನ್ನು ಬ್ರಹ್ಮಪದವೇ ಹೇಳುತ್ತಿರುವುದರಿಂದ ಅವು ವ್ಯರ್ಥವೆ. ವಾಕ್ಯಲಕ್ಷಣಾ ಮಾಡಿದ್ದರಿಂದಲೇ ಈ ವೈಯರ್ಥ್ಯದೋಷಕ್ಕೆ ಅವಕಾಶ ಉಂಟಾಗಿದೆ. ಲಕ್ಷಣಾ ಮಾಡದಿರುತ್ತಿದ್ದರೆ ಸಾರ್ಥಕ್ಯವಿರುತ್ತಿತ್ತು. ಹೀಗಾಗಿ ಸತ್ಯಾದಿವಾಕ್ಯಗಳಿಗೆ ಅಖಂಡಾರ್ಥಪರತ್ವ ಅನುಚಿತ.



**अस्तु वान्यत्र पदसंघे लक्षणा, इह तु न । तथाहि यदि कृत्स्नं सत्यादिवाक्यं लक्षकं, तर्हि तस्य विशिष्टार्थत्वेऽनंतब्रह्मशब्द-विरोधोक्तिः, सत्यादिपदैरनृतादि व्यवच्छेदोक्तिः, ''विज्ञानमानंदं ब्रह्म'' ''सत्यं ज्ञानं'' इत्यादिश्रुतिर्ब्रह्मणो विज्ञानाद्यात्मकत्वे प्रमाणमित्युक्तिः, ''एकमेवाद्वितीयं'' इत्यादौ सजातीयविजातीयस्व-गतनानात्वनिषेधोक्तिरित्याद्ययुक्तं स्यात् । सत्याद्युद्देशेन ब्रह्मत्वा-विधानाद्ब्रह्मबुभुत्सानिवृत्तिश्च न स्यात् । सगुणसप्रपंचवाक्ययोरपि लक्षणयाऽखंडार्थपरत्वसंभवेन सगुणनिर्गुणादिविद्याविभागः, निर्गुणादिवाक्यैः सगुणादिवाक्यानां बाध इत्यादि चासंगतं स्यात् । ''तदैक्षत'', ''स एषोऽनंत'' इत्यादीनामपि वाक्यलक्षणयाऽखंड-परत्वेनेक्षणादौ तात्पर्याभावेनेक्षणानंतत्वादिलिंगैः प्रधानाकाशादि-निरासकेक्षत्याद्यधिकरणानारंभश्च स्यात् । कृत्स्नस्य ब्रह्मकांडस्य वाक्यलक्षणया शून्यादिपरत्वं कृत्स्नस्य च कर्मकांडस्य**

**चैत्यवंदनादिपरत्वं निर्विशेषधर्मपरत्वं वा स्यादित्यलम् । तस्मादखंडार्थत्वे पदांतरवैयर्थ्यं दुर्वारम् ।**

**इहेति ।।** सत्यं ज्ञानं विज्ञानमानंदं इत्यादावित्यर्थः ।। **विरोधोक्तिरिति ।।** तत्र सर्वत्र इत्याद्ययुक्तं स्यादित्यनेन संबध्यते । सत्यादिपदैः सत्यादिबोधनादिति भावः ।। **प्रमाणमित्युक्तिरिति ।।** स्वार्थस्य त्यागादिति भावः ।। **निषेधोक्तिरिति ।।** अस्यापि स्वरूपमात्रपरत्वादिति भावः । **ईक्षत्यादी**त्यादिपदेन आकाशस्तल्लिंगादित्यधिकरणपरिग्रहः । तात्पर्याभावेऽपि मानांतराविरोधात् तत्सिद्धिरित्येतत्प्रागेव निरस्तमिति भावः । प्रकृतमुपसंहरति— **तस्मादिति ।**



**ಅಸ್ತು ವಾನ್ಯತ್ರ, ಪದಸಂಘೇ ಲಕ್ಷಣಾ। ಇಹ ತು ನ ।**

ಗಭೀರಾಯಾಂ ನದ್ಯಾಂ, ಗಚ್ಛ ಗಚ್ಛಸಿ ಚೇತ್ ಕಾಂತ ಇತ್ಯಾದಿ ಲೌಕಿಕ ವಾಕ್ಯಗಳಲ್ಲಿಯೂ 'ಅರ್ಧಮಂತರ್ವೇದಿ ಮಾತವ್ಯಂ' 'ವಾಯುರ್ವೈ ಕ್ಷೇಪಿಷ್ಠಾ ದೇವತಾ' ಇತ್ಯಾದಿ ವೈದಿಕ ವಾಕ್ಯಗಳಲ್ಲಿಯೂ ಪದಸಮೂಹರೂಪ ವಾಕ್ಯದಲ್ಲಿ ಲಕ್ಷಣಾವನ್ನು ಒಪ್ಪಿದರೂ ಪ್ರಕೃತ 'ಸತ್ಯಂ ಜ್ಞಾನಮನಂತಂ ಬ್ರಹ್ಮ' 'ವಿಜ್ಞಾನಮಾನಂದಂ ಬ್ರಹ್ಮ' ಇತ್ಯಾದಿ ವಾಕ್ಯಗಳಲ್ಲಿ ವಾಕ್ಯಲಕ್ಷಣಾ ಒಪ್ಪುವುದು ಅದ್ವೈತಕ್ಕೇ ಅನಿಷ್ಟಕರವಾಗುತ್ತದೆ.

**ತಥಾಹಿ— ಯದಿ ಕೃತ್ಸ್ನಂ ಸತ್ಯಾದಿ ವಾಕ್ಯಂ ಲಕ್ಷಕಂ ತರ್ಹಿ,**

1. **ತಸ್ಯ ವಿಶಿಷ್ಟಾರ್ಥತ್ವೇ ಅನಂತ ಬ್ರಹ್ಮ ಶಬ್ದ ವಿರೋಧೋಕ್ತಿಃ,**
2. **ಸತ್ಯಾದಿ ಪದೈರನೃತಾದಿ ವ್ಯವಚ್ಛೇದೋಕ್ತಿಃ,**
3. **'ವಿಜ್ಞಾನಮಾನಂದಂ ಬ್ರಹ್ಮ' 'ಸತ್ಯಂ ಜ್ಞಾನಂ' ಇತ್ಯಾದಿ ಶ್ರುತಿ ಬ್ರಹ್ಮಣೋ ವಿಜ್ಞಾನಾದ್ಯಾತ್ಮಕತ್ವೇ ಪ್ರಮಾಣಮಿತ್ಯುಕ್ತಿಃ**
4. **ಏಕಮೇವಾದ್ವಿತೀಯಮಿತ್ಯಾದೌ ಸಜಾತೀಯ ವಿಜಾತೀಯ ಸ್ವಗತನಾನಾತ್ವ ನಿಷೇಧೋಕ್ತಿರಿತ್ಯಾದ್ಯಯುಕ್ತಂ ಸ್ಯಾತ್ ।।**

ವಾಕ್ಯಲಕ್ಷಣೆಯು ಅದ್ವೈತಪ್ರತಿಪಾದನೆಗೆ ವಿರೋಧಿಯಾಗಿ ಅನಿಷ್ಟಕರವಾಗುವುದು ಏಕೆಂದರೆ (1) ಸತ್ಯಾದಿ ವಾಕ್ಯವೆಲ್ಲವೂ ಅಖಂಡಚೈತನ್ಯಸ್ವರೂಪವನ್ನೇ ಲಕ್ಷಣಯಾ ಹೇಳಿದರೆ, 'ಸತ್ಯಾದಿ ಪದಗಳು ಸತ್ಯತ್ವಾದಿ ವಿಶಿಷ್ಟಬೋಧಕವಾದರೆ ಅವುಗಳಿಗೆ ಅನಂತ ಬ್ರಹ್ಮಪದಗಳ ವಿರೋಧವನ್ನು

ಹೇಳುತ್ತಿದ್ದಾರೆ. ಅದು ಕೂಡುವುದಿಲ್ಲ. ಅನಂತ ಬ್ರಹ್ಮಶಬ್ದಗಳು ಲಕ್ಷಣಯಾ ಕೇವಲ ಸ್ವರೂಪವನ್ನೇ ಹೇಳಿದರೆ ಸತ್ಯತ್ವಾದಿ ವೈಶಿಷ್ಟ್ಯಕ್ಕೆ ಅವು ವಿರೋಧಿಯಾಗುವುದಿಲ್ಲ. ವಿಶೇಷಣ ಮತ್ತು ಕೇವಲ ವಿಶೇಷ್ಯಗಳಿಗೆ ಎಂದೂ ವಿರೋಧವಿಲ್ಲ. 'ದೇವದತ್ತನಾಗಿ ದಂಡಿಯಲ್ಲ, ದಂಡಿಯಾದರೆ ದೇವದತ್ತನಲ್ಲ' ಎಂದು ವಿರೋಧವಿರುವುದಿಲ್ಲ.

(2) ಸತ್ಯಾದಿ ಪದಗಳು ಅನೃತಾದಿ ವ್ಯಾವೃತ್ತಿ ಬೋಧಕಗಳೆಂದೂ ಬ್ರಹ್ಮನಲ್ಲಿ ಅನೃತಾದಿ ವ್ಯಾವೃತ್ತಿ ಬೋಧನವೇ ಸತ್ಯಾದಿ ಪದಗಳ ಪ್ರಯೋಜನವೆಂದೂ ಹೇಳುತ್ತಾರೆ. ಸತ್ಯಾದಿ ಪದಗಳು ಲಕ್ಷಣಯಾ ಕೇವಲ ಸ್ವರೂಪವನ್ನೇ ಹೇಳುತ್ತವೆ, ಅದರಲ್ಲಿಯೇ ಅವುಗಳಿಗೆ ತಾತ್ಪರ್ಯ ಎಂದು ಹೇಳಿದರೆ, ವ್ಯಾವರ್ತಕಧರ್ಮಗಳನ್ನು ಬೋಧಿಸದಿದ್ದರೆ, ವ್ಯಾವೃತ್ತಿ ಬೋಧನರೂಪ ಪ್ರಯೋಜನ ಕೂಡುವುದಿಲ್ಲ.

(3) 'ವಿಜ್ಞಾನಮಾನಂದಂ ಬ್ರಹ್ಮ, ಸತ್ಯಂ ಜ್ಞಾನಮನಂತಂ ಬ್ರಹ್ಮ ಇತ್ಯಾದಿ ವಾಕ್ಯಗಳು 'ಬ್ರಹ್ಮನು ವಿಜ್ಞಾನಾದಿ ಸ್ವರೂಪ'ನೆಂದು ಹೇಳುವುದಿಲ್ಲ. ಹಾಗೆ ಹೇಳಿದರೆ, ವಿಜ್ಞಾನಾದಿ ಸ್ವರೂಪತ್ವ ರೂಪ ಪ್ರಕಾರವನ್ನು ಬ್ರಹ್ಮನಲ್ಲಿ ಹೇಳಿದಂತಾಗುವುದರಿಂದ ವಾಕ್ಯಗಳಿಗೆ ನಿಷ್ಪ್ರಕಾರಕಜ್ಞಾನಜನಕತ್ವ ರೂಪ ಅಖಂಡಾರ್ಥತ್ವಕ್ಕೆ ಹಾನಿ. ಅದರಿಂದ ಸ್ವಾರ್ಥತ್ಯಾಗಮಾಡಿ ವಾಕ್ಯಲಕ್ಷಣಾದಿಂದ ಈ ವಾಕ್ಯಗಳು ಸ್ವರೂಪಮಾತ್ರ ವಿಷಯಕ ನಿಷ್ಪ್ರಕಾರಕ ಜ್ಞಾನಜನಕವಾಗುತ್ತವೆ ಎನ್ನುತ್ತಾರೆ. ಆದರೆ ಬ್ರಹ್ಮನ ಸ್ವರೂಪಲಕ್ಷಣವೇನೆಂದು ಕೇಳಿದರೆ ವಿಜ್ಞಾನಾದಿಸ್ವರೂಪನೆನ್ನುತ್ತಾರೆ, ಅದಕ್ಕೆ 'ವಿಜ್ಞಾನಮಾನಂದಂ' ಇತ್ಯಾದಿ ವಾಕ್ಯಗಳೇ ಸ್ವಾರ್ಥಪರವಾಗಿದ್ದು ಪ್ರಮಾಣ ಎನ್ನುತ್ತಾರೆ. ಇದು ಪರಸ್ಪರ ವ್ಯಾಹತ.

(4) 'ಏಕಮೇವಾದ್ವಿತೀಯಂ ಬ್ರಹ್ಮ' ಎಂಬಲ್ಲಿ 'ಏಕಂ' 'ಏವ' 'ಅದ್ವಿತೀಯಂ' ಎಂಬ ಮೂರು ಪದಗಳೂ ಕೂಡ ವಾಕ್ಯಲಕ್ಷಣಯಾ ಬ್ರಹ್ಮನ ಅಖಂಡ ಸ್ವರೂಪಬೋಧಕವಾಗಿವೆ. ಅದರಿಂದ ಈ ವಾಕ್ಯ ತತ್ವಾವೇದಕ. ಅಖಂಡವೇ ತತ್ವ ಎನ್ನುತ್ತಾರೆ, ಬ್ರಹ್ಮಶಬ್ದದಿಂದಲೇ ಅಖಂಡಬೋಧ ಉಂಟಾಗುತ್ತಿರುವಾಗ ಈ ಮೂರುಪದಗಳು ಏಕೆ ಎಂದರೆ, ಇವು ಕ್ರಮವಾಗಿ ಬ್ರಹ್ಮನಲ್ಲಿ ಸಜಾತೀಯ ವಿಜಾತೀಯ ಸ್ವಗತ ಭೇದರಾಹಿತ್ಯವನ್ನು ಹೇಳುತ್ತವೆ ಎನ್ನುತ್ತಾರೆ. ಇವು ಪರಸ್ಪರವಿರುದ್ಧ.

**ಇತ್ಯಾದಿ ಅಯುಕ್ತಂ ಸ್ಯಾತ್**

ಇವು ನಾಲ್ಕು ಅನುಪಪತ್ತಿಗಳು ಉಪಲಕ್ಷಣ. ಇಂಥ ಅನೇಕ ಅನುಪಪತ್ತಿಗಳು ವಾಕ್ಯಲಕ್ಷಣಾಪಕ್ಷದಲ್ಲಿ ಇವೆ.

ಸತ್ಯಾದಿ ವಾಕ್ಯಗಳಿಗೆ ಸತ್ಯತ್ವಾದಿ ವಿಶಿಷ್ಟದಲ್ಲಿಯೂ ಅವಾಂತರ ತಾತ್ಪರ್ಯವಿರುವುದರಿಂದ ವಿರೋಧಪ್ರಸಕ್ತಿ ಇದೆ ಎನ್ನುವುದಾದರೆ ಅಖಂಡಾರ್ಥತ್ವಭಂಗ. ವಾಕ್ಯಲಕ್ಷಣಾಕ್ಕೆ ಅವಕಾಶವೂ ಇಲ್ಲವಾಗುತ್ತದೆ. ವಿಶಿಷ್ಟಾರ್ಥವೂ ತಾತ್ವಿಕವಾದೀತು. ವೇದತಾತ್ಪರ್ಯ ಗೋಚರವಾದುದು ಅತಾತ್ವಿಕ ವಾಗಲು ಶಕ್ಯವಿಲ್ಲ. ಅವಾಂತರ ತಾತ್ಪರ್ಯಗೋಚರವಾದ್ದರಿಂದ ಅತಾತ್ವಿಕ ಎನ್ನುವಂತಿಲ್ಲ.

ದರ್ಶಾದಿಗಳಿಗೆ ಅಂಗಭೂತವಾದ ಪ್ರಯಾಜಾದಿಗಳಲ್ಲಿ ಅವಾಂತರ ತಾತ್ಪರ್ಯವಿದ್ದರೂ ಅವು ಪ್ರಧಾನ ದರ್ಶಾದಿಗಳಿಗೆ ಸಮಸತ್ತಾಕವೇ ಆಗಿರುವುದು ಕಂಡಿದೆ.

**ಸತ್ಯಾದ್ಯುದ್ದೇಶೇನ ಬ್ರಹ್ಮತ್ವಾವಿಧಾನಾದ್ ಬ್ರಹ್ಮಬುಭುತ್ಸಾನಿವೃತ್ತಿಶ್ಚ ನ ಸ್ಯಾತ್ ।**

ಬ್ರಹ್ಮಸ್ವರೂಪ ಜಿಜ್ಞಾಸೆಯಿಂದ ಪ್ರಶ್ನೆ ಮಾಡಿದಾಗ ಆ ಜಿಜ್ಞಾಸೆ ತಣಿಯಬೇಕಾದರೆ ಸತ್ಯಾದಿಗಳನ್ನು ಬ್ರಹ್ಮವೆಂದು, ಬ್ರಹ್ಮಸ್ವರೂಪವೆಂದು ಸತ್ಯಾದಿಯನ್ನು ಉದ್ದೇಶಿಸಿ ಬ್ರಹ್ಮಸ್ವರೂಪತ್ವವನ್ನು ವಿಧಾನ ಮಾಡಬೇಕು. ವಾಕ್ಯಲಕ್ಷಣಾ ಪಕ್ಷದಲ್ಲಿ ಕೇವಲ ಅಖಂಡಬ್ರಹ್ಮಸ್ವರೂಪವನ್ನು ಮಾತ್ರ ಸತ್ಯಾದಿ ವಾಕ್ಯ ಹೇಳುತ್ತದೆ. ಹೊರತು, ಒಂದನ್ನು ಉದ್ದೇಶ ಮಾಡಿ ಇನ್ನೊಂದನ್ನು ವಿಧಾನ ಮಾಡುವುದಿಲ್ಲ. ಜಿಜ್ಞಾಸು ಮೊದಲೇ ತಿಳಿದಿರುವ ಬ್ರಹ್ಮಸ್ವರೂಪಕ್ಕಿಂತ ಹೆಚ್ಚೇನೂ ಈ ವಾಕ್ಯ ಹೇಳುವುದಿಲ್ಲ. ಹೀಗಾಗಿ ಬ್ರಹ್ಮಸ್ವರೂಪಜಿಜ್ಞಾಸೆ ನಿವೃತ್ತಿ ಹೊಂದುವುದಿಲ್ಲ.

**ಸಗುಣಸಪ್ರಪಂಚ ವಾಕ್ಯಯೋರಪಿ ಲಕ್ಷಣಯಾ ಅಖಂಡಾರ್ಥಪರತ್ವ ಸಂಭವೇನ ಸಗುಣ ನಿರ್ಗುಣಾದಿ ವಿಭಾಗಃ, ನಿರ್ಗುಣಾದಿ ವಾಕ್ಯೈಃ ಸಗುಣಾದಿ ವಾಕ್ಯಾನಾಂ ಬಾಧಃ ಇತ್ಯಾದಿ ಚಾಸಂಗತಂ ಸ್ಯಾತ್ ।**

ಯಃ ಸರ್ವಜ್ಞಃ ಇತ್ಯಾದಿ ಸಗುಣ ಸಪ್ರಪಂಚ ವಾಕ್ಯಗಳನ್ನು ಅತತ್ತ್ವಾವೇದಕವೆಂದು ಉಪೇಕ್ಷೆಮಾಡಬೇಕಾಗಿರಲಿಲ್ಲ. ಲಕ್ಷಣಾಮಾಡಿ ಅಖಂಡಾರ್ಥಪರತ್ವವನ್ನೇ ಸ್ವೀಕರಿಸಬಹುದಿತ್ತು. ಆಗ ಲಕ್ಷಣಯಾ ಅಖಂಡಾರ್ಥಪರವೇ ಆದ 'ಕೇವಲೋ ನಿರ್ಗುಣಶ್ಚ' ಇತ್ಯಾದಿ ವಾಕ್ಯಗಳಂತೆಯೇ ತತ್ತ್ವಾವೇದಕವೇ ಆಗುತ್ತಿದ್ದವು. ಹಾಗೆ ಮಾಡದೆ ಸಗುಣ ಸಪ್ರಪಂಚ ವಾಕ್ಯಗಳು ಅತತ್ತ್ವಾವೇದಕ, ನಿರ್ಗುಣ ವಾಕ್ಯಗಳು ತತ್ತ್ವಾವೇದಕಗಳೆಂದು ಅಪೌರುಷೇಯ ವೇದದಲ್ಲಿ ಎರಡು ವಿಭಾಗ ಮಾಡಿದ್ದು ಅಸಂಗತ. ನಿರ್ಗುಣ ನಿಷ್ಪ್ರಪಂಚ ವಾಕ್ಯಗಳಿಂದ ಸಗುಣ ಸಪ್ರಪಂಚ ವಾಕ್ಯಗಳಿಗೆ ಬಾಧ ಎಂದು ಏಕಾರ್ಥಕವಾಗಿರುವ, ಅಪೌರುಷೇಯತ್ವೇನ ಪ್ರಮಾಣವಾಗಿರುವ ವೇದದಲ್ಲಿಯೇ ಎರಡು ಭಾಗ ಮಾಡಿ ಬಾಧ್ಯ ಬಾಧಕಭಾವ ಕಲ್ಪನೆ ಮಾಡಿದ್ದೂ ಅಸಂಗತ. ಇದಕ್ಕೆ ಕಾರಣ ಅಪ್ರಾಮಾಣಿಕವಾದ ಈ ವಾಕ್ಯಲಕ್ಷಣೆಯ ಸ್ವೀಕಾರ.

**ತದೈಕ್ಷತ ಸ ವಿಷ್ಣೋರನಂತ ಇತ್ಯಾದೀನಾಮಪಿ ವಾಕ್ಯಲಕ್ಷಣಯಾ ಅಖಂಡ ಪರತ್ವೇನ ಈಕ್ಷಣಾದೌ ತಾತ್ಪರ್ಯಾಭಾವೇನ, ಈಕ್ಷಣಾನಂತತ್ವಾದಿಲಿಂಗೈಃ ಪ್ರಧಾನಾ-ಕಾಶಾದಿನಿರಾಸಂಈಕ್ಷತ್ಯಾದ್ಯಧಿಕರಣಾನಾರಂಭಶ್ಚ ಸ್ಯಾತ್ ॥**

'ಸದೇವ ಸೋಮ್ಯೇದಮಗ್ರ ಆಸೀತ್ । ಏಕಮೇವಾದ್ವಿತೀಯಂ ತದೈಕ್ಷತ । ತತ್ತೇಜೋऽಸೃಜತ ।' ಎಂಬಲ್ಲಿ ಜಗತ್ಕಾರಣವೆಂದು ಉಕ್ತವಾಗಿರುವ 'ಸತ್' ಎಂದರೆ ಜಡವಾದ ಪ್ರಧಾನವಲ್ಲ 'ಐಕ್ಷತ' ಎಂದು ಹೇಳಿದ ಈಕ್ಷಣ, ಆಲೋಚನೆ ಅದಕ್ಕೆ ಕೂಡುವುದಿಲ್ಲ. ಅದರಿಂದ ಬ್ರಹ್ಮನೇ ಇಲ್ಲಿ ಹೇಳಿದ 'ಸತ್' ಎಂದು ಈಕ್ಷತ್ಯಧಿಕರಣ, 'ಸರ್ವಾಣಿ ಹವಾ ಇಮಾನಿಭೂತಾನಿ

ಆಕಾಶಾದೇವ ಸಮುತ್ಪದ್ಯಂತೇ ಸ ಏಷೋಽನಂತಃ' ಎಂಬಲ್ಲಿ 'ಆಕಾಶ'ವೆಂದರೆ ಭೂತಾಕಾಶವಲ್ಲ ಅನಂತತ್ವಾದಿ ಲಿಂಗಗಳಿಂದ ಅದು ಬ್ರಹ್ಮನೆ ಎಂದು ಆಕಾಶಾಧಿಕರಣ ಎನ್ನುತ್ತಾರೆ. ಆದರೆ 'ಐಕ್ಷತ' 'ಅನಂತಃ' ಎಂದು ಎಲ್ಲ ಪದಗಳೂ ಲಕ್ಷಣಯಾ ಅಖಂಡಾರ್ಥ ಪರವಾದರೆ ಅವುಗಳಿಗೆ ಈಕ್ಷಣ ಅನಂತತ್ವಾದಿ ಲಿಂಗಗಳಲ್ಲಿ ತಾತ್ಪರ್ಯವಿಲ್ಲವಾದರ ಈಕ್ಷಣ ಅನಂತತ್ವಾದಿ ಲಿಂಗಗಳೇ ಇಲ್ಲಿ ವಿಷಯವಾಕ್ಯಗಳಲ್ಲಿ ಉಕ್ತವಾಗದಿರುವುದರಿಂದ ಪ್ರಧಾನಾಕಾಶಾದಿಗಳನ್ನು ಆ ಲಿಂಗಗಳಿಂದ ನಿರಾಸಮಾಡುವುದು ಅಶಕ್ಯವಾದೀತು, ಆ ಅಧಿಕರಣಗಳ ಪ್ರವೃತ್ತಿ ಕೂಡದೆ ಹೋದೀತು. ಸೂತ್ರಗ್ರಂಥ ಅನುಪಾದೇಯವಾದೀತು.

**ಕೃತ್ಸ್ನಸ್ಯ ಚ ಬ್ರಹ್ಮಕಾಂಡಸ್ಯ ವಾಕ್ಯಲಕ್ಷಣಯಾ ಶೂನ್ಯಾದಿ ಪರತ್ವಂ,**
**ಕೃತ್ಸ್ನಸ್ಯಚ ಕರ್ಮಕಾಂಡಸ್ಯ ಚೈತ್ಯವಂದನಾದಿ ಪರತ್ವಂ**
**ನಿರ್ವಿಶೇಷ ಧರ್ಮ ಪರತ್ವಂ ವಾ ಸ್ಯಾದಿತ್ಯಲಂ ॥**

**ತಸ್ಮಾತ್ ಅಖಂಡಾರ್ಥತ್ವೇ ಪದಾಂತರವೈಯರ್ಥ್ಯಂ ದುರ್ವಾರಂ ॥**

ಸತ್ಯಾದಿ ವಾಕ್ಯಗಳಿಗೆ ವಾಕ್ಯಲಕ್ಷಣಯಾ ಅಖಂಡಾರ್ಥಪರತ್ವವನ್ನು ಒಪ್ಪುವುದಾದರೆ ಇಡೀ ಬ್ರಹ್ಮಕಾಂಡಕ್ಕೆ ವಾಕ್ಯಲಕ್ಷಣೆಯಿಂದ ಶೂನ್ಯವಾದಿಗಳು ಮುಂತಾದವರು ತತ್ವವೆಂದು ಸ್ವೀಕರಿಸಿರುವ ಶೂನ್ಯಾದಿ ಪರತ್ವವನ್ನು ಏಕೆ ಒಪ್ಪಬಾರದು?ಇಡಿ ಕರ್ಮಕಾಂಡಕ್ಕೆ ಜೈನರು ಹೇಳುವ ಚೈತ್ಯವಂದನಾದಿ ಪರತ್ವವನ್ನು ಏಕೆ ಹೇಳಬಾರದು? ಅಥವಾ ಬ್ರಹ್ಮಕಾಂಡಕ್ಕೆ ನಿರ್ವಿಶೇಷಬ್ರಹ್ಮಪರತ್ವವನ್ನು ಸ್ವೀಕರಿಸಿದಂತೆ ಕರ್ಮಕಾಂಡಕ್ಕೆ ನಿರ್ವಿಶೇಷ ಧರ್ಮಪರತ್ವವನ್ನು ಏಕೆ ಒಪ್ಪಬಾರದು? ಹಾಗೆ ಒಪ್ಪಿದರೆ ವೇದಕ್ಕೆ ಪ್ರಾಮಾಣ್ಯವಿಲ್ಲವಾದೀತು ಎನ್ನುವುದಾದರೆ ಅಪ್ರಾಮಾಣಿಕವಾದ ನಿರ್ವಿಶೇಷ ಬ್ರಹ್ಮಪರತ್ವವನ್ನು ಒಪ್ಪಿದರೂ ಈ ಆಪತ್ತಿ ಅಪರಿಹಾರ್ಯವೆ. ಆದರಿಂದ ಸತ್ಯಾದಿ ವಾಕ್ಯವಿಡೀ ಲಾಕ್ಷಣಿಕವೆನ್ನುವುದು ಅಯುಕ್ತವೆಂದು ಸಿದ್ಧವಾಯಿತು. ಇನ್ನು ಈ ಬಗ್ಗೆ ವಾದ ಸಾಕು. ವಾಕ್ಯ ಅಖಂಡಾರ್ಥಪರವೆನ್ನುವ ಪಕ್ಷದಲ್ಲಿ ಬ್ರಹ್ಮಶಬ್ದ ಒಂದೇಸಾಕು, ಇತರ ಪದಗಳ ವೈಯರ್ಥ್ಯ ಅಪರಿಹಾರ್ಯವೆ.



अपिच सत्यानंदादिपदलक्ष्यत्वे ब्रह्मणो नदीपदलक्ष्यस्य तीरस्यानदीत्ववत् असत्यत्वानानंदत्वादिकं स्यादिति शून्यवादापत्तिः । मुक्तिश्चापुमर्थः स्यात् । आनंदानुभवाभावात् ।

ननु न नदीशब्देन नदीत्ववाचिना तदाश्रयव्यक्तेर्लक्षणा, किंतु तदाश्रयव्यक्ति-संबधिनस्तीरस्येति तस्यानदीत्वम् । इह तु सन्घट

**इत्यादाविव सत्तादिजातिवाचिभिः सत्यादिशब्दैः तदाश्रयव्यक्तेरेव लक्षणा । एवंच सत्त्वसंबंधस्याशाब्दत्वेऽपि तीरस्य नद्येव ब्रह्मणोऽपि घटस्येव सत्तया संबंधः सिध्यति, मुख्यार्थासंबंधे लक्षणायोगात् । ज़ातिव्यक्त्योश्च तादात्म्यसंबंधात् । उक्तं हि—**

**"सत्त्वादीनां हि जातीनां व्यक्तितादात्म्यदर्शनात् ।**
**लक्ष्यव्यक्तिरपि ब्रह्म सत्त्वादि न जहाति नः" ॥**

**इतीति चेन्न । व्यक्तिः शब्दार्थ इति मते सद्व्यक्तितोऽन्यस्यैव लक्षणीयत्वेन ब्रह्मणः सत्त्वासिद्धेः ।**

**अपि चेति** ॥ यद्यपि पूर्वं सत्यज्ञानादिवाक्यानां लक्षकत्वे विज्ञानादिरूपत्वे प्रमाणोक्तिर्न स्यादित्यत्रैवेदमुक्तप्रायं, तथापि तत्र पुरुषः उक्तः, इदानीं वस्तु उच्यत इति तस्य तात्पर्यं ध्येयम् । दृष्टांतवैषम्यमाशंकते— **नन्विति** ॥ ननु सत्यज्ञानादिवाक्यानां लक्ष्यत्वमात्रेणासत्यत्वानृतत्वादिकमापाद्यते उत सत्त्वादि-संबंधबोधकप्रमाणाभावाद्वेति । तत्राद्ये दोषमाह— **नन्विति** ॥ तीरस्यानदीत्वं न नदीपदलक्ष्यत्वप्रयुक्तम् । नद्या अप्यनदीत्वापत्तेः । किंतु शक्त्याश्रयसंबंधित्वप्रयुक्तम् । ब्रह्मणस्तु शक्यसत्त्वाश्रयत्वेन नासत्यत्वादिकमिति भावः । द्वितीय आह— **एवंचेति** ॥ तथापि मतांतर उक्तदोषतादवस्थ्यमेवेत्याह— **व्यक्तिरिति** ॥



**ಅಪಿ ಚ ಸತ್ಯಾನಂದಾದಿ ಪದಲಕ್ಷ್ಯತ್ವೇ ಬ್ರಹ್ಮಣೋ ನದೀಪದಲಕ್ಷ್ಯಸ್ಯ ತೀರಸ್ಯ ಅನದೀತ್ವವತ್ ಅಸತ್ಯತ್ವಾನಾನಂದತ್ವಾದಿಕಂ ಸ್ಯಾದಿತಿ ಶೂನ್ಯವಾದಾಪತ್ತಿಃ। ಮುಕ್ತಿಶ್ಚಾಪುರುಷಾರ್ಥಃ ಸ್ಯಾತ್। ಆನಂದಾನುಭವಾಭಾವಾತ್।**

ಸತ್ಯಾದಿ ಪದಗಳು ಲಕ್ಷಣಯಾ ಅಖಂಡಾರ್ಥಪರವಾದರೆ ಬ್ರಹ್ಮವು ಸತ್ಯವೆಂದು ಸಿದ್ಧವಾಗದೆ ಹೋದೀತು, ಅಸತ್ತೆಂದಾದೀತು, ಆನಂದಸ್ವರೂಪವೆಂದು ಸಿದ್ಧವಾಗದೆ ಹೋದೀತು, ಆನಂದ ವಿಲ್ಲವಾದೀತು. ಆದರಿಂದ ಅವು ಶಕ್ಯಾರ್ಥಪರವೆಂದು ಒಪ್ಪಬೇಕು, ಅಖಂಡಾರ್ಥಪರತ್ವದ ಆಸೆಯನ್ನು ಕೈಬಿಡಬೇಕು. 'ನದ್ಯಾಂ ಘೋಷಃ' ಎಂಬಲ್ಲಿ ನದೀಶಬ್ದವು ಲಕ್ಷಣಯಾ ತೀರಪರವಾದಾಗ ಆ ತೀರವು ಹೇಗೆ ನದಿಯಲ್ಲವೋ ಹಾಗೇ ಸತ್ಯಾನಂದಾದಿ ಪದಗಳು ಲಕ್ಷಣಯಾ ಬ್ರಹ್ಮಪರವಾದಾಗ

ಬ್ರಹ್ಮನೂ ಸತ್ಯ ಅಲ್ಲ ಜ್ಞಾನವಲ್ಲ ಆನಂದ ಅಲ್ಲ ಎಂದಾಗುವುದರಿಂದ ಅಸತ್ತಾದ ಶೂನ್ಯವನ್ನು ಸತ್ತೆನ್ನುವ ಬೌದ್ಧಮತದಂತೆಯೇ ಅಸತ್ತಾದ ಬ್ರಹ್ಮವನ್ನು ಸತ್ತೆನ್ನುವ ಅದ್ವೈತಮತವೂ ಹೇಯವಾದೀತು. ಬ್ರಹ್ಮವು ಆನಂದವಲ್ಲ, ಅನುಭವವಲ್ಲ ಎಂದಮೇಲೆ ಇಂಥ ಬ್ರಹ್ಮನ ಐಕ್ಯರೂಪವಾದ ಅದ್ವೈತಮೋಕ್ಷವು ಕೂಡ ಆನಂದಾನುಭವರಹಿತವಾಗಿದ್ದು ತಾರ್ಕಿಕ ಮೋಕ್ಷದಂತೆ ಅಪುರುಷಾರ್ಥವೆನಿಸೀತು. ಪುರುಷಾರ್ಥವಲ್ಲವೆಂದಾದೀತು.

ಯದ್ಯಪಿ ಹಿಂದೆಯೇ, 'ವಿಜ್ಞಾನಮಾನಂದಂ ಬ್ರಹ್ಮ' ಎಂಬ ವಾಕ್ಯವು ಬ್ರಹ್ಮನನ್ನು ವಿಜ್ಞಾನ ಆನಂದಸ್ವರೂಪನೆನ್ನುವುದಿಲ್ಲ ಅಖಂಡಾರ್ಥಪರವೇ ಆಗಿದೆ' ಎನ್ನುತ್ತಲೇ, ಬ್ರಹ್ಮನು ಜ್ಞಾನಾನಂದಸ್ವರೂಪನೆನ್ನಲು ಪ್ರಮಾಣವಾಗಿ 'ವಿಜ್ಞಾನಮಾನಂದಂ ಬ್ರಹ್ಮ' ಎಂಬ ವಾಕ್ಯವನ್ನು ತೋರಿಸುತ್ತಾನೆ, ಇದು ವ್ಯಾಹತ' ಎಂದು ಹೇಳಿಯಾಗಿದೆ. ಆದರಿಂದಲೇ 'ಬ್ರಹ್ಮ ಆನಂದವಲ್ಲ, ಅನುಭವವಲ್ಲ' ಎಂದಾಗುವುದು. ಅಂಥ ಬ್ರಹ್ಮನ ಐಕ್ಯರೂಪವಾದ ಮೋಕ್ಷಪುರುಷಾರ್ಥವೆನಿಸ ಲಾರದು' ಎಂದೂ ಹೇಳಿದಂತೆಯೇ ಆಗಿದೆ. ಇಲ್ಲಿ ಪುನಃ ಅದನ್ನು ಹೇಳುವುದು ಪುನರುಕ್ತಿ ಎನಿಸಬಹುದು. ಆದರೆ ಹಿಂದೆ, ಅಖಂಡಾರ್ಥಪರವೆಂದು ತಾನೇ ಹೇಳುತ್ತಿರುವ 'ವಿಜ್ಞಾನ ಮಾನಂದಂಬ್ರಹ್ಮ' ಎಂಬ ವಾಕ್ಯವನ್ನು ಬ್ರಹ್ಮನು ಜ್ಞಾನಾನಂದಸ್ವರೂಪನೆನ್ನಲು ಪ್ರಮಾಣವಾಗಿ ತೋರಿಸುವುದು ಪುರುಷನಲ್ಲಿರುವ ಸ್ವವಚನ ವಿರೋಧರೂಪ ದೋಷ ಎನ್ನುವ ಅಭಿಪ್ರಾಯವಿತ್ತು. ಇದೀಗ ಜ್ಞಾನವಲ್ಲದ ಆನಂದವಲ್ಲದ ಬ್ರಹ್ಮನ ಐಕ್ಯರೂಪವಾದ ಮೋಕ್ಷವು ಆನಂದಾನುಭವ ರಹಿತವಾಗಿದ್ದು ತಾರ್ಕಿಕಮೋಕ್ಷದಂತೆ ಅಪುರುಷಾರ್ಥವೆನಿಸೀತೆಂದು ಅದ್ವೈತಿಯ ಆ ಬ್ರಹ್ಮವಸ್ತುರೂಪವಾದ ಪ್ರಮೇಯವು ಅತಿ ತುಚ್ಛವೆನ್ನುವ ಅಭಿಪ್ರಾಯವಿದೆ. ಆದರಿಂದ ಪುನರುಕ್ತಿ ಇಲ್ಲ. ಅಲ್ಲಿ ಪುರುಷದೋಷ ಉಕ್ತವಾಗಿದೆ, ಇಲ್ಲಿ ವಸ್ತುದೋಷ ಉಕ್ತವಾಗುತ್ತಿದೆ.

**ನನು ನ ನದೀಶಬ್ದೇನ ನದೀತ್ವವಾಚಿನಾ ತದಾಶ್ರಯ ವ್ಯಕ್ತೇರ್ಲಕ್ಷಣಾ । ಕಿಂತು ತದಾಶ್ರಯ ವ್ಯಕ್ತಿ ಸಂಬಂಧಿನಸ್ತೀರಸ್ಯ; ಇತಿ ತಸ್ಯಾನದೀತ್ವಂ । ಇಹ ತು ಸನ್‌ಘಟ ಇತ್ಯಾದಾವಿವ ಸತ್ತಾದಿ ಜಾತಿ ವಾಚಿಭಿಃ ಸತ್ಯಾದಿಶಬ್ದೈಃ ತದಾಶ್ರಯವ್ಯಕ್ತೇರೇವ ಲಕ್ಷಣಾ ॥**

ಅದ್ವೈತಿ ಹೇಳುತ್ತಾನೆ—

'ಸತ್ಯಪದಲಕ್ಷ್ಯವು ಬ್ರಹ್ಮ ಎಂದ ಮಾತ್ರಕ್ಕೇ ಬ್ರಹ್ಮ ಅಸತ್ಯವೆಂದಾಗಬೇಕಿಲ್ಲ, ಸತ್ಯವಾಗಿರಬಹುದು. ಏಕೆಂದರೆ ಜಾತಿಶಕ್ತಿವಾದಿ ಮೀಮಾಂಸಕಮತರೀತ್ಯಾ ಸತ್ಯಶಬ್ದ ಸತ್ಯತ್ವವಾಚಕ, 'ಸನ್‌ಘಟಃ' ಇತ್ಯಾದಿಗಳಲ್ಲಿ ಸತ್ಯತ್ವಾಶ್ರಯ ವ್ಯಕ್ತಿಯು ಲಕ್ಷ್ಯ. ಆದರಿಂದ ಘಟವು ಸತ್ಯ. ಹಾಗೇ 'ಸತ್ಯಂ ಜ್ಞಾನಂ' ಇತ್ಯಾದಿಸ್ಥಳದಲ್ಲಿ ಸತ್ಯತ್ವ ಜ್ಞಾನತ್ವ ಆನಂದತ್ವಾದ್ಯಾಶ್ರಯ ವ್ಯಕ್ತಿಯಲ್ಲಿಯೇ ಲಕ್ಷಣಾ ಮಾಡುವುದರಿಂದ ಬ್ರಹ್ಮವು ಸತ್ಯ, ಜ್ಞಾನ ಆನಂದವ್ಯಕ್ತಿಯಾಗಬಹುದು. 'ನದ್ಯಾಂ ಘೋಷಃ' ಎಂಬಲ್ಲಿ ತೀರಕ್ಕೆ ಅನದೀತ್ವ ನದೀಪದಲಕ್ಷ್ಯತ್ವಪ್ರಯುಕ್ತವಲ್ಲ. ನದಿಯೂ ಬೇರೆಡೆ 'ನದ್ಯಾಂ ಮೀನಃ' ಎಂಬಲ್ಲಿ

ನದೀಪದಲಕ್ಷ್ಯ. ಅನದಿ ಎನಿಸುವುದಿಲ್ಲ. ನದೀತ್ವ ವಾಚಕವಾದ ನದೀಶಬ್ದಕ್ಕೆ ನದೀತ್ವಾಶ್ರಯ ವ್ಯಕ್ತಿಯಲ್ಲಿ ಲಕ್ಷಣಾ ಮಾಡಿದೆ. ಆದರೆ ಪ್ರಕೃತದಲ್ಲಿ ನದೀತ್ವಾಶ್ರಯ ವ್ಯಕ್ತಿ ಸಂಬಂಧಿ ತೀರದಲ್ಲಿ ಲಕ್ಷಣಾ ಮಾಡಿದೆ. ಅದರಿಂದ ತೀರ ನದಿಯಲ್ಲ ಎನ್ನುವುದು ಸಹಜ. ಹೀಗಾಗಿ ನದೀತೀರದ ದೃಷ್ಟಾಂತ ಪ್ರಕೃತಕ್ಕೆ ಸಂಗತವಲ್ಲ.

**ಏವಂಚ ಸತ್ವಸಂಬಂಧಸ್ಯ ಅಶಾಬ್ದತ್ವೇಽಪಿ ತೀರಸ್ಯ ನದ್ಯೇವ ಬ್ರಹ್ಮಣೋಽಪಿ, ಘಟಸ್ಯೇವ, ಸತ್ತಯಾ ಸಂಬಂಧಃ ಸಿಧ್ಯತಿ। ಮುಖ್ಯಾರ್ಥಾಸಂಬಂಧೇ ಲಕ್ಷಣಾಽಯೋಗಾತ್। ಜಾತಿ ವ್ಯಕ್ತ್ಯೋಶ್ಚ ತಾದಾತ್ಮ್ಯಸಂಬಂಧಾತ್।**

ಏವಂಚ ಸತ್ಯಾದಿ ಪದ ಲಕ್ಷ್ಯವಾದ ಬ್ರಹ್ಮ ಸತ್ಯವಲ್ಲ, ಜ್ಞಾನವಲ್ಲ ಆನಂದವಲ್ಲ ಎಂದಾಗುವುದಿಲ್ಲ. ತೀರದಲ್ಲಿ ನದೀಸಂಬಂಧದಂತೆ ಬ್ರಹ್ಮನಲ್ಲಿ ಸತ್ಯತ್ವದ ಸಂಬಂಧವು ಯದ್ಯಪಿ ಶಾಬ್ದ ಬೋಧದಲ್ಲಿ ಕಾಣದಿದ್ದರೂ ಸತ್ವಸಂಬಂಧ ಬೋಧಕಪ್ರಮಾಣ ಇಲ್ಲ ಎನ್ನಬಾರದು. ಶಕ್ಯಸಂಬಂಧವಿಲ್ಲದೆ ಲಕ್ಷಣಾ ಕೂಡದಿರುವುದರಿಂದ ಲಕ್ಷಣಾ ಹೇತುವಾಗಿ ಶಕ್ಯಸಂಬಂಧ ಸಿದ್ಧವಾಗುವುದರಿಂದ, ಬ್ರಹ್ಮನಲ್ಲಿ ಸತ್ಯತ್ವಾಶ್ರಯತ್ವರೂಪ ಶಕ್ಯಸಂಬಂಧವು ಲಕ್ಷಣಾಹೇತುವಾಗಿ ಸಿದ್ಧವೇ ಆಗುವುದು. ಬ್ರಹ್ಮ ಸತ್ಯವೆಂದೇ ಸಿದ್ಧವಾಗುವುದು, 'ಸನ್‌ಘಟಃ' ಎಂಬಲ್ಲಿ ಘಟದಲ್ಲಿ ಸತ್ತಾಶ್ರಯತ್ವರೂಪ ಶಕ್ಯಸಂಬಂಧವು ಲಕ್ಷಣಾ ಹೇತುವಾಗಿ ಸಿದ್ಧಿಸುವಂತೇ ಇದು. ಹೀಗಾಗಿ ಬ್ರಹ್ಮ ಅಸತ್ತೆನಿಸುವುದಿಲ್ಲ.

ಬ್ರಹ್ಮೈಕ್ಯರೂಪಮೋಕ್ಷವು ಅಪುರುಷಾರ್ಥವೆನಿಸುವುದೂ ಇಲ್ಲ.

ಲಕ್ಷಣಾ ಹೇತುವಾದ ಶಕ್ಯಸಂಬಂಧವು ಪ್ರಕೃತದಲ್ಲಿ ತಾದಾತ್ಮ್ಯ ಸಂಬಂಧ. ಏಕೆಂದರೆ ಸತ್ತಾಜಾತಿಯು ಸತ್ಯಶಬ್ದಶಕ್ಯ. ಜಾತಿವ್ಯಕ್ತಿಗಳಿಗೆ ತಾದಾತ್ಮ್ಯಸಂಬಂಧ ಅಂಗೀಕೃತವಾಗಿದೆ.

ಕಲ್ಪತರುಕಾರರು ಹೇಳಿದ್ದಾರೆ—'ಸತ್ತಾದಿ ಜಾತಿಗಳಿಗೆ ವ್ಯಕ್ತಿಗಳಿಂದ ತಾದಾತ್ಮ್ಯಸಂಬಂಧ ಕಂಡಿದೆ. ಹೀಗಾಗಿ ಬ್ರಹ್ಮವು ನಮ್ಮ ಮತದಲ್ಲಿ ಸತ್ವಜಾತಿವಾಚಿಯಾದ ಸತ್ಯಪದಕ್ಕೆ ಲಕ್ಷ್ಯವಾದ ವ್ಯಕ್ತಿಯಾದರೂ ಕೂಡ, ಜಾತ್ಯಾಶ್ರಯ ವ್ಯಕ್ತಿಯಲ್ಲಿಯೇ ನಾವು ಲಕ್ಷಣಾ ಮಾಡುವುದರಿಂದ, ಸತ್ತಾದಿ ಜಾತಿರಹಿತವೆನಿಸುವುದಿಲ್ಲ. ಅಸತ್ತೆನಿಸುವುದಿಲ್ಲ' ಎಂದು—

**ಉಕ್ತಂ ಹಿ— ಸತ್ತಾದೀನಾಂ ಹಿ ಜಾತೀನಾಂ ವ್ಯಕ್ತಿತಾದಾತ್ಮ್ಯದರ್ಶನಾತ್।**
**ಲಕ್ಷ್ಯವ್ಯಕ್ತಿರಪಿ ಬ್ರಹ್ಮ ಸತ್ತಾದಿ ನ ಜಹಾತಿ ಸಃ॥**

**ಇತೀತಿ ಚೇನ್ನ।**

**ವ್ಯಕ್ತಿಃ ಶಬ್ದಾರ್ಥ ಇತಿ ಮತೇ ಸದ್ವ್ಯಕ್ತಿತೋಽನ್ಯಸ್ಯೈವ ಲಕ್ಷಣೀಯತ್ವೇನ ಬ್ರಹ್ಮಣಃ ಸತ್ತಾಸಿದ್ಧೇಃ॥**

ಹೀಗೆ ಹೇಳುವುದು ಸರಿಯಲ್ಲ. ಏಕೆಂದರೆ ಜಾತಿವಿಶಿಷ್ಟವ್ಯಕ್ತಿಯಲ್ಲಿ ಶಕ್ತಿ ಎನ್ನುವ ತಾರ್ಕಿಕ ಮತರೀತ್ಯಾ ನದೀದೃಷ್ಟಾಂತ ಕೊಟ್ಟಿದ್ದೇವೆ. ಈ ಮತರೀತಿಯಿಂದ ಸತ್ಯಪದ ಶಕ್ಯಾರ್ಥ ಸತ್ತಾಜಾತಿವಿಶಿಷ್ಟವ್ಯಕ್ತಿ. ಅಂಥ ಸತ್ಯಪದಕ್ಕೆ ಬ್ರಹ್ಮವು ಲಕ್ಷ್ಯವೆಂದರೆ ಸತ್ತಾಜಾತಿವಿಶಿಷ್ಟಸದ್ವ್ಯಕ್ತಿಭಿನ್ನ, ಸತ್ ಅಲ್ಲ, ಅಸತ್ ಎಂದೇ ಆಗುತ್ತದೆ. ಶಾಬ್ದಬೋಧದಲ್ಲಿ ಬ್ರಹ್ಮನಲ್ಲಿ ಸತ್ಯತ್ವದ ಸಂಬಂಧವು ಕಾಣಿಸುವುದಿಲ್ಲ. ಸತ್‌ವ್ಯಕ್ತಿ ಸಂಬಂಧವೇ ಕಾಣಿಸುತ್ತದೆ. ಆದರಿಂದ ಸದ್‌ವ್ಯಕ್ತಿಯ ಭೇದವೇ ಸಿದ್ಧವಾಗುತ್ತದೆ.



**ननु गंगाशब्दे जहल्लक्षणा । आनंदादिशब्देषु तु जात्यंशत्यागेऽपि व्यक्त्यंशत्यागायोगात् जहदजहल्लक्षणेति कथमनानंदत्वापत्तिरिति चेन्न, तत्रानंदत्वजातेरसत्त्वे तद्व्यक्तेरानंदव्यक्तित्वासिद्धेः । तत्सत्यत्वस्य चौपनिषदे ब्रह्मण्यशब्देनासिद्धेः ।**

**जातिः शब्दार्थ इति मतेऽपि सन्घटइत्यादावपि शब्देन सत्तावैशिष्ट्याप्रतीतेः लक्षणाहेतुत्वेन प्रतीतेश्चेहापि सत्त्वेन तद्विशिष्टार्थमिदं त्वखंडार्थमिति विभागायोगेन विभागाय सन्घट इत्यादितो विशेषेण सत्यादिशब्दानां लक्षकत्वार्थं च नद्यां घोष इत्यादाविव जात्याश्रयव्यक्तिसंबंधित्वेनैव ब्रह्मणो लक्षणीयत्वेन सत्त्वासिद्धेः ।**

**एतेन यथा शोणिमगुणवाचिनः शोणशब्दस्य गुणविशिष्टाऽश्वव्यक्तिर्लक्ष्या, यथा वा तद्गुणसंविज्ञानबहुव्रीहौ कर्णादिशब्दस्य तद्विशिष्टोऽन्यपदार्थो लक्ष्यः, तथा सत्तादिवाचिनां सत्यादिशब्दानां सत्तादिविशिष्टो लक्ष्य इति सत्तादिसंबंधः शाब्द एवेति निरस्तम् । लक्ष्यस्य तात्पर्यविषयस्य विशिष्टत्वापातात् ।**

ननु न केवला व्यक्तिः शब्दार्थः, किंतु जातिविशिष्टा । तथा च जात्यंशपरित्यागेन तद्व्यक्तिमात्रस्यैव लक्ष्यत्वान्नोक्तदोष इत्यभिप्रेत्य शंकते— **नन्विति ।।** ननु शब्देनाबोधनेऽपि मानांतरेणैव ब्रह्मणः आनंदत्वादिसिद्धि-

रित्याशंक्याह— **तत्सत्यत्वस्य चेति । शोणशब्दस्येति ।।** शोणो धावतीति वाक्यस्थशोणशब्दस्येत्यर्थः । **कर्णादिशब्दस्येति ।** लंबकर्णमानयेत्यादिवाक्यस्थ-कर्णादिशब्दस्येत्यर्थः ।



ಅದ್ವೈತಿ ಹೇಳುತ್ತಾನೆ—

ಜಾತಿವಿಶಿಷ್ಟವ್ಯಕ್ತಿಯಲ್ಲಿ ಶಕ್ತಿ ಎನ್ನುವ ತಾರ್ಕಿಕ ಮತ ರೀತಿಯಿಂದಲೂ ಸತ್ಯಪದಲಕ್ಷ್ಯವಾದ ಬ್ರಹ್ಮ ಅಸತ್ಯವೆನಿಸಬೇಕಾಗಿಲ್ಲ. ಜಹಲ್ಲಕ್ಷಣಾ ಮಾಡಿದ್ದರೆ ಈ ಆಪತ್ತಿ ಬರುತ್ತಿತ್ತು. ಗಂಗಾಪದಕ್ಕೆ ಜಹಲ್ಲಕ್ಷಣಾ ಮಾಡುವುದರಿಂದ 'ತೀರವು ಗಂಗೆಯಲ್ಲ' ಎನಿಸುತ್ತದೆ. ಬ್ರಹ್ಮನಲ್ಲಿ ನಾವು ಸತ್ಯಪದಕ್ಕೆ ಜಹದಜಹಲ್ಲಕ್ಷಣಾ ಮಾಡುತ್ತೇವೆ. ಕೇವಲ ವ್ಯಕ್ತಿ ಶಬ್ದಾರ್ಥವಲ್ಲ, ಜಾತಿ ವಿಶಿಷ್ಟ ವ್ಯಕ್ತಿಯೇ ಶಬ್ದಾರ್ಥವೆಂದು ತಾರ್ಕಿಕ ಮತವಿರುವುದರಿಂದ ಜಾತಿ ವಿಶಿಷ್ಟವಾದ ಶಕ್ಯಾರ್ಥದಲ್ಲಿ ಜಾತ್ಯಂಶ ಪರಿತ್ಯಾಗಮಾಡಿ ವ್ಯಕ್ತ್ಯಂಶತ್ಯಾಗಮಾಡದೆ ತದ್ವ್ಯಕ್ತಿಮಾತ್ರವನ್ನು ಹೇಳುವ ಜಹದಜಹಲ್ಲಕ್ಷಣಾ ಮಾಡಿದಾಗ, ಸತ್ಯಪದ ಲಕ್ಷ್ಯವಾದ ಬ್ರಹ್ಮವು ಶಕ್ಯವಾದ ಸತ್ಯತ್ವವಿಶಿಷ್ಟದ ಏಕದೇಶವಾದ ವಿಶೇಷ್ಯಾಂಶವಾಗಿದೆ ಎಂದು ಮಾತ್ರ ಸಿದ್ಧವಾಗುತ್ತದೆ. ಏಕೆಂದರೆ ವಿಶಿಷ್ಟೈಕದೇಶತ್ವವೇ ಇಲ್ಲಿ ಲಕ್ಷಣಾ ಹೇತುವಾದ ಶಕ್ಯಸಂಬಂಧ. ಹೀಗಾಗಿ ಬ್ರಹ್ಮವು ಶಕ್ಯವ್ಯತಿರಿಕ್ತವೆನಿಸುವುದಿಲ್ಲ. ಆದಕ್ಕೆ ಅನಾನಂದತ್ವಾಪತ್ತಿಗೆ ಅವಕಾಶವಿಲ್ಲ—

**ನನು ಗಂಗಾಶಬ್ದೇ ಜಹಲ್ಲಕ್ಷಣಾ । ಆನಂದಾದಿ ಶಬ್ದೇಷು ತು ಜಾತ್ಯಂಶ ತ್ಯಾಗೇಽಪಿ ವ್ಯಕ್ತ್ಯಂಶತ್ಯಾಗಾಯೋಗಾತ್ ಜಹದಜಹಲ್ಲಕ್ಷಣೇತಿ ಕಥಮನಾನಂದತ್ವಾಪತ್ತಿಃ ?**

**'ಇತಿ ಚೆನ್ನ'**

ಇದು ಸರಿಯಲ್ಲ. ಆನಂದತ್ವಜಾತಿವಿಶಿಷ್ಟದ ಏಕದೇಶವಾದ ವ್ಯಕ್ತಿಯಲ್ಲಿ ಆನಂದತ್ವ ಜಾತಿಯನ್ನು ತ್ಯಾಗಮಾಡಿದರೆ ಆ ವ್ಯಕ್ತಿ ಆನಂದವ್ಯಕ್ತಿ ಎನಿಸುವುದು ಶಕ್ಯವಾಗಲಾರದು.

ಹಾಗೇ, ಉಪನಿಷದೇಕ ವೇದ್ಯನಾದ ಬ್ರಹ್ಮನಲ್ಲಿ ಆನಂದತ್ವವನ್ನು ತ್ಯಾಗಮಾಡುವ ಲಾಕ್ಷಣಿಕ ಆನಂದ ಶಬ್ದದಿಂದ ಆದರ ಸತ್ಯತ್ವವೂ ಸಿದ್ಧವಾಗದು. ಶಬ್ದವ್ಯತಿರಿಕ್ತ ಪ್ರಮಾಣಕ್ಕೆ ಬ್ರಹ್ಮನು ಗೋಚರನೇ ಆಗುವುದಿಲ್ಲ—

**ತತ್ರ ಆನಂದತ್ವ ಜಾತೇರಸತ್ವೇ ತದ್‌ವ್ಯಕ್ತೇರಾನಂದ ವ್ಯಕ್ತಿತ್ವಾಸಿದ್ಧೇಃ । ತತ್ ಸತ್ಯತ್ವಸ್ಯ ಚ ಔಪನಿಷದೇ ಬ್ರಹ್ಮಣಿ ಅಶಬ್ದೇನ ಅಸಿದ್ಧೇಃ ।**

ಜಾತಿಯು ಶಬ್ದಾರ್ಥ ಎನ್ನುವ ಮೀಮಾಂಸಕಮತದಲ್ಲಿಯೂ ಕೂಡ ಜಾತ್ಯಾಶ್ರಯ ವ್ಯಕ್ತಿಯು ಲಕ್ಷ್ಯವೆನ್ನುತ್ತ ಸತ್ಯಾದಿ ಪದಗಳಿಗೆ ಸತ್ಯತ್ವಾಶ್ರಯ ವ್ಯಕ್ತಿಯಲ್ಲಿ ಲಕ್ಷಣಾ ಹೇಳಿ ಬ್ರಹ್ಮನಲ್ಲಿ

ಸತ್ಯತ್ವ ಆನಂದತ್ವಾಶ್ರಯತ್ವವನ್ನು ಹೇಳುವುದು ಯುಕ್ತವಾಗುವುದಿಲ್ಲ. ಏಕೆಂದರೆ 'ಸನ್‌ಘಟಃ' 'ಘಟವು ಸತ್ಯ' ಎಂಬಲ್ಲಿಯೂ ಇವರ ಮತದಲ್ಲಿ ಸತ್ವಜಾತ್ಯಾಶ್ರಯ ವ್ಯಕ್ತಿಯಲ್ಲಿ ಲಕ್ಷಣಾ ಇದೆ. ಆಗ ಶಬ್ದದಿಂದ ವಾಚ್ಯವೃತ್ತಿಯಿಂದ ಘಟದಲ್ಲಿ ಸತ್ವಜಾತ್ಯಾಶ್ರಯತ್ವ ತಿಳಿಯುವುದಿಲ್ಲ. ಜಾತ್ಯಾಶ್ರಯತ್ವವು ಲಕ್ಷಣಾ ಹೇತುವಾದ ಶಕ್ಯಸಂಬಂಧವಾಗಿರುವುದರಿಂದ ಲಕ್ಷಣಾಹೇತುತ್ವೇನ ಘಟದಲ್ಲಿ ಸತ್ವಾಶ್ರಯತ್ವರೂಪ ಸಂಬಂಧವನ್ನು ತಿಳಿಯಬೇಕು. 'ಸತ್ಯಂ ಜ್ಞಾನಂ' ಎಂಬಲ್ಲಿಯೂ ಹೀಗೇ ಸತ್ಯಪದವು ಸತ್ಯತ್ವಜಾತ್ಯಾಶ್ರಯತ್ವ ಸಂಬಂಧದಿಂದ ಲಕ್ಷಣಯಾ ಬ್ರಹ್ಮಬೋಧಕವೆನ್ನುವುದರಿಂದ 'ಸನ್‌ಘಟಃ' ಎನ್ನುವುದಕ್ಕೂ 'ಸತ್ಯಂಜ್ಞಾನಂ' ಎನ್ನುವುದಕ್ಕೂ ಒಂದು ವಿಶಿಷ್ಟಾರ್ಥಪರ ಇನ್ನೊಂದು ಅಖಂಡಾರ್ಥಪರ ಎಂದು ವಿಭಾಗ ಯುಕ್ತವಾಗಲಾರದು. ಆದಕ್ಕೆ 'ಸನ್ ಘಟಃ' ಎಂಬುದಕ್ಕಿಂತ 'ಸತ್ಯಂ ಜ್ಞಾನಂ' ವಾಕ್ಯದಲ್ಲಿ ವೈಲಕ್ಷಣ್ಯವನ್ನು ಹೇಳಬೇಕು. ಸತ್ಯಂ ಜ್ಞಾನಂ ಎಂಬಲ್ಲಿ ಜಾತ್ಯಾಶ್ರಯ ವ್ಯಕ್ತಿಸಂಬಂಧಿಯಲ್ಲಿ ಲಕ್ಷಣಾ, ಸನ್ ಘಟ ಎಂಬಲ್ಲಿ ಜಾತ್ಯಾಶ್ರಯ ವ್ಯಕ್ತಿಯಲ್ಲಿ ಲಕ್ಷಣಾ ಎನ್ನಬೇಕು. ಈ ರೀತಿಯ ವೈಲಕ್ಷಣ್ಯಮೀಮಾಂಸಕರಿಗೆ ಸಂಮತವೇ ಆಗಿದೆ. ಏಕೆಂದರೆ ಅವರು 'ಸನ್‌ಘಟಃ' ಎಂಬುದಕ್ಕೂ ನದ್ಯಾಂ ಘೋಷಃ ಎಂಬುದಕ್ಕೂ ಈ ಬಗೆಯ ವೈಲಕ್ಷಣ್ಯವನ್ನೇ ಹೇಳುತ್ತಾರೆ. 'ಸನ್‌ಘಟಃ' ಎಂಬಲ್ಲಿರುವ ಜಾತ್ಯಾಶ್ರಯ ವ್ಯಕ್ತಿಲಕ್ಷಣಾ ಸರ್ವಶಬ್ದ ಸಾಧಾರಣವಾದ್ದರಿಂದ ಅದನ್ನು ಮುಖ್ಯಾರ್ಥವೆಂದೇ ಸ್ವೀಕರಿಸಿ, 'ನದ್ಯಾಂ ಘೋಷ' ಇತ್ಯಾದಿ ಜಾತ್ಯಾಶ್ರಯ ವ್ಯಕ್ತಿಸಂಬಂಧಿ ಲಕ್ಷಣೆಯನ್ನು, ಅದಕ್ಕಿಂತ ಅಮುಖ್ಯವಾದ್ದರಿಂದ, ಲಾಕ್ಷಣಿಕವೆಂದು ಪರಿಗಣಿಸಿದ್ದಾರೆ. ಈ ವಿಶೇಷವನ್ನೇ ಸ್ವೀಕರಿಸಿ ಅದ್ವೈತಿಗಳೂ ಕೂಡ 'ಸನ್‌ಘಟಃ' ಇತ್ಯಾದಿಗಳಿಗಿಂತ ವಿಶೇಷವಾಗಿ ಸತ್ಯಾದಿಪದಗಳಿಗೆ ಲಕ್ಷಕತ್ವವನ್ನು ಉಪಪಾದಿಸಬೇಕು. ಅದಕ್ಕೆ 'ನದ್ಯಾಂಘೋಷಃ' ಇತ್ಯಾದಿಗಳಂತೆ ಜಾತ್ಯಾಶ್ರಯವ್ಯಕ್ತಿಸಂಬಂಧಿ ಲಕ್ಷಣಾವನ್ನೇ ಹೇಳಬೇಕು. ಆಗ ಬ್ರಹ್ಮನಿಗೆ ಸತ್ಯತ್ವ ಜಾತ್ಯಾಶ್ರಯತ್ವವು ಲಕ್ಷಣಾಹೇತು ಸಂಬಂಧವಾಗಿ ಸಿದ್ಧವಾಗುವುದಿಲ್ಲ. ಸತ್ಯತ್ವಾಶ್ರಯ ವ್ಯಕ್ತಿ ಸಂಬಂಧಿತ್ವೇನ ತದ್ಭಿನ್ನತ್ವೇನೈವ ಬ್ರಹ್ಮ ಸಿದ್ಧವಾಗುವುದು. ಬ್ರಹ್ಮ ಅಸತ್ ಅನಾನಂದ ಎಂದಾಗುವುದು—

**ಜಾತಿಃ ಶಬ್ದಾರ್ಥ ಇತಿ ಮತೇಽಪಿ ಸನ್‌ಘಟ ಇತ್ಯಾದಾವಪಿ ಶಬ್ದೇನ ಸತ್ತಾ ವೈಶಿಷ್ಟ್ಯಪ್ರತೀತೇಃ, ಲಕ್ಷಣಾಹೇತುತ್ವೇನ ಪ್ರತೀತೇಶ್ಚ ಇಹಾಪಿ ಸತ್ತ್ವೇನ, 'ತದ್ ವಿಶಿಷ್ಟಾರ್ಥಂ, ಇದಂ ತ್ವಖಂಡಾರ್ಥಂ' ಇತಿ ವಿಭಾಗಾಯೋಗೇನ, ವಿಭಾಗಾಯ, ಸನ್‌ಘಟ ಇತ್ಯಾದಿತೋ ವಿಶೇಷೇಣ ಸತ್ಯಾದಿಶಬ್ದಾನಾಂ ಲಕ್ಷಕತ್ವಾರ್ಥಂ ಚ, 'ನದ್ಯಾಂ ಘೋಷಃ' ಇತ್ಯಾದಾವಿವ ಜಾತ್ಯಾಶ್ರಯ ವ್ಯಕ್ತಿ ಸಂಬಂಧಿತ್ವೇನೈವ ಬ್ರಹ್ಮಣೋ ಲಕ್ಷಣೀಯತ್ವೇನ ಸತ್ವಾಸಿದ್ಧೇಃ ॥**

**ವಿಶೇಷಾಂಶ :** ವಸ್ತುತಃ ವ್ಯಕ್ತ್ಯರಿಕ್ತವಾಗಿ ಜಾತಿ ಎಂಬುದಿಲ್ಲ. ಅದಕ್ಕೆ ಪ್ರಮಾಣವಿಲ್ಲ. ಅನುಗತ ವ್ಯವಹಾರ ಅಭಾವಾದಿಗಳಲ್ಲಿಯೂ ಇದೆ. ಅಲ್ಲಿ ಜಾತಿಯನ್ನು ಒಪ್ಪಿಲ್ಲ. ಮತ್ತು ಜಾತಿಶಕ್ತಿ ಪಕ್ಷದಲ್ಲಿ ವ್ಯಕ್ತಿಯು ಲಕ್ಷಣೆಯಿಂದಾಗಲಿ ಆಕ್ಷೇಪದಿಂದಾಗಲಿ ಲಭ್ಯವೆನ್ನುತ್ತಾರೆ, ಅದು ಕೂಡ ಅನುಭವದಲ್ಲಿಲ್ಲ.

ಪದೋಚ್ಚಾರಣ ಮಾಡಿದೊಡನೆ ತಕ್ಷಣವೇ ವ್ಯಕ್ತಿಪ್ರತೀತಿ ಅನುಭವದಲ್ಲಿ ಕಂಡಿದೆ. ಅದು ಸಮಾನ ಸಂವಿತ್ ಸಂವೇದ್ಯ. 'ಇವನು ನಮ್ಮಪ್ಪ' ಎಂದರೆ 'ನಾನು ಇವನ ಮಗ' ಎಂದು ಬೇರೆ ಹೇಳಬೇಕಾಗಿಲ್ಲ. ಆಕ್ಷೇಪದಿಂದಲೂ ತಿಳಿಯಬೇಕಾದುದಲ್ಲ. ಒಂದೇ ಜ್ಞಾನದಲ್ಲಿ ಎರಡೂ ಗೋಚರವಾಗುತ್ತವೆ. ಅದರಿಂದಲೆ ಗುರುಮತದಲ್ಲಿ 'ಸಮಾನ ಸಂವಿದ್ವೇದ್ಯತಯಾ ವ್ಯಕ್ತೇರ್ಲಾಭಃ' ಎಂದಿದ್ದಾರೆ. ಮತ್ತು ವ್ಯವಹಾರಾದಿಗಳಿಂದ ಶಕ್ತಿಗ್ರಹಣ ಕಾಲದಲ್ಲಿ ಮೊದಲಿಗೆ ವ್ಯಕ್ತಿಯಲ್ಲೇ ಶಕ್ತಿಗ್ರಹಣ ಎಂಬುದನ್ನು ಜಾತಿಶಕ್ತಿವಾದಿಗಳೂ ಒಪ್ಪಿದ್ದಾರೆ. ಹೀಗಾಗಿ ಜಾತಿಶಬ್ದಕ್ಕೆ ಸ್ವಾಶ್ರಯತ್ವಸಂಬಂಧದಿಂದ ವ್ಯಕ್ತಿಯಲ್ಲಿ ಲಕ್ಷಣಾ ಎನ್ನುವುದೇ ಅಪ್ರಾಮಾಣಿಕ. ಶಕ್ಯಸಂಬಂಧಿಯಾದ ಶಕ್ಯಭಿನ್ನವಾದ ವ್ಯಕ್ತಿಯಲ್ಲಿಯೇ ಜಹಲ್ಲಕ್ಷಣಾ ಹೇಳಬೇಕು. ಹೀಗಾಗಿ ಸತ್ಯಪದಲಕ್ಷ್ಯವಾದ ಬ್ರಹ್ಮ ಅಸತ್ತೆನ್ನುವುದೇ ಯುಕ್ತ.

ಅದ್ವೈತಿ ಇನ್ನೊಂದು ಬಗೆಯಿಂದ 'ಬ್ರಹ್ಮ ಸತ್ಯ'ವೆಂದು ಸಾಧಿಸಲು ಯತ್ನಿಸುತ್ತಾನೆ—

**ಏತೇನ ಯಥಾ ಶೋಣಿಮಗುಣವಾಚಿನಃ ಶೋಣಶಬ್ದಸ್ಯ ಗುಣವಿಶಿಷ್ಟಾ ಅಶ್ವವ್ಯಕ್ತಿರ್ಲಕ್ಷ್ಯಾ, ಯಥಾ ವಾ ತದ್ಗುಣಸಂವಿಜ್ಞಾನ ಬಹುವ್ರೀಹೌ ಕರ್ಣಾದಿಶಬ್ದಸ್ಯ ತದ್ವಿಶಿಷ್ಟೋಽನ್ಯಪದಾರ್ಥೋ ಲಕ್ಷ್ಯಃ, ತಥಾ ಸತ್ತಾದಿವಾಚಿನಾಂ ಸತ್ಯಾದಿಶಬ್ದಾನಾಂ ಸತ್ತಾದಿವಿಶಿಷ್ಟೋ ಲಕ್ಷ್ಯ ಇತಿ ಸತ್ತಾದಿ ಸಂಬಂಧಃ ಶಾಬ್ದ ಏವೇತಿ ನಿರಸ್ತಂ। ಲಕ್ಷ್ಯಸ್ಯ ತಾತ್ಪರ್ಯವಿಷಯಸ್ಯ ವಿಶಿಷ್ಟತ್ವಾಪಾತಾತ್ ।**

'ಕೆಂಬಣ್ಣವು ಧಾವಿಸುತ್ತಿದೆ' ಎಂಬಲ್ಲಿ ಕೆಂಬಣ್ಣಗುಣವಾಚಿ ಶೋಣ ಶಬ್ದಕ್ಕೆ ಗುಣವಿಶಿಷ್ಟವಾದ ಅಶ್ವವ್ಯಕ್ತಿಯಲ್ಲಿ ಲಕ್ಷಣಾ 'ಕೆಂಬಣ್ಣದ ಕುದುರೆ ಧಾವಿಸುತ್ತಿದೆ' ಎಂದರ್ಥ. ತದ್ಗುಣಸಂವಿಜ್ಞಾನ ಬಹುವ್ರೀಹಿಸ್ಥಳದಲ್ಲಿ ಉದಾ: 'ಲಂಬಕರ್ಣಂ' ದೊಡ್ಡಕಿವಿಉಳ್ಳ ಆನೆಯನ್ನು ತಾ ಎಂದರೆ, 'ತದ್ಗುಣ' ಸಮಾಸದಲ್ಲಿ ಉಪಸರ್ಜನವಾದ ದೊಡ್ಡ ಕಿವಿಗೂ ಅನ್ಯಪದಾರ್ಥವಾದ ಆನೆಯಂತೆಯೇ ಆನಯನದಲ್ಲಿ ಕರ್ಮತ್ವೇನ ಅನ್ವಯವಿದೆ. ಹೀಗಾಗಿ ಅನ್ಯಪದಾರ್ಥವಾದ ಆನೆಯನ್ನು 'ಆನೆ' ಎಂದಿಷ್ಟೇ ಹೇಳಿದೆ. 'ದೊಡ್ಡಕಿವಿಯ ಆನೆ' ಎಂದೇ ವಿಶಿಷ್ಟದಲ್ಲಿ ಲಕ್ಷಣಾ ಮಾಡಬೇಕು. ಹಾಗೇ ಸತ್ತಾದಿವಾಚಿಯಾದ ಸತ್ಯಾದಿ ಶಬ್ದಗಳಿಗೂ ಸತ್ತಾದಿ ವಿಶಿಷ್ಟದಲ್ಲಿ ಲಕ್ಷಣಾ ಮಾಡುವುದರಿಂದ ಬ್ರಹ್ಮನಲ್ಲಿ ಸತ್ತಾದಿ ಸಂಬಂಧವು ಶಬ್ದದಿಂದಲೇ ಬೋಧ್ಯವಾಗುವುದು. ಅದರಿಂದ ಬ್ರಹ್ಮ ಸತ್ಯವೆಂದೇ ಸಿದ್ಧವಾಗುವುದು' ಎಂದು ಹೇಳುತ್ತಾರೆ. ಇದೂ ಸರಿಯಲ್ಲ. ಸತ್ತಾವಿಶಿಷ್ಟಬ್ರಹ್ಮವೇ ಸತ್ಯಾದಿ ಪದಲಕ್ಷ್ಯವೆಂದರೆ ವಿಶಿಷ್ಟದಲ್ಲಿಯೇ ತಾತ್ಪರ್ಯ ಎಂದಂತಾಗುವುದು. ಸತ್ಯಾದಿ ವಾಕ್ಯವು ಸಖಂಡಾರ್ಥಪರವೆಂದಾಗುವುದು. ವಿಶಿಷ್ಟವು ಸತ್ಯವೆಂದೂ ಒಪ್ಪಿಕೊಂಡಂತಾಗುವುದು.



**नच सन्घट इत्यादौ विशिष्टं लक्ष्यम्, इहतु व्यक्तिमात्रम् । तेनेह**

शब्दस्याखंडार्थत्वं लक्षणाहेतुत्वेन ब्रह्मणस्सत्त्वसिद्धिश्चेति वाच्यम् । लक्षणाया घटादाविवातात्त्विकसत्त्वसंबंधेनाप्युपपत्तेः । श्रुतेरेव वाच्ये सत्त्वेऽपि तात्पर्ये तु सखंडार्थत्वम् । नचानुगतसत्तैव ब्रह्मेति सत्तासंबंधाभावेऽपि सत् स्यादिति वाच्यम् । वाच्यातिरिक्त-लक्ष्याभावापातात् । ब्रह्मणः परतंत्रत्वादिरूपजातित्वायोगाच्च । एतेन ब्रह्म स्वरूपातिरिक्तसत्ताहीनमपि सत्तावत् सत्स्वभावमिति निरस्तम् । सच्छब्दस्य तत्र लाक्षणिकत्वात् । सत्तायामिव च मानांतराप्रवृत्तेर्ब्रह्मणः सत्स्वभावत्वे मानाभावात् । कथंच परमार्थसति मुख्यस्य सत्यशब्दस्य जातिवाचिता, सद्व्यक्तेरेकत्वात् ।

एतेन सद् द्रव्यं कुंभ इति पदानि तत्तज्जातिद्वारा एकां कुंभ व्यक्तिमिव सत्यादिपदान्यपि सत्तादिजातिद्वारा एकामेवानंदव्यक्तिं लक्षयंतीति कल्पतरूक्तं निरस्तम् । तद्वदेवातात्त्विकसत्तादिवि-शिष्टार्थत्वापातात् । एवंच—

सौगतोक्तस्वाभिमतशून्यतासिद्धये परैः ।
सत्यज्ञानादिवाक्यानां लक्षणोक्ता परात्मनि ।।

तस्मात्सत्यज्ञानादिवाक्यानां नाखंडार्थत्वम् ।

**लक्षणाहेतुत्वेनेति** ।। लक्षणानियामकत्वेनेत्यर्थः । शक्यसंबंधं विना लक्षणायोगदिति भावः । शोणादिशब्दवत् सत्यादिशब्दस्यापि सत्त्वादौ तात्पर्यमस्ति न वा । नांत्यः । पारमार्थिकसत्त्वासिद्धिप्रसंगादित्यभिप्रेत्याह— **लक्षणाया इति** ।। आद्य आह– **श्रुतेरेवेति** । **तत्रेति** ।। ब्रह्मणीत्यर्थः । किंच शब्दस्य जातिवाचित्व-मानन्त्यव्यभिचारव्यक्त्यनेकत्वदोषैः कल्पनीयम् । नचात्र तादृशबाधकमस्ति । परमार्थसद्व्यक्तेरेकत्वादित्याह— **कथंचेति** ।।



ಸನ್‌ಘಟಃ ಇತ್ಯಾದಿ ಲೌಕಿಕ ವಾಕ್ಯಗಳಲ್ಲಿ ಸತ್ತಾವಾಚಿಶಬ್ದಕ್ಕೆ ಸತ್ತಾವಿಶಿಷ್ಟದಲ್ಲಿಯೇ ಲಕ್ಷಣಾ. ಆದರಿಂದ ಅವು ಸಖಂಡಾರ್ಥವೆ. 'ಸತ್ಯಂಜ್ಞಾನಂ' ಎಂಬಲ್ಲಿ ಸತ್ಯಪದಕ್ಕೆ ಸತ್ತಾವಿಶಿಷ್ಟದಲ್ಲಿ ತಾತ್ಪರ್ಯವಿಲ್ಲದಿರುವುದರಿಂದ ಜಹದಜಹಲ್ಲಕ್ಷಣೆಯಿಂದ ಕೇವಲ ವಿಶೇಷ್ಯವ್ಯಕ್ತಿಯಲ್ಲಿಯೇ ಲಕ್ಷಣಾ. ಆದರಿಂದ ವಾಕ್ಯವು ಅಖಂಡಾರ್ಥವೆ. ಲಕ್ಷಣಾ ಹೇತುವಾದ ಸ್ವಾಶ್ರಯತ್ವ ಸಂಬಂಧದಿಂದ ಬ್ರಹ್ಮನಿಗೆ ಸತ್ಯತ್ವ ಸಿದ್ಧಿಸುವುದು. ಎಂದೂ ಅದ್ವೈತಿಗಳು ಹೇಳುತ್ತಾರೆ—

**ನ ಚ 'ಸನ್‌ಘಟ ಇತ್ಯಾದೌ ವಿಶಿಷ್ಟಂ ಲಕ್ಷ್ಯಂ। ಇಹ ತು ವ್ಯಕ್ತಿ ಮಾತ್ರಂ। ತೇನೇಹ ಶಬ್ದಸ್ಯಾಖಂಡಾರ್ಥತ್ವಂ, ಲಕ್ಷಣಾಹೇತುತ್ವೇನ ಬ್ರಹ್ಮಣಃ ಸತ್ವಸಿದ್ಧಿಶ್ಚ' ಇತಿ ವಾಚ್ಯಂ।**

**ಇತಿ ನ ವಾಚ್ಯಂ** ಹೀಗೆ ಹೇಳಬಾರದು. ಘಟಾದಿಗಳಲ್ಲಿ ಸತ್ವ ಸಂಬಂಧ ಅತಾತ್ವಿಕವಾದರೂ ಅದು ಲಕ್ಷಣಾ ನಿಯಾಮಕವಾಗುತ್ತದೆ. ಹಾಗೇ ಬ್ರಹ್ಮನಲ್ಲಿಯೂ ಅತಾತ್ವಿಕವಾದ ಸತ್ವಸಂಬಂಧ ದಿಂದಲೇ ಸತ್ಯಪದ ಬ್ರಹ್ಮನನ್ನು ಲಕ್ಷಣಯಾ ಹೇಳಬಹುದಾದ್ದರಿಂದ ಬ್ರಹ್ಮವೂ ಘಟದಂತೆಯೇ ಅತಾತ್ವಿಕ ಸತ್ಯವೆನಿಸೀತು. ಬ್ರಹ್ಮ ಪಾರಮಾರ್ಥಿಕ, ಘಟ ಅಪಾರಮಾರ್ಥಿಕ ಎಂಬ ವಿಭಾಗ ಕೂಡಲಾರದು. ಮತ್ತು ಘಟಾದಿಗಳಲ್ಲಿ ಸತ್ಯಪದ ವಿಶಿಷ್ಟದಲ್ಲಿ ಲಾಕ್ಷಣಿಕ, ಬ್ರಹ್ಮನಲ್ಲಿ ಮಾತ್ರ ವಿಶೇಷ್ಯವಕ್ತಿ ಮಾತ್ರದಲ್ಲಿ ಲಾಕ್ಷಣಿಕ ಎನ್ನುವ ವ್ಯವಸ್ಥೆಗೆ ಕಾರಣವಿಲ್ಲ. ನಿಯಾಮಕವಿಲ್ಲ. ನಿಯಾಮಕ ಬೇಡವೆಂದರೆ ಘಟಾದಿಗಳಲ್ಲಿಯೂ ವಿಶೇಷ್ಯ ವ್ಯಕ್ತಿಮಾತ್ರದಲ್ಲಿ ಲಕ್ಷಣಾ ಎಂದಾದೀತು—

**ಲಕ್ಷಣಾಯಾ ಘಟಾದಾವಿವ ಅತಾತ್ವಿಕ ಸತ್ವ ಸಂಬಂಧೇನಾಪ್ಯುಪತ್ತೇಃ ।**

ಶೋಣಾದಿ ಶಬ್ದ ಕೆಂಬಣ್ಣವೆಂಬ ಗುಣವಾಚಕವಾಗಿದ್ದು ಗುಣವಿಶಿಷ್ಟದಲ್ಲಿ ಲಾಕ್ಷಣಿಕ. ಗುಣದಲ್ಲಿಯೂ ಅದಕ್ಕೆ ತಾತ್ಪರ್ಯವಿದೆ. ಹಾಗೇ ಸತ್ಯಾದಿ ಪದವು ಕೂಡ ಸತ್ಯತ್ವಾದಿ ವಾಚಕವಾಗಿದ್ದು ಲಕ್ಷ್ಯವಾದ ಬ್ರಹ್ಮನಲ್ಲಿ ಮಾತ್ರವಲ್ಲದೆ ವಾಚ್ಯವಾದ ಸತ್ಯತ್ವದಲ್ಲಿಯೂ ತಾತ್ಪರ್ಯಯುಕ್ತವಾಗಿದೆ ಎಂದರೆ ಅದು ಬ್ರಹ್ಮಸ್ವರೂಪಮಾತ್ರ ವಿಷಯಕ ಅಖಂಡಾರ್ಥವಾಕ್ಯವೆನಿಸಲಾರದು. ಸಖಂಡಾರ್ಥವೆನಿಸೀತು. ಬ್ರಹ್ಮ ಒಂದು ಧರ್ಮಿ, ಅದರ ಸತ್ಯತ್ವ ಒಂದು ಧರ್ಮ ಎಂದು ಅನೇಕ ಧರ್ಮಧರ್ಮಿಗಳಲ್ಲಿ ತಾತ್ಪರ್ಯವಿದ್ದರೆ, ಧರ್ಮಧರ್ಮಿಭೇದವನ್ನು ಅಖಂಡಾರ್ಥಕವಾದ ಶ್ರುತಿಯು ಸರ್ವಥಾ ಸಹಿಸದು.

**ಶ್ರುತೇರೇವ ವಾಚ್ಯೇ ಸತ್ವೇऽಪಿ ತಾತ್ಪರ್ಯೇ ತು ಸಖಂಡಾರ್ಥತ್ವಂ**

'ಬ್ರಹ್ಮವು ಸತ್ವಸ್ವರೂಪ. ಅಂಥ ಸತ್ವವು ಸತ್ಯಶಬ್ದವಾಚ್ಯ. ಆದರಲ್ಲಿ ಶಬ್ದಕ್ಕೆ ತಾತ್ಪರ್ಯವಿದೆ' ಎಂದರೆ ಬ್ರಹ್ಮನಿಗೆ ವಾಚ್ಯವೃತ್ತಿಯಿಂದಲೇ ಶ್ರುತಿಪ್ರತಿಪಾದ್ಯತ್ವ ಕೂಡುವಾಗ ಲಕ್ಷಣಾಕಲ್ಪನ ಮಾಡಿದ್ದೂ ಅಯುಕ್ತವಾಗುವುದು.

ಬ್ರಹ್ಮನಲ್ಲಿ ಸತ್ಯತ್ವವನ್ನು ಈ ರೀತಿಯಲ್ಲಿ ಪ್ರಮಾಣದಿಂದ ಸಾಧನೆ ಮಾಡುವುದಾದರೆ

ಆದೇರೀತಿಯಲ್ಲಿ ಜ್ಞಾನತ್ವ ಆನಂದತ್ವಗಳನ್ನೂ ಸಾಧನೆ ಮಾಡಬೇಕಾಗುತ್ತದೆ. ಸತ್ವ ಜ್ಞಾನತ್ವ ಆನಂದತ್ವಾದಿ ಜಾತಿಗಳು ಪರಸ್ಪರ ವಿರುದ್ಧವಾಗಿರುವುದರಿಂದ ಒಂದು ಬ್ರಹ್ಮ ಪರಸ್ಪರವಿರುದ್ಧ ಅನೇಕ ಜಾತಿ ಸ್ವರೂಪವೆಂದು ಒಪ್ಪಿದಂತಾಗುವುದೂ ಅಯುಕ್ತ.

ಜ್ಞಾನತ್ವವನ್ನು ಈ ರೀತಿಯಿಂದ ಸಾಧನೆ ಮಾಡದೆ ಹೋದರೆ ಜ್ಞಾನಪದ ಲಕ್ಷ್ಯವಾದ ಬ್ರಹ್ಮ ಹಿಂದೆ ಹೇಳಿದಂತೆ ಜ್ಞಾನತ್ವಾಶ್ರಯವ್ಯಕ್ತಿಗಿಂತ ಭಿನ್ನ, ಅಜ್ಞಾನಸ್ವರೂಪವೆಂದೂ ಒಪ್ಪಿದಂತಾದೀತು.

'ಘಟಃ ಸನ್ ಪಟಃ ಸನ್ ಎಂದು ಮುಂತಾಗಿ ಸರ್ವತ್ರ ಅನುಗತವಾಗಿ ಕಾಣುವ ಸತ್ತಾಜಾತಿಯೇ ಬ್ರಹ್ಮ. ಸತ್ತಾಜಾತಿಯಲ್ಲಿ ಬೇರೆ ಸತ್ತಾಜಾತಿಯೊಂದಿಲ್ಲದಿದ್ದರೂ 'ಸತ್ತಾ ಸತೀ' ಎಂದು ಸತ್ವೇನ ಪ್ರತೀಯಮಾನವಾಗಿರುವುದರಿಂದ ಸತ್ ಎನಿಸಿದೆ. ಅದರಿಂದ ಸತ್ತಾಸ್ವರೂಪ ಬ್ರಹ್ಮನೂ, ಬೇರೆ ಸತ್ತಾ ಅವನಲ್ಲಿಲ್ಲದಿದ್ದರೂ, ಸತ್ ಎನಿಸಬಹುದು.' ಎಂದೂ ಹೇಳುತ್ತಾರೆ. ಅದೂ ಸರಿಯಲ್ಲ–

**ನಚಾನುಗತಸತ್ತೈವ ಬ್ರಹ್ಮೇತಿ ಸತ್ತಾ ಸಂಬಂಧಾಭಾವೇಽಪಿ ಸತ್ ಸ್ಯಾದಿತಿ ವಾಚ್ಯಂ**

ಹೀಗೆ ಹೇಳಿದರೆ ಸತ್ಯಶಬ್ದಕ್ಕೆ ವಾಚ್ಯವು ಬ್ರಹ್ಮಸ್ವರೂಪವಾದ ಸತ್ತಾಜಾತಿಯೆ, ಎಂದಮೇಲೆ ಅದು ಲಕ್ಷ್ಯವಾಗಲಾರದು. ಹೀಗಾಗಿ ವಾಚ್ಯಾತಿರಿಕ್ತ ಲಕ್ಷ್ಯ ಸತ್ಯಪದಕ್ಕೆ ಇಲ್ಲವೆಂದಾದೀತು.

ಜಾತಿಯು ವ್ಯಕ್ತಿಪರತಂತ್ರ. ಅದು ವ್ಯಕ್ತಿಯಲ್ಲಿ ಆಶ್ರಿತವಾಗಿ ಅದಕ್ಕೆ ವಿಶೇಷಣವಾಗಿ ಇರುತ್ತದೆ. 'ಘಟೋ ಧ್ವಸ್ತಃ' 'ಘಟಃ ಅನಿತ್ಯಃ' ಎಂದು ಮುಂತಾಗಿ ಅನಿತ್ಯತ್ವಾದಿಗಳು ಘಟದಲ್ಲಿ ಆಶ್ರಿತವಾಗಿಯೇ ಪರತಂತ್ರವಾಗಿಯೇ ಕಾಣುವಂತೆ ಘಟಃಸನ್ ಪಟಃಸನ್ ಎಂದು ಮುಂತಾಗಿ ಸತ್ತಾಜಾತಿಯೂ ವ್ಯಕ್ತಿಗಳಲ್ಲಿ ಆಶ್ರಿತವಾಗಿ ವಿಶೇಷಣವಾಗಿಯೇ ಕಾಣುತ್ತದೆ. ಸ್ವತಂತ್ರನಾದ ಬ್ರಹ್ಮನಿಗೆ ಈ ರೀತಿ ವ್ಯಕ್ತಿಪರತಂತ್ರತ್ವಾದಿ ರೂಪವಾದ ಜಾತಿತ್ವ ಯುಕ್ತವಾಗುವುದಿಲ್ಲ.

ಇಲ್ಲಿ ಸತ್ತಾ ಎಂದರೆ ಅಬಾಧ್ಯತ್ವರೂಪಸತ್ವವೆಂದೇ ಹೇಳಿದರೆ ಘಟಾದಿ ಪ್ರಪಂಚವೂ ಅಬಾಧ್ಯವೆಂದಾದೀತು—

**ವಾಚ್ಯಾತಿರಿಕ್ತ ಲಕ್ಷ್ಯಾಭಾವಾಪಾತಾತ್ । ಬ್ರಹ್ಮಣಃ ಪರತಂತ್ರತ್ವಾದಿರೂಪ ಜಾತಿತ್ವಾಯೋಗಾಚ್ಚ ॥**

'ಬ್ರಹ್ಮನು ಸತ್ಯಶಬ್ದ ಲಕ್ಷ್ಯನೇ ಆಗಿದ್ದರೂ ಅಸತ್ತೆನಿಸುವುದಿಲ್ಲ. ಏಕೆಂದರೆ, ಅವನು ಸ್ವರೂಪಾತಿರಿಕ್ತ ಸತ್ತಾ ಇಲ್ಲದಿದ್ದರೂ ಸತ್ತಾದಂತೆ ಸತ್‌ಸ್ವಭಾವವುಳ್ಳವನೇ. ಹೀಗಾಗಿ ಅವನಲ್ಲಿ ಸತ್ವವಿರಬಹುದು' ಎನ್ನುತ್ತಾರೆ. ಇದೂ ಅಸಂಗತ.

ಸತ್‌ಶಬ್ದ ಬ್ರಹ್ಮನಲ್ಲಿ ಲಾಕ್ಷಣಿಕವೆಂದಮೇಲೆ, 'ಅವನು ಸತ್‌ಸ್ವಭಾವದವನು, ಅವನಲ್ಲಿ ಸತ್ವವಿರಬಹುದು' ಎನ್ನುವುದು 'ಗಂಗಾಪದ ಲಕ್ಷ್ಯವಾದರೂ ತೀರವು ಗಂಗಾ ಸ್ವಭಾವದ್ದು, ಅದರಲ್ಲಿ ಗಂಗಾತ್ವವಿರಬಹುದೆಂ'ಬಂತೆ ವ್ಯಾಹತವಾಗುವುದು.

ಸತ್ತಾದಲ್ಲಿ ಅತಿರಿಕ್ತ ಸತ್ತಾಜಾತಿಯನ್ನು ಅಂಗೀಕರಿಸಿದರೆ ಆ ಸತ್ತಾಜಾತೀಯಲ್ಲಿ ಪುನಃ ಅತಿರಿಕ್ತ ಸತ್ತಾ ಜಾತಿ ಕಲ್ಪನಾ ಮಾಡಬೇಕಾಗುತ್ತದೆ. ಅದರಿಂದ ಅನವಸ್ಥಾ ಅದರಿಂದ ಸತ್ತಾರಹಿತವಾದರೂ ಸತ್ತಾ ಸದ್ರೂಪವೆಂದೊಪ್ಪಬೇಕು ಎಂದು ಯುಕ್ತಿಯಿಂದ ಪ್ರಮಾಣದಿಂದ ಸಿದ್ಧವಾಗುತ್ತದೆ. ಹಾಗೆ ಅತಿರಿಕ್ತಸತ್ತಾರಹಿತವಾದ ಬ್ರಹ್ಮನೂ ಸದ್ರೂಪ, ಸತ್‌ಸ್ವಭಾವನಾಗಬಹುದೆನ್ನಲು ಪ್ರಮಾಣವಿಲ್ಲ. ಔಪನಿಷದನೆನಿಸಿದ ಬ್ರಹ್ಮನ ವಿಷಯದಲ್ಲಿ ಅನುಮಾನಾದಿ ಬೇರೆ ಯಾವುದೂ ಪ್ರಮಾಣ ವಾಗುವುದಿಲ್ಲ—

**ಏತೇನ ಬ್ರಹ್ಮ ಸ್ವರೂಪಾತಿರಿಕ್ತಸತ್ತಾಹೀನಮಪಿ ಸತ್ತಾವತ್ ಸತ್‌ಸ್ವಭಾವಮಿತಿ ನಿರಸ್ತಂ। ಸಚ್ಛಬ್ದಸ್ಯ ತತ್ರ ಲಾಕ್ಷಣಿಕತ್ವಾತ್। ಸತ್ತಾಯಾಮಿವ ಚ ಮಾನಾಂತರಾಪ್ರವೃತ್ತೇಃ ಬ್ರಹ್ಮಣಃ ಸತ್‌ಸ್ವಭಾವತ್ವೇ ಮಾನಾಭಾವಾತ್ ॥**

ಸತ್ಯಶಬ್ದವು ಜಾತಿವಾಚಿಯಾಗುವುದಾದರೂ ಹೇಗೆ? ಶಬ್ದವು ಜಾತಿವಾಚಿಯಾಗಬೇಕಾದರೆ ವ್ಯಕ್ತಿಗಳು ಅನಂತವಿರಬೇಕು. ಪ್ರತಿಯೊಂದು ವ್ಯಕ್ತಿಯಲ್ಲಿ ಪ್ರತ್ಯೇಕವಾಗಿ ಶಬ್ದಶಕ್ತಿಗ್ರಹಣ ಮಾಡುತ್ತ ಹೋದರೆ ಅದಕ್ಕೆ ಪರ್ಯವಸಾನವಿಲ್ಲದೆ ಹೋಗಬೇಕು. ಆಗ ಜಾತಿಯಲ್ಲಿ ಶಕ್ತಿಗ್ರಹಣ ಮಾಡಿದರೆ ಆ ಜಾತಿಗೆ ಸಂಬಂಧಿಸಿದ ಅನನ್ತವ್ಯಕ್ತಿಗಳಲ್ಲಿಯೂ ಸಾಮಾನ್ಯಲಕ್ಷಣಾ ಪ್ರತ್ಯಾಸತ್ತಿಯಿಂದ ಶಕ್ತಿಗ್ರಹಣ ಸಾಧ್ಯ. ಜಾತಿಯನ್ನು ಬಿಟ್ಟು ಕೆಲವು ವ್ಯಕ್ತಿಗಳಲ್ಲಿಯೇ ಶಕ್ತಿಗ್ರಹಣ ಮಾಡಿದರೆ ಬೇರೆ ವ್ಯಕ್ತಿಗಳಲ್ಲಿ ಶಕ್ತಿಗ್ರಹಣವಿಲ್ಲದೆಯೇ ವ್ಯವಹಾರ ಉಂಟಾಗುವುದರಿಂದ ವ್ಯಭಿಚಾರವೂ ಉಂಟಾಗುತ್ತದೆ. ವ್ಯಕ್ತಿಗಳು ಅನಂತವಿರುವಾಗ ಅವುಗಳಲ್ಲಿ ಬೇರೆಬೇರೆಯಾಗಿ ಅನಂತಶಕ್ತಿ ಕಲ್ಪನೆ ಮಾಡಿದರೆ ಗೌರವವೂ ಬರುತ್ತದೆ. ಹೀಗಾಗಿ ಜಾತಿಯಲ್ಲಿ ಶಕ್ತಿಗ್ರಹಣ ಆವಶ್ಯಕ. ಪ್ರಕೃತ ಸತ್‌ಶಬ್ದ ಮುಖ್ಯ ವ್ಯವಹಾರವು ಪರಮಾರ್ಥಸತ್ತಾದ ಬ್ರಹ್ಮನಲ್ಲಿ ಒಬ್ಬನಲ್ಲೇ ಇದೆ. ವ್ಯಾವಹಾರಿಕ ಸತ್ತಾದ ಘಟಾದಿಗಳು ಅನಂತ ಇದ್ದರೂ ಅವುಗಳಲ್ಲಿ ಸತ್‌ಶಬ್ಧವ್ಯವಹಾರ ಗೌಣ. ಹೀಗಾಗಿ ಮುಖ್ಯವಾಗಿ ಸತ್‌ಶಬ್ದವ್ಯವಹಾರ ಗೋಚರವಾಗುವ ವ್ಯಕ್ತಿ ಒಂದೇ ಎಂದಮೇಲೆ ಸತ್‌ಶಬ್ದದ ಶಕ್ತಿಗ್ರಹಣಕ್ಕೆ ಅಡಚಣೆಯಾಗಿರುವ ಆನಂತ್ಯ ವ್ಯಭಿಚಾರ ವ್ಯಕ್ತ್ಯನೇಕತ್ವಗಳು ಯಾವುವೂ ಇಲ್ಲ. ಹಾಗಿರುವಾಗ ಸತ್‌ಶಬ್ದವನ್ನು ಜಾತಿವಾಚಿ ಎಂದು ಏಕೆ ಒಪ್ಪಬೇಕು?—

**ಕಥಂ ಚ ಪರಮಾರ್ಥಸತಿ ಮುಖ್ಯಸ್ಯ ಸತ್ಯಶಬ್ದಸ್ಯ ಜಾತಿವಾಚಿತಾ ? ಸದ್‌ವ್ಯಕ್ತೇ-ರೇಕತ್ವಾತ್ ।**

'ಸತ್ ದ್ರವ್ಯಂ ಕುಂಭಃ' ಎಂಬ ಪದಗಳು ಕ್ರಮವಾಗಿ ಸತ್ತಾ, ತದ್‌ವ್ಯಾಪ್ಯವಾದ ದ್ರವ್ಯತ್ವ ಮತ್ತು ತದ್‌ವ್ಯಾಪ್ಯವಾದ ಘಟತ್ವಗಳೆಂಬ ಜಾತಿಗಳನ್ನು ಶಕ್ತಿಯಿಂದ ಬೋಧಿಸಿ ಕೊನೆಯಲ್ಲಿ ಒಂದು ಘಟವ್ಯಕ್ತಿಯನ್ನು ಲಕ್ಷಣಯಾ ಬೋಧಿಸುತ್ತವೆ. ಆ ಘಟವ್ಯಕ್ತಿ 'ಸತ್ ದ್ರವ್ಯಘಟ' ಪದಗಳಿಗೆ ಲಕ್ಷ್ಯವೇ ಆದರೂ ಅದರಲ್ಲಿ ಸತ್ತ್ವ ದ್ರವ್ಯತ್ವ ಘಟತ್ವ ಜಾತಿಗಳಿವೆ. ಹಾಗೆಯೇ ಪ್ರಕೃತ ಸತ್ಯಾದಿ ಪದಗಳು ಸತ್ತ್ವಾದಿ ಜಾತಿಗಳನ್ನು ವಾಚ್ಯವೃತ್ತಿಯಿಂದ ಮೊದಲಿಗೆ ಹೇಳಿ ಕೊನೆಯಲ್ಲಿ ಒಂದೇ ಒಂದು ಆನಂದ

ಬ್ರಹ್ಮವ್ಯಕ್ತಿಯನ್ನು ಲಕ್ಷಣಯಾ ಹೇಳುತ್ತದೆ. ಅದರಿಂದ ಬ್ರಹ್ಮನಲ್ಲಿ ಸತ್ಯತ್ವಜ್ಞಾನತ್ವಾದಿ ಜಾತಿಗಳು ಬೋಧಿತವಾಗುತ್ತವೆ. ಲಕ್ಷ್ಯಾರ್ಥ ಒಂದೇ ಆದರೂ ವಾಚ್ಯಾರ್ಥಗಳು ಅನೇಕವಾದ್ದರಿಂದ ಪದಗಳೆಲ್ಲವೂ ಅಪರ್ಯಾಯ ಪದಗಳೆನಿಸುತ್ತವೆ, ಸಾರ್ಥಕವಾಗುತ್ತವೆ' ಎಂದು ಕಲ್ಪತರು ಗ್ರಂಥದಲ್ಲಿ ಹೇಳಿದ್ದಾರೆ. ಇದೂ ಸರಿಯಲ್ಲ.—

**ಏತೇನ 'ಸದ್ ದ್ರವ್ಯಂ ಕುಂಭ' ಇತಿ ಪದಾನಿ ತತ್ತಜ್ಜಾತಿ ದ್ವಾರಾ ಏಕಾಂ ಕುಂಭವ್ಯಕ್ತಿಮಿವ ಸತ್ಯಾದಿ ಪದಾನ್ಯಪಿ ಸತ್ತಾದಿ ಜಾತಿದ್ವಾರಾ ಏಕಾಮೇವಾನಂದವ್ಯಕ್ತಿಂ ಲಕ್ಷಯಂತೀತಿ ಕಲ್ಪತರೂಕ್ತಂ ನಿರಸ್ತಂ ।**

ಒಂದು ಘಟದಲ್ಲಿ 'ಸತ್-ದ್ರವ್ಯ-ಘಟ' ಶಬ್ದಗಳಿಗೆ ಲಕ್ಷಣಾ ಇದ್ದರೂ ಅದರಲ್ಲಿ ಸತ್ತಾದಿ ಜಾತಿಗಳು ಅತಾತ್ವಿಕವೇ ಉಕ್ತವಾಗುತ್ತವೆ. ಹಾಗೇ ಒಬ್ಬನೇ ಬ್ರಹ್ಮನಲ್ಲಿಯೂ ಅತಾತ್ವಿಕವಾದ ಸತ್ಯತ್ವ ಜ್ಞಾನತ್ವಾದಿಗಳ ವೈಶಿಷ್ಟ್ಯವು ಸತ್ಯಾದಿವಾಕ್ಯಗಳಿಂದ ಲಕ್ಷಣಯಾ ಬೋಧಿತವಾದರೆ ವಸ್ತುತಃ ಬ್ರಹ್ಮ ಅಸತ್, ಅಜ್ಞಾನರೂಪವೆ ಆಗುತ್ತದೆ. ವಾಕ್ಯಕ್ಕೆ ಸಖಂಡಾರ್ಥತ್ವವೇ ಬರುತ್ತದೆ. ವೇದಾಂತವು ಅತತ್ವಾವೇದಕವೆನಿಸುತ್ತದೆ. ಮತ್ತು 'ಏತೇನ' ಹಿಂದೆ ಹೇಳಿದಂತೆ 'ಪರಮಾರ್ಥಸತ್ತಾದ ಬ್ರಹ್ಮನೊಬ್ಬನಲ್ಲಿಯೇ ಮುಖ್ಯವಾಗಿರುವ ಸತ್‌ಶಬ್ದವು ಏಕವ್ಯಕ್ತಿಯಲ್ಲಿರುವ ಅಬಾಧ್ಯತ್ವರೂಪ ಸತ್ಯತ್ವವನ್ನೇ ಹೇಳೀತು ಹೊರತು ಅನೇಕ ವ್ಯಕ್ತಿಗಳಲ್ಲಿರುವ ಸತ್ತಾಜಾತಿಯನ್ನು ಹೇಳಲಾರದು' ಎಂಬ ದೋಷಕ್ಕೆ ಪರಿಹಾರವಿಲ್ಲ—

**ತದ್ವದೇವಾತಾತ್ವಿಕ ಸತ್ತಾದಿವಿಶಿಷ್ಟಾರ್ಥತ್ವಾಪಾತಾತ್ ।**

ಹೀಗಾಗಿ ಅದ್ವೈತಿಗಳು ಸತ್ಯಜ್ಞಾನಾದಿ ವಾಕ್ಯಗಳಿಗೆ ಪರಮಾತ್ಮನಲ್ಲಿ ಲಕ್ಷಣಾ ಒಪ್ಪಿದ್ದರಿಂದ ಬೌದ್ಧೋಕ್ತವಾದ, ತಮಗೂ ಇಷ್ಟವಾದ, ಶೂನ್ಯತ್ವವನ್ನೇ ಪರಮಾತ್ಮನಲ್ಲಿ ಸಾಧಿಸಿದಂತಾಯಿತು. ಅದರ ಸಿದ್ಧಿಗಾಗಿಯೇ ಅವರು ಲಕ್ಷಣಾವನ್ನು ಹೇಳಿದ್ದಾರೆ ಎಂದು ಹೇಳಿದರೆ ತಪ್ಪಾಗುವುದಿಲ್ಲ. ಅದರಿಂದ ಸತ್ಯಜ್ಞಾನಾದಿ ವಾಕ್ಯಗಳು ಅಖಂಡಾರ್ಥಪರವಲ್ಲ—

**ಏವಂಚ–**

**ಸೌಗತೋಕ್ತ ಸ್ವಾಭಿಮತ ಶೂನ್ಯತಾಸಿದ್ಧಯೇ ಪರೈಃ ।**
**ಸತ್ಯಜ್ಞಾನಾದಿ ವಾಕ್ಯನಾಂ ಲಕ್ಷಣೋಕ್ತಾ ಪರಾತ್ಮನಿ ॥**

**ತಸ್ಮಾತ್ ಸತ್ಯಜ್ಞಾನಾದಿ ವಾಕ್ಯಾನಾಂ ನಾಖಂಡಾರ್ಥತ್ವಂ ।**



## ತತ್ತ್ವಮಸ್ಯಾದಿ ವಾಕ್ಯಸ್ಯ ಅಖಂಡಾರ್ಥತ್ವಾನುಮಾನ ಭಂಗಃ

तत्त्वमस्यादिवाक्यस्याखंडार्थत्वानुमाने अप्ययुक्ते । उक्ता-प्रसिद्धविशेषणत्वबाधप्रतिरोधाप्रयोजकत्वप्रतिकूलतर्कपराहत्यादि-दोषात् । उक्तरीत्यांऽत्यहेतोरसिद्धेश्च । उभयत्रापि दृष्टांतस्य साध्यवैकल्याच्च ।

ननु सोऽयमित्यत्र किं तद्देशकालादिविशिष्टस्यै-तद्देशकालादिवैशिष्ट्यं बोध्यते, एतद्देशकालादिविशिष्टस्य तद्देश-कालादिवैशिष्ट्यं वा, विशिष्टद्वयैक्यं वा। नाद्यः, एतत्कालादि-वैशिष्ट्यस्य प्रत्यक्षत्वेनानुपदेश्यत्वात् । तत्कालादेरपीदानीं सत्त्वापत्तेश्च । न द्वितीयः, एतत्कालादेस्तदा सत्त्वापातात् । न तृतीयः, विशेषणभेदे विशिष्टाभेदायोगात् । विशिष्टं हि यदि विशेषणविशेष्यसंबंधरूपं तदा विशेषणभेदेन, यदि तु पदार्थांतरं तदापि विशेष्यभेदेनेव विशेषणभेदेनापि तद्भेद आवश्यकः । तस्मात्सोऽयमित्यादिवाक्यं लक्षणयाऽखंडार्थमिति चेत् ।

उच्यते । अस्तु तावदनुभवकालसंबंध एव तत्ता, तथापि बाल्ययौवनयोरिव श्यामरक्तरूपयोरिव च तदेतद्देशकालसंबं-धरूपयोस्तत्तेदंतयोः परस्परमनन्वयेऽपि एकविशेषणविशिष्टे इतरस्या-वृत्तावपि एकविशेष्यवृत्तित्वं तावदस्ति । कालद्वयासंबंधिपदार्थानां क्षणिकत्वापातात् । देशद्वयसंबंधस्यापि कालभेदेनानुभवात् ।

।। **अखंडार्थत्वानुमाने अपीति** ।। तत्त्वमस्यादिवाक्यमखंडार्थनिष्ठं आत्म-स्वरूपमात्रनिष्ठं चा अकार्यकारणद्रव्यमात्रनिष्ठत्वे सति समानाधिकरणवाक्यत्वात् तन्मात्रप्रश्नोत्तरत्वादित्यनुमाने अपीत्यर्थः ।। **अप्रसिद्धविशेषणत्वेति** ।। अखंडार्थ-निष्ठत्वस्य साध्यस्याप्रसिद्धे र्विपरीतप्रसिध्या बाधात्, वाक्यत्वेन हेतुना प्रतिरोधात्,

नीलोत्पलादिवाक्यवत् सखंडप्रश्नोत्तरवाक्यवच्च उक्तसाध्यं विनाप्युपपत्त्या अप्रयोजकत्वात्, वाक्यत्वोच्छेदलक्षणप्रतिकूलतर्कपराहतत्वाच्च एतदनुमानद्वयमप्ययुक्तमित्यर्थः ।

ननु विशिष्टार्थत्वे बाधात् लक्षणया स्वरूपमात्रपरत्वं सोऽयमित्यादिवाक्यस्य वक्तव्यमिति न दृष्टांते साध्यवैकल्यमिति शंकते–**नन्विति । अनुपदेश्यत्वादिति ।।** शब्दस्य संदिग्धविपर्यस्तान्यतरं प्रत्यर्थवत्त्वादिति भावः ।। **तत्कालादेरपीति ।।** उद्देश्यस्यासत्त्वे तदुद्देशेन विधानायोगात् विधेयान्वयिन एव विशेषणत्वादिति भावः । नन्वस्तु क्षणिकत्वभयात् एकस्य कालद्वयसंबंधः । देशद्वयसंबंधस्तु कथं स्याद्विरोधादित्याशंक्याह— **देशद्वयसंबंधस्यापीति ।**



'ತತ್ತ್ವಮಸ್ಯಾದಿ ವಾಕ್ಯವು ಅಖಂಡಾರ್ಥಪರ, ಅಥವಾ ಆತ್ಮಸ್ವರೂಪಮಾತ್ರಪರ, ಅಕಾರ್ಯಕಾರಣ ದ್ರವ್ಯಮಾತ್ರ ಪರವಾಗಿದ್ದು ಸಮಾನಾಧಿಕರಣವಾದ ವಾಕ್ಯವಾದ್ದರಿಂದ, ಮತ್ತು ತನ್ಮಾತ್ರ ಪ್ರಶ್ನೋತ್ತರವಾಗಿರುವುದರಿಂದ' ಎಂದು ತತ್ತ್ವಮಸ್ಯಾದಿ ವಾಕ್ಯಕ್ಕೆ ಅಖಂಡಾರ್ಥಪರತ್ವ ಸಾಧನೆ ಮಾಡುವುದಕ್ಕಾಗಿ ಅದ್ವೈತಿ ಹೇಳಿದ ಎರಡೂ ಅನುಮಾನಗಳೂ ಅಯುಕ್ತ.

ಏಕೆಂದರೆ ಹಿಂದೆ ಹೇಳಿದಂತೆ ಅಖಂಡಾರ್ಥ ವಿಷಯಕ ನಿಷ್ಪ್ರಕಾರಕ ಜ್ಞಾನವೆಲ್ಲಿಯೂ ಹುಟ್ಟುವುದಿಲ್ಲವಾದ್ದರಿಂದ ಅಖಂಡಾರ್ಥ ಪರತ್ವರೂಪವಾದ ಸಾಧ್ಯವೇ ಅಪ್ರಸಿದ್ಧವಾದ್ದರಿಂದ ಅಪ್ರಸಿದ್ಧವಿಶೇಷಣತ್ವವೆಂಬ ಹೇತುದೋಷವಿದೆ.

ಅಖಂಡಾರ್ಥಪರತ್ವವಿಲ್ಲ, ಸಖಂಡಾರ್ಥಪರತ್ವವೇ ಇದೆ. ಸಾಧ್ಯಾಭಾವಪ್ರಸಿದ್ಧಿ ಇರುವುದರಿಂದ ಎಂದು ಬಾಧದೋಷವಿದೆ.

ವಾಕ್ಯತ್ವಾತ್ ಎಂದು ಪ್ರತಿಪಕ್ಷ ಹೇತುವಿರೋಧವಿರುವುದರಿಂದ ಸತ್ಪ್ರತಿಪಕ್ಷತ್ವದೋಷವಿದೆ.

'ನೀಲಮುತ್ಪಲಂ' ಎಂಬ ವಾಕ್ಯದಂತೆ ಮತ್ತು ಸಖಂಡಾರ್ಥಪರ ಪ್ರಶ್ನೋತ್ತರ ವಾಕ್ಯದಂತೆ ಅಖಂಡಾರ್ಥಪರತ್ವವೆಂಬ ಸಾಧ್ಯವಿಲ್ಲದಿದ್ದರೂ ಹೇತುವು ಕೂಡುವುದರಿಂದ ಅಪ್ರಯೋಜಕತ್ವರೂಪ ದೋಷವಿದೆ.

ಅಖಂಡಾರ್ಥಪರವಾದರೆ ವಾಕ್ಯತ್ವವೇ ಕೂಡುವುದಿಲ್ಲವಾದೀತೆಂದು ಪ್ರತಿಕೂಲ ತರ್ಕಪರಾಹತಿರೂಪ ದೋಷವೂ ಇದೆ. ಹೀಗೇ ಎಲ್ಲ ದೋಷಗಳಿರುವುದರಿಂದ ಅಖಂಡಾರ್ಥ ಪರತ್ವಸಾಧನೆಗಾಗಿ ಹೇಳಿದ ಎರಡೂ ಅನುಮಾನಗಳು ಅಯುಕ್ತ—

**ತತ್ತ್ವಮಸ್ಯಾದಿ ವಾಕ್ಯಸ್ಯಾಖಂಡಾರ್ಥತ್ವಾನುಮಾನೇ ಅಪ್ಯಯುಕ್ತೇ। ಉಕ್ತಾಪ್ರಸಿದ್ಧ-ವಿಶೇಷಣತ್ವ ಬಾಧ ಪ್ರತಿರೋಧ ಅಪ್ರಯೋಜಕತ್ವ ಪ್ರತಿಕೂಲತರ್ಕಪರಾಹತ್ಯಾದಿ ದೋಷಾತ್।**

ಕೋಽಹಂ? 'ನಾನು ಯಾರು?' ಎಂದು ಶ್ವೇತಕೇತುವು ತಂದೆಯಾದ ಉದ್ದಾಲಕದಲ್ಲಿ ಆತ್ಮಸ್ವರೂಪ ಮಾತ್ರ ಜಿಜ್ಞಾಸೆಯಿಂದ ಪ್ರಶ್ನೆ ಮಾಡಿದ್ದಕ್ಕೆ ಉತ್ತರವಾಗಿ 'ತತ್ತ್ವಮಸಿ' ಎಂದು ಈ ವಾಕ್ಯ ಹೊರಟಿದೆ ಎಂದು ಅದ್ವೈತಿ ಆತ್ಮಸ್ವರೂಪಮಾತ್ರ ಪ್ರಶ್ನೋತ್ತರತ್ವರೂಪವಾದ ಎರಡನೇ ಹೇತುವನ್ನು ಹೇಳುತ್ತಾನೆ. ಅದು ಸರಿಯಲ್ಲ.

ಜಿಜ್ಞಾಸೆಗೆ ಮೊದಲೇ ಧರ್ಮಿಯಾದ ಆತ್ಮಸ್ವರೂಪವನ್ನು ಸಾಮಾನ್ಯವಾಗಿ 'ನಾನು' ಎಂದು ತಿಳಿದು ಅನುವಾದ ಮಾಡುತ್ತಿರುವಾಗ 'ಸ್ವರೂಪಮಾತ್ರಸ್ಯ ಸಿದ್ಧತ್ವಾತ್ ನ ಸ್ವರೂಪಮಾತ್ರೇ ಪ್ರಶ್ನಃ' ಎಂಬಂತೆ ಧರ್ಮಿಯಾದ ಆತ್ಮಸ್ವರೂಪ ಮೊದಲೇ ತಿಳಿದಿರುವುದರಿಂದ ಆತ್ಮಸ್ವರೂಪಮಾತ್ರದ ಜಿಜ್ಞಾಸೆ ಕೂಡುವುದಿಲ್ಲ. 'ಉಕ್ತರೀತ್ಯಾ' ಹಿಂದೆ ಹೇಳಿದಂತೆ, ತನ್ಮಾತ್ರ ಪ್ರಶ್ನೋತ್ತರತ್ವರೂಪವಾದ ಎರಡನೇ ಹೇತುವಿಗೆ ಅಸಿದ್ಧಿದೋಷವಿದೆ. ಆದರಿಂದ ಅನುಮಾನ ಅಯುಕ್ತ.

ವಾಕ್ಯವೆಲ್ಲವೂ ಸಂಸರ್ಗಪರವೇ ಆಗಿರುತ್ತದೆ ಎಂಬ ನಿಯಮವಿರುವುದರಿಂದ ಎರಡೂ ಅನುಮಾನಗಳಲ್ಲಿ 'ಸೋಯಂ ದೇವದತ್ತಃ' 'ಅವನೇ ಈ ದೇವದತ್ತ' ಎಂಬ ವಾಕ್ಯವು ದೃಷ್ಟಾಂತ ವೆಂದು ಅದ್ವೈತಿ ಹೇಳಿದರೆ ಈ ದೃಷ್ಟಾಂತದಲ್ಲಿ ಸಾಧ್ಯವೈಕಲ್ಯವಿರುವುದರಿಂದಲೂ ಅನುಮಾನ ಅಯುಕ್ತ—

**ಉಕ್ತರೀತ್ಯಾ ಅಂತ್ಯ ಹೇತೋರಸಿದ್ಧೇಶ್ಚ। ಉಭಯತ್ರಾಪಿ ದೃಷ್ಟಾಂತಸ್ಯ ಸಾಧ್ಯವೈಕಲ್ಯಾಚ್ಚ।**

'ಸೋಽಯಂ ದೇವದತ್ತಃ' ಎಂಬ ವಾಕ್ಯವು ಅಖಂಡಾರ್ಥಪರವಾಗಿರುವುದರಿಂದ ದೃಷ್ಟಾಂತದಲ್ಲಿ ಸಾಧ್ಯವೈಕಲ್ಯವಿಲ್ಲ ಎಂದು ಅದ್ವೈತಿ ಹೇಳುತ್ತಾನೆ.

ಏಕೆಂದರೆ ಆ ವಾಕ್ಯಕ್ಕೆ ಮೂರು ರೀತಿಯಿಂದ ಅರ್ಥವಿವರಣೆ ಶಕ್ಯವಿದೆ ಎನ್ನುತ್ತಾನೆ. 'ಸಃ' 'ಅವನು' ಎಂದರೆ ಆ ದೇಶ ಆ ಕಾಲ ಸಂಬಂಧಿಯಾದ ಆ ವ್ಯಕ್ತಿ. 'ಅಯಂ' ಎಂದರೆ ಇವನು, ಈದೇಶ ಈಕಾಲ ಸಂಬಂಧಿಯಾಗಿರುವ ಈ ವ್ಯಕ್ತಿ. ಆ ವ್ಯಕ್ತಿಯೂ ಈ ವ್ಯಕ್ತಿಯೂ ಒಬ್ಬನೇ ದೇವದತ್ತ ಎಂದು 'ಸೋಽಯಂ ದೇವದತ್ತಃ' ಎಂಬ ವಾಕ್ಯವು ಹೇಳುತ್ತದೆ. ಇಲ್ಲಿ ಉದ್ದೇಶ್ಯವಿಧೇಯಭಾವ ಮೂರು ರೀತಿಯಾಗಿರಬಹುದು. (1) ಆ ದೇಶಕಾಲಗಳ ಸಂಬಂಧಿಯಲ್ಲಿ ಈ ದೇಶಕಾಲಗಳ ಸಂಬಂಧವಿಧಾನ ಮಾಡುವುದು. (2) ಈ ದೇಶಕಾಲಗಳ ಸಂಬಂಧಿಯಲ್ಲಿ ಆ ದೇಶಕಾಲಗಳ ಸಂಬಂಧವನ್ನು ವಿಧಾನ ಮಾಡುವುದು. (3) ಆ ದೇಶಕಾಲ ಸಂಬಂಧಿ ಮತ್ತು ಈ ದೇಶಕಾಲ ಸಂಬಂಧಿಗಳಲ್ಲಿ ಐಕ್ಯವಿಧಾನ ಮಾಡುವುದು. ಈ ಮೂರೂ ರೀತಿಗಳು ಕೂಡುವುದಿಲ್ಲ, ಆದರಿಂದ

ಕೇವಲ ಅಖಂಡವಾದ ದೇವದತ್ತ ಸ್ವರೂಪ ಮಾತ್ರವನ್ನೇ ವಾಕ್ಯವು ಲಕ್ಷಣಯಾ ಹೇಳುತ್ತದೆ. ಇದೇ ಅಖಂಡಾರ್ಥಪರತ್ವ' ಎನ್ನುತ್ತಾನೆ ಅದ್ವೈತಿ—

**ನನು ಸೋಽಯಮಿತ್ಯತ್ರ ಕಿಂ ತದ್ದೇಶಕಾಲಾದಿ ವಿಶಿಷ್ಟಸ್ಯ ಏತದ್ದೇಶ ಕಾಲಾದಿವೈಶಿಷ್ಟ್ಯಂ ಬೋಧ್ಯತೇ, ಏತದ್ದೇಶಕಾಲಾದಿ ವಿಶಿಷ್ಟಸ್ಯ ತದ್ದೇಶಕಾಲಾದಿ ವೈಶಿಷ್ಟ್ಯಂ ವಾ, ವಿಶಿಷ್ಟ ದ್ವಯೈಕ್ಯಂ ವಾ?**

ಮೂರು ರೀತಿಗಳು ಏಕೆ ಕೂಡುವುದಿಲ್ಲ ಎಂದರೆ, ಆದೇಶಕಾಲಗಳ ಸಂಬಂಧಿಯಲ್ಲಿ ಈದೇಶಕಾಲಗಳ ಸಂಬಂಧವಿದೆ ಎನ್ನುವಾಗ ಈದೇಶಕಾಲಗಳ ಸಂಬಂಧವಿರುವುದು ಪ್ರತ್ಯಕ್ಷಸಿದ್ಧವೇ ಇರುವುದರಿಂದ ಅದರಲ್ಲಿ ಸಂದೇಹ ಭ್ರಮಗಳಿಲ್ಲದಿರುವುದರಿಂದ ಅದನ್ನು ಹೇಳುವುದು ವ್ಯರ್ಥವಾಗುತ್ತದೆ. ಇಲ್ಲಿ ಆದೇಶಕಾಲಗಳ ಸಂಬಂಧಿಯು ಉದ್ದೇಶ್ಯ. ಈದೇಶಕಾಲಗಳ ಸಂಬಂಧವು ವಿಧೇಯ. ಉದ್ದೇಶ್ಯವಾಗಿರುವ ಆ ದೇಶಕಾಲ ಸಂಬಂಧಿಯಲ್ಲಿ ಆ ದೇಶಕಾಲ ಸಂಬಂಧವು ವಿಶೇಷಣವಾಗಿ ಕಾಣುತ್ತದೆ. ಅದು ವಿಶೇಷಣವಾಗಬೇಕಾದರೆ ವಿಶೇಷ್ಯವಾದ ಸಂಬಂಧಿಯು ವಿಧೇಯದಲ್ಲಿ ಅನ್ವಯಹೊಂದುವಾಗ ವಿಶೇಷಣವಾದ ಸಂಬಂಧವೂ ವಿಧೇಯದಲ್ಲಿ ಅನ್ವಯ ಹೊಂದಬೇಕು. ಆಗ ಮಾತ್ರವೆ ವಿಶೇಷಣವು ವಿಶೇಷಣವೆನಿಸುತ್ತದೆ. ಅನ್ವಯ ಹೊಂದದಿದ್ದರೆ ಅದು ವಿಶೇಷಣವೆನಿಸುವುದಿಲ್ಲ, ಉಪಲಕ್ಷಣವೆನಿಸುತ್ತದೆ, ಅಥವಾ ಉಪಾಧಿ ಎನಿಸುತ್ತದೆ. ಹೀಗಾಗಿ ವಿಶೇಷಣವಾಗಿರುವ ಆ ದೇಶಕಾಲ ಸಂಬಂಧವು ಕೂಡ ವಿಧೇಯದಲ್ಲಿ ಅನ್ವಯ ಹೊಂದಬೇಕು. ಅಂದರೆ, ಆ ದೇಶಕಾಲಗಳು ವಿಧೇಯವಾದ ಈ ದೇಶಕಾಲಗಳ ಸಂಬಂಧವನ್ನು ಹೊಂದಬೇಕು. ಇದು, ಆ ದೇಶಕಾಲಗಳು ಈ ದೇಶಕಾಲಗಳಲ್ಲಿದ್ದರೆ ಮಾತ್ರ ಸಾಧ್ಯ. ಹೀಗಾಗಿ ಆ ದೇಶಕಾಲಗಳ ಸಂಬಂಧಿಯಲ್ಲಿ ಈ ದೇಶಕಾಲ ಸಂಬಂಧವಿಧಾನ ಮಾಡಿದರೆ ಆ ದೇಶಕಾಲಗಳು ಈ ದೇಶಕಾಲಗಳಲ್ಲಿ ಇದೆ ಎಂದಂತಾಗುವುದರಿಂದ ಈ ಉದ್ದೇಶ್ಯವಿಧೇಯಭಾವವು ಬಾಧಿತವಾದ್ದರಿಂದ ಅಯುಕ್ತವೆನಿಸುತ್ತದೆ.

ಈ ದೇಶಕಾಲಗಳ ಸಂಬಂಧಿಯನ್ನು ಉದ್ದೇಶಿಸಿ ಅದರಲ್ಲಿ ಆ ದೇಶಕಾಲ ಸಂಬಂಧವನ್ನು ವಿಧಾನಮಾಡಿದರೆ ಈ ದೇಶಕಾಲಗಳು ಆ ದೇಶಕಾಲಗಳಲ್ಲಿ ಇವೆ ಎಂದಂತಾಗುವುದರಿಂದ ಈ ಉದ್ದೇಶ್ಯವಿಧೇಯಭಾವವೂ ಬಾಧಿತ, ಅಯುಕ್ತ.

ಆದೇಶಕಾಲ ಸಂಬಂಧಿ ಮತ್ತು ಈದೇಶಕಾಲ ಸಂಬಂಧಿಗಳಿಗೆ ಐಕ್ಯವನ್ನು ವಿಧಾನಮಾಡುವ ಮೂರನೆ ಪಕ್ಷದಲ್ಲಿ ಆದೇಶಕಾಲ ಸಂಬಂಧ ವಿಶಿಷ್ಟ ಮತ್ತು ಈದೇಶಕಾಲ ಸಬಂಧ ವಿಶಿಷ್ಟ ಎಂದು ಎರಡು ವಿಶಿಷ್ಟಗಳಿಗೆ ಐಕ್ಯವು ಬಾಧಿತ, ಅಯುಕ್ತ. ಏಕೆಂದರೆ, ವಿಶೇಷಣಗಳು ಬೇರೆಬೇರೆಯಾಗಿರುವಾಗ ವಿಶಿಷ್ಟಗಳು ಒಂದಾಗಿರಲಾರವು. ವಿಶಿಷ್ಟವು ವಿಶೇಷಣ ವಿಶೇಷ್ಯ ಮತ್ತು ಅವುಗಳ ಸಂಬಂಧರೂಪವಾಗಿರುತ್ತದೆ. ವಿಶೇಷಣಗಳು ಬೇರೆಯಾದರೆ ಈ ವಿಶೇಷಣ ವಿಶೇಷ್ಯಸಂಬಂಧರೂಪವಾದ ವಿಶಿಷ್ಟವೂ ಬೇರೆಯೆ ಎನ್ನಬೇಕು.

ವಿಶಿಷ್ಟವು ವಿಶೇಷಣ ವಿಶೇಷ್ಯ ಮತ್ತು ಸಂಬಂಧಗಳ ಸೇರಿಕೆಯಿಂದ ಉಂಟಾಗುವ ಬೇರೆಯೆ ಒಂದು ಪದಾರ್ಥವೆನ್ನುವ ಪಕ್ಷದಲ್ಲಿಯೂ, ವಿಶೇಷ್ಯಗಳು ಭಿನ್ನವಾದರೆ ಅವುಗಳಿಂದಾಗುವ ವಿಶಿಷ್ಟಗಳು ಹೇಗೆ ಭಿನ್ನವಾಗಿರುವುವೋ ಹಾಗೆ ವಿಶೇಷಣಗಳು ಭಿನ್ನವಾದರೂ ಅವುಗಳಿಂದಾಗುವ ವಿಶಿಷ್ಟಗಳು ಭಿನ್ನವೆಂದೇ ಹೇಳಬೇಕು.

ಯದ್ಯಪಿ ವಿಶೇಷ್ಯವು ಸಮವಾಯಿ ಕಾರಣವಾದ್ದರಿಂದ ವಿಶೇಷ್ಯ ಭೇದದಿಂದ ವಿಶಿಷ್ಟಭೇದ ಸಹಜ. ತಂತು ಮೃತ್ತುಗಳಿಂದಾಗುವ ಪಟ ಘಟಗಳು ಬೇರೆಯೆ. ಆದರೆ ವಿಶೇಷಣವು ನಿಮಿತ್ತ ಕಾರಣ. ನಿಮಿತ್ತಭೇದದಿಂದ ಕಾರ್ಯಭೇದ ಉಂಟೆ? ಎಂದರೆ ಪಾಕಜಸ್ಥಳದಲ್ಲಿ ನಿಮಿತ್ತವಾದ ಪಾಕಭೇದದಿಂದ ರೂಪರಸಾದಿ ಕಾರ್ಯಭೇದ ಕಂಡಿದೆ. ತಂತುಗಳು ಸಮವಾಯಿಗಳು ಬೇರೆಯಾದರೂ ಪಟರೂಪ ಕಾರ್ಯ ಅಭಿನ್ನವಾಗಿರುವುದು ಕಂಡಿದೆ.

ಆದರೂ ವಿಶಿಷ್ಟಗಳಿಗೆ ಐಕ್ಯವನ್ನು ಹೇಳಿದರೆ ವಿಶೇಷಣಗಳಿಗೂ ಐಕ್ಯವನ್ನು ಹೇಳಿದಂತಾಗುತ್ತದೆ. ಪ್ರಕೃತ ವಿಶೇಷಣವಾದ ಆದೇಶಕಾಲ ಸಂಬಂಧ ಮತ್ತು ಈ ದೇಶಕಾಲ ಸಂಬಂಧಗಳು ಭಿನ್ನವಾಗಿರುವುದರಿಂದ ಅವುಗಳ ಸಂಬಂಧಿ ರೂಪವಾದ ವಿಶಿಷ್ಟಗಳೂ ಪರಸ್ಪರ ಭಿನ್ನವೇ ಆಗಿರುತ್ತವೆ. ಅವುಗಳಿಗೆ ಐಕ್ಯವನ್ನು ವಿಧಾನ ಮಾಡಿದರೆ ವಿಶೇಷಣಗಳಿಗೆ ಐಕ್ಯಬರುವುದರಿಂದ ಅದು ಬಾಧಿತವಾಗಿ ಅಯುಕ್ತ ವೆನಿಸುವುದು.

ಹೀಗೆ ಮೂರೂ ಬಗೆಯ ಉದ್ದೇಶ್ಯವಿಧೇಯಭಾವ ಕೂಡದಿರುವುದರಿಂದ ಈ ವಾಕ್ಯವು ವಿಶೇಷಣ ತ್ಯಾಗಮಾಡಿ ಲಕ್ಷಣಯಾ ಉದ್ದೇಶ್ಯವಿಧೇಯಭಾವಯುಕ್ತವಾದ ಕೇವಲ ಅಖಂಡ ಸ್ವರೂಪಮಾತ್ರ ಪರವಾಗುವುದೆನ್ನಬೇಕು—

**ನಾದ್ಯಃ ಏತತ್ಕಾಲಾದಿ ವೈಶಿಷ್ಟ್ಯಸ್ಯ ಪ್ರತ್ಯಕ್ಷತ್ವೇನ ಅನುಪದೇಶ್ಯತ್ವಾತ್। ತತ್ಕಾಲಾದೇರಪಿ ಇದಾನೀಂ ಸತ್ತ್ವಾಪತ್ತೇಶ್ಚ। ನ ದ್ವಿತೀಯಃ। ಏತತ್ಕಾಲಾದೇಃ ತದಾ ಸತ್ತ್ವಾಪಾತಾತ್। ನ ತೃತೀಯಃ। ವಿಶೇಷಣ ಭೇದೇ ವಿಶಿಷ್ಟಾಭೇದಾಯೋಗಾತ್।**

**ವಿಶಿಷ್ಟಂ ಹಿ ಯದಿ ವಿಶೇಷಣ ವಿಶೇಷ್ಯ ಸಂಬಂಧ ರೂಪಂ, ತದಾ ವಿಶೇಷಣ ಭೇದೇನ, ಯದಿ ತು ಪದಾರ್ಥಾಂತರಂ ತದಾಪಿ ವಿಶೇಷ್ಯಭೇದೇನೇವ ವಿಶೇಷಣ ಭೇದೇನಾಪಿ ತದ್ಭೇದ ಆವಶ್ಯಕಃ। ತಸ್ಮಾತ್ ಸೋಽಯಮಿತ್ಯಾದಿವಾಕ್ಯಂ ಲಕ್ಷಣಯಾ ಅಖಂಡಾರ್ಥಮಿತಿ ಚೇತ್, ಉಚ್ಯತೇ।**

'ಇತಿ ಚೇದುಚ್ಯತೇ' ಅದ್ವೈತಿಯು ಹೀಗೆ ಆಕ್ಷೇಪ ಮಾಡಿದರೆ ಸಮಾಧಾನ ನೀಡುತ್ತೇವೆ', ಎಂದು ಹೇಳುತ್ತ ಮೊದಲಿಗೆ, ತತ್ತ್ವೋದ್ಯೋತದಲ್ಲಿ ನೀಡಿರುವ ಸಮಾಧಾನಕ್ಕಿಂತ ಬೇರೆಯಾದ ಒಂದು ಹೊಸ ಸಮಾಧಾನವನ್ನು ಶ್ರೀವ್ಯಾಸರಾಜರು ಇಲ್ಲಿ ಕೊಡುತ್ತಾರೆ.

ತತ್ತ್ವೋದ್ಯೋತದಲ್ಲಿ ಕೊಟ್ಟ ಸಮಾಧಾನ ಹೀಗೆ—ಆ ದೇಶಕಾಲ ಸಂಬಂಧಿಯಲ್ಲಿ ಈ

ದೇಶಕಾಲ ಸಂಬಂಧವಿದೆ ಎಂದರೆ ಆ ದೇಶಕಾಲ ಸಂಬಂಧಿಯಲ್ಲಿ ಆ ಸಂಬಂಧ ಕಳೆದಾಗ ಅಂದರೆ ಅದರ ಧ್ವಂಸವಾದ ಬಳಿಕ ಈ ದೇಶಕಾಲ ಸಂಬಂಧ ಬಂದಿದೆ ಎಂದರ್ಥ. ಈ ದೇಶಕಾಲ ಸಂಬಂಧಿಯಲ್ಲಿ ಆ ದೇಶಕಾಲಸಂಬಂಧವಿತ್ತೆಂದರೆ ಈ ದೇಶಕಾಲ ಸಂಬಂಧವಿನ್ನೂ ಬರುವುದಕ್ಕೆ ಮೊದಲು, ಅದರ ಪ್ರಾಗಭಾವ ಕಾಲದಲ್ಲಿ ಆ ದೇಶಕಾಲ ಸಂಬಂಧವಿತ್ತು ಎಂದರ್ಥ. ಆ ದೇಶಕಾಲ ಸಂಬಂಧಿ —ಈ ದೇಶಕಾಲ ಸಂಬಂಧಿ ಎಂದು ಎರಡು ವಿಶಿಷ್ಟಗಳಿಗೆ ಐಕ್ಯವೆಂದರೆ, ಆದೇಶಕಾಲ ಸಂಬಂಧಧ್ವಂಸವಿಶಿಷ್ಟನಿಗೂ ಈದೇಶಕಾಲ ಸಂಬಧ ವಿಶಿಷ್ಟನಿಗೂ ಐಕ್ಯ, ಅಥವಾ ಆದೇಶಕಾಲ ಸಂಬಂಧವಿಶಿಷ್ಟನಿಗೂ ಈದೇಶಕಾಲ ಸಂಬಂಧದ ಪ್ರಾಗಭಾವ ವಿಶಿಷ್ಟನಿಗೂ ಐಕ್ಯ. ಹೀಗೆ ಈ ಉದ್ದೇಶ್ಯವಿಧೇಯಭಾವಗಳು ಅಬಾಧಿತವೇ ಆಗಿವೆ ಎಂದು.

ಅದ್ವೈತಿಗಳು ಅಖಂಡ ಚೈತನ್ಯ ಸ್ವರೂಪದಲ್ಲಿ ಉದ್ದೇಶ್ಯವಿಧೇಯ ಭಾವವನ್ನು ಹೇಳಿದ್ದಾರೆ, ಆದರೆ ಅದನ್ನು ಸಮರ್ಥಿಸುವುದರಲ್ಲಿ ವಿಫಲರಾಗಿದ್ದಾರೆ.

ತತ್ತ್ವೋದ್ಯೋತದಲ್ಲಿ ಕೊಟ್ಟಿರುವ ಸಮಾಧಾನದಲ್ಲಿ 'ಸೋಽಯಂ' ಎಂದು ಹೇಳಿದ ಎರಡು ವಿಶೇಷಣಗಳಿಗೆ ಎಂದೂ ವಿರೋಧವಿಲ್ಲ. 'ನೀಲಂ ಉತ್ಪಲಂ' 'ಕಮಲವು ನೀಲವಾಗಿದೆ' ಎಂಬಲ್ಲಿ ಕಮಲತ್ವ ನೈಲ್ಯಗಳಿಗೆ ಎಂದೂ ವಿರೋಧವಿಲ್ಲ. ಶ್ರೀವ್ಯಾಸರಾಜರು ನೀಡುವ ಹೊಸ ಸಮಾಧಾನದಲ್ಲಿ ವಿಶೇಷಣಗಳಿಗೆ ಪರಸ್ಪರ ವಿರೋಧವಿದ್ದರೂ ಕಾಲ ಭೇದದಿಂದ ವಿರೋಧ ಪರಿಹಾರವಾಗುತ್ತದೆ, ಬಾಲ್ಯ ಯೌವನಗಳು ಒಬ್ಬನಲ್ಲಿ ಏಕಕಾಲದಲ್ಲಿ ವಿರುದ್ಧವಾದರೂ ಕಾಲಭೇದದಿಂದ ವಿರೋಧ ಪರಿಹಾರವಾಗುವಂತೆ.

ಶ್ರೀವ್ಯಾಸರಾಜರು ಹೇಳುತ್ತಾರೆ—ಮೊದಲಿಗೆ ನಾವು ಈಗ ಒಂದು ಹೊಸ ಸಮಾಧಾನವನ್ನು ಹೇಳುತ್ತೇವೆ. 'ಅಸ್ತುತಾವತ್' 'ಮೊದಲಿಗೆ ಈ ಸಮಾಧಾನ' ಎಂದು. ಅನುಭವಗೋಚರವಾದ ಆಕಾಲದ ಸಂಬಂಧವನ್ನೇ 'ತತ್ತಾ' ಎನ್ನೋಣ, ತತ್ತ್ವೋದ್ಯೋತದಲ್ಲಿ ಹೇಳಿದ 'ಆಕಾಲ ಸಂಬಂಧಧ್ವಂಸ'ದಂತೆಯೇ 'ಆಕಾಲಸಂಬಂಧ'ವೂ ದೇವದತ್ತನಲ್ಲಿ ಇದಂತಾಕ್ಕೆ ಅವಿರುದ್ಧವಾದ ವಿಶೇಷಣವಾಗಬಲ್ಲುದು. ಇದಕ್ಕೆ ಉದಾಹರಣೆ ಒಬ್ಬನಲ್ಲಿಯೆ ಬಾಲ್ಯ, ಯೌವನಗಳು, ಒಂದೇ ಹಣ್ಣಿನಲ್ಲಿ ಶ್ಯಾಮರೂಪ ರಕ್ತರೂಪಗಳು. ಇವು ಏಕಕಾಲದಲ್ಲಿ ಒಂದೆಡೆ ಇರದಿದ್ದರೂ ಬೇರೆಬೇರೆ ಕಾಲದಲ್ಲಿ ಒಂದೇ ಕಡೆ ಇರಬಲ್ಲುವು. ಹಾಗೇ ತತ್ತಾ-ಇದಂತಾ ಎಂಬ ವಿಶೇಷಣಗಳು ಪರಸ್ಪರ ಒಂದಾಗದಿದ್ದರೂ, ಏಕವಿಶೇಷಣವಿಶಿಷ್ಟದಲ್ಲಿ ಅಪರವಿಶೇಷಣ ಇಲ್ಲದಿದ್ದರೂ, ಏಕವಿಶೇಷ್ಯದಲ್ಲಿ ಎರಡೂ ವಿಶೇಷಣಗಳು ಭಿನ್ನಕಾಲಗಳಲ್ಲಿರಬಲ್ಲುವು. ಹೀಗೆ ಒಂದು ಪದಾರ್ಥದಲ್ಲಿ ಕಾಲದ್ವಯ ರೂಪವಿಶೇಷಣಗಳ ಸಂಬಂಧಬಾರದಿದ್ದರೆ ಆ ಪದಾರ್ಥ ಕ್ಷಣಿಕವಾದೀತು. ಕಾಲದ್ವಯ ಸಂಬಂಧವನ್ನು ಒಂದು ಪದಾರ್ಥದಲ್ಲಿ ಕ್ಷಣಿಕತ್ವಾಪತ್ತಿ ಪರಿಹಾರಕ್ಕಾಗಿ ಒಪ್ಪಿದರೂ ದೇಶದ್ವಯ ಸಂಬಂಧವನ್ನು ಹೇಗೆ ಒಪ್ಪಲಾದೀತು? ಅವುಗಳಿಗೆ ವಿರೋಧ ಇದೆ ತಾನೆ? ಎಂದರೆ ಏಕಕಾಲದಲ್ಲಿ ಮಾತ್ರ ದೇಶದ್ವಯ ಸಂಬಂಧಗಳಿಗೆ ವಿರೋಧ. ಕಾಲ ಭೇದದಿಂದ ಒಬ್ಬನಲ್ಲಿಯೇ ದೇಶದ್ವಯಸಂಬಂಧವಿರುವುದು ಅನುಭವ ಸಿದ್ಧವೇ ಆಗಿದೆ—

ಅಸ್ತು ತಾವತ್ ಅನುಭವಕಾಲ ಸಂಬಂಧ ಏವ ತತ್ತಾ। ತಥಾಪಿ ಬಾಲ್ಯ-ಯೌವನಯೋರಿವ, ಶ್ಯಾಮ-ರಕ್ತ ರೂಪಯೋರಿವ ಚ, ತದೇತದ್ದೇಶಕಾಲ ಸಂಬಂಧ ರೂಪಯೋಃ ತತ್ತೇದಂತಯೋಃ ಪರಸ್ಪರಮನನ್ವಯೇಽಪಿ, ಏಕವಿಶೇಷಣವಿಶಿಷ್ಟೇ ಇತರಸ್ಯಾವೃತ್ತಾವಪಿ, ಏಕವಿಶೇಷ್ಯವೃತ್ತಿತ್ವಂ ತಾವದಸ್ತಿ। ಕಾಲದ್ವಯಾಸಂಬಂಧಿ ಪದಾರ್ಥಾನಾಂ ಕ್ಷಣಿಕತ್ವಾಪಾತಾತ್। ದೇಶದ್ವಯ ಸಂಬಂಧಸ್ಯಾಪಿ ಕಾಲಭೇದೇನಾನುಭವಾತ್।



सोऽयमिति पदद्वयं च तत्तेदंतयोरेकवृत्तित्वबोधने शक्तम्। समानाधिकरणत्वात्। भिन्नप्रवृत्तिनिमित्तानामेकस्मिन्नर्थे वृत्तिर्हि सामानाधिकरण्यम्। नच विशेष्यस्य तत्तेदंतान्वयपरमपीदं वाक्यं विशिष्टस्य तदन्वयपरं नेत्येतावताऽखंडार्थम्। नीलमुत्पलमित्यादेरप्यखंडार्थत्वापातात्। एवंच

कालद्वयेन योगस्य क्रमेण स्थायिवस्तुनि।
नैल्यरक्तत्ववत्सत्त्वात्तदुक्तौ का विरुद्धता॥
विशेष्ये धर्मसंसर्गपरं चापि विशेषिते।
तत्परं नेत्यखंडार्थं स्याच्चेत्सर्वं तथा भवेत्॥

एतेन विशेष्यस्य कालद्वयसंबंधेनैव क्षणिकत्वानापत्तेर्विशिष्टस्य तत्संबंधो नापेक्षित इति निरस्तम्। मयापि विशेष्य एव कालद्वयसंबंधस्योक्तेः।

देवदत्तस्वरूपमात्रं बुभुत्सितमिति तु निरसिष्यते।

**नीलमुत्पलमिति**॥ तत्रापि नैल्यविशिष्ट उत्पलत्ववैशिष्ट्यबोधायोगादिति भावः। उक्तमर्थं कारिकया संगृह्णाति— **एवंचेति**॥ पदार्थानां क्षणिकत्वपरिहाराय विशिष्टयोः कालद्वयसंबंधो वक्तव्य इति दूषणमभिप्रेत्य विशेष्यमात्रस्य कालद्वयसंबंधेनापि न क्षणिकत्वमिति परिहारमाशंक्य मदुक्तावविशेष एवेत्याह— **एतेनेति**॥

ननु देवदत्तस्वरूपमात्रस्य बुभुत्सितत्वात्तदेव सोऽयमित्यादिना बोधनीयमिति न विशिष्टार्थपरत्वमित्याशंक्याह— **देवदत्तेति** ।।



'ಸೋಽಯಂ' ಸಃ ಅಯಂ ಎಂಬ ಎರಡು ಪದಗಳಿಗೆ 'ತತ್ತಾ ಮತ್ತು ಇದಂತಾಗಳು ಎರಡು ವಿಶೇಷಣಗಳು ದೇವದತ್ತ ಎಂಬ ಒಂದು ವಿಶೇಷ್ಯವೃತ್ತಿಯಾಗಿವೆ' ಎಂದು ಬೋಧಿಸಲು ಸಾಮರ್ಥ್ಯವಿದೆ. ಏಕೆಂದರೆ ಅವುಗಳಿಗೆ ಸಾಮಾನಾಧಿಕರಣ್ಯವಿದೆ. ಪರಸ್ಪರ ಭಿನ್ನವಾದ ಪ್ರವೃತ್ತಿನಿಮಿತ್ತಗಳಿಗೆ ಒಂದು ಪದಾರ್ಥದಲ್ಲಿ ಜೊತೆಯಾಗಿ ಇರುವಿಕೆಯೇ ಸಾಮಾನಾಧಿಕರಣ್ಯ ತಾನೆ?

'ಈ ವಾಕ್ಯವು ವಿಶೇಷ್ಯದೇವದತ್ತನಲ್ಲಿ ತತ್ತಾ ಇದಂತಾಗಳ 'ಅನ್ವಯ' ಸಂಬಂಧ ಮಾತ್ರಪರವಾಗಿದೆ ಹೊರತು ವಿಶಿಷ್ಟದಲ್ಲಿ ತತ್ತಾ ಇದಂತಾಗಳ ವೈಶಿಷ್ಟ್ಯವನ್ನು ಬೋಧಿಸುವುದಿಲ್ಲವಾದ್ದರಿಂದ ಅಖಂಡಾರ್ಥಪರ ಎಂದು ವ್ಯವಹಾರ, ಎನ್ನುತ್ತೇವೆ' ಎಂದು ಅದ್ವೈತಿ ಹೇಳಿದರೆ, 'ನೀಲಂ ಉತ್ಪಲಂ' ಎಂಬ ಸಖಂಡಾರ್ಥಪರ ವಾಕ್ಯದಲ್ಲಿಯೂ ನೀಲತ್ವ ವಿಶಿಷ್ಟದಲ್ಲಿ ಉತ್ಪಲತ್ವ ವೈಶಿಷ್ಟ್ಯಬೋಧವು ಕೂಡುವುದಿಲ್ಲವಾದ್ದರಿಂದ ವಿಶೇಷ್ಯ ಉತ್ಪಲದಲ್ಲಿ ನೀಲತ್ವ ಉತ್ಪಲತ್ವ ಸಂಬಂಧ ಮಾತ್ರ ಬೋಧಿತವಾಗುತ್ತಿರುವುದರಿಂದ ಅದು ಅಖಂಡಾರ್ಥಪರವೆಂದು ವ್ಯವಹೃತವಾದೀತು. ಅಲ್ಲಿ ವ್ಯಭಿಚಾರವಿದೆ, ಎನ್ನುತ್ತೇವೆ. ಆದರಿಂದ ತತ್ತಾ ಇದಂತಾ ಸಂಬಂಧ ಮಾತ್ರವನ್ನು ಹೇಳಿದರೂ ಸಖಂಡಾರ್ಥವೆಂದೇ ಹೇಳಬೇಕು. ಸಂಸರ್ಗಬೋಧಕವಾಕ್ಯವೆಲ್ಲವೂ ಸಖಂಡಾರ್ಥವೇ ತಾನೆ?

**ಸೋಽಯಮಿತಿ ಪದದ್ವಯಂ ಚ ತತ್ತೇದಂತಯೋಃ ಏಕವೃತ್ತಿತ್ವಬೋಧನೇ ಶಕ್ತಂ। ಸಮಾನಾಧಿಕರಣತ್ವಾತ್। ಭಿನ್ನಪ್ರವೃತ್ತಿನಿಮಿತ್ತಾನಾಮೇಕಸ್ಮಿನ್ನರ್ಥೇ ವೃತ್ತಿರ್ಹಿ ಸಾಮಾನಾಧಿಕರಣ್ಯಂ। ನ ಚ ವಿಶೇಷ್ಯಸ್ಯ ತತ್ತೇದಂತಾನ್ವಯಪರಮಪೀದಂ ವಾಕ್ಯಂ ವಿಶಿಷ್ಟಸ್ಯ ತದನ್ವಯಪರಂ ನೇತ್ಯೇತಾವತಾಽಖಂಡಾರ್ಥಂ। ನೀಲಮುತ್ಪಲ ಮಿತ್ಯಾದೇರಪಿ ಅಖಂಡಾರ್ಥತ್ವಾಪಾತಾತ್।**

'ಏವಂಚ' ಇದರ ಸಾರಾಂಶವಿಷ್ಟು– ಕ್ಷಣಿಕತ್ವಪರಿಹಾರಕ್ಕಾಗಿ ಕಾಲದ್ವಯ ಸಂಬಂಧವನ್ನು ಅದು ಏಕಕಾಲದಲ್ಲಿ ವಿರುದ್ಧವಾದರೂ ಕಾಲಭೇದದಿಂದ ಕ್ರಮೇಣ ಸ್ಥಾಯಿವಸ್ತುವಿನಲ್ಲಿ, ಪಾಕ ಭೇದದಿಂದ ನೈಲ್ಯ ರಕ್ತಿಮಗಳಂತೆ, ಕ್ರಮೇಣ ಬರಬಹುದಾದ್ದರಿಂದ, ವಿರೋಧವೆಂದು ತಿಳಿದು ವಿಶೇಷಣತ್ಯಾಗ ಮಾಡಬೇಕಿಲ್ಲ.

ಕೇವಲ ವಿಶೇಷ್ಯದಲ್ಲಿ ತತ್ತಾ ಇದಂತಾ ಧರ್ಮಗಳ ಸಂಬಂಧ ಮಾತ್ರವನ್ನು ವಾಕ್ಯವು ಸ್ವಶಕ್ತಿಯಿಂದ ಬೋಧಿಸಿದರೂ, ವಿಶಿಷ್ಟದಲ್ಲಿ ಧರ್ಮಗಳ ವೈಶಿಷ್ಟ್ಯವನ್ನು ಬೋಧಿಸದಿದ್ದ ಮಾತ್ರಕ್ಕೆ

ಅಖಂಡಾರ್ಥತ್ವ ವ್ಯವಹಾರ ಎನ್ನುವುದಾದರೆ ನೀಲಮುತ್ಪಲಂ ಎಂಬಂತೆ ಎಲ್ಲ ವಾಕ್ಯಗಳನ್ನು ಅಖಂಡಾರ್ಥಪರವೆಂದು ವ್ಯವಹಾರ ಮಾಡುವ ಪ್ರಸಂಗ ಬರುತ್ತದೆ—

ಏವಂಚ— ಕಾಲದ್ವಯೇನ ಯೋಗಸ್ಯ ಕ್ರಮೇಣ ಸ್ಥಾಯಿವಸ್ತುನಿ ।
ನೈಲ್ಯರಕ್ತತ್ವವತ್ ಸತ್ತ್ವಾತ್ ತದುಕ್ತೌ ಕಾ ವಿರುದ್ಧತಾ ?
ವಿಶೇಷ್ಯೇ ಧರ್ಮ ಸಂಸರ್ಗ ಪರಂ ಚಾಪಿ ವಿಶೇಷಿತೇ
ತತ್ಪರಂ ನೇತ್ಯಖಂಡಾರ್ಥಂ ಸ್ಯಾಚ್ಚೇತ್ ಸರ್ವಂ ತಥಾ ಭವೇತ್ ॥

'ಪದಾರ್ಥಗಳಿಗೆ ಕ್ಷಣಿಕತ್ವ ಪರಿಹಾರವಾಗಬೇಕಾದರೆ ವಿಶೇಷ್ಯವ್ಯಕ್ತಿ ಮಾತ್ರಕ್ಕೆ ಕಾಲದ್ವಯ ಸಂಬಂಧವನ್ನು ಹೇಳಿದರೂ ಸಾಕು, ವಿಶಿಷ್ಟಕ್ಕೆ ಕಾಲದ್ವಯ ಸಂಬಂಧ ವೈಶಿಷ್ಟ್ಯವನ್ನು ಹೇಳಬೇಕಾಗಿಲ್ಲ' ಎಂದು ಅದ್ವೈತಿ ಹೇಳುವುದು ಸರಿಯಲ್ಲ, ವಿಶಿಷ್ಟಕ್ಕೆ ಕಾಲದ್ವಯ ಸಂಬಂಧಿತ್ವ ವಿಲ್ಲವಾದರೆ ಅದು ಕ್ಷಣಿಕವೆಂದಾದೀತು ಎಂಬ ದೋಷವಿದ್ದೇ ಇದೆ. ಅದರಿಂದ ವಿಶಿಷ್ಟಕ್ಕೆ ಕಾಲದ್ವಯ ಸಂಬಂಧವನ್ನು ಹೇಳಬೇಕು, ಅಬಾಧಿತವೆಂದೂ ಒಪ್ಪಬೇಕು. ಅದರಿಂದ ಲಕ್ಷಣೆಯಿಂದ ವಿಶೇಷಣತ್ಯಾಗಮಾಡಿ ವಾಕ್ಯವನ್ನು ಅಖಂಡಾರ್ಥಪರವಾಗಿಸುವ ಪ್ರಯತ್ನವು ಅಯುಕ್ತ.

ಒಂದುವೇಳೆ, ವಿಶೇಷ್ಯಮಾತ್ರದಲ್ಲಿ ಕಾಲದ್ವಯ ಸಂಬಂಧವನ್ನು ಕ್ಷಣಿಕತ್ವಪರಿಹಾರಕ್ಕೆ ಒಪ್ಪಿದರೆ ಸಾಕು, ವಿಶಿಷ್ಟದಲ್ಲಿ ಅದನ್ನು ಏಕೆ ಒಪ್ಪಬೇಕು? ಎಂದು ಅದ್ವೈತಿ ಹೇಳಿದರೂ ನಾವೂ ಕೂಡ 'ಸೋಽಯಂ' ಎಂಬಲ್ಲಿ ವಿಶೇಷ್ಯಮಾತ್ರಕ್ಕೇ ಕಾಲದ್ವಯಸಂಬಂಧವನ್ನು ಹೇಳುತ್ತಿರುವುದರಿಂದ ಅದು ಅಬಾಧಿತವಾದ್ದರಿಂದ ಲಕ್ಷಣಾಕ್ಕೆ ಪ್ರಸಕ್ತಿ ಇಲ್ಲ ಎನ್ನುತ್ತೇವೆ. ಲಕ್ಷಣಯಾ ಅಖಂಡಾರ್ಥಪರವಾಗಿಸುವ ಯತ್ನ ಅನಾವಶ್ಯಕ.

'ಸೋಽಯಂ ಎಂಬ ವಾಕ್ಯ ಕೇವಲ ವಿಶೇಷ್ಯದಲ್ಲಿ ಕಾಲದ್ವಯಸಂಬಂಧ ಬೋಧನೆಗೆ ಹೊರಟಿಲ್ಲ, ದೇವದತ್ತ ಸ್ವರೂಪ ಮಾತ್ರದ ಜಿಜ್ಞಾಸೆಗೆ ಉತ್ತರವಾಗಿ ಹೊರಟಿದೆ ಅದರಿಂದ ಅದು ವಿಶಿಷ್ಟಾರ್ಥಪರವಲ್ಲ, ದೇವದತ್ತ ಸ್ವರೂಪ ಮಾತ್ರ ಪರ. ಹೀಗಾಗಿ ಲಕ್ಷಣಾದಿಂದ ವಿಶೇಷಣತ್ಯಾಗ ಮಾಡುತ್ತೇವೆ' ಎಂದರೆ ಅದನ್ನು ಮುಂದೆ ನಾವು ನಿರಾಕರಿಸುತ್ತೇವೆ—

ಏತೇನ ವಿಶೇಷ್ಯಸ್ಯ ಕಾಲದ್ವಯ ಸಂಬಂಧೇನೈವ, ಕ್ಷಣಿಕತ್ವಾನಾಪತ್ತೇಃ ವಿಶಿಷ್ಟಸ್ಯ ತತ್ಸಂಬಂಧೋ ನಾಪೇಕ್ಷಿತಃ ಇತಿ ನಿರಸ್ತಂ। ಮಯಾಪಿ ವಿಶೇಷ್ಯ ಏವ ಕಾಲದ್ವಯ ಸಂಬಂಧಸ್ಯೋಕ್ತೇಃ। ದೇವದತ್ತ ಸ್ವರೂಪಮಾತ್ರಂ ಬುಭುತ್ಸಿತಮಿತಿ ತು ನಿರಸಿಷ್ಯತೇ।



**नच तत्ताया अतीतत्वमात्रेण तत्पदस्य लक्षणा। घटो नष्ट इत्यादाविवातीततत्तारूपार्थात्यागात्। अन्यथा तत्तादेरतात्पर्यविषयत्वे सोऽयमित्यनेन देवदत्तस्य कालद्वयसंबंधो न सिध्येत्।**

**तस्मादेकविशेषणविशिष्टे विशेषणांतरान्वयाबोधकमपीदं वाक्यं विशेष्यस्य क्रमिकधर्मद्वयान्वयपरत्वात्सखंडार्थमेव ।**

ननु तत्पदस्य न मुख्यत्वं संभवति तदर्थस्यातीतत्वात् । विद्यमानार्थस्यैव मुख्यार्थत्वात् । तथाच न सर्वपदानां मुख्यत्वमिति आशंक्य निराकरोति— **नचेति । अन्यथेति ।।** सोऽयमित्यादिवाक्यस्य स्वरूपमात्रपरत्व इत्यर्थः ।



'ತತ್ತಾ' ಅತೀತದೇಶಕಾಲವು ಅತೀತವಾಗಿದೆ. ಆದರಿಂದ ಅದನ್ನು ತ್ಯಾಗಮಾಡಿ 'ಸಃ' ಎಂಬ ತತ್‌ಪದಕ್ಕೆ ಲಕ್ಷಣಾದಿಂದ ದೇವದತ್ತ ಸ್ವರೂಪಬೋಧ ಎನ್ನುತ್ತೇನೆ. ಏಕೆಂದರೆ ಅತೀತವಾದ ಪದಾರ್ಥವು ಶಬ್ದಕ್ಕೆ ಮುಖ್ಯಾರ್ಥವಲ್ಲ. ಅದನ್ನು ಹೇಳಬೇಕೆಂದರೆ ಶಬ್ದವು ಅಮುಖ್ಯವಾಗುತ್ತದೆ, ಲಾಕ್ಷಣಿಕವಾಗುತ್ತದೆ. ಆದರಿಂದ 'ಸೋಽಯಂ ದೇವದತ್ತಃ' ಎಂಬಲ್ಲಿ ಎಲ್ಲ ಮೂರು ಪದಗಳು ಮುಖ್ಯವಾಗುವುದಿಲ್ಲ. ಲಕ್ಷಣಾ ಆವಶ್ಯಕವೆ ಆಗುತ್ತದೆ' ಎಂದರೆ ಇದು ಸರಿಯಲ್ಲ. 'ಘಟೋ ನಷ್ಟಃ' ಎಂಬಲ್ಲಿಯೂ ಕೂಡ ಘಟಶಬ್ದಾರ್ಥ ಘಟವು ಅತೀತವೆಂದ ಮಾತ್ರಕ್ಕೆ ಘಟಪದಕ್ಕೆ ಲಕ್ಷಣಾ ಮಾಡುವುದಿಲ್ಲ. ಆದರಿಂದ ತತ್ತಾ ಅತೀತವಾಗಿದೆ ಎಂದಮಾತ್ರಕ್ಕೆ ಅದನ್ನು ತ್ಯಾಗ ಮಾಡಲಾಗದು. ಅತೀತವಾದ ತತ್ತಾದಲ್ಲಿ ತಾತ್ಪರ್ಯವಿಲ್ಲವೆಂದು ಅದನ್ನು ತ್ಯಾಗಮಾಡಿ ಸ್ವರೂಪಮಾತ್ರ ಪರತ್ವವ್ನ್ನಿಟ್ಟು ಕೊಂಡರೆ 'ಸೋಽಯಂ ದೇವದತ್ತಃ' ಎಂಬ ವಾಕ್ಯದಿಂದ ದೇವದತ್ತನಲ್ಲಿ ತತ್ತಾ ಇದಂತಾ ರೂಪ ಕಾಲದ್ವಯ ಸಂಬಂಧ ಸಿದ್ಧವಾಗದೆ ಹೋದೀತು. ಕ್ಷಣಿಕತ್ವ ಸಿದ್ಧಿಸೀತು. ಆದರಿಂದ ಏಕ ವಿಶೇಷಣ ವಿಶಿಷ್ಟದಲ್ಲಿ ಅಪರ ವಿಶೇಷಣಾನ್ವಯವನ್ನು ಈ ವಾಕ್ಯವು ಬೋಧಿಸದಿದ್ದರೂ ಏಕವಿಶೇಷ್ಯದಲ್ಲಿ ಕ್ರಮಿಕವಾದ ಎರಡು ವಿಶೇಷಣ ಧರ್ಮಗಳ ಅನ್ವಯವನ್ನು ತಿಳಿಸುವುದರಿಂದ ಸಖಂಡಾರ್ಥವೇ ಆಗಿದೆ—

ನ ಚ ತತ್ತಾಯಾ ಅತೀತತ್ವಮಾತ್ರೇಣ ತತ್ಪದಸ್ಯ ಲಕ್ಷಣಾ। ಘಟೋ ನಷ್ಟ ಇತ್ಯಾದಾವಿವ ಅತೀತ ತತ್ತಾರೂಪ ಸ್ವಾರ್ಥಾತ್ಯಾಗಾತ್। ಅನ್ಯಥಾ ತತ್ತಾದೇರತಾತ್ಪರ್ಯ ವಿಷಯತ್ವೇ ಸೋಽಯಮಿತ್ಯನೇನ ದೇವದತ್ತಸ್ಯ ಕಾಲದ್ವಯಸಂಬಂಧೋ ನ ಸಿದ್ಧ್ಯೇತ್। ತಸ್ಮಾತ್ ಏಕವಿಶೇಷಣವಿಶಿಷ್ಟೇ ವಿಶೇಷಣಾಂತರಾನ್ವಯಾಬೋಧಕಮಪೀದಂ ವಾಕ್ಯಂ ವಿಶೇಷ್ಯಸ್ಯ ಕ್ರಮಿಕ ಧರ್ಮದ್ವಯಾನ್ವಯಪರತ್ವಾತ್ ಸಖಂಡಾರ್ಥಮೇವ ॥



**किंच त्वदुपन्यस्ते पक्षत्रयेऽपि न दोषः । तत्तादेरतीतत्वेऽपि यदन्विततया ज्ञात एव तात्पर्यविषयीभूतेतरान्वयधीः, तत्त्वरूपस्य विशेषणत्वस्य संभवात् ।**

नच विधेयान्वय्येव विशेषणम् । शब्दोऽनित्य इत्यादौ शब्दत्वादावव्याप्तेः ।

नापि विधेयान्वयकाले सदेव विशेषणम् । दंडी भविष्यति दंडी नास्तीत्यादावव्याप्तेः। गृहनिष्ठे काकादावतिव्याप्तेश्च ।

नापि विधेयान्वयप्रतियोगितावच्छेदकं वा स्वप्रत्याय्यव्यावृत्त्यधिकरणतावच्छेदकं वा विशेषणम् । अवच्छेदकत्वस्यान्यूनानधिकदेशकालत्वरूपत्वे तस्य सास्नादिमान् गौरित्यादिषु लक्ष्यतावच्छेदकरूपविशेषणेषु सत्त्वेऽपि गौः शुक्ला इत्यादावव्याप्तेः । नहि गोत्वं शुक्लान्वयप्रतियोगित्वेनाशुक्लव्यावृत्त्या वा अन्यूनानधिकदेशम् ।

अवच्छेदकत्वस्य यद्वत्तया ज्ञात एव यदन्वयधीस्तत्त्वरूपत्वे चेहाप्यवच्छेदकत्वस्य सत्त्वात् ।

नहि काकोपस्थापितसंस्थानवत्तया ज्ञात एव देवदत्तीयत्वधीवददेवदत्तगृहव्यावृत्तिधीवच्च तत्तोपस्थापितधर्मांतरवत्तया ज्ञात एवेदंत्वधीः, अनिदंव्यावृत्तिधीर्वा । किंतु तत्तावत्तया ज्ञात एव । नचात्रापि तत्तोपस्थापितदेवदत्तसंस्थानविशेषवत्तया ज्ञात एवेदंत्वादिधीः । तत्रेदंतादिसंबंधस्य प्रत्यक्षत्वेनानुपदेश्यत्वात् ।

तस्मादतीतमपि यदन्विततया ज्ञात एवेत्याद्युक्तलक्षणयुक्तं चेद्विशेषणमेव । तदयुक्तं चेद्वर्तमानमप्यविशेषणमेव । अत एवाहुः 'सदसद्वा समानाधिकरणं विशेषणम्' इति । तस्मात्पक्षत्रयेऽपि न दोषः ।

किंच यदन्वयितया ज्ञात एव तात्पर्यविषयेतरान्वयधीः तत्त्वस्वरूपविशेषणत्वस्य विवक्षितत्वात्, तस्य चातीतादावपि सत्त्वात् नाद्यद्वितीयपक्षयोस्तत्तेदंतयोः कालद्वयसत्त्वापत्तिः । तृतीयेऽपि शब्दोऽनित्य इत्यादौ

शब्दत्वान्विततया ज्ञाते अनित्यत्वान्वयवत् तत्तान्विततया ज्ञाते इदन्तान्विता भेदान्वय इति न विशेषणयोरभेदापत्तिरित्याह— **किंचेति । नहीति ।।** यद्यपि गौः शुक्ल इत्यत्र गोत्वस्यागोव्यावृत्त्यन्यूनानतिरिक्तदेशकालत्वेनावच्छेदकत्वं संभवति । तथापि शुक्लत्वविशिष्टगोत्वाभाववद्व्यावृत्तौ शुक्लत्वगोत्वादीनां विशेषणत्वं न स्यादित्यत्र तात्पर्यम् । वस्तुतस्तु प्रमेयमभिधेयमित्यादौ विशेषणत्वं न स्यादिति बोध्यम् । यद्यपीदं विशेषणत्वलक्षणं प्रत्यक्षप्रतीतावेवोपयुक्तं । न शाब्दप्रतीतौ । तथापि साधारणमिति मत्वा शंकासमाधाने इति द्रष्टव्यम् ।। **इहापीति ।।** तत्तादावित्यर्थः ।। **तत्रेति ।।** काकोपस्थापितसंस्थानविशेषवत्तया ज्ञाते देवदत्तीयत्वविधानं संभवति। तस्याज्ञातत्वात् । इहतु न तथा । तत्तोपस्थापित देवदत्तसंस्थानविशेषवत्तया ज्ञाते इदंत्वविशिष्टस्य प्रामाण्यात् उपदेशवैयर्थ्यमिति भावः । नन्वेवं विशेषणलक्षणोक्तौ "जटाभिस्तापसः" इत्यादौ जटानां विशेषणत्वं न स्यात् । स्याच्च दंडी नास्तीत्यादौ दंडादेर्विशेषणत्वमित्याशंकामिष्टापत्त्या परिहरन्नुपसंहरति— **तस्मादिति ।।** कचिदविद्यमानस्यापि विशेषणत्वं क्वचिद्विद्यमानस्याप्युपलक्षणत्वमस्तीत्यत्र नैयायिकानामपि संमतयति— **अतएवाहुरिति ।।**



**ಕಿಂಚ ತ್ವದುಪನ್ಯಸ್ತೇ ಪಕ್ಷತ್ರಯೇಽಪಿ ನ ದೋಷಃ। ತತ್ತಾದೇರತೀತತ್ವೇಽಪಿ ಯದನ್ವಿತತಯಾ ಜ್ಞಾತ ಏವ ತಾತ್ಪರ್ಯವಿಷಯಭೂತೇತರಾನ್ವಯಧೀಃ ತತ್ತದ್ರೂಪಸ್ಯ ವಿಶೇಷಣತ್ವಸ್ಯ ಸಂಭವಾತ್।**

ನೀನು ಹೇಳಿದ ಮೂರು ಬಗೆಯ ಉದ್ದೇಶ್ಯವಿಧೇಯಭಾವಗಳನ್ನಿಟ್ಟುಕೊಂಡರೂ ಸಖಂಡಾರ್ಥತ್ವಕ್ಕೆ ಭಂಗವಿಲ್ಲ. ತತ್ತಾದಿಗಳು ಅತೀತವಾದರೂ ವಿಶೇಷಣವಾಗಬಲ್ಲುವು. ವಿದ್ಯಮಾನವೇ ವಿಶೇಷಣವಾಗುತ್ತದೆ ಎನ್ನಲಾಗದು. ವಿದ್ಯಮಾನವಾಗಿ ವ್ಯಾವರ್ತಕವಾದುದೇ ವಿಶೇಷಣ ಎನ್ನಬಾರದು. ವಿಶೇಷ್ಯವು ಯಾವುದರ ಸಂಬಂಧಿಯೆಂದು ಜ್ಞಾತವಾಗುವಾಗಲೆ ತಾತ್ಪರ್ಯವಿಷಯವಾದ ಇತರವು ಕೂಡ ಅದಕ್ಕೆ ಸಂಬಂಧಿಯಾಗಿ ಕಾಣುವುದೋ ಅದು ವಿಶೇಷಣ. 'ಸೋಽಯಂ' ಎಂಬಲ್ಲಿ ತತ್ತಾಸಂಬಂಧಿ ಎಂದು ದೇವದತ್ತನು ಜ್ಞಾತವಾಗುತ್ತಿರುವಾಗಲೇ ತಾತ್ಪರ್ಯವಿಷಯವಾದ ಇದಂತಾದ ಸಂಬಂಧಿಯಾಗಿ ಅವನು ಶಾಬ್ದಬೋಧದಲ್ಲಿ ಕಾಣುತ್ತಾನೆ. ಈ ಬಗೆಯ ವಿಶೇಷಣತ್ವ ವಿವಕ್ಷೆಯಲ್ಲಿ ಅತೀತಾದಿಗಳೂ ವಿಶೇಷಣವಾಗಬಹುದು. ಮೊದಲನೆ ಮತ್ತು

ಎರಡನೆ ಪಕ್ಷದಲ್ಲಿ ಆದೇಶಕಾಲಗಳು ಈದೇಶಕಾಲಗಳಲ್ಲಿ, ಈದೇಶಕಾಲಗಳು ಆದೇಶಕಾಲಗಳಲ್ಲಿ ಇರಬೇಕಾಗಿಲ್ಲ, ಅವುಗಳ ಸಂಬಂಧಿ ಎಂದು ವಿಶೇಷ್ಯವು ಜ್ಞಾತವಾಗಿದ್ದರೆ ಸಾಕು, ಅವುಗಳ ಸಂಬಂಧ ಈಗ ಇರಬೇಕಾಗಿಲ್ಲ.

ವಿಶಿಷ್ಟದ್ವಯಗಳಿಗೆ ಐಕ್ಯವನ್ನು ಹೇಳುವ ಮೂರನೇ ಪಕ್ಷದಲ್ಲಿಯೂ ವಿಶೇಷಣಗಳಿಗೆ ಐಕ್ಯಪ್ರಸಕ್ತಿಇಲ್ಲ. 'ಶಬ್ದಃ ಅನಿತ್ಯಃ' ಎಂಬಲ್ಲಿ ಶಬ್ದತ್ವ ಸಂಬಂಧಿ ಎಂದು ಜ್ಞಾತವಾದ ಶಬ್ದದಲ್ಲಿ ಅನಿತ್ಯತ್ವ ಸಂಬಂಧವಿರುವಂತೆ, ತತ್ತಾಸಂಬಂಧಿಯೆಂದು ಜ್ಞಾತನಾದ ದೇವದತ್ತನಲ್ಲಿ ಇದಂತಾ ಸಂಬಂಧಿಯ ಅಭೇದವನ್ನು ತಿಳಿದರೆ ಅದು ಬಾಧಿತವಾಗುವುದಿಲ್ಲ, ತತ್ತಾ ಇದಂತಾಗಳಿಗೆ ಐಕ್ಯ ಬರಬೇಕಾಗಿಯೂ ಇಲ್ಲ—

**ನ ಚ ವಿಧೇಯಾನ್ವಯ್ಯೇವ ವಿಶೇಷಣಂ। ಶಬ್ದೋಽನಿತ್ಯ ಇತ್ಯಾದೌ ಶಬ್ದತ್ವಾದಾವವ್ಯಾಪ್ತೇಃ।**

ವಿಶೇಷಣಕ್ಕೆ ಇದೇ ಸರಿಯಾದ ಲಕ್ಷಣ. ಬೇರೆ ಲಕ್ಷಣ ಯಾವುದೂ ಸರಿಯಲ್ಲ. 'ವಿಧೇಯಾನ್ವಯಿಯು ವಿಶೇಷಣ' ಎಂಬ ಲಕ್ಷಣಕ್ಕೆ 'ಶಬ್ದಃ ಅನಿತ್ಯಃ' ಎಂಬಲ್ಲಿ ಶಬ್ದತ್ವವೆಂಬ ವಿಶೇಷಣದಲ್ಲಿ ಅವ್ಯಾಪ್ತಿ ಬರುತ್ತದೆ. ಏಕೆಂದರೆ ಶಬ್ದರೂಪ ವಿಶೇಷ್ಯವು ಅನಿತ್ಯತ್ವರೂಪ ವಿಧೇಯದಲ್ಲಿ ಅನ್ವಯ ಹೊಂದುವಾಗ ವಿಶೇಷಣವಾದ ಶಬ್ದತ್ವವು, ಅನಿತ್ಯವಲ್ಲವಾದ್ದರಿಂದ, ಅನಿತ್ಯತ್ವರೂಪ ವಿಧೇಯದಲ್ಲಿ ಅನ್ವಿತವಾಗುವುದಿಲ್ಲ. ವಿಧೇಯಾನ್ವಯಿತ್ವ ಲಕ್ಷಣವು ಶಬ್ದತ್ವರೂಪ ವಿಶೇಷಣದಲ್ಲಿ ಬರುವುದಿಲ್ಲ.

**ನಾಪಿ ವಿಧೇಯಾನ್ವಯಕಾಲೇ ಸದೇವ ವಿಶೇಷಣಂ। 'ದಂಡೀ ಭವಿಷ್ಯತಿ' 'ದಂಡೀ ನಾಸ್ತೀ'ತ್ಯಾದಾವವ್ಯಾಪ್ತೇಃ।**

ವಿಧೇಯಾನ್ವಯ ಕಾಲದಲ್ಲಿ ವಿಶೇಷ್ಯದಲ್ಲಿ ಪ್ರತೀಯಮಾನವಾಗಿ ಇರುವುದೇ ವಿಶೇಷಣವೆಂದರೂ 'ದಂಡೀ ಭವಿಷ್ಯತಿ' 'ಇವನು ದಂಡಿಯಾಗಲಿದ್ದಾನೆ' ಅವನಲ್ಲಿ ಈಗ ದಂಡಪ್ರಾಗಭಾವವಿದೆ, 'ದಂಡೀ ನಾಸ್ತಿ' ಈಗ ಇವನು ದಂಡಿಯಾಗಿಲ್ಲ ಅವನಲ್ಲಿ ದಂಡ ಸಂಬಂಧ ಧ್ವಂಸವಾಗಿದೆ, ಎಂಬಲ್ಲಿ ಅವ್ಯಾಪ್ತಿ. ದಂಡಪ್ರಾಗಭಾವಕಾಲದಲ್ಲಿ ದಂಡಸಂಬಂಧರೂಪ ವಿಶೇಷಣ ವಿರುವುದಿಲ್ಲ, ದಂಡಸಂಬಂಧಧ್ವಂಸಕಾಲದಲ್ಲಿಯೂ ದಂಡಸಂಬಂಧವಿರುವುದಿಲ್ಲ. ಆದರಿಂದ ಅವ್ಯಾಪ್ತಿ. ಅದು ವಿಷೇಷಣವಾಗದೆ ಹೋದೀತು.

**ಗೃಹನಿಷ್ಠೇ ಕಾಕಾದಾವತಿವ್ಯಾಪ್ತೇಶ್ಚ।**

'ವಿಧೇಯಾನ್ವಯ ಕಾಲದಲ್ಲಿರುವುದು ವಿಶೇಷಣ'ವೆಂದೇ ಹೇಳಿದರೆ, ದೇವದತ್ತ ಗೃಹದಲ್ಲಿ ಕಾಗೆ ಇರುವಾಗ 'ಕಾಕವದ್ ದೇವದತ್ತಗೃಹಂ' ಎಂದರೆ ಗೃಹ ಎಂಬ ವಿಶೇಷ್ಯದಲ್ಲಿ ದೇವದತ್ತ ಗೃಹತ್ವವೆಂಬ ವಿಧೇಯಾನ್ವಯ ಕಾಲದಲ್ಲಿ ಕಾಗೆ ಇರುವುದರಿಂದ ಅದು ವಿಶೇಷಣವಾದೀತು.

ಕದಾಚಿದ್ ವಿಶೇಷ್ಯದಲ್ಲಿದ್ದು ವ್ಯಾವರ್ತಕವಾಗುವುದೇ ಉಪಲಕ್ಷಣ. ಗೃಹದಲ್ಲಿ ಕದಾಚಿದಿರುವುದರಿಂದ ವಸ್ತುತಃ ಅದು ವಿಶೇಷಣವಲ್ಲ, ಉಪಲಕ್ಷಣ. ಆದರಿಂದ ಕಾಕವದ್ ದೇವದತ್ತಗೃಹಂ ಎಂದರೆ ಕಾಕೋಪಲಕ್ಷಿತಂ ದೇವದತ್ತಗೃಹಂ ಎಂದರ್ಥ. ಹೀಗಾಗಿ ಅತಿವ್ಯಾಪ್ತಿ.

**ನಾಪಿ ವಿಧೇಯಾನ್ವಯ ಪ್ರತಿಯೋಗಿತಾವಚ್ಛೇದಕಂ ವಾ, ಸ್ವಪ್ರತ್ಯಾಯ್ಯವ್ಯಾವೃತ್ತ್ಯಧಿಕರಣತಾವಚ್ಛೇದಕಂ ವಾ ವಿಶೇಷಣಂ। ಅವಚ್ಛೇದಕತ್ವಸ್ಯ ಅನ್ಯೂನ–ಅನಧಿಕ–ದೇಶಕಾಲತ್ವರೂಪತ್ವೇ ತಸ್ಯ 'ಸಾಸ್ನಾದಿಮಾನ್ ಗೌಃ' ಇತ್ಯಾದಿಷು ಲಕ್ಷ್ಯತಾವಚ್ಛೇದಕರೂಪ ವಿಶೇಷಣೇಷು ಸತ್ತ್ವೇಽಪಿ 'ಗೌಃ ಶುಕ್ಲಾ' ಇತ್ಯಾದಾವವ್ಯಾಪ್ತೇಃ। ನಹಿ ಗೋತ್ವಂ ಶುಕ್ಲಾನ್ವಯ ಪ್ರತಿಯೋಗಿತ್ವೇನ ಅಶುಕ್ಲವ್ಯಾವೃತ್ತ್ಯಾ ವಾ ಅನ್ಯೂನ–ಅನಧಿಕದೇಶಂ॥**

'ವಿಧೇಯಾನ್ವಯ ಪ್ರತಿಯೋಗಿತಾವಚ್ಛೇದಕವು ವಿಶೇಷಣ' ಎಂದು ಹೇಳಿದರೂ 'ಸ್ವಪ್ರತ್ಯಾಯ್ಯ ವ್ಯಾವೃತ್ತ್ಯಧಿಕರಣತಾವಚ್ಛೇದಕವು ವಿಶೇಷಣ' ಎಂದು ಹೇಳಿದರೂ ಸರಿಯಾಗುವುದಿಲ್ಲ. ಏಕೆಂದರೆ ಅವಚ್ಛೇದಕವೆಂದರೆ ಇಲ್ಲಿ 'ಅನ್ಯೂನ ಅನಧಿಕ ದೇಶಕಾಲವೃತ್ತಿ' ಎಂದು ಹೇಳಬೇಕು. ಪ್ರತಿಯೋಗಿತಾಕ್ಕೆ ಮತ್ತು ಅಧಿಕರಣತಾಕ್ಕೆ ನ್ಯೂನ ಅಥವಾ ಅಧಿಕವಾಗದ ದೇಶಕಾಲ ಗಳಲ್ಲಿದ್ದರೆ ಅದು ಪ್ರತಿಯೋಗಿತಾವಚ್ಛೇದಕ, ಅಧಿಕರಣತಾವಚ್ಛೇದಕವೆನಿಸುವುದು. 'ಸಾಸ್ನಾದಿಮಾನ್ ಗೌಃ' ಎಂಬಲ್ಲಿ ಲಕ್ಷ್ಯತಾವಚ್ಛೇದಕವು ಗೋತ್ವ. ವಿಧೇಯವಾದ ಸಾಸ್ನಾದಿಮತ್ತ್ವ ರೂಪಲಕ್ಷಣದಲ್ಲಿ ಲಕ್ಷ್ಯವಾದ ಗೋವು ಅನ್ವಯಿಸುವಾಗ ಅನ್ವಯಪ್ರತಿಯೋಗಿಯಾಗಿರುವ ಗೋವಿನಲ್ಲಿ ಗೋತ್ವವು ಪ್ರತಿಯೋಗಿತಾಕ್ಕೆ ಅನ್ಯೂನ ಅನಧಿಕ ದೇಶಕಾಲ ವೃತ್ತಿಯಾಗುವುದರಿಂದ ವಿಧೇಯಾನ್ವಯ ಪ್ರತಿಯೋಗಿತಾವಚ್ಛೇದಕತ್ವರೂಪ ವಿಶೇಷಣತ್ವವು ಗೋತ್ವದಲ್ಲಿ ಬರುತ್ತದೆ. ಸ್ವಪ್ರತ್ಯಾಯ್ಯ ವ್ಯಾವೃತ್ತಿ ಎಂಬಲ್ಲಿ ಸ್ವಪದ ವಿಧೇಯಪರ, ಗೋವಿನಲ್ಲಿ ವಿಧೇಯ ಸಾಸ್ನಾದಿಮತ್ತ್ವ ಲಕ್ಷಣವು ಗವೇತರವ್ಯಾವೃತ್ತಿಪ್ರತೀತಿ ಉಂಟುಮಾಡುವುದರಿಂದ ಸ್ವಪ್ರತ್ಯಾಯ್ಯವ್ಯಾವೃತ್ತಿ ಎಂದರೆ ಸಾಸ್ನಾದಿಮತ್ವಪ್ರತ್ಯಾಯ್ಯವಾದ ಗವೇತರ ವ್ಯಾವೃತ್ತಿ. ಅದಕ್ಕೆ ಅಧಿಕರಣ ಗೋವು. ಅದರಲ್ಲಿರುವ ವ್ಯಾವೃತ್ತ್ಯಧಿಕರಣತಾಕ್ಕೆ ಅನ್ಯೂನ ಅನಧಿಕ ದೇಶಕಾಲ ವೃತ್ತಿಯು ಗೋತ್ವವಾಗಿರುವುದರಿಂದ, ಅದು ಸ್ವಪ್ರತ್ಯಾಯ್ಯ ವ್ಯಾವೃತ್ತ್ಯಧಿಕರಣತಾವಚ್ಛೇದಕವಾಗಿದೆ. ಆದರಿಂದ ಅದು ವಿಶೇಷಣ. ಹೀಗೆ ಲಕ್ಷಣ ವಾಕ್ಯಗಳಲ್ಲಿ ಉಕ್ತವಾಗುವ ಲಕ್ಷ್ಯತಾವಚ್ಛೇಕರೂಪ ವಿಶೇಷಣಗಳಲ್ಲಿ ಈ ಎರಡು ಲಕ್ಷಣಗಳೂ ಬರುತ್ತವೆ.

ಆದರೆ 'ಗೌಃ ಶುಕ್ಲಾ' 'ಬಿಳಿಯಾದುದು ಹಸು' ಎಂಬಲ್ಲಿ ಗೋತ್ವವು ವಿಶೇಷಣವಾದರೂ ಆದರಲ್ಲಿ ಈ ಲಕ್ಷಣ ಬರುವುದಿಲ್ಲ. ಏಕೆಂದರೆ ವಿಧೇಯ ಶುಕ್ಲತ್ವಾನ್ವಯ ಪ್ರತಿಯೋಗಿಯಾದ ಶುಕ್ಲಗೋವಿನಲ್ಲಿರುವ ಗೋತ್ವವು ಶುಕ್ಲತ್ವಾನ್ವಯ ಪ್ರತಿಯೋಗಿತಾಕ್ಕಿಂತ ಅಧಿಕದೇಶ ವೃತ್ತಿಯಾಗಿದೆ. ಅಪ್ರತಿಯೋಗಿಯಾದ ಕೃಷ್ಣಗೋವಿನಲ್ಲಿಯೂ ಗೋತ್ವವಿದೆ. ಮತ್ತು ಸ್ವಪ್ರತ್ಯಾಯ್ಯ ವ್ಯಾವೃತ್ತಿ ಎಂದರೆ ಗೋವಿನಲ್ಲಿ ಶುಕ್ಲತ್ವ ಪ್ರತ್ಯಾಯ್ಯವಾದ ಶುಕ್ಲಗವೇತರವ್ಯಾವೃತ್ತಿ, ಅದಕ್ಕೆ ಅಧಿಕರಣ ಕೇವಲ

ಶುಕ್ಲಗೋವು. ಅದರಲ್ಲಿರುವ ವ್ಯಾವೃತ್ತ್ಯಧಿಕರಣತಾಕ್ಕೆ ಅಧಿಕದೇಶದಲ್ಲಿ, ಅಂದರೆ ಕೃಷ್ಣ ಗೋವಿನಲ್ಲಿಯೂ ಗೋತ್ವವಿರುವುದರಿಂದ ಅಧಿಕದೇಶವೃತ್ತಿಯಾಗಿದೆ. ಹೀಗಾಗಿ ಅನ್ಯೂನ ಅನಧಿಕ ದೇಶವೃತ್ತಿತ್ವ ಬಾರದಿರುವುದರಿಂದ ಅವ್ಯಾಪ್ತಿ.

**ವಿಶೇಷಾಂಶ—** 'ಶುಕ್ಲಗವೇತರವ್ಯಾವೃತ್ತ್ಯಧಿಕರಣತಾದಲ್ಲಿ ಶುಕ್ಲತ್ವವೂ ಅವಚ್ಛೇದಕವಾಗುವುದಿಲ್ಲ. ಗೋತ್ವವೂ ಅವಚ್ಛೇದಕವಾಗುವುದಿಲ್ಲ. ಏಕೆಂದರೆ ಶುಕ್ಲಗವೇತರವೆಂದರೆ ಶುಕ್ಲತ್ವವಿಶಿಷ್ಟಗೋತ್ವಾಭಾವವತ್ತಾದ ಕೃಷ್ಣಗೋವು. ತದ್‌ವ್ಯಾವೃತ್ತ್ಯಧಿಕರಣವೆಂದರೆ ಕೃಷ್ಣಗವೇತರವಾದ ಶುಕ್ಲ ಅಶ್ವ. ಅದರಲ್ಲಿ ಗೋತ್ವವಿಲ್ಲ. ಹಾಗೆ ಶುಕ್ಲಗವೇತರ ಶುಕ್ಲಅಶ್ವ. ತದ್‌ವ್ಯಾವೃತ್ತ್ಯಧಿಕರಣ–ಶುಕ್ಲಅಶ್ವೇತರ–ಕೃಷ್ಣಗೋವಿನಲ್ಲಿ ಶುಕ್ಲತ್ವವಿಲ್ಲ. ಹೀಗೆ ವ್ಯಾವೃತ್ತ್ಯಧಿಕರಣತಾಕ್ಕೆ ನ್ಯೂನವೃತ್ತಿಯೇ ಆಗುವುದರಿಂದ ಶುಕ್ಲತ್ವಗೋತ್ವಗಳು ತದವಚ್ಛೇದಕವಾಗುವುದಿಲ್ಲ. ವಸ್ತುತಃ 'ಪ್ರಮೇಯಂ ಅಭಿಧೇಯಂ' 'ಪ್ರಮೇಯವು ಅಭಿಧೇಯವಾಗಿದೆ' ಎಂಬಲ್ಲಿ ಪ್ರಮೇಯದಲ್ಲಿ ವಿಧೇಯವಾದ ಅಭಿಧೇಯತ್ವದಿಂದ ಪ್ರತ್ಯಾಯ್ಯವಾದ ವ್ಯಾವೃತ್ತಿ ಎಂದರೆ 'ಅಪ್ರಮೇಯ ವ್ಯಾವೃತ್ತಿ' ಎನ್ನಲು ತಾರ್ಕಿಕರು ಒಪ್ಪುವುದಿಲ್ಲ. ಅವರಿಗೆ ಪ್ರಮೇಯತ್ವಾಭಿಧೇಯತ್ವಗಳು ಕೇವಲಾನ್ವಯಿಯಾದ್ದರಿಂದ 'ಅಪ್ರಮೇಯ' ಎಂಬುದೇ ಅಪ್ರಸಿದ್ಧ. ಆದರಿಂದ ಅಲ್ಲಿ ವಿಶೇಷಣ ಲಕ್ಷಣ ಬಾರದಿರುವುದರಿಂದ ಅವ್ಯಾಪ್ತಿ. ಆದರೆ ದ್ವೈತಿ ಅದ್ವೈತಿಗಳಿಬ್ಬರ ರೀತಿಯಿಂದಲೂ ಪ್ರಮೇಯತ್ವಾದಿಗಳು ಕೇವಲಾನ್ವಯಿ ಅಲ್ಲ. ಅಸತ್ತಿನಲ್ಲಿ ಅವು ಇಲ್ಲ. ಅಸದ್ ವ್ಯಾವೃತ್ತಿ ಇಟ್ಟುಕೊಂಡು ಲಕ್ಷಣ ಸಮನ್ವಯವು ಶಕ್ಯ.

ಸ್ವಪ್ರತ್ಯಾಯ್ಯ ವ್ಯಾವೃತ್ತ್ಯಧಿಕರಣತಾವಚ್ಛೇದಕತ್ವರೂಪ ವಿಶೇಷಣ ಲಕ್ಷಣವು ಪ್ರತ್ಯಕ್ಷ ಪ್ರತೀತಿಯಲ್ಲಿ ಮಾತ್ರ ಉಪಯುಕ್ತ. ಶಾಬ್ದಪ್ರತೀತಿಯಲ್ಲಿ ಉಪಯುಕ್ತವಲ್ಲ. ಏಕೆಂದರೆ ಪ್ರತ್ಯಕ್ಷ ಪ್ರತೀತಿಯಲ್ಲಿ ಎಲ್ಲ ವಸ್ತುವೂ ಸ್ವೇತರವ್ಯಾವೃತ್ತ್ಯಧಿಕರಣವಾಗಿಯೇ ಕಾಣುತ್ತದೆ. ವ್ಯಾವೃತ್ತಿ ಎಂದರೆ ಭೇದ. ಭೇದವು ಧರ್ಮಿಸ್ವರೂಪ. ಅದು ವಸ್ತುಪ್ರತೀತಿಯಲ್ಲಿಯೇ ಕಾಣುತ್ತದೆ. ಆದರೆ ಶಾಬ್ದಬೋಧದಲ್ಲಿ ಧರ್ಮಿ ಕಾಣುವಾಗ ಧರ್ಮಿಸ್ವರೂಪವಾದ ಭೇದ ಕಾಣುವುದಿಲ್ಲ. ಭೇದವು ಶಾಬ್ದಬೋಧದಲ್ಲಿ ಕಾಣಬೇಕೆಂದರೆ ಅದಕ್ಕೆ ವಾಚಕ ಶಬ್ದಬೇಕು. ಆದರೂ ಶಾಬ್ದಬೋಧದಲ್ಲಿಯೂ ಒಂದು ವಸ್ತು ಕಾಣುವಾಗ ತಾತ್ಪರ್ಯವಶದಿಂದ ಇತರ ವ್ಯಾವೃತ್ತವಾಗಿಯೇ ಕಾಣಬಹುದೆಂಬ ಅಭಿಪ್ರಾಯದಿಂದ ಇದೀಗ 'ಸೋಽಯಂ ದೇವದತ್ತಃ' ಇತ್ಯಾದಿ ಶಾಬ್ದ ಪ್ರತ್ಯಭಿಜ್ಞಾಸ್ಥಳದಲ್ಲಿ ಈ ವಿಶೇಷ ಲಕ್ಷಣವನ್ನು ಹೇಳಿದ್ದಾರೆ. ಆದರಿಂದ ಇಲ್ಲಿ ಅವ್ಯಾಪ್ತಿ ಶಂಕಾತತ್ಪರಿಹಾರಗಳು ಅಸಂಗತವಲ್ಲ.

ಹೀಗೆ ಪ್ರಸಿದ್ಧವಾದ ಅವಚ್ಛೇದಕ ಲಕ್ಷಣ ಯಾವುದೂ ಸರಿಯಲ್ಲವಾದ್ದರಿಂದ ಪರಿಶೇಷದಿಂದ ನಾವು ಹೇಳಿದ ವಿಶೇಷಣಲಕ್ಷಣವನ್ನೇ ಅವಚ್ಛೇದಕಕ್ಕೂ ಲಕ್ಷಣ ಎನ್ನಬೇಕು. 'ಯಾವುದರ ಸಂಬಂಧಿಯಾಗಿ ಜ್ಞಾತವಾದುದರಲ್ಲಿಯೇ ಯಾವುದರ ಸಂಬಂಧ ಪ್ರತೀತಿ ಉಂಟಾಗುವುದೋ ಅದು ಅದಕ್ಕೆ ಅವಚ್ಛೇದಕ'ವೆನ್ನಬೇಕು. ಗೋತ್ವವು ಶುಕ್ಲಾನ್ವಯ ಪ್ರತಿಯೋಗಿತಾಕ್ಕೆ ಅನ್ಯೂನ ಅನತಿರಿಕ್ತ ದೇಶಕಾಲವೃತ್ತಿಯಲ್ಲದಿದ್ದರೂ ಗೋತ್ವಸಂಬಂಧಿಯಾಗಿ ಜ್ಞಾತವಾಗುವ ಗೋವಿನಲ್ಲಿಯೇ ಶುಕ್ಲರೂಪ

ಸಂಬಂಧ ಪ್ರತೀತಿ 'ಗೌಃ ಶುಕ್ಲಾ' ಎಂದು ಬರುವುದರಿಂದ ಗೋತ್ವವು ಶುಕ್ಲರೂಪದ ಅನ್ವಯ ಪ್ರತಿಯೋಗಿತಾವಚ್ಛೇದಕವಾಗುವುದರಿಂದ ವಿಶೇಷಣವೆನಿಸುವುದು. ಶುಕ್ಲರೂಪ ಪ್ರತ್ಯಾಯ್ಯ ಶುಕ್ಲೇತರವ್ಯಾವೃತ್ತ್ಯಧಿಕರಣತಾವಚ್ಛೇದಕವೂ ಆಗುವುದರಿಂದ ಗೌಃ ಶುಕ್ಲಾ ಎಂಬಲ್ಲಿ ಗೋತ್ವವು ವಿಶೇಷಣವಾಗುವುದು. 'ಗೌಃ ಶುಕ್ಲಾನ್ವಯ ಪ್ರತಿಯೋಗೀ' ಎಂಬಲ್ಲಿ ಗೋತ್ವ ಸಂಬಂಧಿಯಾಗಿ ಜ್ಞಾತವಾಗುವ ಗೋವಿನಲ್ಲಿಯೇ ಶುಕ್ಲಾನ್ವಯ ಪ್ರತಿಯೋಗಿತ್ವ ಪ್ರತೀತಿ ಬರುವುದರಿಂದ ಗೋತ್ವವು ಪ್ರತಿಯೋಗಿತಾ-ಅನ್ಯೂನ-ಅನಧಿಕ ದೇಶಕಾಲವೃತ್ತಿಯಾಗದಿದ್ದರೂ ಪ್ರತಿಯೋಗಿತಾವಚ್ಛೇದಕ ವಾಗುವುದು. ಹಾಗೇ ಗೋತ್ವವು ಶುಕ್ಲರೂಪಪ್ರತ್ಯಾಯ್ಯ ಅಶುಕ್ಲೇತರ ವ್ಯಾವೃತ್ತ್ಯಧಿಕರಣತಾವಚ್ಛೇದಕ ವಾಗದಿದ್ದರೂ ಗೋತ್ವಸಂಬಂಧಿಯಾಗಿ ಜ್ಞಾತವಾಗುವ ಗೋವಿನಲ್ಲಿಯೇ 'ಗೌಃ ಅಶುಕ್ಲೇತರ ವ್ಯಾವೃತ್ತ್ಯಧಿಕರಣಂ' ಎಂದು ವ್ಯಾವೃತ್ತ್ಯಧಿಕರಣತಾ ಪ್ರತೀತಿ ಬರುವುದರಿಂದ ಗೋತ್ವವು ಅಧಿಕರಣತಾವಚ್ಛೇದಕವೆನಿಸುವುದು. ಹೀಗೆ 'ಯದ್ವತ್ತಯಾ ಜ್ಞಾತೇ ಏವ ಯದನ್ವಯಧೀಃ ತತ್ತ್ವ' ಅವಚ್ಛೇದಕತ್ವಂ' ಎಂದು ನಾವು ಹೇಳುವ ಅವಚ್ಛೇದಕತ್ವವನ್ನು ಇಲ್ಲಿ ವಿವಕ್ಷೆ ಮಾಡಿ ಇಂಥ ಅವಚ್ಛೇದಕತ್ವವು ಗೌಃ ಶುಕ್ಲಾ ಎಂಬಲ್ಲಿ ಗೋತ್ವಕ್ಕೆ ಇದೆ ಎನ್ನುವುದಾದರೆ, ತತ್ತಾ ಇದಂತಾಗಳಲ್ಲಿಯೂ ಇಂಥ ಅವಚ್ಛೇದಕತ್ವವೂ ವಿಶೇಷಣತ್ವವೂ ಇದೆ—

**ಅವಚ್ಛೇದಕತ್ವಸ್ಯ ಯದ್ವತ್ತಯಾ ಜ್ಞಾತ ಏವ ಯದನ್ವಯಧೀಃ ತತ್ತ್ವರೂಪತ್ವೇ ಚ, ಇಹಾಪ್ಯವಚ್ಛೇದಕತ್ವಸ್ಯ ಸತ್ವಾತ್ ।**

'ಕಾಕವದ್ ದೇವದತ್ತಗೃಹಂ' ಎಂಬಲ್ಲಿ ಕಾಕವು ವಿಶೇಷಣವಾಗಿ ವಿವಕ್ಷಿತವಲ್ಲ. ಅದು ಉಪಲಕ್ಷಣವಾಗಿ ವಿವಕ್ಷಿತವಾಗಿದೆ. ಏಕೆಂದರೆ ಕಾಕಸಂಬಂಧಿಯಾಗಿ ಜ್ಞಾತವಾಗುವಾಗಲೇ ದೇವದತ್ತ ಗೃಹವು ದೇವದತ್ತಗೃಹವೆಂದು ದೇವದತ್ತಸಂಬಂಧಿಯಾಗಿ ಪ್ರತೀತವಾಗುವ ನಿಯಮವಿಲ್ಲ. ಕಾಕವಿಲ್ಲದಿದ್ದರೂ ಕಾಕಸಂಬಂಧದಿಂದ ದೇವದತ್ತಗೃಹದಲ್ಲಿ ಉಂಟಾಗುವ ಉತ್ತ್ಯ್ವಾದಿ ಆಕಾರವಿಶೇಷವನ್ನು ತಿಳಿಯಬೇಕು. ಆ ಆಕಾರ ಸಂಬಂಧಿಯಾಗಿ ಗೃಹವು ಜ್ಞಾತವಾದಾಗಲೇ ಅದು ದೇವದತ್ತ ಸಂಬಂಧಿ ಎಂದು ಪ್ರತೀತವಾಗುತ್ತದೆ. ಆ ಆಕಾರ ವಿಶೇಷ ಸಂಬಂಧಿಯಾಗಿ ಗೃಹವು ಜ್ಞಾತವಾದಾಗಲೇ ದೇವದತ್ತೀಯೇತರ ವ್ಯಾವೃತ್ತಿ ಸಂಬಂಧಿಯಾಗಿಯೂ ಅದು ಪ್ರತೀತವಾಗುತ್ತದೆ. ಆದರಿಂದ ಕಾಕದಲ್ಲಿ ವಿಶೇಷಣತ್ವವಿಲ್ಲ. ಅದು ಉಪಲಕ್ಷಣ ಎನ್ನುತ್ತೇವೆ. ಪ್ರಕೃತದಲ್ಲಿ 'ಸೋಽಯಂ ದೇವದತ್ತಃ' ಎಂಬಲ್ಲಿ ಇದಂತಾ ಪ್ರತೀತಿಕಾಲದಲ್ಲಿ ತತ್ತಾಸಂಬಂಧದಿಂದ ದೇವದತ್ತ ಶರೀರದಲ್ಲಿ ಉಂಟಾಗುವ ಆಕಾರವಿಶೇಷವನ್ನು ತಿಳಿಯಬೇಕಾಗಿಲ್ಲ. ತತ್ತಾ ಸಂಬಂಧಿಯಾಗಿ ಜ್ಞಾತವಾದಾಗಲೇ ದೇವದತ್ತನಲ್ಲಿ ಇದಂತ್ವಪ್ರತೀತಿಯೆಂದು ನಿಯಮ ಮತ್ತು ಇದಂತ್ವಪ್ರತ್ಯಾಯ್ಯ ಅನಿದಂವ್ಯಾವೃತ್ತಿ ಪ್ರತೀತಿ ಎಂದೂ ನಿಯಮ ಹೊರತು ತತ್ತಾ ಸಂಬಂಧದಿಂದ ಉಂಟಾದ ಆಕಾರ ವಿಶೇಷ ಸಂಬಂಧಿ ಯಾಗಿ ಜ್ಞಾತನಾದಾಗಲೇ, ದೇವದತ್ತನಲ್ಲಿ ಇದಂತ್ವಪ್ರತೀತಿ ಎಂಬ ನಿಯಮವಿಲ್ಲ. ಅಥವಾ ಇದಂತ್ವ ಪ್ರತ್ಯಾಯ್ಯ-ಅನಿದಂವ್ಯಾವೃತ್ತಿಪ್ರತೀತಿ ಎಂಬ ನಿಯಮವಿಲ್ಲ—

**ನಹಿ ಕಾಕೋಪಸ್ಥಾಪಿತ ಸಂಸ್ಥಾನವತ್ತಯಾ ಜ್ಞಾತೇ ಏವ ದೇವದತ್ತೀಯತ್ವಧೀವತ್ ಅದೇವದತ್ತಗೃಹವ್ಯಾವೃತ್ತಿಧೀವಚ್ಚ ತತ್ತೋಪಸ್ಥಾಪಿತ ಧರ್ಮಾಂತರವತ್ತಯಾ ಜ್ಞಾತೇ ಏವ ಇದಂತ್ವಧೀಃ ಅನಿದಂವ್ಯಾವೃತ್ತಿಧೀರ್ವಾ । ಕಿಂತು ತತ್ತಾವತ್ತಯಾ ಜ್ಞಾತೇ ಏವ ।**

ತತ್ತಾಸಂಬಂಧದಿಂದ ದೇವದತ್ತಶರೀರದಲ್ಲಿ ಉಂಟಾಗುವ ಆಕಾರವಿಶೇಷಸಂಬಂಧಿಯಾಗಿ ದೇವದತ್ತಶರೀರ ಜ್ಞಾತವಾದಾಗಲೇ ಇದಂತ್ವ ಸಂಬಂಧ ಪ್ರತೀತಿ ಎಂಬ ನಿಯಮವನ್ನು ಅಂಗೀಕರಿಸಿದ್ದೇವೆ ಎಂದರೆ, ಆಗ ಇದಂತ್ವಸಂಬಂಧವು ಪ್ರತ್ಯಕ್ಷ ಕಾಣುತ್ತಿರುವುದರಿಂದ ಅದನ್ನು 'ಸೋऽಯಂ' ಎಂದು ಉಪದೇಶ ಮಾಡುವ ಆವಶ್ಯಕತೆ ಇಲ್ಲ. ಕಾಕಸಂಬಂಧಜನ್ಯ ಆಕಾರವಿಶೇಷ ಸಂಬಂಧಿಯಾಗಿ ಗೃಹವು ಜ್ಞಾತವಾದರೂ ದೇವದತ್ತೀಯವೆಂದು ಅದನ್ನು ಪ್ರತಕ್ಷದಿಂದ ತಿಳಿಯಲಾಗದಿರುವುದರಿಂದ 'ದೇವದತ್ತಗೃಹಂ' ಎಂದು ಉಪದೇಶಿಸಬೇಕಾಗುತ್ತದೆ. ದೇವದತ್ತ ಶರೀರದಲ್ಲಿ ತತ್ತಾಸಂಬಂಧದಿಂದ ಉಂಟಾದ ಆಕಾರವಿಶೇಷ ಸಂಬಂಧಿತ್ವಜ್ಞಾನ ಉಂಟಾದಾಗ ಅದರಲ್ಲಿ ಇದಂತ್ವವೈಶಿಷ್ಟ್ಯವು, 'ಇವನು ಈದೇಶಕಾಲದವನು' ಎಂಬುದು ಪ್ರತ್ಯಕ್ಷ ಕಾಣುವುದರಿಂದ ಉಪದೇಶಬೇಕಾಗಿಲ್ಲ—

**ನ ಚಾತ್ರಾಪಿ ತತ್ತೋಪಸ್ಥಾಪಿತ ದೇವದತ್ತ ಸಂಸ್ಥಾನ ವಿಶೇಷವತ್ತಯಾ ಜ್ಞಾತೇ ಏವ ಇದಂತ್ವಾದಿಧೀಃ । ತತ್ರೇದಂತಾದಿಸಂಬಂಧಸ್ಯ ಪ್ರತ್ಯಕ್ಷತ್ವೇನ ಅನುಪದೇಶ್ಯತ್ವಾತ್ ।**

ಆದರೆ ಹೀಗೆ ವಿಶೇಷಣಲಕ್ಷಣವನ್ನು ಹೇಳುವ ಪಕ್ಷದಲ್ಲಿ 'ಜಟಾಭಿಸ್ತಾಪಸಃ' 'ಜಟೆಗಳುಳ್ಳವನು ತಪಸ್ವಿ' ಎಂಬಲ್ಲಿ ವಿದ್ಯಮಾನವಾದ ಜಟೆ ವಿಶೇಷಣವಲ್ಲ ಎಂದಾದೀತು. ಏಕೆಂದರೆ ಜಟೆಯ ಸಂಬಂಧದಿಂದ ತಪಸ್ವಿಯ ಶರೀರದಲ್ಲಿ ಉಂಟಾದ ಆಕಾರ ವಿಶೇಷವನ್ನು ಕಂಡಾಗಲೇ 'ಈತ ತಪಸ್ವಿ' ಎಂದು ತಿಳಿಯುವುದರಿಂದ ಜಟೆಗಳು ಈಗ ವಿದ್ಯಮಾನವಾದರೂ ವಿಶೇಷಣವಲ್ಲ. ಆದರೆ 'ದಂಡೀ ನಾಸ್ತಿ' ಈಗ ದಂಡ ಅತೀತವಾಗಿದೆ. ಈತ ದಂಡಿಯಾಗಿಲ್ಲ, ದಂಡ ಕಳೆದುಹೋಗಿದೆ, ಎಂಬಲ್ಲಿ ಈಗ ಅತೀತವಾದ ದಂಡವಿಲ್ಲದಿದ್ದರೂ ಅದು ವಿಶೇಷಣ, ಏಕೆಂದರೆ 'ದಂಡೀ'ಎಂದು ದಂಡ ಸಂಬಂಧಿ ಯಾಗಿ ಜ್ಞಾತನಾದವನೆ 'ಈಗ ದಂಡವನ್ನು ಕಳೆದುಕೊಂಡಿದ್ದಾನೆ', 'ದಂಡೀನಾಸ್ತಿ' ಎಂದು ಪ್ರತೀತಿ ಬರುತ್ತದೆ!' ಹೀಗೆ ಸಮಸ್ಯೆಗಳು ಬರುತ್ತವೆ.

ಇವುಗಳಿಗೆ ಒಂದೇ ಸಮಾಧಾನ— 'ಕೆಲವೆಡೆ ವಿಶೇಷ್ಯದಲ್ಲಿ ಇಲ್ಲದ್ದೂ ವಿಶೇಷಣ ಲಕ್ಷಣಯುಕ್ತವಾಗಿದ್ದರೆ ವಿಶೇಷಣವಾಗುತ್ತದೆ, ದಂಡಿಯಲ್ಲಿ ದಂಡಧ್ವಂಸಕಾಲದಲ್ಲಿ ದಂಡವಿಲ್ಲದಿದ್ದರೂ ಅದು ವಿಶೇಷಣವೆ, ಕೆಲವೆಡೆ ವಿಶೇಷ್ಯದಲ್ಲಿ ವಿದ್ಯಮಾನವಾದುದೂ ವಿಶೇಷಣ ಲಕ್ಷಣಯುಕ್ತವಲ್ಲದಿದ್ದರೆ ವಿಶೇಷಣವಲ್ಲ, ತಪಸ್ವಿಯಲ್ಲಿ ಜಟೆ ವಿದ್ಯಮಾನವಾದರೂ ಅದು ವಿಶೇಷಣವಲ್ಲ ಆದರಿಂದ ಶರೀರದಲ್ಲಿ ಉಂಟಾಗುವ ಆಕಾರವಿಶೇಷವೇ ವಿಶೇಷಣ. ಯಾವುದರ ಸಂಬಂಧಿಯಾಗಿ ಜ್ಞಾತವಾದುದರಲ್ಲಿಯೇ ಇತರ ಸಂಬಂಧಪ್ರತೀತಿಯೋ ಅದು ಈಗ

ಅತೀತವಾಗಿದ್ದರೂ ವಿಶೇಷಣವೆ. ಯಾವುದರ ಸಂಬಂಧಿಯಾಗಿ ಜ್ಞಾತವಾದುದರಲ್ಲಿಯೇ ಇತರ ಸಂಬಂಧಪ್ರತೀತಿ ನಿಯಮವಿಲ್ಲವೋ ಅದು ವಿದ್ಯಮಾನವಾಗಿದ್ದರೂ ವಿಶೇಷಣವಲ್ಲ. ಅದರಿಂದಲೇ ಪ್ರಾಚೀನನೈಯಾಯಿಕರಾದ ಉದಯನಾಚಾರ್ಯರು ಕಿರಣಾವಲಿಗ್ರಂಥದಲ್ಲಿ ಹೇಳಿದ್ದಾರೆ— 'ವಿಧೇಯಾನ್ವಯ ಕಾಲದಲ್ಲಿ ಅದು ಇರಲಿ ಇಲ್ಲದಿರಲಿ ಅದರ ಸಂಬಂಧ ಜ್ಞಾನ ಉಂಟಾಗುವಾಗಲೇ ವಿಧೇಯದ ಸಂಬಂಧ ಪ್ರತೀತಿ ನಿಯಮವೆಂಬ ಸಾಮಾನಾಧಿಕರಣ್ಯವಿದ್ದರೆ ಅದು ವಿಶೇಷಣ' ಎಂದು. ಹೀಗಾಗಿ ಸೋಽಯಂ ದೇವದತ್ತಃ ಎಂಬಲ್ಲಿ ತತ್ತಾವಿಶಿಷ್ಟನಲ್ಲಿ ಇದಂತ್ವವೈಶಿಷ್ಟ್ಯ, ಇದಂತ್ವ ವಿಶಿಷ್ಟನಲ್ಲಿ ತತ್ತಾವೈಶಿಷ್ಟ್ಯ, ತತ್ತಾವಿಶಿಷ್ಟ ಮತ್ತು ಇದಂತ್ವ ವಿಶಿಷ್ಟರಿಗೆ ಐಕ್ಯ ಎಂಬ ಮೂರು ಬಗೆಯ ಉದ್ದೇಶ್ಯವಿಧೇಯಭಾವಗಳಲ್ಲಿಯೂ ದೋಷವಿಲ್ಲ—

ತಸ್ಮಾದತೀತಮಪಿ ಯದನ್ವಿತತಯಾ ಜ್ಞಾತ ಏವೇತ್ಯಾದ್ಯುಕ್ತಲಕ್ಷಣಯುಕ್ತಂ ಚೇತ್ ವಿಶೇಷಣಮೇವ। ತದಯುಕ್ತಂ ಚೇತ್ ವರ್ತಮಾನಮಪ್ಯವಿಶೇಷಣಮೇವ। ಅತ ಏವಾಹುಃ 'ಸದಸದ್ ವಾ ಸಮಾನಾಧಿಕರಣಂ ವಿಶೇಷಣಂ।' ಇತಿ। ತಸ್ಮಾತ್ ಪಕ್ಷತ್ರಯೇಽಪಿ ನ ದೋಷಃ।



नचाद्ये वाक्यवैयर्थ्यम् । इदंतावैशिष्ट्यस्य प्रत्यक्षत्वेऽपि तत्ताविशिष्टे तस्याप्रत्यक्षत्वात् । नचाद्यद्वितीययोर्बुभुत्सितस्याभेदस्य साक्षादलाभः । पुरोवर्तिनि तत्ताद्यवैशिष्ट्यभ्रमनिरासायायं स वा न वेत्यभिप्रायेण कोऽयमितिप्रश्ने सोऽयमित्युक्तेः । भेदभ्रमे निरसितव्येऽपि अभेदोक्त्यैवाभेदकोक्त्यापि साक्षाद्भेदभ्रमनिवृत्तेश्च । अभेदस्य बुभुत्सितत्वेऽपि वाक्यस्याभेदविशिष्टपरत्वेन सखंडार्थत्वापत्तेश्च ।

ननु तृतीये विशिष्टैक्ये विशेषणैक्यं स्यात् । नच धूमवदग्निमतोरैक्येऽपि धूमाग्न्योर्भेदो दृष्ट इति वाच्यम् । तत्रापि विशेष्यस्यैवैक्यात् । नच तर्हि दृष्टांताभावाद्विशिष्टैक्येन विशेषणैक्यापादनायोगः । अग्निमतोऽग्निमतैक्येऽग्नेरग्निनैक्यदर्शनात् । समुदायिरूपविशेषणभेदे समुदायैक्यस्य व्याहतत्वाच्चेति चेन्न ।

विशिष्टमपदार्थांतरमिति मते विशेष्यस्यैवैक्याधिकरणत्वेऽपि

**धर्मयोरप्युद्देश्यतावच्छेदकत्वेन विशेषणत्वात् । तस्यैव च विशिष्टाभेदशब्दार्थत्वात् । पदार्थांतरमित्यावयोर्मते तु धूमाग्न्यो र्भेदेऽपि धूमवानग्निमानित्यबाधितसामानाधिकरण्यधीबलेन विशिष्टयोरभेदस्यापि सत्त्वात् ।**

**अन्यथा इदं रूप्यमित्युक्ते पुरोवर्तिनि रूप्याभेदाप्रतीतेः रूप्यार्थिनः पुरोवर्तिनि प्रवृत्तिश्च न स्यात् । तत्तेदंतोपलक्षितैक्यबोधनमिति त्वन्मतं चायुक्तं स्यात् । तत्तेदंतोपलक्षितत्वरूपविशेषणभेदाद्विशिष्टभेदात् ।**

ननु सोऽयमित्यादिवाक्यं यदि तत्तान्वितेदंतावैशिष्ट्यबोधनमात्रपरं तदा बुभुत्सितस्वरूपाभेदस्य साक्षादप्रतिपादनादनाकांक्षिताभिधानत्वं स्यादित्याशंक्याह— **नचेति** ।। यदा प्रष्टुः तत्ताद्यवैशिष्ट्यसंशयेन कोऽयमिति प्रश्नस्तदा सोऽयमित्यस्य साक्षात्तत्तादिवैशिष्ट्यबोधकत्वेनाकांक्षिताभिधानत्वम् । यदा तु भेदभ्रमनिवृत्त्यर्थं अभेदबुभुत्सा तदा अभेदोपदेशेनेव अभेदकोपदेशेनापि भेदभ्रमनिवृत्तेः नानाकांक्षिताभिधानत्वमित्याह— **पुरोवर्तिनीत्यादिना** । **समुदायिरूपेति** ।। समुदायिनां विशेषणविशेष्यसंबधानां भिन्नत्वेन तद्विशिष्टयोरैक्यस्य व्याहतत्वादिति भावः। विशिष्टैक्यं नाम तत्तद्विशेषणावच्छिन्नविशेष्यैक्यमेव। न च विशेषणत्वासंभवः। अन्वयितावच्छेदकत्वमात्रेण तत्संभवादित्याह— **विशिष्टमिति** ।।



ಮೊದಲನೆ ಪಕ್ಷದಲ್ಲಿ ಇದಂತ್ವ ವೈಶಿಷ್ಟ್ಯವು ದೇವದತ್ತನಲ್ಲಿ ಪ್ರತ್ಯಕ್ಷವೇ ಇರುವಾಗ ಅದನ್ನು ಏಕೆ ಉಪದೇಶಿಸಬೇಕು? ವ್ಯರ್ಥವಲ್ಲವೆ? ಎಂದರೆ 'ಅಯಂ ದೇವದತ್ತಃ' 'ದೇವದತ್ತನಲ್ಲಿ ಇದಂತ್ವ ವೈಶಿಷ್ಟ್ಯವಿದೆ' ಎಂದು ಪ್ರತ್ಯಕ್ಷವಿದ್ದರೂ 'ಸೋಽಯಂ ದೇವದತ್ತಃ' 'ತತ್ತಾ ವಿಶಿಷ್ಟನಾದ ದೇವದತ್ತನಲ್ಲಿ ಇದಂತ್ವ ವೈಶಿಷ್ಟ್ಯವಿದೆ' ಎಂದು ಪ್ರತ್ಯಕ್ಷವಿಲ್ಲ. ಅದನ್ನು ಉಪದೇಶಿಸಲೇಬೇಕು. ಅದರಿಂದ ವಾಕ್ಯ ವ್ಯರ್ಥವಲ್ಲ—

**ನ ಚಾದ್ಯೇ ವಾಕ್ಯವೈಯರ್ಥ್ಯಂ। ಇದಂತಾವೈಶಿಷ್ಟ್ಯಸ್ಯ ಪ್ರತ್ಯಕ್ಷತ್ವೇಽಪಿ ತತ್ತಾವಿಶಿಷ್ಟೇ ತಸ್ಯಾಪ್ರತ್ಯಕ್ಷತ್ವಾತ್ ।**

ಮೊದಲನೆಯ ಮತ್ತು ಎರಡನೇ ಪಕ್ಷಗಳಲ್ಲಿ ಜಿಜ್ಞಾಸಿತವಾಗಿರುವ ಅಭೇದವು ನೇರವಾಗಿ ವಾಕ್ಯಗಳಿಂದ ತಿಳಿಯುವುದಿಲ್ಲ. ಮೂರನೆ ಪಕ್ಷದಲ್ಲಿ ಮಾತ್ರ 'ತತ್ತಾವಿಶಿಷ್ಟನೂ ಇದಂತ್ವವಿಶಿಷ್ಟನೂ ಒಬ್ಬನೆ' ಎಂದು ಅಭೇದವು ನೇರವಾಗಿ ಉಕ್ತವಾಗುತ್ತಿದೆ. ನಿಜ. ಎದುರಿನಲ್ಲಿರುವ ದೇವದತ್ತನನ್ನು ಇವನು ತತ್ತಾವಿಶಿಷ್ಟನಲ್ಲ ಎಂಬ ಭ್ರಮೆಯನ್ನು ಕಳೆಯುವ ಉದ್ದೇಶದಿಂದ, ಇವನು ಅವನೆಯೋ ಅಲ್ಲವೋ ಎಂಬ ಅಭಿಪ್ರಾಯದಿಂದ 'ಇವನು ಯಾರು?' ಎಂದು ಪ್ರಶ್ನೆ ಮಾಡಿದಾಗ ಇವನು ಅವನೇ ಎಂದು ಹೇಳುವ ವಾಕ್ಯ ಇದು. ಹೊರತು ಅವನೂ ಇವನೂ ಒಬ್ಬನೆಯೋ ಅಲ್ಲವೋ ಎಂಬ ಅಭಿಪ್ರಾಯದಿಂದ ಪ್ರಶ್ನೆ ಮಾಡಿದಾಗ ಭೇದ ಭ್ರಮನಿರಾಸಕ್ಕಾಗಿ ಹೊರಟ ವಾಕ್ಯವಲ್ಲ. ಅಥವಾ ಈ ಜನರ ಸಮೂಹದಲ್ಲಿ ಬೇರೆ ಯಾರೋ 'ತತ್ತಾವಿಶಿಷ್ಟ'ನು, 'ಅವನು' ಅಲ್ಲ ಎಂಬ ಭ್ರಮನಿವೃತ್ತಿಗಾಗಿ, 'ಇಲ್ಲಿ ಅವನು ಯಾರು?' ಎಂಬ ಅಭಿಪ್ರಾಯದಿಂದ ಪ್ರಶ್ನೆ ಮಾಡಿದಾಗ 'ಅವನು ಇವನೇ' ಎಂದು ಹೇಳುವ ವಾಕ್ಯವಿದು ಎಂದೂ ಹೇಳಬಹುದು. ಹೊರತು, ಅವನೂ ಇವನೂ ಒಬ್ಬನೆ ಎಂದು ಹೇಳಲು ಹೊರಟವಾಕ್ಯವಿದಲ್ಲ.

ಅಥವಾ ತತ್ತಾ ವಿಶಿಷ್ಟನೇ ಬೇರೆ ಇದಂತಾ ವಿಶಿಷ್ಟನೇ ಬೇರೆ, ಅವನೇ ಬೇರೆ ಇವನೇ ಬೇರೆ ಎಂಬ ಭೇದಭ್ರಮದಲ್ಲಿರುವವನಿಗೂ ಕೂಡ ಸಾಕ್ಷಾತ್‌ಭೇದಭ್ರಮನಿವೃತ್ತಿಗಾಗಿ, ಅಭೇದಕಜಿಜ್ಞಾಸೆಯಿಂದ 'ಅವನೂ ಇವನೂ ಯಾರು' ಎಂಬ ಪ್ರಶ್ನೆ ಮಾಡಿದಾಗ 'ಅವನೂ ಇವನೂ ಒಬ್ಬನೆ ದೇವದತ್ತ'ನೆಂದು ಅಭೇದಕದ ಮೂಲಕ ಅಭೇದವನ್ನು ಪರ್ಯಾಯವಾಗಿ ಹೇಳುವ ವಾಕ್ಯವಿದು. ಏಕೆಂದರೆ ತತ್ತಾವಿಶಿಷ್ಟನಲ್ಲಿ ಇದಂತಾ ವೈಶಿಷ್ಟ್ಯವನ್ನು ಇದಂತಾವಿಶಿಷ್ಟನಲ್ಲಿ ತತ್ತಾವೈಶಿಷ್ಟವನ್ನು ಹೇಳುತ್ತದೆ. ಇವೆರಡೂ ತತ್ತಾವಿಶಿಷ್ಟ ಇದಂತಾವಿಶಿಷ್ಟಗಳ ಅಭೇದಕ್ಕೆ ವ್ಯಾಪ್ಯವಾಗಿವೆ. ಅಭೇದಕವಾಗಿವೆ. ಅಭೇದೋಕ್ತಿಯಂತೆ ಅಭೇದಕೋಕ್ತಿಯೂ ಸಾಕ್ಷಾತ್ ಭೇದಭ್ರಮನಿವರ್ತಕವೆ. ಹೀಗೆ ಈ ವಾಕ್ಯವು ಹೇಳುತ್ತಿರುವುದು ಸಾಕ್ಷಾತ್ ಅಭೇದವಲ್ಲದಿದ್ದರೂ ಅಭೇದಕವಾಗಿದೆ. ಅಭೇದದಂತೆ ಅಭೇದಕವೂ ಸಾಕ್ಷಾತ್ ಭೇದಭ್ರಮ ನಿರಾಸಕವೇ ಆಗಿದೆ—

ನಚಾದ್ಯ ದ್ವಿತೀಯಯೋಃ ಬುಭುತ್ಸಿತಸ್ಯ ಅಭೇದಸ್ಯ ಸಾಕ್ಷಾದ್ ಅಲಾಭಃ। ಪುರೋವರ್ತಿನಿ ತತ್ತಾದ್ಯವೈಶಿಷ್ಟ್ಯ ಭ್ರಮನಿರಾಸಾಯ 'ಅಯಂ ಸ ವಾ, ನ ವಾ ?' ಇತ್ಯಭಿಪ್ರಾಯೇಣ ಕೋಽಯಂ ? ಇತಿ ಪ್ರಶ್ನೇ ಸೋಽಯಮಿತ್ಯುಕ್ತೇಃ। ಭೇದಭ್ರಮೇ ನಿರಸಿತವ್ಯೇಽಪಿ ಅಭೇದೋಕ್ತ್ಯಾ ಇವ ಅಭೇದಕೋಕ್ತ್ಯಾಪಿ ಸಾಕ್ಷಾತ್ ಭೇದಭ್ರಮನಿವೃತ್ತೇಶ್ಚ।

ಅಭೇದವೆ ಜಿಜ್ಞಾಸಿತವೆಂದರೂ ಅನುಪಪತ್ತಿ ಇಲ್ಲ. ಏಕವಿಶಿಷ್ಟದಲ್ಲಿ ಅಪರ ವಿಶಿಷ್ಟದ ಅಭೇದವನ್ನು ವಾಕ್ಯವು ಹೇಳಬಹುದು. ಹೀಗೆಂದಮಾತ್ರಕ್ಕೆ ವಿಶೇಷಣತ್ಯಾಗ ಲಕ್ಷಣಾ ಎನ್ನಲಾಗದು. ಅಭೇದ ವೈಶಿಷ್ಟ್ಯ-ಬೋಧಕವಾದ್ದರಿಂದ ಸಖಂಡಾರ್ಥತ್ವ ಅನಿವಾರ್ಯವೇ ಆಗುವುದು—

**ಅಭೇದಸ್ಯ ಬುಭುತ್ಸಿತತ್ವೇऽಪಿ ವಾಕ್ಯಸ್ಯಾಭೇದವಿಶಿಷ್ಟಪರತ್ವೇನ ಸಖಂಡಾರ್ಥತ್ವಾಪತ್ತೇಶ್ಚ।**

ಮೂರನೇ ಪಕ್ಷದಲ್ಲಿ ಯದ್ಯಪಿ ವಿಶಿಷ್ಟೈಕ್ಯವಿದ್ದರೆ ವಿಶೇಷಣಗಳಿಗೂ ಐಕ್ಯವಿರಬೇಕಾಗುತ್ತದೆ ಎಂಬ ಸಮಸ್ಯೆ ಇದೆ. 'ಧೂಮವಾನ್ ವಹ್ನಿಮಾನ್' ಎಂಬಲ್ಲಿ ಧೂಮವಿಶಿಷ್ಟ ವಹ್ನಿವಿಶಿಷ್ಟಗಳಿಗೆ ಐಕ್ಯವಿದ್ದರೂ ವಿಶೇಷಣಗಳಾದ ಧೂಮವಹ್ನಿಗಳಿಗೆ ಭೇದವಿರುವುದರಿಂದ ಐಕ್ಯವಿಲ್ಲದಿರುವುದರಿಂದ ಈ ಸಮಸ್ಯೆ ಇಲ್ಲವೆಂದರೆ, ಅಲ್ಲಿ ವಿಶೇಷ್ಯೈಕ್ಯವೇ ಹೊರತು ವಿಶಿಷ್ಟೈಕ್ಯವಿಲ್ಲ. ವಿಶಿಷ್ಟೈಕ್ಯಸ್ಥಳ ಇದಲ್ಲ. ವಿಶಿಷ್ಟೈಕ್ಯಸ್ಥಳದಲ್ಲಿ ವಿಶೇಷಣೈಕ್ಯಾಪತ್ತಿ ಇದ್ದೇ ಇದೆ.

'ಹಾಗಾದರೆ ವಿಶಿಷ್ಟೈಕ್ಯದಿಂದ ವಿಶೇಷಣೈಕ್ಯವನ್ನು ಆಪಾದಿಸಲು ದೃಷ್ಟಾಂತವಿಲ್ಲವಾಯಿತು' ಎಂದರೆ ದೃಷ್ಟಾಂತವಿದೆ. ಅಗ್ನಿವಿಶಿಷ್ಟಕ್ಕೆ ಅಗ್ನಿವಿಶಿಷ್ಟದಿಂದ ಐಕ್ಯವಿದೆ, ವಿಶೇಷಣವಾದ ಅಗ್ನಿಗೂ ಅಗ್ನಿಯ ಐಕ್ಯವಿದೆ ಎನ್ನಲು ಬರುತ್ತದೆ. ಏಕೆಂದರೆ ಎಲ್ಲ ವಸ್ತುವಿಗೂ ತನಗೆ ತನ್ನ ಐಕ್ಯವಿರುತ್ತದೆ ತಾನೆ? ಈ ಉದಾಹರಣೆಯಿಂದ ವಿಶಿಷ್ಟೈಕ್ಯದಿಂದ ವಿಶೇಷಣೈಕ್ಯವನ್ನು ಆಪಾದಿಸಬಹುದು. ವಿಶಿಷ್ಟವು ವಿಶೇಷ್ಯ ವಿಶೇಷಣತತ್ಸಂಬಂಧ ಗಳ ಸಮುದಾಯರೂಪವಾಗಿದೆ. ಸಮುದಾಯ ಸಮುದಾಯಿಗಳಿಗೆ ಭೇದವಿಲ್ಲವೆಂದಮೇಲೆ ಸಮುದಾಯಿಗಳಾದ ವಿಶೇಷಣಗಳಿಗೆ ಭೇದವಿರುವಾಗ ಸಮುದಾಯ ರೂಪವಿಶಿಷ್ಟಗಳಿಗೆ ಐಕ್ಯ ಶಕ್ಯವಲ್ಲ. ಅದು ವ್ಯಾಹತವಾಗುತ್ತದೆ. ಹೀಗಾಗಿ ವಿಶಿಷ್ಟೈಕ್ಯವಿದ್ದರೆ ವಿಶೇಷಣಗಳಿಗೂ ಐಕ್ಯವನ್ನು ಒಪ್ಪಲೇಬೇಕು ಎಂದು ಅದ್ವೈತಿ ಹೇಳುತ್ತಾನೆ—

**ನನು ತೃತೀಯೇ ವಿಶಿಷ್ಟೈಕ್ಯೇ ವಿಶೇಷಣೈಕ್ಯಂ ಸ್ಯಾತ್। ನ ಚ ಧೂಮವದಗ್ನಿಮತೋರೈಕ್ಯೇಽಪಿ ಧೂಮಾಗ್ನ್ಯೋರ್ಭೇದೋ ದೃಷ್ಟ ಇತಿ ವಾಚ್ಯಂ। ತತ್ರಾಪಿ ವಿಶೇಷ್ಯಸ್ಯೈವೈಕ್ಯಾತ್। ನ ಚ ತರ್ಹಿ ದೃಷ್ಟಾಂತಾಭಾವಾದ್ ವಿಶಿಷ್ಟೈಕ್ಯೇನ ವಿಶೇಷಣೈಕ್ಯಾಪಾದನಾಯೋಗಃ। ಅಗ್ನಿಮತೋऽಗ್ನಿಮತಾ ಐಕ್ಯೇ ಅಗ್ನೇರಗ್ನಿನಾ ಐಕ್ಯ ದರ್ಶನಾತ್। ಸಮುದಾಯಿರೂಪ ವಿಶೇಷಣಭೇದೇ ಸಮುದಾಯೈಕ್ಯಸ್ಯ ವ್ಯಾಹತತ್ವಾಚ್ಚ ಇತಿ ಚೇನ್ನ।**

'ಇತಿ ಚೇನ್ನ'—ಈ ಸಮಸ್ಯೆಗೆ ಪರಿಹಾರ ಹೀಗೆ—ವಿಶಿಷ್ಟೈಕ್ಯವೆನ್ನುವ ಸ್ಥಳದಲ್ಲಿ ಎಲ್ಲಿಯೂ ವಸ್ತುತಃ ಎರಡು ವಿಶೇಷಣಗಳಿಗೆ ಐಕ್ಯವಿಲ್ಲ. 'ಸೋಯಂ ದೇವದತ್ತಃ' ಎಂಬಲ್ಲಿ ತತ್ತಾವಿಶಿಷ್ಟ-ಇದಂತಾವಿಶಿಷ್ಟಗಳಿಗೇ ಅಭೇದವು ವಿಭಕ್ತಿಯಿಂದ ಬೋಧಿತವಾಗುತ್ತದೆ. ವಿಶೇಷಣೋತ್ತರ ವಿಭಕ್ತಿಗೆ ಅಭೇದವು ಅರ್ಥ. ಈ ಅಭಿಪ್ರಾಯದಿಂದಲೇ ವಿಶೇಷಣೋತ್ತರ ವಿಭಕ್ತಿ ಅರ್ಥಸಾಧುವೆಂದು ಮಣಿಕಾರ ಹೇಳುತ್ತಾನೆ.

ವಿಶಿಷ್ಟವು ವಿಶೇಷ್ಯ ವಿಶೇಷಣ ತತ್ಸಮುದಾಯರೂಪವೆಂಬ ತಾರ್ಕಿಕ ಮತದಲ್ಲಿ ಅದು ಪದಾರ್ಥಾಂತರವಲ್ಲ. ಎರಡು ವಿಶೇಷ್ಯಗಳೇ ವಿಧೇಯವಾದ ಅಭೇದದಲ್ಲಿ ಅನ್ವಿತವಾಗುತ್ತವೆ. ಆಗ

ವಿಶೇಷಣಗಳು ಎರಡೂ ಧರ್ಮಿತಾವಚ್ಛೇದಕವಾಗಿರುತ್ತವೆ. ಹೊರತು ಅವು ವಿಧೇಯವಾದ ಐಕ್ಯದಲ್ಲಿ ಅನ್ವಯಿಸುವುದಿಲ್ಲ. ಹೀಗೆ ಧರ್ಮಿತಾವಚ್ಛೇದಕವಾಗಿ ವಿಶೇಷಣಗಳು ವಿವಕ್ಷಿತವಾಗಿರುವಾಗ ವಿಶೇಷ್ಯಗಳಿಗೆ ಐಕ್ಯವಿಧಾನ ಮಾಡಿದರೆ ಅದನ್ನೇ ವಿಶಿಷ್ಟೈಕ್ಯವೆಂದು ಕರೆಯುತ್ತಾರೆ. 'ವಿಶಿಷ್ಟೈಕ್ಯ'ವೆಂದರೆ 'ಧರ್ಮಿತಾವಚ್ಛೇದಕೀಭೂತ ತತ್ತದ್‌ವಿಶೇಷಣಾವಚ್ಛಿನ್ನವಿಶೇಷ್ಯೈಕ್ಯ'ವೆ. ಹೊರತು ವಿಶೇಷಣಗಳಿಗೂ ಐಕ್ಯವಿರುವುದಿಲ್ಲ. 'ವಿಶೇಷಣವು ವಿಧೇಯಾಭೇದಾನ್ವಯಿಯಾಗದಿದ್ದರೆ ಅದು ವಿಶೇಷಣವೆನಿಸುವುದು ಹೇಗೆ' ಎಂದರೆ ವಿಶೇಷ್ಯನಿಷ್ಠವಾದ ವಿಧೇಯಾನ್ವಯಿತ್ವದಲ್ಲಿ ವಿಶೇಷಣವು ಅವಚ್ಛೇದಕ. ವಿಧೇಯಾನ್ವಯಿತ್ವಪ್ರಯುಕ್ತವಾದುದು ವಿಶೇಷಣತ್ವವಲ್ಲ. ವಿಧೇಯಾನ್ವಯಿತಾವಚ್ಛೇದಕತ್ವ ಮಾತ್ರ ಪ್ರಯುಕ್ತವಾದುದು ವಿಶೇಷಣತ್ವ ವ್ಯವಹಾರ.

ವಿಶಿಷ್ಟವು ಪದಾರ್ಥಾಂತರವೆನ್ನುವ ತತ್ವವಾದಿ ಮಾಯಾವಾದಿ ಇಬ್ಬರ ಮತದಲ್ಲಿ ವಿಶಿಷ್ಟಗಳು ಪರಸ್ಪರ ಭಿನ್ನವಾಗಿದ್ದರೂ 'ಧೂಮವಾನ್ ವಹ್ನಿಮಾನ್' ಎಂದು ಧೂಮವಿಶಿಷ್ಟ ವಹ್ನಿವಿಶಿಷ್ಟಗಳಿಗೆ ಅಬಾಧಿತವಾದ ಸಾಮಾನಾಧಿಕರಣ್ಯ ಪ್ರತೀತಿ ಇರುವುದರಿಂದ ಅಭೇದವೂ ಇದೆ ಎಂದು ಒಪ್ಪಬೇಕು. ಸಾಮಾನಾಧಿಕರಣ್ಯವೆಂದರೆ ಧೂಮವತ್ವ ಅಗ್ನಿಮತ್ವಗಳೆಂಬ ಭಿನ್ನಪ್ರವೃತ್ತಿನಿಮಿತ್ತಕವಾದ ಧೂಮವತ್ ಅಗ್ನಿಮತ್ ಶಬ್ದಗಳಿಗೆ ಪರ್ವತವೆಂಬ ಒಂದೇ ವಿಶೇಷ್ಯದಲ್ಲಿ ಪ್ರವೃತ್ತಿ. ಹೀಗೆ ಸಾಮಾನಾಧಿಕರಣ್ಯ ಪ್ರತೀತಿ ಬಲದಿಂದ ವಿಶಿಷ್ಟೈಕ್ಯವನ್ನು ಒಪ್ಪುವಾಗ 'ವಿಶಿಷ್ಟಗಳಿಗೆ ಐಕ್ಯವನ್ನು ಹೇಳಿದರೆ ವಿಶೇಷಣಗಳಿಗೂ ಐಕ್ಯ ಬರಬೇಕಾದೀತು' ಎಂದು ಆಪಾದನೆ ಮಾಡುವುದು ಯುಕ್ತವಾಗುವುದಿಲ್ಲ. ವಿಶಿಷ್ಟಾಭೇದವನ್ನು ಹೇಳಿದಲ್ಲೆಲ್ಲ ಅಭೇದಾಧಿಕರಣವು ವಿಶಿಷ್ಟವೇ ಆದರೂ ವಿಶೇಷಣಗಳು ಭಿನ್ನಭಿನ್ನವೆ. ವಿಶೇಷ್ಯಭೇದವು ವಿಶಿಷ್ಟಾಭೇದಕ್ಕೆ ವಿರೋಧಿಯಾದರೂ ವಿಶೇಷಣಭೇದವು ಅದಕ್ಕೆ ವಿರೋಧಿಯಲ್ಲ. ವಿಶೇಷ್ಯಭೇದವಿರುವಾಗ 'ನಾಯಂ ಸಃ' ಎಂದು ಭೇದಬುದ್ಧಿ ಬಂದರೂ ವಿಶೇಷಣ ಮಾತ್ರಭೇದವಿರುವಲ್ಲಿ 'ನಾಯಂ ಸಃ' ಎನ್ನುವುದಿಲ್ಲ. 'ಸ ಏವಾಯಂ' ಎನ್ನುತ್ತೇವೆ—

**ವಿಶಿಷ್ಟಮಪದಾರ್ಥಾಂತರಮಿತಿ ಮತೇ ವಿಶೇಷ್ಯಸ್ಯೈವ ಐಕ್ಯಾಧಿಕರಣತ್ವೇಪಿ ಧರ್ಮಯೋರಪಿ ಉದ್ದೇಶ್ಯತಾವಚ್ಛೇದಕತ್ವೇನ ವಿಶೇಷಣತ್ವಾತ್, ತಸ್ಯೈವ ಚ ವಿಶಿಷ್ಟಾಭೇದಾರ್ಥತ್ವಾತ್ । ಪದಾರ್ಥಾಂತರಮಿತ್ಯಾವಯೋರ್ಮತೇ ತು ಧೂಮಾಗ್ನ್ಯೋಃ ಭೇದೇಽಪಿ 'ಧೂಮವಾನ್ ಅಗ್ನಿಮಾನ್' ಇತ್ಯಬಾಧಿತ ಸಾಮಾನಾಧಿಕರಣ್ಯಧೀ ಬಲೇನ ವಿಶಿಷ್ಟಯೋರಭೇದಸ್ಯಾಪಿ ಸತ್ವಾತ್ ।**

ವಿಶೇಷಣೈಕ್ಯಾಪತ್ತಿ ಭಯದಿಂದ ವಿಶಿಷ್ಟೈಕ್ಯವನ್ನು ಒಪ್ಪದಿದ್ದರೆ 'ಇದಂ ರಜತಂ' ಎಂಬಲ್ಲಿ ಇದಂತ್ವ ರಜತತ್ವಗಳೆಂದು ಎರಡು ಭಿನ್ನ ವಿಶೇಷಣಗಳಿರುವಾಗ ವಿಶಿಷ್ಟಗಳಾದ ಇದಂಪದಾರ್ಥ ಮತ್ತು ರಜತಗಳಿಗೆ ಐಕ್ಯವಿಲ್ಲವೆಂದಾಗುವುದರಿಂದ ರಜತಾರ್ಥಿಯು ಇದಂಪದಾರ್ಥದಲ್ಲಿ ಆದಾನಾದಿ ವ್ಯವಹಾರ ಮಾಡದಿರಬೇಕಾದೀತು.

ಮತ್ತು ಸೋಯಂ ಎಂಬಲ್ಲಿ ತತ್ತಾವಿಶಿಷ್ಟ ಇದಂತಾ ವಿಶಿಷ್ಟಗಳಿಗೆ ಐಕ್ಯವಿಲ್ಲ, ತತ್ತೋಪಲಕ್ಷಿತ

ಇದಂತೋಪಲಕ್ಷಿತಗಳಿಗೆ ಐಕ್ಯವನ್ನು ಹೇಳಬಹುದು. ಆದರಿಂದ ಸಾಮಾನಾಧಿಕರಣ್ಯಪ್ರತೀತಿ ಕೂಡುವುದು' ಎಂದು ಅದ್ವೈತಿ ಹೇಳುತ್ತಾನೆ. ಇದೂ ವ್ಯಾಹತವಾದೀತು. ಏಕೆಂದರೆ ತತ್ತೋಪಲಕ್ಷಿತ ಇದಂತೋ ಪಲಕ್ಷಿತಗಳೆಂದರೆ ತತ್ತೋಪಲ್ಲಕ್ಷಿತತತ್ವರೂಪ ವಿಶೇಷಣ ವಿಶಿಷ್ಟ ಮತ್ತು ಇದಂತೋಪಲಕ್ಷಿತತ್ವ ರೂಪ ವಿಶೇಷಣ ವಿಶಿಷ್ಟಗಳೇ ಆಗಿವೆ. ಅವುಗಳಿಗ ಐಕ್ಯವೆಂದರೆ, ಅವುಗಳಿಗೆ ಅಭೇದ ಒಪ್ಪಿದರೆ ತತ್ತೋಪಲಕ್ಷಿತತ್ವರೂಪವಿಶೇಷಣ ಮತ್ತು ಇದಂತೋಪಲಕ್ಷಿತತ್ವರೂಪವಿಶೇಷಣಗಳಿಗೆ ಐಕ್ಯ ಬರಬೇಕಾದೀತು. ಅವುಗಳಿಗೆ ಭೇದವಿರುವುದರಿಂದ ಅವುಗಳಿಂದ ವಿಶಿಷ್ಟವಾದ ಎರಡು ಉಪಲಕ್ಷಿತ ಗಳಿಗೆ ಕೂಡ ಭೇದವಿರಬೇಕು. ಅವುಗಳಿಗೆ ಐಕ್ಯವನ್ನು ಹೇಳುವುದು ಯುಕ್ತವಾಗಲಾರದು—

**ಅನ್ಯಥಾ ಇದಂ ರೂಪ್ಯಮಿತ್ಯುಕ್ತೇ ಪುರೋವರ್ತಿನಿ ರೂಪ್ಯಾಭೇದಾಪ್ರತೀತೇಃ ರೂಪ್ಯಾರ್ಥಿನಃ ಪುರೋವರ್ತಿನಿ ಪ್ರವೃತ್ತಿಶ್ಚ ನ ಸ್ಯಾತ್। ತತ್ತೇದಂತೋಪಲಕ್ಷಿತೈಕ್ಯ ಬೋಧನಮಿತಿ ತ್ವನ್ಮತಂ ಚ ಅಯುಕ್ತಂ ಸ್ಯಾತ್। ತತ್ತೇದಂತೋಪಲಕ್ಷಿತತ್ವರೂಪ ವಿಶೇಷಣ ಭೇದಾದ್ ವಿಶಿಷ್ಟಭೇದಾತ್ ।**



**अस्तु वा तत्तेदंतयोर्मध्ये एकस्योपलक्षणत्वं । तथापीदंताविशिष्टस्योपलक्षणीभूततत्कालसंबंधो वा तत्तोपलक्षिताभेदो वा तत्ताविशिष्टस्योपलक्षणीभूतेदंतासंबंधो वा इदंतोपलक्षिताभेदो वा बोध्यताम् । नचैतावता वाक्यस्याखंडार्थत्वम् । उपलक्षणस्य काकादेः स्वयं प्रकारत्वेन प्रकारांतरोपस्थापकत्वेन वा निष्प्रकारकत्वरूपाखंडार्थत्वविरोधित्वात् । एकस्योपलक्षणत्वेऽप्यन्यस्य विशेषणत्वाच्च ।**

ननु नास्मन्मते तत्तेदंत्वोपलक्षितत्वविशिष्टयोरभेदः । किंतु तदुपलक्षितस्वरूपमात्रस्य । अन्यथा विशिष्टयोरैक्ये विशेषणयोरैक्यापत्तेः । अत एवेदं रजतमित्यत्र इदंत्वरजतत्वयोर्न बोधने विशेषणत्वं किंतूपलक्षणत्वमेव, रजताभेदबोधनमात्रेणैव रजतार्थिप्रवृत्त्युपपत्तेः । उपलक्षणस्यापि रजतत्वादेः प्रकारतया भानसंभवाच्चेत्यनुशयादाह— **अस्तु वेति । प्रकारांतरोपस्थापकत्वेनेति** ।। उत्तृणत्वाद्युपस्थापकत्वेनेत्यर्थः ।



ಹೀಗೆ ಇವು ತಾರ್ಕಿಕರ ಮತ್ತು ಅದ್ವೈತಿಗಳ ರೀತಿಗಳಿಂದ ಎರಡು ಸಮಾಧಾನಗಳು. ರಾಮಾನುಜೀಯರ ಪ್ರಕಾರವೂ ಪಕ್ಷತ್ರಯಗಳೂ ಯುಕ್ತವೆ.

ತತ್ತಾ ವಿದ್ಯಮಾನವಾಗಿರಬೇಕಾಗಿಲ್ಲ. ಅತೀತವಾಗಿದ್ದರೂ ವಿಶೇಷಣವಾಗಬಹುದೆಂದು ಇಷ್ಟರವರೆಗೆ ಹೇಳಿದ್ದಾರೆ. ಇನ್ನು ಮುಂದೆ ವಿದ್ಯಮಾನವಾದರೇ ವಿಶೇಷಣವಾಗುತ್ತದೆ ಎಂದಿಟ್ಟುಕೊಂಡರೂ ಚಿಂತೆ ಇಲ್ಲ. 'ತತ್ತಾ ಇದಂತಾಗಳಲ್ಲಿ ತತ್ತಾ ಅವಿದ್ಯಮಾನವಾದ್ದರಿಂದ ಉಪಲಕ್ಷಣವಾಗಲಿ, ಇದಂತ್ವ ವಿದ್ಯಮಾನವಾದ್ದರಿಂದ ವಿಶೇಷಣವಾಗಿರುತ್ತದೆ. ಆದರಿಂದ ಪಕ್ಷತ್ರಯದಲ್ಲಿಯೂ ದೋಷವಿಲ್ಲ' ಎಂದು ರಾಮಾನುಜೀಯರ ರೀತಿಯಿಂದ ಉಪಪಾದನ ಮಾಡುತ್ತಾರೆ.

ಸೋಯಂ ಎಂಬಲ್ಲಿ ತತ್ತಾ ಇದಂತಾ ವಿಶಿಷ್ಟಾಭೇದದಿಂದ ತಪ್ಪಿಸಿಕೊಳ್ಳಲು ಉಪಲಕ್ಷಿತಾ ಭೇದವನ್ನು ಅದ್ವೈತಿ ಹೇಳಿದರೂ ಅದು ಕೂಡ ಉಪಲಕ್ಷಿತತ್ವ ವಿಶಿಷ್ಟಾಭೇದವೆ ಆಗುತ್ತದೆ. ಮತ್ತು 'ಇದಂ ರಜತಂ' ಎಂಬಲ್ಲಿ ವಿಶಿಷ್ಟಾಭೇದವನ್ನು ಹೇಳದಿದ್ದರೆ ಇದಂ ಪದಾರ್ಥಲ್ಲಿ ರಜತಾರ್ಥಿಪ್ರವೃತ್ತಿಯಾಗದು ಎಂದಿದ್ದಕ್ಕೆ 'ನಾನು ಉಪಲಕ್ಷಿತತ್ವವಿಶಿಷ್ಟಾಭೇದವನ್ನೂ ಹೇಳುವುದಿಲ್ಲ. ಉಪಲಕ್ಷಿತ ಸ್ವರೂಪಮಾತ್ರಾಭೇದವನ್ನು ಹೇಳುತ್ತೇನೆ ಇಲ್ಲದಿದ್ದರೆ, ವಿಶಿಷ್ಟಗಳಿಗೆ ಐಕ್ಯವೆಂದರೆ ವಿಶೇಷಣಗಳಿಗೂ ಐಕ್ಯವೆಂದಾದೀತು. 'ಇದಂ ರಜತಂ' ಎಂಬಲ್ಲಿಯೂ ಇದಂತ್ವರಜತತ್ವೋಪಲಕ್ಷಿತ ರಜತಾಭೇದವನ್ನೇ ಹೇಳುತ್ತೇನೆ, ಉಪಲಕ್ಷಣವೂ ಪ್ರಕಾರವಾಗಿ ಬೋಧದಲ್ಲಿ ಕಾಣಬಹುದು. ಆದರಿಂದ ಇದಂಪದಾರ್ಥದಲ್ಲಿ ರಜತಾರ್ಥಿಗೆ ಪ್ರವೃತ್ತಿ ಕೂಡುತ್ತದೆ, ಅಖಂಡಾರ್ಥತ್ವಾಪತ್ತಿ ಇಲ್ಲ' ಎಂದು ಅವನು ಹೇಳಬಹುದು. ಆದರೆ, ಉಪಲಕ್ಷಿತ ಸ್ವರೂಪಾಭೇದವು ಮೊದಲೇ ಸಿದ್ಧವಾಗಿರುವುದರಿಂದ 'ಸೋऽಯಂ' ಎಂದು 'ಇದಂ ರಜತಂ' ಎಂದು ಉಪದೇಶ ಮಾಡುವುದು ವ್ಯರ್ಥವಾಗುತ್ತದೆ. ಉಪಲಕ್ಷಿತ ಸ್ವರೂಪ ಅನುಪಲಕ್ಷಿತ ಸ್ವರೂಪವೆಂದು ಸ್ವರೂಪ ಎರಡಿರುವುದಿಲ್ಲ. ಒಂದೇ ಸ್ವರೂಪ. ಆದರಲ್ಲಿ ತನಗೆ ತನ್ನಿಂದ ಅಭೇದವಿದೆ ಎಂಬುದು ಮೊದಲೇ ತಿಳಿದಿರುವುದರಿಂದ ಈ ವಾಕ್ಯಗಳಿಗೆ ಪ್ರಸಕ್ತಿಯೆ ಇಲ್ಲವಾಗುವುದು ಎಂಬ ದೋಷವಿದೆ. ಅದನ್ನು ಶಿಷ್ಯರು ತಾವೇ ಊಹಿಸಿಕೊಳ್ಳಲಿ ಎಂದುಕೊಂಡು 'ತತ್ತಾ ಇದಂತಾಗಳಲ್ಲಿ ಒಂದು ಉಪಲಕ್ಷಣ'ವೆಂದು ಅಭ್ಯುಪಗಮವಾದದಿಂದ ಒಪ್ಪಿಕೊಂಡು ಪಕ್ಷತ್ರಯದಲ್ಲಿಯೂ ದೋಷವಿಲ್ಲ, ಎಂದು ಸಮರ್ಥಿಸುತ್ತಾರೆ—

ತತ್ತಾ ಇದಂತಾಗಳಲ್ಲಿ ಒಂದು ಉಪಲಕ್ಷಣ, ಇನ್ನೊಂದು ವಿಶೇಷಣವಿರಲಿ. ಇದಂತಾ ವಿಶಿಷ್ಟದಲ್ಲಿ, ಉಪಲಕ್ಷಣವಾದ ತತ್ಕಾಲಸಂಬಂಧ ಅಥವಾ ತತ್ತೋಪಲಕ್ಷಿತದ ಅಭೇದ ಕಾಣಲಿ. ಅಥವಾ ತತ್ತಾವಿಶಿಷ್ಟದಲ್ಲಿ ಉಪಲಕ್ಷಣವಾದ ಇದಂತಾಸಂಬಂಧ ಅಥವಾ ಇದಂತೋಪಲಕ್ಷಿತದ ಅಭೇದ ಕಾಣಲಿ. ಎರಡು ವಿಶೇಷಣಗಳಿಗೆ ವಿರೋಧವಿದ್ದರೂ ಅವುಗಳಲ್ಲಿ ಒಂದು ಉಪಲಕ್ಷಣವಾದರೆ ವಿರೋಧವಿರುವುದಿಲ್ಲ, ಒಂದು ಉಪಲಕ್ಷಣವಾದ ಮಾತ್ರಕ್ಕೆ ವಾಕ್ಯವು

ಅಖಂಡಾರ್ಥವೆನ್ನುವಂತಿಲ್ಲ. ಏಕೆಂದರೆ ಕಾಕವದ್ ದೇವದತ್ತಗೃಹಂ ಎಂಬಲ್ಲಿ ಕಾಕವು ಉಪಲಕ್ಷಣವಾದರೂ ಪ್ರಕಾರವಾಗಿ ಕಾಣಿಸುತ್ತದೆ. ಅಥವಾ ಉತ್ತೃಣತ್ವಾದಿ ಆಕಾರಾಂತರವನ್ನು ಅದು ಉಪಸ್ಥಾಪನ ಮಾಡುವುದರಿಂದ ಆ ಆಕಾರಾಂತರವು ಪ್ರಕಾರವಾಗಿ ಕಾಣಿಸುತ್ತದೆ. ಹೀಗಾಗಿ ನಿಷ್ಪ್ರಕಾರತ್ವರೂಪ ಅಖಂಡಾರ್ಥತ್ವ ಪ್ರಸಕ್ತಿ ಇಲ್ಲ. ಒಂದು ಉಪಲಕ್ಷಣವಾಗಿ ಪ್ರಕಾರವಾಗಿ ಕಾಣದೆ ಹೋದರೂ ಇನ್ನೊಂದು ವಿಶೇಷಣವಾಗಿಯೇ ಇರುವುದರಿಂದ ಅದಾದರೂ ಪ್ರಕಾರವಾಗಿ ಕಾಣಲೇಬೇಕು. ಹೀಗಾಗಿ ನಿಷ್ಪ್ರಕಾರತ್ವರೂಪವಾದ ಅಖಂಡಾರ್ಥತ್ವಕ್ಕೆ ಅವಕಾಶವಿಲ್ಲ—

**ಅಸ್ತು ವಾ ತತ್ತೇದಂತಯೋರ್ಮಧ್ಯೇ ಏಕಸ್ಯ ಉಪಲಕ್ಷಣತ್ವಂ। ತಥಾಪಿ ಇದಂತಾವಿಶಿಷ್ಟಸ್ಯ ಉಪಲಕ್ಷಣೀಭೂತ ತತ್ಕಾಲ ಸಂಬಂಧೋ ವಾ ತತ್ತೋಪಲಕ್ಷಿತಾಭೇದೋ ವಾ, ತತ್ತಾವಿಶಿಷ್ಟಸ್ಯ ಉಪಲಕ್ಷಣೀಭೂತಇದಂತಾಸಂಬಂಧೋ ವಾ ಇದಂತೋಪಲಕ್ಷಿತಾಭೇದೋ ವಾ ಬೋಧ್ಯತಾಂ। ನ ಚೈತಾವತಾ ವಾಕ್ಯಸ್ಯಾಖಂಡಾರ್ಥತ್ವಂ। ಉಪಲಕ್ಷಣಸ್ಯ ಕಾಕಾದೇಃ ಸ್ವಯಂ ಪ್ರಕಾರತ್ವೇನ, ಪ್ರಕಾರಾಂತರೋಪಸ್ಥಾಪಕತ್ವೇನ ವಾ ನಿಷ್ಪ್ರಕಾರಕತ್ವರೂಪ-ಅಖಂಡಾರ್ಥತ್ವ ವಿರೋಧಿತ್ವಾತ್। ಏಕಸ್ಯ ಉಪಲಕ್ಷಣತ್ವೇಽಪಿ ಅನ್ಯಸ್ಯ ವಿಶೇಷಣತ್ವಾಚ್ಚ॥**



नाप्युपलक्षणत्वमात्रेण तद्वाचिशब्दानां लाक्षणिकत्वम् । वृत्तिविशेषरूपलक्षणाया व्यावर्तकविशेषरूपोपलक्षणस्य च भिन्नत्वात्। दृश्यते हि घटस्याभावः जटाभिस्तापस इत्यादावभावादिकं प्रति घटादेरुपलक्षणत्वेऽपि घटादिशब्दस्यालाक्षणिकत्वम् । दृश्यते च दंड्यभिप्रायेण प्रयुक्ते दंडमानयेत्यत्र दंडशब्दस्य दंडिनि लाक्षणिकत्वेऽपि दंडस्यानुपलक्षणत्वम् ।

वरं चोभयपदलक्षणात एकपदलक्षणा ।

नचेदंताविशिष्टस्य तत्तया तत्ताविशिष्टस्य चेदंतया कदाप्यसंबंधान्न ते प्रति तयोरूपलक्षणतेति वाच्यम् । तयोस्ताभ्यां विशेष्यद्वारा संबंधात् । परंपरासंबधिनोऽप्युपलक्षणत्वात् ।

ननु तत्तादीनामुपलक्षणत्वे सोऽयमित्यत्र तच्छब्दादेर्लाक्षणिकत्वं स्यात् । तदर्थस्यान्वयप्रतियोगित्वाभावात् । इदमेव हि पदस्य लाक्षणिकत्वं यत्स्वशक्यार्थ-

स्यान्वयप्रतियोगित्वाभाव इत्याशंक्य किं लक्षणोपलक्षणयोरभेद इत्युच्यते किं वोपलक्षणत्वेन तद्वाचकशब्दस्य लक्षणावश्यकीति । नाद्य इत्याह— **वृत्तिविशेषरूपेति** ।। अंत्य आह— **दृश्यते हीति** ।। अस्तु वैकपदे लक्षणा । तथापि सर्वपदलक्षणायाः गौरवात् न त्वदिष्टसिद्धिरिति प्रौढिवादेनाप्याह— **वरं चेति** ।। ननु विशिष्टं पदार्थांतरमिति मते यत्र विशिष्टे यस्योपलक्षणत्वं तेन तस्य कदाप्यसंबंधात् नोपलक्षणत्वम् । विशेष्यमात्रसंबंधित्वं तु अकिंचित्करमित्यत आहं— **परंपरेति** ।। संबद्धत्वस्यैवोपलक्षणत्वे तंत्रत्वादिति भावः ।



'ಸೋಽಯಂ ಎಂಬಲ್ಲಿ ತತ್ತಾ ಅಥವಾ ಇದಂತ್ವವು ಉಪಲಕ್ಷಣವಾದರೆ ಸಃ ಅಥವಾ ಅಯಂ ಶಬ್ದವು ಲಾಕ್ಷಣಿಕವಾದೀತು. ಏಕೆಂದರೆ ಉಪಲಕ್ಷಣವಾದ ತತ್ತಾ ಅಥವಾ ಇದಂತಾವು ವಿಶೇಷ್ಯಾನ್ವಯಿಯಾದ ವಿಧೇಯದಲ್ಲಿ ಅನ್ವಯ ಪ್ರತಿಯೋಗಿಯಾಗುವುದಿಲ್ಲ. ಪದದ ಶಕ್ಯಾರ್ಥವು ಅನ್ವಯಪ್ರತಿಯೋಗಿಯಾಗದಿರುವುದೇ ಪದದ ಲಾಕ್ಷಣಿಕತ್ವ' ಎಂದು ಅದ್ವೈತಿ ಹೇಳಿದರೆ ನಾವು ಕೇಳಬೇಕು—

ಲಕ್ಷಣಾ ಮತ್ತು ಉಪಲಕ್ಷಣಗಳಿಗೆ ಅಭೇದವೆಂದು ನಿನ್ನ ಅಭಿಪ್ರಾಯವೆ? ಅಥವಾ ಅರ್ಥ ಉಪಲಕ್ಷಣವಾದರೆ ತದ್ವಾಚಕ ಪದಕ್ಕೆ ಲಕ್ಷಣಾ ಆವಶ್ಯಕವೆಂದೆ?

ಅರ್ಥವು ಉಪಲಕ್ಷಣವಾದ ಮಾತ್ರಕ್ಕೆ ತದ್ವಾಚಕಪದಕ್ಕೆ ಲಕ್ಷಣಾ ಅದೇ ಎಂದೇನಿಲ್ಲ. ಶಬ್ದದ ವ್ಯಾಪಾರಗಳು ಶಕ್ತಿ ಮತ್ತು ಲಕ್ಷಣಾ ಎಂಬ ಎರಡು ವೃತ್ತಿಗಳು. ಅವುಗಳಲ್ಲಿ ಲಕ್ಷಣಾ ಒಂದು ವೃತ್ತಿಯೆನಿಸಿದೆ. ವ್ಯಾವರ್ತಕಗಳು ಎರಡು, ವಿಶೇಷಣ ಮತ್ತು ಉಪಲಕ್ಷಣಗಳು ಎಂದು. ಅವುಗಳಲ್ಲಿ ಉಪಲಕ್ಷಣವು ಒಂದು ಬಗೆಯ ವ್ಯಾವರ್ತಕ. ಆದರಿಂದ ಲಕ್ಷಣಾ ಮತ್ತು ಉಪಲಕ್ಷಣಗಳು ಒಂದೇ ಅಲ್ಲ, ಬೇರೆಬೇರೆಯೆ.

ಅರ್ಥವು ಉಪಲಕ್ಷಣವಾದ ಮಾತ್ರಕ್ಕೇ ತದ್ವಾಚಕ ಪದವು ಲಾಕ್ಷಣಿಕವಾಗಲೇಬೇಕು ಎಂದಾಗುವುದಿಲ್ಲ. ಪದವು ಲಾಕ್ಷಣಿಕವಾದ ಮಾತ್ರಕ್ಕೆ ಅರ್ಥವು ಉಪಲಕ್ಷಣವಾಗಲೇಬೇಕು ಎಂದೂ ಆಗುವುದಿಲ್ಲ. ಉದಾ: 'ಘಟದ ಅಭಾವ' ಎಂಬಲ್ಲಿ ಅಭಾವಕ್ಕೆ ಘಟ ಉಪಲಕ್ಷಣ. ಅಭಾವವು ವಿಧೇಯದಲ್ಲಿ ಅನ್ವಯಿಸುವಾಗ ಪ್ರತಿಯೋಗಿಯೂ ಕೂಡ ಅನ್ವಯಿಸುವ ನಿಯಮವಿಲ್ಲ. ಅಭಾವಕ್ಕೆ ಸಂಬಂಧಿಯಾಗಿರುವ ಪ್ರತಿಯೋಗಿಯು ಸದಾ ಇರುವುದೂ ಇಲ್ಲ. 'ಜಟಾಭಿಸ್ತಾಪಸಃ' 'ಜಟೆ ಉಳ್ಳವನು ತಪಸ್ವಿ' ಇಲ್ಲಿ ಜಟೆ ತಪಸ್ವಿಗೆ ಉಪಲಕ್ಷಣ. ಅದಕ್ಕೂ ವಿಧೇಯಾನ್ವಯಿತ್ವ, ಸದಾ ವಿದ್ಯಮಾನತ್ವಗಳಿಲ್ಲ. ಆದರೂ ಘಟಾದಿ ಜಟಾದಿಶಬ್ದಗಳು ಲಾಕ್ಷಣಿಕ ಅಖಂಡಾರ್ಥ

ಪರವಾಗುವುದಿಲ್ಲ. 'ದಂಡಧಾರಕನನ್ನು ಕರೆತಾ' ಎನ್ನುವ ತಾತ್ಪರ್ಯದಿಂದ 'ದಂಡ'ವನ್ನು ತಾರೆಂದರೆ ದಂಡಪದವು ದಂಡಧಾರಿಯಲ್ಲಿ ಲಾಕ್ಷಣಿಕವಾದರೂ ದಂಡವು ವಿಶೇಷಣವೇ ಹೊರತು ಉಪಲಕ್ಷಣವೆನಿಸುವುದಿಲ್ಲ—

**ನಾಪ್ಯುಪಲಕ್ಷಣತ್ವ ಮಾತ್ರೇಣ ತದ್ವಾಚಿಶಬ್ದಾನಾಂ ಲಾಕ್ಷಣಿಕತ್ವಂ। ವೃತ್ತಿವಿಶೇಷರೂಪ ಲಕ್ಷಣಾಯಾ ವ್ಯಾವರ್ತಕ ವಿಶೇಷರೂಪೋಪಲಕ್ಷಣಸ್ಯ ಚ ಭಿನ್ನತ್ವಾತ್। ದೃಶ್ಯತೇ ಹಿ ಘಟಸ್ಯಾಭಾವಃ ಜಟಾಭಿಸ್ತಾಪಸಃ ಇತ್ಯಾದೌ ಅಭಾವಾದಿಕಂ ಪ್ರತಿ ಘಟಾದೇರುಪಲಕ್ಷಕತ್ವೇಽಪಿ ಘಟಾದಿಶಬ್ದಸ್ಯಾಲಾಕ್ಷಣಿಕತ್ವಂ। ದೃಶ್ಯತೇ ಚ ದಂಡ್ಯಭಿಪ್ರಾಯೇಣ ಪ್ರಯುಕ್ತೇ 'ದಂಡಮಾನಯ' ಇತ್ಯತ್ರ ದಂಡಶಬ್ದಸ್ಯ ದಂಡಿನಿ ಲಾಕ್ಷಣಿಕತ್ವೇಽಪಿ ದಂಡಸ್ಯ ಅನುಪಲಕ್ಷಣತ್ವಂ।**

ಉಪಲಕ್ಷಣವಾಚಕಶಬ್ದವನ್ನು ಲಾಕ್ಷಣಿಕವೆಂದಿಟ್ಟುಕೊಂಡರೂ ಅದ್ವೈತಿ ಹೇಳುವಂತೆ ತತ್ತಾವಾಚಕ 'ಸಃ' ಎಂಬ ಪದ ಮತ್ತು ಇದಂತಾ ವಾಚಕವಾದ ಅಯಂ ಎಂಬ ಪದ ಹೀಗೆ ಎರಡೂ ಪದಗಳನ್ನು ಲಾಕ್ಷಣಿಕ ಎನ್ನುವುದು ಗೌರವ. ಅದಕ್ಕಿಂತ ಯಾವುದಾದರೂ ಒಂದು ಪದವನ್ನು ಲಾಕ್ಷಣಿಕ ಎಂದು ಸ್ವೀಕರಿಸುವುದು ಒಳ್ಳೆಯದು. ಅಲ್ಲಿಯೇ ಇರುವ ವಿಶೇಷಣ ವಾಚಕಶಬ್ದವು ಅಲಾಕ್ಷಣಿಕವೇ ಆಗಿರುವುದರಿಂದ ಸೋಽಯಂ ಎಂಬುದು ಅಖಂಡಾರ್ಥ ಪರವಾಗುವುದಿಲ್ಲ.

**ವರಂ ಚೋಭಯಪದಲಕ್ಷಣಾತಃ ಏಕಪದಲಕ್ಷಣಾ।**

'ವಿಶಿಷ್ಟವು ಪದಾರ್ಥಾಂತರ ಎಂಬ ಪಕ್ಷದಲ್ಲಿ ಯಾವ ವಿಶಿಷ್ಟದಲ್ಲಿ ಯಾವುದು ಉಪಲಕ್ಷಣವೋ ಆ ವಿಶಿಷ್ಟದಲ್ಲಿ ಅದು ಎಂದಾದರೂ ಸಂಬಂಧಿಸಿರಬೇಕು. ಎಂದೂ ಸಂಬಂಧಿಸಿರದೇ ಇರುವುದು ಉಪಲಕ್ಷಣವಾಗಲಾರದು. ದೇವದತ್ತಗೃಹದಲ್ಲಿ ಕಾಕವು ಕದಾಚಿತ್ ಸಂಬಂಧಿಸಿರುವುದರಿಂದ ಉಪಲಕ್ಷಣವೆನಿಸಿದೆ. ಪ್ರಕೃತ ಇದಂತಾ ವಿಶಿಷ್ಟದಲ್ಲಿ ತತ್ತಾವು ಎಂದೂ ಸಂಬಂಧಿಸಿಲ್ಲ. ತತ್ತಾ ವಿಶಿಷ್ಟದಲ್ಲಿ ಇದಂತ್ವವೂ ಎಂದೂ ಸಂಬಂಧಿಸಿಲ್ಲವೆಂದಮೇಲೆ ಅವು ಆ ವಿಶಿಷ್ಟಗಳಿಗೆ ಹೇಗೆ ಉಪಲಕ್ಷಣವೆನಿಸುವುವು?' ಎಂಬ ಆಕ್ಷೇಪಬರುತ್ತದೆ. ಇದು ಸರಿಯಲ್ಲ.

ಯದ್ಯಪಿ ಅವು ಆ ವಿಶಿಷ್ಟಗಳಿಗೆ ಸಾಕ್ಷಾತ್ತಾಗಿ ಸಂಬಂಧಿಸಿಲ್ಲವಾದರೂ ವಿಶೇಷ್ಯದ್ವಾರಾ ಸಂಬಂಧಿಸಿವೆ. 'ಆದರೂ ಸಾಕ್ಷಾತ್ತಾಗಿ ಅವು ವಿಶೇಷ್ಯಮಾತ್ರಕ್ಕೇ ಸಂಬಂಧಿಸಿದರೆ ಅದರಿಂದೇನೂ ಉಪಯೋಗವಿಲ್ಲ' ಈ ಆಕ್ಷೇಪವೂ ಸರಿಯಲ್ಲ. ವಿಶಿಷ್ಟಗಳು ಪರಸ್ಪರ ಬೇರೆಯಾದರೂ ಉಪಲಕ್ಷ್ಯವಾದ ಇದಂತಾವಿಶಿಷ್ಟದಲ್ಲಿ ವಿಶೇಷ್ಯವಾಗಿರುವ ದೇವದತ್ತ ಸ್ವರೂಪದಲ್ಲಿ ಉಪಲಕ್ಷಣವಾದ ತತ್ತಾದ ಸಂಬಂಧವಿರುವುದರಿಂದ ಸ್ವವಿಶೇಷ್ಯಸಂಬಂಧಿತ್ವ ರೂಪವಾದ ಪರಂಪರಾ ಸಂಬಂಧವು ಇದಂತಾವಿಶಿಷ್ಟಕ್ಕೆ ತತ್ತಾದಿಂದ ಇದ್ದೇ ಇದೆ. ಹಾಗೇ ಉಪಲಕ್ಷ್ಯ ತತ್ತಾವಿಶಿಷ್ಟಕ್ಕೂ ಉಪಲಕ್ಷಣವಾದ ಇದಂತ್ವದಿಂದ ಸ್ವವಿಶೇಷ್ಯಸಂಬದ್ಧತ್ವರೂಪ ಪರಂಪರಾ ಸಂಬಂಧವಿದ್ದೇ ಇದೆ.

ಉಪಲಕ್ಷ್ಯ ಸಂಬಂಧಿತ್ವವು ಉಪಲಕ್ಷಣಕ್ಕೆ ಬೇಕು ಹೊರತು ಸಾಕ್ಷಾತ್ ಸಂಬಂಧವೇ ಬೇಕು ಎನ್ನಬಾರದು. ಹಾಗೆ ಹೇಳಿದರೆ ಗೌರವ. ಆದರಿಂದ ಏಕಪದ ಲಕ್ಷಣಾ ಕೂಡುತ್ತದೆ—

ನ ಚೇದಂತಾವಿಶಿಷ್ಟಸ್ಯ ತತ್ತಯಾ, ತತ್ತಯಾ ವಿಶಿಷ್ಟಸ್ಯ ಚ ಇದಂತಯಾ ಕದಾಪ್ಯಸಂಬಂಧಾತ್, ನ ತೇ ಪ್ರತಿ ತಯೋರುಪಲಕ್ಷಣತಾ ಇತಿ ವಾಚ್ಯಂ। ತಯೋಸ್ತಾಭ್ಯಾಂ ವಿಶೇಷ್ಯದ್ವಾರಾ ಸಂಬಂಧಾತ್। ಪರಂಪರಾ ಸಂಬಂಧಿನೋಽಪಿ ಉಪಲಕ್ಷಣತ್ವಾತ್ !



यद्वा इदंतोपलक्षितस्य तत्तावैशिष्ट्यं वा तत्ताविशिष्टाभेदो वा तत्तोपलक्षितस्येदंतावैशिष्ट्यं वा इदंताविशिष्टाभेदो वा बोध्यताम् ।

ननु यद्यपीदंतया तत्तया वोपलक्षितस्य विशेष्यस्य तत्तावैशिष्ट्यं वा इदंतावैशिष्ट्यं वा युक्तम् । विशेष्ये विशेषणांतरान्वयात् । अभेदपक्षौ तु न युक्तौ । अनुवृत्तव्यावृत्तयोर्विशेष्यविशिष्टयोरभेदायोगादिति चेन्न । समवायस्थाने भेदाभेदावित्यावयोर्मतेऽनुवृत्तव्यावृत्तयोरपि तयोः पर्वतोऽग्निमानिति धीबलाज्जातिव्यक्त्योरिव मृद्घटयोरिव चाभेदस्यापि सत्त्वात् । अन्यथा पर्वतोऽग्निमानिति लैंगिकी धीरपि निर्विकल्पिका स्यात् । केवलाभेदस्तु परिणामिनि देवदत्तपिंडेऽपि नास्त्येव ।

ननु परंपरासंबंधिनोऽप्युपलक्षणत्वे मैत्रगृहसंबंधिनोऽपि काकस्य चैत्रगृहव्यावर्तकत्वं स्यादित्यस्वरसादाह— **यद्वेति** ।। तथाच तत्तादीनां विशेष्यमात्रएवोपलक्षणत्वात् तत्संबंधित्वमुपलक्षणस्य साक्षादस्तीति न प्रागुक्तदोष इति भावः । विशेषणांतरान्वयादित्यस्यानंतरं तथापीति शेषः ।। **निर्विकल्पिका स्यादिति** ।। अनुवृत्ताग्निमदभेदावगाहिनी न स्यादित्यर्थः । किंच सोऽयं देवदत्त इत्यत्र तत्तेदंतात्यागेऽपि व्यावृत्तानुवृत्तयोरेवाभेदः स्वीकार्यः । तत्राप्यद्य परिचितस्य देवदत्तपिंडस्य पूर्वानुभूताद्व्यावृत्तत्वादित्याह— **केवलाभेदिस्त्वति** ।



'ಪರಂಪರಾಸಂಬಂಧಿಯೂ ಉಪಲಕ್ಷಣವಾಗಬಹುದು ಎಂದರೆ ಮೈತ್ರಗೃಹಕ್ಕೆ ಸಂಬಂಧಿಸಿದ ಕಾಕವು ಪರಂಪರಾ ಸಂಬಂಧದಿಂದ ಚೈತ್ರಗೃಹಕ್ಕೆ ವ್ಯಾವರ್ತಕವಾಗುವ ಪ್ರಸಂಗವಿದೆ. ಆದರಿಂದ ಉಪಲಕ್ಷ್ಯದಿಂದ ಸಾಕ್ಷಾತ್ ಸಂಬಂಧವೆ ಉಪಲಕ್ಷಣಕ್ಕೆ ಬೇಕು. ಗೌರವವು ಇಲ್ಲಿ ದೋಷವಲ್ಲ' ಎಂದರೆ, ಹಿಂದೆ ಹೇಳಿದಂತೆ ವಿಶಿಷ್ಟವನ್ನು ಉದ್ದೇಶಿಸಿ ಉಪಲಕ್ಷಣ ಸಂಬಂಧವನ್ನು ವಿಧಾನ ಮಾಡುವುದಕ್ಕಿಂತ ಉಪಲಕ್ಷಿತವನ್ನು ಉದ್ದೇಶಿಸಿ ವಿಶೇಷಣಸಂಬಂಧವನ್ನು ಅಥವಾ ವಿಶಿಷ್ಟಾಭೇದವನ್ನು ವಿಧಾನಮಾಡುವ ಪಕ್ಷವಿಟ್ಟುಕೊಳ್ಳೋಣ. ಇದಂತೋಪಲಕ್ಷಿತವಾದ ವಿಶೇಷ್ಯಸ್ವರೂಪಕ್ಕೆ ತತ್ತಾರೂಪ ವಿಶೇಷಣವೈಶಿಷ್ಟ್ಯವಿಧಾನ ಅಥವಾ ತತ್ತಾವಿಶಿಷ್ಟಾಭೇದ ವಿಧಾನ. ತತ್ತೋಪಲಕ್ಷಿತ ವಿಶೇಷ್ಯಕ್ಕೆ ಇದಂತಾ ವೈಶಿಷ್ಟ್ಯವಿಧಾನ ಅಥವಾ ಇದಂತಾವಿಶಿಷ್ಟಾಭೇದವಿಧಾನ. ಈಗ ತತ್ತಾರೂಪವಾದ ಅಥವಾ ಇದಂತ್ವರೂಪವಾದ ಉಪಲಕ್ಷಣಕ್ಕೆ ಉಪಲಕ್ಷ್ಯವಾದ ವಿಶೇಷ್ಯದಲ್ಲಿ ಸಾಕ್ಷಾತ್ ಸಂಬಂಧವೆ ಇದೆ. ಆದರಿಂದ ಹಿಂದೆ ಹೇಳಿದ ಅತಿಪ್ರಸಕ್ತಿ ಇಲ್ಲ—

**ಯದ್ವಾ ಇದಂತೋಪಲಕ್ಷಿತಸ್ಯ ತತ್ತಾವೈಶಿಷ್ಟ್ಯಂ, ತತ್ತಾವಿಶಿಷ್ಟಾಭೇದೋ ವಾ, ತತ್ತೋಪಲಕ್ಷಿತಸ್ಯ ಇದಂತಾವೈಶಿಷ್ಟ್ಯಂ, ಇದಂತಾವಿಶಿಷ್ಟಾಭೇದೋ ವಾ ಬೋಧ್ಯತಾಂ।**

ಯದ್ಯಪಿ ಇದಂತೋಪಲಕ್ಷಿತವಾದ ವಿಶೇಷ್ಯಕ್ಕೆ ತತ್ತಾವೈಶಿಷ್ಟ್ಯ ವಿಧಾನವು ಕೂಡುತ್ತದೆ. ತತ್ತೋಪಲಕ್ಷಿತವಾದ ವಿಶೇಷ್ಯಕ್ಕೆ ಇದಂತಾವೈಶಿಷ್ಟ್ಯ ವಿಧಾನವೂ ಕೂಡುತ್ತದೆ. ಒಂದು ವಿಶೇಷ್ಯದಲ್ಲಿ ಅನೇಕ ವಿಶೇಷಣ ವೈಶಿಷ್ಟ್ಯ ಬರಬಹುದು. ಆದರೆ ವಿಶಿಷ್ಟಾಭೇದ ವಿಧಾನವೆನ್ನುವ ಪಕ್ಷಗಳು—ಇದಂತೋಪಲಕ್ಷಿತದಲ್ಲಿ ತತ್ತಾವಿಶಿಷ್ಟಾಭೇದವಿಧಾನ ಮತ್ತು ತತ್ತೋಪಲಕ್ಷಿತದಲ್ಲಿ ಇದಂತಾವಿಶಿಷ್ಟಾಭೇದವಿಧಾನವೆನ್ನುವ ಅಭೇದಪಕ್ಷಗಳು ಮಾತ್ರ ಕೂಡುವುದಿಲ್ಲ. ಏಕೆಂದರೆ ವಿಶೇಷ್ಯವು ಅನುವೃತ್ತ ಅಂದರೆ ಅನೇಕ ವಿಶಿಷ್ಟಗಳಲ್ಲಿ ಅನುಗತ. ವಿಶಿಷ್ಟವು ವ್ಯಾವೃತ್ತ, ಅನನುಗತ. ತತ್ತೋಪಲಕ್ಷಿತವಾದ ಅಥವಾ ಇದಂತೋಪಲಕ್ಷಿತವಾದ ವಿಶೇಷ್ಯವು ಅನುಗತ. ಅದರಲ್ಲಿ ವ್ಯಾವೃತ್ತವಾದ ಇದಂತಾವಿಶಿಷ್ಟದ ಅಭೇದ ಅಥವಾ ತತ್ತಾವಿಶಿಷ್ಟದ ಅಭೇದ ಕೂಡುವುದಿಲ್ಲ. ಆದರಿಂದ ಅಭೇದವಿಧಾನ ಮಾಡುವ ಪಕ್ಷಗಳೆರಡೂ ಅಯುಕ್ತ ಎಂಬ ಆಕ್ಷೇಪ ಬರುತ್ತದೆ. ಆದರೆ ಇದು ಸರಿಯಲ್ಲ,

ಅನುವೃತ್ತವ್ಯಾವೃತ್ತಗಳಿಗೆ ಕೇವಲ ಭೇದವಲ್ಲ. ಭೇದಾಭೇದಗಳಿವೆ ಎನ್ನಬೇಕು. ಅನುವೃತ್ತವಾದ ಜಾತಿಗೂ ವ್ಯಾವೃತ್ತವಾದ ವ್ಯಕ್ತಿಗೂ, ಅನುವೃತ್ತವಾದ ಮೃತ್ತಿಗೂ ವ್ಯಾವೃತ್ತವಾದ ಘಟಕ್ಕೂ ತಾರ್ಕಿಕರು ಸಮವಾಯ ಸಂಬಂಧವನ್ನು ಹೇಳುತ್ತಾರೆ. ಅದರ ಸ್ಥಾನದಲ್ಲಿ ದ್ವೈತಿ ಅದ್ವೈತಿಗಳಿಬ್ಬರೂ ಭೇದಾಭೇದವನ್ನು ಒಪ್ಪಿದ್ದಾರೆ. ಹಾಗೇ ಅನುವೃತ್ತವಾದ ವಿಶೇಷ್ಯವಾದ ಪರ್ವತಕ್ಕೂ ವ್ಯಾವೃತ್ತವಾದ ಅಗ್ನಿವಿಶಿಷ್ಟಕ್ಕೂ ಭೇದಾಭೇದವೆ. ಕೇವಲ ಭೇದವಲ್ಲ, 'ಪರ್ವತಃ ಅಗ್ನಿಮಾನ್' ಎಂದು ಅಬಾಧಿತವಾದ ಸಾಮಾನಾಧಿಕರಣ್ಯ ಪ್ರತೀತಿ ಇರುವುದರಿಂದ ಅಭೇದವೂ ಇದೆ, ಅನುವೃತ್ತತ್ವವ್ಯಾವೃತ್ತತ್ವರೂಪ ವಿರುದ್ಧ ಧರ್ಮಗಳೂ ಇರುವುದರಿಂದ ಭೇದವೂ ಇದೆ. ಕೇವಲ

ಭೇದವನ್ನೇ ಇಲ್ಲಿ ಹೇಳಿದರೆ 'ಪರ್ವತಃ ಅಗ್ನಿಮಾನ್' ಎಂಬ ಅನುಮಿತಿಯೂ ಕೂಡ ಅಭೇದವನ್ನು ತ್ಯಾಗಮಾಡಿ ಕೇವಲ ಪರ್ವತಸ್ವರೂಪವನ್ನೇ ವಿಷಯೀಕರಿಸುವ ನಿರ್ವಿಕಲ್ಪಕ ಜ್ಞಾನವೆನಿಸೀತು. ನಿರ್ವಿಕಲ್ಪಕವಾದ ಅನುಮಿತಿ ಜ್ಞಾನವಿಲ್ಲ. ಪ್ರಕೃತದಲ್ಲಿ ಇದಂತೋಪಲಕ್ಷಿತದಲ್ಲಿ ತತ್ತಾವಿಶಿಷ್ಟದಿಂದ ಭೇದಾಭೇದವಿರುವುದರಿಂದ ನಾವು ವಿಶಿಷ್ಟಾಭೇದವನ್ನು ಹೇಳಿದರೆ ತಪ್ಪಾಗುವುದಿಲ್ಲ. ಕೇವಲಾಭೇದವನ್ನು ನಾವು ಹೇಳುವುದಿಲ್ಲ.

ಭೇದವಿರುವಲ್ಲಿ ಅಭೇದವನ್ನು ಹೇಳಬಾರದೆಂದು ಆಗ್ರಹಿಸಿದರೆ ಅದ್ವೈತಿಗೂ ತತ್ತೋಪಲಕ್ಷಿತ ಇದಂತೋಪಲಕ್ಷಿತ ದೇವದತ್ತ ಶರೀರಗಳಿಗೆ ತತ್ತಾಇದಂತಾ ತ್ಯಾಗ ಮಾಡಿದರೂ ಅಭೇದವನ್ನು ಹೇಳಲು ಶಕ್ಯವಾಗಲಾರದು. ಏಕೆಂದರೆ ದೇವದತ್ತ ಶರೀರ ಪ್ರತಿಕ್ಷಣಪರಿಣಾಮಿಯಾಗಿರುವುದರಿಂದ ತತ್ತೋಪಲಕ್ಷಿತವಾದ ಪೂರ್ವಾನುಭೂತವಾದ ದೇವದತ್ತಶರೀರಕ್ಕೂ ಇದಂತೋಪಲಕ್ಷಿತವಾದ ಈಗಿನ ದೇವದತ್ತಶರೀರಕ್ಕೂ ಪರಿಣಾಮಗಳಾಗಿರುವುದರಿಂದ ಭೇದವಿದೆ. ಕೇವಲಾಭೇದವಿಲ್ಲ. ಆದರಿಂದ ಹಿಂದಿನ ಅನುವೃತ್ತಶರೀರಕ್ಕೂ ಈಗಿನ ವ್ಯಾವೃತ್ತಶರೀರಕ್ಕೂ ಭೇದಾಭೇದವಿರುವುದರಿಂದಲೇ ಉಪಲಕ್ಷಿತ ವಿಶಿಷ್ಟಗಳಿಗೆ ಅಭೇದ ತಾತ್ಪರ್ಯದಿಂದಲೆ 'ಸೋಯಂ' ಎನ್ನಬೇಕು. ಆಗ ಅದು ಅಭೇದಪ್ರಕಾರಕಬೋಧಜನಕವಾಗುವುದರಿಂದ ಅಖಂಡಾರ್ಥಪರತ್ವವನ್ನು ಹೇಳುವುದು ಅದ್ವೈತಿಗೆ ಶಕ್ಯವಿಲ್ಲ—

ನನು ಯದ್ಯಪಿ ಇದಂತಯಾ ತತ್ತಯಾ ವಾ ಉಪಲಕ್ಷಿತಸ್ಯ ವಿಶೇಷ್ಯಸ್ಯ ತತ್ತಾವೈಶಿಷ್ಟ್ಯಂ ವಾ ಇದಂತಾವೈಶಿಷ್ಟ್ಯಂ ವಾ ಯುಕ್ತಂ। ವಿಶೇಷ್ಯೇ ವಿಶೇಷಣಾಂತರಾನ್ವಯಾತ್। ಅಭೇದಪಕ್ಷೇ ತು ನ ಯುಕ್ತೌ। ಅನುವೃತ್ತ ವ್ಯಾವೃತ್ತಯೋಃ ವಿಶೇಷ್ಯ ವಿಶಿಷ್ಟಯೋಃ ಅಭೇದಾಯೋಗಾತ್ ಇತಿ ಚೇನ್ನ।

ಸಮವಾಯ ಸ್ಥಾನೇ ಭೇದಾಭೇದಾವಿತಿ ಆವಯೋರ್ಮತೇ ಅನುವೃತ್ತ ವ್ಯಾವೃತ್ತ-ಯೋರಪಿ ತಯೋಃ 'ಪರ್ವತೋऽಗ್ನಿಮಾನ್' ಇತಿಧೀಬಲಾತ್ ಜಾತಿವ್ಯಕ್ತ್ಯೋರಿವ, ಮೃದ್ಘಟಯೋರಿವ ಚ ಅಭೇದಸ್ಯಾಪಿ ಸತ್ತ್ವಾತ್। ಅನ್ಯಥಾ 'ಪರ್ವತೋऽಗ್ನಿಮಾನ್' ಇತಿ ಲೈಂಗಿಕೀಧೀರಪಿ ನಿರ್ವಿಕಲ್ಪಿಕಾ ಸ್ಯಾತ್।

ಕೇವಲಾಭೇದಸ್ತು ಪರಿಣಾಮಿನಿ ದೇವದತ್ತಪಿಂಡೇऽಪಿ ನಾಸ್ತ್ಯೇವ ।



यद्वा तत्तोपलक्षितस्य इदंतोपलक्षितेन वा इदंतोपलक्षितस्य तत्तोपलक्षितेन वा ऐक्यं बोध्यताम् । नचैतावताऽखंडार्थत्वादि-कमित्युक्तम् । तदेतदभिप्रेत्योक्तं ''अनित्यदेशकालसंबंधस्य सत्त्वान्न सोऽयं देवदत्त इत्याद्युपमा च''इति ।

टीकायां तु तद्देशकालसंबंधमात्रं न तत्ता, किंतु तद्ध्वंसः, स चेदानीमस्ति। एवंच पक्षत्रयेऽपि न दोष इत्युक्तम्। तद्वस्तुस्थितिप्रदर्शनार्थम्। तत्तेदंतयोर्न केवलं बाल्ययौवनवत्सामानाधिकरण्यमात्रं किंतु नीलत्वोत्पलत्ववत्समानकालत्वमपीति प्रदर्शनार्थं च। नतु सखंडार्थत्वार्थम्। उक्तरीत्यान्यथापि तत्सिद्धेः। परेण तद्देशकालसंबद्ध एतद्देशकालसंबद्ध इत्यस्मिन्नुदाहृते टीकोक्तप्रकाराप्रसराच्च।

**अनित्यदेशकालेति ।।** उपलक्षणीभूततत्संबंधयोः प्रतीयमानत्वादित्यर्थः। नन्वेतट्टीकाविरुद्धम्। अनुभूतकालध्वंस एव तत्तेत्युक्त्यानुभूतकालस्य तत्तात्वे अखंडार्थत्वापरिहार इत्याशयप्रतीतेरित्याशंक्य तदभिप्रायकथनाय टीकोक्तमनुवदति– **टीकायां त्विति ।।** ननु टीकोक्तप्रकारेणैवोपपत्तौ किमेवंविधकल्पनयेत्याशंक्य अस्मदुक्तप्रकारोऽप्यवश्यमपेक्षणीय इत्याह— **परेणेति ।**



ಅಥವಾ ಅದ್ವೈತಿಯು ಹೇಳುವಂತೆಯೇ ತತ್ತೋಪಲಕ್ಷಿತ ದೇವದತ್ತನಿಗೆ ಇದಂತೋಪಲಕ್ಷಿತ ದೇವದತ್ತನಿಂದ ಐಕ್ಯ ಅಥವಾ ಇದಂತೋಪಲಕ್ಷಿತ ದೇವದತ್ತನಿಗೆ ತತ್ತೋಪಲಕ್ಷಿತ ದೇವದತ್ತನಿಂದ ಐಕ್ಯವೇ 'ಸೋಽಯಂ ದೇವದತ್ತಃ' ಎಂಬ ವಾಕ್ಯದ ಅರ್ಥ ಎನ್ನೋಣ. ಇಷ್ಟರಿಂದಲೇ ಅಖಂಡಾರ್ಥತ್ವಾದಿ ಸಿದ್ಧವಾಗುತ್ತದೆ ಎನ್ನುವಂತಿಲ್ಲ. ಏಕೆಂದರೆ ತತ್ತೋಪಲಕ್ಷಿತತ್ವ ಇದಂತೋಪಲಕ್ಷಿತತ್ವಗಳೇ ಪ್ರಕಾರವಾಗಿ ಕಾಣುವುದರಿಂದ ನಿಷ್ಪ್ರಕಾರಕಬೋಧಜನಕತ್ವವಿಲ್ಲ ಎಂದು ಹೇಳಿದ್ದೇವೆ. ಇದೇ ಅಭಿಪ್ರಾಯದಿಂದ ತತ್ತ್ವೋದ್ಯೋತವಾಕ್ಯ—'ಅನಿತ್ಯ ದೇಶಕಾಲ ಸಂಬಂಧಸ್ಯ ಸತ್ವಾನ್ನ ಸೋಽಯಂ ದೇವದತ್ತ ಇತ್ಯಾದ್ಯುಪಮಾ ಚ।' ಎಂದಿದೆ. 'ಅನಿತ್ಯವಾದ ಅಂದರೆ ಈಗ ಇಲ್ಲದಿರುವ ದೇಶಕಾಲಗಳಿಂದ ಉಪಲಕ್ಷಿತತ್ವಾದಿ ಸಂಬಂಧವು ದೇವದತ್ತನಲ್ಲಿ ಕಾಣುತ್ತಿರುವುದರಿಂದ 'ಸೋಽಯಂ ದೇವದತ್ತಃ' ಇತ್ಯಾದಿ ವಾಕ್ಯವು, 'ತತ್ವಮಸಿ' ಮುಂತಾದ ವಾಕ್ಯ ಅಖಂಡಾರ್ಥ ಪರವೆನ್ನಲು ದೃಷ್ಟಾಂತವಾಗಲಾರದು' ಎಂದರ್ಥ—

ಯದ್ವಾ ತತ್ತೋಪಲಕ್ಷಿತಸ್ಯ ಇದಂತೋಪಲಕ್ಷಿತೇನ ವಾ, ಇದಂತೋಪಲಕ್ಷಿತಸ್ಯ ತತ್ತೋಪಲಕ್ಷಿತೇನ ವಾ ಐಕ್ಯಂ ಬೋಧ್ಯತಾಂ। ನಚೈತಾವತಾ ಅಖಂಡಾರ್ಥತ್ವಾದಿಕಂ ಇತ್ಯುಕ್ತಂ। ತದೇತದಭಿಪ್ರೇತ್ಯೋಕ್ತಂ।—'ಅನಿತ್ಯದೇಶಕಾಲ ಸಂಬಂಧಸ್ಯ ಸತ್ವಾನ್ನ ಸೋಽಯಂ ದೇವದತ್ತ ಇತ್ಯಾದ್ಯುಪಮಾ ಚ।' ಇತಿ।

ಆದರೆ ತತ್ತ್ವೋದ್ಯೋತ ಟೀಕೆಯಲ್ಲಿ 'ತದ್ದೇಶಕಾಲಸಂಬಂಧಮಾತ್ರವೇ ತತ್ತಾ ಅಲ್ಲ, ಅದರ ಧ್ವಂಸವು ತತ್ತಾ. ಅದು ಈಗ ಇದೆ. ಅದರಿಂದ ಮೂರುಪಕ್ಷಗಳಲ್ಲಿಯೂ ಅನುಪಪತ್ತಿ ಇಲ್ಲ' ಎಂದಿದೆ. ಅದು ವಾಸ್ತವ ಸ್ಥಿತಿಯನ್ನು ತೋರಿಸುವ ಉದ್ದೇಶದ್ದು. ಮತ್ತು ತತ್ತಾಇದಂತಾಗಳು ಒಬ್ಬನೇ ದೇವದತ್ತನಲ್ಲಿ ಕೇವಲ ಬಾಲ್ಯಯೌವನಗಳಂತೆ ಏಕತ್ರ ಇವೆ ಎನ್ನಬೇಕಾಗಿಲ್ಲ. 'ನೀಲಮುತ್ಪಲಂ' ಎಂಬಲ್ಲಿ ನೀಲತ್ವ ಉತ್ಪಲತ್ವಗಳಂತೆ ಏಕಕಾಲದಲ್ಲಿಯೂ ಇವೆ ಎಂದು ತೋರಿಸುವ ಉದ್ದೇಶದಿಂದಲೂ ಟೀಕಾವಾಕ್ಯ ಹೊರಟಿದೆ. ತದ್ದೇಶಕಾಲ ಸಂಬಂಧಮಾತ್ರವೇ ತತ್ತಾ ಎಂದರೆ ಬಾಲ್ಯಯೌವನಗಳಂತೆ ತತ್ತಾ ಇದಂತಾಗಳು ದೇವದತ್ತನಲ್ಲಿ ಕೇವಲ ಕ್ರಮವಾಗಿ ಬರುತ್ತವೆ ಹೊರತು ಏಕಕಾಲದಲ್ಲಿ ಇರುವುದಿಲ್ಲ, ತದ್ದೇಶಕಾಲಧ್ವಂಸವನ್ನು ತತ್ತಾ ಎಂದಿಟ್ಟುಕೊಂಡರೆ ಅದು ದೇವದತ್ತನಲ್ಲಿ ಇದಂತಾದ ಜೊತೆಗೆ ಏಕಕಾಲದಲ್ಲಿ ಈಗ ಇದೆ ಎನ್ನಲೂ ಬರುತ್ತದೆ ಎಂದು ತೋರಿಸುವುದಕ್ಕಾಗಿ ಹಾಗೆ ಹೇಳಿದ್ದಾರೆ ಹೊರತು, 'ಧ್ವಂಸವಿವಕ್ಷೆ ಮಾಡದಿದ್ದರೆ ಅವುಗಳಿಗೆ ದೇವದತ್ತನಲ್ಲಿ ಸಾಮಾನಾಧಿಕರಣ್ಯ ಸರ್ವಥಾ ಬಾರದಿರುವುದರಿಂದ ಅದ್ವೈತಿಯು ಹೇಳುವಂತೆ ಅವುಗಳನ್ನು ತ್ಯಾಗಮಾಡಿ ಲಕ್ಷಣಯಾ ಅಖಂಡಾರ್ಥ ಬೋಧನವನ್ನು ಒಪ್ಪುವ ಪ್ರಸಂಗವಿದೆ, ಹಾಗಾಗಬಾರದೆಂದು ಸಖಂಡಾರ್ಥತ್ವವನ್ನು ಉಪಪಾದನ ಮಾಡುವುದಕ್ಕಾಗಿ ಧ್ವಂಸವಿವಕ್ಷೆಯನ್ನು ಮಾಡಿದ್ದಾರೆ' ಎನ್ನಬಾರದು. ಏಕೆಂದರೆ ಹಿಂದೆ ಹೇಳಿದಂತೆ ಅನೇಕ ರೀತಿಗಳಿಂದ, ಧ್ವಂಸ ವಿವಕ್ಷೆ ಮಾಡದೆಯೇ, ಸಖಂಡಾರ್ಥತ್ವದ ಉಪಪಾದನವು ಶಕ್ಯವಿದೆ—

**ಟೀಕಾಯಾಂ ತು 'ತದ್ದೇಶಕಾಲ ಸಂಬಂಧ ಮಾತ್ರಂ ನ ತತ್ತಾ। ಕಿಂತು ತದ್ಧ್ವಂಸಃ। ಸ ಚೇದಾನೀಮಸ್ತಿ। ಏವಂಚ ಪಕ್ಷತ್ರಯೇಽಪಿ ನ ದೋಷಃ।' ಇತ್ಯುಕ್ತಂ। ತದ್ ವಸ್ತುಸ್ಥಿತಿ ಪ್ರದರ್ಶನಾರ್ಥಂ। ತತ್ತೇದಂತಯೋಃ ನ ಕೇವಲಂ ಬಾಲ್ಯ ಯೌವನವತ್ ಸಾಮಾನಾಧಿಕರಣ್ಯಮಾತ್ರಂ। ಕಿಂತು ನೀಲತ್ವೋತ್ಪಲತ್ವವತ್ ಸಮಾನಕಾಲತ್ವಮಪೀತಿ ಪ್ರದರ್ಶನಾರ್ಥಂ ಚ। ನ ತು ಸಖಂಡಾರ್ಥತ್ವಾರ್ಥಂ। ಉಕ್ತರೀತ್ಯಾ ಅನ್ಯಥಾಪಿ ತತ್ಸಿದ್ಧೇಃ।**

ಮತ್ತು ಅದ್ವೈತಿಯು 'ಸೋಽಯಂ' ಎಂಬಲ್ಲಿ ದೇವದತ್ತ ವಿಶೇಷಣವಾಗಿ 'ತತ್ತಾಇದಂತಾ'ಗಳನ್ನು ಬಿಟ್ಟು 'ಮಧುರಾಸಂಬದ್ಧಃ ಕಾಶೀಸಂಬದ್ಧಃ', 'ಅಷ್ಟಮೀ ಸಂಬದ್ಧಃ ಪೂರ್ಣಮಾಸೀ ಸಂಬದ್ಧಃ' ಎಂದು ವಾಕ್ಯಗಳನ್ನು ಉದಾಹರಿಸಿದ್ದಾನೆ. ಆದರ ಅರ್ಥಾನುವಾದ 'ತದ್ದೇಶಕಾಲಸಂಬದ್ಧಃ ಏತದ್ದೇಶಕಾಲಸಂಬದ್ಧಃ' ಎಂದು. ಎರಡು ವಿಶಿಷ್ಟಗಳಿಗೆ ಐಕ್ಯವು ಬಾಧಿತವಾದ್ದರಿಂದ ಸ್ವರೂಪದಲ್ಲಿ ಲಕ್ಷಣಾ ಮಾಡಬೇಕು, ಆಗ ಅಖಂಡಾರ್ಥತ್ವ ಸಿದ್ಧವಾಗುತ್ತದೆ. ವಿಶಿಷ್ಟಗಳಿಗೆ ಐಕ್ಯ ಏಕೆ ಬಾಧಿತವೆಂದರೆ ವಿಶೇಷಣಗಳಿಗೆ ಐಕ್ಯವು ಬಾಧಿತವಾದ್ದರಿಂದ. ವಿಶೇಷಣಗಳಿಗೆ ಐಕ್ಯವು ಪ್ರತ್ಯಕ್ಷದಿಂದಲೆ ಬಾಧಿತ. ಅವಿರುದ್ಧವಿಶೇಷಣಗಳಿಂದ ಜನ್ಯವಾದ ಎರಡು ವಿಶಿಷ್ಟಗಳಿಗೇ ಐಕ್ಯವು ಬಾಧಿತವಾಗಿರುವಾಗ ವಿರುದ್ಧವಿಶೇಷಣಜನ್ಯವಾದ ವಿಶಿಷ್ಟಗಳಿಗೆ ಐಕ್ಯ ಸುತರಾಂ ಬಾಧಿತ.

ಅವಿರುದ್ಧ ವಿಶೇಷಣದ್ವಯ ಪ್ರಭವತ್ವೇಽಪಿ ವಿಶಿಷ್ಟಯೋರ್ದ್ವಯೋಃ
ಘಟತೇ ನ ಯದ್ಯೈಕತಾ ತದಾ ನತರಾಂ ತದ್ವಿಪರೀತರೂಪಯೋಃ

ಎಂದು ಹೇಳುತ್ತಾನೆ.

ತತ್ತಾ ಎಂದರೆ 'ತದ್ದೇಶಕಾಲಸಂಬಂಧಧ್ವಂಸ' ಎಂದು ಟೀಕಾದಲ್ಲಿ ಅರ್ಥ ಮಾಡಿದ್ದು ತದ್ದೇಶಕಾಲಸಂಬಂಧ-ಏತದ್ದೇಶಕಾಲಸಂಬಂಧಗಳಿಗೆ ವಿರೋಧವಿದ್ದರೂ ತದ್ದೇಶಕಾಲ ಸಂಬಂಧ ಧ್ವಂಸಕ್ಕೂ ಏತದ್ದೇಶಕಾಲ ಸಂಬಂಧಕ್ಕೂ ವಿರೋಧವಿಲ್ಲ. ಏತದ್ದೇಶಕಾಲಗಳಲ್ಲಿ ತದ್ದೇಶಕಾಲಸಂಬಂಧ ಧ್ವಂಸಗಳಿರಬಹುದೆಂದು ಅವಿರೋಧ ಸಮರ್ಥನೆಗಾಗಿ. ಆದರೆ, ಅವಿರುದ್ಧವಿಶೇಷಣಜನ್ಯವಾದ ವಿಶಿಷ್ಟಗಳಿಗೂ ಅಭೇದ ಕೂಡದಿರುವುದರಿಂದ ಅಭೇದಾನ್ವಯ ಬಾಧಿತ ಎನ್ನುವ ಅದ್ವೈತಿಗೆ ವಿಶೇಷಣದ್ವಯಾವಿರೋಧ ಸಮರ್ಥನೆ ಮಾಡಿದರೆ ಸಮಾಧಾನ ವಾಗುವುದಿಲ್ಲ. ಮತ್ತು ಅವನು 'ಸೋಽಯಂ' ಎಂಬುದಕ್ಕೆ 'ತದ್ದೇಶಕಾಲ ಸಂಬಂಧವಾನಯಂ' ಎಂದು ಅರ್ಥಮಾಡಿ, 'ಈ ವಾಕ್ಯದಲ್ಲಿ ಅಭೇದಾನ್ವಯ ಕೂಡುವುದಿಲ್ಲ' ಎಂದಾಗ ನಾವು 'ತದ್ದೇಶಕಾಲ ಸಂಬಂಧಧ್ವಂಸ ವಾನಯಂ' ಎಂಬ ವಾಕ್ಯದಲ್ಲಿ ಅನ್ವಯ ಕೂಡುತ್ತದೆ ಎಂದರೆ ಅದು ಕೂಡುವುದಿಲ್ಲ. ಹೀಗಾಗಿ ಟೀಕೋಕ್ತವಾದ ಧ್ವಂಸವಿವಕ್ಷೆಯು ಪರೋದಾಹೃತವಾಕ್ಯವಿಷಯದಲ್ಲಿ ಸಂಬಂಧಿಸಿದ್ದಲ್ಲ ಎಂದು ಶ್ರೀವ್ಯಾಸರಾಜರು ಹೇಳುತ್ತಿದ್ದಾರೆ—

**ಪರೇಣ 'ತದ್ದೇಶಕಾಲ ಸಂಬದ್ಧಃ ಏತದ್ದೇಶಕಾಲಸಂಬದ್ಧಃ' ಇತ್ಯಸ್ಮಿನ್ ಉದಾಹೃತೇ ಟೀಕೋಕ್ತಪ್ರಕಾರಾಪ್ರಸರಾಚ್ಚ ।**



**युक्तं चानुभवकालध्वंस एव तत्तेति । अन्यथा पूर्वकाल-विषयेऽनुभवेऽपि स्मृताविव तत्तोल्लेखः स्यात् । स्मृत्यनुभवयोः संस्कारजन्यत्वाजन्यत्वाभ्यां भेदेऽपि अनुभवकाले सतः कालस्य स्मृतिकाले वस्तुगत्यातीतत्वेऽपि च विषयकृतवैलक्षण्याभावात् । तत्तामात्रे च स्मृतेरननुभूतविषयत्वमिष्टमेव । नचातिप्रसंगः । अनुभवबलेनानुभूतकालध्वंसत्वस्य तंत्रत्वात् । पूर्वकालसंबंधस्त-त्तेति मतेऽपि ह्यननुभूतापि भूतता भातीति वक्तव्यम् । तत् तत्र तदा तथासीदिति स्मृतौ अननुभूतस्य भूतत्वस्योल्लेखात् ।**

**ननु पूर्वकालध्वंसविशिष्टो मध्येऽप्यस्ति, इदंताविशिष्टस्तु मध्ये**

**नेति कथं तयोरभेदः । नचेदंता नैतत्कालसंबंधः किंतु तत्प्रागभावः । तद्विशिष्टश्च मध्येऽप्यस्तीति वाच्यम् । पूर्वकालध्वंसविशिष्टस्येदानीं सत्त्वेऽपि एतत्कालप्रागभावविशिष्टस्येदानीमभावादिति चेन्न । अनुवृत्तव्यावृत्तयोरभेदस्य विशेष्यमात्रस्यैक्येऽपि तत्तादेर्विशेषणत्वस्य च समर्थितत्वात् ।**

ननु अनुभवकालसंबंधस्यैव तत्तात्वे बाधकाभावात् तद्ध्वंस एव तत्तेति कथं वस्तुगतिरित्याशंक्याह– **युक्तं चेति । विषयकृतवैलक्षण्याभावदिति।** कारणकृत-विशेषस्य प्रतीत्याकारांतरप्रयोजकत्वे एकविषयकप्रत्यक्षानुमित्योरप्याकारांतरत्वा-पत्तिरिति भावः ।। **एतत्कालप्रागभावविशिष्टस्येति ।।** नचानुभवकालप्रागभाव एवेदंतास्तु । सा चानुभवांतरकाल प्रागभावरूपेदानीमप्यस्तीति वाच्यम् । विनश्यदवस्थापन्नघटविषयत्वे इदमाकारानुभवाभावप्रसंगात् ।



ಹಿಂದೆ, 'ಅಸ್ತು ತಾವತ್ ಅನುಭವಕಾಲಸಂಬಂಧ ಏವ ತತ್ತಾ' ಎಂದು ಹೇಳಿದ್ದಾರೆ. 'ಅಸ್ತು ತಾವತ್' ಎನ್ನುವುದು ಅಭ್ಯುಪಗಮವಾದ ಸೂಚಕ. ಇದು ವಸ್ತುಸ್ಥಿತಿ ಅಲ್ಲ ಎಂದು ಅರ್ಥಾತ್ ಹೇಳಿದಂತಾಗಿದೆ. ವಸ್ತುಸ್ಥಿತಿ ಏನೆಂದರೆ, 'ತದ್ ವಸ್ತುಸ್ಥಿತಿ ಪ್ರದರ್ಶನಾರ್ಥಂ' ಎನ್ನುತ್ತ 'ತದ್ದೇಶಕಾಲ ಸಂಬಂಧ ಧ್ವಂಸವೇ ತತ್ತಾ ಎನ್ನುವುದು ವಸ್ತುಸ್ಥಿತಿ' ಎಂದೂ ಹೇಳಿದ್ದಾರೆ.

ಆದರೆ ಅನುಭವಕಾಲ ಸಂಬಂಧವನ್ನೇ 'ತತ್ತಾ' ಎಂದು ಸ್ವೀಕರಿಸಿದರೆ ಬಾಧಕವೇನು? ಅದೇ ವಸ್ತುಸ್ಥಿತಿ ಏಕಾಗಬಾರದದು? ಎಂಬ ಪ್ರಶ್ನೆ ಬರುತ್ತದೆ. ಇದಕ್ಕೆ ಸಮಾಧಾನ ಹೀಗೆ— ತದ್ದೇಶಕಾಲಸಂಬಂಧವೆ ತತ್ತಾ ಎಂದರೆ ಅದು ಅನುಭವಕಾಲದಲ್ಲಿ ವಿದ್ಯಮಾನವಾದ್ದರಿಂದ 'ಅಯಂ' ಎಂದು ಇದಂತೋಲ್ಲೇಖ ಸಹಜವೆ. ಆದರೆ ಅನುಭವವಾಗುವಾಗ ತತ್ತಾ ಉಲ್ಲೇಖ ಬರಬೇಕಾದೀತು. ಸಃ ಎಂದೇ ವ್ಯವಹಾರ ಉಂಟಾಗಬೇಕಾದೀತು. ಏಕೆಂದರೆ ಅನುಭವಸಮಾನ ವಿಷಯಕವಾದ ಸ್ಮೃತಿಯಲ್ಲಿ 'ಸಃ ಆಸೀತ್' 'ಹಿಂದೆ ಅದು ಇತ್ತೆಂ'ದು, 'ಅದು' ಎಂದೇ ತತ್ತೋಲ್ಲೇಖವಿದೆ. 'ಅದು' ಎಂದು ಸ್ಮೃತಿಯಲ್ಲಿ ಕಾಣುವ, 'ತತ್ತಾ'ವು ತದ್ದೇಶಕಾಲಸಂಬಂಧ ರೂಪವೇ ಆಗಿದ್ದರೆ ಹಿಂದೆ ಅದರ ಅನುಭವಕಾಲದಲ್ಲಿ ಅದು ಇದ್ದಿತು ಎಂದಮೇಲೆ ಆ ಅನುಭವದಲ್ಲಿ ಅದರ ಉಲ್ಲೇಖ ಏಕೆ ಇಲ್ಲ?

ಸ್ಮೃತಿ ಅನುಭವಗಳಿಗೆ ಸಮಾನವಿಷಯತ್ವನಿಯಮವು ಯದ್ಯಪಿ ಇಲ್ಲ. ತದ್ದೇಶಕಾಲಗಳು

ಅನುಭವದಲ್ಲಿ ವರ್ತಮಾನತ್ವೇನ ಕಾಣುತ್ತವೆ, ಸ್ಮೃತಿಯಲ್ಲಿ ಅತೀತತ್ವೇನ ಕಾಣುತ್ತವೆ. ಆದರೂ ಮೀಮಾಂಸಕರು ತಾರ್ಕಿಕರು ಎಲ್ಲರೂ ಸ್ಮೃತಿಗೆ ಅನುಭವಜನ್ಯ ಸಂಸ್ಕಾರ ಮಾತ್ರ ಜನ್ಯತ್ವವನ್ನು ಅಂಗೀಕರಿಸುವುದರಿಂದ, 'ಅನಧಿಗತಾರ್ಥಗಂತೃತ್ವವಿಲ್ಲದ್ದರಿಂದ ಪ್ರಮೆಯೆ ಅಲ್ಲ' ಎನ್ನುತ್ತಾರೆ. ಅವರ ರೀತಿಯಿಂದ ಅನುಭವ ಸ್ಮೃತಿಗಳಿಗೆ ಸಮಾನವಿಷಯತ್ವನಿಯಮವಿರುವುದರಿಂದ ಸ್ಮೃತಿಯಲ್ಲಿ ಇರುವ 'ತತ್ತಾ' ಉಲ್ಲೇಖವು ಅನುಭವದಲ್ಲಿಯೂ ಇರಬೇಕೆಂಬ ಆಪತ್ತಿ ಅಪರಿಹಾರ್ಯ.

ಯದ್ಯಪಿ ಅನುಭವವು ಸಂಸ್ಕಾರಜನ್ಯವಲ್ಲ, ಸ್ಮೃತಿಯು ಸಂಸ್ಕಾರಜನ್ಯ. ಹೀಗೆ ವೈಲಕ್ಷಣ್ಯ ವಿರುವುದರಿಂದ ಸ್ಮೃತಿಯಂತೆ ಅನುಭವದಲ್ಲಿಯೂ ತತ್ತಾದ ಉಲ್ಲೇಖವನ್ನು ಆಪಾದಿಸಲಾಗದು. ಆದರೂ ಸ್ಮೃತಿ ಅನುಭವಗಳಿಗೆ ಸಂಸ್ಕಾರಜನ್ಯತ್ವ ಮತ್ತು ಸಂಸ್ಕಾರ ಅಜನ್ಯತ್ವಗಳಿಂದ ಭೇದವಿದ್ದರೂ ಅನುಭವಕಾಲದಲ್ಲಿ ವಿದ್ಯಮಾನವಾಗಿರುವ ಕಾಲವು ಸ್ಮೃತಿಕಾಲದಲ್ಲಿ ವಸ್ತುಗತ್ಯಾ ಅತೀತವಾಗಿದ್ದರೂ, ವಿಷಯಕೃತವಾದ ವೈಲಕ್ಷಣ್ಯವಿಲ್ಲದ್ದರಿಂದ ಸ್ಮೃತಿಯಂತೆ ಅನುಭವದಲ್ಲಿಯೂ ತತ್ತೋಲ್ಲೇಖದ ಆಪತ್ತಿ ಯುಕ್ತವೆ.

ಪ್ರತೀತಿ ಕಾರಣಕೃತ ವಿಶೇಷವು ಪ್ರತೀತಿಯಲ್ಲಿ ಆಕಾರಾಂತರ ಪ್ರಯೋಜಕವಾಗುವುದಿಲ್ಲ. ಹೀಗಾಗಿ 'ಸಂಸ್ಕಾರರೂಪ ಕಾರಣಜನ್ಯವಲ್ಲವಾದ್ದರಿಂದ ಅನುಭವದ ಆಕಾರವು ತತ್ತೋಲ್ಲೇಖರಹಿತ' ವೆನ್ನುವಂತಿಲ್ಲ. ಕಾರಣಕೃತ ವಿಶೇಷವು ಆಕಾರಾಂತರ ಪ್ರಯೋಜಕವೇ ಆಗುವುದಾದರೆ ಏಕವಿಷಯಕವಾದ ಪ್ರತ್ಯಕ್ಷ ಅನುಮಿತಿಗಳಿಗೆ ಆಕಾರಾಂತರಾಪತ್ತಿ ಬರುತ್ತದೆ. ಆದರಿಂದ ಅನುಭವದಲ್ಲಿ ತತ್ತೋಲ್ಲೇಖ ಪ್ರಸಕ್ತಿ ಇದ್ದರೂ ಅದು ವಸ್ತುತಃ ಇಲ್ಲದ್ದರಿಂದ ತದ್ದೇಶಕಾಲಸಂಬಂಧವೇ ತತ್ತಾ ಎಂದು ಒಪ್ಪಲಾಗದು. ತದ್ದೇಶಕಾಲಸಂಬಂಧಧ್ವಂಸವನ್ನೇ 'ತತ್ತಾ' ಎಂದು ಒಪ್ಪಬೇಕು. ಅದೇ ವಸ್ತುಸ್ಥಿತಿ.

ಈ ತದ್ದೇಶಕಾಲಸಂಬಂಧಧ್ವಂಸರೂಪವಾದ ತತ್ತಾ ಕೇವಲ ಸ್ಮೃತಿಯಲ್ಲಿ ಏಕೆ ಉಲ್ಲೇಖ ಗೊಳ್ಳುತ್ತದೆ ಎಂದು ಆಕ್ಷೇಪಿಸಬಾರದು. ಅದನ್ನು ಒಪ್ಪಿಕೊಳ್ಳಬೇಕು. 'ಹಾಗಾದರೆ ಅತಿಪ್ರಸಂಗ' ಎಂದರೆ, ಅನುಭವ ಬಲದಿಂದ ಅನುಭೂತಕಾಲಧ್ವಂಸತ್ವವೆ ಅನುಭೂತಕಾಲಧ್ವಂಸವು ಸ್ಮೃತಿಯಲ್ಲಿ ಕಾಣಲು ಪ್ರಯೋಜಕವೆನ್ನುತ್ತೇವೆ. ಆದರಿಂದ ಅತಿಪ್ರಸಂಗವಿಲ್ಲ, ಅತೀತತ್ವದಂತೆ ಭವಿಷ್ಯತ್ವವು ಸ್ಮೃತಿಯಲ್ಲಿ ಕಾಣುವುದು ಯಾರಿಗೂ ಅನನುಭೂತವಾದ್ದರಿಂದ ಅದಕ್ಕೊಂದು ಕಾರಣವನ್ನು ಕಲ್ಪಿಸುವುದಿಲ್ಲ.

'ಪೂರ್ವಕಾಲಸಂಬಂಧವೇ ತತ್ತಾ' ಎಂದು ಒಂದು ಮತವಿದೆ. ಅವರೂ ಕೂಡ ಅನುಭವಕಾಲದಲ್ಲಿ ಕಾಣದಿದ್ದ ಭೂತತ್ವವು ಸ್ಮೃತಿಯಲ್ಲಿ ಕಾಣುವುದೆಂದು ಹೇಳಲೇಬೇಕು. 'ಅದು ಅಲ್ಲಿ ಆಕಾಲದಲ್ಲಿ ಹಾಗೆ ಇತ್ತು' ಎಂದು ಅನನುಭೂತವಾದ ಭೂತತ್ವದ ಉಲ್ಲೇಖವು ಸ್ಮೃತಿಯಲ್ಲಿ ಕಾಣುವುದು ಅನುಭವಸಿದ್ಧ—

**ಯುಕ್ತಂ ಚ ಅನುಭವಕಾಲ ಧ್ವಂಸ ಏವ ತತ್ತೇತಿ। ಅನ್ಯಥಾ ಪೂರ್ವಕಾಲ ವಿಷಯೇ ಅನುಭವೇಽಪಿ ಸ್ಮೃತಾವಿವ ತತ್ತೋಲ್ಲೇಖಃ ಸ್ಯಾತ್।**

**ಸ್ಮೃತ್ಯನುಭವಯೋಃ ಸಂಸ್ಕಾರಜನ್ಯತ್ವಅಜನ್ಯತ್ವಾಭ್ಯಾಂ ಭೇದೇಽಪಿ ಅನುಭವ ಕಾಲೇ ಸತಃ ಕಾಲಸ್ಯ ಸ್ಮೃತಿಕಾಲೇ ವಸ್ತುಗತ್ಯಾ ಅತೀತತ್ವೇಽಪಿ ಚ, ವಿಷಯಕೃತ ವೈಲಕ್ಷಣ್ಯಾಭಾವಾತ್।**

**ತತ್ತಾಮಾತ್ರೇಚ ಸ್ಮೃತೇರನನುಭೂತ ವಿಷಯತ್ವಮಿಷ್ಟಮೇವ। ನ ಚಾತಿಪ್ರಸಂಗಃ। ಅನುಭವ ಬಲೇನ ಅನುಭೂತ ಕಾಲಧ್ವಂಸತ್ವಸ್ಯ ತಂತ್ರತ್ವಾತ್।**

**ಪೂರ್ವಕಾಲಸಂಬಂಧಃ ತತ್ತಾ ಇತಿ ಮತೇಽಪಿ ಹಿ ಅನನುಭೂತಾಪಿ ಭೂತತಾ ಭಾತೀತಿ ವಕ್ತವ್ಯಂ। 'ತತ್ ತತ್ರ ತದಾ ತಥಾ ಆಸೀತ್' ಇತಿ ಸ್ಮೃತೌ ಅನನುಭೂತಸ್ಯ ಭೂತತ್ವಸ್ಯ ಉಲ್ಲೇಖಾತ್॥**

'ಪೂರ್ವಕಾಲ ಧ್ವಂಸ ವಿಶಿಷ್ಟವು ಮಧ್ಯಕಾಲದಲ್ಲಿಯೂ ಇದೆ. ಈಗಿನ ಕಾಲದಲ್ಲಿಯೂ ಇದೆ. ಇದಂತಾವೈಶಿಷ್ಟ್ಯವು ಕೇವಲ ಈಗಿನ ಕಾಲದಲ್ಲಿ ಇದೆ. ಮಧ್ಯಕಾಲದಲ್ಲಿ ಇಲ್ಲ. ಹೀಗಿರುವಾಗ ಪೂರ್ವಕಾಲಧ್ವಂಸವಿಶಿಷ್ಟ ಮತ್ತು ಇದಂತಾವಿಶಿಷ್ಟಗಳಿಗೆ ಐಕ್ಯ ಹೇಗೆ? 'ಇದಂತಾವೈಶಿಷ್ಟ್ಯವೆಂದರೆ ಏತತ್‌ಕಾಲಸಂಬಂಧವಲ್ಲ, ಅದರ ಪ್ರಾಗಭಾವ. ತದ್ವಿಶಿಷ್ಟವು ಮಧ್ಯಕಾಲದಲ್ಲಿಯೂ ಇದೆ'ಎಂದರೆ, ಪೂರ್ವಕಾಲ ಧ್ವಂಸವಿಶಿಷ್ಟವು ಈಗಿನಕಾಲದಲ್ಲಿ ಇದ್ದರೂ ಈಗಿನ ಕಾಲದಲ್ಲಿ ಈಗಿನಕಾಲದ ಪ್ರಾಗಭಾವ ವಿಶಿಷ್ಟವಿಲ್ಲ. ಹೀಗಾಗಿ ಎರಡು ವಿಶಿಷ್ಟಗಳಿಗೆ ಐಕ್ಯ ಕೂಡುವುದಿಲ್ಲ' ಎಂಬ ಆಕ್ಷೇಪ ಬಂದರೆ ಏನು ಸಮಾಧಾನ?

'ಇದಂತಾ' ಎಂದರೆ ನಾವು 'ಏತತ್‌ಕಾಲಪ್ರಾಗಭಾವ' ಎನ್ನುವುದಿಲ್ಲ. ಅದು ಏತತ್ ಕಾಲದಲ್ಲಿಲ್ಲ. ಆದರಿಂದ ಅನುಭವಕಾಲಪ್ರಾಗಭಾವ ಎನ್ನುತ್ತೇವೆ. ಈಗಿನ ಕಾಲದಲ್ಲಿ ಈಗಿನ ಅನುಭವಕಾಲದ ಪ್ರಾಗಭಾವವಿಲ್ಲದಿದ್ದರೂ ಮುಂದೆ ಬರಲಿರುವ ಅನುಭವಕಾಲದ ಪ್ರಾಗಭಾವವಿರಬಹುದು. ಆ ಪ್ರಾಗಭಾವ ವಿಶಿಷ್ಟಕ್ಕೆ ಪೂರ್ವಕಾಲ ಧ್ವಂಸವಿಶಿಷ್ಟದ ಐಕ್ಯವನ್ನು ಹೇಳಬಹುದು.' ಎಂದು ಸಮಾಧಾನ ಹೇಳಿದರೆ ಅದು ಯುಕ್ತವಾಗುವುದಿಲ್ಲ.

ಏಕೆಂದರೆ ವಿನಶ್ಯದವಸ್ಥಾಪನ್ನ ಘಟವನ್ನು 'ಇದು' ಎನ್ನುತ್ತೇವೆ. ಆದರೆ ಅದು 'ಇದು' ಎನಿಸಬೇಕಾದರೆ ಮುಂದೆ ಬರಲಿರುವ ಅನುಭವಕಾಲದ ಪ್ರಾಗಭಾವ ವಿಶಿಷ್ಟವಾಗಿರ ಬೇಕೆಂದಾಯಿತು. ಆದರೆ ಈಗಿನ ವಿನಶ್ಯದವಸ್ಥ ಘಟಕ್ಕೆ ಈಗಿನ ಅನುಭವಕಾಲ ಪ್ರಾಗಭಾವ ವೈಶಿಷ್ಟ್ಯವಿಲ್ಲ. ಮುಂದಿನ ಅನುಭವಕಾಲ ಪ್ರಾಗಭಾವ ವೈಶಿಷ್ಟ್ಯ ಬರಬೇಕೆಂದರೆ ಮುಂದಿನ ಕ್ಷಣದಲ್ಲಿ ಈ ವಿನಶ್ಯದವಸ್ಥಘಟವೇ ಇರುವುದಿಲ್ಲ.

ಇದಕ್ಕೆ ಸಮಾಧಾನವಾಗಿ ಅನುವೃತ್ತ ವ್ಯಾವೃತ್ತಗಳಿಗೆ ಭೇದಾಭೇದವಿರುವುದರಿಂದ ಅಭೇದವಿದೆ ಎಂದಿದ್ದೇವೆ. ಆದರಿಂದ ಅನುವೃತ್ತವಾದ ಪೂರ್ವಕಾಲಧ್ವಂಸ ವಿಶಿಷ್ಟದ ವಿಶೇಷ್ಯಕ್ಕೆ ವ್ಯಾವೃತ್ತವಾದ ಇದಂತಾವಿಶಿಷ್ಟದ ಅಭೇದವಿದೆ. ಮತ್ತು ಎರಡು ವಿಶಿಷ್ಟಗಳ ವಿಶೇಷ್ಯ ಮಾತ್ರಕ್ಕೆ ಪರಸ್ಪರ ಐಕ್ಯವಿರುವುದರಿಂದ ಪೂರ್ವಕಾಲಧ್ವಂಸ ಮತ್ತು ಇದಂತಾಗಳೆರಡೂ ಅದರಲ್ಲಿ ವಿಶೇಷಣವಾಗಬಹುದು. ಎರಡು ವಿಶಿಷ್ಟಗಳಿಗೂ 'ಐಕ್ಯ' ಬರಬಹುದು. 'ವಿಶಿಷ್ಟಗಳಿಗೆ ಐಕ್ಯ'ವೆಂದರೆ ವಿಶೇಷ್ಯೈಕ್ಯವೆ ಎಂದೂ ಹಿಂದೆ ಹೇಳಿದ್ದೇವೆ.

ಹೀಗಾಗಿ ಪೂರ್ವಕಾಲಧ್ವಂಸವು 'ತತ್ತಾ', ಏತತ್ಕಾಲಪ್ರಾಗಭಾವವು 'ಇದಂತಾ' ಎಂದರೆ ಅದು ವಸ್ತುಸ್ಥಿತಿಯೆ. ಈ ಅಭಿಪ್ರಾಯದಿಂದ ಟೀಕಾದಲ್ಲಿ ತತ್ತಾ ಇದಂತಾಗಳನ್ನು ಧ್ವಂಸ ಪ್ರಾಗಭಾವಗಳೆಂದು ಹೇಳಿದ್ದಾರೆ. 'ತತ್ತಾ' ಎಂದರೆ ಪೂರ್ವಕಾಲಧ್ವಂಸವೆಂದಿಟ್ಟುಕೊಳ್ಳುವಾಗ ಇದಂತಾ ಎಂದರೆ ಏತತ್ಕಾಲಸಂಬಂಧವೆ. ಇವು ಎರಡೂ ಏಕಕಾಲದಲ್ಲಿ ದೇವದತ್ತನಲ್ಲಿರುತ್ತವೆ. ಇದಂತಾ ಎಂದರೆ ಏತತ್ಕಾಲಪ್ರಾಗಭಾವವೆಂದಿಟ್ಟುಕೊಳ್ಳುವಾಗ ತತ್ತಾ ಎಂದರೆ ಅನುಭವಕಾಲ ಸಂಬಂಧವೆಂದೇ ವಿವಕ್ಷಿತವಾಗಿದೆ. ಇವೆರಡೂ ದೇವದತ್ತನಲ್ಲಿ ಏಕಕಾಲದಲ್ಲಿ ಬರುವುದರಿಂದ ವಿರೋಧವಿಲ್ಲ—

**ನನು ಪೂರ್ವಕಾಲ ಧ್ವಂಸ ವಿಶಿಷ್ಟೋ ಮಧ್ಯೇಽಪ್ಯಸ್ತಿ। ಇದಂತಾ ವಿಶಿಷ್ಟಸ್ತು ಮಧ್ಯೇ ನೇತಿ ಕಥಂ ತಯೋರಭೇದಃ? ನಚ ಇದಂತಾ ನ ಏತತ್ಕಾಲ ಸಂಬಂಧಃ। ಕಿಂತು ತತ್ಪ್ರಾಗಭಾವಃ। ತದ್ವಿಶಿಷ್ಟಶ್ಚ ಮಧ್ಯೇಽಪಿ ಅಸ್ತೀತಿ ವಾಚ್ಯಂ। ಪೂರ್ವಕಾಲ ಧ್ವಂಸ ವಿಶಿಷ್ಟಸ್ಯ ಇದಾನೀಂ ಸತ್ವೇಽಪಿ ಏತತ್ಕಾಲಪ್ರಾಗಭಾವವಿಶಿಷ್ಟಸ್ಯ ಇದಾನೀಮಭಾವಾದಿತಿ ಚೇನ್ನ। ಅನುವೃತ್ತ ವ್ಯಾವೃತ್ತಯೋರಭೇದಸ್ಯ, ವಿಶೇಷ್ಯಮಾತ್ರಸ್ಯ ಐಕ್ಯೇಽಪಿ ತತ್ತಾದೇರ್ವಿಶೇಷಣತ್ವಸ್ಯ ಚ ಸಮರ್ಥಿತತ್ವಾತ್।**



**किंच त्वन्मते सोऽयं देवदत्त इति वाक्यस्य किं देवदत्त-स्वरूपमात्रे तात्पर्यम्, तत्तेदंतोपलक्षिताभेदविशिष्टे वा, उक्ताभेदोपलक्षिते वा। नाद्यः। तस्य प्रत्यक्षसिद्धत्वात्। अन्यथा धर्मिज्ञानाभावेन तत्र बुभुत्सानुवादभेदभ्रमाद्ययोगात्। अभेदाबोधने भेदारोपनिवृत्त्ययोगाच्च। एकेनैव पदेन पूर्णत्वेन पदांतरवैयर्थ्याच्च। नच लक्षणार्थं सोऽयमिति पदद्वयम्। देवदत्तपदेनैव पूर्णत्वात्। स एव कुंडल्ययं देवदत्त इत्यादौ सोऽयमिति पदद्वयेनैव लक्षणासिद्धौ पदांतरवैयर्थ्याच्च।**

**उक्ताभेदेति ।।** तत्तेदंतोपलक्षिताभेदोपलक्षितेत्यर्थः ।। **लक्षणार्थमिति ।।** पदान्तराभावे तदर्थान्वयानुपपत्तिरूपलक्षणाबीजाभावादिति भावः ।। **देवदत्तपदेनैवेति ।।** तथापि तदिदंपदयोरन्यतरवैयर्थ्यमिति भावः ।



ವಿಶಿಷ್ಟಗಳಿಗೆ ಅಭೇದವಿಲ್ಲ ಎನ್ನುವ ಅದ್ವೈತಪಕ್ಷದಲ್ಲಿ 'ಸೋಽಯಂ ದೇವದತ್ತಃ' ವಾಕ್ಯಕ್ಕೆ ತಾತ್ಪರ್ಯವೆಲ್ಲಿ? ದೇವದತ್ತಸ್ವರೂಪಮಾತ್ರದಲ್ಲಿಯೋ, ತತ್ತಾ ಇದಂತಾ ಉಪಲಕ್ಷಿತಗಳ ಅಭೇದ ವಿಶಿಷ್ಟದಲ್ಲಿಯೋ ಅಥವಾ ತತ್ತಾ ಇದಂತಾ ಉಪಲಕ್ಷಿತಗಳ ಅಭೇದೋಪಲಕ್ಷಿತದಲ್ಲಿಯೊ? ಲಕ್ಷಣಯಾ ದೇವದತ್ತ ಸ್ವರೂಪದಲ್ಲಿ ಮಾತ್ರ ತಾತ್ಪರ್ಯವೆನ್ನುವುದು ಕೂಡುವುದಿಲ್ಲ, ಅದು ಪ್ರತ್ಯಕ್ಷಸಿದ್ಧವಾಗಿದೆ, ಶಬ್ದದಿಂದ ಅದನ್ನು ಹೇಳಬೇಕಾಗಿಲ್ಲ. ಆದರಿಂದ ಈ ವಾಕ್ಯ ವ್ಯರ್ಥವಾಗುವುದು. ಪ್ರತ್ಯಕ್ಷಸಿದ್ಧವಲ್ಲವೆಂದರೆ, ಧರ್ಮಿಜ್ಞಾನವಿಲ್ಲದಿರುವುದರಿಂದ ಅದರಲ್ಲಿ ಜಿಜ್ಞಾಸೆ ಕೂಡಲಾರದು. ಅಜ್ಞಾತನಾದ ದೇವದತ್ತನನ್ನು 'ದೇವತ್ತನು ಯಾರು?' ಎಂಬ ಪ್ರಶ್ನೆಯಲ್ಲಿ ಅನುವಾದ ಮಾಡುವುದೂ ಕೂಡಲಾರದು. ದೇವದತ್ತನೆಂಬ ಅಧಿಷ್ಠಾನದ ಜ್ಞಾನವಿಲ್ಲದಿದ್ದರೆ 'ದೇವದತ್ತನು ತತ್ತಾವಿಶಿಷ್ಟನಲ್ಲ' ಎಂದು ಭೇದಾರೋಪಕ್ಕೂ ಅವಕಾಶವಿಲ್ಲವಾಗುತ್ತದೆ. ಆದರಿಂದ ಭೇದಭ್ರಮನಿವೃತ್ತಿಯೂ ಇಲ್ಲವಾಗುತ್ತದೆ. ಮತ್ತು ದೇವದತ್ತನ ಸ್ವರೂಪಮಾತ್ರವನ್ನು ಹೇಳಿ, ಅವನಲ್ಲಿ ಅಭೇದವನ್ನು ವಿಶೇಷಣವಾಗಿ, ಇಲ್ಲವೆ, ಉಪಲಕ್ಷಣವಾಗಿ ಹೇಳದಿದ್ದರೆ ಭೇದಭ್ರಮನಿವೃತ್ತಿಯೂ ಶಕ್ಯವಿಲ್ಲ. ದೇವದತ್ತಸ್ವರೂಪವು 'ಸಃ' ಅಥವಾ 'ಅಯಂ' ಎಂದು ಒಂದೇ ಪದದಿಂದ ಬೋಧ್ಯವಾಗುವಾಗ 'ಸೋಽಯಂ' ಎಂದು ಎರಡು ಪದಗಳೂ ವ್ಯರ್ಥ—

**ಕಿಂಚ ತ್ವನ್ಮತೇ ಸೋಽಯಂ ದೇವದತ್ತ ಇತಿ ವಾಕ್ಯಸ್ಯ ಕಿಂ ದೇವದತ್ತಸ್ವರೂಪ ಮಾತ್ರೇ ತಾತ್ಪರ್ಯಂ, ತತ್ತೇದಂತೋಪಲಕ್ಷಿತಾಭೇದ ವಿಶಿಷ್ಟೇ ವಾ, ಉಕ್ತಾಭೇದೋಪಲಕ್ಷಿತೇ ವಾ ? ನಾದ್ಯಃ। ತಸ್ಯ ಪ್ರತ್ಯಕ್ಷಸಿದ್ಧತ್ವಾತ್। ಅನ್ಯಥಾ ಧರ್ಮಿಜ್ಞಾನಾಭಾವೇನ ತತ್ರ ಬುಭುತ್ಸಾ–ಅನುವಾದ–ಭೇದಭ್ರಮಾದ್ಯಯೋಗಾತ್। ಅಭೇದಾಬೋಧನೇ ಭೇದಾರೋಪ ನಿವೃತ್ತ್ಯಯೋಗಾಚ್ಚ। ಏಕೇನೈವ ಪದೇನ ಪೂರ್ಣತ್ವೇನ ಪದಾಂತರ ವೈಯರ್ಥ್ಯಾಚ್ಚ।**

'ಲಕ್ಷಣಾ ಮಾಡುವುದಕ್ಕೆ ಅವರೆಡೂ ಪದಗಳು ಆವಶ್ಯಕ, ಅವು ಇಲ್ಲದಿದ್ದರೆ ಅವುಗಳ ಅರ್ಥದ ಅನ್ವಯಾನುಪಪತ್ತಿರೂಪವಾದ ಲಕ್ಷಣಾಬೀಜವಿಲ್ಲವಾಗುವುದರಿಂದ ಅವು ಬೇಕು' ಎಂದರೆ, 'ಸಃ' 'ಅಯಂ' ಎಂದು ಎರಡು ಪದಗಳ ಆವಶ್ಯಕತೆ ಇಲ್ಲ. 'ಸಃ ದೇವದತ್ತಃ' ಎಂದೋ 'ಅಯಂ ದೇವದತ್ತಃ' ಎಂದೋ ಹೇಳಿದಾಗ ತಾತ್ಪರ್ಯಾನುಪಪತ್ತಿಯಿಂದ ದೇವದತ್ತ ಸ್ವರೂಪದಲ್ಲಿ ಲಕ್ಷಣಾ ಶಕ್ಯವಿದೆ. ಅವಿರುದ್ಧವಿಶೇಷಣಗಳಿದ್ದರೂ ವಿಶಿಷ್ಟಗಳಿಗೆ ಅಭೇದ ಅದ್ವೈತದಲ್ಲಿಲ್ಲದ್ದರಿಂದ

ಅನ್ವಯಾನುಪತ್ತಿಯಿಂದಲೂ ದೇವದತ್ತಸ್ವರೂಪ ಮಾತ್ರದಲ್ಲಿ ಲಕ್ಷಣಾ ಎನ್ನುವುದು ಶಕ್ಯ. ಅದರಿಂದ 'ಸಃ' ಅಥವಾ 'ಅಯಂ' ಎಂಬ ಒಂದು ಶಬ್ದದೊಂದಿಗೇ 'ದೇವದತ್ತ' ಎಂಬ ಪದ ಸೇರಿದರೂ ಸಾಕು. ವಾಕ್ಯವು ಪೂರ್ಣವೇ ಆಗುತ್ತದೆ. ಎರಡು ಪದಗಳಲ್ಲಿ ಒಂದು ವ್ಯರ್ಥವೇ ಆಗುವುದು. ಅನ್ವಯಾನುಪಪತ್ತಿಗೆ ಎರಡು ವಿರುದ್ಧ ಪದಗಳೇ ಬೇಕೆಂದರೂ 'ಕುಂಡಲಧಾರಿಯಾಗಿದ್ದ ಆ ದೇವದತ್ತನೇ ಈ ವ್ಯಕ್ತಿ' ಎನ್ನುವಾಗ 'ಆ' 'ಈ' ಪದಗಳೇ ಲಕ್ಷಣಾಬೀಜವಾದ ಅನ್ವಯಾನುಪಪತ್ತಿಗೆ ಸಾಕು. ಉಳಿದ ಪದಗಳೆಲ್ಲವೂ ವ್ಯರ್ಥ—

**ನಚ ಲಕ್ಷಣಾರ್ಥಂ ಸೋऽಯಮಿತಿ ಪದದ್ವಯಂ। ದೇವದತ್ತ ಪದೇನೈವ ಪೂರ್ಣತ್ವಾತ್। 'ಸ ಏವ ಕುಂಡಲೀ ಅಯಂ ದೇವದತ್ತಃ' ಇತ್ಯಾದೌ ಸೋऽಯಮಿತಿ ಪದದ್ವಯೇನೈವ ಲಕ್ಷಣಾಸಿದ್ಧೌ ಪದಾಂತರ ವೈಯರ್ಥ್ಯಾಚ್ಚ।**



न द्वितीयतृतीयौ । समानविभक्तिकपदद्वयेन प्रातिपदिकार्थेतरस्याभेदरूपसंसर्गस्य बोधनेऽखंडार्थत्वहानेः । नहि क्रियाकारकभावान्वय एव संसर्गः । नीलमुत्पलं निर्घटं भूतलं घटः पटो नेत्यादेरप्यखंडार्थत्वापातात् ।

नच भावांशभेदाभावमात्रेणाखंडार्थत्वमित्यानंदबोधोक्तं युक्तम् । स्वोचितसंसर्गान्यसंसर्गाबोधकत्वस्य सर्वत्र सत्त्वात् ।

उपलक्षणेनाभेदेनोपलक्ष्यस्य देवदत्तस्य प्रागेव निश्चितत्वेन तस्योपलक्षणत्वायोगाच्च । देवदत्ते देवदत्ताभेदस्य प्रत्यक्षसिद्धत्वाच्च । तस्मादभेदो न सिद्ध इति चेत् । तस्मादिति कोऽर्थः । किं तत्ताविशिष्टादिति किंवा तत्तोपलक्षितादिति यद्वा तच्छब्देन विवक्षितात्स्वरूपमात्रादिति । नाद्यद्वितीयौ । सखंडार्थत्वापातात् । उक्तरीत्योपलक्ष्याकाराभावेनोपलक्षणत्वायोगाच्च । न तृतीयः, दत्तोत्तरत्वात् ।

एवंच- प्रत्यक्षत्वाद्देवदत्तस्वरूपं नैव बोध्यते ।
सोऽयमित्यादिवाक्येन किंत्वैक्यादिविशेषितम् ॥

अभेदोपलक्षिते तात्पर्यमिति तृतीये किं अभेदः देवदत्त एवोपलक्षणम्, उत देवदत्ताभेद इति विकल्प्य पक्षद्वयमपि क्रमेण दूषयति— **उपलक्षणेनेत्यादिना ।।** यद्वा प्रथमपक्षोक्तदूषण एवोद्धारमाशंक्य परिहर्तुं पुनस्तदनुवदति— देवदत्त इति ।। शंकते— **तस्मादिति ।।** तत्पदोपस्थापितादित्यर्थः ।। **ऐक्यादिविशेषितमिति ।।** अभेदादिविशिष्टमेव देवदत्तस्वरूपमित्यर्थः ।



ತತ್ತಾಇದಂತಾಗಳಿಂದ ಉಪಲಕ್ಷಿತರಾದ ಇಬ್ಬರ 'ಅಭೇದದಿಂದ ವಿಶಿಷ್ಟ'ನಾದ ದೇವದತ್ತನಲ್ಲಿ 'ಸೋಽಯಂ ದೇವದತ್ತಃ' ಎಂಬ ವಾಕ್ಯಕ್ಕೆ ತಾತ್ಪರ್ಯ ಎನ್ನುವುದು ಹಿಂದೆ ಹೇಳಿದ ಎರಡನೇಪಕ್ಷ. ಈ ಪಕ್ಷದಲ್ಲಿಯೂ, 'ಅಭೇದದಿಂದ ಉಪಲಕ್ಷಿತ'ನಾದ ದೇವದತ್ತನಲ್ಲಿ ತಾತ್ಪರ್ಯ ಎನ್ನುವ ಮೂರನೇ ಪಕ್ಷದಲ್ಲಿಯೂ ಇದು ದೋಷ— 'ಸಃ ಅಯಂ' ಎಂದು ಸಮಾನವಿಭಕ್ತಿಕವಾದ ಎರಡು ಪದಗಳು ಅಭೇದಸಂಸರ್ಗವನ್ನು ಹೇಳುತ್ತವೆ. ಇದು ಪ್ರಾತಿಪದಿಕಾರ್ಥವಲ್ಲ. ಅದಕ್ಕಿಂತ ಇತರವಾಗಿದೆ. ಆದರಿಂದ ಈ ವಾಕ್ಯವು ಅಖಂಡಾರ್ಥವಾಗಲಾರದು ಎಂದು.

'ಗಾಂ ಆನಯ' ಎಂಬಲ್ಲಿ ಗೋವು ಕರ್ಮಕಾರಕ, ಆನಯನವು ಕ್ರಿಯೆ. ಇವೆರಡಕ್ಕೆ ಪರಸ್ಪರ ಅನ್ವಯವನ್ನು ಬೋಧಿಸುವುದರಿಂದ ಈ ವಾಕ್ಯವು ಸಂಸರ್ಗ ಬೋಧಕವಾಗಿದ್ದು ಸಖಂಡಾರ್ಥ ವೆನಿಸುತ್ತದೆ. ಹಾಗೆ ಇಲ್ಲಿ ಪ್ರಕೃತ ಕ್ರಿಯಾಕಾರಕ ಸಂಸರ್ಗಬೋಧವಿಲ್ಲ. ಆದರಿಂದ ಅಖಂಡಾರ್ಥ ವೇಕಾಗಬಾರದು?' ಎನ್ನಬಾರದು. ಏಕೆಂದರೆ ಸಖಂಡಾರ್ಥವೆನಿಸಲು ಕ್ರಿಯಾಕಾರಕ ಸಂಸರ್ಗವನ್ನೆ ಬೋಧಿಸಬೇಕೆಂದಿಲ್ಲ. 'ಶುಕ್ಲಃ ಪಟಃ' 'ನೀಲಂ ಉತ್ಪಲಂ' ಎಂದು ಅಭೇದಾನ್ವಯವನ್ನು ಬೋಧಿಸಿದರೂ ಅಭೇದಸಂಸರ್ಗ ಬೋಧಕವಾಗಿದ್ದು ಸಖಂಡಾರ್ಥವೆಂದೇ ಕರೆಸಿಕೊಳ್ಳುತ್ತದೆ. ಪ್ರಕೃತ ಸೋಯಂ ಎಂಬಲ್ಲಿ ಕ್ರಿಯಾಕಾರಕಭಾವರೂಪ ಸಂಸರ್ಗವಿಲ್ಲದಿದ್ದರೂ ಅಭೇದಸಂಸರ್ಗವು ಬೋಧಿತವಾಗುವುದರಿಂದ ಸಖಂಡಾರ್ಥವೇ ಆದೀತು.

'ನಿರ್ಘಟಂ ಭೂತಲಂ' 'ಘಟಃ ಪಟೋ ನ' ಎಂಬ ವಾಕ್ಯಗಳಲ್ಲಿಯೂ ಕ್ರಿಯಾಕಾರಕಭಾವ ರೂಪ ಅನ್ವಯವಿಲ್ಲದಿದ್ದರೂ ಅಭಾವಸಂಸರ್ಗ ಬೋಧವಿರುವುದರಿಂದ ಅವು ಅಖಂಡಾರ್ಥಕವಲ್ಲ. ಕ್ರಿಯಾಕಾರಕಭಾವಾನ್ವಯವೇ ಸಂಸರ್ಗ ಎಂದರೆ ಇವು ಅಖಂಡಾರ್ಥವೆನಿಸುವ ಪ್ರಸಂಗವಿದೆ—

**ನ ದ್ವಿತೀಯ ತೃತೀಯೌ। ಸಮಾನವಿಭಕ್ತಿಕಪದದ್ವಯೇನ ಪ್ರಾತಿಪದಿಕಾರ್ಥೇತರಸ್ಯ ಅಭೇದರೂಪ ಸಂಸರ್ಗಸ್ಯ ಬೋಧನೇ ಅಖಂಡಾರ್ಥತ್ವಹಾನೇಃ। ನಹಿ ಕ್ರಿಯಾ ಕಾರಕಭಾವಾನ್ವಯ ಏವ ಸಂಸರ್ಗಃ। 'ನೀಲಮುತ್ಪಲಂ' 'ನಿರ್ಘಟಂ ಭೂತಲಂ' 'ಘಟಃ ಪಟೋ ನ' ಇತ್ಯಾದೇರಪಿ ಅಖಂಡಾರ್ಥತ್ವಾಪಾತಾತ್।**

ಯದ್ಯಪಿ ಆನಂದಬೋಧನು ಪ್ರಮಾಣಮಾಲಾದಲ್ಲಿ ಹೇಳಿದ್ದಾನೆ—'ಸೋಽಯಂ' ಎಂಬಲ್ಲಿ

ಅಭೇದ ಸಂಸರ್ಗಬೋಧವಿದ್ದರೂ ಅದು ಆರೋಪಿತಭೇದಾಭಾವ ಮಾತ್ರವಾದ್ದರಿಂದ ಅಖಂಡಾರ್ಥವೆ. 'ನಿರ್ಘಟಂ ಭೂತಲಂ' ಇತ್ಯಾದಿ ಅಭಾವಸ್ಥಳದಲ್ಲಿ ಅಭಾವಸಂಸರ್ಗ ಕಾಣುವುದು ಉಚಿತವಾದ್ದರಿಂದ ಅಖಂಡಾರ್ಥತ್ವಕ್ಕೆ ವಿರೋಧಿಯಲ್ಲ. ಆದರೂ ಭೂತಲತ್ವ ಘಟತ್ವಾದಿ ಭಾವಸಂಸರ್ಗ ಕಾಣುವುದು ಉಚಿತವಲ್ಲವಾದ್ದರಿಂದ ಅಖಂಡಾರ್ಥಕ್ಕೆ ವಿರೋಧಿ. ಹೀಗಾಗಿ ಅಖಂಡಾರ್ಥತ್ವವಿಲ್ಲ. ಅಭಾವಸ್ಥಳದಲ್ಲಿ ಈರೀತಿ ವಿಭಾಗ. ಭಾವಸ್ಥಳದಲ್ಲಿ ಹೀಗಿಲ್ಲ. ಆರೋಪಿತ ಭೇದಾಭಾವ ಮಾತ್ರ ಕಂಡರೆ ಅಖಂಡಾರ್ಥತ್ವಕ್ಕೆ ಭಂಗವಿಲ್ಲ. ಹೀಗೆ ನಿರ್ಘಟಂ ಭೂತಲಂ ಇತ್ಯಾದಿ ಸ್ಥಳದಲ್ಲಿ ಅಭಾವಾಂಶದಲ್ಲಿ ಅಖಂಡಾರ್ಥತ್ವಕ್ಕೆ ಸ್ವೋಚಿತ ಸಂಸರ್ಗರೂಪವಾದ ಅಭಾವಸಂಸರ್ಗಕ್ಕಿಂತ ಅನ್ಯವಾದ ಘಟತ್ವಾದಿ ಭಾವಸಂಸರ್ಗವಿರುವುದರಿಂದ ಅಲ್ಲಿ ಅಖಂಡಾರ್ಥತ್ವವಿಲ್ಲ. ಸೋಽಯಂ ಎಂಬಲ್ಲಿ ಸ್ವೋಚಿತವಾದ ಆರೋಪಿತಭೇದಾಭಾವ ಸಂಸರ್ಗ ಮಾತ್ರವಿರುವುದರಿಂದ ಅಖಂಡಾರ್ಥತ್ವವಿದೆ. ಅಭಾವಾಂಶದಲ್ಲಿ ಅಖಂಡಾರ್ಥಸಖಂಡಾರ್ಥ ವೆಂದು ಭೇದವಿದೆ, ವಿಭಾಗವಿದೆ. ಭಾವಾಂಶದಲ್ಲಿ ಮಾತ್ರ ಈ ಭೇದವನ್ನು ವಿಭಾಗವನ್ನು ನಾವು ಒಪ್ಪುವುದಿಲ್ಲ' ಎಂದು.

ಆದರೆ ಆನಂದಬೋಧನ ಅಭಿಪ್ರಾಯದಲ್ಲಿ 'ಸಂಸರ್ಗಾಸಂಸರ್ಗಿಸಮ್ಯಗ್ಧೀಃ' ಎಂದು ಹೇಳಿದ ಸಾಂಸರ್ಗಿಕವಿಷಯತಾ ಶೂನ್ಯತ್ವವು ಅಖಂಡಾರ್ಥಲಕ್ಷಣವಲ್ಲ. ಸಾಂಸರ್ಗಿಕವಿಷಯತಾ ಇದ್ದರೂ ಅಖಂಡಾರ್ಥವಾಗಬಹುದು. 'ಸೋಽಯಂ' ಎಂಬಲ್ಲಿ ಅಭೇದಸಂಸರ್ಗವನ್ನು ಒಪ್ಪಿದ್ದಾನೆ. 'ನಿರ್ಘಟಂ' ಎಂಬಲ್ಲಿಯೂ ಅಭಾವ ಸಂಸರ್ಗವನ್ನು ಅಖಂಡಾರ್ಥಕ್ಕೆ ಅವಿರೋಧಿಯೇ ಎಂದು ಒಪ್ಪಿದ್ದಾನೆ. ಆದರಿಂದ 'ಸ್ವೋಚಿತ ಪ್ರಾತಿಪದಿಕಾರ್ಥವ್ಯತಿರಿಕ್ತಸಂಸಾರ್ಗಾನ್ಯ ಸಂಸರ್ಗ–ಅಬೋಧಕತ್ವ'ವು ಅಖಂಡಾರ್ಥತ್ವಲಕ್ಷಣ ಎಂದಂತಾಯಿತು. ಆದರೆ ಈ ಲಕ್ಷಣ ಎಲ್ಲ ವಾಕ್ಯಗಳಲ್ಲಿಯೂ ಬರುವುದರಿಂದ ಅತಿವ್ಯಾಪ್ತವಾಯಿತು. ಸ್ವೋಚಿತ ಸಂಸರ್ಗಾನ್ಯಸಂಸರ್ಗ ಬೋಧಕತ್ವ ಎಲ್ಲಿಯೂ ಬರುವುದಿಲ್ಲ. ನೀಲಮುತ್ಪಲಂ ಎಂಬಲ್ಲಿ ಸ್ವೋಚಿತ ಸಂಸರ್ಗ ನೀಲತ್ವ ಉತ್ಪಲತ್ವಸಂಸರ್ಗ. ಅದಕ್ಕಿಂತ ಅನ್ಯವಾದ ಗೋಕರ್ಮಕ ಆನಯನಾದಿ ಸಂಸರ್ಗಬೋಧಕತ್ವವು ನೀಲಮುತ್ಪಲಂ ಎಂಬ ವಾಕ್ಯಕ್ಕೆ ಬರುವುದಿಲ್ಲ. ಅಬೋಧಕತ್ವ ಬಂದಿತೆಂದು ಅತಿವ್ಯಾಪ್ತಿ—

**ನ ಚ 'ಭಾವಾಂಶಭೇದಾಭಾವ ಮಾತ್ರೇಣ ಅಖಂಡಾರ್ಥತ್ವಂ' ಇತಿ ಆನಂದಬೋಧೋಕ್ತಂ ಯುಕ್ತಂ। ಸ್ವೋಚಿತಸಂಸರ್ಗಾನ್ಯ ಸಂಸರ್ಗಾಬೋಧಕತ್ವಸ್ಯ ಸರ್ವತ್ರ ಸತ್ವಾತ್।**

'ತತ್ತಾ ಇದಂತಾಗಳಿಂದ ಉಪಲಕ್ಷಿತರಾದ ಇಬ್ಬರ ಅಭೇದದಿಂದ ಉಪಲಕ್ಷಿತನಾದ ದೇವದತ್ತನಲ್ಲಿ 'ಸೋಽಯಂ ದೇವದತ್ತಃ' ಎಂಬ ವಾಕ್ಯಕ್ಕೆ ತಾತ್ಪರ್ಯ' ಎನ್ನುವುದು ಹಿಂದೆ ಹೇಳಿದ ಮೂರನೇ ಪಕ್ಷ. ತತ್ತೋಪಲಕ್ಷಿತಾಭೇದದಿಂದ ಉಪಲಕ್ಷಿತನಾದ ದೇವದತ್ತನಿಗೆ ಇದಂತೋಪಲಕ್ಷಿತಾ ಭೇದದಿಂದ ಉಪಲಕ್ಷಿತನಾದ ದೇವದತ್ತನ ಅಭೇದವು 'ಸೋಽಯಂ' ಎಂಬಲ್ಲಿ ಲಕ್ಷಣಯಾ

ಕಾಣುತ್ತದೆ. ಇಲ್ಲಿ ಉಪಲಕ್ಷಣವಾದ ಅಭೇದದಿಂದ ಉಪಲಕ್ಷ್ಯನು ದೇವದತ್ತನೆನ್ನುವುದು ಕೂಡುವುದಿಲ್ಲ. ಏಕೆಂದರೆ ದೇವದತ್ತಸ್ವರೂಪವು ಮೊದಲೇ ನಿಶ್ಚಿತವಾಗಿ ತಿಳಿದಿರುವುದರಿಂದ ತತ್ತೇದಂತೋಪಲಕ್ಷಿತಾಭೇದರೂಪ ಉಪಲಕ್ಷಣದಿಂದ ಅವನನ್ನು ತಿಳಿಯಬೇಕಾದ ಪ್ರಸಂಗವಿಲ್ಲ. ಆದರಿಂದ ಅಭೇದವು ಉಪಲಕ್ಷಣವಾಗುವುದಿಲ್ಲ. ಮತ್ತು ದೇವದತ್ತನ ಅಭೇದವು ದೇವದತ್ತನಲ್ಲಿ ಪ್ರತ್ಯಕ್ಷ ಕಾಣುತ್ತದೆ.

ಇಲ್ಲಿ ತತ್ತೇಂದತೋಪಲಕ್ಷಿತಾಭೇದವು 'ದೇವದತ್ತನಲ್ಲಿ ಉಪಲಕ್ಷಣ' ಎಂದು ಒಂದು ಪಕ್ಷ. 'ದೇವದತ್ತನ ಅಭೇದದಲ್ಲಿ ಉಪಲಕ್ಷಣ' ಎಂದು ಇನ್ನೊಂದು ಪಕ್ಷ. ಮೊದಲನೆ ಪಕ್ಷಕ್ಕೆ ದೋಷವನ್ನು ಹೇಳಿ ಇದೀಗ ಎರಡನೇ ಪಕ್ಷಕ್ಕೆ ದೋಷ—

'ಅಭೇದವು ದೇವದತ್ತನಲ್ಲಿರುವ ತನ್ನ ಅಭೇದಕ್ಕೇ ಉಪಲಕ್ಷಣ ಎಂದು ಹೇಳಿದರೂ ದೇವದತ್ತನನ್ನು ಪ್ರತ್ಯಕ್ಷದಿಂದ ತಿಳಿದಾಗಲೇ ಅವನಿಗೆ ತನ್ನಲ್ಲಿ ತನ್ನ ಅಭೇದವೂ ಇರುವುದು ಕೂಡ ಪ್ರತ್ಯಕ್ಷದಿಂದ ತಿಳಿದೇ ಇರುತ್ತದೆ. ಆದರಿಂದ ಅಭೇದವು ಅಭೇದಕ್ಕೆ ಉಪಲಕ್ಷಣವೆನ್ನಲು ಬರುವುದಿಲ್ಲ—

**ಉಪಲಕ್ಷಣೇನ ಅಭೇದೇನ ಉಪಲಕ್ಷ್ಯಸ್ಯ ದೇವದತ್ತಸ್ಯ ಪ್ರಾಗೇವ ನಿಶ್ಚಿತತ್ವೇನ ತಸ್ಯೋಪಲಕ್ಷಣತ್ವಾಯೋಗಾಚ್ಚ। ದೇವದತ್ತೇ ದೇವದತ್ತಾಭೇದಸ್ಯ ಪ್ರತ್ಯಕ್ಷ ಸಿದ್ಧತ್ವಾಚ್ಚ।**

ದೇವದತ್ತನನ್ನು ಕಂಡಾಗ ಅವನಲ್ಲಿ ಅವನ ಅಭೇದ ಪ್ರತ್ಯಕ್ಷ ಕಾಣಸುವುದು ನಿಜವೆ. ಆದರೆ ಇದು ಕೇವಲ ದೇವದತ್ತಾಭೇದ, ಹೊರತು ತತ್ತೋಪಲಕ್ಷಿತ ಅಭೇದೋಪಲಕ್ಷಿತ ದೇವದತ್ತನ ಅಭೇದವಲ್ಲ. ದೇವದತ್ತನಲ್ಲಿ ಪ್ರತ್ಯಕ್ಷ ಕಾಣುವ ದೇವದತ್ತಾಭೇದದಲ್ಲಿ ತತ್ತೋಪಲಕ್ಷಿತಾಭೇದವು ಉಪಲಕ್ಷಣ. '**ತಸ್ಮಾತ್ ಅಭೇದೋ ನ ಸಿದ್ಧಃ**' 'ತಸ್ಮಾತ್ ಅಭೇದ' ಎಂದರೆ ಸೋಯಂ ಎಂಬಲ್ಲಿ 'ಸಃ' ಎಂದು ಉಕ್ತನಾಗುವ ತತ್ತೋಪಲಕ್ಷಿತನಿಂದ ಅಭೇದ. ಅದು ಉಪಲಕ್ಷಣವಾಗಿ ದೇವದತ್ತನಲ್ಲಿ 'ನ ಸಿದ್ಧಃ' ಸಿದ್ಧವಾಗಿಲ್ಲ. ಎಂದು ಅದ್ವೈತಿ ಹೇಳುತ್ತಿದ್ದಾನೆ. ಇದೊಂದೇ ಅರ್ಥವಲ್ಲ. ಮೂರು ಬೇರೆ ಬೇರೆ ಅರ್ಥಗಳಿವೆ. ಆದಕ್ಕೆ 'ತಸ್ಮಾತ್ ಇತಿ ಕೋರ್ಥಃ?' ಎನ್ನುತ್ತ ಮೂರು ವಿಕಲ್ಪಗಳನ್ನು ಮಾಡುತ್ತಾರೆ—

'ತಸ್ಮಾತ್' ಎಂದರೆ ತತ್‌ಶಬ್ದದ ಶಕ್ಯಾರ್ಥವಿಟ್ಟುಕೊಂಡು 'ತತ್ತಾವಿಶಿಷ್ಟಾತ್' ಎಂದು ಅರ್ಥವೆ, ಲಕ್ಷ್ಯಾರ್ಥವಿಟ್ಟುಕೊಂಡು 'ತತ್ತೋಪಲಕ್ಷಿತಾತ್' ಎಂದರ್ಥವೆ? ಅಥವಾ ತಾತ್ಪರ್ಯಾರ್ಥ ವಿಟ್ಟುಕೊಂಡು ತಚ್ಛಬ್ದದಿಂದ ವಿವಕ್ಷಿತವಾದ ದೇವದತ್ತ 'ಸ್ವರೂಪಮಾತ್ರಾತ್' ಎಂದರ್ಥವೆ?—

**ತಸ್ಮಾದಭೇದೋ ನ ಸಿದ್ಧ ಇತಿ ಚೇತ್ ತಸ್ಮಾದಿತಿ ಕೋಽರ್ಥಃ? ಕಿಂ ತತ್ತಾ ವಿಶಿಷ್ಟಾದಿತಿ, ಕಿಂ ವಾ ತತ್ತೋಪಲಕ್ಷಿತಾದಿತಿ, ಯದ್ವಾ ತಚ್ಛಬ್ದೇನ ವಿವಕ್ಷಿತಾತ್ ಸ್ವರೂಪಮಾತ್ರಾದಿತಿ**

ಮೊದಲನೆಯ ಎರಡೂ ಪಕ್ಷಗಳಲ್ಲಿ ದೇವದತ್ತನಲ್ಲಿ ಕಾಣುವ ದೇವದತ್ತಾಭೇದದಲ್ಲಿ ತತ್ತಾವಿಶಿಷ್ಟದ ಅಭೇದ ಮತ್ತು ತತ್ತಾಉಪಲಕ್ಷಿತದ ಅಭೇದಗಳು ಉಪಲಕ್ಷಣವಾಗಿ ಕಂಡರೆ ಅದು ಪ್ರಕಾರವಾಗಿ ಕಾಣುವುದರಿಂದ, ಸಪ್ರಕಾರಜ್ಞಾನವಾಗುವುದರಿಂದ ಸಖಂಡಾರ್ಥತ್ವ ಬಂದೀತು. ಹಿಂದೆ ಹೇಳಿದಂತೆ ದೇವದತ್ತಾಭೇದವು ಉಪಲಕ್ಷ್ಯವಾಗಬೇಕಾದರೆ ದೇವದತ್ತಾಭೇದತ್ವರೂಪವಾದ ಉಪಲಕ್ಷ್ಯತಾವಚ್ಛೇದಕ ಬೇಕಾಗುತ್ತದೆ. ಅದು ಧರ್ಮಿತಾವಚ್ಛೇದಕವಾಗಿ ದೇವದತ್ತಾಭೇದದಲ್ಲಿ ಕಂಡರೆ ಪ್ರಾತಿಪದಿಕಾರ್ಥಾತಿರಿಕ್ತ ಸಂಸರ್ಗ ಕಂಡಂತಾಗುವುದರಿಂದ ಸಖಂಡಾರ್ಥತ್ವ ಅಪರಿಹಾರ್ಯ. ಅದಕ್ಕೆ ಉಪಲಕ್ಷ್ಯಾಕಾರ ಬೇರೆ ಇಲ್ಲ, ಸ್ವರೂಪವೇ ಉಪಲಕ್ಷ್ಯಾಕಾರ ಎನ್ನುತ್ತಾನೆ. ಆಗ ಸ್ವರೂಪ ಪ್ರತ್ಯಕ್ಷಸಿದ್ಧವೇ ಇರುವುದರಿಂದ ಅದಕ್ಕೆ ಉಪಲಕ್ಷಣ ಬೇಡ. ಉಪಲಕ್ಷಣಕ್ಕೆ ಉಪಲಕ್ಷಣತ್ವವೇ ಕೂಡುವುದಿಲ್ಲ.

'ತಸ್ಮಾತ್ ಅಭೇದಃ' ಎಂದರೆ 'ತಚ್ಛಬ್ದವಿವಕ್ಷಿತವಾದ ದೇವದತ್ತಸ್ವರೂಪಮಾತ್ರಾತ್ ಅಭೇದ' ಎಂದರೆ ಸ್ವರೂಪಮಾತ್ರವು ಪ್ರತ್ಯಕ್ಷಸಿದ್ಧವೆ ಎಂದು ಉತ್ತರವನ್ನು ಹಿಂದೆಯೇ ಕೊಟ್ಟಿದೆ.

ಏವಂಚ—ಸಾರಾಂಶವಿಷ್ಟು-'ದೇವದತ್ತ ಸ್ವರೂಪಮಾತ್ರವು ಪ್ರತ್ಯಕ್ಷಸಿದ್ಧವಾಗಿರುವುದರಿಂದ ಅದನ್ನು 'ಸೋಽಯಂ' ಇತ್ಯಾದಿ ವಾಕ್ಯ ಸರ್ವಥಾ ಬೋಧಿಸಬೇಕಾಗಿಲ್ಲ. ತತ್ತೇದಂತಾವಿಶಿಷ್ಟಾಭೇದ, ತತ್ತೇದಂತಾವೈಶಿಷ್ಟ್ಯ ಮತ್ತು ತತ್ತೇದಂತೋಪಲಕ್ಷಿತತ್ವಗಳಿಂದ ವಿಶಿಷ್ಟವಾದ ದೇವದತ್ತಸ್ವರೂವನ್ನೇ ಬೋಧಿಸಬೇಕು. ಅದರಿಂದ ಸಖಂಡಾರ್ಥತ್ವವು ಅಪರಿಹಾರ್ಯ' ಎಂದು—

ನಾದ್ಯದ್ವಿತೀಯೌ । ಸಖಂಡಾರ್ಥತ್ವಾಪಾತಾತ್ । ಉಕ್ತರೀತ್ಯಾ ಉಪಲಕ್ಷ್ಯಾಕಾರಾಭಾವೇನ ಉಪಲಕ್ಷಣತ್ವಾಯೋಗಾಚ್ಚ । ನ ತೃತೀಯಂ ದತ್ತೋತ್ತರತ್ವಾತ್ । ಏವಂಚ—

ಪ್ರತ್ಯಕ್ಷತ್ವಾದ್ದೇವದತ್ತ ಸ್ವರೂಪಂ ನೈವ ಬೋಧ್ಯತೇ ।
ಸೋಯಮಿತ್ಯಾದಿ ವಾಕ್ಯೇನ ಕಿಂತ್ವೈಕ್ಯಾದಿವಿಶೇಷಿತಂ ॥



अपिच सोऽयमिति प्रत्यक्षप्रत्यभिज्ञा तावन्नाखंडार्थविषया । तत्र शब्दवृत्तेर्लक्षणाया अयोगात्, तत्तेदंतादेरभेदस्य च प्रकारस्योल्लेखानुभवाच । तदनुल्लेखे प्रत्यभिज्ञाया अभिज्ञातो विशेषो न स्यात् । तथाच शाब्दप्रत्यभिज्ञापि तथा । स्वप्रत्यभिज्ञावगतस्यैव परं प्रति बोधनात् । तस्मात् दुष्परिहरं साध्यवैकल्यम् ।

।। तदनुल्लेख इति ।। यद्यप्यभिज्ञाया इदंतावैशिष्ट्यविधायकत्वादस्ति विशेषः।

तथाप्युक्तानुभवविरोध एव तात्पर्यम् । अस्तु प्रत्यक्षप्रत्यभिज्ञायाः संसर्गविषयत्वं तथापि शब्दे किमायातमित्यत आह— **तथाचेति** ।।



'ಸೋಯಂ' ಎಂಬ ಶಾಬ್ದಪ್ರತ್ಯಭಿಜ್ಞಾ ಸಂಖಂಡಾರ್ಥವೆ ಏಕೆಂದರೆ ಅದು ಪ್ರತ್ಯಕ್ಷ ಪ್ರತ್ಯಭಿಜ್ಞಾಕ್ಕೆ ಸಮಾನವಿಷಯಕವಾಗಿರುತ್ತದೆ. ತನ್ನ ಸಂದೇಹ ನಿವರ್ತಕವಾಗಿ ತಾನು ಪ್ರತ್ಯಕ್ಷ ಪ್ರತ್ಯಭಿಜ್ಞಾದಿಂದ ತಿಳಿದುದನ್ನೇ ವಾಕ್ಯದಿಂದ ಪರರಿಗೆ ಅವರ ಸಂದೇಹನಿವೃತ್ತಿಗಾಗಿ ಹೇಳಬೇಕು ತಾನೆ? ಅದರಿಂದ ಪ್ರತ್ಯಕ್ಷ ಪ್ರತ್ಯಭಿಜ್ಞಾನವನ್ನು ಮೊದಲಿಗೆ ತಿಳಿಯಬೇಕು. ಅದು ಸಖಂಡಾರ್ಥವಾಗಿರುವುದು ಸಾಕ್ಷಿಸಿದ್ಧ. ಸಹಜ. ಏಕೆಂದರೆ ಅದರಲ್ಲಿ ಲಕ್ಷಣಾ ಇಲ್ಲ. ಲಕ್ಷಣೆಯು ಶಬ್ದವೃತ್ತಿ.

ಯದ್ಯಪಿ ಪ್ರತ್ಯಕ್ಷ ಪ್ರತ್ಯಭಿಜ್ಞೆಗೆ ಶಬ್ದವೃತ್ತಿಯ ಅಪೇಕ್ಷೆ ಇಲ್ಲದಿದ್ದರೂ ವಿಶಿಷ್ಟಾಭೇದ ಪ್ರತ್ಯಕ್ಷಕ್ಕೆ ಬಾಧೋಪಸ್ಥಿಯು ಪ್ರತಿಬಂಧಕವಾಗುವುದರಿಂದ ಅದು ಸ್ವರೂಪಾಭೇದವನ್ನೆ ಗ್ರಹಿಸುತ್ತದೆ ಎನ್ನಲು ಶಕ್ಯವಿದೆ. ಆದರೆ 'ಯದನ್ವಿತತಯಾ ಜ್ಞಾತೇ ಏವ ತಾತ್ಪರ್ಯವಿಷಯ–ಇತರಾನ್ವಯ ಬುದ್ಧಿಃ ತತ್ವಂ ವಿಶೇಷಣತ್ವಂ' ಎಂದು ಹೇಳಿದಂತೆ ವಿಶೇಷಣಲಕ್ಷಣವಿಟ್ಟುಕೊಂಡಾಗ ವಿಶಿಷ್ಟಾಭೇದವು ವಿಶೇಷಣಾವಚ್ಛಿನ್ನ ವಿಶೇಷ್ಯಾಭೇದರೂಪವಾದ್ದರಿಂದ ಬಾಧಕ್ಕೆ ಪ್ರಸಕ್ತಿ ಇಲ್ಲ. ಆದರಿಂದ ಪ್ರತ್ಯಕ್ಷ ಪ್ರತ್ಯಭಿಜ್ಞೆಯು, 'ತತ್ವೇನ ಇದಂತ್ವೇನ ಅಭೇದೇನ ಚ ದೇವದತ್ತಂ ಪ್ರತ್ಯಭಿಜಾನಾಮಿ' 'ಅವನೆಂದೂ ಇವನೆಂದೂ ಇಬ್ಬರೂ ಒಬ್ಬನೆ ಎಂದೂ ದೇವದತ್ತನನ್ನು ಗುರುತಿಸುತ್ತಿದ್ದೇನೆ' ಎಂದು ಬರುವುದು ಸಾಕ್ಷಿ ಅನುಭವಸಿದ್ಧವಾಗಿದೆ. ಪ್ರತ್ಯಭಿಜ್ಞೆಯಲ್ಲಿ ಈ ಮೂರೂ ಆಕಾರಗಳಿಲ್ಲವೆಂದರೆ, ಕೇವಲ ದೇವದತ್ತಸ್ವರೂಪವನ್ನೇ ವಿಷಯೀಕರಿಸುತ್ತದೆ ಎಂದರೆ, 'ಇವನು ದೇವದತ್ತ' ಎಂಬ ಅಭಿಜ್ಞೆಗಿಂತ ಅಂದರೆ ಪ್ರತ್ಯಕ್ಷಾನುಭವಕ್ಕಿಂತ ಪ್ರತ್ಯಭಿಜ್ಞಾಕ್ಕೆ ಏನೂ ವಿಶೇಷವಿಲ್ಲವೆಂದಾದೀತು.

ಯದ್ಯಪಿ ಅಭಿಜ್ಞೆಯು 'ಅಯಂ ದೇವದತ್ತಃ' ಎಂದು ದೇವದತ್ತನಲ್ಲಿ ಇದಂತ್ವವನ್ನು, ಏತದ್ದೇಶಕಾಲಸಂಬಂಧವನ್ನು ವಿಧಾನಮಾಡುತ್ತದೆ. ಪ್ರತ್ಯಭಿಜ್ಞೆ ಹಾಗೆ ಮಾಡುವುದಿಲ್ಲ. ಕೇವಲ ದೇವದತ್ತಸ್ವರೂಪವನ್ನೇ ವಿಷಯೀಕರಿಸುತ್ತದೆ. ಅದರಿಂದ ಪ್ರತ್ಯಭಿಜ್ಞೆಗಿಂತ ಅಭಿಜ್ಞೆಯಲ್ಲಿ ವೈಲಕ್ಷಣ್ಯವಿಲ್ಲ ಎನ್ನುವಂತಿಲ್ಲ. ಆದರೆ, ಅನುಭವಕ್ಕೆ ವಿರುದ್ಧವಾಗಿ 'ಪ್ರತ್ಯಭಿಜ್ಞೆಯಲ್ಲಿ ತತ್ತಾ ಇದಂತಾ ಅಭೇದಗಳು ಕಾಣುವುದಿಲ್ಲ' ಎಂದರೆ ಅಭಿಜ್ಞೆಯಲ್ಲಿಯೂ ಇದಂತಾವೈಶಿಷ್ಟ್ಯವಿಧಾನವನ್ನು ಅಪಲಾಪ ಮಾಡಬಹುದು. ಎನ್ನುವ ಅಭಿಪ್ರಾಯದಿಂದ ಪ್ರತ್ಯಭಿಜ್ಞಾ ಅಭಿಜ್ಞಾಗಳಿಗೆ ವೈಲಕ್ಷಣ್ಯ ಇಲ್ಲವೆಂದು ಆಪಾದಿಸುತ್ತಿದ್ದಾರೆ—

**ಅಪಿಚ ಸೋಽಯಮಿತಿ ಪ್ರತ್ಯಕ್ಷ ಪ್ರತ್ಯಭಿಜ್ಞಾ ತಾವನ್ನಾಖಂಡಾರ್ಥ ವಿಷಯಾ ತತ್ರ ಶಬ್ದವೃತ್ತೇರ್ಲಕ್ಷಣಾಯಾ ಅಯೋಗಾತ್। ತತ್ತೇದಂತಾದೇರಭೇದಸ್ಯ ಚ**

**ಪ್ರಕಾರಸ್ಯೋಲ್ಲೇಖಾನುಭವಾಚ್ಚ। ತದನುಲ್ಲೇಖೇ ಪ್ರತ್ಯಭಿಜ್ಞಾಯಾ ಅಭಿಜ್ಞಾತೋ-ವಿಶೇಷೋ ನ ಸ್ಯಾತ್ ।**

ಹೀಗಾಗಿ ಪ್ರತ್ಯಕ್ಷ ಪ್ರತ್ಯಭಿಜ್ಞೆಯಲ್ಲಿ ತತ್ತಾದಿ ಆಕಾರಗಳಿರುವುದರಿಂದ ಶಾಬ್ದಪ್ರತ್ಯಭಿಜ್ಞೆ ಯಲ್ಲಿ ಅವು ಇವೆ ಎನ್ನಲೇಬೇಕು. ಪ್ರತ್ಯಕ್ಷಪ್ರತ್ಯಭಿಜ್ಞಾದಲ್ಲಿ ಕಂಡಿದ್ದನ್ನೆ ಪರರಿಗೆ ಬೋಧಿಸಬೇಕು ತಾನೆ? ಆದರಿಂದ ದೃಷ್ಟಾಂತದಲ್ಲಿ ಸಾಧ್ಯವೈಕಲ್ಯ ಅಪರಿಹಾರ್ಯ—

**ತಥಾ ಚ ಶಾಬ್ದಪ್ರತ್ಯಭಿಜ್ಞಾಪಿ ತಥಾ। ಸ್ವಪ್ರತ್ಯಭಿಜ್ಞಾವಗತಸ್ಯೈವ ಪರಂ ಪ್ರತಿಬೋಧನಾತ್ । ತಸ್ಮಾದ್ ದುಷ್ಪರಿಹರಂ ಸಾಧ್ಯವೈಕಲ್ಯಂ ।**



किंच तत्त्वमसीत्यस्याभेदविशिष्टे तदुपलक्षिते वा तात्पर्यं चेदुक्तरीत्या अभेदरूपसंसर्गबोधनेन सखंडार्थत्वम् । किंच चिन्मात्रस्य चिन्मात्रेणाभेदबोधने इष्टापत्तिरप्रसक्तनिषेधश्च । तत्पदादिवाच्यसार्वज्ञाद्युपलक्षिताभेदबोधने तु सखंडार्थत्वम् । सार्वज्ञादेः प्रकारत्वेनानुप्रवेशात् । चैतन्यमात्रपरत्वं चेत्, तस्य स्वप्रकाशस्य नित्यसिद्धतयोपदेशवैयर्थ्यम् । वाक्यात्प्राक्चैतन्याज्ञाने उक्तरीत्या तत्र बुभुत्सा च न स्यात् । तस्या धर्मिज्ञानसाध्यत्वात् । भेदभ्रमश्च न स्यात् । अधिष्ठानज्ञानाभावात् । महावाक्येन भेद-भ्रांतिनिवृत्तिश्च न स्यात् । भ्रमकालज्ञाताधिष्ठानादधिकाबोधनात् । महावाक्यस्यावांतरवाक्येन गतार्थत्वं च स्यात् । तत्पदार्थशोधकेन सत्यं ज्ञानम् इत्यादिना त्वंपदार्थशोधकेन योऽयं विज्ञानमय इत्यादिना चावांतरवाक्येन लक्षणया शुद्धचैतन्यबोधनात् ।

दृष्टांतोक्तदूषणानि दार्ष्टांतिकेऽप्याह— **किंचेति** ।। तत्त्वमसीत्यस्य किमभेदविशिष्टे तात्पर्यम्, किमभेदोपलक्षिते वा उत तत्त्वंपदोपस्थापितचिन्मात्राभेदे वा सार्वज्ञाद्युपलक्षिताभेदे वा चैतन्यमात्रे वेति विकल्प्य आद्यौ निरस्य तृतीयं निराचष्टे— **किंच चिन्मात्रस्येति** ।। तुरीये त्वाह— **तत्पदादीति** ।। नापि पंचम इत्याह— **चैतन्यमात्रेति** ।।



'ತತ್ವಮಸಿ' ವಾಕ್ಯಕ್ಕೆ ಅಭೇದ ವಿಶಿಷ್ಟದಲ್ಲಿ ಅಥವಾ ಅಭೇದೋಪಲಕ್ಷಿತದಲ್ಲಿ ತಾತ್ಪರ್ಯವೆಂದಾದರೆ ಹಿಂದೆ ಹೇಳಿದಂತೆ ಅಭೇದರೂಪಸಂಸರ್ಗ ಬೋಧನ ಮಾಡುವುದರಿಂದ ಅಖಂಡಾರ್ಥತ್ವಭಂಗ. ಸ್ವರೂಪಲಕ್ಷಣಾ ಮಾಡಿ ಚಿನ್ಮಾತ್ರಕ್ಕೆ ಚಿನ್ಮಾತ್ರದ ಅಭೇದವನ್ನು ಬೋಧಿಸುವುದಾದರೆ ದ್ವೈತಿಗಳಿಗೆ ಇಷ್ಟಾಪತ್ತಿ. ಮತ್ತು ಅಪ್ರಸಕ್ತನಿಷೇಧ. ಚಿನ್ಮಾತ್ರಕ್ಕೆ ಚಿನ್ಮಾತ್ರದಿಂದ ಭೇದಪ್ರಸಕ್ತಿ ಇಲ್ಲ. ವಿಶಿಷ್ಟಗಳಿಗೇ ಭೇದಪ್ರಸಕ್ತಿ.—

**ಕಿಂಚ ತತ್ವಮಸೀತ್ಯಸ್ಯ ಅಭೇದವಿಶಿಷ್ಟೇ ತದುಪಲಕ್ಷಿತೇ ವಾ ತಾತ್ಪರ್ಯಂ ಚೇತ್ ಉಕ್ತರೀತ್ಯಾ ಅಭೇದರೂಪ ಸಂಸರ್ಗ ಬೋಧನೇನ ಸಖಂಡಾರ್ಥತ್ವಂ। ಕಿಂಚ ಚಿನ್ಮಾತ್ರಸ್ಯ ಚಿನ್ಮಾತ್ರೇಣ ಅಭೇದ ಬೋಧನೇ ಇಷ್ಟಾಪತ್ತಿಃ। ಅಪ್ರಸಕ್ತಪ್ರತಿಷೇಧಶ್ಚ।**

ತತ್ವದಾದಿವಾಚ್ಯಸಾರ್ವಜ್ಞಾದಿಉಪಲಕ್ಷಿತ ಚಿನ್ಮಾತ್ರಗಳಿಗೆ ಭೇದಪ್ರಸಕ್ತಿ ಇರುವುದರಿಂದ ಐಕ್ಯಕೂಡುವುದೆಂದರೆ ಸಾರ್ವಜ್ಞಾದಿಉಪಲಕ್ಷಿತತ್ವವು ಪ್ರಕಾರವಾಗಿ ಕಾಣುವುದರಿಂದ ಸಖಂಡಾರ್ಥತ್ವ ಅವಶ್ಯಕ. ಚೈತನ್ಯ ಮಾತ್ರದಲ್ಲಿಯೆ ತಾತ್ಪರ್ಯ ಹೊರತು ಅಭೇದವಿಶಿಷ್ಟದಲ್ಲಿ ಅಲ್ಲ, ಅಭೇದಉಪಲಕ್ಷಿತದಲ್ಲಿಯೂ ಅಲ್ಲ, ಸಾರ್ವಜ್ಞಾದಿ ಉಪಲಕ್ಷಿತಾಭೇದದಲ್ಲಿಯೂ ಅಲ್ಲ ಎಂದರೆ, ಚೈತನ್ಯಮಾತ್ರವು ಸ್ವಪ್ರಕಾಶನಿತ್ಯಸಿದ್ಧವಾಗಿರುವುದರಿಂದ ತತ್ವಮಸಿ ವಾಕ್ಯವು ಅದನ್ನು ಉಪದೇಶಿಸುವುದು ವ್ಯರ್ಥ—

**ತತ್ವದಾದಿ ವಾಚ್ಯ ಸಾರ್ವಜ್ಞಾದ್ಯುಪಲಕ್ಷಿತಾಭೇದ ಬೋಧನೇ ತು ಸಖಂಡಾರ್ಥತ್ವಂ। ಸಾರ್ವಜ್ಞಾದೇಃ ಪ್ರಕಾರತ್ವೇನ ಅನುಪ್ರವೇಶಾತ್। ಚೈತನ್ಯ ಮಾತ್ರ ಪರತ್ವಂ ಚೇತ್, ತಸ್ಯ ಸ್ವಪ್ರಕಾಶಸ್ಯ ನಿತ್ಯಸಿದ್ಧತಯಾ ಉಪದೇಶವೈಯರ್ಥ್ಯಂ।**

ಈ ವಾಕ್ಯದ ಶ್ರವಣಕ್ಕಿಂತ ಪೂರ್ವದಲ್ಲಿ ಚೈತನ್ಯಮಾತ್ರವು ಅಜ್ಞಾತವಾಗಿದ್ದರೆ ಹಿಂದೆ ಹೇಳಿದಂತೆ ಅದರ ವಿಷಯದಲ್ಲಿ ಜಿಜ್ಞಾಸೆ ಉಂಟಾಗಲಾರದು. ಜಿಜ್ಞಾಸೆಗೆ ಧರ್ಮಿಜ್ಞಾನ ಮೊದಲಿಗೆ ಆವಶ್ಯಕ. ಅಧಿಷ್ಠಾನಜ್ಞಾನವಿಲ್ಲದ್ದರಿಂದ ಭೇದಾರೋಪವೂ ಶಕ್ಯವಿಲ್ಲ. ಭೇದಭ್ರಮ ಬಂದಿದ್ದರೆ ಅದಕ್ಕೆ ಕಾರಣವಾಗಿ ಅಧಿಷ್ಠಾನಜ್ಞಾನ ಮೊದಲಿಗೆ ಇದ್ದೇ ಇರಬೇಕು. ಭ್ರಮನಿವೃತ್ತಿಗೆ ಹೊರಟ ತತ್ವಮಸಿ ಮಹಾವಾಕ್ಯವು ಉಂಟುಮಾಡುವ ಜ್ಞಾನವು ಭ್ರಮಕಾಲದಲ್ಲಿ ಜ್ಞಾತವಾಗಿದ್ದ ಅಧಿಷ್ಠಾನ ಚೈತನ್ಯಕ್ಕಿಂತ ಹೆಚ್ಚೇನೂ ವಿಷಯವನ್ನು ವಿಷಯೀಕರಿಸದಿರುವುದರಿಂದ ಭ್ರಮ ನಿವೃತ್ತಿಯೂ ಅಶಕ್ಯ—

**ವಾಕ್ಯಾತ್ ಪ್ರಾಕ್ ಚೈತನ್ಯಾಜ್ಞಾನೇ ಉಕ್ತರೀತ್ಯಾ ತತ್ರ ಬುಭುತ್ಸಾ ಚ ನ ಸ್ಯಾತ್। ತಸ್ಯಾ ಧರ್ಮಿಜ್ಞಾನಸಾಧ್ಯತ್ವಾತ್। ಭೇದಭ್ರಮಶ್ಚ ನ ಸ್ಯಾತ್। ಅಧಿಷ್ಠಾನ ಜ್ಞಾನಾಭಾವಾತ್। ಮಹಾವಾಕ್ಯೇನ ಭೇದಭ್ರಾಂತಿ ನಿವೃತ್ತಿಶ್ಚ ನ ಸ್ಯಾತ್। ಭ್ರಮಕಾಲಜ್ಞಾತ-ಅಧಿಷ್ಠಾನಾತ್ ಅಧಿಕಾಬೋಧನಾತ್।**

ತತ್ವದಾರ್ಥಬ್ರಹ್ಮಲಕ್ಷಣ ಶೋಧಕವಾದ 'ಸತ್ಯಂಜ್ಞಾನಂ' ಮತ್ತು ತ್ವಂಪದಾರ್ಥಜೀವಲಕ್ಷಣ

ಬೋಧಕವಾದ 'ಯೋಽಯಂ ವಿಜ್ಞಾನಮಯಃ' ಎಂಬ ಅವಾಂತರವಾಕ್ಯ ಕೂಡ ಲಕ್ಷಣಯಾ ಚೈತನ್ಯ ಮಾತ್ರವನ್ನೇ ಗ್ರಹಿಸುವುದರಿಂದ ಅದರಿಂದಲೇ ಮಹಾವಾಕ್ಯವು ಗತಾರ್ಥವೂ ಆಗುವುದು.

**ಮಹಾವಾಕ್ಯಸ್ಯ ಅವಾಂತರ ವಾಕ್ಯೇನ ಗತಾರ್ಥತ್ವಂ ಚ ಸ್ಯಾತ್ ।**

**ತತ್ಪದಾರ್ಥಶೋಧಕೇನ 'ಸತ್ಯಂ ಜ್ಞಾನಂ' ಇತ್ಯಾದಿನಾ, ತ್ವಂಪದಾರ್ಥ ಶೋಧಕೇನ 'ಯೋಽಯಂ ವಿಜ್ಞಾನಮಯಃ' ಇತ್ಯಾದಿನಾ ಚ ಅವಾಂತರವಾಕ್ಯೇನ ಲಕ್ಷಣಯಾ ಶುದ್ಧ ಚೈತನ್ಯ ಬೋಧನಾತ್ ।**

'ತತ್ ತ್ವಂ ಪದಾರ್ಥ ಶೋಧಕವಾಕ್ಯವೆಂದರೆ, ವಿರುದ್ಧಾರ್ಥಗಳನ್ನು ಬಿಟ್ಟು ಅವಿರುದ್ಧವಾದ ಜ್ಞಾನಾನಂದಾದಿ ಸ್ವರೂಪತ್ತಾರ್ಥಬೋಧಕವಾಕ್ಯ.



**महावाक्य एवानेकपदवैयर्थ्यं स्यात् । एकेनैव पदेन लक्षणया शुद्धबोधनात् । कथं तेन भेदभ्रमनिरास इति चेत् । अधिकार्थाबोधने वाक्येनापि कथम् । नहि वाक्यमदृष्टद्वारा भ्रमनिवर्तकम् । नच तात्पर्याविषयेणाप्यभेदेन तन्निवृत्तिः । अतिप्रसंगात् ।**

**नचैकस्य पदस्य लाक्षणिकत्वाय पदांतरम्, तत्त्वमिति विरुद्धार्थवाचिपदद्वयस्य सामानाधिकरण्याधीनत्वाल्लक्षणाया इति विवरणोक्तं युक्तम् । चैतन्यपदेनैव विवक्षितसिद्धौ तत्त्वमिति लाक्षणिकपदद्वयेन तद्बोधनक्लेशायोगात् । गंगायां घोष इत्यत्रापि घोषपदं गंगाशब्दस्य लाक्षणिकत्वाय, नतु स्वार्थार्पणायेत्यापाताच्च । अभेदरूपान्वयाबोधने पदद्वयसामानाधिकरण्यस्य लक्षणाकल्पकत्वा-योगाच्च । सदेवेत्यादिपूर्ववाक्ये लक्षितचिन्मात्रस्य प्रकृतवाचिना तत्पदेन लक्षणां विनैव परामर्शसंभवाच्च । ''स वा एष महानज आत्मा'' इत्यादिमहावाक्ये लक्षणायाः स आत्मेतिपदद्वयसामानाधि-करण्येनैव सिद्ध्या पदान्तरवैयर्थ्याच्च । वाच्यार्थभेदग्राह्यतत्वा-वेदकप्रत्यक्षबाधकेन तत्वावेदकेनाद्वैतवाक्येन तयोरेव तात्त्विकाभेद-बोधनसंभवेन लक्षणाया अनपेक्षितत्वाच्च । एतेन वाक्यस्थपदस्यैव**

**लक्षकत्वादनेकपदोपादानमिति निरस्तम् । अन्वयानुपपत्तिरूपलक्षणाबीजार्थमेव वाक्यस्थत्वस्यापेक्षणात् त्वमसीत्युक्तेऽपि वाक्यस्थत्वसिद्धेश्च ।**

वाक्यजन्यमेव ज्ञानं भ्रमनिरासकमित्याशयेन शंकते— कथमिति ।। ननु चिन्मात्रपरमपि वाक्यमभेदमपि बोधयतीति न सखंडार्थत्वं । न वा भेदभ्रमनिरासकत्वानुपपत्तिरित्याशंक्य निराकरोति— **नचेति** ।। अभेदेनेति शेषः । किंच प्रत्यक्षविरोधेन हि तत्त्वंपदयोर्लक्षणा कल्प्या, प्रत्यक्षं च त्वन्मते दुर्बलत्वात् न तद्बाधकमिति वाक्यस्य विशिष्टाभेदबोधकत्वसंभवात् न लक्षणेत्याह— **वाच्यार्थ भेदेति । अन्वयानुपपत्तिरूपेति** ।। त्वन्मते अन्वयाभावेन तदनुपपत्तेरेवाभावात् वाक्यस्थत्वस्याकिंचित्करत्वेन एकपदेऽपि लक्षणा स्यादिति भावः।।



ಮಹಾವಾಕ್ಯದಲ್ಲಿಯೇ ಅನೇಕಪದಗಳು ಇರುವುದು ವ್ಯರ್ಥವಾದೀತು. ಒಂದೇ ಪದದಿಂದ ಲಕ್ಷಣಯಾ ಶುದ್ಧಬೋಧನವು ಶಕ್ಯವಿದೆ. ಆದರೆ ಒಂದು ಪದದಿಂದ ಬರುವ ಶುದ್ಧಬೋಧವು ಭೇದಾರೋಪವನ್ನು ಹೇಗೆ ನಿರಾಸಮಾಡೀತು? ಎಂದರೆ, ಹೆಚ್ಚಿನ ವಿಷಯವನ್ನೇನೂ ಹೇಳದ ವಾಕ್ಯದಿಂದಲಾದರೂ ಭೇದಾರೋಪ ನಿವೃತ್ತಿ ಹೇಗೆ? ವಾಕ್ಯವು ಕೇವಲ ಅದೃಷ್ಟದ್ವಾರಾ ಭ್ರಮನಿವೃತ್ತಿ ಮಾಡುವುದಿಲ್ಲ ತಾನೆ? ಮತ್ತು ಚಿನ್ಮಾತ್ರವೇ ವಾಕ್ಯತಾತ್ಪರ್ಯವಿಷಯ. ಅಭೇದವು ವಾಕ್ಯತಾತ್ಪರ್ಯವಿಷಯವಲ್ಲವೆಂದಮೇಲೆ ಅಂಥ ಅಭೇದವು ಹೇಗೆ ಭೇದನಿರಾಸಮಾಡೀತು? ಅಂಥ ಅಭೇದವೂ ಭೇದನಿರಾಸ ಮಾಡುವುದಾದರೆ 'ಯಜಮಾನಃ ಪ್ರಸ್ತರಃ' ಎಂಬಲ್ಲಿ 'ಪ್ರಸ್ತರವು, ಅಂದರೆ ದರ್ಭಮುಷ್ಟಿಯು ಯಜಮಾನಕಾರ್ಯಕಾರಿ' ಎನ್ನುವಲ್ಲಿ ತಾತ್ಪರ್ಯವೆ ಹೊರತು ಯಜಮಾನ ಪ್ರಸ್ತರಗಳ ಅಭೇದದಲ್ಲಿ ಅದಕ್ಕೆ ತಾತ್ಪರ್ಯವಿಲ್ಲ. ಇಂಥ ಅಭೇದವೂ ಭೇದನಿರ್ವತಕ ಎನ್ನುವುದಾದರೆ ಅದು ಯಜಮಾನ-ಪ್ರಸ್ತರಗಳ ಭೇದವನ್ನು ನಿರಾಸಮಾಡೀತು ಎಂದು ಅತಿಪ್ರಸಕ್ತಿ—

**ಮಹಾವಾಕ್ಯಏವ ಅನೇಕಪದವೈಯರ್ಥ್ಯಂ ಸ್ಯಾತ್ । ಏಕೇನೈವ ಪದೇನ ಲಕ್ಷಣಯಾ ಶುದ್ಧಬೋಧನಾತ್ । ಕಥಂ ತೇನ ಭೇದಭ್ರಮನಿರಾಸ ಇತಿ ಚೇತ್ ಅಧಿಕಾರ್ಥಾಬೋಧನೇ ವಾಕ್ಯೇನಾಪಿ ಕಥಂ ? ನಹಿ ವಾಕ್ಯಮದೃಷ್ಟದ್ವಾರಾ ಭ್ರಮನಿವರ್ತಕಂ । ನ ಚ ತಾತ್ಪರ್ಯಾವಿಷಯೇಣಾಪಿ ಅಭೇದೇನ ತನ್ನಿವೃತ್ತಿಃ । ಅತಿಪ್ರಸಂಗಾತ್ ।**

**ವಿಶೇಷಾಂಶ**— 'ನ ಚ ತಾತ್ಪರ್ಯಾವಿಷಯೇಣಾಪಿ ತನ್ನಿವೃತ್ತಿಃ' ಎಂದು ಆಮೋದಾನುಸಾರಿ ಪಾಠವಿರುವಂತೆ ಕಾಣುತ್ತದೆ. ಏಕೆಂದರೆ 'ನ ಚೇತಿ। ಅಭೇದೇನೇತಿಶೇಷಃ।' ಎನ್ನುತ್ತ 'ಅಭೇದೇನ' ಎಂದು ಶೇಷಪೂರಣ ಮಾಡುತ್ತಿದ್ದಾರೆ. 'ಚಿನ್ಮಾತ್ರ ಪರಮಪಿ ವಾಕ್ಯಂ ಅಭೇದಮಪಿಬೋಧಯತಿ' ಎಂದು ಅದ್ವೈತಿಯ ಆಶಯವನ್ನು ತೋರಿಸುತ್ತಿದ್ದಾರೆ.

ವಿವರಣದಲ್ಲಿ ಪದಾಂತರ ಸಾರ್ಥಕ್ಯ ಹೀಗೆ ಉಕ್ತವಾಗಿದೆ— 'ತತ್ ತ್ವಂ' ಎಂದು ವಿರುದ್ಧಾರ್ಥವಾಚಕವಾದ ಭಿನ್ನಪ್ರವೃತ್ತಿ ನಿಮಿತ್ತಉಳ್ಳ ಎರಡು ಪದಗಳಿಗೆ ಸಮಾನವಿಭಕ್ತಿ ಮಾತ್ರವಿರುವುದರಿಂದ ಆಪಾತತಃ ಅಭೇದ ಬೋಧಿತವಾಗುತ್ತಿದೆ. ಅದು ಬಾಧಿತ. ಆದರಿಂದ ಸಾಮಾನಾಧಿಕರಣ್ಯ ಕೂಡುವುದಿಲ್ಲ. ಕೂಡಿಸುವುದಕ್ಕಾಗಿ ಶುದ್ಧದಲ್ಲಿ ಲಕ್ಷಣಾ ಮಾಡಬೇಕು. ಹೀಗೆ ಲಕ್ಷಣಾ ಪದದ್ವಯದ ಸಾಮಾನಾಧಿಕರಣ್ಯಕ್ಕೆ ಅಧೀನವಾಗಿದೆ. ಆದರಿಂದ ಒಂದು ಪದಕ್ಕೆ ಲಾಕ್ಷಣಿಕತ್ವ ಪ್ರಾಪಕವಾಗಿ ಪದಾಂತರ ಸಾರ್ಥಕ.' ಎಂದು. ಇದು ಸರಿಯಲ್ಲ. 'ಚೈತನ್ಯಂ' ಎಂದು ಒಂದು ಪದವಿದ್ದರೆ ಸಾಕು, ವಿವಕ್ಷಿತವಾದ ಶುದ್ಧಚೈತನ್ಯ ಬೋಧ ಸಿದ್ಧವಾಗುತ್ತದೆ. 'ತತ್‌ತ್ವಂ' ಎಂದು ಅನೇಕ ಪದಾಂತರಗಳನ್ನು ತಂದುಹಾಕಿ, ಅವುಗಳಲ್ಲಿ ವಿರುದ್ಧಾರ್ಥಕವಾಚಿ ಪದಗಳಿಗೆ ಸಾಮಾನಾಧಿ ಕರಣ್ಯವನ್ನು ಕಲ್ಪಿಸಿ ಲಕ್ಷಣಾ ಮಾಡಿ ಶುದ್ಧಬೋಧವನ್ನು ಸಂಪಾದಿಸುವ ಕ್ಲೇಶವು ವ್ಯರ್ಥ.

'ಗಂಗಾಯಾಂ ಘೋಷಃ' ಎಂಬಲ್ಲಿಯೂ 'ಘೋಷ'ಪದವು ಗಂಗಾಶಬ್ದಕ್ಕೆ ಲಾಕ್ಷಣಿಕತ್ವ ಪ್ರಾಪ್ತಿಯ ಉದ್ದೇಶದ್ದು ಹೊರತು ಅದು ಸ್ವಾರ್ಥಬೋಧನೆಗಾಗಿ ಅಲ್ಲ ಎಂದಾದೀತು—

**ನಚ ''ಏಕಪದಸ್ಯ ಲಾಕ್ಷಣಿಕತ್ವಾಯ ಪದಾಂತರಂ। 'ತತ್‌ತ್ವಂ' ಇತಿ ವಿರುದ್ಧಾರ್ಥವಾಚಿ ಪದದ್ವಯಸ್ಯ ಸಾಮಾನಾಧಿಕರಣ್ಯಾಧೀನತ್ವಾತ್ ಲಕ್ಷಣಾಯಾಃ'' ಇತಿ ವಿವರಣೋಕ್ತಂ ಯುಕ್ತಂ। ಚೈತನ್ಯಪದೇನೈವ ವಿವಕ್ಷಿತ ಸಿದ್ಧೌ 'ತತ್‌ತ್ವಂ' ಇತಿ ಲಾಕ್ಷಣಿಕ ಪದದ್ವಯೇನ ತತ್ಬೋಧನ ಕ್ಲೇಶಾಯೋಗಾತ್।**

**'ಗಂಗಾಯಾಂ ಘೋಷಃ' ಇತ್ಯತ್ರಾಪಿ ಘೋಷಪದಂ ಗಂಗಾಶಬ್ದಸ್ಯ ಲಾಕ್ಷಣಿಕತ್ವಾಯ ನ ತು ಸ್ವಾರ್ಥಾರ್ಪಣಾಯ ಇತ್ಯಾಪಾತಾಚ್ಚ।**

**ಅಭೇದರೂಪಾನ್ವಯಾಬೋಧನೇ ಪದದ್ವಯ ಸಾಮಾನಾಧಿಕರಣ್ಯಸ್ಯ ಲಕ್ಷಣಾ ಕಲ್ಪಕತ್ವಾಯೋಗಾಚ್ಚ। —**

ಅಭೇದಾನ್ವಯ ಬೋಧನೆ ಮಾಡದಿದ್ದರೆ ಪದದ್ವಯ ಸಾಮಾನಾಧಿಕರಣ್ಯವು ಲಕ್ಷಣಾಕ್ಕೆ ಕಲ್ಪಕವಾಗುವುದೂ ಇಲ್ಲ. ಏಕೆಂದರೆ ಅಭೇದಾನ್ವಯ ಬೋಧನ ಮಾಡಿದರೆ ಮಾತ್ರ ಮುಖ್ಯಾರ್ಥಕ್ಕೆ ಬಾಧ ಬರುವುದರಿಂದ ಶುದ್ಧ ಚೈತನ್ಯರೂಪ ಅಮುಖ್ಯಾರ್ಥದಲ್ಲಿ ಲಕ್ಷಣಾ ಆವಶ್ಯಕವಾಗುತ್ತದೆ. ಅಭೇದಾನ್ವಯ ಮಾಡದೆ ಚೈತನ್ಯ ಮಾತ್ರ ಬೋಧಕತ್ವಾಂಗೀಕಾರ ಮಾಡುವ ಪಕ್ಷದಲ್ಲಿ ಅನ್ವಯವೇ ಬೋಧಿತವಾಗದಿರುವಾಗ ಅನ್ವಯಾನುಪಪತ್ತಿ ಪರಿಹಾರಕ್ಕಾಗಿ ಲಕ್ಷಣಾ ಬೇಕಾಗಿಲ್ಲ.

**ಸದೇವೇತ್ಯಾದಿ ಪೂರ್ವವಾಕ್ಯೇ ಲಕ್ಷಿತಚಿನ್ಮಾತ್ರಸ್ಯ ಪ್ರಕೃತವಾಚಿನಾ ತತ್ಪದೇನ ಲಕ್ಷಣಾಂ ವಿನೈವ ಪರಾಮರ್ಶ ಸಂಭವಾಚ್ಚ ।—**

ಸದೇವ ಸೋಮ್ಯೇದಮಗ್ರ ಆಸೀತ್ ಎಂಬ ವಾಕ್ಯದಲ್ಲಿಯೇ ಹಿಂದೆ ಲಕ್ಷಣಯಾ ಚೈತನ್ಯಬೋಧನೆ ಮಾಡಿದ್ದಾಗಿದೆ. ಪ್ರಕೃತ 'ತತ್ವಮಸಿ' ಎಂಬಲ್ಲಿ ಪ್ರಕೃತವಾಚಿ ಸರ್ವನಾಮಪದವಾಗಿರುವ 'ತತ್'ಪದವೇ ಲಕ್ಷಣಾ ಇಲ್ಲದೆಯೇ ಪೂರ್ವೋಕ್ತ ಚೈತನ್ಯವನ್ನು ಪರಾಮರ್ಶಮಾಡಬಲ್ಲುದು. ಆದಕ್ಕೆ ಲಕ್ಷಣಾಮಾಡಬೇಕಾಗಿಲ್ಲ. ಅದಕ್ಕೆ ಲಕ್ಷಣಾ ಮಾಡುವುದಕ್ಕಾಗಿ ತ್ವಂ ಪದವೂ ಬೇಡ. ಹೀಗಾಗಿ ತತ್ವಮಸಿ ಮಹಾವಾಕ್ಯವೇ ವ್ಯರ್ಥ.

**ಸ ವಾ ಏಷ ಮಹಾನಜಆತ್ಮಾ ಇತ್ಯಾದಿ ಮಹಾವಾಕ್ಯೇ ಲಕ್ಷಣಾಯಾಃ ಸ ಆತ್ಮೇತಿ ಪದದ್ವಯ ಸಾಮಾನಾಧಿಕರಣ್ಯೇನೈವ ಸಿದ್ಧ್ಯಾಪದಾಂತರ ವೈಯರ್ಥ್ಯಾಚ್ಚ ।—**

'ಸ ಏವ ಕುಂಡಲೀ ಅಯಂ ದೇವದತ್ತಃ' ಎಂಬಲ್ಲಿ ಸೋಽಯಂ ಎಂಬ ಎರಡು ಪದಗಳೇ ಸಾಕು. ಅವುಗಳಿಂದಲೇ ಲಕ್ಷಣಾ ಸಿದ್ಧವಾಗುತ್ತದೆ. ಉಳಿದ ಪದಗಳು ಬೇಡ ಎಂದು ಹಿಂದೆ ಹೇಳಿದಂತೆ ಸವಾ ಏಕ ಮಹಾನಜ ಆತ್ಮಾ ಯೋಽಯಂ ವಿಜ್ಞಾನಮಯಃ ಪ್ರಾಣೇಷು (ಬೃ.6.4.22) ಎಂಬಲ್ಲಿಯೂ ಸ ಆತ್ಮಾ ಎಂದು ಪದದ್ವಯ ಸಾಮಾನಾಧಿಕರಣ್ಯದಿಂದಲೇ ಲಕ್ಷಣಾ ಸಿದ್ಧವಾಗುವಾಗ ಉಳಿದ ಪದಗಳು ಯಾವುವೂ ಬೇಡ ಎಂದಾಗುತ್ತದೆ.

ತತ್ವಮಸಿ ಎಂಬಲ್ಲಿ ವಾಚ್ಯಾರ್ಥವಾದ ಸರ್ವಜ್ಞತ್ವ ಅಲ್ಪಜ್ಞತ್ವ ವಿಶಿಷ್ಟ ಜೀವ ಈಶ್ವರರುಗಳಿಗೆ ಪ್ರತ್ಯಕ್ಷವು ಭೇದಗ್ರಹಣ ಮಾಡುತ್ತಿದ್ದರೂ, ಅದು ಅತತ್ವಾವೇದಕವಾದ್ದರಿಂದ, ಅದಕ್ಕೆ ಬಾಧಕವಾದ ತತ್ವಾವೇದಕ ಅದ್ವೈತವಾಕ್ಯವು ತತ್‌ತ್ವಂಪದವಾಚ್ಯಾರ್ಥರಾದ ಆ ಜೀವೇಶ್ವರಿಗೇ ತಾತ್ವಿಕ ಅಭೇದವನ್ನು ಬೋಧನ ಮಾಡುವ ಸಂಭವವಿದೆ. ಹೀಗಾಗಿ ಲಕ್ಷಣಾ ಮಾಡುವುದೇ ಅನಾವಶ್ಯಕವಾದೀತು—

**ವಾಚ್ಯಾರ್ಥ ಭೇದಗ್ರಾಹ್ಯತತ್ವಾವೇದಕ ಪ್ರತ್ಯಕ್ಷ ಬಾಧಕೇನ ತತ್ವಾವೇದಕೇನ ತಯೋರೇವ ತಾತ್ವಿಕಾಭೇದಬೋಧನಸಂಭವೇನ ಲಕ್ಷಣಾಯಾ ಅನಪೇಕ್ಷಿತತ್ವಾಚ್ಚ।**

'ಒಂದೇ ಪದವಿದ್ದರೆ ಅನ್ವಯಾನುಪಪತ್ತಿ ರೂಪ ಲಕ್ಷಣಾಬೀಜವಿರುವುದಿಲ್ಲ, ಲಕ್ಷಣಾಕ್ಕೆ ಅವಕಾಶವಿರುವುದಿಲ್ಲ. ಆದರಿಂದ ಅನೇಕ ಪದಗಳು ಬೇಕು. ಪದವು ವಾಕ್ಯಸ್ಥವಾಗಿರಬೇಕು. ವಾಕ್ಯಸ್ಥ ಪದಕ್ಕೇ ಲಕ್ಷಕತ್ವ ಸಂಭವವಿರುವುದರಿಂದ ವಾಕ್ಯವಾಗುವುದಕ್ಕಾಗಿ ಅನೇಕ ಪದಗಳ ಆವಶ್ಯಕತೆ ಇದೆ. ಆದರಿಂದ ಅವು ಸಾರ್ಥಕ' ಎಂದೂ ಅದ್ವೈತಿಗಳು ಹೇಳುತ್ತಾರೆ. ಆದೂ ಸರಿಯಲ್ಲ. ಅವರ ಮತದಲ್ಲಿ ಎಲ್ಲ ಪದಗಳೂ ಅಖಂಡಾರ್ಥಕವಾದ್ದರಿಂದ ಅನ್ವಯವೇ ಇಲ್ಲ. ಅನ್ವಯಾನುಪಪತ್ತಿ ಪ್ರಸಕ್ತಿ ಇಲ್ಲ. ಅನ್ವಯಾನುಪಪತ್ತಿರೂಪ ಲಕ್ಷಣಾಬೀಜಕ್ಕಾಗಿ ಪದವು ವಾಕ್ಯಸ್ಥವಾಗಬೇಕಾಗಿಲ್ಲ. ಮತ್ತು 'ತತ್ ತ್ವಮಸಿ' ಎಂಬಲ್ಲಿ 'ತ್ವಮಸಿ' ಎಂದು ಮಾತ್ರ ಹೇಳಿದರೂ ಅದು ವಾಕ್ಯವಾಗುವುದರಿಂದ ತ್ವಂಪದವು ವಾಕ್ಯಸ್ಥವಾಗುವುದರಿಂದ ತತ್ ಪದವು ಬೇಕಾಗಿಲ್ಲ ಎಂದಾದೀತು—

ಏತೇನ ವಾಕ್ಯಸ್ಥಪದಸ್ಯೈವ ಲಕ್ಷಕತ್ವಾತ್ ಅನೇಕ ಪದೋಪಾದಾನಮಿತಿ ನಿರಸ್ತಂ। ಅನ್ವಯಾನುಪಪತ್ತಿರೂಪ ಲಕ್ಷಣಾಬೀಜಾರ್ಥಮೇವ ವಾಕ್ಯಸ್ಥತ್ವಸ್ಯ ಅಪೇಕ್ಷಣಾತ್ ತ್ವಮಸೀತ್ಯುಕ್ತೇಽಪಿ ವಾಕ್ಯಸ್ಥತ್ವಸ್ಯ ಸಿದ್ಧೇಶ್ಚ।



एतेन यदुक्तं विवरणे अभिज्ञातः प्रत्यभिज्ञायाः शाब्द्या वा प्रत्यभिज्ञायास्तावन्न प्रमेयतो विशेषः। अभिज्ञया ज्ञातस्यैव देवदत्तैक्यस्य प्रत्यभिज्ञया ग्रहणात्। नहि देवदत्तस्य स्वेनैक्यमभिज्ञायां न भाति। नचानभिज्ञातं प्रत्यभिज्ञया ज्ञेयं देवदत्तस्य स्वेनैक्यांतरमस्ति। एकस्य कालद्वयसंबंधः प्रत्यभिज्ञागोचर इति चेन्न। ऐक्यस्य कालद्वयसंबंधस्य चाभिज्ञाभ्यामेव सिद्धेः। तस्मात्प्रमेयतो न विशेषः। किंतु फलतः। कालद्वयसंबंधि पदार्थैक्यविषयत्वे द्वयोरविशिष्टेऽपि प्रत्यभिज्ञाया एव कालद्वयपरामर्शित्वेन पदार्थभेदभ्रमनिवर्तकत्वात्। तत एव च प्रामाण्यमपि। एवंच तत्त्वमसिवाक्यस्य सत्यज्ञानादिवाक्यात् तत्पदाच्च प्रमेयतोऽविशेषेऽपि धर्मद्वयपरामर्शित्वेन भेदभ्रमनिवर्तकत्वात्प्रामाण्यम्। उक्तं हि "सिद्धं तु निवर्तकत्वात्" इति।

तन्निरस्तम्। अभिज्ञाभ्यां वस्तुत एकस्मिन् कालद्वयसंबंधस्य देवदत्ताभेदस्य च देवदत्ते ग्रहणेऽपि प्रत्यभिज्ञयेव एकस्मिन् कालद्वयसंबंध इति वा कालद्वयसंबंधाधार एक इति वाऽग्रहणेन प्रत्यभिज्ञायाः प्रमेयत एव भेदात्। नहीदमिति ज्ञानं वस्तुतः शुक्तौ शुक्त्यभेदग्राह्यपीयं शुक्तिरितिज्ञानवत् इदंत्वशुक्तित्वाधार एक इत्याकारम्। अन्यथा फलतोऽपि विशेषो न स्यात्। कालद्वयपरामर्शमात्रेण भेदभ्रमनिवृत्तौ भेदभ्रमकालेऽपि तस्य सत्त्वात्तेन निवृत्तिः स्यात्। एवं तत्त्वमसीत्यत्रापीति दिक्।

**प्रत्यभिज्ञाया इति ।।** प्रत्यक्षरूपाया इति शेषः ।। **एकस्येति ।।** अभिज्ञायाश्च एककालसंबन्धाबोधकत्वात्ततो विशेष इति भावः ।। **अन्यथेति ।।** प्रमेयतो विशेषाभाव इत्यर्थः ।। **कालद्वयपरामर्शमात्रेणेति ।।** व्यक्तिविशेषे कालद्वयसंबंधज्ञानेऽपि भेदभ्रमनिवृत्तावित्यर्थः ।।



ತತ್ತ್ವಮಸಿ ವಾಕ್ಯದ ವೈಯರ್ಥ್ಯ ಪರಿಹಾರವನ್ನು ವಿವರಣಗ್ರಂಥ ಹೀಗೆ ಹೇಳುತ್ತದೆ— 'ಸೋಯಂ ಎಂದು ಪ್ರತ್ಯಕ್ಷಪ್ರತ್ಯಭಿಜ್ಞೆಗಾಗಲಿ ಶಾಬ್ದಪ್ರತ್ಯಭಿಜ್ಞೆಗಾಗಲಿ ಅಭಿಜ್ಞೆಯಿಂದ ವಿಷಯದಲ್ಲಿ ವೈಲಕ್ಷಣ್ಯವೇನಿಲ್ಲ. ಏಕೆಂದರೆ ಅಭಿಜ್ಞೆಯಿಂದ ಜ್ಞಾತವಾದ ದೇವದತ್ತೈಕ್ಯವೇ ಪ್ರತ್ಯಭಿಜ್ಞೆಯಲ್ಲಿಯೂ ಕಾಣುತ್ತದೆ. ದೇವದತ್ತನಲ್ಲಿ ತನ್ನಿಂದ ತನಗೆ ಐಕ್ಯವಿರುವುದು ಅಭಿಜ್ಞೆಯಲ್ಲಿ ಗೋಚರವಾಗುವುದಿಲ್ಲ ಎನ್ನಲಾಗುವುದಿಲ್ಲ. ಅಭಿಜ್ಞಾದಿಂದ ಗೃಹೀತವಲ್ಲದ, ದೇವದತ್ತನಿಗೆ ತನ್ನಿಂದ ತನಗಿರುವ, ಬೇರೆಯೆ ಒಂದು ಐಕ್ಯವು ಪ್ರತ್ಯಭಿಜ್ಞಾಗೋಚರವೆನ್ನಲಾಗುವುದಿಲ್ಲ. ಅಂಥಾ ಒಂದು ಐಕ್ಯವೆಂಬುದಿಲ್ಲ. 'ಒಬ್ಬನಿಗೇ ಅತೀತ ವರ್ತಮಾನಕಾಲದ್ವಯ ಸಂಬಂಧವು ಪ್ರತ್ಯಭಿಜ್ಞಾದಲ್ಲಿ ಕಾಣುತ್ತದೆ, ಅದು ಬೇರೆಯೆ ಇದೆ' ಎಂದರೆ ಅದು ಸರಿಯಲ್ಲ. ಐಕ್ಯ ಮತ್ತು ಕಾಲದ್ವಯ ಸಂಬಂಧಗಳು ಇವು ಎರಡೂ ಅಭಿಜ್ಞೆಗಳಿಂದಲೇ ಸಿದ್ಧವಾಗುತ್ತವೆ. 'ಅಯಂದೇವದತ್ತಃ' ಎಂಬ ಅಭಿಜ್ಞೆಯಲ್ಲಿ ದೇವದತ್ತನಲ್ಲಿ ದೇವದತ್ತನ ಐಕ್ಯಕಂಡೇ ಕಾಣುತ್ತದೆ. ಮತ್ತು ಪೂರ್ವಾಭಿಜ್ಞೆಯಿಂದ ಪೂರ್ವಕಾಲ ಸಂಬಂಧ, ಅಪರಾಭಿಜ್ಞೆಯಿಂದ ಅಪರಕಾಲಸಂಬಂಧಗಳೂ ಗೃಹೀತವಾಗುತ್ತವೆ. ಹೀಗಾಗಿ ಅಭಿಜ್ಞೆಪ್ರತ್ಯಭಿಜ್ಞೆಗಳಿಗೆ ವಿಷಯವೈಲಕ್ಷಣ್ಯವಿಲ್ಲ. ಫಲದಲ್ಲಿ ಮಾತ್ರ ವೈಲಕ್ಷಣ್ಯವಿದೆ.

ಕಾಲದ್ವಯ ಸಂಬಂಧಿಯಾದ ದೇವದತ್ತ ಮತ್ತು ಅವನಲ್ಲಿರುವ ಅವನೈಕ್ಯ ಈ ಎರಡು ವಿಷಯಗಳಲ್ಲಿ ಎರಡು ಅಭಿಜ್ಞೆ ಹಾಗೂ ಒಂದು ಪ್ರತ್ಯಭಿಜ್ಞೆಗಳಿಗೆ ವೈಲಕ್ಷಣ್ಯವಿಲ್ಲದಿದ್ದರೂ ಪ್ರತ್ಯಭಿಜ್ಞೆ ಮಾತ್ರವೇ ಕಾಲದ್ವಯ ಪರಾಮರ್ಶಮಾಡಿ ದೇವದತ್ತರೂಪ ಪದಾರ್ಥದಲ್ಲಿ ದೇವದತ್ತ ಭೇದಭ್ರಮನಿವೃತ್ತಿ ಉಂಟುಮಾಡುತ್ತದೆ. ಹೀಗಾಗಿ ವಿಷಯದಲ್ಲಿ ಪ್ರತ್ಯಭಿಜ್ಞೆಗೆ ಅನಧಿಗತಾರ್ಥಗಂತೃತ್ವರೂಪವಾದ ಪ್ರಾಮಾಣ್ಯ ವಿಲ್ಲದಿದ್ದರೂ ಅರ್ಥವಾದ ವಾಕ್ಯದಂತೆ ಫಲವತ್ತ್ವರೂಪ ಪ್ರಾಮಾಣ್ಯವಿದೆ.

ಏವಂಚ ತತ್ತ್ವಮಸಿ ಮಹಾವಾಕ್ಯಕ್ಕೂ ಸತ್ಯಜ್ಞಾನಾದಿ ವಾಕ್ಯಗಳಿಗೂ ತತ್‌ಪದಕ್ಕೂ ಪ್ರಮೇಯದಲ್ಲಿ ವಿಶೇಷವಿಲ್ಲದಿದ್ದರೂ, ತತ್ತ್ವಮಸಿ ವಾಕ್ಯಜನ್ಯವಾದ ಒಂದೇ ಜ್ಞಾನವು ತತ್ತಾಇದಂತಾರೂಪ ಧರ್ಮದ್ವಯ ಪರಾಮರ್ಶಕವಾದ್ದರಿಂದ ತತ್ತೋಪಲಕ್ಷಿತ ಇದಂತೋಪಲಕ್ಷಿತ ಚೈತನ್ಯಗಳಲ್ಲಿ ಭೇದಭ್ರಮ ನಿವರ್ತಕವಾಗುತ್ತದೆ. ಆದರಿಂದ ವಾಕ್ಯಪ್ರಾಮಾಣ್ಯ ಕೂಡುತ್ತದೆ.

ಇದನ್ನು ಬೌದ್ಧವೈಭಾಷಿಕಪಂಥದ ಗ್ರಂಥಕಾರ ಕಾತ್ಯಾಯನನು ಹೇಳುತ್ತಾನೆ—

'ಪದಾರ್ಥಾತಿರಿಕ್ತ ವಾಕ್ಯಾರ್ಥವಿಲ್ಲದಿದ್ದರೂ ವಾಕ್ಯಕ್ಕೆ ಭೇದಭ್ರಮ ನಿವರ್ತಕತ್ವರೂಪ ಫಲವಿರುವುದರಿಂದ ಫಲವತ್ತ್ವರೂಪ ಪ್ರಾಮಾಣ್ಯವು ಸಿದ್ಧ' ಎಂದು—

ಏತೇನ ಯದುಕ್ತಂ ವಿವರಣೇ—ಅಭಿಜ್ಞಾತಃ ಪ್ರತ್ಯಭಿಜ್ಞಾಯಾಃ, ಶಾಬ್ದ್ಯಾವಾ ಪ್ರತ್ಯಭಿಜ್ಞಾಯಾಃ ತಾವನ್ನ ಪ್ರಮೇಯತೋ ವಿಶೇಷಃ। ಅಭಿಜ್ಞಯಾ ಜ್ಞಾತಸ್ಯೈವ ದೇವದತ್ತೈಕ್ಯಸ್ಯ ಪ್ರತ್ಯಭಿಜ್ಞಯಾ ಗ್ರಹಣಾತ್। ನಹಿ ದೇವದತ್ತಸ್ಯ ಸ್ವೇನೈಕ್ಯಂ ಅಭಿಜ್ಞಾಯಾಂ ನ ಭಾತಿ। ನ ಚಾನಭಿಜ್ಞಾತಂ ಪ್ರತ್ಯಭಿಜ್ಞಯಾ ಜ್ಞೇಯಂ ದೇವದತ್ತಸ್ಯ ಸ್ವೇನ ಐಕ್ಯಾಂತರಮಸ್ತಿ।

'ಏಕಸ್ಯ ಕಾಲದ್ವಯಸಂಬಂಧಃ ಪ್ರತ್ಯಭಿಜ್ಞಾಗೋಚರಃ' ಇತಿ ಚೇನ್ನ। ಐಕ್ಯಸ್ಯ ಕಾಲದ್ವಯ ಸಂಬಂಧಸ್ಯ ಚ ಅಭಿಜ್ಞಾಭ್ಯಾಮೇವ ಸಿದ್ಧೇಃ। ತಸ್ಮಾತ್ ಪ್ರಮೇಯತೋ ನ ವಿಶೇಷಃ। ಕಿಂತು ಫಲತಃ।

ಕಾಲದ್ವಯ ಸಂಬಂಧಿಪದಾರ್ಥೈಕ್ಯ ವಿಷಯತ್ವೇ ದ್ವಯೋರವಿಶಿಷ್ಟೇಽಪಿ ಪ್ರತ್ಯಭಿಜ್ಞಾಯಾ ಏವ ಕಾಲದ್ವಯ ಪರಾಮರ್ಶಿತ್ವೇನ ಪದಾರ್ಥಭೇದಭ್ರಮ-ನಿವರ್ತಕತ್ವಾತ್। ತತ ಏವ ಚ ಪ್ರಾಮಾಣ್ಯಮಪಿ।

ಏವಂ ಚ ತತ್ತ್ವಮಸಿ ವಾಕ್ಯಸ್ಯ ಸತ್ಯಜ್ಞಾನಾದಿ ವಾಕ್ಯಾತ್ ತತ್ತ್ವದಾಚ್ಚ ಪ್ರಮೇಯತೋಽವಿಶೇಷೇಽಪಿ ಧರ್ಮದ್ವಯ ಪರಾಮರ್ಶಿತ್ವೇನ ಭೇದಭ್ರಮ ನಿವರ್ತಕತ್ವಾತ್ ಪ್ರಾಮಾಣ್ಯಂ।

ಉಕ್ತಂ ಹಿ 'ಸಿದ್ಧಂ ತು ನಿವರ್ತಕತ್ವಾತ್ ಇತಿ।

ಇದು ಸರಿಯಲ್ಲ. ಎರಡು ಅಭಿಜ್ಞೆಗಳು ಒಬ್ಬ ದೇವದತ್ತನಲ್ಲಿ ವಸ್ತುತಃ ಇರುವ ಕಾಲದ್ವಯ ಸಂಬಂಧವನ್ನೂ, ದೇವದತ್ತನಲ್ಲಿ ವಸ್ತುತಃ ಇರುವ ತನಗೆ ತನ್ನ ಅಭೇದವನ್ನೂ ಪರಾಮರ್ಶ ಮಾಡಿದರೂ, ಪ್ರತ್ಯಭಿಜ್ಞೆಯಂತೆ 'ಒಬ್ಬನಲ್ಲಿ ಕಾಲದ್ವಯ ಸಂಬಂಧವಿದೆ' ಎಂದಾಗಲಿ, 'ಕಾಲದ್ವಯಸಂಬಂಧಾಶ್ರಯನು ಒಬ್ಬನೇ' ಎಂದಾಗಲಿ ಸ್ಪಷ್ಟವಾಗಿ ವಿಧಾನ ಮಾಡುವುದಿಲ್ಲ. ಆದರಿಂದ ಅಭಿಜ್ಞಾಗಳಿಗೆ ಪ್ರತ್ಯಭಿಜ್ಞಾನಕ್ಕಿಂತ ವಿಷಯದಲ್ಲಿಯೇ ವೈಲಕ್ಷಣ್ಯವಿದೆ. ಉದಾ: 'ಇದಂ ರಜತಂ' ಎಂಬ ಭ್ರಮಕಾಲದಲ್ಲಿಯೂ 'ಇದಂ' ಎಂಬ ಅಂಶವು ಶುಕ್ತಿಯನ್ನು ಗ್ರಹಿಸುವಾಗ ವಸ್ತುತಃ ಅದಕ್ಕೆ ಆದರಿಂದ ಇರುವ ಅಭೇದವನ್ನೂ ಗ್ರಹಿಸುತ್ತದೆ. ಆದರೆ 'ಇಯಂ ಶುಕ್ತಿಃ' ಎಂಬಂತೆ ಸ್ಪಷ್ಟವಾಗಿ ಶುಕ್ತಿಯಲ್ಲಿ ಇದಂತ್ವ ಶುಕ್ತಿತ್ವಗಳನ್ನು ಜೊತೆಗೇ ವಿಧಾನ ಮಾಡುವುದಿಲ್ಲ. ಇದಂತ್ವಾಶ್ರಯ ಶುಕ್ತಿತ್ವಾಶ್ರಯಗಳಿಗೆ ಏಕತ್ವವನ್ನೂ ವಿಧಾನ ಮಾಡುವುದಿಲ್ಲ. ಹೀಗೇ ಅಭಿಜ್ಞಾಪ್ರತ್ಯಭಿಜ್ಞೆಗಳಿಗೆ ಪ್ರಮೇಯದಲ್ಲಿ ವೈಲಕ್ಷಣ್ಯವಿದೆ—

**ತನ್ನಿರಸ್ತಂ। ಅಭಿಜ್ಞಾಭ್ಯಾಂ ವಸ್ತುತಃ ಏಕಸ್ಮಿನ್ ಕಾಲದ್ವಯ ಸಂಬಂಧಸ್ಯ, ದೇವದತ್ತಾಭೇದಸ್ಯ ಚ ದೇವದತ್ತೇ ಗ್ರಹಣೇऽಪಿ ಪ್ರತ್ಯಭಿಜ್ಞಯೇವ ಏಕಸ್ಮಿನ್ ಕಾಲದ್ವಯ ಸಂಬಂಧ ಇತಿ ವಾ ಕಾಲದ್ವಯ ಸಂಬಂಧಾಧಾರ ಏಕ ಇತಿ ವಾ ಅಗ್ರಹಣೇನ ಪ್ರತ್ಯಭಿಜ್ಞಾಯಾಃ ಪ್ರಮೇಯತ ಏವ ಭೇದಾತ್। ನಹಿ ಇದಂ ಇತಿ ಜ್ಞಾನಂ ವಸ್ತುತಃ ಶುಕ್ತೌ ಶುಕ್ತ್ಯಭೇದ ಗ್ರಾಹ್ಯಪಿ 'ಇಯಂ ಶುಕ್ತಿಃ' ಇತಿ ಜ್ಞಾನವತ್ ಇದಂತ್ವ ಶುಕ್ತಿತ್ವಾಧಾರ ಏಕ ಇತ್ಯಾಕಾರಂ।**

ಪ್ರಮೇಯದಲ್ಲಿ ವೈಲಕ್ಷಣ್ಯವಿಲ್ಲದಿದ್ದರೆ ಫಲದಲ್ಲಿಯೂ ವೈಲಕ್ಷಣ್ಯ ಬರಲಾರದು ಬರಲು ನಿಮಿತ್ತವಿಲ್ಲ—

**ಅನ್ಯಥಾ ಫಲತೋऽಪಿ ವಿಶೇಷೋ ನ ಸ್ಯಾತ್।**

ಬರುತ್ತದೆ ಎಂದರೆ, ಅಭಿಜ್ಞೆಯಲ್ಲಿ ಗೃಹೀತವಾದ ಕಾಲದ್ವಯದ ಪರಾಮರ್ಶಮಾತ್ರವನ್ನು ಪ್ರತ್ಯಭಿಜ್ಞೆಯು ಮಾಡಿದ ಮಾತ್ರಕ್ಕೆ ಭೇದಭ್ರಮ ನಿವೃತ್ತಿಯನ್ನು ಮಾಡುವುದಾದರೆ, 'ನಾಯಂ ಸಃ' 'ಇವನು ಅವನಲ್ಲ' ಎಂದು ಭೇದಭ್ರಮಕಾಲದಲ್ಲಿಯೂ ತದಿದಂ ಪದಗಳಿಂದ ವಾಸ್ತವ ಕಾಲದ್ವಯ ಪರಾಮರ್ಶಮಾತ್ರ ಎಂಬುದು ಇದ್ದೇ ಇರುವುದರಿಂದ ಈ ಭೇದಭ್ರಮದಿಂದಲೂ ಭೇದಭ್ರಮನಿವೃತ್ತಿಯಾಗ ಬೇಕಾದೀತು—

**ಕಾಲದ್ವಯಪರಾಮರ್ಶ ಮಾತ್ರೇಣ ಭೇದಭ್ರಮನಿವೃತ್ತೌ ಭೇದಭ್ರಮಕಾಲೇऽಪಿ ತಸ್ಯ ಸತ್ವಾತ್ ತೇನ ನಿವೃತ್ತಿಃ ಸ್ಯಾತ್।**

ಹೀಗೇ ತತ್ವಮಸಿ ವಾಕ್ಯದಲ್ಲಿಯೂ ತಿಳಿಯಬೇಕು. 'ತತ್'ಪದಾರ್ಥದ ಜ್ಞಾನ ಮತ್ತು ತ್ವಂಪದಾರ್ಥದ ಜ್ಞಾನಗಳು ಬೇರೆಬೇರೆಯಾಗಿ ಬಂದಾಗ, ಸಾರ್ವಜ್ಞ ಮತ್ತು ದುಃಖೋಪಲಕ್ಷಿತ ಚೈತನ್ಯಗಳಿಗೆ ವಾಸ್ತವದಲ್ಲಿರುವ ಅಭೇದವನ್ನು ಅವು ಗ್ರಹಿಸಿದರೂ, 'ತತ್ ತ್ವಂ ಅಸಿ' ಎಂದು ಸಾಮಾನಾಧಿಕರಣ್ಯದಿಂದ ತತ್ವಮಸಿ ವಾಕ್ಯದಂತೆ, ಉಪಲಕ್ಷಿತತತ್ವಗಳನ್ನು ಸಮಾನಾಧಿಕರಣವೆಂದೂ ಉಪಲಕ್ಷಿತಗಳನ್ನು ಒಂದೆಂದೂ ಬೇರೆಬೇರೆ ಎರಡು ಜ್ಞಾನಗಳು ಸ್ಪಷ್ಟವಾಗಿ ಗ್ರಹಿಸದಿರುವುದರಿಂದ, ಅವುಗಳಿಗೆ ಅಭೇದವನ್ನು ವಿಧಾನ ಮಾಡದಿರುವುದರಿಂದ, ಭೇದಭ್ರಮ ನಿವರ್ತಕವಾಗುವುದಿಲ್ಲ. ತತ್ವಮಸಿ ವಾಕ್ಯವು ಸ್ಪಷ್ಟವಾಗಿ ಉಪಲಕ್ಷಿತತತ್ತ್ವಗಳೆರಡಕ್ಕೆ ಸಾಮಾನಾಧಿಕರಣ್ಯವನ್ನು ಹೇಳಿ ಉಪಲಕ್ಷಿತಗಳಿಗೆ ಅಭೇದವಿಧಾನ ಮಾಡುವುದರಿಂದ ಭೇದಭ್ರಮ ನಿವರ್ತಕವಾಗುತ್ತದೆ ಎನ್ನಬೇಕು. ಹಾಗೆ ಹೇಳದೆ, ತತ್ಪದಾರ್ಥ ತ್ವಂಪದಾರ್ಥಗಳ ಬೇರೆ ಬೇರೆ ಜ್ಞಾನಗಳಂತೆಯೇ 'ತತ್ವಮಸಿ' ಎಂಬ ವಾಕ್ಯಜನ್ಯಜ್ಞಾನವೂ ಕೂಡ ವಸ್ತುತಃ ಚೈತನ್ಯಗಳಿಗೆ ಇರುವ ಅಭೇದದ ಪರಾಮರ್ಶವನ್ನು ಮಾತ್ರ ಪದದ್ವಯಲಕ್ಷಣಾದಿಂದ ಮಾಡುತ್ತದೆ ಎಂದೇ ಹೇಳಿದರೆ, ಪ್ರತ್ಯೇಕ ಪದಾರ್ಥಜ್ಞಾನಗಳಿಗಿಂತ ಈ ವಾಕ್ಯಾರ್ಥಜ್ಞಾನದಲ್ಲಿ ವಿಷಯವೈಲಕ್ಷಣ್ಯ ಏನೂ ಇಲ್ಲವೆಂದೇ ಹೇಳಿದಂತೆ, ಪ್ರತ್ಯೇಕ

'ಪದಾರ್ಥಾತಿರಿಕ್ತ ವಾಕ್ಯಾರ್ಥವಿಲ್ಲದಿದ್ದರೂ ವಾಕ್ಯಕ್ಕೆ ಭೇದಭ್ರಮ ನಿವರ್ತಕತ್ವರೂಪ ಫಲವಿರುವುದರಿಂದ ಫಲವತ್ತ್ವರೂಪ ಪ್ರಾಮಾಣ್ಯವು ಸಿದ್ಧ' ಎಂದು—

**ಏತೇನ ಯದುಕ್ತಂ ವಿವರಣೇ—ಅಭಿಜ್ಞಾತಃ ಪ್ರತ್ಯಭಿಜ್ಞಾಯಾಃ, ಶಾಬ್ದ್ಯಾವಾ ಪ್ರತ್ಯಭಿಜ್ಞಾಯಾಃ ತಾವನ್ನ ಪ್ರಮೇಯತೋ ವಿಶೇಷಃ। ಅಭಿಜ್ಞಯಾ ಜ್ಞಾತಸ್ಯೈವ ದೇವದತ್ತೈಕ್ಯಸ್ಯ ಪ್ರತ್ಯಭಿಜ್ಞಯಾ ಗ್ರಹಣಾತ್। ನಹಿ ದೇವದತ್ತಸ್ಯ ಸ್ವೇನೈಕ್ಯಂ ಅಭಿಜ್ಞಾಯಾಂ ನ ಭಾತಿ। ನ ಚಾನಭಿಜ್ಞಾತಂ ಪ್ರತ್ಯಭಿಜ್ಞಯಾ ಜ್ಞೇಯಂ ದೇವದತ್ತಸ್ಯ ಸ್ವೇನ ಐಕ್ಯಾಂತರಮಸ್ತಿ।**

**'ಏಕಸ್ಯ ಕಾಲದ್ವಯಸಂಬಂಧಃ ಪ್ರತ್ಯಭಿಜ್ಞಾಗೋಚರಃ' ಇತಿ ಚೇನ್ನ। ಐಕ್ಯಸ್ಯ ಕಾಲದ್ವಯ ಸಂಬಂಧಸ್ಯ ಚ ಅಭಿಜ್ಞಾಭ್ಯಾಮೇವ ಸಿದ್ಧೇಃ। ತಸ್ಮಾತ್ ಪ್ರಮೇಯತೋ ನ ವಿಶೇಷಃ। ಕಿಂತು ಫಲತಃ।**

**ಕಾಲದ್ವಯ ಸಂಬಂಧಿಪದಾರ್ಥೈಕ್ಯ ವಿಷಯತ್ವೇ ದ್ವಯೋರವಿಶಿಷ್ಟೇऽಪಿ ಪ್ರತ್ಯಭಿಜ್ಞಾಯಾ ಏವ ಕಾಲದ್ವಯ ಪರಾಮರ್ಶಿತ್ವೇನ ಪದಾರ್ಥಭೇದಭ್ರಮ-ನಿವರ್ತಕತ್ವಾತ್। ತತ ಏವ ಚ ಪ್ರಾಮಾಣ್ಯಮಪಿ।**

**ಏವಂ ಚ ತತ್ತ್ವಮಸಿ ವಾಕ್ಯಸ್ಯ ಸತ್ಯಜ್ಞಾನಾದಿ ವಾಕ್ಯಾತ್ ತತ್ಪದಾಚ್ಚ ಪ್ರಮೇಯತೋऽವಿಶೇಷೇऽಪಿ ಧರ್ಮದ್ವಯ ಪರಾಮರ್ಶಿತ್ವೇನ ಭೇದಭ್ರಮ ನಿವರ್ತಕತ್ವಾತ್ ಪ್ರಾಮಾಣ್ಯಂ।**

**ಉಕ್ತಂ ಹಿ 'ಸಿದ್ಧಂ ತು ನಿವರ್ತಕತ್ವಾತ್ ಇತಿ।**

ಇದು ಸರಿಯಲ್ಲ. ಎರಡು ಅಭಿಜ್ಞೆಗಳು ಒಬ್ಬ ದೇವದತ್ತನಲ್ಲಿ ವಸ್ತುತಃ ಇರುವ ಕಾಲದ್ವಯ ಸಂಬಂಧವನ್ನೂ, ದೇವದತ್ತನಲ್ಲಿ ವಸ್ತುತಃ ಇರುವ ತನಗೆ ತನ್ನ ಅಭೇದವನ್ನೂ ಪರಾಮರ್ಶ ಮಾಡಿದರೂ, ಪ್ರತ್ಯಭಿಜ್ಞೆಯಂತೆ 'ಒಬ್ಬನಲ್ಲಿ ಕಾಲದ್ವಯ ಸಂಬಂಧವಿದೆ' ಎಂದಾಗಲಿ, 'ಕಾಲದ್ವಯಸಂಬಂಧಾಶ್ರಯನು ಒಬ್ಬನೇ' ಎಂದಾಗಲಿ ಸ್ಪಷ್ಟವಾಗಿ ವಿಧಾನ ಮಾಡುವುದಿಲ್ಲ. ಆದರಿಂದ ಅಭಿಜ್ಞಾಗಳಿಗೆ ಪ್ರತ್ಯಭಿಜ್ಞಾನಕ್ಕಿಂತ ವಿಷಯದಲ್ಲಿಯೇ ವೈಲಕ್ಷಣ್ಯವಿದೆ. ಉದಾ: 'ಇದಂ ರಜತಂ' ಎಂಬ ಭ್ರಮಕಾಲದಲ್ಲಿಯೂ 'ಇದಂ' ಎಂಬ ಅಂಶವು ಶುಕ್ತಿಯನ್ನು ಗ್ರಹಿಸುವಾಗ ವಸ್ತುತಃ ಅದಕ್ಕೆ ಅದರಿಂದ ಇರುವ ಅಭೇದವನ್ನೂ ಗ್ರಹಿಸುತ್ತದೆ. ಆದರೆ 'ಇಯಂ ಶುಕ್ತಿಃ' ಎಂಬಂತೆ ಸ್ಪಷ್ಟವಾಗಿ ಶುಕ್ತಿಯಲ್ಲಿ ಇದಂತ್ವ ಶುಕ್ತಿತ್ವಗಳನ್ನು ಜೊತೆಗೇ ವಿಧಾನ ಮಾಡುವುದಿಲ್ಲ. ಇದಂತ್ವಾಶ್ರಯ ಶುಕ್ತಿತ್ವಾಶ್ರಯಗಳಿಗೆ ಏಕತ್ವವನ್ನೂ ವಿಧಾನ ಮಾಡುವುದಿಲ್ಲ. ಹೀಗೇ ಅಭಿಜ್ಞಾಪ್ರತ್ಯಭಿಜ್ಞೆಗಳಿಗೆ ಪ್ರಮೇಯದಲ್ಲಿ ವೈಲಕ್ಷಣ್ಯವಿದೆ—

**ತನ್ನಿರಸ್ತಂ। ಅಭಿಜ್ಞಾಭ್ಯಾಂ ವಸ್ತುತಃ ಏಕಸ್ಮಿನ್ ಕಾಲದ್ವಯ ಸಂಬಂಧಸ್ಯ, ದೇವದತ್ತಾಭೇದಸ್ಯ ಚ ದೇವದತ್ತೇ ಗ್ರಹಣೇಽಪಿ ಪ್ರತ್ಯಭಿಜ್ಞಯೇವ ಏಕಸ್ಮಿನ್ ಕಾಲದ್ವಯ ಸಂಬಂಧ ಇತಿ ವಾ ಕಾಲದ್ವಯ ಸಂಬಂಧಾಧಾರ ಏಕ ಇತಿ ವಾ ಅಗ್ರಹಣೇನ ಪ್ರತ್ಯಭಿಜ್ಞಾಯಾಃ ಪ್ರಮೇಯತ ಏವ ಭೇದಾತ್। ನಹಿ ಇದಂ ಇತಿ ಜ್ಞಾನಂ ವಸ್ತುತಃ ಶುಕ್ತೌ ಶುಕ್ತ್ಯಭೇದ ಗ್ರಾಹ್ಯಪಿ 'ಇಯಂ ಶುಕ್ತಿಃ' ಇತಿ ಜ್ಞಾನವತ್ ಇದಂತ್ವ ಶುಕ್ತಿತ್ವಾಧಾರ ಏಕ ಇತ್ಯಾಕಾರಂ।**

ಪ್ರಮೇಯದಲ್ಲಿ ವೈಲಕ್ಷಣ್ಯವಿಲ್ಲದಿದ್ದರೆ ಫಲದಲ್ಲಿಯೂ ವೈಲಕ್ಷಣ್ಯ ಬರಲಾರದು ಬರಲು ನಿಮಿತ್ತವಿಲ್ಲ—

**ಅನ್ಯಥಾ ಫಲತೋಽಪಿ ವಿಶೇಷೋ ನ ಸ್ಯಾತ್।**

ಬರುತ್ತದೆ ಎಂದರೆ, ಅಭಿಜ್ಞೆಯಲ್ಲಿ ಗೃಹೀತವಾದ ಕಾಲದ್ವಯದ ಪರಾಮರ್ಶಮಾತ್ರವನ್ನು ಪ್ರತ್ಯಭಿಜ್ಞೆಯು ಮಾಡಿದ ಮಾತ್ರಕ್ಕೆ ಭೇದಭ್ರಮ ನಿವೃತ್ತಿಯನ್ನು ಮಾಡುವುದಾದರೆ, 'ನಾಯಂ ಸಃ' 'ಇವನು ಅವನಲ್ಲ' ಎಂದು ಭೇದಭ್ರಮಕಾಲದಲ್ಲಿಯೂ ತದಿದಂ ಪದಗಳಿಂದ ವಾಸ್ತವ ಕಾಲದ್ವಯ ಪರಾಮರ್ಶಮಾತ್ರ ಎಂಬುದು ಇದ್ದೇ ಇರುವುದರಿಂದ ಈ ಭೇದಭ್ರಮದಿಂದಲೂ ಭೇದಭ್ರಮನಿವೃತ್ತಿಯಾಗ ಬೇಕಾದೀತು—

**ಕಾಲದ್ವಯಪರಾಮರ್ಶ ಮಾತ್ರೇಣ ಭೇದಭ್ರಮನಿವೃತ್ತೌ ಭೇದಭ್ರಮಕಾಲೇಽಪಿ ತಸ್ಯ ಸತ್ವಾತ್ ತೇನ ನಿವೃತ್ತಿಃ ಸ್ಯಾತ್।**

ಹೀಗೇ ತತ್ವಮಸಿ ವಾಕ್ಯದಲ್ಲಿಯೂ ತಿಳಿಯಬೇಕು. 'ತತ್'ಪದಾರ್ಥದ ಜ್ಞಾನ ಮತ್ತು ತ್ವಂಪದಾರ್ಥದ ಜ್ಞಾನಗಳು ಬೇರೆಬೇರೆಯಾಗಿ ಬಂದಾಗ, ಸಾರ್ವಜ್ಞ ಮತ್ತು ದುಃಖೋಪಲಕ್ಷಿತ ಚೈತನ್ಯಗಳಿಗೆ ವಾಸ್ತವದಲ್ಲಿರುವ ಅಭೇದವನ್ನು ಅವು ಗ್ರಹಿಸಿದರೂ, 'ತತ್ ತ್ವಂ ಅಸಿ' ಎಂದು ಸಾಮಾನಾಧಿಕರಣ್ಯದಿಂದ ತತ್ವಮಸಿ ವಾಕ್ಯದಂತೆ, ಉಪಲಕ್ಷಿತತ್ವಗಳನ್ನು ಸಮಾನಾಧಿಕರಣವೆಂದೂ ಉಪಲಕ್ಷಿತಗಳನ್ನು ಒಂದೆಂದೂ ಬೇರೆಬೇರೆ ಎರಡು ಜ್ಞಾನಗಳು ಸ್ಪಷ್ಟವಾಗಿ ಗ್ರಹಿಸದಿರುವುದರಿಂದ, ಅವುಗಳಿಗೆ ಅಭೇದವನ್ನು ವಿಧಾನ ಮಾಡದಿರುವುದರಿಂದ, ಭೇದಭ್ರಮ ನಿವರ್ತಕವಾಗುವುದಿಲ್ಲ. ತತ್ವಮಸಿ ವಾಕ್ಯವು ಸ್ಪಷ್ಟವಾಗಿ ಉಪಲಕ್ಷಿತತ್ತ್ವಗಳೆರಡಕ್ಕೆ ಸಾಮಾನಾಧಿಕರಣ್ಯವನ್ನು ಹೇಳಿ ಉಪಲಕ್ಷಿತಗಳಿಗೆ ಅಭೇದವಿಧಾನ ಮಾಡುವುದರಿಂದ ಭೇದಭ್ರಮ ನಿವರ್ತಕವಾಗುತ್ತದೆ ಎನ್ನಬೇಕು. ಹಾಗೆ ಹೇಳದೆ, ತತ್ಪದಾರ್ಥ ತ್ವಂಪದಾರ್ಥಗಳ ಬೇರೆ ಬೇರೆ ಜ್ಞಾನಗಳಂತೆಯೇ 'ತತ್ವಮಸಿ' ಎಂಬ ವಾಕ್ಯಜನ್ಯಜ್ಞಾನವೂ ಕೂಡ ವಸ್ತುತಃ ಚೈತನ್ಯಗಳಿಗೆ ಇರುವ ಅಭೇದದ ಪರಾಮರ್ಶವನ್ನು ಮಾತ್ರ ಪದದ್ವಯಲಕ್ಷಣಾದಿಂದ ಮಾಡುತ್ತದೆ ಎಂದೇ ಹೇಳಿದರೆ, ಪ್ರತ್ಯೇಕ ಪದಾರ್ಥಜ್ಞಾನಗಳಿಗಿಂತ ಈ ವಾಕ್ಯಾರ್ಥಜ್ಞಾನದಲ್ಲಿ ವಿಷಯವೈಲಕ್ಷಣ್ಯ ಏನೂ ಇಲ್ಲವೆಂದೇ ಹೇಳಿದಂತೆ, ಪ್ರತ್ಯೇಕ

ಪದಾರ್ಥಜ್ಞಾನಗಳಂತೆಯೇ ವಾಕ್ಯಾರ್ಥ ಜ್ಞಾನವೂ ಕೂಡ ಭೇದನಿವರ್ತಕವಾಗಲಾರದು, ವೈಲಕ್ಷಣ್ಯ ಬರಲಾರದು. ಅದಕ್ಕೇನೂ ನಿಮಿತ್ತವಿಲ್ಲ. ಇದು ದಿಕ್‌ಪ್ರದರ್ಶನ. ಫಲವತ್ತ್ವವು ಪ್ರಾಮಾಣ್ಯವಲ್ಲ. ಏಕೆಂದರೆ ತೃಣಾದಿಜ್ಞಾನದಲ್ಲಿ ಫಲವತ್ತ್ವವಿಲ್ಲದ್ದರಿಂದ ಅದು ಅಪ್ರಮಾಣವೆನಿಸೀತು. ಅನಧಿಗತಾರ್ಥಗಂತೃತ್ವವೂ ಪ್ರಾಮಾಣ್ಯವಲ್ಲ. ಯಾಥಾರ್ಥ್ಯವೇ ಪ್ರಾಮಾಣ್ಯ. ಅರ್ಥವಾದ ವಾಕ್ಯಗಳಲ್ಲಿಯೂ ಯಾಥಾರ್ಥ್ಯರೂಪ ಪ್ರಾಮಾಣ್ಯವಿರುವುದರಿಂದ ಫಲವತ್ತ್ವವನ್ನು ಪ್ರಾಮಾಣ್ಯವೆಂದು ಸ್ವೀಕರಿಸಬೇಕಾಗಿಲ್ಲ. ಆದರಿಂದ 'ತತ್ತ್ವಮಸಿ' ವಾಕ್ಯವು ಕೇವಲ 'ಫಲವತ್ತ್ವೇನ ಪ್ರಮಾಣ'ವೆಂದರೆ ಪರ್ಯಾಯವಾಗಿ ಅಪ್ರಮಾಣವೆ ಎಂದಂತಾಗುವುದು.

ಏವಂ ತತ್ವಮಸೀತ್ಯತ್ರಾಪೀತಿ ದಿಕ್ ।



एतेन

''उपाधिभेदभिन्नार्थो येनैकः प्रतिपाद्यते ।
तदपि स्यादखंडार्थं महत् खं कुंभखं यथा ।।''

इति कल्पतरूक्तम्,

''सत्यज्ञानादिगीरेतत्संसर्गव्यतिरेकिणि ।
अर्थे प्रमाणं मानत्वान्नयनादिप्रमाणवत् ।।''

इति चित्सुखोक्तं चानुमानं निरस्तम् । अप्रसिद्धविशेषणत्वादिदोषजातात् । एकत्वप्रतिपादकत्वरूपस्याद्यहेतोः सखंडार्थत्वेनैव व्याप्ततया विरुद्धत्वाच्च । आकाशेंऽशः स्वाभाविक इति वक्ष्यमाणत्वेन साधनवैकल्याच्च । घटाकाशो महाकाश इत्यत्रापि आकाशस्वरूपमात्रबोधने भेदभ्रमनिरासायोगेनाधिकस्य बोध्यत्वेन साध्यवैकल्याच्च । द्वितीयहेतौ संसर्गादन्यस्मिन् संसर्गिण्यपि प्रामाण्यस्य मन्मतेऽपि सत्त्वेन सिद्धसाधनाच्च । श्लोकस्य अग्निहोत्रादिगीरिति सत्यज्ञानादिगीरेतत्पदार्थव्यतिरेकिणीत्यपि पठितुं शक्यत्वेनाभाससाम्याच्च ।

तस्माद्वेदांताः सगुणब्रह्मपरा इति ब्रह्मानंतगुणमिति ।

**एतदिति ।।** एतच्च दृष्टांते साध्यवैकल्यपरिहाराय ।। **आद्यहेतोरिति ।।** तत्त्वमस्यादिवाक्यमखंडार्थनिष्ठम् । उपाधिभेदभिन्नयोरैक्यप्रतिपादकत्वात् । घटाकाशो महाकाश इति वाक्यवदित्याद्यहेतोरित्यर्थः । व्यतिरेकशब्दस्यान्योन्याभावपरत्वं मत्वा दूषयति– **संसर्गिण्यपीति । श्लोकस्येति ।।** अग्निहोत्रादिगीरेतत्संसर्गव्यतिरेकिणीति वा सत्यज्ञानादिगीरेतत्पदार्थव्यतिरेकिणीति वा पठितुं शक्यत्वेनेत्यर्थः ।



ಇಲ್ಲಿ ಕಲ್ಪತರೂಕ್ತ ಅನುಮಾನ—ಉಪಾಧಿಭೇದದಿಂದ ಭಿನ್ನವಾದ ಪದಾರ್ಥವು ಯಾವ ವಾಕ್ಯದಿಂದ ಒಂದೆಂದು ಪ್ರತಿಪಾದಿಸಲ್ಪಡುವುದೋ ಅದು ಕೂಡ ಅಖಂಡಾರ್ಥವೆ. ಮಹಾಕಾಶ ಘಟಾಕಾಶಗಳು ಒಂದು ಎಂಬ ವಾಕ್ಯದಂತೆ. ಅಂದರೆ, ಘಟೋಪಾಧಿಯನ್ನು ಬಿಟ್ಟು ಆಕಾಶಸ್ವರೂಪಮಾತ್ರೈಕ್ಯವನ್ನು ಹೇಳುವ ಅಭಿಪ್ರಾಯವಿರುವುದರಿಂದ 'ಮಹಾಕಾಶವು ಘಟಾಕಾಶ' ಎಂಬ ವಾಕ್ಯ ಅಖಂಡಾರ್ಥಕವಾಗಿದೆ. ಹಾಗೇ 'ತತ್ತ್ವಮಸಿ' ವಾಕ್ಯವೂ ಅವಿದ್ಯೋಪಾಧಿ ಇಲ್ಲದ ಚೇತನಸ್ವರೂಪೈಕ್ಯಪರ 'ತತ್ತ್ವಮಸ್ಯಾದಿವಾಕ್ಯವು ಅಖಂಡಾರ್ಥನಿಷ್ಠ. ಉಪಾಧಿಭೇದಭಿನ್ನಗಳಿಗೆ ಐಕ್ಯ ಪ್ರತಿಪಾದಕವಾದ್ದರಿಂದ', ಘಟಾಕಾಶೋ ಮಹಾಕಾಶಃ ಎಂಬ ವಾಕ್ಯದಂತೆ, ಎಂದು ಕಲ್ಪತರೂಕ್ತ ಅನುಮಾನ ಪ್ರಯೋಗ.

ಚತುಃಶ್ಲೋಕ್ತಾನುಮಾನ ಪ್ರಯೋಗ—ಪದಾರ್ಥನಿಷ್ಠವಾದ ಸತ್ಯಜ್ಞಾನಾದಿವಾಕ್ಯವು ಏತತ್ ಪದವಾಚ್ಯ ಸಂಸರ್ಗಾನ್ಯಪ್ರಮಾಪಕವಾಗಿದೆ, ಪ್ರಮಾಣವಾದ್ದರಿಂದ ಚಕ್ಷುರಾದಿಗಳಂತೆ ಎಂದು. ಚಕ್ಷುರಾದಿಪ್ರಮಾಣವು ಏತತ್ ಸತ್ಯಾದಿಪದವಾಚ್ಯ ಸಂಸರ್ಗಾನ್ಯವಾದ ಘಟಾದಿವಿಷಯದಲ್ಲಿಯೇ ಪ್ರಮಾಜನಕವಾಗಿದೆ. ಪ್ರಮಾಣವೂ ಆಗಿದೆ. ಹಾಗೇ ಸತ್ಯಾದಿವಾಕ್ಯವೂ ಏತತ್ ಸತ್ಯಾದಿಪದವಾಚ್ಯ ಸಂಸರ್ಗಾತಿರಿಕ್ತ ಅಖಂಡ ಚೈತನ್ಯಸ್ವರೂಪದಲ್ಲಿಯೇ ಪ್ರಮಾಜನಕವಾಗಿದೆ.

ಮೇಲಿನ ಎರಡೂ ಅನುಮಾನಗಳಲ್ಲಿ ಅಪ್ರಸಿದ್ಧವಿಶೇಷಣತ್ವಾದಿ ದೋಷರಾಶಿ ಇರುವುದರಿಂದ ಅಯುಕ್ತ—

ಏತೇನ

> ಉಪಾಧಿಭೇದಭಿನ್ನಾರ್ಥೋ ಯೇನೈಕಃ ಪ್ರತಿಪಾದ್ಯತೇ ।
> ತದಪಿ ಸ್ಯಾದಖಂಡಾರ್ಥಂ ಮಹತ್ ಖಂ ಕುಂಭಖಂ ಯಥಾ ॥

ಇತಿ ಕಲ್ಪತರೂಕ್ತಂ,

> ಸತ್ಯಜ್ಞಾನಾದಿಗೀರೇತತ್ಸಂಸರ್ಗವ್ಯತಿರೇಕಿಣಿ ।
> ಅರ್ಥೇ ಪ್ರಮಾಣಂ ಮಾನತ್ವಾನ್ನಯನಾದಿ ಪ್ರಮಾಣವತ್ ॥

**ಇತಿ ಚಿತ್ಸುಖೋಕ್ತಂ ಚಾನುಮಾನಂ ನಿರಸ್ತಂ ।**
**ಅಪ್ರಸಿದ್ಧವಿಶೇಷಣತ್ವಾದಿ ದೋಷ ಜಾತಾತ್ ।**

ಮೊದಲನೆ ಅನುಮಾನದಲ್ಲಿ ಸಾಧ್ಯವಾಗಿ ಉಕ್ತವಾಗಿರುವ ಅಖಂಡಾರ್ಥತ್ವವು ಅಪ್ರಸಿದ್ಧ. ಎರಡನೆ ಅನುಮಾನದಲ್ಲಿಯೂ ಸಂಸರ್ಗಶೂನ್ಯವಾದ ಪದಾರ್ಥದಲ್ಲಿ ಪ್ರಮಾಪಕತ್ವವು ಅಖಂಡಾರ್ಥತ್ವವೇ ಆಗಿರುವುದರಿಂದ ಅದೂ ಅಪ್ರಸಿದ್ಧ.

'ಸಂಸರ್ಗವ್ಯತಿರೇಕಿಣಿ ಅರ್ಥೇ' ಎಂಬಲ್ಲಿ ಏವಕಾರ ಹಾಕದಿದ್ದರೆ ಸಂಸರ್ಗವ್ಯತಿರಿಕ್ತ ಪದಾರ್ಥಪ್ರಮಾಪಕವಾದ್ದರಿಂದ ಸಿದ್ಧಸಾಧನ. ಏವಕಾರ ಹಾಕಿದರೆ, ಸಂಸರ್ಗಶೂನ್ಯಾರ್ಥಕ್ಕೇ ಪ್ರಮಾಪಕ ಎಂದರೆ ಬಾಧ.

'ವ್ಯತಿರೇಕಿ' ಎಂದರೆ ಭಿನ್ನವೆಂದರ್ಥವೆಂದರೂ ಸಂಸರ್ಗಭಿನ್ನವು 'ಸಂಸರ್ಗಿ'ಯಾಗುವುದರಿಂದ ಸಂಸರ್ಗಿ ವಿಷಯದಲ್ಲಿಯೂ ನಾವು ಪ್ರಾಮಾಣ್ಯವನ್ನು ಒಪ್ಪಿರುವುದರಿಂದ ಸಿದ್ಧಸಾಧನ. ಏವಕಾರ ಹಾಕಿದರೆ ಹಿಂದಿನಂತೆಯೇ ಬಾಧ.

**ಏಕತ್ವಪ್ರತಿಪಾದಕತ್ವರೂಪಸ್ಯಾದ್ಯಹೇತೋಃ ಸಖಂಡಾರ್ಥತ್ವೇನೈವ ವ್ಯಾಪ್ತತಯಾ ವಿರುದ್ಧತ್ವಾಚ್ಚ ।—**

ಐಕ್ಯಪ್ರತಿಪಾದಕತ್ವರೂಪವಾದ ಮೊದಲನೇ ಹೇತುವು ವಿರುದ್ಧವೂ ಆಗಿದೆ. ಏಕತ್ವ ಧರ್ಮವನ್ನು ಪ್ರತಿಪಾದಿಸಿದರೆ ನಿರ್ಧರ್ಮಕ ಅಖಂಡಾರ್ಥ ಪರವಾಗುವುದಿಲ್ಲ. ಸಖಂಡಾರ್ಥ ಪರತ್ವಕ್ಕೇ ಅದು ವ್ಯಾಪ್ಯವಾಗಿ ವಿರುದ್ಧವಾಗುತ್ತದೆ.

**ಆಕಾಶೇಽಂಶಃ ಸ್ವಾಭಾವಿಕ ಇತಿ ವಕ್ಷ್ಯಮಾಣತ್ವೇನ ಸಾಧನ ವೈಕಲ್ಯಾಚ್ಚ । ಘಟಾಕಾಶೋ ಮಹಾಕಾಶ ಇತ್ಯತ್ರಾಪಿ ಆಕಾಶಸ್ವರೂಪಮಾತ್ರ ಬೋಧನೇ ಭೇದಭ್ರಮನಿರಾಸಾಯೋಗೇನ ಅಧಿಕಸ್ಯ ಬೋಧ್ಯತ್ವೇನ ಸಾಧ್ಯವೈಕಲ್ಯಾಚ್ಚ । —**

ಆಕಾಶದಲ್ಲಿ ಅಂಶ ಸ್ವಾಭಾವಿಕವೇ ಹೊರತು ಔಪಾಧಿಕವಲ್ಲ ಎಂದು ಮುಂದೆ ನಾವು ಹೇಳುವುದರಿಂದ 'ಉಪಾಧಿ ಭೇದಭಿನ್ನಯೋರೈಕ್ಯ ಪ್ರತಿಪಾದಕತ್ವ'ರೂಪ ಹೇತುವು 'ಘಟಾಕಾಶೋ ಮಹಾಕಾಶಃ' ಎಂಬ ವಾಕ್ಯರೂಪ ದೃಷ್ಟಾಂತದಲ್ಲಿ ಬಾರದಿರುವುದರಿಂದ ಸಾಧನವೈಕಲ್ಯ.

ಸಾಧ್ಯವೈಕಲ್ಯವೂ ಇದೆ. ಏಕೆಂದರೆ 'ಘಟಾಕಾಶೋ ಮಹಾಕಾಶಃ' ಎಂಬಲ್ಲಿ ಲಕ್ಷಣಯಾ ಆಕಾಶಸ್ವರೂಪಮಾತ್ರ ಬೋಧನವೆಂದು ಅದ್ವೈತಿಯ ಅಭಿಪ್ರಾಯವಿದೆ. ಇಲ್ಲದಿದ್ದರೆ ಎರಡು ವಿಶಿಷ್ಟಗಳಿಗೆ ಐಕ್ಯವು ಬಾಧಿತ ಎನ್ನುತ್ತಾನೆ. ಭೇದಭ್ರಮನಿರಾಸಕ್ಕಾಗಿ ಇಲ್ಲಿ ಅಭೇದ ಬೋಧನ ಎಂದೂ ಅಭಿಪ್ರಾಯವಿದೆ. ಆಕಾಶ ಸ್ವರೂಪಜ್ಞಾನವು ಆಕಾಶದಲ್ಲಿ ಭೇದಭ್ರಮಕ್ಕೆ ಕಾರಣವಾದ ಧರ್ಮಿಜ್ಞಾನರೂಪವಾಗಿ ಮೊದಲೇ ಇರುವುದರಿಂದ ಈ ವಾಕ್ಯವು ಅಖಂಡಸ್ವರೂಪಕ್ಕಿಂತ ಹೆಚ್ಚೇನೂ ಹೇಳದೆ ಅಖಂಡ ಸ್ವರೂಪಜ್ಞಾನವನ್ನು ಉಂಟುಮಾಡಿದರೆ ಭೇದಭ್ರಮಕ್ಕೆ ಕಾರಣವಾದ ಆ ಜ್ಞಾನವು

ಭೇದಭ್ರಮನಿವರ್ತಕವಾಗಲಾರದು. ಆದರಿಂದ ಅಖಂಡಾರ್ಥತ್ವರೂಪ ಸಾಧ್ಯವು ದೃಷ್ಟಾಂತದಲ್ಲಿಲ್ಲ. ಸಾಧ್ಯವೈಕಲ್ಯವಿದೆ.

**ದ್ವಿತೀಯ ಹೇತೌ ಸಂಸರ್ಗಾದನ್ಯಸ್ಮಿನ್ ಸಂಸರ್ಗಿಣ್ಯಪಿ ಪ್ರಾಮಾಣ್ಯಸ್ಯ ಮನ್ಮತೇಽಪಿ ಸತ್ತ್ವೇನ ಸಿದ್ಧಸಾಧನಾಚ್ಚ । —**

ಎರಡನೇ ಹೇತುವಿನಲ್ಲಿ 'ಸಂಸರ್ಗವ್ಯತಿರೇಕಿ' ಎಂದರೆ ಸಂಸರ್ಗಭಿನ್ನ ಎಂದರ್ಥ ವಿವಕ್ಷಿತವಾಗಿದ್ದರೆ ಸಂಸರ್ಗಭಿನ್ನವು ಸಂಸರ್ಗಿಯೇ ಆಗುವುದರಿಂದ ಸಂಸರ್ಗಿಯಾದ ಬ್ರಹ್ಮನ ವಿಷಯದಲ್ಲಿ ವಾಕ್ಯಪ್ರಾಮಾಣ್ಯವನ್ನು ನಾವು ಒಪ್ಪಿರುವುದರಿಂದ ಸಿದ್ಧಸಾಧನ.

**ಶ್ಲೋಕಸ್ಯ 'ಅಗ್ನಿಹೋತ್ರಾದಿ ಗೀರಿತಿ', 'ಸತ್ಯಜ್ಞಾನಾದಿಗೀರೇತತ್ಪದಾರ್ಥ ವ್ಯತಿರೇಕಿಣಿ' ಇತ್ಯಪಿ ಪಠಿತುಂ ಶಕ್ಯತ್ವೇನ ಆಭಾಸ ಸಾಮ್ಯಾಚ್ಚ ।**

'ಸತ್ಯಜ್ಞಾನಾದಿಗೀರೇತತ್' ಎಂಬ ಶ್ಲೋಕವನ್ನು 'ಅಗ್ನಿಹೋತ್ರಾದಿಗೀರೇತತ್' ಎಂದು ಮುಂತಾಗಿಯೂ ಓದಿಕೊಳ್ಳಬಹುದು. ಅಥವಾ 'ಸತ್ಯಜ್ಞಾನಾದಿಗೀರೇತತ್ಪದಾರ್ಥವ್ಯತಿರೇಕಿಣಿ' ಎಂದೂ ಓದಿಕೊಳ್ಳಬಹುದು. ಆಗ 'ಅಗ್ನಿಹೋತ್ರಂ ಜುಹೋತಿ' ವಾಕ್ಯವು ಅಖಂಡಕರ್ಮಪರವೆಂದು ಸಿದ್ಧವಾಗುವುದು. ಸತ್ಯಜ್ಞಾನಾದಿವಾಕ್ಯವು ಏತತ್ಪದಾರ್ಥಭಿನ್ನ ಶೂನ್ಯವಿಷಯದಲ್ಲಿ ಪ್ರಮಾಣ ವೆಂದೂ ಸಿದ್ಧವಾಗುವುದು. ಹೀಗೆ ಆಭಾಸಸಮಾನಯೋಗಕ್ಷೇಮತ್ವ ರೂಪದೋಷವೂ ಇದೆ.

**ತಸ್ಮಾತ್ ವೇದಾಂತಾಃ ಸಗುಣಬ್ರಹ್ಮಪರಾಃ ಇತಿ, ಬ್ರಹ್ಮ ಅನಂತಗುಣಮಿತಿ ॥**

'ಆದರಿಂದ ವೇದಾಂತವಾಕ್ಯಗಳು ಅಖಂಡಾರ್ಥಪರವಲ್ಲ, ಸಗುಣಬ್ರಹ್ಮಪರವೆಂದೂ, ಬ್ರಹ್ಮನು ಅನಂತಗುಣಪರಿಪೂರ್ಣನೆಂದೂ ಸಿದ್ಧವಾಗುವುದು' ಎಂದು ಶ್ರೀವ್ಯಾಸರಾಜರು ಈ ಪ್ರಕರಣಕ್ಕೆ ಮಂಗಳ ಹಾಡಿದ್ದಾರೆ.



ಅದ್ವೈತಸಿದ್ಧಿಯಲ್ಲಿ ಈ ಪ್ರಕರಣಕ್ಕೆ 'ಮಂಗಲ' ಶ್ಲೋಕಗಳು ಹೀಗೆ !—

ತಸ್ಮಾದ್ ವೃಥಾ ರೋದಿಷಿ ಮಂದಬುದ್ಧೇ !
ತವ ಭ್ರಮಾದೇವ ಹಿ ದುಃಖಮೇತತ್ ।
ತಸ್ಯಾಪನೋದೋ ವಿಹಿತಃ ಪ್ರಮಾಣೈಃ
ತುಭ್ಯಂ ತು ರೋಚೇತ ಸ ನೇತಿ ಚಿತ್ರಂ ।

ಮಾನಂ ವೇದಾಂತ ವಾಕ್ಯಾನಿ ನಿರ್ಗುಣಾಖಂಡ ಬೋಧನಾತ್ ।
ನಿರ್ಗುಣತ್ವಂ ಚ ತಸ್ಯೋಕ್ತಂ ಶ್ರುತ್ಯಾಯುಕ್ತಿಸಹಾಯಯಾ ॥

ಇಹ ಕುಮತಿರತತ್ತ್ವೇ ತತ್ವವಾದೀ ವರಾಕಃ
ಪ್ರಲಪತಿ ಯದಕಾಂಡೇ ಖಂಡನಾಭಾಸಮುಚ್ಚೈಃ ।
ಪ್ರತಿವಚನಮುಮುಷ್ಮೈ ತಸ್ಯ ಕೋ ವಕ್ತು ವಿದ್ವಾನ್
ನಹಿ ರುತಮನು ರೌತಿ ಗ್ರಾಮಸಿಂಹಸ್ಯ ಸಿಂಹಃ ॥

-ಅದ್ವೈತಸಿದ್ಧಿಕಾರನು ಶ್ರೀವ್ಯಾಸರಾಜರಿಗೆ ಹೇಳಿದ ಮಾತುಗಳು ಇವು !

ಇವನ್ನು ಕೇಳಲು ಶ್ರೀಪಾದರು ಆಗ ಇರಲಿಲ್ಲ. ಇರುತ್ತಿದ್ದರೆ, ಅವರು ಇವೇ ಮಾತುಗಳನ್ನು ಸಿದ್ಧಿಕಾರನಿಗೇ ತಿರುಗಿ ಹೇಳುತ್ತಿದ್ದರು! ಏಕೆಂದರೆ 'ಅತತ್ವೇ ತತ್ವವಾದೀ ವರಾಕಃ' ನಿಜವಾಗಿ ಯಾರು? ಸ್ವಯಂ ಸಿದ್ಧಿಕಾರನೆ ತಾನೆ? ಅತತ್ವವಾಗಿರುವ ಬೌದ್ಧರ ಶೂನ್ಯವನ್ನೇ ತತ್ವವೆಂದು ವಾದಿಸಿದ ವರಾಕನು ಅವನೇ ತಾನೆ? ಶ್ರೀವ್ಯಾಸರಾಜರು ಅಂದೇ ಇದನ್ನು ಹೇಳಿದ್ದರು—

ಸೌಗತೋಕ್ತ ಸ್ವಾಭಿಮತ ಶೂನ್ಯತಾ ಸಿದ್ಧಯೇ ಪರೈಃ ।
ಸತ್ಯಜ್ಞಾನಾದಿವಾಕ್ಯಾನಾಂ ಲಕ್ಷಣೋಕ್ತಾ ಪರಾತ್ಮನಿ ॥ ಎಂದು.



## ಬ್ರಹ್ಮಣೋ ನಿರ್ಗುಣತ್ವಭಂಗಃ

तथाहि-ब्रह्मणो धर्माः किं साधकाभावान्न संति उत बाधकसद्भावात् ?

नाद्यः "बृहंतो ह्यस्मिन्गुणाः, "परास्य शक्तिर्विविधैव श्रूयते स्वाभाविकी ज्ञानबलक्रिया च" "सत्यकामः सत्यसंकल्प" इत्यादिश्रुतीनाम्,

"ब्रह्मेशानादिभिर्देवैः समेतैर्यद्गुणांशकः ।

नावसाययितुं शक्यो व्याचक्षाणैश्च सर्वदा ।।"

"मय्यनंतगुणेऽनंते", "तेजोबलैश्वर्यमहावबोधसद्वीर्यशक्त्यादिगुणैकराशिः परःपराणाम्" इत्यादिस्मृतीनाम्,

"अंतर्याम्यधिदैवादिषु तद्धर्मव्यपदेशात्" "अदृश्यत्वादिगुणको धर्मोक्तेः" "सर्वधर्मोपपत्तेश्च" इत्यादीनां निर्णायकसूत्राणां,

ब्रह्म धर्मिसत्तासमानसत्ताकधर्मवत्, उक्तसत्ताकभावरूपधर्मवद्वा, यावत्स्वस्वरूपमनुवर्तमानधर्मवद्वा, उक्तविशेषणवद्भावरूपधर्मवद्वा स्वज्ञानाबाध्यधर्मवद्वा, स्वज्ञानाबाध्यभावरूपधर्मवद्वा, धर्मैर्भाव-रूपैर्धर्मैर्वा हीनं नावतिष्ठते, पदार्थत्वात् भावत्वात् अभावविलक्षणत्वाद्वा घटवत् ।

प्रतिज्ञातं ब्रह्मणोऽनंतगुणत्वमुपपादयति– **तथाहीति । श्रुतीनामिति ।।** अत्र षष्ठीबहुवचनांतं पदं सत्त्वादित्यनेन संबध्यते । कल्पितधर्मवत्त्वेन सिद्धसाधनवारणायाह— **धर्मिसत्तासमानसत्ताकेति उक्तसत्ताकेति** च ।। एवमन्यत्राप्यूह्यम् ।।



**ತಥಾಹಿ ಬ್ರಹ್ಮಣೋ ಧರ್ಮಾಃ ಕಿಂ ಸಾಧಕಾಭಾವಾನ್ನ ಸಂತಿ, ಉತ ಬಾಧಕಸದ್ಭಾವಾತ್?**

ವೇದಾಂತ ವಾಕ್ಯಗಳು ಸಗುಣಬ್ರಹ್ಮ ಪರವಾದ್ದರಿಂದ ಬ್ರಹ್ಮ ಅನಂತಗುಣಪರಿಪೂರ್ಣವೆ. ಇದು ಹೇಗೆ? ಎಂದರೆ ಹೀಗೆ— ಅದ್ವೈತಿಯು 'ಬ್ರಹ್ಮ ನಿರ್ಗುಣ' ಎನ್ನಲು ಏನು ಕಾರಣ? ಸಗುಣವೆನ್ನಲು ಸಾಧಕವಿಲ್ಲವೆಂದೆ? ಬಾಧಕವಿದೆ ಎಂದೆ?

**ನಾದ್ಯಃ। 'ಬೃಹಂತೋ ಹ್ಯಸ್ಮಿನ್ ಗುಣಾಃ' ಪರಾಸ್ಯ ಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನ ಬಲಕ್ರಿಯಾ ಚ' 'ಸತ್ಯಕಾಮಃ ಸತ್ಯಸಂಕಲ್ಪಃ' ಇತ್ಯಾದಿ ಶ್ರುತೀನಾಂ...**

ಬ್ರಹ್ಮನಲ್ಲಿ ಧರ್ಮಗಳು ಇವೆ ಎನ್ನಲು ಸಾಧಕವಿಲ್ಲ ಎನ್ನುವ ಮೊದಲನೇ ಪಕ್ಷ ಯುಕ್ತವಲ್ಲ. ಏಕೆಂದರೆ ಸಾಧಕ ಪ್ರಮಾಣಗಳಿವೆ. 'ಬ್ರಹ್ಮನಲ್ಲಿ ಪೂರ್ಣಗುಣಗಳಿರುವುದರಿಂದ ಬ್ರಹ್ಮನೆನಿಸಿದ್ದಾನೆ' ಪರಮಾತ್ಮನ ಶಕ್ತಿ ನಾನಾವಿಧವೆಂದೂ ಅವನ ಜ್ಞಾನಬಲಕ್ರಿಯೆಗಳು ಸ್ವಾಭಾವಿಕವೆಂದೂ ಶ್ರುತಿಗಳು ಸಾರುತ್ತಿವೆ. 'ಬ್ರಹ್ಮನ ಆಸೆಆಕಾಂಕ್ಷೆಗಳು ಸದಾ ಪೂರೈಸುತ್ತವೆ, ಸಂಕಲ್ಪಗಳೂ ಸದಾ ಈಡೇರುವವುಗಳೇ.' ಇತ್ಯಾದಿ ಶ್ರುತಿವಾಕ್ಯಗಳು ಸಾಧಕವಾಗಿವೆ.

**ಬ್ರಹ್ಮೇಶಾನಾದಿಭಿರ್ದೇವೈಃ ಸಮೇತ್ಯೈರ್ಯದ್‌ಗುಣಾಂಶಕಃ ।**
**ನಾವಸಾಯಯಿತುಂ ಶಕ್ಯೋ ವ್ಯಾಚಕ್ಷಾಣೈಶ್ಚ ಸರ್ವದಾ ॥ (ತಾ.ನಿ.2.114)**

**ಮಯ್ಯನಂತ ಗುಣೇಽನಂತೇ ಗುಣತೋಽನಂತವಿಗ್ರಹೇ ।**
**ಯದಾಸೀತ್ ತತ ಏವಾದ್ಯಃ ಸ್ವಯಂಭೂಃ ಸಮಭೂದಜಃ ॥ (ಭಾಗ.6.4.48)**
**ತೇಜೋ ಬಲೈಶ್ವರ್ಯಮಹಾವಬೋಧ**
**ಸದ್ವೀರ್ಯಶಕ್ತ್ಯಾದಿ ಗುಣೈಕರಾಶಿಃ ।**
**ಪರಃ ಪರಾಣಾಂ ಸಕಲಾ ನ ಯತ್ರ**
**ಕ್ಲೇಶಾದಯಃ ಸಂತಿ ಪರಾವರೇಶೇ ॥ (ವಿಷ್ಣು.ಪು.6.5.85)**

**ಇತ್ಯಾದಿಸ್ಮೃತೀನಾಂ....**

'ಬ್ರಹ್ಮರುದ್ರಾದಿ ದೇವತೆಗಳೆಲ್ಲರೂ ಸೇರಿ ಸದಾ ಪರಸ್ಪರ ವಿಚಾರಮಾಡಿ ಹೇಳಿದರೂ ಪರಮಾತ್ಮನ ಒಂದು ಗುಣದ ಲೇಶವು ಇಷ್ಟೇ ಎಂದು ನಿರ್ಣಯಿಸಲು ಶಕ್ಯವಾಗುವುದಿಲ್ಲ.'

'ನನ್ನಲ್ಲಿ ಗುಣಗಳು ಪ್ರತಿಯೊಂದೂ ಅಪರಿಮಿತ. ಅಂಥ ಅಪರಿಮಿತ ಗುಣಗಳುಳ್ಳವನು ನಾನು. ಮತ್ತು ಅನಂತರೂಪ ಉಳ್ಳವನು. ನನ್ನ ನಾಭಿಕಮಲದಿಂದ ಮೊತ್ತಮೊದಲಿಗೆ ಅಯೋನಿಜನಾಗಿ ಬ್ರಹ್ಮದೇವ ಜನಿಸಿದ.'

'ಪರಮಾತ್ಮನು ತೇಜಸ್ಸು ಬಲ ಐಶ್ವರ್ಯ ಮಹಾಜ್ಞಾನ ನಿರ್ದುಷ್ಟವಾದ ವೀರ್ಯಶಕ್ತಿ ಮುಂತಾದ ಗುಣರಾಶಿಸ್ವರೂಪ. ಉತ್ತಮರಾದ ಬ್ರಹ್ಮಾದಿಗಳಿಗಿಂತಲೂ ಉತ್ತಮ ಸರ್ವೇಶನಾದ ಅವನಲ್ಲಿ ಯಾವುದೇ ಕ್ಲೇಶಾದಿ ದೋಷ ಇಲ್ಲ.

...ಇತ್ಯಾದಿ ಸ್ಮೃತಿಗಳು ಸಗುಣತ್ವ ಸಾಧಕವಾಗಿವೆ.

**'ಅಂತರ್ಯಾಮ್ಯಧಿದೈವಾದಿಷು ತದ್ಧರ್ಮವ್ಯಪದೇಶಾತ್'** (ಬ್ರ.ಸೂ.1.2.18)

ಅಧಿದೈವ ಅಧ್ಯಾತ್ಮ ಅಧಿಭೂತಗಳೆಂಬ ಎಲ್ಲ ಪ್ರಕರಣಗಳಲ್ಲಿಯೂ ವಿಷ್ಣುವಿನ ಮಹಿಮೆಗಳನ್ನೇ ಮುಖ್ಯವಾಗಿ ಹೇಳುವುದರಿಂದ ಅವನೊಬ್ಬನೇ ಸರ್ವಾಂತರ್ಯಾಮಿ.

**'ಅದೃಶ್ಯತ್ವಾದಿಗುಣಕೋ ಧರ್ಮೋಕ್ತೇಃ'** (ಬ್ರ.ಸೂ.1.2.21)

'ಯತ್ತದದ್ರೇಶ್ಯಮಗ್ರಾಹ್ಯಮಗೋತ್ರಂ' ಎಂಬ ಶ್ರುತಿಯಲ್ಲಿ ಪ್ರತಿಪಾದ್ಯವಾದ ಅದೃಶ್ಯತ್ವಾದಿ ಗುಣಗಳುಳ್ಳವನು ವಿಷ್ಣುವೆ. ಏಕೆಂದರೆ, 'ಅಥ ಪರಾ ಯಯಾ ತದಕ್ಷರಮಧಿಗಮ್ಯತೇ' ಎಂದು ಶ್ರುತ್ಯುಕ್ತ ಪರವಿದ್ಯಾವಿಷಯತ್ವರೂಪ ವಿಷ್ಣುಧರ್ಮವನ್ನು ಇಲ್ಲಿ ಹೇಳಿದೆ.

**'ಸರ್ವಧರ್ಮೋಪಪತ್ತೇಶ್ಚ'**(ಬ್ರ.ಸೂ.2.1.38)**ಇತ್ಯಾದೀನಾಂ ನಿರ್ಣಾಯಕಸೂತ್ರಾಣಾಂ,**

ಬ್ರಹ್ಮನಲ್ಲಿ ಜ್ಞಾನಾನಂದಾದದಿ ಸಕಲಗುಣಪೂರ್ಣತ್ವವೂ ದುಃಖಾದಿ ಸಕಲ ದೋಷ ರಹಿತತ್ವವೂ ಯುಕ್ತಿಯುಕ್ತವೇ ಆಗಿವೆ'

....ಇತ್ಯಾದಿ ನಿರ್ಣಾಯಕ ಸೂತ್ರಗಳೂ ಸಗುಣತ್ವಸಾಧಕವಾಗಿವೆ.

**ಬ್ರಹ್ಮ (1) ಧರ್ಮಿ ಸತ್ತಾ ಸಮಾನ ಸತ್ತಾಕ ಧರ್ಮವತ್**

**(2) ಉಕ್ತ ಸತ್ತಾಕ ಭಾವರೂಪ ಧರ್ಮವದ್ವಾ**

**(3) ಯಾವತ್ ಸ್ವ ಸ್ವರೂಪಂ ಅನುವರ್ತಮಾನಧರ್ಮವದ್ವಾ**

**(4) ಉಕ್ತವಿಶೇಷಣವದ್ ಭಾವರೂಪಧರ್ಮವದ್ವಾ**

**(5) ಸ್ವಜ್ಞಾನಾಬಾಧ್ಯ ಧರ್ಮವದ್ವಾ**

**(6) ಸ್ವಜ್ಞಾನಾಬಾಧ್ಯ ಭಾವರೂಪ ಧರ್ಮವದ್ವಾ**

**(7) (8) ಧರ್ಮೈರ್ಭಾವರೂಪಧರ್ಮೈರ್ವಾ ಹೀನಂ ನಾವತಿಷ್ಠತೇ**

**(1) ಪದಾರ್ಥತ್ವಾತ್ (2) ಭಾವತ್ವಾತ್ (3) ಅಭಾವ ವಿಲಕ್ಷಣತ್ವಾದ್ವಾ ಘಟವತ್ ।**

ಬ್ರಹ್ಮನು (1) ಧರ್ಮಿ ಸತ್ತಾ ಸಮಾನ ಸತ್ತಾಕ ಧರ್ಮಉಳ್ಳವನು

(2) ಧರ್ಮಿ ಸತ್ತಾ ಸಮಾನ ಸತ್ತಾಕ ಭಾವರೂಪಧರ್ಮವುಳ್ಳವನು

(3) ಸ್ವಸ್ವರೂಪವಿರುವಷ್ಟು ಕಾಲ ಇರುವ ಧರ್ಮ ಉಳ್ಳವನು.

(4) ಸ್ವಸ್ವರೂಪವಿರುವಷ್ಟು ಕಾಲ ಇರುವ ಭಾವರೂಪ ಧರ್ಮಉಳ್ಳವನು.

(5) ಸ್ವಜ್ಞಾನದಿಂದ ಅಬಾಧ್ಯವಾದ ಧರ್ಮಉಳ್ಳವನು.

(6) ಸ್ವಜ್ಞಾನದಿಂದ ಬಾಧ್ಯವಾಗದ ಭಾವರೂಪ ಧರ್ಮಉಳ್ಳವನು.

(7) ಧರ್ಮಗಳಿಂದ ರಹಿತನಾಗಿ ಯಾವ ಕಾಲದಲ್ಲಿಯೂ ಇರುವುದಿಲ್ಲ, ಅಥವಾ

(8) ಭಾವರೂಪ ಧರ್ಮಗಳಿಂದ ರಹಿತನಾಗಿ ಯಾವಕಾಲದಲ್ಲಿಯೂ ಇರುವುದಿಲ್ಲ.

ಏಕೆಂದರೆ ಈ ಪ್ರತಿಯೊಂದು ಸಾಧ್ಯಕ್ಕೂ ಮೂರು ಬೇರೆ ಬೇರೆ ಹೇತುಗಳು—

(1) ಪದಾರ್ಥವಾದ್ದರಿಂದ (2)ಭಾವವಾದ್ದರಿಂದ (3)ಅಭಾವವಿಲಕ್ಷಣವಾದ್ದರಿಂದ

ಎಲ್ಲಕ್ಕೂ ಒಂದು ದೃಷ್ಟಾಂತ—'ಘಟದಂತೆ' ಎಂದು.

ಇಲ್ಲಿ ಧರ್ಮ ಉಳ್ಳವನು, ಅಥವಾ ಭಾವರೂಪ ಧರ್ಮ ಉಳ್ಳವನು ಎಂದಿಷ್ಟೇ ಸಾಧ್ಯ ಮಾಡಿದರೆ ಕಲ್ಪಿತಧರ್ಮವತ್ತ್ವವನ್ನು ಕಲ್ಪಿತ ಭಾವರೂಪ ಧರ್ಮವತ್ತ್ವವನ್ನು ಅದ್ವೈತಿ ಒಪ್ಪಿರುವುದರಿಂದ ಸಿದ್ಧಸಾಧನದೋಷ ಬಂದೀತು. ಅದಕ್ಕೆ ಎರಡೂ ಸಾಧ್ಯಗಳಲ್ಲಿ 'ಧರ್ಮಿಸತ್ತಾ ಸಮಸತ್ತಾಕ' ಎಂದು ವಿಶೇಷಣ ಕೊಟ್ಟಿದ್ದಾರೆ. ಧರ್ಮಿಯು ಇಲ್ಲಿ ಬ್ರಹ್ಮನಾದ್ದರಿಂದ, ಬ್ರಹ್ಮನು ಪಾರಮಾರ್ಥಿಕನೇ ಹೊರತು ಕಲ್ಪಿತನಲ್ಲವಾದ್ದರಿಂದ 'ಪಾರಮಾರ್ಥಿಕ ಬ್ರಹ್ಮಸತ್ತಾ ಸಮಾನಸತ್ತಾಕ ವಾದ' ಎಂದರೆ ಪಾರಮಾರ್ಥಿಕವಾದ ಧರ್ಮ, ಪಾರಮಾರ್ಥಿಕವಾದ ಭಾವರೂಪಧರ್ಮ ಉಳ್ಳವನೆಂದೇ ಸಾಧ್ಯಮಾಡಿದಂತಾಗಿದೆ. ಪಾರಮಾರ್ಥಿಕವಾದ ಧರ್ಮವನ್ನಾಗಲಿ ಪಾರಮಾರ್ಥಿಕವಾದ ಭಾವರೂಪ ಧರ್ಮವನ್ನಾಗಲಿ ಬ್ರಹ್ಮನಲ್ಲಿ ಅದ್ವೈತಿ ಒಪ್ಪಿಲ್ಲ. ಅದರಿಂದ ಸಿದ್ಧಸಾಧನದೋಷವಿಲ್ಲ.

'ಪಾರಮಾರ್ಥಿಕಧರ್ಮ ಉಳ್ಳವನು' ಎಂದೇ ವಿಶೇಷಣ ಕೊಟ್ಟು ಹೇಳಿದರೆ, ಬ್ರಹ್ಮನನ್ನು ಹೊರತು ಬೇರೆ ಏನನ್ನೂ ಪಾರಮಾರ್ಥಿಕವೆಂದು ಅದ್ವೈತಿ ಒಪ್ಪಿಲ್ಲದ್ದರಿಂದ ಪಾರಮಾರ್ಥಿಕ ಧರ್ಮವತ್ತ್ವವು ಅಪ್ರಸಿದ್ಧ, ಸಾಧ್ಯಾಪ್ರಸಿದ್ಧಿ ದೋಷ ಬರುತ್ತದೆ. ಅದಕ್ಕೆ ಧರ್ಮಿಸತ್ತಾಸಮಾನಸತ್ತಾಕ ಧರ್ಮವತ್ತ್ವವನ್ನೇ ಸಾಧ್ಯ ಮಾಡಿದ್ದಾರೆ. ಅದರಿಂದ 'ಘಟವತ್ ಎಂದು ದೃಷ್ಟಾಂತವಾದ ಘಟದಲ್ಲಿ ಧರ್ಮಿ ಎಂದರೆ ಘಟ, ತತ್‌ಸತ್ತಾಸಮಾನಸತ್ತಾಕವಾದ ಧರ್ಮ ಅಥವಾ ಭಾವರೂಪಧರ್ಮ ಘಟತ್ವವೆ ಪ್ರಸಿದ್ಧ. ಏಕೆಂದರೆ ಅದ್ವೈತದಲ್ಲಿ ಘಟರೂಪಧರ್ಮಿ ಕಲ್ಪಿತ, ಅದರಲ್ಲಿ ಘಟತ್ವವೂ ಕಲ್ಪಿತ, ಘಟರೂಪಧರ್ಮಿಸತ್ತಾ ಸಮಾನಸತ್ತಾಕ ಘಟತ್ವರೂಪ ಧರ್ಮ ಉಳ್ಳದ್ದು ಘಟ. ಹೀಗೆ ದೃಷ್ಟಾಂತದಲ್ಲಿ ಸಾಧ್ಯಾನುಗಮವಿರುವುದರಿಂದ ಸಾಧ್ಯಾಪ್ರಸಿದ್ಧಿದೋಷವಿಲ್ಲ. 'ಧರ್ಮಿ'ಶಬ್ದವು, ಬ್ರಹ್ಮರೂಪ ಪಕ್ಷದಲ್ಲಿ ಸಾಧ್ಯಘಟಕವಾಗಿ ಬ್ರಹ್ಮವನ್ನು ಹೇಳುತ್ತದೆ, ಘಟರೂಪ ದೃಷ್ಟಾಂತದಲ್ಲಿ ಸಾಧ್ಯಘಟಕವಾಗಿ ಘಟವನ್ನೇ ಹೇಳುತ್ತದೆ.

'ಧರ್ಮಿ' ಎಂದರೆ ಸಾಮಾನ್ಯಶಬ್ದವಾದ್ದರಿಂದ ಯಾವ ಧರ್ಮಿಯೂ ಆಗಬಹುದು. 'ಸ್ವ' ಎಂದರೂ ಸಾಮಾನ್ಯಶಬ್ದವಾದ್ದರಿಂದ ಯಾವುದೇ ಪದಾರ್ಥವನ್ನು ತೆಗೆದುಕೊಳ್ಳಬಹುದು. ಹೀಗಾಗಿ

ಘಟರೂಪ ಧರ್ಮಿಸತ್ತಾ ಸಮಾನಸತ್ತಾಕವಾದ ಕಲ್ಪಿತವಾದ ಧರ್ಮವು ಕೂಡ ಸಾಧ್ಯವಾಗುವುದರಿಂದ, ಅಂಥ ಧರ್ಮವನ್ನು ಅದ್ವೈತಿ ಬ್ರಹ್ಮನಲ್ಲಿ ಒಪ್ಪಿದ್ದರಿಂದ ಸಿದ್ಧಸಾಧನದೋಷ. 'ಧರ್ಮಿ' 'ಸ್ವ' ಪದಗಳಿಂದ ಬ್ರಹ್ಮನನ್ನೇ ಇಟ್ಟುಕೊಳ್ಳಬೇಕೆಂದರೆ ಬ್ರಹ್ಮ ಒಂದೇ ಪಾರಮಾರ್ಥಿಕವಾದ್ದರಿಂದ ಬ್ರಹ್ಮಸತ್ತಾಸಮಾನಸತ್ತಾಕ ಧರ್ಮವೇ ಅಪ್ರಸಿದ್ಧವಾದ್ದರಿಂದ ಸಾಧ್ಯಾಪ್ರಸಿದ್ಧಿ'—ಎಂದು ಅದ್ವೈತಸಿದ್ಧಿಕಾರ ದೋಷವನ್ನು ಹೇಳಿದ್ದಾನೆ.

ಇದಕ್ಕೆ ನಾವು ಹಿಂದೆ ಹೇಳಿದಂತೆ 'ಧರ್ಮಿ 'ಸ್ವ'ಪದಗಳು ಸ್ವಭಾವತಃ ಸ್ವಸಮಭಿವ್ಯಾಹೃತ ಶಬ್ದಗಳಿಗೆ ಸಮಾನಾರ್ಥಕವಾಗುತ್ತವೆ, ಪಕ್ಷರೂಪವಾದ ಬ್ರಹ್ಮಶಬ್ದ ಸಮಭಿವ್ಯಾಹಾರವಿರುವಾಗ ಅವು ಬ್ರಹ್ಮಪರವಾಗುತ್ತದೆ, ದೃಷ್ಟಾಂತರೂಪವಾದ ಘಟಶಬ್ದ ಸಮಭಿವ್ಯಾಹಾರವಿರುವಾಗ ಅವು ಘಟಪರವಾಗುತ್ತವೆ ಎಂದು ಸಮಾಧಾನ ಹೇಳಿದ್ದೇವೆ.

ಆದರೆ ಸಿದ್ಧಿಕಾರ ಹೇಳುತ್ತಾನೆ—'ತನ್ನೊಳಗೆ ಅನುಮಾನ ಮಾಡುವಾಗ ಆ ಜ್ಞಾನದಲ್ಲಿ ವಾದಿಗಳು ಹೇಳುವ 'ಧರ್ಮಿ' 'ಸ್ವ' ಎಂದು ಶಬ್ದಗಳು ತೋರುವುದೇ ಇಲ್ಲ. ಅವುಗಳ ಅರ್ಥಗಳೇ ಪಕ್ಷದೃಷ್ಟಾಂತಗಳಾಗಿ ತೋರುತ್ತವೆ. ಹೀಗಾಗಿ ಶಬ್ದಸ್ವಭಾವವು ಅನುಮಾನದಲ್ಲಿ ಕಾರ್ಯಕಾರಿಯಾಗುವುದಿಲ್ಲ' ಎಂದು ಆಕ್ಷೇಪಿಸುತ್ತಾನೆ. ಇದಕ್ಕೆ ಸಮಾಧಾನ ಹೀಗೆ—ಸ್ವಾರ್ಥಾನುಮಾನದಲ್ಲಿ ಶಬ್ದಗಳು ಪ್ರಯುಕ್ತವಾಗುವುದಿಲ್ಲ. ಅವುಗಳ ಅರ್ಥಗಳೇ ಪ್ರತೀತವಾಗುತ್ತದೆ, ನಿಜ. ಆದರೆ ಇದೀಗ ನಾವು ಪರಾರ್ಥಾನುಮಾನ ಪ್ರಯೋಗ ಮಾಡುತ್ತಿದ್ದೇವೆ. ಪರನಿಗೆ ಅನುಮಾನವನ್ನು ಹೇಳುತ್ತೇವೆ. ಹೇಳುವಾಗ 'ಧರ್ಮಿ' 'ಸ್ವ' ಶಬ್ದಗಳ ಸ್ವಭಾವವನ್ನು ಅನುಸರಿಸಿ ಅನುಮಾನ ಪ್ರಯೋಗಮಾಡುತ್ತೇವೆ ಎಂದು.

ನಮ್ಮ ಈ ಪರಾರ್ಥಾನುಮಾನವನ್ನು ಸ್ವಾರ್ಥಾನುಮಾನವೆಂದಿಟ್ಟುಕೊಂಡು ಸಿದ್ಧಿಕಾರ ಆಕ್ಷೇಪ ಮಾಡುವುದು ಕಣ್ಣಿಗೆ ದೂಳೆರಚುವ ಪ್ರಯತ್ನವಷ್ಟೆ. ಅವನೇ ತನ್ನ ಅವಿದ್ಯಾನುಮಾನದಲ್ಲಿ 'ಪ್ರಮಾಣ ಜ್ಞಾನಂ ಸ್ವಪ್ರಾಗಭಾವ ವ್ಯತಿರಿಕ್ತ ಸ್ವವಿಷಯಾವರಣ ಸ್ವನಿವರ್ತ್ಯ ಸ್ವದೇಶಗತ ವಸ್ತ್ವಂತರ ಪೂರ್ವಕಂ ಅಪ್ರಕಾಶಿತಾರ್ಥ ಪ್ರಕಾಶಕತ್ವಾತ್ ಅಂಧಕಾರೇ ಪ್ರಥಮೋತ್ಪನ್ನ ಪ್ರದೀಪ ಪ್ರಭಾವತ್' ಎಂದು 'ಸ್ವ' ಪದವನ್ನು ಪ್ರಯೋಗಿಸಿದ್ದಾನೆ. ಇಲ್ಲಿ ಸ್ವಪದದಿಂದ ಪಕ್ಷರೂಪವಾದ ಪ್ರಮಾಣಜ್ಞಾನವಿಟ್ಟುಕೊಂಡರೆ ಪ್ರದೀಪಪ್ರಭಾ ದೃಷ್ಟಾಂತದಲ್ಲಿ ಅಜ್ಞಾನಪೂರ್ವಕತ್ವರೂಪ ಸಾಧ್ಯಾನುಗಮವಾಗುವುದಿಲ್ಲ. ಸ್ವಪದದಿಂದ ದೀಪಪ್ರಭಾ ಇಟ್ಟುಕೊಂಡರೆ ಪಕ್ಷದಲ್ಲಿ ಅಂಧಕಾರಪೂರ್ವಕತ್ವರೂಪ ಸಾಧ್ಯಾನುಗಮವಾಗುವುದಿಲ್ಲ. ಆದಕ್ಕೆ ಇದು ಪರಾರ್ಥಾನುಮಾನ ವಾದ್ದರಿಂದ 'ಸ್ವ' ಶಬ್ದಸ್ವಭಾವಕ್ಕನುಸಾರವಾಗಿ ಅನುಮಾನಪ್ರಯೋಗ ಮಾಡಿದ್ದೆಂದು ಅವನೂ ಸಮಾಧಾನ ಹೇಳಬೇಕು.

ಏಳನೆ ಎಂಟನೆ ಸಾಧ್ಯಗಳಲ್ಲಿ 'ಬ್ರಹ್ಮನು ಧರ್ಮಗಳಿಂದ ರಹಿತನಾಗಿಯಾಗಲಿ ಭಾವರೂಪ ಧರ್ಮಗಳಿಂದ ರಹಿತನಾಗಿಯಾಗಲಿ ಎಂದೂ ಇರುವುದಿಲ್ಲ' ಎಂದರೆ 'ಧರ್ಮಯುಕ್ತನಾಗಿಯೇ ಇರುತ್ತಾನೆ' ಎಂದಂತಾಯಿತು. ಇದು ಅದ್ವೈತಿಗೆ ಸಮ್ಮತವಲ್ಲ. ಮೋಕ್ಷಾವಸ್ಥೆಯಲ್ಲಿ

ಧರ್ಮಯುಕ್ತನಲ್ಲ. ಸಂಸಾರಾವಸ್ಥೆಯಲ್ಲಿ ಮಾತ್ರ ಬ್ರಹ್ಮನು ಆರೋಪಿತ ಕರ್ತೃತ್ವ ಭೋಕ್ತೃತ್ವಾದಿ ಧರ್ಮಯುಕ್ತನೇ ಆಗಿದ್ದಾನೆ. ಆದರಿಂದ ಸಿದ್ಧಸಾಧನ ದೋಷವಿಲ್ಲ.

ಇಲ್ಲಿ ಸಿದ್ಧಿಕಾರನ ಆಕ್ಷೇಪವಿದೆ— 'ಬ್ರಹ್ಮ ಸದಾ ಧರ್ಮಯುಕ್ತನಾಗಿದ್ದಾನೆ' ಎಂದಿಷ್ಟೇ ಅಭಿಪ್ರಾಯವಿರುತ್ತಿದ್ದರೆ ಹಾಗೇ ಹೇಳುತ್ತಿದ್ದರು. ವಸ್ತುತಃ 'ಎಲ್ಲಿಯೂ ಯಾವ ಕಾಲದಲ್ಲಿಯೂ ಬ್ರಹ್ಮವು ಧರ್ಮರಹಿತವಾಗಿ ಇರುವುದಿಲ್ಲ, ಅಂದರೆ 'ಎಲ್ಲಿ ಯಾವಾಗ ಬ್ರಹ್ಮವಿರುವುದೋ ಅಲ್ಲಿ ಆವಾಗ ಧರ್ಮಗಳಿರುತ್ತವೆ' ಎಂದು ವ್ಯಾಪ್ತಿ ವಿವಕ್ಷಿತವಾಗಿದೆ ಎನ್ನಬೇಕು. ಇದು ನಮಗೆ ಸಮ್ಮತ. ಆದರಿಂದ ಸಿದ್ಧಸಾಧನ. ಯಾವ ದೇಶದಲ್ಲಿ ಯಾವ ಕಾಲದಲ್ಲಿ ಬ್ರಹ್ಮ ಇದೆಯೋ ಆ ದೇಶದಲ್ಲಿ ಆಕಾಲದಲ್ಲಿ ಧರ್ಮವಿದ್ದೇ ಇರುತ್ತದೆ. ಯಾವುದೇ ಕಾಲವಾಗಲಿ ದೇಶವಾಗಲಿ ಧರ್ಮರಹಿತವಾಗಿ ಇರುವುದಿಲ್ಲ. ಅದ್ವೈತಮತದಲ್ಲಿ ಮಾಯಾ ಮತ್ತು ಚೈತನ್ಯಗಳ ಸಂಬಂಧವೇ ಕಾಲ. ಇಂಥ ಕಾಲವು ಮಾಯಾ ರಹಿತವಾದ ಮುಕ್ತಿಯಲ್ಲಿ ಇಲ್ಲ. ಆದರಿಂದ 'ಮುಕ್ತಿಕಾಲ' ಎಂಬುದೇ ಇಲ್ಲವೆಂದಮೇಲೆ 'ಮುಕ್ತಿಕಾಲದಲ್ಲಿ ಬ್ರಹ್ಮವು ಧರ್ಮಯುಕ್ತವೆನ್ನುವಂತಿಲ್ಲ' ಎಂಬ ಆಕ್ಷೇಪಕ್ಕೆ ಅವಕಾಶವಿಲ್ಲ'— ಎಂದು.

ಇದು ಸರಿಯಲ್ಲ. 'ಕಾಲವು ಧರ್ಮರಹಿತವಾಗಿ ಇರುವುದಿಲ್ಲ. ಬ್ರಹ್ಮವು ಧರ್ಮರಹಿತವಾಗಿ ಇರುತ್ತದೆ' ಎಂದು ಹೇಳುವುದು 'ಬ್ರಹ್ಮವು ಧರ್ಮರಹಿತವಾಗಿ ಇರುವುದಿಲ್ಲ' ಎಂಬ ಪ್ರಕೃತಾನುಮಾನದಿಂದಲೇ ಬಾಧಿತವಾಗಿದೆ. ಮತ್ತು 'ಈ ಕಾಲದಲ್ಲಿ, ಈಗ, ಬ್ರಹ್ಮನು ಧರ್ಮರಹಿತನಲ್ಲ, ಧರ್ಮಯುಕ್ತನೆ' ಎನ್ನುವ ಅನುಮಾನವನ್ನು ಒಪ್ಪಿ ಸಿದ್ಧಸಾಧನವನ್ನು ಹೇಳುವ ಅದ್ವೈತಿಯು 'ಬ್ರಹ್ಮನು ಸದಾ ಧರ್ಮರಹಿತನೇ' ಎಂದು ಹೇಳುವುದು ವ್ಯಾಹತವೂ ಆಗುತ್ತದೆ. 'ಮುಕ್ತಿಕಾಲವೆಂಬುದೇ ಇಲ್ಲ' ಎಂದರೆ, 'ಧರ್ಮವು ಸಂಸಾರಕಾಲದಲ್ಲಿ ಇದೆ, ಯಾವ ಕಾಲದಲ್ಲಿ ಇಲ್ಲ ಎಂದರೆ ಮುಕ್ತಿಕಾಲದಲ್ಲಿ ಇಲ್ಲ' ಎನ್ನುವ ತನ್ನ ಮಾತಿಗೇ ವಿರುದ್ಧವಾಗುತ್ತದೆ. ಮುಕ್ತಿಗೂ ಕಾಲಸಂಬಂಧವಿದ್ದೇ ಇದೆ.



**ब्रह्म स्वज्ञानाबाध्यप्रकारवत्, स्वारोपितव्यावर्तकस्वज्ञानाबाध्यप्रकारवद्वा, अधिष्ठानत्वाच्छुक्तिवत् ।**

**ब्रह्म स्वज्ञानाबाध्यदुःखव्यावृत्तिमत्, स्वज्ञानाबाध्यदुःखव्यावर्तकधर्मवद्वा, दुःस्वानात्मकत्वात् घटवत् ।**

**ब्रह्म स्वज्ञानाबाध्यप्रकारकज्ञानविशेष्यम्, संदिग्धत्वात् विचार्यत्वात् निर्णेतव्यत्वाच्च स्थाणुवत् ।**

**ब्रह्म वेदांततात्पर्यगोचरप्रकारवत्, वेदांतविचारविषयत्वात्, यदेवं तदेवं यथा कर्मकांडविचारविषयो धर्मः। ईश्वरः सदाऽवाप्तसमस्तकल्याणगुणः, सदा तत्प्रेप्सुत्वे सति तत्र शक्तत्वात्, यो यदा यत्प्रेप्सुत्वे सति यत्र शक्तः स तदा तद्वान् यथा चैत्रः।**

**ईश्वरः सदा त्यक्तसमस्तदोषः सदा तज्जिहासुत्वे सति तत्त्यागे शक्तत्वात्, यो यदा यज्जिहासुत्वे सति यत्त्यागे शक्तः स तदा त्यक्ततद्दोषः यथा चैत्रः। तत्प्रेप्सादिकं च प्रेक्षावत्त्वादिना।**

**विपक्षेऽधिष्ठानत्वसंदिग्धत्वादिकं न स्यादित्याद्यनुकूलतर्क सनाथानुमानानां च सत्त्वात्।**

भावाद्वैतमतेनाह— **स्वारोपितेति**।। आरोपितस्य निवर्तकं यद्ज्ञानं तदबाधितप्रकारवदित्यर्थः। अरोपितहेतुधर्मिज्ञानाबाध्यप्रकारत्वं कल्पितधर्मवत्त्वेनापि संभवतीति सिद्धसाधनवारणाय **स्वारोपितव्यावर्तकेति**।।

नन्वबाध्येत्यत्र सामान्याभावो विवक्षितो न वा। आद्ये विशेषणवैयर्थ्यम्। अंत्ये पूर्वसाध्येऽपि सिद्धसाधनता स्यादिति चेन्न। तत्र सामान्याभावस्य विवक्षितत्वेऽप्यत्रापि विवक्षितत्वान्न दोषः।। **स्वज्ञानाबाध्येति**।। एतच्च दुःखव्यावृत्तिविशेषणम्। नच हेतुसाध्ययोरभेदः। विशिष्टाविशिष्टरूपत्वेन भेदसंभवादिति भावः। चो वार्थः। सामान्यव्याप्तौ दृष्टांतमाह— **यदेवं तदेवमिति**।। उदासीने व्यभिचारवारणायाह— **सदा तत्प्रेप्सुत्वे सतीति**।। सदेति प्रकृताभिप्रायम्। हेतौ विशेषणासिद्धिं परिहरति— **तत्प्रेप्सादिकं चेति**।।



ಪುನಃ ಸಗುಣತ್ವಸಾಧಕವಾದ ಅನುಮಾನ ಪ್ರಯೋಗಗಳು—

ಬ್ರಹ್ಮ (1) ಸ್ವಜ್ಞಾನಾಬಾಧ್ಯ ಪ್ರಕಾರವತ್

(2) ಸ್ವಾರೋಪಿತ ವ್ಯಾವರ್ತಕ ಸ್ವಜ್ಞಾನಾಬಾಧ್ಯಪ್ರಕಾರವದ್ವಾ ಅಧಿಷ್ಠಾನತ್ವಾತ್ ಶುಕ್ತಿವತ್।

ಬ್ರಹ್ಮವು (1) ಸ್ವವಿಷಯಕಜ್ಞಾನದಿಂದ ಬಾಧಿತವಾಗದ ಗುಣಗಳುಳ್ಳದ್ದು, ಅಥವಾ-

(2) ತನ್ನಲ್ಲಿ ಕಲ್ಪಿತವಾದ ದೋಷಗಳನ್ನು ಬಾಧಿಸುವ ಜ್ಞಾನದಿಂದ ಅಬಾಧಿತವಾದ ಗುಣಗಳುಳ್ಳದ್ದು.

ಅಧಿಷ್ಠಾನವಾದ್ದರಿಂದ ಎಂದು ಹೇತು. ಶುಕ್ತಿಯು ಈ ವಿಷಯದಲ್ಲಿ ದೃಷ್ಟಾಂತ.

ದೃಷ್ಟಾಂತವಾದ ಶುಕ್ತಿಯಲ್ಲಿ ಸಾಧ್ಯಾನುಗಮ ಹೀಗೆ— ಶುಕ್ತಿವಿಷಯಕವಾದ 'ಇಯಂ ಶುಕ್ತಿಃ' ಎಂಬ ಜ್ಞಾನದಿಂದ ಬಾಧಿತವಾಗದ ಶುಕ್ತಿತ್ವ ಉಳ್ಳದ್ದು ಶುಕ್ತಿ. ಯದ್ಯಪಿ ರಜತವೂ ಕೂಡ 'ಇದಂ' ಎಂಬ ಶುಕ್ತಿಜ್ಞಾನದಿಂದ ಅಬಾಧ್ಯ. ಆದರೆ ಶುಕ್ತಿಜ್ಞಾನಸಾಮಾನ್ಯಾಬಾಧ್ಯ ಎಂದು ವಿವಕ್ಷಿತ. ಮತ್ತು ತನ್ನಲ್ಲಿ ಕಲ್ಪಿತವಾದ ರಜತವನ್ನು ಬಾಧಿಸುವ ಶುಕ್ತಿಜ್ಞಾನಸಾಮಾನ್ಯದಿಂದ ಅಬಾಧ್ಯವಾದುದು ರಜತವಲ್ಲ. ಶುಕ್ತಿತ್ವವೆ. 'ಇದಂ ರಜತಂ' ಎಂಬ ಜ್ಞಾನದಿಂದಲೂ ಶುಕ್ತಿತ್ವಕ್ಕೆ ಬಾಧವಿಲ್ಲ. 'ಇಯಂ ಶುಕ್ತಿಃ' ಎಂಬ ಶುಕ್ತಿಜ್ಞಾನದಿಂದಲೂ ಶುಕ್ತಿತ್ವಕ್ಕೆ ಬಾಧವಿಲ್ಲ.

ಆದರೆ ಕಲ್ಪಿತ ಧರ್ಮವತ್ತ್ವವನ್ನು ಅಂಗೀಕಾರ ಮಾಡಿದರೆ ಕಲ್ಪಿತ ಧರ್ಮಪ್ರಕಾರಕ ಜ್ಞಾನದಿಂದ ಆ ಕಲ್ಪಿತ ಧರ್ಮ ಬಾಧಿತವಾಗದು. ಕಲ್ಪಿತವಾದ ಶುಕ್ತಿತ್ವವನ್ನು ಅಂಗೀಕರಿಸಿದ್ದರಿಂದ ಅದು ಶುಕ್ತಿತ್ವಪ್ರಕಾರಕ ಜ್ಞಾನದಿಂದ ಬಾಧಿಸಲ್ಪಡುವುದಿಲ್ಲ ತಾನೆ? ಹಾಗೇ ಬ್ರಹ್ಮನಲ್ಲಿ ಅದ್ವೈತಿಯು ಕಲ್ಪಿತಧರ್ಮವತ್ತ್ವವನ್ನು ಅಂಗೀಕರಿಸುವುದರಿಂದ ಅದ್ವೈತರೀತಿಯಿಂದ ಕಲ್ಪಿತಧರ್ಮಪ್ರಕಾರಕ ಜ್ಞಾನದಿಂದ ಅದು ಬಾಧಿತವಾಗಲಾರದು. ಅದರಿಂದ ಸಿದ್ಧ ಸಾಧನ ದೋಷ ಬರುತ್ತದೆ. ಅದಕ್ಕೆ 'ಸ್ವಾರೋಪಿತವ್ಯಾವರ್ತಕ ಸ್ವಜ್ಞಾನಾಬಾಧ್ಯಪ್ರಕಾರವತ್' ಎಂದು ಇನ್ನೊಂದು ಸಾಧ್ಯವನ್ನು ಸಾಧನ ಮಾಡುತ್ತಾರೆ. ಈಗ 'ಸ್ವಾರೋಪಿತವ್ಯಾವರ್ತಕ ಸ್ವಜ್ಞಾನ'ವೆಂದರೆ ಶುಕ್ತಿ ವಿಷಯದಲ್ಲಿ ಆರೋಪಿತ ರಜತ ವ್ಯಾವರ್ತಕ ಶುಕ್ತಿಜ್ಞಾನ. ಬ್ರಹ್ಮವಿಷಯದಲ್ಲಿ ಕಲ್ಪಿತಧರ್ಮಪ್ರಕಾರಕ ಬ್ರಹ್ಮಜ್ಞಾನವಲ್ಲ. ನಿಷ್ಪ್ರಕಾರಕಬ್ರಹ್ಮಜ್ಞಾನವೇ ಕಲ್ಪಿತವಾದ ಸ್ವಾರೋಪಿತವಾದ ಪ್ರಪಂಚವ್ಯಾವರ್ತಕಜ್ಞಾನ. ಅದರಿಂದ ಅಬಾಧ್ಯವಾದ ಪ್ರಕಾರ ಉಳ್ಳದ್ದು ಬ್ರಹ್ಮ ಎಂದು ಸಾಧನೆ ಮಾಡಿದರೆ ಬ್ರಹ್ಮಧರ್ಮವಾದ ಗುಣಗಳು ಅಬಾಧ್ಯವೆಂದು ಸಿದ್ಧವಾಗುತ್ತದೆ.

ಹೀಗೆ ಹೇಳಿದ್ದರಿಂದ ಒಂದು ಆಕ್ಷೇಪ ಪರಿಹಾರವಾಗುತ್ತದೆ. ಆ ಆಕ್ಷೇಪ ಹೀಗೆ— 'ಅಬಾಧ್ಯ' ಎಂದು ಬಾಧಸಾಮಾನ್ಯಾಭಾವವೇ ವಿವಕ್ಷಿತವಾಗಿದ್ದರೆ 'ತನ್ನಲ್ಲಿ ಆರೋಪಿತವಾದ ಧರ್ಮಕ್ಕೆ ವ್ಯಾವರ್ತಕವಾದ ಸ್ವಜ್ಞಾನದಿಂದ ಅಬಾಧ್ಯ' ಎಂದು ವಿಶೇಷಣವೇಕೆ? ಅದು ವ್ಯರ್ಥ-ಎಂದು. ಪರಿಹಾರ ಹೀಗೆ—ಕಲ್ಪಿತಧರ್ಮವತ್ತ್ವವನ್ನು ಬ್ರಹ್ಮನಲ್ಲಿ ಒಪ್ಪುವ ಪಕ್ಷದಲ್ಲಿ ಕಲ್ಪಿತಧರ್ಮಕ್ಕೆ ಕಲ್ಪಿತಧರ್ಮಪ್ರಕಾರಕ ಬಾಧ ಸಾಮಾನ್ಯಾಭಾವ ಸಂಭವವಿದೆ. ಸಿದ್ಧಸಾಧನದೋಷಬರುತ್ತದೆ. ಅದಕ್ಕೆ 'ಸ್ವಾರೋಪಿತವ್ಯಾವರ್ತಕ ಸ್ವಜ್ಞಾನಾಬಾಧ್ಯಪ್ರಕಾರವತ್' ಎಂದು ವಿಶೇಷಣಯುಕ್ತವಾಗಿ ಹೇಳಿದ್ದಾರೆ ಎಂದು.

**ಬ್ರಹ್ಮ (1) ಸ್ವಜ್ಞಾನಾಬಾಧ್ಯ ದುಃಖವ್ಯಾವೃತ್ತಿಮತ್**

**(2) ಸ್ವಜ್ಞಾನಾಬಾಧ್ಯ ದುಃಖವ್ಯಾವರ್ತಕ ಧರ್ಮವದ್ವಾ**
**ದುಃಖ-ಅನಾತ್ಮಕತ್ವಾತ್, ಘಟವತ್ ।**

ಬ್ರಹ್ಮವು (1) ಸ್ವಜ್ಞಾನದಿಂದ ಬಾಧಿತವಾಗದ ದುಃಖಾಭಾವ ಉಳ್ಳದ್ದು, ಅಥವಾ

(2) ಸ್ವಜ್ಞಾನದಿಂದ ಬಾಧಿತವಾಗದ ದುಃಖವಿರೋಧಿ ಧರ್ಮ ಉಳ್ಳದ್ದು.
ದುಃಖಸ್ವರೂಪವಲ್ಲದ್ದಾದ್ದರಿಂದ, ಘಟದಂತೆ.

**ಬ್ರಹ್ಮ ಸ್ವಜ್ಞಾನಾಬಾಧ್ಯ ಪ್ರಕಾರಕ ಜ್ಞಾನವಿಶೇಷ್ಯಂ**

**(1) ಸಂದಿಗ್ಧತ್ವಾತ್**

**(2) ವಿಚಾರ್ಯತ್ವಾತ್**

**(3) ನಿರ್ಣೇತವ್ಯತ್ವಾಚ್ಚ**

**ಸ್ಥಾಣುವತ್ ।**

ಬ್ರಹ್ಮವು ಸ್ವಜ್ಞಾನದಿಂದ ಅಬಾಧ್ಯವಾದ ಧರ್ಮ ಪ್ರಕಾರಕ ಜ್ಞಾನವಿಶೇಷ್ಯವಾಗಿದೆ.

(1) ಸಂದಿಗ್ಧವಾದ್ದರಿಂದ

(2) ವಿಚಾರ್ಯವಾದ್ದರಿಂದ

(3) ನಿರ್ಣೇತವ್ಯವಾದ್ದರಿಂದ

ಸ್ಥಾಣುವಿನಂತೆ ಎಂದು ದೃಷ್ಟಾಂತ. ಅದು ಸ್ಥಾಣುವೋ ಪುರುಷನೋ ಎಂದು ಸಂದೇಹಕ್ಕೂ ವಿಚಾರಕ್ಕೂ ನಿರ್ಣಯಕ್ಕೂ ವಿಶೇಷ್ಯವಾಗಿದೆ.

**ಬ್ರಹ್ಮ ವೇದಾಂತತಾತ್ಪರ್ಯಗೋಚರ ಪ್ರಕಾರವತ್**

**ವೇದಾಂತ ವಿಚಾರವಿಷಯತ್ವಾತ್**

**ಯದೇವಂ ತದೇವಂ, ಯಥಾ ಕರ್ಮಕಾಂಡ ವಿಚಾರವಿಷಯೋ ಧರ್ಮಃ**

ಬ್ರಹ್ಮವು ವೇದಾಂತ ತಾತ್ಪರ್ಯವಿಷಯವಾದ ಸತ್ಯತ್ವಾದಿ ಧರ್ಮ ಉಳ್ಳದ್ದು.

ವೇದಾಂತ ವಿಚಾರ ಗೋಚರವಾದ್ದರಿಂದ.

ಯಾವುದು ಯಾವ ಶಾಸ್ತ್ರ ವಿಚಾರಕ್ಕೆ ಗೋಚರವೋ ಅದು ಆ ಶಾಸ್ತ್ರ ತಾತ್ಪರ್ಯ ಗೋಚರವಾದ ಪ್ರಕಾರಉಳ್ಳದ್ದು. ಯಾಗಾದಿಕರ್ಮವು ಕರ್ಮಕಾಂಡವಿಚಾರಗೋಚರವಾಗಿದೆ ಮತ್ತು ಕರ್ಮಕಾಂಡ ತಾತ್ಪರ್ಯ ಗೋಚರವಾದ ಅಶ್ವಮೇಧತ್ವಾದಿ ಪ್ರಕಾರ ಉಳ್ಳದ್ದು. ಅದರಂತೆ ಬ್ರಹ್ಮವೂ ಬ್ರಹ್ಮಕಾಂಡ ವಿಚಾರ ಗೋಚರವಾದ್ದರಿಂದ ಬ್ರಹ್ಮಕಾಂಡ ತಾತ್ಪರ್ಯ ಗೋಚರವಾದ ಸತ್ಯತ್ವಾದಿಪ್ರಕಾರಉಳ್ಳದ್ದೇ ಆಗಿರಬೇಕು, ನಿರ್ಗುಣವಾಗಿರಲಾರದು.

ಯದ್ಯಪಿ ವೇದಾಂತದ ಅಮುಖ್ಯ ತಾತ್ಪರ್ಯಕ್ಕೆ ಸಗುಣವು ಗೋಚರವಾಗಿದ್ದು ಅಮುಖ್ಯ ತಾತ್ಪರ್ಯಗೋಚರ ಗುಣರೂಪ ಪ್ರಕಾರಉಳ್ಳದ್ದೆಂದು ಅದ್ವೈತಿ ಒಪ್ಪಿರುವುದರಿಂದ ಸಿದ್ಧಸಾಧನ. ಮುಖ್ಯತಾತ್ಪರ್ಯಗೋಚರವಾದ ಪ್ರಕಾರವತ್ತ್ವವನ್ನು ಸಾಧನ ಮಾಡಲು ಹೋದರೆ ಅದು ಅಪ್ರಸಿದ್ಧವಾದ್ದರಿಂದ ಅಪ್ರಸಿದ್ಧವಿಶೇಷಣತಾ ದೋಷ. ಆದರೂ ಮುಖ್ಯತಾತ್ಪರ್ಯ ಗೋಚರಪ್ರಕಾರವತ್ತ್ವವನ್ನೇ ಸಾಧ್ಯಮಾಡುತ್ತಾರೆ, ಏಕೆಂದರೆ ಪ್ರಕೃತ ಸಾಧ್ಯವು ಅಪ್ರಸಿದ್ಧವಾದ್ದರಿಂದ ಹೇತುಸಾಧ್ಯಗಳಿಗೆ ವಿಶೇಷವ್ಯಾಪ್ತಿಗ್ರಹಣವಾಗದಿದ್ದರೂ ಪ್ರಕೃತ ಸಾಧ್ಯಸದೃಶ ಮತ್ತು ಹೇತುಸದೃಶ ಗಳಿಗೆ ಸಾಮಾನ್ಯವ್ಯಾಪ್ತಿ ಗೃಹೀತವಾಗುವುದರಿಂದ ಸಾಮಾನ್ಯವ್ಯಾಪ್ತಿ ಮತ್ತು ಪಕ್ಷಧರ್ಮತಾಗಳ ಬಲದಿಂದ ಪ್ರಕೃತ ಸಾಧ್ಯವೇ ಅನುಮಿತವಾಗುವುದು. ಉದಾ: ಈಶ್ವರನು ಸರ್ವಜ್ಞ, ಸರ್ವಕರ್ತನಾದ್ದರಿಂದ. ಯಾರು ಯಾವುದಕ್ಕೆ ಕರ್ತನೋ ಅವನು ಅದಕ್ಕೆ ತಜ್ಞನಾಗಿರುತ್ತಾನೆ. ಕುಂಬಾರನು ಘಟಕರ್ತ. ಘಟತಜ್ಞನೂ ಆಗಿದ್ದಾನೆ. ಇಲ್ಲಿ ಸಾಧ್ಯವಾದ ಸರ್ವಜ್ಞತ್ವವು ಅಪ್ರಸಿದ್ಧವಾದರೂ ಸಾಮಾನ್ಯವ್ಯಾಪ್ತಿ ಮತ್ತು ಪಕ್ಷಧರ್ಮತಾಗಳ ಬಲದಿಂದ ಪಕ್ಷದಲ್ಲಿ ಸಾಧ್ಯಸಿದ್ಧವಾಗುತ್ತದೆ. ಸಾಧ್ಯಾಪ್ರಸಿದ್ಧಿಯು ಹೀಗೆ ವ್ಯಾಪ್ತಿಗ್ರಹಣವಿರುವಾಗ ದೋಷವಾಗುವುದಿಲ್ಲ.

ಇದೇರೀತಿ ಸಾಮಾನ್ಯವ್ಯಾಪ್ತಿ ಮೂಲಕವಾದ ಇನ್ನೆರಡು ಅನುಮಾನಗಳು—

**ಈಶ್ವರಃ ಸದಾಽಪ್ಯಾಪ್ತಸಮಸ್ತ ಕಲ್ಯಾಣಗುಣಃ ।**
**ಸದಾ ತತ್ಪ್ರೇಪ್ಸುತ್ವೇ ಸತಿ ತತ್ರ ಶಕ್ತತ್ವಾತ್**
**ಯೋ ಯದಾ ಯತ್ಪ್ರೇಪ್ಸುತ್ವೇ ಸತಿ ಯತ್ರ ಶಕ್ತಃ ಸ ತದಾ ತದ್ವಾನ್ ।**
**ಯಥಾ ಚೈತ್ರಃ ।**
**ಈಶ್ವರಃ ಸದಾ ತ್ಯಕ್ತ ಸಮಸ್ತ ದೋಷಃ**
**ಸದಾ ತಜ್ಜಿಹಾಸುತ್ವೇ ಸತಿ ತತ್ತ್ಯಾಗೇ ಶಕ್ತತ್ವಾತ್**
**ಯೋ ಯದಾ ಯಜ್ಜಿಹಾಸುತ್ವೇ ಸತಿ ಯತ್ತ್ಯಾಗೇ ಶಕ್ತಃ ಸ ತದಾ ತ್ಯಕ್ತ ತದ್ದೋಷಃ ।**
**ಯಥಾ ಚೈತ್ರಃ ।**

ಪರಮಾತ್ಮನು ಸದಾ ಸಮಸ್ತ ಕಲ್ಯಾಣಗುಣಗಳನ್ನು ಹೊಂದಿದವನೇ. ಅವುಗಳನ್ನು ಹೊಂದಲು ಬಯಕೆ ಉಳ್ಳವನಾಗಿದ್ದು ಹೊಂದಲು ಶಕ್ತನೂ ಆಗಿರುವುದರಿಂದ. ಇದಕ್ಕೆ ಸಾಮಾನ್ಯ ವ್ಯಾಪ್ತಿ—ಯಾರು ಯಾವುದನ್ನು ಹೊಂದುವ ಬಯಕೆ ಉಳ್ಳವನಾಗಿದ್ದು ಹೊಂದಲು ಶಕ್ತನೂ ಆಗಿರುವನೋ ಅವನು ಅದನ್ನು ಸದಾ ಹೊಂದಿದವನೆ ಆಗಿರುತ್ತಾನೆ. ಉದಾಹರಣೆಗೆ ಚೈತ್ರ. ಅವನು ವಿದ್ಯೆಯನ್ನು ಹೊಂದಲು ಬಯಕೆ ಉಳ್ಳವನಾಗಿದ್ದು ಅದನ್ನು ಹೊಂದಲು ಶಕ್ತನಾಗಿದ್ದಾನೆ, ಅದರಿಂದ ಸದಾ ವಿದ್ಯಾವಂತನೂ ಆಗಿದ್ದಾನೆ.

ಪರಮಾತ್ಮನು ಸದಾ ಸಮಸ್ತ ದೋಷರಹಿತನೇ. ಏಕೆಂದರೆ ಸಮಸ್ತ ದೋಷರಹಿತನಾಗಿರಲು ಬಯಕೆ ಉಳ್ಳವನಾಗಿದ್ದು ರಹಿತನಾಗಿರಲು ಶಕ್ತನೂ ಆಗಿದ್ದಾನೆ. ಯಾರು ಯಾವುದರಿಂದ ಸದಾ

ರಹಿತನಾಗಿರಲು ಬಯಕೆ ಉಳ್ಳವನಾಗಿದ್ದು ರಹಿತನಾಗಿರಲು ಶಕ್ತನೋ ಅವನು ಆದರಿಂದ ಸದಾ ರಹಿತನಾಗಿರುತ್ತಾನೆ. ಚೈತ್ರನಂತೆ. ಅವನು ಸದಾ ರೋಗರಹಿತನಾಗಿರಲು ಬಯಕೆ ಉಳ್ಳವನಾಗಿದ್ದು ಅದಕ್ಕೆ ಶಕ್ತನೂ ಆಗಿದ್ದಾನೆ. ಆದರಿಂದ ಸದಾ ರೋಗರಹಿತನೂ ಆಗಿದ್ದಾನೆ. ಶಕ್ತನಾಗಿದ್ದೂ ಉದಾಸೀನನಾಗಿರುವವನಲ್ಲಿ ಹೇತುಗಳಿಗೆ ವ್ಯಭಿಚಾರಬಾರದಂತೆ 'ಬಯಕೆ ಉಳ್ಳವನಾಗಿದ್ದು' ಎಂದು ವಿಶೇಷಣ.

**ತತ್‌ಪ್ರೇಪ್ಸಾದಿಕಂ ಚ ಪ್ರೇಕ್ಷಾವತ್ತ್ವಾದಿನಾ ।**

ಬಯಕೆಗೆ ಕಾರಣ. ವಿವೇಕಿಯಾಗಿರುವುದರಿಂದ ಎಂದು. ವಿವೇಕಿಯು ಗುಣವನ್ನು ಗಳಿಸಲು ಮತ್ತು ದೋಷವನ್ನು ಕಳೆದುಕೊಳ್ಳಲು ಬಯಸುವುದು ಸಹಜ. ಆದರಿಂದ ವಿಶೇಷಣಾಸಿದ್ಧಿ ಇಲ್ಲ.

'ಸದಾ' ಎನ್ನುವ ಅಂಶ ಹೇತುವಿನಲ್ಲಿ ಸೇರಿಲ್ಲ. ಅದು ಪ್ರಕೃತ ಪರಮಾತ್ಮನಲ್ಲಿ ಸದಾ ಬಯಕೆ ಸದಾ ಪ್ರಾಪ್ತಿಗಳಿವೆ ಎಂಬ ಅಭಿಪ್ರಾಯದ್ದು.

ಯದ್ಯಪಿ ಆನಂದಾದಿಗಳು ನಿತ್ಯವಾದ್ದರಿಂದ ಅವುಗಳ ಬಯಕೆ ಯುಕ್ತವಲ್ಲ. ಆದರೂ ಆನಂದಾದಿಗಳ ಸಂಬಂಧ ನಿತ್ಯವಾಗಬೇಕಿಲ್ಲ. ನಿತ್ಯಸಂಬಂಧವನ್ನು ಬಯಸಿ ನಿತ್ಯಸಂಬಂಧಿಯಾಗಿದ್ದಾನೆ.

'ದೋಷತ್ಯಾಗವು ಅದ್ವೈತರೀತಿಯಿಂದ ಚರಮವೃತ್ತಿಯಿಂದ ಮಾತ್ರ ಸಾಧ್ಯ. ಅಂದಿನವರೆಗೆ ಅದರ ಬಯಕೆಯೂ ಶಕ್ತಿಯೂ ಇರುವುದಿಲ್ಲ. ಹೀಗಾಗಿ ಹೇತ್ವಸಿದ್ಧಿ'—ಎಂದರೆ ಅದು ಸರಿಯಲ್ಲ. ಅಜ್ಞಾನಾದಿ ದೋಷಕ್ಕೆ ವಿರೋಧಿ ಅಂತಃಕರಣವೃತ್ತಿಯಲ್ಲ. ಸ್ವರೂಪಜ್ಞಾನವೇ ವಿರೋಧಿ. ಆದರಿಂದ ಚರಮವೃತ್ತಿಗೆ ಕಾಯಬೇಕಿಲ್ಲ.

'ಈಶ್ವರ ಪಕ್ಷಕ ಅನುಮಾನಗಳಲ್ಲಿ ಸಿದ್ಧಸಾಧನತಾ ದೋಷ. ಅದ್ವೈತಿಯೂ ಈಶ್ವರನನ್ನು ಗುಣಪೂರ್ಣದೋಷದೂರನೆಂದು ಅಂಗೀಕರಿಸಿದ್ದಾನೆ' ಎಂದರೆ ಅದೂ ಸರಿಯಲ್ಲ. 'ಈಶಾನಃ ಸರ್ವವಿದ್ಯಾನಾಂ' ಇತ್ಯಾದಿ ಕಡೆ 'ಈಶ್ವರ ಶಬ್ದದ ತಾತ್ಪರ್ಯವಿಷಯ'ವೆ ಇಲ್ಲಿ ಈಶ್ವರಶಬ್ದದಿಂದ ವಿವಕ್ಷಿತವಾಗಿದೆ. ಅದು ಶುದ್ಧಬ್ರಹ್ಮವೆ. ಶುದ್ಧಬ್ರಹ್ಮವನ್ನು ಗುಣಪೂರ್ಣವೆಂದು ಅದ್ವೈತಿ ಒಪ್ಪುವುದಿಲ್ಲ.

ಸಾಧ್ಯದಲ್ಲಿ ಕಲ್ಯಾಣಗುಣಗಳಿಗೆ ಜ್ಞಾನಾಬಾಧ್ಯತ್ವ ವಿಶೇಷಣವು ವಿವಕ್ಷಿತವಾಗಿದೆ. ಆದರಿಂದ 'ಕಲ್ಪಿತಗುಣವತ್ತ್ವವನ್ನು ಒಪ್ಪಿರುವುದರಿಂದ ಸಿದ್ಧಸಾಧನ' ಎನ್ನುವಂತಿಲ್ಲ.

**'ವಿಪಕ್ಷೇ ಅಧಿಷ್ಠಾನತ್ವ ಸಂದಿಗ್ಧತ್ವಾದಿಕಂ ನ ಸ್ಯಾತ್' ಇತ್ಯಾದ್ಯನುಕೂಲ ತರ್ಕ ಸನಾಥಾನುಮಾನಾನಾಂ ಚ ಸತ್ತ್ವಾತ್ ।**

'ಹೇತುವಿರಲಿ, ಸಾಧ್ಯವಿರಬೇಕಾಗಿಲ್ಲ'ಎಂದು ಹೇತುವಿಗೆ ಅಪ್ರಯೋಜಕತ್ವಶಂಕೆ ಯುಕ್ತವಲ್ಲ.

ಸಧರ್ಮಕತ್ವರೂಪ ಸಾಧ್ಯವು ಪಕ್ಷವಾದ ಬ್ರಹ್ಮದಲ್ಲಿ ಇಲ್ಲವೆಂದರೆ ಬ್ರಹ್ಮವು ಪ್ರಪಂಚಾರೋಪಕ್ಕೆ ಅಧಿಷ್ಠಾನವಾಗಲಾರದು. ಶುಕ್ತಿಯು ರಜತಾರೋಪಾಧಿಷ್ಠಾನವಾಗಬೇಕಾದರೆ ಅದು ಇದಂತ್ವೇನ ಸಾಮಾನ್ಯರೂಪದಿಂದ ತಿಳಿದಿರಬೇಕು, ಶುಕ್ತಿತ್ವರೂಪ ವಿಶೇಷಧರ್ಮಯುಕ್ತವಾಗಿ ತಿಳಿದಿರಬಾರದು.

ಹೀಗೆ ಸಾಮಾನ್ಯ ವಿಶೇಷ ಧರ್ಮಗಳಿಲ್ಲದಿದ್ದಲ್ಲಿ ಬ್ರಹ್ಮವು ಪ್ರಪಂಚಾರೋಪಾಧಿಷ್ಠಾನ ವೆನಿಸಲಾರದು. ಮತ್ತು ಬ್ರಹ್ಮವು ಸತ್ಯವೆ ಅಲ್ಲವೆ ಎಂದು ಮುಂತಾಗಿ ಸಂದೇಹಗಳೂ ಬರಲಾರವು. ವಸ್ತುತ್ವರೂಪ ಸಾಮಾನ್ಯ ಧರ್ಮಯುಕ್ತವಾಗಿ ಬ್ರಹ್ಮಜ್ಞಾನವು ಮೊದಲಿಗೆ ಇರಬೇಕು ಬ್ರಹ್ಮತ್ವಾದಿ ವಿಶೇಷ ಧರ್ಮ ನಿಶ್ಚಿತವಾಗಿರಕೂಡದು. ಆಗಲೇ ಸಂದೇಹ ಬಂದೀತು.

ಸತ್ಯತ್ವ ಅಥವಾ ಮಿಥ್ಯಾತ್ವಾಭಾವರೂಪ ಧರ್ಮವು ಧರ್ಮಿಯಲ್ಲಿ ನಿಶ್ಚಿತವಾಗದಿದ್ದರೆ ನಿರ್ಣೇತತ್ವವೂ ಬರಲಾರದು.

ಹೀಗೆ ಸಧರ್ಮಕತ್ವಾನುಮಾನಗಳಿಗೆ ಅನುಕೂಲತರ್ಕಗಳಿರುವುದರಿಂದ ಅವು ಸಾಧಕವೆ ಹೊರತು ಅಪ್ರಯೋಜಕವಲ್ಲ ಎಂದು ಸಿದ್ಧವಾಗುತ್ತದೆ. ಅದರಿಂದ ಉಪಾಧ್ಯಾದಿ ದೋಷಗಳಿಗೆ ಎಡೆಇಲ್ಲ.



**नचानवस्थानिरासाय कश्चिद्धर्मो निर्धर्मक इति तत्राद्य-हेतोर्व्यभिचारः। साध्याभावस्वरूपस्य निर्धर्मकत्वस्य पदार्थ-त्वात्मकस्य हेतुरूपस्य च धर्मस्य भावाभावाभ्यां व्याघातात् ।**

**प्रमेयत्वाभिधेयत्वादीनामबाधितानुभवबलेन त्वदभिमतमिथ्या-त्वदृश्यत्वादिवत् स्ववृत्तित्वाच ।**

**गोत्वादेरपि गोव्यक्तिरेव वा गोत्वं वा तं स्वाश्रयव्यक्तिं प्रति अन्यस्माद्व्यावर्तकत्वं वा व्यावर्तकमिति न दुःखानात्मकत्वस्य तत्र व्यभिचारः ।**

**आद्येति** ।। पदार्थत्वादित्याद्याद्यहेतुत्रयेऽपीत्यर्थः । किंच निर्धर्मकधर्म एव न । सर्वत्र प्रमेयत्वादेः सत्त्वात् । नच तत्रैव व्यभिचारः । आत्माश्रयेण तदनाश्रयणादिति वाच्यम् । मिथ्यात्वदृश्यत्वादिवत् प्रमाणबलेन स्ववृत्तित्वसंभवादित्याह— **प्रमेयत्वाभिधेयत्वादीनामिति** ।। ननु दुःखानात्मकत्वहेतोर्गोत्वादौ व्यभिचारः ।

किंचिद्वस्तु स्वत एव विलक्षणमिति न्यायेन तस्य व्यावर्तकधर्मशून्यतया स्वज्ञानाबाध्यव्यार्तकधर्मवत्त्वरूपसाध्याभावादित्याशंक्याह— **गोत्वादेरपीति ।।**



**ನ ಚಾನವಸ್ಥಾ ನಿರಾಸಾಯ ಕಶ್ಚಿದ್ಧರ್ಮೋ ನಿರ್ಧರ್ಮಕ ಇತಿ ತತ್ರಾದ್ಯಹೇತೋರ್ವ್ಯಭಿಚಾರಃ। ಸಾಧ್ಯಾಭಾವಸ್ವರೂಪಸ್ಯ ನಿರ್ಧರ್ಮಕತ್ವಸ್ಯ ಪದಾರ್ಥತ್ವಾತ್ಮಕಸ್ಯ ಹೇತುರೂಪಸ್ಯ ಚ ಧರ್ಮಸ್ಯ ಭಾವಾಭಾವಾಭ್ಯಾಂ ವ್ಯಾಘಾತಾತ್।**

ಪದಾರ್ಥತ್ವ ಭಾವತ್ವ ಅಭಾವವಿಲಕ್ಷಣತ್ವ ಎಂಬ ಮೊದಲ ಮೂರು ಹೇತುಗಳಿಗೆ ವ್ಯಭಿಚಾರ ದೋಷವಿದೆ. ಏಕೆಂದರೆ ಎಲ್ಲ ಪದಾರ್ಥ, ಎಲ್ಲ ಭಾವ, ಎಲ್ಲ ಅಭಾವವಿಲಕ್ಷಣ ವಸ್ತು ಸಧರ್ಮಕವೇ ಆಗಿರಬೇಕೆಂದು ನಿಯಮವಿಟ್ಟುಕೊಂಡರೆ, ಒಂದು ಪದಾರ್ಥಕ್ಕೆ ಧರ್ಮವಿರುವುದಾದರೆ ಆ ಧರ್ಮವೂ ಪದಾರ್ಥವಾಗಿರುವುದರಿಂದ ಅದರಲ್ಲಿಯೂ ಬೇರೊಂದು ಧರ್ಮವಿರಲೇ ಬೇಕಾಗುತ್ತದೆ. ಆ ಧರ್ಮವೂ ಪದಾರ್ಥವೇ ಆಗಿರುವುದರಿಂದ ಇನ್ನೊಂದು ಧರ್ಮಯುಕ್ತ ವಾಗಿರಬೇಕಾಗುತ್ತದೆ, ಹೀಗೆ ಅನವಸ್ಥಾ ಉಂಟಾಗುತ್ತದೆ. ಅದರ ಪರಿಹಾರಕ್ಕೆ ಕೊನೆಯಲ್ಲಿ ಒಂದು ಧರ್ಮವನ್ನಾದರೂ ನಿರ್ಧರ್ಮಕವೆನ್ನಲೇಬೇಕು. ಆಗ ಆ ಧರ್ಮದಲ್ಲಿ ಸ್ವಜ್ಞಾನಾಬಾಧ್ಯ ವ್ಯಾವರ್ತಕ ಧರ್ಮವತ್ವರೂಪವಾದ ಸಧರ್ಮಕತ್ವರೂಪ ಸಾಧ್ಯವಿಲ್ಲ, ಪದಾರ್ಥತ್ವಾದಿ ಹೇತುಗಳಿವೆ ಎಂದು ಅವುಗಳಿಗೆ ವ್ಯಭಿಚಾರ ದೋಷ ಬರುತ್ತದೆ.

ಇದಕ್ಕೆ ಪರಿಹಾರವನ್ನು ಹೀಗೆ ಹೇಳಬೇಕು— ಈ ಅನವಸ್ಥೆ ದೋಷವಲ್ಲ. ಬೀಜದಿಂದ ಅಂಕುರ, ಅಂಕುರದಿಂದ ಬೀಜ ಎಂದು ಅನವಸ್ಥೆ ಇದ್ದರೂ ಮೂಲಕ್ಷತಿ ಇಲ್ಲ, ಪ್ರಾಮಾಣಿಕವಾಗಿದೆ, ದೋಷವಲ್ಲ ಎನ್ನುವಂತೆ ಎಲ್ಲ ಧರ್ಮಗಳಲ್ಲಿಯೂ ಧರ್ಮಗಳಿರುವುದು ಪ್ರಾಮಾಣಿಕ, ಅಪ್ರಾಮಾಣಿಕ ಪರಂಪರಾ ಕಲ್ಪನೆ ಮಾಡಿದರೆ ಮಾತ್ರ ಮುಂದುಮುಂದಿನದು ಸಿದ್ಧವಾಗದೆ ಹಿಂದುಹಿಂದಿನದು ಸಿದ್ಧವಾಗದಿರುವುದರಿಂದ ಮೂಲಕ್ಷತಿ ಬರುತ್ತದೆ ಅನವಸ್ಥಾ ದೋಷವಾಗುತ್ತದೆ. ಬೀಜಾಂಕುರ ನ್ಯಾಯದಿಂದ ಪ್ರಾಮಾಣಿಕವಾದರೆ ಅಂಥ ದೋಷವಿಲ್ಲ.

ಅಥವಾ ಧರ್ಮಧರ್ಮಿಗಳಿಗೆ ಅಭೇದ ಒಪ್ಪುವುದರಿಂದ ಮುಂದುಮುಂದಿನದು ಸಿದ್ಧವಾಗದಿದ್ದರೆ ಹಿಂದುಹಿಂದಿನದು ಸಿದ್ಧವಾಗದೆನ್ನುವ ಪರಸ್ಪರಾಪೇಕ್ಷೆ ಇಲ್ಲದ್ದರಿಂದ ಮೂಲಕ್ಷತಿ ಇಲ್ಲ, ದೋಷವಿಲ್ಲ.

ಅನವಸ್ಥೆಯನ್ನು ದೋಷವೆನ್ನುತ್ತ ಪದಾರ್ಥತ್ವ ಮುಂತಾದ ಹೇತುಗಳಿಂದ ನಿರ್ಧರ್ಮಕತ್ವವನ್ನೇ ಸಾಧನೆ ಮಾಡಲು ಹೊರಟರೆ ಅದೇ 'ನನ್ನ ತಾಯಿ ಬಂಜೆ' ಎನ್ನುವಂತೆ ವ್ಯಾಹತವಾದೀತು. ಏಕೆಂದರೆ 'ನಿರ್ಧರ್ಮಕತ್ವವೆಂಬ ಸಾಧ್ಯವಿದೆ' ಎಂದರೆ ಅದೂ ಒಂದು ಧರ್ಮವಾಗಿರುವುದರಿಂದ ಸಧರ್ಮಕತ್ವವೇ ಸಿದ್ಧವಾಗುತ್ತದೆ. 'ನಿರ್ಧರ್ಮಕತ್ವವಿಲ್ಲ'ವೆಂದರೂ ಅದು

ಅಭಾವದ ಅಭಾವವಾಗಿರುವುದರಿಂದ, ಅಭಾವದ ಅಭಾವವಿದೆ ಎಂದರೆ ಪ್ರತಿಯೋಗಿಯಾದ ಸಧರ್ಮಕತ್ವವಿದೆ ಎಂದೇ ಸಿದ್ಧವಾಗುತ್ತದೆ. ಹೀಗೇ ಹೇತುವೂ ಕೂಡ, ಪದಾರ್ಥತ್ವಾದಿಯು ಪಕ್ಷದಲ್ಲಿ ಇದೆ ಎಂದರೂ ಪದಾರ್ಥತ್ವಾದಿರೂಪ ಧರ್ಮವಿದೆ ಎಂದಂತಾಗುವುದರಿಂದ ಸಧರ್ಮಕತ್ವ ಬರುತ್ತದೆ, ಅದು ಇಲ್ಲವೆಂದರೂ ಸಾಧ್ಯವಾದ ನಿರ್ಧರ್ಮಕತ್ವವು ಅದರಿಂದ ಸಿದ್ಧವಾಗದಿರುವುದರಿಂದ ಸಧರ್ಮಕತ್ವವೇ ಪ್ರಾಪ್ತವಾಗುವುದು.

ವಸ್ತುತಃ ಸಧರ್ಮಕತ್ವ ಎಂಬ ಸಾಧ್ಯವೂ ಪದಾರ್ಥವಾದ್ದರಿಂದ ಸಧರ್ಮಕತ್ವರೂಪ ಸಾಧ್ಯಯುಕ್ತವಾಗಿದ್ದು ಸ್ವವೃತ್ತಿಯಾಗಿದೆ. ಅಬಾಧಿತವಾದ ಅನುಭವ ಬಲದಿಂದ ಹಾಗೇ ಒಪ್ಪಬೇಕು. ಅಬಾಧಿತ ಅನುಭವ ಬಲದಿಂದಲೇ ನೈಯಾಯಿಕರು ಪ್ರಮೇಯತ್ವ ಅಭಿಧೇಯತ್ವಾದಿಗಳನ್ನು ಸ್ವವೃತ್ತಿ ಎಂದು ಸ್ವೀಕರಿಸಿದ್ದಾರೆ, ಅದ್ವೈತಿಯೂ ಘಟವು ಮಿಥ್ಯಾ, ಘಟದಲ್ಲಿರುವ ಮಿಥ್ಯಾತ್ವವೂ ಮಿಥ್ಯಾ. ಮಿಥ್ಯಾತ್ವದಲ್ಲಿ ಮಿಥ್ಯಾತ್ವ ಹೇಗೆಂದರೆ ಅದು ಸ್ವವೃತ್ತಿ ಎಂದು ಹೇಳುತ್ತಾನೆ. ಘಟವು ದೃಶ್ಯ. ಘಟದಲ್ಲಿರುವ ದೃಶ್ಯತ್ವವೂ ದೃಶ್ಯ. ದೃಶ್ಯತ್ವದಲ್ಲಿ ದೃಶ್ಯತ್ವವು ಹೇಗೆ ಇರುತ್ತದೆ ಎಂದರೆ ಅದು ಸ್ವವೃತ್ತಿ ಎನ್ನುತ್ತಾನೆ. ಅದರಿಂದ ಪ್ರಮೇಯತ್ವಾದಿಗಳು ಸರ್ವತ್ರ ಇರುವುದರಿಂದ ನಿರ್ಧರ್ಮಕಧರ್ಮವೆಂಬುದೇ ಎಲ್ಲಿಯೂ ಇಲ್ಲ.

''ಪ್ರಮೇಯತ್ವ ಎಲ್ಲ ಕಡೆ ಇದ್ದರೂ ಅದು ಆತ್ಮಾಶ್ರಯದೋಷದಿಂದ ತನ್ನಲ್ಲಿ ತಾನಿಲ್ಲ, ಅದರಿಂದ ಪದಾರ್ಥತ್ವ ಹೇತುವಿಗೆ ಅದರಲ್ಲಿಯೇ ವ್ಯಭಿಚಾರ' ಎನ್ನಬಾರದು. ಹಾಗೆ ಹೇಳಿದರೆ ಮಿಥ್ಯಾತ್ವ ದೃಶ್ಯತ್ವಾದಿಗಳೂ ಕೂಡ ಆತ್ಮಾಶ್ರಯ ದೋಷದಿಂದ ತಮ್ಮಲ್ಲಿ ತಾವಿಲ್ಲವೆಂದು, ದೃಶ್ಯತ್ವಾದಿ ಹೇತುಗಳಿಗೆ ಅಲ್ಲಿಯೇ ವ್ಯಭಿಚಾರ ಎನ್ನುವ ಪ್ರಸಂಗ ಅಪರಿಹಾರ್ಯ. ಅಬಾಧಿತ ಅನುಭವ ಬಲದಿಂದ ಆ ಪದಾರ್ಥಗಳು ಸ್ವವೃತ್ತಿ ಎಂದು ಅಂಗೀಕರಿಸಿಯೇ ವ್ಯಭಿಚಾರ ಪರಿಹಾರ ಮಾಡಬೇಕು—

**ಪ್ರಮೇಯತ್ವ- ಅಭಿಧೇಯತ್ವಾದೀನಾಂ ಅಬಾಧಿತ-ಅನುಭವ ಬಲೇನ ತ್ವದಭಿಮತ ಮಿಥ್ಯಾತ್ವ ದೃಶ್ಯತ್ವಾದಿವತ್ ಸ್ವವೃತ್ತಿತ್ವಾಚ್ಚ ।**

'ಬ್ರಹ್ಮ ಸ್ವಜ್ಞಾನಾಬಾಧ್ಯ ದುಃಖವ್ಯಾವರ್ತಕಧರ್ಮವತ್ ದುಃಖಾನಾತ್ಮಕತ್ವಾತ್' ಎಂಬ ಅನುಮಾನದಲ್ಲಿ ದುಃಖಾನಾತ್ಮಕತ್ವವೆಂಬ ಹೇತುವಿಗೆ ಗೋತ್ವಾದಿಗಳಲ್ಲಿ ವ್ಯಭಿಚಾರ. ಏಕೆಂದರೆ 'ಕಿಂಚಿದ್ ವಸ್ತು ಸ್ವತ ಏವ ವಿಲಕ್ಷಣಂ' ಎಂಬ ನ್ಯಾಯವಿದೆ. ಈ ನ್ಯಾಯದಂತೆ ವ್ಯಾವರ್ತಕವಾದ ಗೋತ್ವಾದಿಗಳು ಸ್ವತ ಏವ ವಿಲಕ್ಷಣ, ಅವು ವ್ಯಾವರ್ತಕವಾದ ಬೇರೆ ಧರ್ಮವಿಲ್ಲದೆ ತಾವೇ ಇತರ ವಿಲಕ್ಷಣವೆನಿಸುತ್ತವೆ. ಬೇರೆ ಧರ್ಮವಿದೆ ಎಂದರೆ ಅನವಸ್ಥಾ ಬರುತ್ತದೆ. ಹೀಗಾಗಿ ಗೋತ್ವಾದಿ ಧರ್ಮಗಳಲ್ಲಿ ಪದಾರ್ಥತ್ವಹೇತುವಿದೆ. ಸ್ವಜ್ಞಾನಾಬಾಧ್ಯ ವ್ಯಾವರ್ತಕಧರ್ಮ ಅವುಗಳಲ್ಲಿಲ್ಲ, ಸಧರ್ಮಕತ್ವ ರೂಪ ಸಾಧ್ಯವಿಲ್ಲ ಎಂದು ವ್ಯಭಿಚಾರ. ಇದಕ್ಕೆ ಪರಿಹಾರ ಹೀಗೆ—

**ಗೋತ್ವಾದೇರಪಿ ಗೋವ್ಯಕ್ತಿರೇವ ವಾ, ಗೋತ್ವಂ ವಾ, ತಂ ಸ್ವಾಶ್ರಯವ್ಯಕ್ತಿಂ ಪ್ರತಿ ಅನ್ಯಸ್ಮಾದ್ ವ್ಯಾವರ್ತಕತ್ವಂ ವಾ ವ್ಯಾವರ್ತಕಮಿತಿ, ನ ದುಃಖಾನಾತ್ಮಕತ್ವಸ್ಯ ತತ್ರ ವ್ಯಭಿಚಾರಃ ।**

ಗೋತ್ವಾದಿಗಳಿಗೂ ಗವಾದಿ ವ್ಯಕ್ತಿಗಳೇ ವ್ಯಾವರ್ತಕಧರ್ಮವೆನಿಸುತ್ತವೆ. ಗವಾದಿವ್ಯಕ್ತಿಗೆ ಗೋತ್ವಾದಿ ಹೇಗೆ ಇತರ ವ್ಯಾವರ್ತಕ ಧರ್ಮವಾಗುವುದೋ ಹಾಗೇ ಗೋತ್ವಾದಿಗಳಿಗೂ ಅವುಗಳಿಗೆ ಆಶ್ರಯವಾದ ಗವಾದಿವ್ಯಕ್ತಿಗಳೇ ಇತರ ವ್ಯಾವರ್ತಕಧರ್ಮವಾಗುವುವು. ಆದರಿಂದ ಅವು ಸ್ವತಃ ವಿಲಕ್ಷಣವೆನ್ನಲಾಗದು. 'ಕಿಂಚಿದ್ ವಸ್ತು ಸ್ವತ ಏವ ವಿಲಕ್ಷಣಂ' ಎಂಬ ನಿಯಮ ಅಪ್ರಾಮಾಣಿಕ.

ಗವಾದಿವ್ಯಕ್ತಿಗಳಿಗೆ ಗೋತ್ವವು ಧರ್ಮ, ಗೋತ್ವಾದಿಗಳಿಗೆ ಗವಾದಿವ್ಯಕ್ತಿಗಳು ಧರ್ಮ ಎಂದ ಮಾತ್ರಕ್ಕೆ ಅನ್ಯೋನ್ಯಾಶ್ರಯ ದೋಷವಿಲ್ಲ, ಅದು ಪ್ರಾಮಾಣಿಕ, ಅದೋಷ. ಏಕೆಂದರೆ 'ಗವಿ ಗೋತ್ವಂ' ಎಂಬ ಪ್ರತೀತಿಯಲ್ಲಿ ಗೋತ್ವದಲ್ಲಿ ಗೋವ್ಯಕ್ತಿ ವಿಶೇಷಣವಾಗಿ ತೋರುವುದು, 'ಗೋತ್ವವಾನ್ ಗೌಃ' ಎಂಬಲ್ಲಿ ಗೋವಿನಲ್ಲಿ ಗೋತ್ವವು ವಿಶೇಷಣವಾಗಿ ತೋರುವುದು ಅನುಭವ ಸಿದ್ಧವೇ ಆಗಿದೆ. ಎಲ್ಲಕಡೆ ಪ್ರಥಮಾಂತಶಬ್ದೋಕ್ತವಾದುದು ವಿಶೇಷ್ಯ .

ಅಥವಾ ಗೋತ್ವಕ್ಕೆ ಗೋತ್ವವೇ ವ್ಯಾವರ್ತಕಧರ್ಮವಾಗಿದೆ. ಅದು ತನ್ನಲ್ಲಿ ತಾನೇ ಇದೆ. ಗೋತ್ವದಲ್ಲಿ ಸ್ವೀಕರಿಸುವ ಗೋತ್ವತ್ವವನ್ನು ಗೋತ್ವಕ್ಕಿಂತ ಬೇರೆ ಎಂದು ಗ್ರಹಿಸಬೇಕಾಗಿಲ್ಲ, ಗೋತ್ವಸ್ವರೂಪವೆಂದೇ ಗ್ರಹಿಸಬಹುದು. ವಿಶೇಷಬಲದಿಂದ ಅದು ತನಗೆ ತಾನೇ ಧರ್ಮವೆನಿಸುತ್ತದೆ. ಆದರಿಂದ ಅದು ಸಧರ್ಮಕವೇ ಹೊರತು ನಿರ್ಧರ್ಮಕವಲ್ಲ.

ಅಥವಾ ಗೋವನ್ನು ಮಹಿಷಾದಿಗಳಿಗಿಂತ ವ್ಯಾವೃತ್ತಿ ಮಾಡುವ ಗೋತ್ವದಲ್ಲಿ 'ಮಹಿಷಾದಿ ವ್ಯಾವರ್ತಕತ್ವ'ರೂಪ ಧರ್ಮವೇ ಅದಕ್ಕೆ ಇತರ ವ್ಯಾವರ್ತಕವಾದ ಧರ್ಮ. ಆದರಿಂದ ಗೋತ್ವಾದಿಯು ಸಧರ್ಮಕವೆ. ಆದರಲ್ಲಿ ಪದಾರ್ಥತ್ವ ಹೇತುವಿಗೆ ಸ್ವಜ್ಞಾನಾಬಾಧ್ಯವ್ಯಾವರ್ತಕ ಧರ್ಮವತ್ವರೂಪ ಸಾಧ್ಯದ ವ್ಯಭಿಚಾರವಿಲ್ಲ.

'ವ್ಯಾವರ್ತಕತ್ವರೂಪ ಧರ್ಮದಲ್ಲಿಯೇ ವ್ಯಭಿಚಾರ' ಎನ್ನಬಾರದು. 'ವ್ಯಾವರ್ತಕತ್ವವೂ ಅನ್ಯವ್ಯಾವೃತ್ತವಾಗಿದೆ' ಎಂದು ಅಬಾಧಿತ ಅನುಭವವಿರುವುದರಿಂದ ಆದರಲ್ಲಿಯೂ ಅನ್ಯವ್ಯಾವೃತ್ತಿ ರೂಪವಾದ ವ್ಯಾವರ್ತಕಧರ್ಮವಿದ್ದೇ ಇದೆ.

'ವ್ಯಾವೃತ್ತಿಯೂ ಕೂಡ ಇತರ ವ್ಯಾವೃತ್ತವಾಗಿದೆ.' ಎಂಬ ಅನುಭವವಿರುವುದರಿಂದ ವ್ಯಾವೃತ್ತಿಯೂ ಇತರವ್ಯಾವೃತ್ತಿರೂಪ ವ್ಯಾವರ್ತಕಧರ್ಮಉಳ್ಳದ್ದೇ. ಹೀಗೆ ವ್ಯಾವೃತ್ತಿಯು ವ್ಯಾವೃತ್ತ, ಆ ವ್ಯಾವೃತ್ತಿಯೂ ವ್ಯಾವೃತ್ತ ಎನ್ನುತ್ತಿದ್ದರೆ ಅನವಸ್ಥೆಯಲ್ಲವೆ? ಎಂದರೆ ಈ ವ್ಯಾವೃತ್ತಿಗಳೆಲ್ಲವೂ ಪರಸ್ಪರ ಅಭಿನ್ನವಾಗಿವೆ. ಪದಾರ್ಥಾಂತರವಲ್ಲ. ಹೀಗಾಗಿ ವ್ಯಾವೃತ್ತಿಯು ಸ್ವವೃತ್ತಿ, ತನ್ನಲ್ಲಿ ತಾನಿದೆ. ಅಬಾಧಿತ ಅನುಭವ ಹಾಗೇ ಇರುವುದರಿಂದ ಆತ್ಮಾಶ್ರಯ ದೋಷವಲ್ಲ.

'ಕೇವಲಾನ್ವಯಿಯಾದರೆ ಮಾತ್ರ ಅಭಿಧೇಯತ್ವಪ್ರಮೇಯತ್ವಾದಿಗಳಂತೆ ಸ್ವವೃತ್ತಿಯಾಗಿರುತ್ತವೆ' ಎಂದು ಹೇಳುವುದು ಯುಕ್ತವಲ್ಲ. ಕೇವಲಾನ್ವಯಿಯಲ್ಲದ ಗಂಧಾತ್ಯಂತಾಭಾವದಲ್ಲಿ ಗಂಧಾತ್ಯಂತಾಭಾವ ಬೇರೆಯಲ್ಲ, ಸ್ವವೃತ್ತಿ ಎಂದು ಅಂಗೀಕೃತವಾಗಿದೆ.



न च श्रुतिः सगुणब्रह्मपरा नतु परब्रह्मपरेति वाच्यम् । सगुणातिरिक्तस्य परस्याद्याप्यसिद्धेः । त्वत्पक्षेऽपि तात्त्विकगुणवद्व्यक्त्यंतराभावाच्च । परःपराणामित्यादिस्मृतौ परात्परत्वोक्तेश्च ।

अन्यथा ''सदेव सोम्येदम्, असद्वा इदमग्र'' इति सदसच्छ्रुती अपि परापरब्रह्मविषये, ग्रहणाग्रहणश्रुती अपि परापरयागविषये स्याताम् ।

''असन्नेव स भवति असद् ब्रह्मेति वेद चेत्'' इति श्रुतिरपि नासत्त्वनिंदार्था । किंतु शून्यतापत्तिरूपपरममोक्षपरेति स्यात् ।

नचेदानीं सगुणं दशांतरे तु निर्गुणम् । तथात्वेऽपि गुणानामनित्यत्वमात्रापत्त्या त्वदभिमतमिथ्यात्वासिद्धेः ।

''ज्ञानं नित्यं क्रिया नित्या बलं शक्तिः परात्मनः ।'' ''एष नित्यो महिमा ब्राह्मणस्य'' इत्यादिश्रुतेश्च ।

''एष नित्य'' इतिश्रुतिश्च ब्रह्मपरा । पूर्वत्र ''नावेदविन्मनुते तं बृहंतम्'' इति ब्रह्मणः प्रकृतत्वात् । उत्तरत्र ''न कर्मणा वर्धते नो कनीयान् ।'' ''तस्यैव स्यात् पदवित्तं विदित्वा न लिप्यते कर्मणा पापकेन'' इति ब्रह्मलिंगात् ।

बृहदारण्यके ''सर्वस्य वशी सर्वस्येशानः सर्वस्याधिपतिः, स न साधुना कर्मणा भूयान्नो एवासाधुना कनीयान् । एष सर्वेश्वर एष भूताधिपतिः एष भूतपाल'' इत्यादिना ब्रह्मोक्त्वा तत्र संमतित्वेन

**तदेतदृचाभ्युक्तमिति ''एष नित्य'' इत्यादिमंत्रस्योदाहृतत्वाच्च । अन्यथा ब्रह्मेदानीं सद्दशांतरे त्वसदिति स्यात् ।**

**न त्विति** । तस्य केवलो निर्गुणश्चेति निर्गुणत्वेनैव प्रतिपन्नत्वादिति भावः ।। **सगुणातिरिक्तस्येति** ।। निर्गुणवाक्यस्य हेयगुणनिषेधपरतया सगुणविषयत्वादिति भावः ।। **त्वत्पक्षेऽपीति** ।। अतात्विकधर्मवत्प्रतिपादने तु वाक्यस्याप्रामाण्यं स्यादिति भावः ।। **अन्यथेति**।। सगुणवाक्यानां सगुणब्रह्मपरत्वम्, निर्गुणवाक्यानां निर्गुणब्रह्मपरत्वमित्यंगीकार इत्यर्थः ।। **ग्रहणाग्रहणश्रुती अपीति** ।। ''अतिरात्रे षोडशिनं गृह्णाति'' ''नातिरात्रे षोडशिनं गृह्णाति'' इति श्रुती अपीत्यर्थः । नन्वसद्ब्रह्मेति न वक्तुं शक्यम् । असद्ब्रह्मदर्शिनो निंदाश्रवणादित्याशंक्याह— **असन्नेवेति** । **इदानीमिति** ।। तथाच ब्रह्मद्वैविध्यानंगीकारान्नोक्तातिप्रसंगः । सगुणवाक्यानां च कादाचित्कगुणप्रतिपादकत्वेनोपपत्तिश्चेति भावः । नचानित्यत्वमपि । प्रमाणविरोधादित्याह— **ज्ञानमिति** । **अन्यथेति** ।। प्रमाणविरोधसत्त्वेऽपि कालभेदेन सगुणनिर्गुणत्वांगीकार इत्यर्थः ।



**ನ ಚ ಶ್ರುತಿಃ ಸಗುಣಬ್ರಹ್ಮಪರಾ, ನತು ಪರಬ್ರಹ್ಮ ಪರೇತಿ ವಾಚ್ಯಂ। ಸಗುಣಾತಿರಿಕ್ತಸ್ಯ ಪರಸ್ಯಾದ್ಯಾಪ್ಯಸಿದ್ಧೇಃ। ತ್ವತ್ಪಕ್ಷೇऽಪಿ ತಾತ್ವಿಕ ಗುಣವದ್ ವ್ಯಕ್ತ್ಯಂತರಾಭಾವಾಚ್ಚ। 'ಪರಃ ಪರಾಣಾಂ' ಇತ್ಯಾದಿಸ್ಮೃತೌ ಪರಾತ್ಪರತ್ವೋಕ್ತೇಶ್ಚ।**

'ನೀವು ಹೇಳುವ ಸಗುಣಶ್ರುತಿ ಎಲ್ಲವೂ ಅತಾತ್ವಿಕಗುಣಉಳ್ಳ ಸಗುಣಬ್ರಹ್ಮನ ಪರವೇ ಹೊರತು ಪರಬ್ರಹ್ಮ ಪರವಲ್ಲ. ನಿರ್ಗುಣ ಬ್ರಹ್ಮಕ್ಕೆ ಅದು ಬಾಧಕವಲ್ಲ' ಎಂದರೆ ಅದು ಸರಿಯಲ್ಲ. ಸಗುಣಕ್ಕಿಂತ ಅತಿರಿಕ್ತವಾಗಿ ನಿರ್ಗುಣ ಪರಬ್ರಹ್ಮ ಒಂದು ಇನ್ನೂ ಸಿದ್ಧವಾಗಿಲ್ಲ. 'ನಿರ್ಗುಣ ಬ್ರಹ್ಮ ಸಿದ್ಧವಾದರೆ ಸಗುಣಶ್ರುತಿಯು ಸಗುಣಬ್ರಹ್ಮಪರ, ನಿರ್ಗುಣಬ್ರಹ್ಮಕ್ಕೆ ಬಾಧಕವಲ್ಲ ಎಂದು ಸಿದ್ಧವಾಗುತ್ತದೆ. ಬಾಧಕವಲ್ಲವೆಂದು ಸಿದ್ಧವಾದರೆ ನಿರ್ಗುಣಬ್ರಹ್ಮ ಸಿದ್ಧವಾಗುತ್ತದೆ.' ಹೀಗೆ ಅನ್ಯೋನ್ಯಾಶ್ರಯ ದೋಷ ಬರುವುದರಿಂದ ನಿರ್ಗುಣ ಬ್ರಹ್ಮ ಸಿದ್ಧವಾಗುತ್ತಿಲ್ಲ.

'ನಿರ್ಗುಣಶ್ರುತಿಯಿಂದ ನಿರ್ಗುಣಬ್ರಹ್ಮಸಿದ್ಧಿ' ಎನ್ನುವುದು ಸ್ವವ್ಯಾಹತ, ಏಕೆಂದರೆ ನಿರ್ಗುಣತ್ವವೂ ಅಭಾವರೂಪವಾದ ಒಂದು ಗುಣವೆ. ಹೀಗಾಗಿ ನಿರ್ಗುಣತ್ವರೂಪ ಗುಣವಿದ್ದರೂ ಬ್ರಹ್ಮ ಸಗುಣವೆ, ನಿರ್ಗುಣತ್ವವಿಲ್ಲದಿದದ್ದರೂ, ನಿರ್ಗುಣತ್ವವು ಅಭಾವಧರ್ಮವಾದ್ದರಿಂದ,

ಆದಿಲ್ಲದಿದ್ದರೆ ಪ್ರತಿಯೋಗಿಯಾದ ಗುಣವಿದೆ ಎಂದಾಗುವುದರಿಂದ ಬ್ರಹ್ಮವು ಸಗುಣವೆ. ಹೀಗೆ ವ್ಯಾಹತಿ ಉಂಟಾಗುವುದರಿಂದ ನಿರ್ಗುಣ ಶ್ರುತಿಯು ನಿರ್ಗುಣತ್ವವನ್ನು ಹೇಳುವುದಿಲ್ಲ, ಬ್ರಹ್ಮನಲ್ಲಿ ಹೇಯ ಪ್ರಾಕೃತಗುಣವಿಲ್ಲ ಎನ್ನುತ್ತಿದೆ.

ನಿನ್ನ ಪಕ್ಷದಲ್ಲಿಯೂ ತಾತ್ತ್ವಿಕಗುಣಉಳ್ಳ ಬೇರೆ ಪರಬ್ರಹ್ಮವೆಂಬ ವ್ಯಕ್ತಿ ಇಲ್ಲ. ಇರುತ್ತಿದ್ದರೆ ಸಗುಣಶ್ರುತಿಯು ಆ ತಾತ್ತ್ವಿಕಗುಣಉಳ್ಳ ನಿನ್ನ ಸಗುಣವನ್ನು ಹೇಳುತ್ತಿತ್ತು. ಹೀಗಾಗಿ ಸಗುಣಶ್ರುತಿಗೆ ವಿಷಯವೇ ಇಲ್ಲವಾಗುತ್ತದೆ.

ಶ್ರುತಿಯು ಅತಾತ್ತ್ವಿಕಗುಣವನ್ನು ಎಲ್ಲಿಯೂ ಹೇಳುವುದಿಲ್ಲ. ತಾತ್ತ್ವಿಕವಿಷಯವನ್ನೇ ಹೇಳುತ್ತದೆ. ಏಕೆಂದರೆ ಅತಾತ್ತ್ವಿಕ ವಿಷಯವನ್ನೂ ಶ್ರುತಿ ಹೇಳುವುದಾಗಿದ್ದಲ್ಲಿ 'ಯಜಮಾನಃ ಪ್ರಸ್ತರಃ' ಎಂಬ ಶ್ರುತಿಯೂ ಕೂಡ ಅತಾತ್ತ್ವಿಕ ಯಜಮಾನಪ್ರಸ್ತಾರಾಭೇದವನ್ನು ಹೇಳುತ್ತಿತ್ತು. ಗೌಣೀವೃತ್ತಿಯಿಂದ ಅನ್ಯಾರ್ಥವನ್ನು ಶ್ರುತಿಗೆ ಹೇಳಬೇಕಾಗಿರಲಿಲ್ಲ.

'ಸಗುಣಶ್ರುತಿಯು ಗುಣವನ್ನು ಮಾತ್ರ ಹೇಳುತ್ತದೆ, ಗುಣವನ್ನು ತಾತ್ತ್ವಿಕವೆಂದು ಹೇಳುವುದಿಲ್ಲ' ಎನ್ನುವುದು ಸರಿಯಲ್ಲ. ನಾವು ಶ್ರುತಿಯು 'ಗುಣವನ್ನು ತಾತ್ತ್ವಿಕವೆಂದು ಹೇಳುತ್ತದೆ' ಎನ್ನುತ್ತಿಲ್ಲ. 'ತಾತ್ತ್ವಿಕಗುಣಗಳನ್ನು ಹೇಳುತ್ತದೆ' ಎನ್ನುತ್ತಿದ್ದೇವೆ.

'ಸಗುಣವು ಅಪರ ಬ್ರಹ್ಮ, ನಿರ್ಗುಣವೇ ಪರಬ್ರಹ್ಮ. ಸಗುಣವಾಕ್ಯವು ಅಪರಬ್ರಹ್ಮವಿಷಯ, ಸತ್ಯಂಜ್ಞಾನಮನಂತಂಬ್ರಹ್ಮ ಇತ್ಯಾದಿ ವಾಕ್ಯವು ಪರಬ್ರಹ್ಮವಿಷಯ' ಎಂದು ನನ್ನ ಮತದಲ್ಲಿ ವ್ಯವಸ್ಥೆ. ಆದರಿಂದ ಸಗುಣವಾಕ್ಯದಿಂದ ಪರಬ್ರಹ್ಮನಲ್ಲಿ ಗುಣವು ಸಿದ್ಧವಾಗುವುದಿಲ್ಲ' ಎಂದು ಅದ್ವೈತಿ ಹೇಳುವುದು ಸರಿಯಲ್ಲ. ನಾವು ಹಿಂದೆ ಹೇಳಿದ, 'ತೇಜೋಬಲೈಶ್ವರ್ಯಮಹಾವಬೋಧ' ಎಂಬ ವಿಷ್ಣುಪುರಾಣವಚನದಲ್ಲಿ ತೇಜ ಆದಿ ಗುಣವುಳ್ಳ ಸಗುಣಬ್ರಹ್ಮವನ್ನೇ 'ಪರಃ ಪರಾಣಾಂ' ಎಂಬ ಮಾತಿನಿಂದ ಪರಾತ್ಪರವೆಂದು ಹೇಳಿದೆ, ಹೊರತು ಬೇರೆ ನಿರ್ಗುಣಬ್ರಹ್ಮನನ್ನಲ್ಲ. ಆದರಿಂದ ನಿನ್ನ ಪರ-ಅಪರ ಬ್ರಹ್ಮವ್ಯವಸ್ಥೆ ಸ್ಮೃತಿವಿರುದ್ಧ. 'ಅನ್ಯಥಾ' ಹಾಗಿದ್ದರೂ ಈ ವ್ಯವಸ್ಥೆಯನ್ನೇ ನಾನು ಅಂಗೀಕರಿಸುತ್ತೇನೆ ಎಂದರೆ ಅದು ಪೂರ್ವಮೀಮಾಂಸಾ ಉತ್ತರ ಮೀಮಾಂಸಾಗಳೆರಡಕ್ಕೂ ವಿರುದ್ಧವಾದೀತು—

ವೇದಾಂತದಲ್ಲಿ 'ಸದೇವ ಸೋಮ್ಯೇದಮಗ್ರ ಆಸೀತ್' 'ಅಸದ್ವಾ ಇದಮಗ್ರ ಆಸೀತ್' ಎಂದು 'ಸತ್' 'ಅಸತ್'ಗಳನ್ನು ಹೇಳುವ ಶ್ರುತಿಗಳು ಪರ-ಅಪರ ಬ್ರಹ್ಮವಿಷಯವೆನ್ನ ಬೇಕಾದೀತು. ಪೂರ್ವಮೀಮಾಂಸಾದಲ್ಲಿ ಗ್ರಹಣ-ಅಗ್ರಹಣ ವಾಕ್ಯಗಳೂ ಪರ-ಅಪರಯಾಗ ವಿಷಯವೆಂದು ಹೇಳಬೇಕಾದೀತು—

**ಅನ್ಯಥಾ ''ಸದೇವ ಸೋಮ್ಯೇದಂ'' ''ಅಸದ್ವಾ ಇದಮಗ್ರೇ'' ಇತಿ ಸದಸತ್ ಶ್ರುತೀ ಅಪಿ ಪರಾಪರ ಬ್ರಹ್ಮವಿಷಯೇ, ಗ್ರಹಣಾಗ್ರಹಣ ಶ್ರುತೀ ಅಪಿ ಪರಾಪರ ಯಾಗವಿಷಯೇ ಸ್ಯಾತಾಂ ।**

ಪರ–ಅಪರ ಬ್ರಹ್ಮವ್ಯವಸ್ಥೆಯನ್ನು ಒಪ್ಪಿದರೆ 'ಸದೇವ' ವಾಕ್ಯ ಅಪರಬ್ರಹ್ಮವನ್ನು ಹೇಳುತ್ತದೆ. 'ಅಸದೇವ' ವಾಕ್ಯ ಪರಬ್ರಹ್ಮವನ್ನು ಹೇಳುತ್ತದೆ ಎನ್ನಬೇಕಾದೀತು. ಇದು ಅಪಸಿದ್ಧಾಂತ. ಹಾಗೇ ಪರಯಾಗ ಅಪರಯಾಗ ವ್ಯವಸ್ಥೆಯನ್ನು ಒಪ್ಪಿ 'ಅತಿರಾತ್ರೇ ಷೋಡಶಿನಂ ಗೃಹ್ಣಾತಿ' 'ನಾತಿರಾತ್ರೇ ಷೋಡಶಿನಂ ಗೃಹ್ಣಾತಿ' ಎಂಬ ವಾಕ್ಯಗಳು ಹೇಳುವ ಷೋಡಶಿಗ್ರಹಣಹೋಮ ಮತ್ತು ಷೋಡಶಿಗ್ರಹಣಹೋಮಾಭಾವಗಳು ಕಲ್ಪಿತವಾದ ಎರಡು ಪರ–ಅಪರಯಾಗಗಳಿಗೆ ಸಂಬಂಧಿಸಿವೆ ಎಂದರೆ ಪೂರ್ವಮೀಮಾಂಸಾ ವಿರೋಧ ಬರುತ್ತದೆ. ಅದ್ವೈತ ಸಿದ್ಧಾಂತದಲ್ಲಿ 'ಸದೇವ' ವಾಕ್ಯವು 'ಈ ಪ್ರಪಂಚವು ಸದ್ರೂಪ ಅಪರಬ್ರಹ್ಮಾತ್ಮಕ' ಎಂದೂ 'ಅಸದೇವ' ವಾಕ್ಯವು 'ಈ ಪ್ರಪಂಚವು ಕಲ್ಪಿತ ಅಸದ್ರೂಪ ಪರಬ್ರಹ್ಮಾತ್ಮಕ'ವೆಂದೂ ಹೇಳುತ್ತದೆ ಎಂದರೆ ತಪ್ಪಾಗುತ್ತದೆ. ಸಿದ್ಧಾಂತ ವಿರೋಧ ಬರುತ್ತದೆ.

**'ಅಸನ್ನೇವ ಸ ಭವತಿ ಅಸದ್ ಬ್ರಹ್ಮೇತಿ ವೇದ ಚೇತ್' ಇತಿ ಶ್ರುತಿರಪಿ ನಾಸತ್ವ ನಿಂದಾರ್ಥಾ । ಕಿಂತು ಶೂನ್ಯತಾಪತ್ತಿರೂಪ ಪರಮ ಮೋಕ್ಷಪರೇತಿ ಸ್ಯಾತ್ ।**

'ಅಸದೇವ' ವಾಕ್ಯವು 'ಅಸದ್ರೂಪ ಪರಬ್ರಹ್ಮಪರ'ವೆನ್ನಲಾಗದು. 'ಅಸತ್ತನ್ನು ಬ್ರಹ್ಮವೆಂದು ತಿಳಿದರೆ ಅಸತ್ತೇ ಆಗುತ್ತಾನೆ, ಅಂದರೆ ಪುರುಷಾರ್ಥದಿಂದ ವಂಚಿತನಾಗುತ್ತಾನೆ' ಎಂದು ಅದು ಅಸತ್ತಾದ ಬೌದ್ಧರ ಶೂನ್ಯವನ್ನು ನಿಂದಿಸುವ ಮೂಲಕ ಅದನ್ನು ನಿಷೇಧಿಸುತ್ತದೆ' ಎಂದು ಯದ್ಯಪಿ ಅದ್ವೈತಿ ಹೇಳುತ್ತಾನೆ. ಆದರೆ 'ನಿರ್ಗುಣವು ಪರಬ್ರಹ್ಮ' ಎಂದು ಒಂದು ಬ್ರಹ್ಮವನ್ನು ಕಲ್ಪಿಸಿಕೊಂಡು ನಿರ್ಗುಣಶ್ರುತಿ ಆ ಪರಬ್ರಹ್ಮಪರ ಎನ್ನುವುದಾದರೆ, ಅದೇರೀತಿ ಬೌದ್ಧನೂ ಕೂಡ ಶೂನ್ಯವನ್ನೇ ಅಸದ್ರೂಪ ಪರಬ್ರಹ್ಮವೆಂದು ಒಪ್ಪಿಕೊಂಡು 'ಅಸನ್ನೇವ ಸ ಭವತಿ ಅಸದ್ ಬ್ರಹ್ಮೇತಿ ವೇದ ಚೇತ್' ಶೂನ್ಯರೂಪವಾದ ಅಸದ್‌ಬ್ರಹ್ಮವನ್ನು ತಿಳಿದರೆ ಅಸತ್ತೇ ಆಗುತ್ತಾನೆ. ಅಂದರೆ, ಅಸದ್ರೂಪ ಶೂನ್ಯಾತ್ಮತ್ವವೆಂಬ ಪರಮಮೋಕ್ಷಕ್ಕೇ ಭಾಗಿಯಾಗುತ್ತಾನೆ ಎಂದೇ ಪ್ರಶಂಸೆ ಅದು, ಎಂದೇಕೆ ಹೇಳಬಾರದು?

ಹೀಗೆ ಅತಿಪ್ರಸಂಗ ಬರುವುದರಿಂದ ಸಗುಣಕ್ಕಿಂತ ಬೇರೆ ನಿರ್ಗುಣಪರಬ್ರಹ್ಮವನ್ನು ಅದ್ವೈತಿಯು ಕಲ್ಪಿಸಿಕೊಂಡು ನಿರ್ಗುಣಶ್ರುತಿಯು ಆ ನಿರ್ಗುಣಬ್ರಹ್ಮಪರವೆಂದು ಹೇಳುವುದು ಅತ್ಯಂತ ಅನುಚಿತ. ಗುಣಶಬ್ದಕ್ಕೆ ಅನೇಕ ಅರ್ಥಗಳಿರುವುದರಿಂದ ಪ್ರಾಕೃತಹೇಯಗುಣರಾಹಿತ್ಯವನ್ನೇ ಸಗುಣನಲ್ಲಿ ನಿರ್ಗುಣಶ್ರುತಿ ಹೇಳುತ್ತದೆ ಎನ್ನಬೇಕು.

ಇಲ್ಲಿ ಅದ್ವೈತಿಯು ಹೇಳುತ್ತಾನೆ— ನಾವು ಏಕಕಾಲದಲ್ಲಿ ಎರಡು ಬೇರೆಬೇರೆ ಪರ–ಅಪರ ಬ್ರಹ್ಮಗಳನ್ನು ಅಂಗೀಕರಿಸುತ್ತಿಲ್ಲ. ಹಾಗೆ ಅಂಗೀಕರಿಸಿದ್ದರೆ ನೀವು ಹೇಳಿದ ಸತ್–ಅಸತ್ ಎಂದು ಎರಡು ಬಗೆಯ ಬ್ರಹ್ಮಗಳ ಅಂಗೀಕಾರ ಪ್ರಸಕ್ತಿ ಇರುತ್ತಿತ್ತು. ನಾವು ಹೇಳುತ್ತೇವೆ—'ಒಂದೇ ಬ್ರಹ್ಮ. ಅದು ಚರಮವೃತ್ತಿಗಿಂತ ಪೂರ್ವಾವಸ್ಥೆಯಲ್ಲಿ ಅಪರ, ಸಗುಣವಾಗಿರುತ್ತದೆ, ಮುಂದೆ ಚರಮವೃತ್ತ್ಯವಸ್ಥೆಯಲ್ಲಿ ಗುಣ ನಾಶವಾದಾಗ ಪರ, ನಿರ್ಗುಣವಾಗುತ್ತದೆ. ಪಾಕದಿಂದ ಕೆಂಬಣ್ಣ

ನಾಶವಾದಾಗ ಘಟವು ಕಪ್ಪಾಗುತ್ತದೆ. ಹಾಗೇ ಇದು. ಹೀಗಾಗಿ ಸಗುಣವಾಕ್ಯವು ಬ್ರಹ್ಮನಲ್ಲಿ ತಾತ್ಕಾಲಿಕವಾಗಿರುವ ಗುಣವನ್ನು ಪ್ರತಿಪಾದಿಸುತ್ತಿದೆ' ಎಂದು. ಇದು ಸರಿಯಲ್ಲ.

**ನ ಚ ಇದಾನೀಂ ಸಗುಣಂ, ದಶಾಂತರೇ ತು ನಿರ್ಗುಣಂ। ತಥಾತ್ವೇಽಪಿ ಗುಣಾನಾಮನಿತ್ಯತ್ವ ಮಾತ್ರಾಪತ್ತ್ಯಾ ತ್ವದಭಿಮತ ಮಿಥ್ಯಾತ್ವಾಸಿದ್ಧೇಃ।**

'ಬ್ರಹ್ಮ ಈಗ ಸಗುಣವಾಗಿದೆ ಮುಂದೆ ಅದೇ ನಿರ್ಗುಣವಾಗುತ್ತದೆ' ಎನ್ನಬಾರದು. ಹಾಗೆ ಹೇಳಿದರೆ ಬ್ರಹ್ಮನ ಗುಣಗಳು ಅನಿತ್ಯ ಎಂದು ಮಾತ್ರ ಸಿದ್ಧವಾದೀತು. ಅದ್ವೈತಿಗೆ ಇಷ್ಟವಾಗಿರುವ ಮಿಥ್ಯಾತ್ವ ಸಿದ್ಧಿಸಲಾರದು. ವಸ್ತುತಃ ಅನಿತ್ಯತ್ವವೂ ಸಿದ್ಧಿಸಲಾರದು, ಶ್ರುತಿವಿರೋಧವಿರುವುದರಿಂದ.

**'ಜ್ಞಾನಂ ನಿತ್ಯಂ ಕ್ರಿಯಾ ನಿತ್ಯಾ ಬಲಂ ಶಕ್ತಿಃ ಪರಾತ್ಮನಃ।'**

**'ಏಷ ನಿತ್ಯೋ ಮಹಿಮಾ ಬ್ರಾಹ್ಮಣಸ್ಯ' ಇತ್ಯಾದಿ ಶ್ರುತೇಶ್ಚ।'**

'ಅನಿತ್ಯತ್ವವನ್ನೇ ಜ್ಞಾನನಿವರ್ತ್ಯತ್ವ ರೂಪ ಮಿಥ್ಯಾತ್ವರೂಪವೆನ್ನುತ್ತೇನೆ ಎಂದು ಅದ್ವೈತಿ ಹೇಳಿದರೂ, ಶ್ರುತಿವಿರೋಧವಿರುವುದರಿಂದ ಅನಿತ್ಯತ್ವವೂ ಸಿದ್ಧವಾಗುವುದಿಲ್ಲ ಎನ್ನುತ್ತೇವೆ. 'ಜ್ಞಾನವು ನಿತ್ಯ, ಕ್ರಿಯೆಯೂ ನಿತ್ಯ, ಬಲವೂ ಶಕ್ತಿಯೂ ನಿತ್ಯ, ಪರಮಾತ್ಮನಲ್ಲಿ' (ಅತೃತ್ವಾಧಿಕರಣ ಅನುವ್ಯಾಖ್ಯಾನೋದಾಹೃತ ಪೈಂಗಿಶ್ರುತಿ) 'ಈ ಪರಮಾತ್ಮನು 'ಬ್ರಾಹ್ಮಣ' ಅಂದರೆ ವೇದವೇದ್ಯ, ವೇದವೇದ್ಯನಾದ ಅವನ ಮಹಿಮೆ ನಿತ್ಯ' (ತೈತ್ತಿರೀಯಾರಣ್ಯಕ ಶ್ರುತಿ) ಎಂದು ಈ ಶ್ರುತಿಗಳು ಪರಮಾತ್ಮನ ಗುಣಗಳು ನಿತ್ಯವಾಗಿವೆ. ಜ್ಞಾನನಿವರ್ತ್ಯವಲ್ಲ, ಮಿಥ್ಯಾ ಅಲ್ಲ ಎನ್ನುತ್ತಿವೆ.

'ಇಲ್ಲಿ ಬ್ರಹ್ಮನ ಮಹಿಮೆ ನಿತ್ಯ ಎಂದಿಲ್ಲ, ಬ್ರಾಹ್ಮಣನ ಅಂದರೆ ಬ್ರಹ್ಮಜ್ಞಾನಿಯ ಮಹಿಮೆ ನಿತ್ಯ ಎಂದಿದೆ ಎಂದರೆ, ಈ ಮಂತ್ರವು ಬ್ರಹ್ಮಪರ ಹೊರತು ಬ್ರಹ್ಮಜ್ಞಾನಿಯ ಪರವಲ್ಲ.

**'ಏಷ ನಿತ್ಯ ಇತಿ' ಶ್ರುತಿಶ್ಚ ಬ್ರಹ್ಮಪರಾ। ಪೂರ್ವತ್ರ 'ನಾವೇದವಿನ್ಮನುತೇ ತಂ ಬೃಹಂತಂ' ಇತಿ ಬ್ರಹ್ಮಣಃ ಪ್ರಕೃತತ್ವಾತ್। ಉತ್ತರತ್ರ 'ನ ಕರ್ಮಣಾ ವರ್ಧತೇ ನೋ ಕನೀಯಾನ್' 'ತಸ್ಯೈವ ಸ್ಯಾತ್ ಪದವಿತ್ ತಂ ವಿದಿತ್ವಾ ನ ಲಿಪ್ಯತೇ ಕರ್ಮಣಾ ಪಾಪಕೇನ' ಇತಿ ಬ್ರಹ್ಮಲಿಂಗಾತ್॥**

'ಏಷ ನಿತ್ಯೋ ಮಹಿಮಾ ಬ್ರಾಹ್ಮಣಸ್ಯ' ಎಂಬುದು ತೈತ್ತಿರೀಯಾರಣ್ಯಕ ವಾಕ್ಯ. ಇದು ಬ್ರಹ್ಮಪರ. ಏಕೆಂದರೆ, ಇದರ ಪೂರ್ವದಲ್ಲಿ 'ವೇದವನ್ನು ತಿಳಿಯದವನು ಆ ಪರಬ್ರಹ್ಮನನ್ನು ತಿಳಿಯುವುದಿಲ್ಲ' ಎಂದು ಬ್ರಹ್ಮನು ಪ್ರಕೃತನಾಗಿದ್ದಾನೆ. ಈ ವಾಕ್ಯದ ಉತ್ತರದಲ್ಲಿಯೂ 'ಅವನ ಸುಖಜ್ಞಾನಾದಿ ಗುಣಗಳು ಕರ್ಮದಿಂದ ಹೆಚ್ಚುವುದೂ ಇಲ್ಲ ಕಡಿಮೆಯೂ ಆಗುವುದಿಲ್ಲ, ಗುಣಗಳಿಗೆ ಆಶ್ರಯನಾದ ಆ ಪರಮಾತ್ಮನನ್ನೇ ತಿಳಿಯಬೇಕು. ತಿಳಿದರೆ ಆ ಜ್ಞಾನಿಯೂ ಪಾಪಕರ್ಮಲೇಪವನ್ನು ಹೊಂದುವುದಿಲ್ಲ' ಎಂದು ಬ್ರಹ್ಮನ ಅಸಾಧಾರಣ ಮಹಿಮೆಯೇ ಉಕ್ತವಾಗಿದೆ, ಹೊರತು, ಬ್ರಾಹ್ಮಣನ, ಅಂದರೆ ಬ್ರಹ್ಮಜ್ಞಾನಿಯ ಏಷಣಾತ್ಯಾಗಾನಂತರದ

ಅಜ್ಞಾನಾದಿ ಸರ್ವೋಪಾಧ್ಯಭಾವರೂಪ ಮಹಿಮೆಯನ್ನು 'ಏಷ ನಿತ್ಯೋ ಮಹಿಮಾ ಬ್ರಾಹ್ಮಣಸ್ಯ' ಎಂಬ ವಾಕ್ಯ ಹೇಳುತ್ತಿಲ್ಲ. 'ಏಷಣಾತ್ಯಾಗಾನಂತರ ಬ್ರಾಹ್ಮಣನಿಗೆ ಪ್ರಾಪ್ತ'ವಾಗುವ ಉಪಾಧ್ಯಭಾವವು ನಿತ್ಯಮಹಿಮೆಯಲ್ಲ ಎನ್ನುವುದು ನಿನಗೂ ಸಂಮತ.

**ಬೃಹದಾರಣ್ಯಕೇ 'ಸರ್ವಸ್ಯ ವಶೀ ಸರ್ವಸ್ಯೇಶಾನಃ ಸರ್ವಸ್ಯಾಧಿಪತಿಃ ಸ ನ ಸಾಧುನಾ ಕರ್ಮಣಾ ಭೂಯಾನ್ನೋ ಏವಾಸಾಧುನಾ ಕನೀಯಾನ್ ಏಷ ಸರ್ವೇಶ್ವರಃ ಏಷ ಭೂತಾಧಿಪತಿಃ ಏಷ ಭೂತ ಪಾಲಃ' ಇತ್ಯಾದಿನಾ ಬ್ರಹ್ಮ ಉಕ್ತ್ವಾ ತತ್ರ ಸಮ್ಮತಿತ್ವೇನ 'ತದೇತದೃಚಾಭ್ಯುಕ್ತಂ' ಇತಿ 'ಏಷ ನಿತ್ಯ' ಇತ್ಯಾದಿ ಮಂತ್ರಸ್ಯ ಉದಾಹೃತತ್ವಾಚ್ಚ ।**

ತೈತ್ತಿರೀಯ ವಾಕ್ಯದಲ್ಲಿ ಹೇಳಿದ ನಿತ್ಯತ್ವ ಬಹುಕಾಲೀನತ್ವಾಭಿಪ್ರಾಯದ್ದೆನ್ನಲಾಗದು. ಬೃಹದಾರಣ್ಯಕದಲ್ಲಿಯೂ 'ಎಲ್ಲವನ್ನೂ ತನ್ನ ವಶದಲ್ಲಿಟ್ಟುಕೊಂಡಿರುವ ಪರಮಾತ್ಮನು ಬ್ರಹ್ಮರುದ್ರಾದಿಗಳೆಲ್ಲರಿಗೂ ಚೇಷ್ಟಕ. ಎಲ್ಲರಿಗಿಂತ ಗುಣಾಧಿಕ, ಪುಣ್ಯಕರ್ಮಗಳಿಂದ ಸುಖಪೂರ್ಣನಾಗುವುದಿಲ್ಲ. ಪಾಪಕರ್ಮಗಳಿಂದ ಸುಖರಹಿತನೂ ಆಗುವುದಿಲ್ಲ ಎಲ್ಲರ ಒಡೆಯನು ಇವನು. ಅನಾದಿಯಿಂದಲೂ ಪಾಲಕ' ಎಂದು ಮುಂತಾಗಿ ಪರಬ್ರಹ್ಮನನ್ನು ವರ್ಣಿಸಿ, ಇದರಲ್ಲಿ ಸಂದೇಹ ಬೇಡವೆಂದು ಅದಕ್ಕೆ ಸಮ್ಮತಿಯಾಗಿ ಈ ಪ್ರಮೇಯವು ನಿಶ್ಚಾಯಕವಾದ ಈ ಋಙ್ಮಂತ್ರದಲ್ಲಿಯೂ ಉಕ್ತವಾಗಿದೆ ಎನ್ನುತ್ತ 'ಏಷ ನಿತ್ಯೋ ಮಹಿಮಾ ಬ್ರಾಹ್ಮಣಸ್ಯ' ಇತ್ಯಾದಿ ಮಂತ್ರವನ್ನು ನಿತ್ಯತ್ವ ವಿಷಯದಲ್ಲಿ ಉದಾಹರಿಸಲಾಗಿದೆ(ಬೃಹದಾರಣ್ಯಕ 6.4.22). ಆದರಿಂದ ಈ ವಾಕ್ಯವು ಬ್ರಹ್ಮಪರವೇ ಆಗಿದೆ. ಮುಖ್ಯನಿತ್ಯತ್ವ ಪರವೇ ಆಗಿದೆ. ಬಹುಕಾಲೀನತ್ವರೂಪ ಗೌಣನಿತ್ಯತ್ವ ಪರವಲ್ಲ ಎನ್ನಬೇಕು.

**ಅನ್ಯಥಾ ಬ್ರಹ್ಮ ಇದಾನೀಂ ಸತ್ ದಶಾಂತರೇ ತು ಅಸತ್ ಇತಿ ಸ್ಯಾತ್ ।**

ಪ್ರಮಾಣದಿಂದ ಬ್ರಹ್ಮನ ಗುಣಗಳು ನಿತ್ಯವೆಂದು ಸಿದ್ಧವಾಗುತ್ತಿದ್ದರೂ ಅವುಗಳನ್ನು ತಾತ್ಕಾಲಿಕವೆಂದೇ ಅಂಗೀಕರಿಸುವುದಾದರೆ, ಕಾಲ ಭೇದದಿಂದ ಬ್ರಹ್ಮನಲ್ಲಿ ಸಗುಣತ್ವ ನಿರ್ಗುಣತ್ವಗಳನ್ನು ಒಪ್ಪುವುದಾದರೆ 'ಬ್ರಹ್ಮನು ನಿತ್ಯ ಸತ್ತಲ್ಲ, ಈಗ ಸತ್, ಮುಂದೆ ಅಸತ್ತಾಗುತ್ತಾನೆ' ಎಂದೇ 'ಸದೇವ' 'ಅಸದೇವ' ವಾಕ್ಯಗಳು ಹೇಳುತ್ತವೆ ಎಂದೇಕೆ ಅಂಗೀಕರಿಸಬಾರದು?



**नचौपाधिका धर्माः, औपाधिकत्वस्य सोपाधिकाध्यस्तत्व-रूपत्वे श्रुत्यप्रामाण्यापातात् । वक्ष्यमाणसत्यत्वश्रुतिविरोधाच्च । उपाधिकृतत्वरूपत्वे तूक्तनित्यत्वश्रुतिविरोधात् ।**

**अंतःकरणादिरूपोपाधिसृष्टेः प्रागेवेक्षितृत्वादिश्रुतेश्च । ''स्वाभाविकी ज्ञानबलक्रिया च'' इत्यादिश्रुतेश्च ।**

**नच योगलब्धयोगिशक्त्यादिवैषम्यमात्रेण तदुक्तिः । संकोचका-भावेनोक्तनित्यत्वश्रुत्यनुसारेण स्वाभाविकज्ञानसमभिव्याहारेण चोपाधिमात्रनिषेधात् ।**

**अन्यथा ब्रह्मणः सत्त्वमौपाधिकं असत्त्वं तु स्वाभाविकमिति स्यात् ।**

**नचातात्त्विका गुणाः, श्रुत्या गुणमात्रोक्त्या तात्त्विकत्वानुक्तेरिति वाच्यम् । नित्यत्वोक्तिसामर्थ्यात् विषयाबाधलक्षणप्रामाण्यस्यौ-त्सर्गिकत्वात्, ''सत्यः सो अस्य महिमा'' इत्यादिश्रुतेश्च तत्सिद्धेः ।**

**अन्यथा ''सत्यं ज्ञानं, तत्त्वमसि'' इत्यादिश्रुत्युक्तं ब्रह्मसत्त्वैक्यादिकमपि तात्त्विकं न स्यात् ।**

**निर्गुणश्रुतिविरोधस्तूद्धरिष्यते ।**

ननु निर्गुणवाक्यं स्वाभाविकरूपप्रतिपादकम्, सगुणवाक्यं तु औपाधिकधर्मपरमित्यविरोधइत्याशंक्य निराकरोति— **नचेति** ।। नन्वविद्या-रूपोपाधेस्सत्त्वाददोष इत्यत आह— **स्वाभाविकीति** ।। तथाचाविद्याया नोपाधित्वमिति भावः ।। **अतात्त्विका इति** ।। उपाधिं विनापि अध्यस्ता इत्यर्थः । तेन न पौनरुक्त्यमिति ध्येयम् ।। **नित्यत्वोक्तिसामर्थ्यादिति** ।। अध्यस्तस्य च ज्ञाननिवर्त्यतया नित्यत्वाद्ययोगादिति भावः ।। **अन्यथेति** ।। प्रामाण्यस्वतस्त्व-स्यौत्सर्गिकत्वेन विषयस्य तात्त्विकत्वासिद्धावित्यर्थः ।।



**ನ ಚ ಔಪಾಧಿಕಾ ಧರ್ಮಾಃ। ಔಪಾಧಿಕತ್ವಸ್ಯ ಸೋಪಾಧಿಕಾಧ್ಯಸ್ತತ್ವರೂಪತ್ವೇ ಶ್ರುತ್ಯಪ್ರಾಮಾಣ್ಯಾಪಾತಾತ್ ವಕ್ಷ್ಯಮಾಣ ಸತ್ಯತ್ವ ಶ್ರುತಿವಿರೋಧಾಚ್ಚ। ಉಪಾಧಿಕೃತತ್ವ ರೂಪತ್ವೇ ತು ಉಕ್ತನಿತ್ಯತ್ವ ಶ್ರುತಿ ವಿರೋಧಾತ್।**

'ನಿರ್ಗುಣವಾಕ್ಯವು ಬ್ರಹ್ಮನ ಸ್ವಾಭಾವಿಕರೂಪ ಪ್ರತಿಪಾದಕ. ಸಗುಣವಾಕ್ಯವು ಬ್ರಹ್ಮನಲ್ಲಿ ಉಪಾಧಿಕೃತ ಧರ್ಮಪರ. ಆದರಿಂದ ಸಗುಣ ನಿರ್ಗುಣವಾಕ್ಯಗಳಿಗೆ ವಿರೋಧವಿಲ್ಲ' ಎಂದು

ಅದ್ವೈತಿ ಹೇಳಿದರೆ ಕೇಳಬೇಕು, ಉಪಾಧಿಕೃತ ಧರ್ಮವೆಂದರೇನು? ಉಪಾಧಿಯಲ್ಲಿ ಕಂಡು ಚೈತನ್ಯದಲ್ಲಿ ಆರೋಪಿತವಾದ ಧರ್ಮ ಎನ್ನುವುದಾದರೆ ಆರೋಪಿತವಾದ ಧರ್ಮವನ್ನು ಪ್ರತಿಪಾದಿಸುವ ಸಗುಣವಾಕ್ಯವು ಅಪ್ರಮಾಣವಾದೀತು. ಶ್ರುತಿ ಅಪೌರುಷೇಯವಾದ್ದರಿಂದ ಅದಕ್ಕೆ ಅಪ್ರಾಮಾಣ್ಯವನ್ನು ಹೇಳಬಾರದು. ಮುಂದೆ ಹೇಳಲಿರುವ 'ಸತ್ಯಃ ಸೋ ಅಸ್ಯ ಮಹಿಮಾ' ಎಂಬ ಶ್ರುತಿಯ ವಿರೋಧವೂ ಬರುತ್ತದೆ. ಅದು ಪರಮಾತ್ಮನ ಮಹಿಮೆಯನ್ನು ಸತ್ಯ, ಅನಾರೋಪಿತ ಎನ್ನುತ್ತಿದೆ.

ಉಪಾಧಿಕೃತ ಧರ್ಮವೆಂದರೆ ಉಪಾಧಿಜನ್ಯವಾದ ಧರ್ಮ ಎನ್ನುವ ಪಕ್ಷದಲ್ಲಿ, ಉಪಾಧಿ ಜನ್ಯ ಧರ್ಮವು ಸತ್ಯವಾಗುವುದರಿಂದ ಸಗುಣಶ್ರುತಿಯು ಔಪಾಧಿಕ ಧರ್ಮವನ್ನು ಹೇಳಿದರೂ ಅದಕ್ಕೆ ಅಪ್ರಾಮಾಣ್ಯಬರುವುದಿಲ್ಲ. ಪರಮಾತ್ಮನ ಮಹಿಮೆ ಸತ್ಯವೆಂದೆನ್ನುವ ಶ್ರುತಿಯ ವಿರೋಧವೂ ಬರುವುದಿಲ್ಲ. ಆದರೂ ಉಪಾಧಿಜನ್ಯವೆಂದ ಮೇಲೆ ಬ್ರಹ್ಮಧರ್ಮಗಳು ಅನಿತ್ಯವೆಂದಾಗುವುದು. ಆಗ 'ಏಷ ನಿತ್ಯೋ ಮಹಿಮಾ ಬ್ರಾಹ್ಮಣಸ್ಯ' ಎಂದು ಧರ್ಮನಿತ್ಯತ್ವ ಪ್ರತಿಪಾದಕ ಶ್ರುತಿಯ ವಿರೋಧ ಬರುತ್ತದೆ.

**ಅಂತಃಕರಣಾದಿರೂಪೋಪಾಧಿಸೃಷ್ಟೇಃ ಪ್ರಾಗೇವ ಈಕ್ಷಿತೃತ್ವಾದಿ ಶ್ರುತೇಶ್ಚ ।**
**'ಸ್ವಾಭಾವಿಕೀ ಜ್ಞಾನ ಬಲ ಕ್ರಿಯಾ ಚ' ಇತ್ಯಾದಿ ಶ್ರುತೇಶ್ಚ ।**

ಅಂತಃಕರಣಾದಿ ರೂಪವಾದ ಉಪಾಧಿಗಳ ಸೃಷ್ಟಿಗೆ ಮೊದಲೇ 'ತದೈಕ್ಷತ' ಎಂದು ಈಕ್ಷಿತೃತ್ವಾದಿಗಳನ್ನು ಶ್ರುತಿಯು ವರ್ಣಿಸುವುದರಿಂದ ಬ್ರಹ್ಮಧರ್ಮವಾದ ಈಕ್ಷಿತೃತ್ವಾದಿಗಳು ಉಪಾಧಿಜನ್ಯವಲ್ಲವೆಂದೇ ಸಿದ್ಧವಾಗುತ್ತದೆ. 'ತದೈಕ್ಷತ ಬಹು ಸ್ಯಾಂ ಪ್ರಜಾಯೇಯೇತಿ' ಬ್ರಹ್ಮನು 'ಪ್ರಪಂಚ ಸೃಷ್ಟಿಮಾಡಿ ಪ್ರಪಂಚದೊಳಗೆ ನಿಯಾಮಕಬಹುರೂಪಗಳಿಂದ ವ್ಯಕ್ತನಾಗುವೆನೆಂ'ದು ಸಂಕಲ್ಪಮಾಡಿ ಅನ್ನಸೃಷ್ಟಿ ಮಾಡಿ 'ಅನ್ನಮಶಿತಂ ತ್ರೇಧಾ ಭವತಿ ಯೋಽಣಿಷ್ಠಸ್ತನ್ಮನಃ' 'ಅನ್ನ ಉಂಡಿದ್ದು ಸಾರ ಮಧ್ಯ ಮಲ ಭಾಗಗಳೆಂದು ಮೂರು ಭಾಗವಾದಾಗ ಅತ್ಯಂತ ಸೂಕ್ಷ್ಮವಾದ ಸಾರಭಾಗವು ಮನಸ್ಸಾಗಿ ಉತ್ಪನ್ನವಾಗುವುದು' ಎನ್ನುತ್ತ ಅಂತಃಕರಣಾದಿ ರೂಪವಾದ ಉಪಾಧಿಯನ್ನು ಸೃಷ್ಟಿ ಮಾಡುತ್ತಾನೆ ಎಂದು ಶ್ರುತಿಯು ಮುಂದೆ ಹೇಳುತ್ತಿದೆ. ಹೀಗೆ ಉಪಾಧಿಸೃಷ್ಟಿಗೆ ಮುನ್ನ ಈಕ್ಷಿತೃತ್ವಾದಿ ಬ್ರಹ್ಮಧರ್ಮಗಳಿದ್ದುವು ಎನ್ನುವುದರಿಂದ ಬ್ರಹ್ಮಧರ್ಮಗಳು ಉಪಾಧಿಜನ್ಯವಾಗಿರುವುದು ಶಕ್ಯವಿಲ್ಲ.

'ಅಂತಃಕರಣಾದಿ ಉಪಾಧಿ ಇಲ್ಲದಿದ್ದರೂ ಅನಾದಿಯಾದ ಅವಿದ್ಯಾರೂಪ ಉಪಾಧಿಯಿಂದಲೇ ಉಪಾಧಿಜನ್ಯ ಈಕ್ಷಿತೃತ್ವಾದಿ ಬ್ರಹ್ಮಧರ್ಮಗಳು ಅಂತಃಕರಣಾದಿ ಸೃಷ್ಟಿಗೆ ಪೂರ್ವದಲ್ಲಿರಬಹುದು' ಎಂದರೆ ಇದು ಅಪಸಿದ್ಧಾಂತ. ಮತ್ತು ಪರಮಾತ್ಮನ ಜ್ಞಾನಬಲಕ್ರಿಯೆಗಳೆಲ್ಲವೂ ಸ್ವಾಭಾವಿಕ' ಎನ್ನುವ ಶ್ವೇತಾಶ್ವತರೋಪನಿಷತ್ತಿನ ವಿರೋಧವೂ ಬರುತ್ತದೆ. ಜ್ಞಾನಾದಿಗಳು ಅವಿದ್ಯೋಪಾಧಿಕವೆಂದರೆ ಉಪನಿಷತ್ತು ಹೇಳುವಂತೆ ಸ್ವಾಭಾವಿಕವಾಗಲಾರವು.

**ನ ಚ ಯೋಗಲಬ್ಧ ಯೋಗಿ ಶಕ್ತ್ಯಾದಿ ವೈಧರ್ಮ್ಯಮಾತ್ರೇಣ ತದುಕ್ತಿಃ। ಸಂಕೋಚಕಾಭಾವೇನ, ಉಕ್ತ ನಿತ್ಯತ್ವ ಶ್ರುತ್ಯನುಸಾರೇಣ, ಸ್ವಾಭಾವಿಕ ಜ್ಞಾನ ಸಮಭಿವ್ಯಾಹಾರೇಣ ಚ ಉಪಾಧಿ ಮಾತ್ರ ನಿಷೇಧಾತ್ ।**

'ಬ್ರಹ್ಮನ ಧರ್ಮಗಳು ಔಪಾಧಿಕವೇ ಆದರೂ ಶ್ರುತಿಯು ಅವುಗಳನ್ನು 'ಸ್ವಾಭಾವಿಕ' ಎನ್ನುವುದು ಅವು ನಿತ್ಯ ಎನ್ನುವ ಅಭಿಪ್ರಾಯದಿಂದಲ್ಲ. 'ಯೋಗಾಭ್ಯಾಸದಿಂದ ಪ್ರಯತ್ನಪಟ್ಟು ಸಂಪಾದಿಸಿದ್ದಲ್ಲ, ಸಹಜವಾಗಿ ಬಂದಿರುವಂಥವು' ಎಂದು ಅಭಿಪ್ರಾಯ. ಯೋಗಿಗಳು ಯೋಗಾಭ್ಯಾಸದಿಂದ ಪಡೆಯುವ ಯೋಗಶಕ್ತಿಯಂತೆ ಬ್ರಹ್ಮನ ಜ್ಞಾನ ಬಲ ಕ್ರಿಯೆಗಳು ಪ್ರಯತ್ನದಿಂದ ಸಂಪಾದಿಸಿದ್ದಲ್ಲ ಎಂಬ ವೈಷಮ್ಯ ಮಾತ್ರವೇ ಇಲ್ಲಿ ಶ್ರುತಿಗೆ ಅಭಿಪ್ರೇತವಾಗಿದೆ' ಎಂದರೆ ಅದು ಸರಿಯಲ್ಲ.

'ಸ್ವಾಭಾವಿಕ' ಎಂಬ ಶಬ್ದ 'ಯಾವ ಉಪಾಧಿಯಿಂದಲೂ ಪಡೆದುದಲ್ಲ, ನಿತ್ಯ' ಎಂದು ಸ್ವರಸವಾಗಿ ಹೇಳುತ್ತಿರುವಾಗ ಅದನ್ನು ಸಂಕೋಚಮಾಡಿ 'ಯೋಗಾಭ್ಯಾಸದಿಂದ ಪಡೆದುದಲ್ಲ' ಎಂದು ಗ್ರಹಿಸಲು ಕಾರಣವಿಲ್ಲ. ಸಂಕೋಚ ಮಾಡದೆ 'ನಿತ್ಯ'ವೆಂದೇ ಗ್ರಹಿಸಬೇಕು.

'ಜ್ಞಾನಂ ನಿತ್ಯಂ ಕ್ರಿಯಾ ನಿತ್ಯಾ ಬಲಂ ಶಕ್ತಿಃ ಪರಾತ್ಮನಃ' ಎಂದು ಪರಮಾತ್ಮನ ಎಲ್ಲ ಜ್ಞಾನಾದಿ ಧರ್ಮಗಳನ್ನೂ ಪ್ರತ್ಯೇಕವಾಗಿ ನಿತ್ಯ ಎನ್ನುತ್ತಿರುವ ಶ್ರುತಿ ಇರುವಾಗ ಸ್ವಾಭಾವಿಕತ್ವವನ್ನು ಸಂಕೋಚಮಾಡುವುದು ಉಚಿತವಲ್ಲ.

ಈಕ್ಷಿತೃತ್ವ ಅಂದರೆ ಈಕ್ಷಣಕ್ರಿಯಾ. ಇಂಥ ಕ್ರಿಯೆ ಬ್ರಹ್ಮನಲ್ಲಿ ಒಂದುವೇಳೆ ಅಸ್ವಾಭಾವಿಕ, ಅನಿತ್ಯವಿರಬಹುದೆಂದು ಸಂದೇಹಕ್ಕೆ ಅವಕಾಶವಿದ್ದರೂ ಜ್ಞಾನವು ಸ್ವಾಭಾವಿಕವೆನ್ನುವಲ್ಲಿ ಸಂದೇಹವಿಲ್ಲ. ಅಂಥ ಜ್ಞಾನದೊಂದಿಗೇ ಕ್ರಿಯೆಯನ್ನೂ ಕೂಡ ನಿತ್ಯ ಎಂದು 'ಜ್ಞಾನಂ ನಿತ್ಯಂ ಕ್ರಿಯಾ ನಿತ್ಯಾ' ಎಂದು ಶ್ರುತಿ ಹೇಳುತ್ತಿದೆ. ಜ್ಞಾನವು ಹೇಗೆ ನಿತ್ಯ, ಸ್ವಾಭಾವಿಕವೋ ಹಾಗೇ ಕ್ರಿಯೆಯೂ ನಿತ್ಯ ಸ್ವಾಭಾವಿಕ. 'ಸ್ವಾಭಾವಿಕೀ ಜ್ಞಾನ ಬಲಕ್ರಿಯಾಚ' ಎಂದೂ ಹೇಳುತ್ತ ಕ್ರಿಯಾ ನಿತ್ಯತ್ವ ವಿಷಯದಲ್ಲಿ ಏನೂ ಸಂಕೋಚಮಾಡಬಾರದು. ಯಾವ ಉಪಾಧಿಯೂ ಇಲ್ಲ, ಎಂದು ಉಪಾಧಿ ಮಾತ್ರವನ್ನು, ಅಂದರೆ ಎಲ್ಲ ಉಪಾಧಿಯನ್ನೂ ಶ್ರುತಿಯು ನಿಷೇಧಿಸುತ್ತಿದೆ.

ಹೀಗೆ ನಿರ್ಗುಣಬ್ರಹ್ಮಸಿದ್ಧಿಯ ಉದ್ದೇಶದಿಂದ ಪ್ರಮಾಣಸಿದ್ಧವಾದ ಸ್ವಾಭಾವಿಕತ್ವವನ್ನು ಬ್ರಹ್ಮನ ಈಕ್ಷಿತೃತ್ವಾದಿಗುಣಗಳಿಗೆ ಒಪ್ಪದಿದ್ದರೆ, ಅತಿಪ್ರಸಕ್ತಿ ಇದೆ—

**ಅನ್ಯಥಾ ಬ್ರಹ್ಮಣಃ ಸತ್ವಮೌಪಾಧಿಕಂ ಅಸತ್ವಂ ತು ಸ್ವಾಭಾವಿಕಮಿತಿ ಸ್ಯಾತ್ ।**

ಪ್ರಮಾಣ ಸಿದ್ಧವಾದ ಅನೌಪಾಧಿಕತ್ವವನ್ನು ತಾತ್ವಿಕತ್ವವನ್ನು ಬ್ರಹ್ಮಧರ್ಮಗಳಿಗೆ ಒಪ್ಪದೇ ನಿರ್ಗುಣತ್ವವೇ ಸ್ವಾಭಾವಿಕವೆಂದು ಹೇಳಿದರೆ ಬ್ರಹ್ಮನಲ್ಲಿ ಸತ್ವವು ಔಪಾಧಿಕ, ಅಸತ್ವವೇ ಸ್ವಾಭಾವಿಕವೆಂದಾದೀತು.

**ನ ಚ 'ಅತಾತ್ತ್ವಿಕಾ ಗುಣಾಃ, ಶ್ರುತ್ಯಾ ಗುಣಮಾತ್ರೋಕ್ತ್ಯಾ ತಾತ್ತ್ವಿಕತ್ವಾನುಕ್ತೇಃ' ಇತಿ ವಾಚ್ಯಂ। ನಿತ್ಯತ್ವೋಕ್ತಿ ಸಾಮರ್ಥ್ಯಾತ್, ವಿಷಯಾಬಾಧಲಕ್ಷಣ ಪ್ರಾಮಾಣ್ಯಸ್ಯ ಔತ್ಸರ್ಗಿಕತ್ವಾತ್, 'ಸತ್ಯಃ ಸೋ ಅಸ್ಯ ಮಹಿಮಾ' ಇತ್ಯಾದಿ ಶ್ರುತೇಶ್ಚ ತತ್ಸಿದ್ಧೇಃ।**

'ಬ್ರಹ್ಮನ ಗುಣಗಳು ಬ್ರಹ್ಮನಲ್ಲಿ ಆರೋಪಿತವಾದವುಗಳೆಂದೇ ಹೇಳುತ್ತೇನೆ. ಉಪಾಧಿ ಇಲ್ಲದ್ದರಿಂದ ಸೋಪಾಧಿಕ ಭ್ರಮದಿಂದ ಆರೋಪಿತವಾಗಿರದಿದ್ದರೂ ನಿರುಪಾಧಿಕಭ್ರಮದಿಂದ ಆರೋಪಿತವಾಗಿರಲು ಶಕ್ಯವಿದೆ. ಹೀಗಾಗಿ ಬ್ರಹ್ಮನ ಗುಣಗಳು ತಾತ್ತ್ವಿಕವಲ್ಲ. ಶ್ರುತಿಯಿಂದ ಗುಣಗಳು ತಾತ್ತ್ವಿಕವೆಂದು ಸಿದ್ಧವಾಗುವುದಿಲ್ಲ. 'ಗುಣಗಳಿವೆ' ಎಂದು ಮಾತ್ರ ಅದು ಹೇಳುತ್ತದೆ. 'ಗುಣಗಳು ತಾತ್ತ್ವಿಕ' ಎಂದೇನೂ ಹೇಳುವುದಿಲ್ಲ'–ಎಂದು ಅದ್ವೈತಿ ಹೇಳಿದರೆ ಸಮಾಧಾನ ಹೀಗೆ— ಶ್ರುತಿಯು ಕೇವಲ 'ಗುಣಗಳಿವೆ' ಎಂದಿಲ್ಲ. 'ಗುಣಗಳು ನಿತ್ಯ' ಎಂದಿದೆ. ಅನಿತ್ಯವಾಗಿದ್ದರೆ ಜ್ಞಾನನಿವರ್ತ್ಯತ್ವರೂಪಮಿಥ್ಯಾತ್ವಕ್ಕೆ ಅವಕಾಶವಿರುತ್ತಿತ್ತು. 'ನಿತ್ಯ' ಎಂದಿದ್ದರಿಂದ ಮಿಥ್ಯಾತ್ವಕ್ಕೆ ಅವಕಾಶವಿಲ್ಲ, ತಾತ್ತ್ವಿಕವೆಂದೇ ಒಪ್ಪಬೇಕು.

ಮತ್ತು 'ಬ್ರಹ್ಮನಲ್ಲಿ ಗುಣಗಳಿವೆ' ಎನ್ನುವ ಮಾತೇ ಗುಣಗಳು ತಾತ್ತ್ವಿಕ ಎಂಬ ಅಂಶವನ್ನು ಸಿದ್ಧ ಮಾಡಿಕೊಡಬಲ್ಲದು. ಏಕೆಂದರೆ ಪ್ರಾಮಾಣ್ಯವು ಸ್ವತಃ, ಬಾಧವಿಲ್ಲದಿದ್ದರೆ ಅಬಾಧಿತಾರ್ಥತ್ವರೂಪ ಪ್ರಾಮಾಣ್ಯವಿದ್ದೇ ಇರುತ್ತದೆ. ಅದು ಔತ್ಸರ್ಗಿಕ. ಬಾಧವಿಲ್ಲದಿದ್ದರೆ ಈ ನಿಯಮಕ್ಕೆ ಕುಂದಿಲ್ಲ. ಆದರಿಂದ 'ಗುಣಗಳು ಅಬಾಧಿತ, ಸತ್ಯ' ಎಂದೇ ಶ್ರುತಿಯಿಂದ ಸಿದ್ಧವಾಗುತ್ತದೆ. 'ಸತ್ಯ' ಎಂದು ಕಂಠತಃ ಹೇಳಬೇಕಾಗಿರುವುದಿಲ್ಲ.

ಹೀಗೆ ಶ್ರುತಿ ಬೋಧಿತವಾದ ಗುಣಗಳನ್ನು ಅತಾತ್ತ್ವಿಕ ಎಂದರೆ 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಎಂದು ಶ್ರುತ್ಯುಕ್ತವಾಗಿರುವ ಬ್ರಹ್ಮಸತ್ಯತ್ವವನ್ನು ಅತಾತ್ತ್ವಿಕವೆಂದೇಕೆ ಹೇಳಬಾರದು? 'ತತ್ತ್ವಮಸಿ' ಎಂದು ಹೇಳಿದ ಜೀವಬ್ರಹ್ಮೈಕ್ಯವನ್ನು ಅತಾತ್ತ್ವಿಕವೆಂದೇಕೆ ಹೇಳಬಾರದು?

ಶ್ರುತಿಯು ಬ್ರಹ್ಮಧರ್ಮಗಳ ಸತ್ಯತ್ವವನ್ನು 'ಸತ್ಯಃ ಸೋ ಅಸ್ಯ ಮಹಿಮಾ' ಎಂದು ಕಂಠತಃ ಹೇಳಿದ್ದೂ ಉಂಟು.

ಈ ಸತ್ಯತ್ವವೂ 'ಪಾರಮಾರ್ಥಿಕ ಸತ್ಯತ್ವವಲ್ಲ, ವ್ಯಾವಹಾರಿಕ' ಎಂದಾದರೆ 'ಸತ್ಯಂ ಜ್ಞಾನಂ' ಎಂದು ಹೇಳಿದ ಬ್ರಹ್ಮಸತ್ಯತ್ವವೂ 'ತತ್ತ್ವಮಸಿ' ಎಂದು ಹೇಳಿದ ಐಕ್ಯವೂ ಹಾಗೇ ಎಂದಾದೀತು ತಾತ್ತ್ವಿಕವಾಗದಿದ್ದೀತು–

**ಅನ್ಯಥಾ 'ಸತ್ಯಂ ಜ್ಞಾನಂ' 'ತತ್ತ್ವಮಸಿ' ಇತ್ಯಾದಿ ಶ್ರುತ್ಯುಕ್ತಂ ಬ್ರಹ್ಮಸತ್ತ್ವ–ಐಕ್ಯಾದಿಕಂ ಅಪಿ ತಾತ್ತ್ವಿಕಂ ನ ಸ್ಯಾತ್।**

ಶ್ರುತಿಗೆ ಸ್ವತಃ ಪ್ರಾಪ್ತವಾದ ಪ್ರಾಮಾಣ್ಯವು ಬಾಧಕದಿಂದ ಅಪೋದಿತವಾಗಬಹುದು. ಏಕೆಂದರೆ ಅದು ಔತ್ಸರ್ಗಿಕ. ಬಾಧಕವಿಲ್ಲದಿರುವಾಗ ಮಾತ್ರ ಪ್ರಾಮಾಣ್ಯವು ನಿಯಮೇನ

ಪ್ರಾಪ್ತವಾಗುವುದು. ಪ್ರಕೃತ ಬ್ರಹ್ಮಧರ್ಮಗಳಿಗೆ ನಿತ್ಯತ್ವವನ್ನು ಸತ್ಯತ್ವವನ್ನು ಹೇಳುವ ಶ್ರುತಿಪ್ರಾಮಾಣ್ಯವೂ ನಿರ್ಗುಣಶ್ರುತಿರೂಪ ಬಾಧಕದಿಂದ ಅಪೋದಿತವಾಗುತ್ತದೆ ಎಂದರೆ—

**ನಿರ್ಗುಣಶ್ರುತಿವಿರೋಧಸ್ತು ಉದ್ಧರಿಷ್ಯತೇ ।**

ಸಗುಣಶ್ರುತಿಗೆ ನಿರ್ಗುಣಶ್ರುತಿಬಾಧವನ್ನು ಮುಂದಿನ 'ನಿರ್ಗುಣೇ ಪ್ರಮಾಣಭಂಗಃ' ಎಂಬ ಪ್ರಕರಣದಲ್ಲಿ ನಿರಾಕರಿಸುತ್ತೇವೆ.



किंच तद्विरोधेऽपि श्रुतेर्नातात्त्विकविषयता युक्ता । उक्तं हि-

''को हि मीमांसको ब्रूयाद्विरोधे शास्त्रयोर्मिथः ।
एकं प्रमाणमितरत्त्वप्रमाणं भवेदिति ।।'' इति ।

तथाहि पूर्वतंत्रे प्राप्तबाधोऽप्राप्तबाधश्चेति द्विविधो वाध उक्तः । तत्र दाशमिके प्राप्तबाधे प्रकृतिवत्कुर्यादित्यादिरूपस्य प्राप्तस्य चोदकादेः कृष्णलादाववघातवर्जमित्यादिरूपः संकोच एव ।

एवं तार्तीयेऽप्यप्राप्तबाधे गार्हपत्यमिति द्वितीयाश्रुत्यनुसारेणेंद्र-शब्दप्रयुक्तमंत्रलिगस्य गार्हपत्ये गौणत्वादिकमेव ।

एवं व्याकरणेऽपि परेण पूर्वस्य नित्येनानित्यस्य अंतरंगेण बहिरंगस्य प्रतिपदोक्तेन लक्षणोक्तस्येत्यादिर्बाध उक्तः । तत्रापि संकोच एव ।

एवं ब्रह्ममीमांसायामपि ''विकारशब्दान्नेति चेन्न प्राचुर्यात्, उपदेशभेदान्नेति चेन्नोभयस्मिन्नप्यविरोधात्, गौण्यसंभवात्'' इत्यादौ शास्त्रयोर्विरोधे तात्त्विकार्थांतरत्वमेवोक्तं नत्वारोपितार्थत्वम् । अन्यथेक्षत्याद्यधिकरणेषु सिद्धांतसाधकानां ईक्षणादीनां सांख्या-द्यभिमतप्रधानादावारोपसंभवात् क्वापि सिद्धांतो न सिध्येदिति सर्वमपि शास्त्रमुन्मूलितं स्यात् ।

**चोदकादेरिति** ।। अतिदेशस्येत्यर्थः ।। **अप्राप्तबाधे इति** ।। निरपेक्षतया झटिति प्रवृत्तया गार्हपत्यमिति द्वितीयाश्रुत्या ''कदाचन स्तरीरसि'' इतिमंत्रस्य गार्हपत्योपस्थाने विनियुक्तत्वेन चरमप्रवृत्तलैंगिकविनियोगस्याप्राप्तत्वात्तार्तीयोऽप्राप्तबाध इति भावः ।। **परेण पूर्वस्येति** ।। शृणोतेर्मिपि कृते ''श्रुवः शृ च'' इति शृशास्त्रेण शृभावे श्नुप्रत्यये च सति श्नुप्रत्ययोकारस्य ''लोपश्चास्यान्यतरस्यां म्वोः'' इति पूर्वसूत्रेण लोपे प्राप्ते श्नुप्रत्ययोकारस्य ''सार्वधातुकार्धधातुकयोः''इति परशास्त्रेण गुण एव भवतीति परेण पूर्वस्य संकोच एव कल्पितः।

एवं 'भूयादि'त्यत्र भवतेराशिषि लिङि सति ''सार्वधातुकार्धधातुकयोः'' इति धातोरुवर्णस्य गुणे प्राप्ते ''यासुट् परस्मैपदेषूदात्तो ङिच्च'' इति यासुडेव भवति। कृते अकृतेऽपिच गुणे यासुटः प्राप्तिसत्त्वेन तस्य नित्यत्वात्, गुणविधायकसार्वधातुकेत्यादिशास्त्रस्य तु ''किदाशिषि'' इति यासुटः कित्त्वेन ''क्ङिति च'' इति गुणनिषेधेन प्राप्तेरनित्यत्वात् । तथाच नित्येन शास्त्रेणानित्यस्य तदतिरिक्तविषयत्वं क्लृप्तम् ।

भवंतीत्यत्र भू अंतीति स्थिते 'कर्तरि शप्' इति शप्प्रत्यये च सति शबकारस्य 'अतो गुणे' इति प्रथमं पररूपे प्राप्ते सार्वधातुकार्धधातुकयोरिति शब्निमित्तो गुण एव प्रथमं भवत्यंतरंगत्वात् । जाते गुणे बहिरंगं पररूपमित्यंतरंगेण बहिरंगस्य बाध आश्रितः ।

तथा भारतस्य श्रवणमित्यत्र कर्मणि द्वितीया इति प्राप्तायाः द्वितीयायाः 'कर्तृकर्मणोः कृति' इति प्रतिपदविहितया षष्ठ्या संकोचोऽभ्युपगतः । तथाऽत्रापि संकोच एव न्याय्यः । नतु बाध इति भावः ।।

**तात्विकार्थांतरपरत्वमेवेति** ।। आनंदमयाधिकरणे अन्नमयादिषु पंचस्वपि विकारवाचकमयटामन्नमयादीनां ब्रह्मत्वप्रतिपादक ब्रह्मशब्दादीनां च विरोधे प्राप्ते 'विकारशब्दान्नेति चेन्न प्राचुर्यात्' इति सूत्रेण मयटां तात्विकप्राचुर्यार्थत्वमंगीकृत्य विरोधः परिहृतः ।

एवं ''छंदोऽभिधानान्नेति चेन्न तथा चेतोऽर्पणनिगदात्तथाहि दर्शनम्'' इत्यधिकरणे ''त्रिपादस्यामृतं दिवि'' इत्यनेन शास्त्रेण गायत्र्या द्युस्थितत्वमुच्यते। ''परो दिवो ज्योतिर्दीप्यते विश्वतः पृष्ठेषु सर्वतः पृष्ठेषु'' इति शास्त्रेण ज्योतिषो द्युपरत्वम्। अतो गायत्रीज्योतिषोरुपदेशभेदः। अतो विरुद्धधर्मप्रतिपादकत्वात्तयोर्विरोधे प्राप्ते एकस्यैव परमात्मनः श्वेतद्वीपानंतासनादिद्युस्थत्वं मेरुसूर्यमंडलाद्युपरिस्थितत्वं च युज्यत इति तात्त्विकार्थमंगीकृत्यैव ''उपदेशभेदान्नेति चेन्नोभयस्मिन्नप्यविरोधात्'' इत्यनेन सूत्रेण समाधानं कृतम्।

तथा ''न वियदश्रुतेः'' इत्यधिकरणे ''अनादिर्वायमाकाशः'' इति शास्त्रस्य ''आत्मन आकाशः संभूतः'' इत्याकाशोत्पत्त्यावेदकश्रुत्या विरोधप्राप्तौ ''गौण्यसंभवात्'' इति सूत्रेण आकाशस्य पराधीनविशेषलाभलक्षणोत्पत्तिप्रतिपादकश्रुतेः सर्वविषयत्वान्मुख्यार्थत्वं तदनुत्पत्तिश्रुतेस्तु गौणार्थत्वमिति तात्त्विकार्थमंगीकृत्यैवाविरोधः समर्थितः। एवं सगुणनिर्गुणश्रुत्योर्विरोधप्राप्तौ तात्त्विकार्थमंगीकृत्यैवाविरोधनयनं कर्तव्यमित्यर्थः। ईक्षत्याद्यधिकरणेत्यादिशब्देन ''अंतस्तद्धर्मोपदेशात्'' इत्यधिकरणपरिग्रहः।



**ಕಿಂ ಚ ತದ್ವಿರೋಧೇಽಪಿ ಶ್ರುತೇಃ ನಾತಾತ್ತ್ವಿಕ ವಿಷಯತಾ ಯುಕ್ತಾ। ಉಕ್ತಂ ಹಿ–**
**ಕೋ ಹಿ ಮೀಮಾಂಸಕೋ ಬ್ರೂಯಾತ್ ವಿರೋಧೇ ಶಾಸ್ತ್ರಯೋರ್ಮಿಥಃ।**
**ಏಕಂ ಪ್ರಮಾಣಂ, ಇತರತ್ ತು ಅಪ್ರಮಾಣಂ ಭವೇದಿತಿ? ಇತಿ।**

ಸಗುಣ ಶ್ರುತಿಗೆ ನಿರ್ಗುಣಶ್ರುತಿ ವಿರೋಧವಿದ್ದರೂ ಆ ವಿರೋಧದಿಂದ ಸಗುಣ ಶ್ರುತಿಯು ಅತಾತ್ತ್ವಿಕಗುಣವಿಷಯಕವೆನಿಸುವುದು ಯುಕ್ತವಲ್ಲ. 'ಎರಡು ಶಾಸ್ತ್ರವಚನಗಳಿಗೆ ಪರಸ್ಪರ ವಿರೋಧ ಬಂದಾಗ ಒಂದು ಪ್ರಮಾಣ, ತಾತ್ತ್ವಿಕವಿಷಯಕ, ಇನ್ನೊಂದು ಅಪ್ರಮಾಣ, ಅತಾತ್ತ್ವಿಕವಿಷಯಕ ವೆಂದಾಗುವುದೆಂದು ವೇದವಿಚಾರ ಮಾಡುವವನು ಯಾರು ತಾನೆ ಹೇಳುತ್ತಾನೆ?' ಎಂದು ಮೀಮಾಂಸಾವಾರ್ತಿಕದಲ್ಲಿ ಉಕ್ತವಾಗಿದೆ.

**ತಥಾಹಿ ಪೂರ್ವತಂತ್ರೇ ಪ್ರಾಪ್ತಬಾಧೋಽಪ್ರಾಪ್ತಬಾಧಶ್ಚೇತಿ ದ್ವಿವಿಧೋ ಬಾಧ ಉಕ್ತಃ। ತತ್ರ ದಾಶಮಿಕೇ ಪ್ರಾಪ್ತಬಾಧೇ 'ಪ್ರಕೃತಿವತ್ ಕುರ್ಯಾತ್' ಇತ್ಯಾದಿ ರೂಪಸ್ಯ ಪ್ರಾಪ್ತಸ್ಯ ಚೋದಕಾದೇಃ ಕೃಷ್ಣಲಾದೌ ಅವಘಾತವರ್ಜಂ ಇತ್ಯಾದಿರೂಪಃ ಸಂಕೋಚ ಏವ।**

ಪೂರ್ವಮೀಮಾಂಸಾಶಾಸ್ತ್ರದಲ್ಲಿ ಪ್ರಾಪ್ತಬಾಧ ಮತ್ತು ಅಪ್ರಾಪ್ತಬಾಧವೆಂದು ಎರಡು

ಬಗೆಯ ಬಾಧ ಉಕ್ತವಾಗಿದೆ. ಅವುಗಳಲ್ಲಿ ದಶಮಾಧ್ಯಾಯೋಕ್ತವಾದ ಪ್ರಾಪ್ತಬಾಧದಲ್ಲಿ ಶಾಸ್ತ್ರವಚನಕ್ಕೆ ಅರ್ಥಸಂಕೋಚ ಮಾತ್ರ ವಿಹಿತವಾಗಿದೆ, ಹೊರತು, ಅಪ್ರಾಮಾಣ್ಯವನ್ನು ಹೇಳುವುದಲ್ಲ. ಉದಾ: ವಿಧೇಃ ಪ್ರಕರಣಾಂತರೇಽತಿದೇಶಾತ್ ಸರ್ವಕರ್ಮಸ್ಯಾತ್ (ಜೈಮಿನಿ ಸೂತ್ರ 10.1.1) ಎಂಬ ಅಧಿಕರಣದಲ್ಲಿ ವಿಚಾರ— 'ಪ್ರಾಜಾಪತ್ಯಂ ಘೃತೇ ಚರುಂ ನಿರ್ವಪೇತ್ ಶತಕೃಷ್ಣಲಂ ಆಯುಷ್ಕಾಮಃ' 'ನೂರು ಚಿನ್ನದ ಗುಲಗುಂಜಿಗಳ ಚರುವನ್ನು ಘೃತದಲ್ಲಿ ಪಾಕಮಾಡಿ ಪ್ರಜಾಪತಿಗೆ ಹೋಮಿಸಿದರೆ ಆಯುಷ್ಯವೃದ್ಧಿ' ಎಂದು ಶ್ರುತಿ ಇದೆ.

ಇಲ್ಲಿ ಪೂರ್ವಪಕ್ಷ—ಚರುಪಾಕ ಮಾಡುವುದಕ್ಕೆ ಮೊದಲಿಗೆ ಅವಘಾತ ಮಾಡಬೇಕು ಅಂದರೆ, ಧಾನ್ಯವನ್ನು ಕುಟ್ಟಿ ಹೊಟ್ಟು ತೆಗೆಯಬೇಕು ಎಂಬುದು ಚೋದಕವಾಕ್ಯದಿಂದ, ಅಂದರೆ 'ಪ್ರಕೃತಿಯಂತೆ ವಿಕೃತಿಯನ್ನು ಅನುಷ್ಠಾನಮಾಡಬೇಕು' ಎನ್ನುವ ಅತಿದೇಶವಾಕ್ಯದಿಂದ ಪ್ರಾಪ್ತವಾಗುತ್ತದೆ. ಚಿನ್ನದ ಗುಲಗುಂಜಿಯಲ್ಲಿ ಹೊಟ್ಟು ಇಲ್ಲ. ಕುಟ್ಟುವುದೇಕೆ? ಕುಟ್ಟಿ ಹೊಟ್ಟು ತೆಗೆಯುವುದು ಹೇಗೆ? ಪಾಕವೂ ಇಲ್ಲ. ಆದರೂ 'ಘೃತೇ ನಿರ್ವಪೇತ್' ಎಂಬ ವಚನವಿದೆ. ಅದಕ್ಕನುಸಾರ ಪಾಕ ಮಾಡುತ್ತೇವೆ. ಹಾಗೇ ಚೋದಕವಾಕ್ಯಾನುಸಾರ 'ಅವಘಾತ' ಅಂದರೆ ಕುಟ್ಟುವುದೂ ಅದೃಷ್ಟಾರ್ಥವಾಗಿ ಮಾಡಬೇಕು, ಆವಶ್ಯಕವೆ.

ಸಿದ್ಧಾಂತ—ಹೊಟ್ಟು ತೆಗೆಯುವುದು ಅಶಕ್ಯವಾದ್ದರಿಂದ ಅವಘಾತ ಬಾಧಿತವಾಗುತ್ತದೆ. ಚೋದಕದಲ್ಲಿ 'ಪ್ರಕೃತಿವತ್‌ಕುರ್ಯಾತ್' 'ವಿಕೃತಿಯಾಗದಲ್ಲಿ ಅಂಗಗಳನ್ನು ಪ್ರಕೃತಿಯಾಗದಲ್ಲಿ ಹೇಳಿದಂತೆ ಮಾಡಬೇಕು' ಎಂದು ಸಾಮಾನ್ಯವಾಗಿ ಹೇಳಿದೆ. ಆದಕ್ಕೆ ಅವಘಾತವನ್ನು ಹೊರತುಪಡಿಸಿ ಬೇರೆ ಅಂಗಗಳನ್ನು ಪ್ರಕೃತಿಯಂತೆ ಅನುಷ್ಠಾನ ಮಾಡಬೇಕು ಎಂದು ಅರ್ಥಸಂಕೋಚ ಮಾಡಬೇಕು' ಎಂದು.

ಇಲ್ಲಿ 'ಪ್ರಕೃತಿಯಂತೆ ಮಾಡಬೇಕೆ'ನ್ನುವ ಚೋದಕವಾಕ್ಯಕ್ಕೆ ಸರ್ವಥಾಬಾಧವನ್ನು ಶಾಸ್ತ್ರಕಾರರು ಒಪ್ಪಿಲ್ಲ. ಅರ್ಥಸಂಕೋಚ ಮಾಡಬೇಕೆಂದಿದ್ದಾರೆ. ಪ್ರಕೃತ ನಿರ್ಗುಣ ಶ್ರುತಿಗನುಸಾರ ಸಗುಣ ಶ್ರುತಿಗಾಗಲಿ ಸಗುಣ ಶ್ರುತ್ಯನುಸಾರ ನಿರ್ಗುಣಶ್ರುತಿಗಾಗಲಿ ಅರ್ಥಸಂಕೋಚಮಾಡಿ ತಾತ್ವಿಕವಾದ ಅರ್ಥವನ್ನೇ ಹೇಳಬೇಕು ಹೊರತು ಅತಾತ್ವಿಕಾರ್ಥವನ್ನು ಹೇಳಬಾರದು.

**ಏವಂ ತಾರ್ತೀಯೇಽಪ್ಯಪ್ರಾಪ್ತಬಾಧೇ ಗಾರ್ಹಪತ್ಯಮಿತಿ ದ್ವಿತೀಯಾಶ್ರುತ್ಯನುಸಾರೇಣ ಇಂದ್ರಶಬ್ದ ಪ್ರಯುಕ್ತ ಮಂತ್ರಲಿಂಗಸ್ಯ ಗಾರ್ಹಪತ್ಯೇ ಗೌಣತ್ವಾದಿಕಮೇವ ।**

ತೃತೀಯಾಧ್ಯಾಯೋಕ್ತ ಬಾಧವು ಅಪ್ರಾಪ್ತಬಾಧ. ವಿರೋಧಿಯು ಪ್ರಾಪ್ತವಾಗದಂತೆ ಮಾಡುವುದು ಅಪ್ರಾಪ್ತಬಾಧ. ಉದಾ: 'ಕದಾಚನಸ್ತರೀರಸಿ ನೇಂದ್ರ ಸಶ್ಚಸಿ ದಾಶುಷೇ' ಎಂಬ ಐಂದ್ರಮಂತ್ರವು ಗಾರ್ಹಪತ್ಯೋಪಸ್ಥಾನದಲ್ಲಿ ವಿನಿಯುಕ್ತವಾಗಿದೆ, 'ಐಂದ್ರ್ಯಾಗಾರ್ಹಪತ್ಯಮುಪತಿಷ್ಠತೇ' ಎಂದು.

ವಿನಿಯೋಗದಲ್ಲಿ ಪ್ರಮಾಣಗಳು ಶ್ರುತಿ ಲಿಂಗ ವಾಕ್ಯ ಪ್ರಕರಣ ಸ್ಥಾನ ಸಮಾಖ್ಯಾಗಳೆಂದು ಆರು. ಇವು ಕ್ರಮವಾಗಿ ಹೆಚ್ಚು ಹೆಚ್ಚು ವಿಲಂಬದಿಂದ ಪ್ರವೃತ್ತಿ ಮಾಡುವವುಗಳು. ಏಕೆಂದರೆ ಲಿಂಗಾದಿಗಳು ಶ್ರುತ್ಯಾದಿಗಳನ್ನು ಕಲ್ಪಿಸಿಯೇ ತದ್ದ್ವಾರಾ ಮಂತ್ರಗಳನ್ನು ಆಯಾ ಅಂಗಗಳಲ್ಲಿ ವಿನಿಯೋಗ ಮಾಡಬಲ್ಲವು. ಶ್ರುತಿಯು ತಾನೇ ವಿನಿಯೋಗ ಮಾಡುತ್ತದೆ. ಪ್ರಕೃತ 'ಗಾರ್ಹಪತ್ಯಂ' ಉಪತಿಷ್ಠತೇ ಎಂಬಲ್ಲಿ ದ್ವಿತೀಯಾಶ್ರುತಿಯು ವಿನಿಯೋಗದಲ್ಲಿ ಪ್ರಮಾಣ. ಮಂತ್ರವನ್ನು ಗಾರ್ಹಪತ್ಯೋಪಸ್ಥಾನದಲ್ಲಿ ವಿನಿಯೋಗ ಮಾಡುತ್ತದೆ. ಮಂತ್ರದಲ್ಲಿ 'ನೇಂದ್ರ ಸಶ್ಚಸಿ ದಾಶುಷೇ' ಎಂಬಲ್ಲಿ ಇಂದ್ರಶಬ್ದವಿರುವುದರಿಂದ ಮಂತ್ರಕ್ಕೆ ಇಂದ್ರಪ್ರಕಾಶನ ಸಾಮರ್ಥ್ಯರೂಪ ಲಿಂಗವಿದೆ. ಇಂದ್ರಶಬ್ದಪ್ರಯುಕ್ತವಾಗಿರುವ ಈ ಮಂತ್ರಲಿಂಗವೆಂಬ ಪ್ರಮಾಣವು ಸ್ವತಃ ಮಂತ್ರವನ್ನು ಇಂದ್ರೋಪಸ್ಥಾನದಲ್ಲಿ ವಿನಿಯೋಗ ಮಾಡಲಾರದು. 'ಐಂದ್ರ್ಯಾ ಇಂದ್ರಮುಪತಿಷ್ಠತೇ' ಎಂದು ಬೇರೆಯೆ ಒಂದು ದ್ವಿತೀಯಾ ಶ್ರುತಿಯನ್ನು ಕಲ್ಪನೆ ಮಾಡಬೇಕಾಗು ತ್ತದೆ. ಆ ಕಲ್ಪಿತ ಶ್ರುತಿಯು ಇಂದ್ರೋಪಸ್ಥಾನದಲ್ಲಿ ಮಂತ್ರವನ್ನು ವಿನಿಯೋಗ ಮಾಡಬೇಕು. ಆದರೆ ಅಷ್ಟರೊಳಗೆ 'ಗಾರ್ಹಪತ್ಯಂ' ಎಂಬಲ್ಲಿರುವ ಪ್ರತ್ಯಕ್ಷದ್ವಿತೀಯಾಶ್ರುತಿಯು ಮಂತ್ರವನ್ನು ಗಾರ್ಹಪತ್ಯೋಪಸ್ಥಾನಕ್ಕೆ ಅಂಗವಾಗಿ ವಿನಿಯೋಗ ಮಾಡಿರುತ್ತದೆ. ಈಗ ವಿರೋಧಿಯಾದ ಲೈಂಗಿಕ ವಿನಿಯೋಗಕ್ಕೆ ಪ್ರಾಪ್ತಿಯೆ ಇಲ್ಲ. ಪ್ರಾಪ್ತಿ ಇಲ್ಲದಂತೇ ಮಾಡಿಬಿಟ್ಟಿದೆ, ಶ್ರೌತ ವಿನಿಯೋಗ. ಇದು ಅಪ್ರಾಪ್ತಬಾಧ.

ಇಲ್ಲಿ ಈ ಅಪ್ರಾಪ್ತ ಬಾಧವು ಮಂತ್ರದಲ್ಲಿರುವ ಇಂದ್ರ ಶಬ್ದವನ್ನು ಗೌಣವಾಗಿಸಿ ಗಾರ್ಹಪತ್ಯಪರವಾಗುವಂತೆ ಮಾಡುತ್ತದೆ ಹೊರತು ಅಪ್ರಮಾಣವಾಗಿ ಮಾಡುವುದಿಲ್ಲ. ಇಂದ್ರಪ್ರತಿಪಾದನಸಾಮರ್ಥ್ಯವನ್ನೇ ನಿಷೇಧಿಸುವುದಿಲ್ಲ. ಗೌಣ ಇಂದ್ರಪ್ರತಿಪಾದನ ಸಾಮರ್ಥ್ಯ ವನ್ನುಂಟುಮಾಡುತ್ತದೆ. ಹೀಗೆ ಪೂರ್ವಮೀಮಾಂಸಾದಲ್ಲಿ 'ಗಾರ್ಹಪತ್ಯಂ' ಎನ್ನುವ ದ್ವಿತೀಯಾಶ್ರುತ್ಯನುಸಾರವಾಗಿ ಇಂದ್ರಶಬ್ದಪ್ರಯುಕ್ತವಾದ ಮಂತ್ರಲಿಂಗಕ್ಕೆ ಗಾರ್ಹಪತ್ಯವಿಷಯದಲ್ಲಿ ಗೌಣತ್ವಕಲ್ಪನೆಯನ್ನೇ ಹೇಳಿದೆ.

ವ್ಯಾಕರಣದಲ್ಲಿಯೂ ಪರಸೂತ್ರದಿಂದ ಪೂರ್ವಸೂತ್ರಕ್ಕೆ, ನಿತ್ಯಕಾರ್ಯದಿಂದ ಅನಿತ್ಯ ಕಾರ್ಯಕ್ಕೆ, ಅಂತರಂಗಕಾರ್ಯದಿಂದ ಬಹಿರಂಗಕಾರ್ಯಕ್ಕೆ, ಪ್ರತಿಪದೋಕ್ತಕಾರ್ಯದಿಂದ ಲಕ್ಷಣೋಕ್ತಕಾರ್ಯಕ್ಕೆ ಬಾಧವೆಂದರೆ ಸಂಕೋಚವೇ ಉಕ್ತವಾಗಿದೆ, ಅಪ್ರಾಮಾಣ್ಯವಲ್ಲ—

**ಏವಂ ವ್ಯಾಕರಣೇಽಪಿ ಪರೇಣ ಪೂರ್ವಸ್ಯ, ನಿತ್ಯೇನ ಅನಿತ್ಯಸ್ಯ, ಅಂತರಂಗೇಣ ಬಹಿರಂಗಸ್ಯ, ಪ್ರತಿಪದೋಕ್ತೇನ ಲಕ್ಷಣೋಕ್ತಸ್ಯೇತ್ಯಾದಿ ಬಾಧ ಉಕ್ತಃ। ತತ್ರಾಪಿ ಸಂಕೋಚ ಏವ।**

ಉದಾಹರಣೆ : 'ಶೃಣೋಮಿ' ರೂಪಸಿದ್ಧಿ ಮಾಡುವಾಗ ಶ್ರು ಶ್ರವಣೇ ಧಾತುವಿಗೆ ಮಿಪ್‌ಪ್ರತ್ಯಯ. 'ಶ್ರುವಃ ಶೃ ಚ' ಎಂಬ ಸೂತ್ರದಂತೆ ಶ್ರುವಿಗೆ ಶೃ ಆದೇಶ. ಶ್ನು ವಿಕರಣ ಪ್ರತ್ಯಯ. 'ಲೋಪಶ್ಚಾಸ್ಯಾನ್ಯತರಸ್ಯಾಂ ಮ್ವೋಃ' ಎಂಬ ಪೂರ್ವಸೂತ್ರದಿಂದ ಶ್ನುವಿನ ಉಕಾರಕ್ಕೆ ಲೋಪ

ಪ್ರಾಪ್ತವಾದಾಗ 'ಸಾರ್ವಧಾತುಕಾರ್ಧಧಾತುಕಯೋಃ' ಎಂಬ ಪರಸೂತ್ರದಿಂದ ಗುಣವೇ ಬರುತ್ತದೆ. 'ಶೃಣೋಮಿ' ಎಂದಾಗುತ್ತದೆ. ಇಲ್ಲಿ ಪರಸೂತ್ರದಿಂದ ಪೂರ್ವಸೂತ್ರಕ್ಕೆ ಸಂಕೋಚವೇ ಬಾಧ.

'ಭೂಯಾತ್' ರೂಪಸಿದ್ಧಿಯಲ್ಲಿ ಭೂಧಾತುವಿಗೆ ಆಶೀರ್ಲಿಙ್. 'ಸಾರ್ವಧಾತುಕಾರ್ಧ ಧಾತುಕಯೋಃ' ಎಂದು ಧಾತುವಿನ ಉವರ್ಣಕ್ಕೆ ಗುಣ ಪ್ರಾಪ್ತವಾದಾಗ ಅದನ್ನು ಬಾಧಿಸಿ 'ಯಾಸುಟ್ ಪರಸ್ಮೈಪದೇಷೂದಾತ್ತೋ ಙಿಚ್ಚ' ಎಂದು ಯಾಸುಟ್ ಆಗಮವೇ ಬರುತ್ತದೆ. ಏಕೆಂದರೆ ಸಾರ್ವಧಾತುಕಾರ್ಧ ಧಾತುಕ ಗುಣ ಮಾಡಿದರೂ ಮಾಡದ್ದಿದರೂ ಯಾಸುಟ್ ಆಗಮ ಪ್ರಾಪ್ತಿ ಇದ್ದೇ ಇರುವುದರಿಂದ ಅದು ನಿತ್ಯ. ಗುಣಕಾರ್ಯ ನಿತ್ಯವಲ್ಲ. 'ಕಿದಾಶಿಷಿ' ಎಂಬಂತೆ ಯಾಸುಟ್ ಕಿತ್ತಾದ್ದರಿಂದ 'ಕ್‌ಙಿತಿ ಚ' ಎಂಬ ಸೂತ್ರಪ್ರಕಾರ ಗುಣ ನಿಷೇಧ ಬರುತ್ತದೆ. ಆದರಿಂದ ಗುಣ ಅನಿತ್ಯ. ಹೀಗಾಗಿ ನಿತ್ಯಕಾರ್ಯ ಪ್ರಾಪ್ತವಾಗುವಲ್ಲಿ ಆ ಸ್ಥಳವನ್ನು ಬಿಟ್ಟು ಬೇರೆ ಕಡೆಯೇ ಅನಿತ್ಯಸೂತ್ರ ಪ್ರವೃತ್ತಿ ಮಾಡುತ್ತದೆ. ಹೀಗೆ ಅನಿತ್ಯಸೂತ್ರಕ್ಕೆ ಸಂಕೋಚವೇ ಬಾಧ.

'ಭವಂತಿ' ರೂಪ ಸಿದ್ಧಿಯಲ್ಲಿ ಭೂ ಅಂತಿ ಎಂದಿರುವಾಗ 'ಕರ್ತರಿ ಶಪ್' ಎಂದು ಶಪ್ ಪ್ರತ್ಯಯ. ಶಪ್‌ನ ಅಕಾರಕ್ಕೆ 'ಅತೋ ಗುಣೇ' ಎಂದು ಪರರೂಪ ಮೊದಲಿಗೆ ಪ್ರಾಪ್ತವಾದರೂ ಸಾರ್ವಧಾತುಕಾರ್ಧಧಾತುಕಯೋಃ ಎಂಬಂತೆ ಶಪ್ ನಿಮಿತ್ತವಾಗಿ ಗುಣವೇ ಮೊದಲಿಗೆ ಬರುತ್ತದೆ. ಏಕೆಂದರೆ ಅದು ಅಂತರಂಗ. ಅಂತರಂಗ ಗುಣಕಾರ್ಯವು ಬಂದಬಳಿಕವೇ ಬಹಿರಂಗ ಪರರೂಪಕಾರ್ಯ. ಹೀಗೆ ಅಂತರಂಗ ಗುಣಕಾರ್ಯವು ಬಹಿರಂಗ ಪರರೂಪಕಾರ್ಯವನ್ನು ಬಾಧಿಸುತ್ತದೆ.

'ಭಾರತಸ್ಯ ಶ್ರವಣಂ' 'ಭಾರತವನ್ನು ಕೇಳುವುದು' ಎಂಬಲ್ಲಿ ಕರ್ಮಣಿ ದ್ವಿತೀಯಾ ಪ್ರಾಪ್ತವಾದರೂ ಅದಕ್ಕೆ ಬಾಧಕವಾಗಿ ಕರ್ತೃಕರ್ಮಣೋಃಕೃತಿ ಎಂದು ಪ್ರತಿಪದವಿಹಿತವಾದ ಷಷ್ಠೀವಿಭಕ್ತಿಯೇ ಬರುತ್ತದೆ. ಲಕ್ಷಣೋಕ್ತವಾದ ದ್ವಿತೀಯಾಕ್ಕೆ ಸಂಕೋಚ ಉಂಟಾಗುತ್ತದೆ.

ಹೀಗೇ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿಯೂ ಕೂಡ 'ವಿಕಾರಶಬ್ದಾನ್ನೇತಿ ಚೇನ್ನ ಪ್ರಾಚುರ್ಯಾತ್' ಎಂದು ಆನಂದಮಯಾಧಿಕರಣ ಗುಣಸೂತ್ರ. ಅನ್ನಮಯಾದಿ ಶಬ್ದಗಳಲ್ಲಿ ಐದರಲ್ಲಿಯೂ ವಿಕಾರವಾಚಕ ಮಯಟ್‌ಪ್ರತ್ಯಯಗಳು ಬಂದಿವೆ. ಅನ್ನಮಯಾದಿಗಳಿಗೆ ಬ್ರಹ್ಮತ್ವ ಪ್ರತಿಪಾದಕವಾದ ಬ್ರಹ್ಮಶಬ್ದಗಳೂ ಬಂದಿವೆ. ಇವುಗಳಿಗೆ ವಿರೋಧ ಬಂದರೆ 'ವಿಕಾರ ಶಬ್ದಾನ್ನೇತಿ ಚೇನ್ನ ಪ್ರಾಚುರ್ಯಾತ್' ಸೂತ್ರದಿಂದ ಮಯಟ್‌ಪ್ರತ್ಯಯಗಳಿಗೆ ಆರೋಪಿತವಿಕಾರಾರ್ಥ ಮಾಡದೆ ತಾತ್ವಿಕವಾದ ಪ್ರಾಚುರ್ಯಾರ್ಥತ್ವವನ್ನೇ ಇಟ್ಟುಕೊಂಡು ವಿರೋಧ ಪರಿಹಾರ ಮಾಡಿದ್ದಾರೆ.

'ಛಂದೋಭಿಧಾನಾನ್ನೇತಿ ಚೇನ್ನ ತಥಾ ಚೇತೋರ್ಪಣ ನಿಗದಾತ್ ತಥಾಹಿ ದರ್ಶನಂ' ಎಂಬ ಅಧಿಕರಣದಲ್ಲಿ 'ತ್ರಿಪಾದಸ್ಯಾಮೃತಂ ದಿವಿ' ಎಂಬ ಶ್ರುತಿಯು ಗಾಯತ್ರಿಗೆ ದ್ಯುಸ್ಥಿತತ್ವವನ್ನು

ಹೇಳುತ್ತದೆ. 'ಪರೋ ದಿವೋ ಜ್ಯೋತಿ ದೀರ್ಪ್ಯತೇ ವಿಶ್ವತಃ ಪೃಷ್ಠೇಷು ಸರ್ವತಃ ಪೃಷ್ಠೇಷು' ಎಂಬ ಶ್ರುತಿಯಲ್ಲಿ ಜ್ಯೋತಿಗೆ ದಿವಃ ಪರತ್ವ ಉಕ್ತವಾಗಿದೆ. ಹೀಗೆ ಗಾಯತ್ರಿ–ಜ್ಯೋತಿಗಳಿಗೆ ಉಪದೇಶ ಭೇದದಿಂದ ವಿರುದ್ಧಧರ್ಮ ಪ್ರತಿಪಾದನೆ ಇರುವುದರಿಂದ ವಿರೋಧ, ಆದರಿಂದ ಇಲ್ಲಿ ಒಂದೇ ವಸ್ತು ಉಕ್ತವಾಗುತ್ತಿಲ್ಲ, ಎಂದರೆ, ಒಬ್ಬನೇ ಪರಮಾತ್ಮನಿಗೆ ಶ್ವೇತದ್ವೀಪ ಅನಂತಾಸನ ವೈಕುಂಠರೂಪ ದ್ಯುಸ್ಥಿತತ್ವವೂ ಮೇರು ಸೂರ್ಯಮಂಡಲ ಬ್ರಹ್ಮಸದನಗಳೆಂಬ ದ್ಯುಲೋಕಗಳಿಗಿಂತ ಮೇಲಿರುವುದೂ ಕೂಡುತ್ತದೆ ಎಂದು, ಆರೋಪಿತಾರ್ಥವಿಟ್ಟುಕೊಳ್ಳದೇ ತಾತ್ತ್ವಿಕಾರ್ಥವಿಟ್ಟುಕೊಂಡೇ 'ಉಪದೇಶಭೇದಾನ್ನೇತಿ ಚೇನ್ನೋಭಯಸ್ಮಿನ್ನಪ್ಯವಿರೋಧಾತ್' ಎಂಬ ಸೂತ್ರದಿಂದ ವಿರೋಧ ಪರಿಹಾರ ಮಾಡಿದ್ದುಂಟು.

'ನ ವಿಯದಶ್ರುತೇಃ' ಎಂಬ ಅಧಿಕರಣದಲ್ಲಿ 'ಅನಾದಿರ್ವಾ ಅಯಮಾಕಾಶಃ' ಎಂಬ ಶ್ರುತಿ ಆಕಾಶಕ್ಕೆ ಉತ್ಪತ್ತಿ ಇಲ್ಲವೆನ್ನುತ್ತಿದೆ, 'ಆತ್ಮನ ಆಕಾಶಃ ಸಂಭೂತಃ ಎಂಬ ಶ್ರುತಿ ಆಕಾಶಕ್ಕೆ ಉತ್ಪತ್ತಿ ಇದೆ ಎನ್ನುತ್ತಿದೆ, ಇದು ವಿರೋಧ. ಅದಕ್ಕೆ 'ಗೌಣ್ಯಸಂಭವಾತ್' ಎಂಬ ಸೂತ್ರ ಸಮಾಧಾನ ಹೇಳುತ್ತದೆ. ಆಕಾಶಕ್ಕೆ ಪರಾಧೀನ ವಿಶೇಷಾವಾಪ್ತಿರೂಪವಾದ ಉತ್ಪತ್ತಿಯನ್ನು 'ಆತ್ಮನ ಆಕಾಶಃ ಸಂಭೂತಃ' ಶ್ರುತಿ ಹೇಳುತ್ತಿದೆ. ಈ ಶ್ರುತಿಗೆ ಸರ್ವವಿಷಯವಾದ್ದರಿಂದ ಮುಖ್ಯಾರ್ಥತ್ವವಿದೆ. 'ಅನಾದಿರ್ವಾ ಅಯಮಾಕಾಶಃ' ಎಂಬ ಅನುತ್ಪತ್ತಿಶ್ರುತಿ ಗೌಣಾರ್ಥಕವಾದ್ದರಿಂದ ವಿರೋಧವಿಲ್ಲ. ಹೀಗೆ ಆರೋಪಿತ ಉತ್ಪತ್ತ್ಯರ್ಥವಿಟ್ಟುಕೊಳ್ಳದೆ ತಾತ್ತ್ವಿಕ ಅಮುಖ್ಯಾರ್ಥವನ್ನು ಅಂಗೀಕರಿಸಿಯೇ 'ಗೌಣ್ಯಸಂಭವಾತ್' ಸೂತ್ರವು ವಿರೋಧಪರಿಹಾರ ಮಾಡಿದ್ದುಂಟು. ಹೀಗೆಯೇ ಸಗುಣನಿರ್ಗುಣ ಶ್ರುತಿಗಳಿಗೆ ವಿರೋಧ ಬಂದಾಗ ತಾತ್ತ್ವಿಕಾರ್ಥವನ್ನು ಅಂಗೀಕರಿಸಿಯೇ ಪರಿಹಾರ ಮಾಡಬೇಕು.

ಹೀಗೆ ಒಪ್ಪದಿದ್ದಲ್ಲಿ 'ಯಃ ಸರ್ವಜ್ಞಃ' ಶ್ರುತಿ ಆರೋಪಿತ ಸಾರ್ವಜ್ಞಾರ್ಥಕವೆನ್ನುವಂತೆ 'ಈಕ್ಷತೇರ್ನಾಶಬ್ದಂ' 'ಅಂತಸ್ತದ್ಧರ್ಮೋಪದೇಶಾತ್' ಎಂಬ ಅಧಿಕರಣಗಳಲ್ಲಿ ಸಿದ್ಧಾಂತ ಸಾಧಕವಾದ 'ತದೈಕ್ಷತ' ಎಂದು ಶ್ರುತಿಸಿದ್ಧವಾದ ಈಕ್ಷಣಕರ್ತೃತ್ವವು ಸಾಂಖ್ಯಾಭಿಮತ ಪ್ರಧಾನದಲ್ಲಿ ಆರೋಪಿತವಾಗಿ ಇದೆ, ಸರ್ವಪಾಪರಾಹಿತ್ಯವೂ ಸಂಸಾರ್ಯಾತ್ಮನಲ್ಲಿ ಆರೋಪಿತವಾಗಿ ಇದೆ, ಎಂದು ಪೂರ್ವಪಕ್ಷಿ ಹೇಳಬಹುದು. ಪ್ರಧಾನವು ಜಗತ್ಕಾರಣವೆನ್ನಲು ಬಾಧಕವಿಲ್ಲ ಎನ್ನಬಹುದು. ಆಗ 'ತಾತ್ತ್ವಿಕ ಈಕ್ಷಣವೇ ಶ್ರುತ್ಯರ್ಥ, ಅದು ಪ್ರಧಾನದಲ್ಲಿ ಇಲ್ಲ, ಬ್ರಹ್ಮನಲ್ಲಿಯೇ ಇದೆ. ಬ್ರಹ್ಮನೇ ಜಗತ್ಕಾರಣ' ಎಂದು ಸಿದ್ಧಾಂತಿಯು ಈಕ್ಷತ್ಯಧಿಕರಣದಲ್ಲಿ ಪೂರ್ವಪಕ್ಷ ನಿರಾಸ ಮಾಡಬೇಕಾಗುತ್ತದೆ. ಅಂತರಧಿಕರಣದಲ್ಲಿ ಸರ್ವಪಾಪರಾಹಿತ್ಯವೂ ಅಕ್ಷ್ಯಾದಿತ್ಯಸ್ಥತ್ವವೂ ಸಂಸಾರಿಜೀವನದಲ್ಲಿ ಆರೋಪಿತವಾಗಿ ಕೂಡಬಹುದು ಎಂದು ಪೂರ್ವಪಕ್ಷಿ ಹೇಳಿದರೆ ತಾತ್ತ್ವಿಕವೇ ಶ್ರುತ್ಯರ್ಥ, ಅದು ಸಂಸಾರಿಯಲ್ಲಿಲ್ಲ, ಪರಮೇಶ್ವರನಲ್ಲಿಯೇ ಇದೆ ಎಂದೇ ಸಿದ್ಧಾಂತಿಯು ಪೂರ್ವಪಕ್ಷ ನಿರಾಸ ಮಾಡಬೇಕಾಗುತ್ತದೆ—

**ಏವಂ ಬ್ರಹ್ಮಮೀಮಾಂಸಾಯಾಮಪಿ 'ವಿಕಾರ ಶಬ್ದಾನ್ನೇತಿಚೇನ್ನ ಪ್ರಾಚುರ್ಯಾತ್' 'ಉಪದೇಶ ಭೇದಾನ್ನೇತಿ ಚೇನ್ನೋಭಯಸ್ಮಿನ್ನಪ್ಯವಿರೋಧಾತ್' 'ಗೌಣ್ಯಸಂಭವಾತ್' ಇತ್ಯಾದೌ ಶಾಸ್ತ್ರಯೋರ್ವಿರೋಧೇ ತಾತ್ವಿಕಾರ್ಥಾಂತರತ್ವಮೇವೋಕ್ತಂ, ನ ತು ಆರೋಪಿತಾರ್ಥತ್ವಂ। ಅನ್ಯಥಾ ಈಕ್ಷತ್ಯಾದ್ಯಧಿಕರಣೇಷು ಸಿದ್ಧಾಂತ ಸಾಧಕಾನಾಂ ಈಕ್ಷಣಾದೀನಾಂ ಸಾಂಖ್ಯಾದ್ಯಭಿಮತ ಪ್ರಧಾನಾದೌ ಆರೋಪಸಂಭವಾತ್ ಕ್ವಾಪಿ ಸಿದ್ಧಾಂತೋ ನ ಸಿಧ್ಯೇತ್. ಇತಿ ಸರ್ವಮಪಿ ಶಾಸ್ತ್ರಂ ಉನ್ಮೂಲಿತಂ ಸ್ಯಾತ್।**

ಹೀಗೆ ಬ್ರಹ್ಮಮೀಮಾಂಸೆಯಲ್ಲಿಯೂ

ವಿಕಾರಶಬ್ದಾನ್ನೇತಿ ಚೇನ್ನ ಪ್ರಾಚುರ್ಯಾತ್

ಉಪದೇಶ ಭೇದಾನ್ನೇತಿ ಚೇನ್ನೋಭಯಸ್ಮಿನ್ನಪ್ಯವಿರೋಧಾತ್

ಗೌಣ್ಯಸಂಭವಾತ್

ಇತ್ಯಾದಿ ಸೂತ್ರಗಳಲ್ಲಿ ಶಾಸ್ತ್ರಗಳಿಗೆ ವಿರೋಧ ಬಂದಾಗ ಅವುಗಳಿಗೆ ತಾತ್ವಿಕವಾದ ಅರ್ಥಾಂತರತ್ವವೇ ಉಕ್ತವಾಗಿದೆ ಹೊರತು ಆರೋಪಿತಾರ್ಥತ್ವವಲ್ಲ. ಆರೋಪಿತಾರ್ಥತ್ವವನ್ನು ಹೇಳಿ ವಿರೋಧ ಪರಿಹಾರ ಮಾಡುವುದಾದರೆ ಈಕ್ಷತ್ಯಧಿಕರಣಾದಿಗಳಲ್ಲಿ ಸಿದ್ಧಾಂತ ಸಾಧಕವಾದ ಈಕ್ಷಣಾದಿಗಳು ಸಾಂಖ್ಯಾದ್ಯಭಿಮತ ಪ್ರಧಾನಾದಿಗಳಲ್ಲಿ ಆರೋಪಿತವಾಗಿ ಕೂಡುವುದರಿಂದ ಎಲ್ಲಕಡೆ ಪೂರ್ವಪಕ್ಷವೇ ಸ್ಥಿರವಾಗಿ ನಿಲ್ಲಬಹುದು, ಸಿದ್ಧಾಂತ ಎಲ್ಲಿಯೂ ಸಿದ್ಧವಾಗದೇ ಹೋದೀತು. ಆದರಿಂದ ಎಲ್ಲ ಶಾಸ್ತ್ರವೂ ನಿರ್ಮೂಲವಾದೀತು.

**ವಿಶೇಷ ವಿಚಾರ**—ಅದ್ವೈತ ಭಾಷ್ಯಪ್ರಕಾರವೂ ಕೂಡ 'ವಿಕಾರ ಶಬ್ದಾನ್ನೇತಿ ಚೇನ್ನ ಪ್ರಾಚುರ್ಯಾತ್' ಮುಂತಾದ ಸೂತ್ರಗಳಲ್ಲಿ ಶ್ರುತಿಗಳಿಗೆ ತಾತ್ವಿಕಾರ್ಥವೇ ಉಕ್ತವಾಗಿದೆ.

'ವಿಕಾರಶಬ್ದಾನ್ನೇತಿ ಚೇನ್ನ ಪ್ರಾಚುರ್ಯಾತ್' ಎಂಬ ಸೂತ್ರದಲ್ಲಿ ಅದ್ವೈತಿ ರೀತಿಯಿಂದ 'ಬ್ರಹ್ಮ ಪುಚ್ಛಂ ಪ್ರತಿಷ್ಠಾ' ಎಂಬ ವಾಕ್ಯದಲ್ಲಿ ಹೇಳಿದ ಬ್ರಹ್ಮವು 'ವಿಕಾರಶಬ್ದಾನ್ನ' ವಿಕಾರಶಬ್ದವಿರುವುದರಿಂದ, ಮುಖ್ಯ ಬ್ರಹ್ಮವಲ್ಲ. 'ವಿಕಾರ' ಎಂದರೆ ಅವಯವ. 'ಪುಚ್ಛವೆಂಬ ಅವಯವವುಳ್ಳದ್ದು ಬ್ರಹ್ಮ' ಎಂದು 'ಬ್ರಹ್ಮ ಪುಚ್ಛಂ ಪ್ರತಿಷ್ಠಾ' ಶ್ರುತ್ಯರ್ಥ. ಮುಖ್ಯವಾದ ನಿರ್ಗುಣಬ್ರಹ್ಮವು ಅವಯವಿಯಲ್ಲವಾದ್ದರಿಂದ ಅಮುಖ್ಯಬ್ರಹ್ಮನೇ ಇಲ್ಲಿ ಶ್ರುತಿಪ್ರತಿಪಾದ್ಯ.' ಎಂದು ಪೂರ್ವಪಕ್ಷ.

**ಸಿದ್ಧಾಂತ**—'ಪ್ರಾಚುರ್ಯಾತ್' ಪ್ರಾಚುರ್ಯವಿರುವುದರಿಂದ, ಅಂದರೆ ಪ್ರಾಯಪಾಠವಿರುವುದರಿಂದ ಮುಖ್ಯಬ್ರಹ್ಮನೆ ಇಲ್ಲಿ ಪ್ರತಿಪಾದ್ಯ. ಅನ್ನಮಯ ಪ್ರಾಣಮಯ ಮನೋಮಯ ವಿಜ್ಞಾನಮಯಗಳಲ್ಲಿ ಶಿರ ಆದಿ ಪುಚ್ಛಾಂತ ಅವಯವಗಳು ಹಿಂದೆ ಉಕ್ತವಾಗಿವೆ. ಈ ಪ್ರಾಯಪಾಠಾನುಸಾರ ಆನಂದಮಯನಲ್ಲಿಯೂ ಶಿರ ಆದಿ ಪುಚ್ಛಾಂತ ಅವಯವ

ಉಕ್ತವಾಗುತ್ತಿದೆ. ಆದರಿಂದ ಅದು ನಿರ್ಗುಣಕ್ಕೆ ವಿರೋಧಿಯಲ್ಲ. ಮತ್ತು ಪುಚ್ಛ ಎಂದರೆ ಅಧಿಕರಣ. ಪ್ರಕೃತದಲ್ಲಿ ಆರೋಪಾಧಿಷ್ಠಾನ ಎಂದು ಲಕ್ಷಣಯಾ ಉಕ್ತವಾಗಿದೆ. ಹೀಗಾಗಿ ಆನಂದಮಯದ ಆರೋಪಕ್ಕೆ ಶುದ್ಧಬ್ರಹ್ಮ ಆರೋಪಾಧಿಷ್ಠಾನವಾಗಿದೆ ಎಂದು ಶ್ರುತಿಯ ಅಭಿಪ್ರಾಯ ಎಂದು ಸಿದ್ಧಾಂತ. ಇಲ್ಲಿ ಪುಚ್ಛಶಬ್ದಕ್ಕೆ ಅವಯವರೂಪ ಮುಖ್ಯಾರ್ಥತ್ಯಾಗಮಾಡಿದರೂ ಆರೋಪಾಧಿಷ್ಠಾನ ವೆಂದು ತಾತ್ವಿಕ ಅರ್ಥಾಂತರವನ್ನೇ ಲಕ್ಷಣಯಾ ಹೇಳಿದ್ದಾರೆ, ಹೊರತು, ಆರೋಪಿತಾವಯವಾರ್ಥತ್ವವನ್ನಲ್ಲ.

'ಉಪದೇಶಭೇದಾನ್ನೇತಿ ಚೇನ್ನೋಭಯಸ್ಮಿನ್ನಪ್ಯವಿರೋಧಾತ್' ಎಂಬಲ್ಲಿಯೂ ಹೀಗೆ ಶ್ರುತಿಗೆ ತಾತ್ವಿಕ ಅರ್ಥಾಂತರವನ್ನೇ ಮಾಡಿದ್ದಾರೆ. 'ತ್ರಿಪಾದಸ್ಯಾಮೃತಂ ದಿವಿ' ಎಂದು ಸಪ್ತಮೀವಿಭಕ್ತಿಯಿಂದ 'ಗಾಯತ್ರಿಯು ದ್ಯುಲೋಕದಲ್ಲಿದೆ' ಎನ್ನುತ್ತ ದ್ಯುಲೋಕಕ್ಕೆ ಆಧಾರತ್ವ ಉಕ್ತವಾಗಿದೆ. 'ಅಥ ಯದತಃ ಪರೋ ದಿವಃ' 'ದ್ಯುಲೋಕದಿಂದ ಮೇಲೆ' ಎಂದು ಪಂಚಮೀ ವಿಭಕ್ತಿಯಿಂದ 'ದ್ಯುಲೋಕದಿಂದಾಚೆಗೆ' ಎನ್ನುತ್ತ ದ್ಯುಲೋಕಕ್ಕೆ ಮರ್ಯಾದಾತ್ವ ಉಕ್ತವಾಗಿದೆ. ಹೀಗೆ ಉಪದೇಶಭೇದವಿರುವುದರಿಂದ ಒಂದೇ ವಸ್ತು ಉಕ್ತವಾಗುತ್ತಿಲ್ಲ. ಎರಡರಲ್ಲಿ ಪರಸ್ಪರ ವಿರೋಧವಿದೆ ಎಂದು ಪೂರ್ವಪಕ್ಷ.

**ಸಿದ್ಧಾಂತ**—ಎರಡರಲ್ಲಿಯೂ ವಿರೋಧವಿಲ್ಲ. 'ಮರದ ತುದಿಯಲ್ಲಿ ಗಿಡುಗವಿದೆ' ಎನ್ನುವುದೂ 'ಮರದ ತುದಿಗಿಂತ ಮೇಲೆ ಗಿಡುಗವಿದೆ' ಎನ್ನುವುದೂ ಒಂದೇ ಗಿಡುಗದ ಬೇರೆಬೇರೆ ಅವಯವ ವಿವಕ್ಷೆಯಿಂದ. ಗಿಡುಗ ಮರದ 'ತುದಿಯಲ್ಲಿದೆ' ಎನ್ನುವುದು ತುದಿಯಲ್ಲಿರುವ ಅವಯವವಿವಕ್ಷೆಯಿಂದ. ತುದಿಗಿಂತಲೂ ಮೇಲೆ ಇರುವ ಅವಯವ ವಿವಕ್ಷೆಯಿಂದ 'ತುದಿಗಿಂತ ಮೇಲೆ' ಇದೆ. ಹಾಗೇ ತ್ರಿಪಾದಸ್ಯಾಮೃತಂ 'ದಿವಿ' 'ದಿವಃ ಪರಃ' ಎಂದು ದ್ಯುಸ್ಥತ್ವ ದಿವಃ ಪರತ್ವಗಳೆರಡೂ ಏಕತ್ರ ಇರಬಹುದು ವಿರೋಧವಿಲ್ಲ, ಎಂದಿದ್ದಾರೆ ಹೊರತು ಒಂದು ತಾತ್ವಿಕ, ಇನ್ನೊಂದು ಅತಾತ್ವಿಕವೆಂದು ವಿರೋಧ ಪರಿಹಾರ ಮಾಡಲಿಲ್ಲ.

ಗೌಣ್ಯಸಂಭವಾತ್ ಎಂಬಲ್ಲಿ ಆಕಾಶಕ್ಕೆ ಉತ್ಪತ್ತಿ ಇಲ್ಲವೆಂದು ಪೂರ್ವಪಕ್ಷ. 'ಆತ್ಮನ ಆಕಾಶಃ ಸಂಭೂತಃ' ಆಕಾಶಕ್ಕೆ ಉತ್ಪತ್ತಿ ಇದೆ ಎಂದು ಸಿದ್ಧಾಂತಿ ಹೇಳಿದಾಗ 'ಸಂಭೂತ ಶಬ್ದವನ್ನು ಗೌಣವೆನ್ನಬೇಕು, ಏಕೆಂದರೆ ಉತ್ಪತ್ತಿಕಾರಣ ಅಸಂಭವಿಯಾದ್ದರಿಂದ' ಎಂದು ಪೂರ್ವಪಕ್ಷಿ ಹೇಳುತ್ತಾನೆ ಹೊರತು 'ಉತ್ಪತ್ತಿ ಶ್ರುತಿಯು ಆರೋಪಿತ ಉತ್ಪತ್ತಿಪರ' ಎನ್ನುವುದಿಲ್ಲ.



**किंच दशमे विकृतिभूतमहापितृयज्ञप्रकरणस्थे ''नार्षेयं वृणीते'' इत्यादिवाक्ये प्रकृतिवत्कुर्यादार्षेयवरणवर्जमिति महापितृयज्ञीयप्रकृतिवच्छब्दैकवाक्यतया पर्युदासार्थत्वमेवेत्युक्त्वा**

**यत्र प्रकृतिभूतदर्शपूर्णमासप्रकरणस्थाज्यभागविधायकवाक्यसंनिहिते ''न तौ पशौ करोति'' इत्यादौ पाशुकप्रकृतिवच्छब्दैकवाक्यत्वायोगेन नञः पर्युदासार्थत्वासंभवात् प्रकृतिवत्कुर्यादाज्यभागौ तु न कुर्यादिति वाक्यभेदेन प्रसज्यप्रतिषेधार्थत्वमेव युक्तम्, तत्र पशावाज्यभागयोरन्येनाप्रसक्तेः शास्त्रप्रसक्तस्य च सर्वथा बाधायोगात् विकल्प इत्युक्तम् ।**

**एवंच यदा प्रतिषेधोन्नीतप्रसक्तेरपि न सर्वथा बाधः तदा किमु वक्तव्यं प्रत्यक्षसगुणशास्त्रप्रमितानां गुणानां न सर्वथा बाध इति ।**

**किंच दशम इति ।।** एतच्च दशमे अष्टमपादे ''अपूर्वे चार्थवादः स्यात्'' इत्यधिकरणे चिंतितम् । ''न तौ पशौ करोति न सोमेऽध्वरे'' इति दर्शपूर्णमासयोराज्यभागौ प्रकृत्य श्रूयते । तत्र न पशाविति नञ् किं पर्युदासः प्रतिषेधो वेति संशये विकल्पपरिहाराय ''नार्षेयं वृणीत'' इत्यादाविव पर्युदास एवेति प्राप्तावुच्यते पर्युदासार्थत्वे अनंतर वृत्ताज्यभागविधिशेषत्वं तावत् न संभवति । तस्य दर्शपूर्णमासमात्रविषयत्वेन पशुसाधारण्याभावात् पशुव्यतिरिक्तत्वस्य च वैयर्थ्येन दर्शपूर्णमासविशेषणत्वायोगात् । नापि पाशुकप्रकृतिवच्छब्दशेषत्वम् । तस्यात्रासन्निधानात् । तच्छेषत्वे न सोमेऽध्वर इत्यर्थवादानन्वयाच्च । नह्येवं भवति यथा सोमस्याज्यभागव्यतिरिक्तमैष्टिकमंगं कर्तव्यं तथा पशोरपीति, तस्यापूर्वत्वादैष्टिकांगाभावात् । संभवति त्वेवं यथा सोमस्याज्यभागौ न कर्तव्यौ तथा पशोरपीति । तस्मात् प्रतिषेधः। तस्य च शास्त्रीयप्राप्त्यपेक्षत्वात् पशावाज्यभागतत्प्रतिषेधयोरगत्या विकल्प इति ।।



ಪೂರ್ವಮೀಮಾಂಸಾ ದಶಮಾಧ್ಯಾಯದ ವಿಕೃತಿಭೂತ ಮಹಾಪಿತೃಯಜ್ಞ ಪ್ರಕರಣದಲ್ಲಿ 'ನಾರ್ಷೇಯಂ ವೃಣೀತೇ' ಇತ್ಯಾದಿ ವಾಕ್ಯದಲ್ಲಿ ನಕಾರವು ಪರ್ಯುದಾಸಾರ್ಥಕವೆ. 'ಆರ್ಷೇಯವರಣವ್ಯತಿರಿಕ್ತ ಅಂಗಗಳನ್ನು ಪ್ರಕೃತಿಯಂತೆಯೆ ಮಾಡಬೇಕು' ಎಂದು ಮಹಾಪಿತೃ ಯಜ್ಞದಲ್ಲಿ ಉಪಸ್ಥಿತವಾಗುವ 'ಪ್ರಕೃತಿವತ್' ಶಬ್ದದೊಂದಿಗೆ ಏಕವಾಕ್ಯವಾಗಿ ಅನ್ವಯಿಸುವ

ಪರ್ಯುದಾಸಾರ್ಥವನ್ನೇ ಅದು ಹೇಳುತ್ತದೆ ಎಂದು ಹೇಳಿ, ಮುಂದೆ, 'ನ ತೌ ಪಶೌ ಕರೋತಿ, ನ ಸೋಮೇಽಧ್ವರೇ' ಎಂಬ ವಾಕ್ಯದಲ್ಲಿ ನಕಾರವು ಪ್ರತಿಷೇಧಾರ್ಥಕವೆಂದಿದೆ. ಏಕೆಂದರೆ ಈ ವಾಕ್ಯ ಪಶುಪ್ರಕರಣಸ್ಥವಲ್ಲವಾದ್ದರಿಂದ ಪಶುಯಾಗ ಸಂಬಂಧಿ 'ಪ್ರಕೃತಿವತ್' ಶಬ್ದವು ಅಲ್ಲಿ ಉಪಸ್ಥಿತವಾಗುವುದಿಲ್ಲವಾದ್ದರಿಂದ ಅದರೊಂದಿಗೆ ಏಕವಾಕ್ಯವಾಗುವಂತೆ ನಕಾರವು ಪರ್ಯುದಾಸಾರ್ಥವನ್ನು ಹೇಳುವುದು ಶಕ್ಯವಿಲ್ಲ. 'ಪ್ರಕೃತಿಯಂತೆಯೇ ಬೇರೆ ಅಂಗಗಳನ್ನು ಅನುಷ್ಠಾನಮಾಡಬೇಕು, ಆಜ್ಯಹೋಮಗಳನ್ನು ಮಾತ್ರ ಮಾಡಬಾರದು' ಎಂದು ಎರಡು ಬೇರೆಬೇರೆ ವಾಕ್ಯಗಳಾಗುವಂತೆ ಪ್ರತಿಷೇಧವೆಂಬ ಅರ್ಥವನ್ನೇ ನಕಾರವು ಹೇಳುವುದು ಯುಕ್ತ.

ಇಲ್ಲಿ ಪಶುಯಾಗದಲ್ಲಿ ಆಜ್ಯಹೋಮಗಳು ಬೇರೆ ಪ್ರಮಾಣದಿಂದ ಪ್ರಸಕ್ತವಾಗಿಲ್ಲ. ಪ್ರತ್ಯಕ್ಷವಾದ ಬೇರೆ ವಾಕ್ಯದಿಂದಲೂ ಪ್ರಸಕ್ತಿ ಇಲ್ಲ. ಆದರೂ 'ನ ಪಶೌ' ಎಂದು ನಿಷೇಧವಿದೆ ಎಂದರೆ ಅವು ಇನ್ನೂ ಬೇರೆಯೇ ಒಂದು ವೇದವಾಕ್ಯದಿಂದ ಪ್ರಸಕ್ತವಾಗಿರಬೇಕೆಂದು ಊಹಿಸಬೇಕಾಗುತ್ತದೆ. ಹೀಗೆ ಒಂದು ವೇದವಾಕ್ಯದಿಂದ ಪ್ರಸಕ್ತವಾದುದನ್ನು ಇನ್ನೊಂದು ವಾಕ್ಯವು ಸರ್ವಥಾ ಬಾಧಿಸು ವಂತಿಲ್ಲ. ಸರ್ವಥಾ ಬಾಧಿಸಿದರೆ ಬಾಧಿತವಾದ ಆ ವೇದವಾಕ್ಯವು ಅಪ್ರಮಾಣವಾದೀತು. ಅಪೌರುಷೇಯವಾದ್ದರಿಂದ ಅದು ಅಶಕ್ಯ. ಆದರಿಂದ ವಿಕಲ್ಪವೆಂದು ಅಂಗೀಕರಿಸಬೇಕು.

'ನ ತೌ ಪಶೌ' ವಾಕ್ಯದಲ್ಲಿ ಪ್ರತಿಷೇಧಕ್ಕೆ ಪ್ರಸಕ್ತಿ ಉಂಟುಮಾಡುವ ವಾಕ್ಯ ಒಂದಿರಲೇಬೇಕೆಂದು ಊಹೆ ಮಾತ್ರವಿದೆ. ಊಹೆ ಮಾತ್ರವಿದ್ದರೂ ಶ್ರುತಿಯು ಸರ್ವಥಾ ನಿಷೇಧಮಾಡದು, ವಿಕಲ್ಪದಿಂದ ಪಾಕ್ಷಿಕವಾಗಿ ಮಾತ್ರ ನಿಷೇಧಮಾಡೀತೆಂದಮೇಲೆ, ಪ್ರತ್ಯಕ್ಷವಾಗಿ ಸಗುಣವಾಕ್ಯಗಳಿಂದ ಗುಣಗಳು ಪ್ರಮಿತವಾಗಿರುವಾಗ ಅವುಗಳನ್ನು ನಿರ್ಗುಣಶ್ರುತಿಯು ಸರ್ವಥಾ ನಿಷೇಧಮಾಡುತ್ತಿದೆ, ಮಿಥ್ಯೆ ಎನ್ನುತ್ತಿದೆ ಎನ್ನಲಾಗದೆಂದು ಬೇರೇನು ಹೇಳಬೇಕು?

**ವಿವರಣೆ** : 'ಪ್ರತಿಷೇಧಃ ಪ್ರದೇಶೇಽನಾರಭ್ಯವಿಧಾನೇ ಚ ಪ್ರಾಪ್ತಪ್ರತಿಷಿದ್ಧತ್ವಾತ್ ವಿಕಲ್ಪಃ ಸ್ಯಾತ್' (ಜೈ.ಸೂ.10.8.1)

'ಪ್ರದೇಶೇ' ಚೋದಕದಿಂದ ಅತಿದೇಶ ಬರುವಾಗ ಶ್ರುತವಾದ 'ನಾರ್ಷೇಯ' ವಾಕ್ಯದಲ್ಲಿಯೂ, ಅನಾರಭ್ಯ ವಿಹಿತವಾದ 'ಯೇಯಜಾಮಹೇ' ಎಂಬಲ್ಲಿರುವ 'ನಾನೂಯಾಜ' ವಾಕ್ಯದಲ್ಲಿಯೂ ಶಾಸ್ತ್ರಪ್ರಾಪ್ತ ಪ್ರತಿಷೇಧವಾದ್ದರಿಂದ ವಿಕಲ್ಪವೇ ಯುಕ್ತವಾಗುವುದು' ಎಂದು ಪೂರ್ವಪಕ್ಷ ಸೂತ್ರಾರ್ಥ.

'ಚಾತುರ್ಮಾಸ್ಯ' ಎಂಬ ಯಾಗಸಮೂಹಾಂತರ್ಗತ ಸಾಕಮೇಧಪರ್ವ ಪ್ರಕರಣದಲ್ಲಿ ಮಹಾಪಿತೃಯಜ್ಞ ವಿಹಿತವಾಗಿದೆ. ಈ ಪ್ರಕರಣದಲ್ಲಿ 'ನಾರ್ಷೇಯಂ ವೃಣೀತೇ' ಎಂದಿದೆ. ಇದು ನಿಷೇಧವೆಂದು ಪೂರ್ವಪಕ್ಷ. ಪರ್ಯುದಾಸವೆಂದು ಸಿದ್ಧಾಂತ.

ಪೂರ್ವಪಕ್ಷಿ ಹೇಳುತ್ತಾನೆ— ಪರ್ಯುದಾಸಪಕ್ಷದಲ್ಲಿ ಆರ್ಷೇಯವರಣ ವ್ಯತಿರಿಕ್ತ ಅಂಗವು

ಕರ್ತವ್ಯ ಎಂದರ್ಥ. 'ಆರ್ಷೇಯ' ನಾಮವೂ 'ವೃಣೀತೇ' ಎಂಬಲ್ಲಿರುವ 'ವೃ'ಧಾತುವೂ ವ್ಯತಿರಿಕ್ತತ್ವದಲ್ಲಿ, ವ್ಯತಿರಿಕ್ತವು ಕರ್ತವ್ಯತಾರೂಪ ವಿಧ್ಯರ್ಥದಲ್ಲಿ ಅನ್ವಯಿಸುತ್ತದೆ. ನಶಬ್ದವು ಲಕ್ಷಣಯಾ ಆರ್ಷೇಯವರಣ ವ್ಯತಿರಿಕ್ತ ಅಂಗಕರ್ಮವನ್ನು ಬೋಧಿಸುತ್ತದೆ. ಇದು ಲಕ್ಷಣಾದೋಷ.

ಪ್ರತಿಷೇಧಪಕ್ಷದಲ್ಲಿ ಈ ದೋಷವಿಲ್ಲ. 'ಪ್ರಕೃತಿವತ್ ವಿಕೃತಿಃ ಕರ್ತವ್ಯಾ' ಎಂಬ ಚೋದಕವಾಕ್ಯದಿಂದ ಪ್ರಸಕ್ತವಾಗಿರುವ ಆರ್ಷೇಯವರಣವನ್ನು ನಶಬ್ದವು ನಿಷೇಧಿಸುತ್ತಿದೆ. 'ವೃಣೀತೇ' ಎಂಬಲ್ಲಿ 'ವೃ'ಧಾತುವಾಗಲಿ 'ಆರ್ಷೇಯ'ನಾಮವಾಗಲಿ ಮುಖ್ಯಾರ್ಥದಲ್ಲಿಯೇ ಇದ್ದು ಅಕರ್ತವ್ಯತ್ವದಲ್ಲಿ ಅನ್ವಯಹೊಂದುತ್ತವೆ. 'ಆರ್ಷೇಯವರಣವು ಕರ್ತವ್ಯವಲ್ಲ' ಎಂದರ್ಥ. ಆದರಿಂದ ನಶಬ್ದವು ಪ್ರತಿಷೇಧಾರ್ಥಕ ಎಂದು ಪೂರ್ವಪಕ್ಷ.

**ಸಿದ್ಧಾಂತ**—ನಶಬ್ದವನ್ನು ಪರ್ಯುದಾಸಾರ್ಥಕವೆಂದಿಟ್ಟುಕೊಳ್ಳಬೇಕು. ನಿಷೇಧಾರ್ಥಕ ವೆಂದಿಟ್ಟುಕೊಂಡರೆ ಚೋದಕದಿಂದ ಪ್ರಾಪ್ತವಾಗುವ 'ಪ್ರಕೃತಿಯಂತೆ ವಿಕೃತಿಯು ಕರ್ತವ್ಯ' ಎನ್ನುವುದು ಬೇರೆ ವಾಕ್ಯ, 'ಆರ್ಷೇಯವರಣವು ಕರ್ತವ್ಯವಲ್ಲ' ಎನ್ನುವುದು ಬೇರೆ ವಾಕ್ಯ. ಹೀಗೆ ವಾಕ್ಯಭೇದ ದೋಷವಿದೆ. ಪರ್ಯುದಾಸಪಕ್ಷದಲ್ಲಿ ಈ ದೋಷವಿಲ್ಲ. 'ಆರ್ಷೇಯವರಣ ವ್ಯತಿರಿಕ್ತವಾದ ಅಂಗಕರ್ಮಗಳನ್ನು ಪ್ರಕೃತಿಯಂತೆಯೇ ವಿಕೃತಿಯಲ್ಲಿ ಮಾಡಬೇಕು' ಎಂದು ಒಂದೇವಾಕ್ಯ.

ಆದರೂ ಪರ್ಯುದಾಸ ಪಕ್ಷದಲ್ಲಿ ಲಕ್ಷಣಾದೋಷವಿದೆ ತಾನೆ? ಎಂದರೆ, ಅದು ಅಲ್ಪದೋಷ. ನಿಷೇಧಪಕ್ಷದಲ್ಲಿ ಬರುವ ವಾಕ್ಯಭೇದವು ದೊಡ್ಡ ದೋಷ. ಮತ್ತು ನಿಷೇಧಪಕ್ಷದಲ್ಲಿ ಚೋದಕರೂಪವಾದ ಶಾಸ್ತ್ರದಿಂದ ಪ್ರಾಪ್ತವಾದುದನ್ನು 'ನಾರ್ಷೇಯಂ ವೃಣೀತೇ' ಎಂದು ಶಾಸ್ತ್ರವು ನಿಷೇಧಿಸಬೇಕಾಗುತ್ತದೆ. ಶಾಸ್ತ್ರವು ಹೇಳಿದ್ದನ್ನು ಶಾಸ್ತ್ರವೇ ನಿಷೇಧಿಸಿದರೆ ಶಾಸ್ತ್ರವು ಉನ್ಮತ್ತಪ್ರಲಾಪ, ಅಪ್ರಮಾಣವೆಂದಾದೀತೆಂದು ಭಯದಿಂದ ಆ ನಿಷೇಧವನ್ನು ಪಾಕ್ಷಿಕವೆಂದು ಸ್ವೀಕರಿಸಬೇಕಾಗುತ್ತದೆ. ಇದು ವಿಕಲ್ಪ, ಅಷ್ಟದೋಷಗಳಿಂದ ದುಷ್ಟವೆನಿಸಿದೆ. ಆದಕ್ಕೆ ಅವಕಾಶ ಬಾರದಿರಬೇಕಾದರೆ ನಶಬ್ದವನ್ನು ಪರ್ಯುದಾಸಾರ್ಥಕವೆಂದೇ ಇಲ್ಲಿ ಸ್ವೀಕರಿಸಬೇಕು ಎಂದು ಸಿದ್ಧಾಂತ.

ಜೈಮಿನಿಸೂತ್ರವು ಹೀಗೆ ಮೊದಲನೆ ಅಧಿಕರಣದಲ್ಲಿ ಪ್ರತ್ಯಕ್ಷಶಾಸ್ತ್ರದಿಂದ ಪ್ರಸಕ್ತಿ ಇರುವಲ್ಲಿ ಸರ್ವಥಾನಿಷೇಧವು ಅಯುಕ್ತವೆಂದು ಹೇಳಿ, ಮುಂದಿನ ಅಧಿಕರಣದಲ್ಲಿ, ನಿಷೇಧದಿಂದ ಅನುಮಿತವಾಗುವ ಶಾಸ್ತ್ರದಿಂದ ಪ್ರಸಕ್ತಿ ಇರುವಲ್ಲಿ ಕೂಡ ಸರ್ವಥಾ ನಿಷೇಧ ಅಯುಕ್ತವೆ ಎನ್ನುತ್ತಿದೆ—

'ಅಪೂರ್ವೇ ಚಾರ್ಥವಾದಃ ಸ್ಯಾತ್' (ಜೈ.ಸೂ.10.8.5)

'ನ ಸೋಮೇಽಧ್ವರೇ' ಎಂದು ಅಪೂರ್ವವಾದ ಸೋಮಯಾಗದಲ್ಲಿ ಆಜ್ಯಹೋಮ ನಿಷೇಧವು ಅರ್ಥವಾದವೆನ್ನುವುದೇ ಯುಕ್ತ' ಎಂದು ಸೂತ್ರಾರ್ಥ.

ದರ್ಶಪೂರ್ಣಮಾಸ ಪ್ರಕರಣದಲ್ಲಿ 'ಅಗ್ನೀಷೋಮಾಭ್ಯಾಂ ಯಜತಿ' ಎಂದು ಅಗ್ನಿ-ಸೋಮ ದೇವತಾಕವಾದ ಎರಡು ಆಜ್ಯಹೋಮಗಳನ್ನು ವಿಧಾನಮಾಡಿ 'ನ ತೌ ಪಶೌ ಕರೋತಿ, ನ ಸೋಮೇಽಧ್ವರೇ' ಎಂದು ಹೇಳುತ್ತಿದೆ. ಇಲ್ಲಿ ನಶಬ್ದಕ್ಕೆ ಹಿಂದಿನ ಅಧಿಕರಣದಲ್ಲಿ 'ನಾರ್ಷೇಯಂ ವೃಣೀತೇ' ಎಂಬಲ್ಲಿ ಹೇಳಿದಂತೆ ಪರ್ಯುದಾಸವೆಂದೇ ಅರ್ಥವನ್ನು ಏಕೆ ಸ್ವೀಕರಿಸಬಾರದು? ಏಕೆಂದರೆ ನಿಷೇಧಪಕ್ಷದಲ್ಲಿ ವಿಕಲ್ಪಪ್ರಸಕ್ತಿ ಇದೆ-ಎಂದು ಪೂರ್ವಪಕ್ಷ.

ಸಿದ್ಧಾಂತಿ ಹೇಳುತ್ತಾನೆ— ಪರ್ಯುದಾಸಪಕ್ಷದಲ್ಲಿ ನಶಬ್ದವು ಪಶುವಿನಲ್ಲಿ ಅನ್ವಿತವಾಗಿ 'ಪಶುವ್ಯತಿರಿಕ್ತವಾದ ದರ್ಶಪೂರ್ಣಮಾಸದಲ್ಲಿ ಆಜ್ಯ ಹೋಮಗಳನ್ನು ಮಾಡಬೇಕು' ಎಂದರೆ ದರ್ಶಪೂರ್ಣಮಾಸಕ್ಕೆ 'ಪಶುವ್ಯತಿರಿಕ್ತ' ಎಂಬ ವಿಶೇಷಣವು ವ್ಯರ್ಥ. ದರ್ಶಪೂರ್ಣಮಾಸವು ಪಶುಯಾಗವಲ್ಲ, ಬೇರೆಯೆ. ಬೇರೆ ಎಂದು ಬೇರೆ ಹೇಳಬೇಕಾಗಿಲ್ಲ. ಆಜ್ಯಹೋಮವಿಧಿಯಲ್ಲಿ 'ದರ್ಶಪೂರ್ಣಮಾಸಯಾಗದಲ್ಲಿ ಆಜ್ಯಹೋಮಗಳನ್ನು ಮಾಡಬೇಕು' ಎಂದಿಷ್ಟೇ ಹೇಳಬೇಕು.

ಆಜ್ಯಹೋಮವಿಧಿಯು ದರ್ಶಪೂರ್ಣಮಾಸದಲ್ಲಿ ಮಾತ್ರವೇ ಹೊರತು ಪಶುಯಾಗದಲ್ಲಿ ಇಲ್ಲವಾದ್ದರಿಂದ ನಶಬ್ದವನ್ನು 'ತೌ' ಎಂದು ಉಕ್ತವಾಗಿರುವ ಆಜ್ಯಹೋಮಗಳಿಗೆ ಅನ್ವಯಿಸಿ 'ಪಶುಯಾಗದಲ್ಲಿ ಆಜ್ಯಹೋಮ ವ್ಯತಿರಿಕ್ತ ಅಂಗಕರ್ಮವನ್ನು ದಶಪೂರ್ಣಮಾಸದಂತೇ ಅನುಷ್ಠಾನ ಮಾಡಬೇಕು' ಎಂದು ಗ್ರಹಿಸೋಣ ಎಂದರೆ ಅದೂ ಸರಿಯಲ್ಲ. ಪಶುಯಾಗದಲ್ಲಿ ಆಜ್ಯಹೋಮಕ್ಕೆ ಪ್ರಸಕ್ತಿಯೇ ಇಲ್ಲ. ಕೇವಲದರ್ಶಪೂರ್ಣಮಾಸದಲ್ಲಿ ಆಜ್ಯಹೋಮವಿಧಿ ಇದೆ. ಆಜ್ಯಭಾಗವ್ಯತಿರಿಕ್ತ ಪ್ರಾಕೃತ ಅಂಗಗಳನ್ನು ಪಶುಯಾಗದಲ್ಲಿ ಪಾಶುಕ ಪ್ರಕೃತಿಯಂತೆಯೇ ಅನುಷ್ಠಾನ ಮಾಡಬೇಕು ಎಂದರೆ ಅದೂ ಸರಿಯಲ್ಲ.

'ಪಾಶುಕ ಪ್ರಕೃತಿವತ್' ಎಂಬ ಶಬ್ದ 'ನ ತೌ ಪಶೌ' ಎಂಬಲ್ಲಿ ಬರುವುದೇ ಇಲ್ಲ. ಏಕೆಂದರೆ ಇದು ಪಶುಯಾಗದ ಪ್ರಕರಣವಲ್ಲ, ದರ್ಶಪೂರ್ಣಮಾಸಯಾಗ ಪ್ರಕರಣ. ಆದರಿಂದ ಪಶುಪ್ರಕೃತಿ ಸಂಬಂಧಿಯಾದ 'ಪ್ರಕೃತಿವತ್' ಶಬ್ದವೆ ಉಪಸ್ಥಿತವಾಗಿ ಇಲ್ಲದಿರುವಾಗ, ಅದರೊಂದಿಗೆ ಏಕವಾಕ್ಯವಾಗುವಂತೆ ನಶಬ್ದವನ್ನು ಪರ್ಯುದಾಸಾರ್ಥಕವಾಗಿಟ್ಟುಕೊಳ್ಳುವುದು ಅಸಂಭವ.

'ನ ತೌ ಪಶೌ ಕರೋತಿ, ನ ಸೋಮೇ ಅಧ್ವರೇ' ಎಂಬಲ್ಲಿ 'ನ ಸೋಮೇ' ಎಂಬಲ್ಲಿರುವ ನಶಬ್ದವನ್ನು 'ತೌ' ಎಂದು ಉಕ್ತವಾದ ಆಜ್ಯಹೋಮಗಳಿಗೆ ಅನ್ವಯಿಸಿ, ಯಥಾಶಬ್ದಾಧ್ಯಾಹಾರ ಮಾಡಿ, 'ಸೋಮಯಾಗದಲ್ಲಿ ಆಜ್ಯಹೋಮವ್ಯತಿರಿಕ್ತವಾದ ದರ್ಶಪೂರ್ಣ ಮಾಸಾಂಗಗಳನ್ನು ಹೇಗೆ ಮಾಡಬೇಕೋ ಹಾಗೇ ಪಶುಯಾಗದಲ್ಲಿಯೂ ಮಾಡಬೇಕು' ಎಂದು ಹೇಳುವುದೂ ಕೂಡುವುದಿಲ್ಲ. ಸೋಮಯಾಗವು ದರ್ಶಪೂರ್ಣಮಾಸೇಷ್ಟಿಯಂತೆಯೇ ಅಪೂರ್ವವಾದ ಒಂದು ಯಾಗವಾಗಿದೆ ಹೊರತು ದರ್ಶಪೂರ್ಣಮಾಸದ ವಿಕೃತಿಯಲ್ಲ. ಆದರಲ್ಲಿ ಅತಿದೇಶದಿಂದ ದರ್ಶಪೂರ್ಣಮಾಸಾಂಗ ಪ್ರಾಪ್ತಿ ಇಲ್ಲ. ಉಪದೇಶದಿಂದಲೂ ಪ್ರಾಪ್ತಿಯಿಲ್ಲ.

ಹೀಗೆ ಪರ್ಯುದಾಸಪಕ್ಷದಲ್ಲಿ 'ನ ತೌ ಪಶೌ' ಎಂಬ ವಾಕ್ಯವೂ ಅಬೋಧಕ, 'ನ ಸೋಮೇऽಧ್ವರೇ' ವಾಕ್ಯವೂ ಅಬೋಧಕ.

ನಿಷೇಧಪಕ್ಷದಲ್ಲಿ 'ಸೋಮಯಾಗದಲ್ಲಿ ಯಥಾ 'ತೌ' ಆಜ್ಯಹೋಮಗಳು 'ನ' ಇಲ್ಲ, ಹೇಗೋ ಹಾಗೇ ಪಶುಯಾಗದಲ್ಲಿಯೂ 'ತೌ ನ' ಅವು ಇಲ್ಲ', ಎಂದು ಎರಡೂ ವಾಕ್ಯಗಳು ಅರ್ಥಗರ್ಭಿತವೇ ಆಗುತ್ತದೆ. ಹೀಗಾಗಿ 'ಪಶುಯಾಗದಲ್ಲಿಯೂ ಸೋಮಯಾಗದಲ್ಲಿಯೂ ಪ್ರಕೃತಿಯಂತೆ ಪ್ರಾಕೃತ ಅಂಗಕರ್ಮಗಳನ್ನು ಮಾಡಬೇಕು, ಆಜ್ಯಹೋಮಗಳನ್ನು ಮಾತ್ರ ಮಾಡಕೂಡದು' ಎಂದು ವಾಕ್ಯಭೇದವನ್ನು ಒಪ್ಪಿಕೊಂಡು ನಶಬ್ದಕ್ಕೆ ನಿಷೇಧಾರ್ಥತ್ವವನ್ನಿಟ್ಟು ಕೊಳ್ಳುವುದೇ ಯುಕ್ತ ಎಂದು ಪೂರ್ವಮೀಮಾಂಸಾದಲ್ಲಿ ಉಕ್ತವಾಗಿದೆ.

**ವಿಶೇಷಾಂಶ**—'ನ ತೌ ಪಶೌ' ಎಂಬ ವಾಕ್ಯವು 'ಪಶುಯಾಗಪ್ರಕರಣದಲ್ಲಿಲ್ಲ' ಎನ್ನುವುದು ವಸ್ತುಸ್ಥಿತಿ. ಎಲ್ಲ ಮೀಮಾಂಸಕರು ಇದನ್ನು ಒಪ್ಪಿದ್ದಾರೆ. ಆದರೆ ಅದ್ವೈತಸಿದ್ಧಿ ಇದನ್ನು ಅಪಲಾಪಮಾಡಿ, 'ಆಜ್ಯಭಾಗವ್ಯತಿರಿಕ್ತ ಪ್ರಾಕೃತಸರ್ವಕರ್ಮಗಳನ್ನು ಪಶುಯಾಗದಲ್ಲಿ ಪಾಶುಕ ಪ್ರಕೃತಿಯಂತೆಯೇ ಅನುಷ್ಠಾನ ಮಾಡಬೇಕೆಂ'ದು 'ನಕಾರವು ಪರ್ಯುದಾಸಾರ್ಥಕವೇ ಆಗಿದೆ' ಎನ್ನುತ್ತಿದೆ. ವಸ್ತುತಃ 'ನ ತೌ ಪಶೌ' ಎಂಬಲ್ಲಿ ನಕಾರವು ನಿಷೇಧಾರ್ಥಕ ಎನ್ನುವಲ್ಲಿ ವಿವಾದವಿಲ್ಲ.

ಪಶುಯಾಗದಲ್ಲಿಯೂ ಸೋಮಯಾಗದಲ್ಲಿಯೂ ಆಜ್ಯಹೋಮಗಳ ಪ್ರಸಕ್ತಿಯು ಬೇರೆ ಪ್ರಮಾಣಗಳಿಂದ ಬಂದಿಲ್ಲವಾದ್ದರಿಂದ, ಆಜ್ಯಹೋಮ ನಿಷೇಧಕ್ಕೆ ಪ್ರಸಕ್ತಿ ಆವಶ್ಯಕವಾದ್ದರಿಂದ, ಅನುಮಿತವಾದ ಶಾಸ್ತ್ರದಿಂದಲೇ ಪ್ರಸಕ್ತಿ ಎಂದು ಊಹೆ ಮಾಡಬೇಕಾಗುತ್ತದೆ. ಈ ಅನುಮಿತವಾದ ಶಾಸ್ತ್ರವೂ ಕೂಡ ಶಾಸ್ತ್ರವೇ ಎಂದಮೇಲೆ, ಶಾಸ್ತ್ರದಿಂದ ಪ್ರಸಕ್ತವಾದುದನ್ನು ಶಾಸ್ತ್ರವು ಸರ್ವಥಾ ನಿಷೇಧ ಮಾಡಲಾರದೆಂದು, ವಿಕಲ್ಪವನ್ನೇ ತಿಳಿಯಬೇಕು ಎಂದೂ ಮೀಮಾಂಸಕರು ಹೇಳುತ್ತಾರೆ.

ಹೀಗೆ ಶ್ರುತವಾದ ಪ್ರತಿಷೇಧದಿಂದ ಊಹಿಸಿಕೊಳ್ಳಬೇಕಾಗಿರುವ ಪ್ರಸಕ್ತಿಯನ್ನೂ ಕೂಡ ಶ್ರುತಿಯು ಸರ್ವಥಾ ಬಾಧಿಸಲಾರದೆಂದಮೇಲೆ, ಪ್ರತ್ಯಕ್ಷಕಾಣುವ ಸಗುಣಶ್ರುತಿಗಳಿಂದಲೇ ಪರಮಾತ್ಮನಲ್ಲಿ ಗುಣಗಳು ಪ್ರಮಿತವಾಗಿರುವಾಗ ಅವುಗಳನ್ನು ನಿರ್ಗುಣಶ್ರುತಿಯು 'ಸರ್ವಥಾ ನಿಷೇಧಿಸುತ್ತಿದೆ, ಮಿಥ್ಯೆ ಎನ್ನುತ್ತಿದೆ' ಎನ್ನಲಾಗದೆಂದು ಬೇರೇನು ಹೇಳಬೇಕು?—

**ಕಿಂಚ ದಶಮೇ ವಿಕೃತಿಭೂತ ಮಹಾಪಿತೃಯಜ್ಞ ಪ್ರಕರಣಸ್ಥೇ 'ನಾರ್ಷೇಯಂ ವೃಣೀತೇ' ಇತ್ಯಾದಿವಾಕ್ಯೇ 'ಪ್ರಕೃತಿವತ್ ಕುರ್ಯಾತ್ ಆರ್ಷೇಯ ವರಣವರ್ಜಂ' ಇತಿ ಮಹಾಪಿತೃಯಜ್ಞೀಯ ಪ್ರಕೃತಿವಚ್ಛಬ್ದ-ಏಕವಾಕ್ಯತಯಾ ಪರ್ಯುದಾಸಾರ್ಥತ್ವಮೇವ' ಇತ್ಯುಕ್ತ್ವಾ, ಯತ್ರ ಪ್ರಕೃತಿಭೂತ ದರ್ಶಪೂರ್ಣಮಾಸಪ್ರಕರಣಸ್ಥ ಆಜ್ಯಭಾಗವಿಧಾಯಕ ವಾಕ್ಯ ಸನ್ನಿಹಿತೇ 'ನ ತೌ ಪಶೌ ಕರೋತಿ' ಇತ್ಯಾದೌ ಪಾಶುಕ ಪ್ರಕೃತಿವಚ್ಛಬ್ದ-ಏಕವಾಕ್ಯತ್ವಾಯೋಗೇನ ನಞಃ ಪರ್ಯುದಾಸಾರ್ಥತ್ವಾಸಂಭವಾತ್ 'ಪ್ರಕೃತಿವತ್**

ಕುರ್ಯಾತ್, ಆಜ್ಯಭಾಗೌ ತು ನ ಕುರ್ಯಾತ್' ಇತಿ ವಾಕ್ಯ ಭೇದೇನ ಪ್ರಸಜ್ಯ ಪ್ರತಿಷೇಧಾರ್ಥತ್ವಮೇವ ಯುಕ್ತಂ, ತತ್ರ ಪಶೌ ಆಜ್ಯಭಾಗಯೋಃ ಅನ್ಯೇನಾಪ್ರಸಕ್ತೇಃ ಶಾಸ್ತ್ರಪ್ರಸಕ್ತಸ್ಯ ಚ ಸರ್ವಥಾ ಬಾಧಾಯೋಗಾತ್ ವಿಕಲ್ಪ ಇತ್ಯುಕ್ತಂ।

ಏವಂ ಚ ಯದಾ ಪ್ರತಿಷೇಧೋನ್ನೀತ ಪ್ರಸಕ್ತೇರಪಿ ನ ಸರ್ವಥಾ ಬಾಧಃ, ತದಾ ಕಿಮು ವಕ್ತವ್ಯಂ, ಪ್ರತ್ಯಕ್ಷ ಸಗುಣ ಶಾಸ್ತ್ರ ಪ್ರಮಿತಾನಾಂ ಗುಣಾನಾಂ ನ ಸರ್ವಥಾ ಬಾಧ ಇತಿ ?



**ननु निर्गुणवाक्येन निषेद्धुं सगुणवाक्यस्यानुवादकत्वेनैकवाक्यत्वसंभवे वाक्यभेदेन गुणप्रापकता न युक्तेति चेन्न। सत्यकामत्वादीनामन्यतोऽप्राप्तेः। श्रुतिप्राप्तस्य च श्रुत्या निषेधेऽहिंसावाक्यमग्नीषोमीयहिंसायाः, अग्रहणवाक्यं च षोडशिग्रहणस्य, असद्वा इत्यादिवाक्यं च ब्रह्मसत्त्वस्य, भेदवाक्यं चैक्यस्य निषेधकं स्यादित्युक्तत्वात्।**

**किंच ''मृडमृद'' इत्यादिविधिः ''न क्त्वा सेडि''ति निषेधस्येव सगुणवाक्यमेव निर्गुणवाक्यस्य बाधकं किं न स्यात्।**

निर्गुणवाक्येन सकलगुणनिषेधेऽपि तात्पर्यविषयीभूतार्थस्याबाधितत्वान्न सगुण-वाक्यानामप्रामाण्यमित्याशयेन शंकते— **नन्विति।। सत्यकामत्वादीनामिति**।। तथाच नानुवादकतेति भावः। ननु भूतले घटो नास्तीत्यादौ भूतले घट इत्यनेन प्राप्तस्य नास्तीति निषेधवत् इहापि शास्त्रप्राप्तस्यैव निषेध इत्याशंक्याह— **श्रुतिप्राप्तस्य चेति**।। सत्यकामत्वा-दीनां मानांतराप्राप्त्या तद्बोधाकवाक्यानां तद्विधायकत्वमेवेति न निषेधशेषत्वं वक्तुं शक्यमतिप्रसंगादिति भावः।



ನನು ನಿರ್ಗುಣವಾಕ್ಯೇನ ನಿಷೇದ್ಧುಂ ಸಗುಣವಾಕ್ಯಸ್ಯ ಅನುವಾದಕತ್ವೇನ ಏಕವಾಕ್ಯತ್ವ ಸಂಭವೇ ವಾಕ್ಯಭೇದೇನ ಗುಣಪ್ರಾಪಕತಾ ನ ಯುಕ್ತಾ ಇತಿ ಚೇನ್ನ। ಸತ್ಯಕಾಮತ್ವಾದೀನಾಂ ಅನ್ಯತೋಽಪ್ರಾಪ್ತೇಃ। ಶ್ರುತಿ ಪ್ರಾಪ್ತಸ್ಯ ಚ ಶ್ರುತ್ಯಾ ನಿಷೇಧೇ, ಅಹಿಂಸಾವಾಕ್ಯಂ ಅಗ್ನೀಷೋಮೀಯಹಿಂಸಾಯಾಃ, ಅಗ್ರಹಣವಾಕ್ಯಂ ಚ ಷೋಡಶಿ

**ಗ್ರಹಣಸ್ಯ, ಅಸದ್ವಾ ಇತ್ಯಾದಿವಾಕ್ಯಂ ಚ ಬ್ರಹ್ಮಸತ್ವಸ್ಯ, ಭೇದವಾಕ್ಯಂ ಚ ಐಕ್ಯಸ್ಯ ನಿಷೇಧಕಂ ಸ್ಯಾತ್ ಇತ್ಯುಕ್ತತ್ವಾತ್ ।**

ಇಲ್ಲಿ ಅದ್ವೈತಿ ಹೇಳುತ್ತಾನೆ—'ನಿರ್ಗುಣ ವಾಕ್ಯವು ಸಗುಣತ್ವವನ್ನು ನಿಷೇಧಿಸುತ್ತದೆ. ನಿಷೇಧಕ್ಕಾಗಿ ಸಗುಣತ್ವವನ್ನು ಸಗುಣವಾಕ್ಯ ಅನುವಾದಿಸುತ್ತದೆ. ಅದಕ್ಕೆ ಅದರಲ್ಲಿ ತಾತ್ಪರ್ಯ ವಿಲ್ಲದ್ದರಿಂದ ಅದನ್ನು ನಿರ್ಗುಣವಾಕ್ಯ ಬಾಧಿಸುತ್ತದೆ. ಸಗುಣವಾಕ್ಯ ಅದರಿಂದ ಅಪ್ರಮಾಣ ವಾಗುವುದಿಲ್ಲ. ಹೀಗೆ ಸಗುಣ ನಿರ್ಗುಣವಾಕ್ಯಗಳಿಗೆ ವಾಕ್ಯೈಕವಾಕ್ಯತಾ ಕೂಡುವಾಗ ವಾಕ್ಯಭೇದವಿಟ್ಟುಕೊಂಡು ಸಗುಣ ವಾಕ್ಯವು ಸಗುಣತ್ವವನ್ನು ವಿಧಾನ ಮಾಡುತ್ತದೆ ಎಂದೇಕೆ ಹೇಳಬೇಕು?' ಎಂದು.

ಇದು ಸರಿಯಲ್ಲ. 'ಭೂತಲೇ ಘಟೋ ನಾಸ್ತಿ' ನೆಲದಲ್ಲಿ ಘಟವಿಲ್ಲ ಎಂದು ನಿಷೇಧ ಮಾಡಲು ಘಟವು ಆಹಾರ್ಯಾರೋಪದಿಂದ ಪ್ರಾಪ್ತವಾಗಿದ್ದು 'ಘಟವು' ಎಂದು ಅನುವಾದಿಸಲ್ಪಡುತ್ತದೆ. ಹಾಗೆ ಸತ್ಯಕಾಮತ್ವಾದಿಗುಣನಿಷೇಧ ಮಾಡುವ ನಿರ್ಗುಣವಾಕ್ಯಕ್ಕೆ ಆ ಸತ್ಯಕಾಮತ್ವಾದಿ ಗುಣವು ಆಹಾರ್ಯಾರೋಪದಿಂದ ಪ್ರಾಪ್ತವಾದುದಲ್ಲ. ಸಗುಣಶ್ರುತಿಯಿಂದ ಪ್ರಾಪ್ತವಾಗಿದೆ, ಅದನ್ನು ಸಗುಣಶ್ರುತಿಯೇ ಅನುವಾದ ಮಾಡುತ್ತಿದೆ, ನಿರ್ಗುಣಶ್ರುತಿ ಅದನ್ನು ನಿಷೇಧ ಮಾಡುತ್ತಿದೆ, ಎನ್ನಬೇಕು. ಅದರಿಂದ ಶ್ರುತಿ ತಾನು ಹೇಳಿದ್ದನ್ನು ತಾನೇ ನಿಷೇಧಮಾಡುತ್ತಿದೆ ಎಂದಂತಾಗುವುದು ಹಾಗೆ ತಾನೇ ನಿಷೇಧಮಾಡಿದರೆ ಅದೂ ಅಪ್ರಮಾಣವಾಗುವುದು.

ಆದರೂ ನಿಷೇಧವನ್ನು ಒಪ್ಪುವ ಪಕ್ಷದಲ್ಲಿ ಅದ್ವೈತಿಗೆ ಅನಿಷ್ಟಪ್ರಸಂಗವಿದೆ. ಅಹಿಂಸಾ ವಾಕ್ಯವು ಅಗ್ನೀಷೋಮೀಯ ಹಿಂಸಾಕ್ಕೆ ನಿಷೇಧಕವಾದೀತು. ಷೋಡಶಿಗ್ರಹಣ ನಿಷೇಧಕ ವಾಕ್ಯವು ಷೋಡಶಿಗ್ರಹಣಕ್ಕೆ ಸರ್ವಥಾ ನಿಷೇಧಕವಾದೀತು, ಷೋಡಶಿಗ್ರಹಣವು ಸರ್ವಥಾ ನಿಷಿದ್ಧವಾದರೆ ಶ್ರುತಿ ಅಪ್ರಮಾಣವಾದೀತು. 'ಅಸದ್ ವಾ ಇದಮಗ್ರ ಆಸೀತ್' ಎಂಬುದು 'ಸದೇವ ಸೋಮ್ಯೇದಮಗ್ರ ಆಸೀತ್' ಎನ್ನುವ ವಾಕ್ಯೋಕ್ತ ಬ್ರಹ್ಮಸತ್ವವನ್ನು ನಿಷೇಧಿಸೀತು. ಭೇದವಾಕ್ಯವು ಐಕ್ಯವನ್ನು ನಿಷೇಧಿಸೀತು ಎಂದು ನಾವು ಹಿಂದೆಯೇ ಹೇಳಿದ್ದೇವೆ.

**ಕಿಂ ಚ 'ಮೃಡಮೃದ' ಇತ್ಯಾದಿ ವಿಧಿಃ 'ನ ಕ್ತ್ವಾ ಸೇಟ್' ಇತಿ ನಿಷೇಧಸ್ಯ ಇವ, ಸಗುಣವಾಕ್ಯಮೇವ ನಿರ್ಗುಣವಾಕ್ಯಸ್ಯ ಬಾಧಕಂ ಕಿಂ ನ ಸ್ಯಾತ್ ।**

'ಮೃಡ-ಮೃದ-ಗುಧ-ಕುಷ-ಕ್ಲಿಶ-ವದ-ವಸಃ ಕ್ತ್ವಾ' ಎಂಬ ವಿಧಿಯೇ 'ನ ಕ್ತ್ವಾ ಸೇಟ್' ಎಂಬ ನಿಷೇಧವನ್ನು ಬಾಧಿಸುವಂತೆ ಸಗುಣವಾಕ್ಯವೇ ನಿರ್ಗುಣವಾಕ್ಯವನ್ನು ಏಕೆ ಬಾಧಿಸಬಾರದು? ಎಂದು ಅತಿಪ್ರಸಕ್ತಿ ಬರುತ್ತದೆ.

'ಮೃಡ ಮೃದಾದ್ಯನುತ್ತರ ಸೇಟ್‌ಕವಾದ ಕ್ತ್ವಾ ಪ್ರತ್ಯಯಕ್ಕೇ ಕಿತ್ತ್ವ ನಿಷೇಧವೆಂದು ಎರಡೂ ಸೂತ್ರಗಳಿಗೆ ಏಕವಾಕ್ಯತ್ವವನ್ನು ಹೇಳಲು ಬರುವಾಗ, ವಾಕ್ಯಭೇದವಿಟ್ಟುಕೊಂಡು, 'ಮೃಡಮೃದ'

ವಿಧಿಯು 'ನ ಕ್ತ್ವಾ ಸೇಟ್' ನಿಷೇಧಕ್ಕೆ ಬಾಧಕವಾಗಲಿ ಎಂದು ಅತಿಪ್ರಸಕ್ತಿಯನ್ನು ಹೇಳುವುದು ಅನುಚಿತ'—ಎಂದರೆ, ನಿರ್ಗುಣವಾಕ್ಯವೂ ಕೂಡ ಸಗುಣವಾಕ್ಯವಿಹಿತ ಸಾರ್ವಜ್ಞಾದೀತರ ಕಲ್ಪಿತ ಹೇಯಗುಣವನ್ನೇ ನಿಷೇಧ ಮಾಡುತ್ತದೆ ಎಂದು ಏಕವಾಕ್ಯತಾ ಹೇಳಲು ಬರುತ್ತದೆ. ಆದರೂ ವಾಕ್ಯಭೇದವಿಟ್ಟುಕೊಂಡು ನಿರ್ಗುಣವಾಕ್ಯವು ಸಗುಣವಾಕ್ಯಕ್ಕೆ ನಿಷೇಧಕವೆಂದೇಕೆ ಹೇಳಬೇಕು ಎಂದು ಕೇಳುತ್ತೇವೆ.

'ನೇತಿ ನೇತಿ' ಎಂದು ದ್ವಿರುಕ್ತಿ ಇರುವುದರಿಂದ ಶ್ರುತಿಗೆ ಸರ್ವನಿಷೇಧದಲ್ಲಿಯೇ ತಾತ್ಪರ್ಯ. ಆದರಿಂದ ನಿರ್ಗುಣವಾಕ್ಯದಿಂದ ನಿಷೇಧಿಸಲು ಸಾರ್ವಜ್ಞಾದೀತರಗುಣವೂ ಉಳಿಯುವುದಿಲ್ಲ ವೆನ್ನುವುದು ಸರಿಯಲ್ಲ. ಈ ದ್ವಿರುಕ್ತಿಯು ಸರ್ವನಿಷೇಧದಲ್ಲಿ ತಾತ್ಪರ್ಯದ್ದೆನ್ನುವ ಆವಶ್ಯಕತೆ ಇಲ್ಲ. 'ಅಥಾತ ಆದೇಶೋ ನೇತಿ ನೇತಿ' (ಬೃ.ಉ.4.3.6) 'ಪರಬ್ರಹ್ಮನ ಬಗ್ಗೆ ಇದು ಉಪದೇಶ–'ನೇತಿ ನೇತಿ'—ಎಂದು ಉಪದೇಶ ತಾತ್ಪರ್ಯದಿಂದ ಶ್ರುತಿ ಹೊರಟಿದೆ. ಆದರಿಂದ ಸಗುಣಶ್ರುತಿ ವಿರೋಧವಿರುವಾಗ ಅದು ಸರ್ವನಿಷೇಧ ಮಾಡದು.

ಉಪದೇಶ ತಾತ್ಪರ್ಯವಿರುವಲ್ಲಿ ಅದಕ್ಕೆ ದ್ಯೋತಕವಾಗಿ ದ್ವಿರುಕ್ತಿ ಆವೃತ್ತಿಗಳಿರುತ್ತವೆ. 'ಆವೃತ್ತಿರಸಕೃದುಪದೇಶಾತ್' (ಬ್ರ.ಸೂ.4.1.1)' ಉಪಾಸನೆಯ ಉಪದೇಶದಲ್ಲಿ ಆದರದ್ಯೋತಕ ವಾದ ದ್ವಿರುಕ್ತಿ ಆವೃತ್ತಿಗಳಿರುವುದರಿಂದ ಉಪಾಸನೆಯಲ್ಲಿ ಆವೃತ್ತಿಬೇಕು' ಎಂದು ಬ್ರಹ್ಮಸೂತ್ರವು ಹೇಳುತ್ತಿದೆ.



नच जगत्कर्तृत्वेनाक्षिप्तस्य सार्वज्ञादेर्निषेधायानुवादः। श्रुत्याक्षिप्तस्य पुनः श्रुत्या निषेधायोगात्। अन्यथा श्रुतेन ज्ञाननिवर्त्यत्वेन जगदारोपाधिष्ठानत्वेन ''स एवेदं सर्वं'' ''आत्मैवेदं सर्वम्'' इति श्रुतेन जीवब्रह्मणोः सार्वात्म्येन चाक्षिप्तं सर्वमिथ्यात्वं ब्रह्मसत्त्वं जीवब्रह्मैक्यं च ''विश्वं सत्यम्'' इत्यनेन ''असद्वा इदम्'' इत्यनेन ''द्वा सुपर्णा'' इत्यनेन च निषेद्धुं ''नेह नाना'' इत्यनेन ''सत्यं ज्ञानम्'' इत्यनेन ''तत्त्वमसि'' इत्यनेन चानूद्यत इति स्यात्।

किंच श्रुत्याक्षिप्तस्य सार्वज्ञादेः श्रुत्या निषेधेऽपि श्रुतस्य सर्वकर्तृत्वादेः कथं निषेधः।

**किं चाद्वैतश्रुतेः निर्गुणश्रुत्यंतरस्य वा तात्पर्यापरिज्ञानप्राप्तं निर्गुणत्वमेव सगुणवाक्येन निषेद्धुं निर्गुणवाक्येनानूद्यत इति किं न स्यात् । ''वैगुण्यमेव पश्यंति न गुणानि नियुंजत''इति भारतोक्तेः ।**

**किंच निर्गुणवाक्य एव ''साक्षी चेता'' इत्यादिना द्रष्टृत्वादिगुणविधानान्न तेन तन्निषेध इति न तदर्थं सार्वज्ञादिवाक्यमनुवादकम् ।**

**अन्यथा सार्वज्ञादेर्व्यावहारिकं सत्त्वमपि न स्यात् । नहि निषिद्धे ब्राह्मणहननादौ अवांतरमपि तात्पर्यम् । नचौपनिषदस्य ब्रह्मणः सार्वज्ञादिकमनुमानादिसिद्धम् ।**

ननु ''यः सर्वज्ञः सर्ववित्'' इत्यादिवाक्यस्य न सार्वज्ञादिविधिपरत्वम् । तस्य जगत्कर्तृत्वान्यथानुपपत्तिलभ्यत्वात् । अतो निषेधायैवानुवाद इत्याशंक्य निराकारोति— **नचेति** ।। **श्रुतेनेति** ।। ''तदा विद्वान्नामरूपाद्विमुक्त'' इत्यादिश्रुतिप्रतिपन्नत्वेन त्वदभिमतेनेत्यर्थः । अभ्युपेत्याप्याह— **किंचेति** ।। ननु सर्वकर्तृत्वादेः श्रुतितात्पर्यापरिज्ञानप्राप्तत्वान्निर्गुणवाक्येन तन्निषेधो न विरुध्यत इत्याशंक्य वैपरीत्येन समाधत्ते— **किंचेति** । **अन्यथेति** ।। सार्वज्ञादेः श्रुतितात्पर्याविषयत्व इत्यर्थः । ननु सार्वज्ञ्यादिश्रुतेः निषेधे महातात्पर्येऽपि स्वार्थेऽप्यवांतरतात्पर्यात् व्यावहारिकसत्त्वसिद्धिरित्याशंक्याह— **नहीति** ।।

ननु ब्रह्म सर्वज्ञं सर्वकर्तृत्वादित्याद्यनुमानेनैव सार्वज्ञ्यादेः प्राप्तत्वाद्यः सर्वज्ञ इत्यादि श्रुतिर्न विधिपरेत्याशंक्य निराकरोति— **नचेति** । **औपनिषदस्येति** ।। उपनिषदेकगम्यस्येत्यर्थः ।



ನ ಚ ಜಗತ್ಕರ್ತೃತ್ವೇನಾಕ್ಷಿಪ್ತಸ್ಯ ಸಾರ್ವಜ್ಞಾದೇರ್ನಿಷೇಧಾಯಾನುವಾದಃ । ಶ್ರುತ್ಯಾಕ್ಷಿಪ್ತಸ್ಯ ಪುನಃ ಶ್ರುತ್ಯಾ ನಿಷೇಧಾಯೋಗಾತ್ । ಅನ್ಯಥಾ ಶ್ರುತೇನ ಜ್ಞಾನನಿವರ್ತ್ಯತ್ವೇನ ಜಗದಾರೋಪಾಧಿಷ್ಠಾನತ್ವೇನ 'ಸ ಏವೇದಂ ಸರ್ವಂ' 'ಆತ್ಮೈವೇದಂ ಸರ್ವಂ' ಇತಿ ಶ್ರುತೇನ ಜೀವಬ್ರಹ್ಮಣೋಃ ಸಾರ್ವಾತ್ಮ್ಯೇನ ಚ ಆಕ್ಷಿಪ್ತಂ ಸರ್ವಮಿಥ್ಯಾತ್ವಂ,

**ಬ್ರಹ್ಮಸತ್ತ್ವಂ, ಜೀವಬ್ರಹ್ಮೈಕ್ಯಂ ಚ 'ವಿಶ್ವಂ ಸತ್ಯಂ' ಇತ್ಯನೇನ, 'ಅಸದ್ವಾ ಇದಂ' ಇತ್ಯನೇನ, 'ದ್ವಾಸುಪರ್ಣಾ' ಇತ್ಯನೇನ ಚ ನಿಷೇದ್ಧುಂ, 'ನೇಹನಾನಾ' ಇತ್ಯನೇನ, 'ಸತ್ಯಂಜ್ಞಾನಂ' ಇತ್ಯನೇನ, 'ತತ್ತ್ವಮಸಿ' ಇತ್ಯನೇನ ಚ ಅನೂದ್ಯತೇ ಇತಿ ಸ್ಯಾತ್ ।**

'ಯಃ ಸರ್ವಜ್ಞಃ ಸರ್ವವಿತ್' ಇತ್ಯಾದಿ ವಾಕ್ಯವು ಸಾರ್ವಜ್ಞಾದಿ ಗುಣ ವಿಧಿಯಲ್ಲ, ಅನುವಾದ. ಏಕೆಂದರೆ, ಸಾರ್ವಜ್ಞಾದಿಗುಣವು ಜಗತ್‌ಕರ್ತೃತ್ವಾದಿಗಳ ಅನ್ಯಥಾನುಪಪತ್ತಿಯಿಂದಲೇ ಸಿದ್ಧವಾಗಿದೆ. ಸಿದ್ಧವ್ಾಗಿರುವುದನ್ನೇ ನಿಷೇಧಕ್ಕಾಗಿ ಶ್ರುತಿಯು ಅನುವಾದ ಮಾಡುತ್ತಿದೆ' ಎಂದರೆ ಅದು ಸರಿಯಲ್ಲ.

ಶ್ರುತಿಸಿದ್ಧವಾದ ಜಗತ್‌ಕರ್ತೃತ್ವದಿಂದ ಅರ್ಥಾತ್ ಸಿದ್ಧವಾಗುವ ಸಾರ್ವಜ್ಞಾದಿ ಗುಣವನ್ನು ಶ್ರುತಿಯೇ ನಿಷೇಧ ಮಾಡುವುದು ಯುಕ್ತವಲ್ಲ. ಶ್ರುತ್ಯಾಕ್ಷಿಪ್ತವಾದುದನ್ನು ಶ್ರುತಿಯು ನಿಷೇಧಿಸುವುದಾದರೆ, 'ತದಾ ವಿದ್ವಾನ್ ನಾಮರೂಪಾದ್ ವಿಮುಕ್ತಃ' 'ಬ್ರಹ್ಮಜ್ಞಾನಿಗೆ ನಾಮರೂಪಾತ್ಮಕ ಪ್ರಪಂಚವು ಜ್ಞಾನದಿಂದ ನಿವೃತ್ತವಾಗುತ್ತದೆ' ಎಂದು ಶ್ರುತಿಯು ಹೇಳುವುದರಿಂದಲೇ ಸರ್ವಮಿಥ್ಯಾತ್ವವು ಅರ್ಥಾತ್ ಸಿದ್ಧವಾಗುವುದರಿಂದ 'ನೇಹ ನಾನಾಸ್ತಿ ಕಿಂಚನ' ಶ್ರುತಿಯು ಸರ್ವಮಿಥ್ಯಾತ್ವವನ್ನು ಹೇಳುತ್ತಿಲ್ಲ, ಅನುವಾದಿಸುತ್ತಿದೆ. ಅನುವಾದವು 'ವಿಶ್ವಂ ಸತ್ಯಂ' ಎಂದು ನಿಷೇಧ ಮಾಡುವುದಕ್ಕಾಗಿ ಎಂದಾದೀತು.

'ಜಗತ್ ಕರ್ತೃತ್ವದಿಂದ ಅರ್ಥಾತ್ ಸಿದ್ಧವಾಗಿರುವ ಸಾರ್ವಜ್ಞಾದಿಗುಣವನ್ನು 'ಯಃ ಸರ್ವಜ್ಞಃ ಸರ್ವವಿತ್' ಎಂಬ ಸಗುಣ ಶ್ರುತಿಯು ಅನುವಾದ ಮಾಡುತ್ತಿದೆ, ಇದು ನಿರ್ಗುಣವಾಕ್ಯದಲ್ಲಿ ನಿಷೇಧಮಾಡುವುದಕ್ಕಾಗಿ' ಎಂದು ಅದ್ವೈತಿ ಹೇಳುವುದು ಸರಿಯಲ್ಲ. ಜಗತ್‌ಕರ್ತೃತ್ವವು ಶ್ರುತಿಸಿದ್ಧವಾದ್ದರಿಂದ ಸಾರ್ವಜ್ಞಾದಿಗುಣವು ಅರ್ಥಾತ್‌ಸಿದ್ಧವಾಗಿದೆ ಎಂದಮೇಲೆ ಶ್ರುತಿಯಿಂದ ಅರ್ಥಾತ್‌ಸಿದ್ಧವಾದುದನ್ನು ಪುನಃ ಶ್ರುತಿಯೆ ನಿಷೇಧಮಾಡಬಾರದು, ಅಪ್ರಾಮಾಣ್ಯ ಬಂದೀತು.

**ಅನ್ಯಥಾ ಶ್ರುತೇನ ಜ್ಞಾನನಿರ್ವರ್ತ್ಯತ್ವೇನ ಆಕ್ಷಿಪ್ತಂ ಸರ್ವಮಿಥ್ಯಾತ್ವಂ 'ವಿಶ್ವಂ ಸತ್ಯ' ಮಿತ್ಯನೇನ ನಿಷೇದ್ಧುಂ 'ನೇಹನಾನಾ' ಇತ್ಯನೇನ ಅನೂದ್ಯತ ಇತಿಸ್ಯಾತ್ ।**

'ಅನ್ಯಥಾ' ಆದರೂ 'ಶ್ರುತಿಯು ನಿಷೇಧಿಸುತ್ತದೆ' ಎಂದು ಒಪ್ಪಿದರೆ, 'ಶ್ರುತೇನ' 'ನಾಮರೂಪಾದ್‌ವಿಮುಕ್ತಃ' ಎಂದು ಶ್ರುತಿಸಿದ್ಧವಾದ ಜ್ಞಾನನಿವರ್ತ್ಯತ್ವದಿಂದ ಅರ್ಥಾತ್ ಸಿದ್ಧವಾಗುವ ಸರ್ವಮಿಥ್ಯಾತ್ವವನ್ನು 'ವಿಶ್ವಂ ಸತ್ಯಂ' ಎಂಬ ಶ್ರುತಿಯಿಂದ ನಿಷೇಧಿಸುವುದಕ್ಕಾಗಿಯೇ 'ನೇಹ ನಾನಾಸ್ತಿ ಕಿಂಚನ' ಎಂದು ಶ್ರುತಿ ಅನುವಾದಿಸುತ್ತಿದೆ ಎಂದಾದೀತು.

**ಶ್ರುತೇನ ಜಗದಾರೋಪಾಧಿಷ್ಠಾನತ್ವೇನ ಆಕ್ಷಿಪ್ತಂ ಬ್ರಹ್ಮಸತ್ವಂ 'ಅಸದ್ವಾ' ಇತ್ಯನೇನ ನಿಷೇದ್ಧುಂ 'ಸತ್ಯಂಜ್ಞಾನ'ಮಿತ್ಯನೇನ ಅನೂದ್ಯತ ಇತಿಸ್ಯಾತ್ ।**

'ಶ್ರುತೇನ' 'ವಾಚಾರಂಭಣಂ' ಎಂದು ಶ್ರುತಿಸಿದ್ಧವಾದ ಜಗದಾರೋಪಾಧಿಷ್ಠಾನತ್ವದಿಂದ ಅರ್ಥಾತ್ ಸಿದ್ಧವಾಗುವ ಬ್ರಹ್ಮಸತ್ವವನ್ನು 'ಅಸದ್ವಾ ಇದಮಗ್ರ ಆಸೀತ್' ಎಂಬ ಶ್ರುತಿಯಿಂದ ನಿಷೇಧಿಸುವುದಕ್ಕಾಗಿಯೇ 'ಸತ್ಯಂ ಜ್ಞಾನಂ ಅನಂತಂ ಬ್ರಹ್ಮ' ಎಂಬ ಶ್ರುತಿಯು ಅನುವಾದಿಸುತ್ತಿದೆ ಎಂದಾದೀತು.

**'ಸ ಏವೇದಂ ಸರ್ವಂ' 'ಆತ್ಮೈವೇದಂ ಸರ್ವಂ' ಇತಿ ಶ್ರುತೇನ ಜೀವಬ್ರಹ್ಮಣೋಃ ಸಾರ್ವಾತ್ಮ್ಯೇನ ಆಕ್ಷಿಪ್ತಂ ಜೀವಬ್ರಹ್ಮೈಕ್ಯಂ 'ದ್ವಾಸುಪರ್ಣಾ' ಇತ್ಯನೇನ ನಿಷೇದ್ಧುಂ 'ತತ್ವಮಸಿ' ಇತ್ಯನೇನ ಅನೂದ್ಯತ ಇತಿ ಸ್ಯಾತ್ ।**

'ಸ ಏವೇದಂ ಸರ್ವಂ' ಈ ಪ್ರಪಂಚವೆಲ್ಲವೂ ಭಗವಂತನೆ, ಎಂದು 'ಶ್ರುತೇನ' ಶ್ರುತಿ ಸಿದ್ಧವಾದ ಬ್ರಹ್ಮನ ಸರ್ವಾತ್ಮತ್ವದಿಂದ ಮತ್ತು 'ಆತ್ಮೈವೇದಂ ಸರ್ವಂ' ಈ ಪ್ರಪಂಚವೆಲ್ಲವೂ ಜೀವಾತ್ಮನೆ ಎಂದು ಶ್ರುತಿಸಿದ್ಧವಾದ ಜೀವನ ಸರ್ವಾತ್ಮತ್ವದಿಂದ ಅರ್ಥಾತ್ ಸಿದ್ಧವಾಗುವ ಜೀವ-ಬ್ರಹ್ಮೈಕ್ಯವನ್ನೇ 'ದ್ವಾಸುಪರ್ಣಾ' ಶ್ರುತಿಯಿಂದ ನಿಷೇಧಿಸುವುದಕ್ಕಾಗಿ 'ತತ್ವಮಸಿ' ಶ್ರುತಿಯು ಅನುವಾದಿಸುತ್ತಿದೆ ಎಂದಾದೀತು.

'ವಿಶ್ವಂ ಸತ್ಯಂ' ಎಂಬ ವಾಕ್ಯದಲ್ಲಿ 'ಅದು ವಿಶ್ವಮಿಥ್ಯಾತ್ವ ನಿಷೇಧವೆನ್ನಲು ನಕಾರವಿಲ್ಲ' ಎನ್ನಬಾರದು. 'ಶರಮಯಂ ಬರ್ಹಿರ್ಭವತಿ' ಎಂಬಲ್ಲಿ 'ಬರ್ಹಿ' ಅಂದರೆ ವೇದ್ಯಾಸ್ತರಣವು 'ಶರಮಯ' ಶರದಿಂದ ಮಾಡಬೇಕಾದುದು ಹೊರತು, 'ಕುಶಮಯ' 'ಕುಶದಿಂದ ಮಾಡುವುದು ಅಲ್ಲ' ಎಂದು ನಕಾರವಿಲ್ಲದ ಶರಶಬ್ದವೇ ಕುಶವನ್ನು ನಿಷೇಧಿಸುವುದು ಕಂಡಿದೆ.

'ಚೋದನಾಲಿಂಗ ಸಂಯೋಗೇ ತದ್ವಿಕಾರಃ ಪ್ರತೀಯೇತ ಪ್ರಕೃತಿಸನ್ನಿಧಾನಾತ್' (ಜೈಮಿನಿ ಸೂತ್ರ. 10.4.2) ಸೋಮಾರೌದ್ರಚರು ಹೋಮದಲ್ಲಿ 'ಶರಮಯಂ ಬರ್ಹಿರ್ಭವತಿ' ಎಂದಿದೆ. ಪ್ರಕೃತಿಯಲ್ಲಿ ವೇದ್ಯಾಸ್ತರಣವನ್ನು ಕುಶದಿಂದ ಮಾಡುವುದು ವಿಹಿತವಾಗಿದೆ. ಅಂದರೆ, ವೇದ್ಯಾಸ್ತರಣಕ್ಕೆ ಸಾಧನವಾಗುವ ಲವನಾದಿ ಸಂಸ್ಕೃತವಾದ ದ್ರವ್ಯವು ಪ್ರಕೃತಿಯಲ್ಲಿ ಕುಶಪ್ರಕೃತಿಕವಾಗಿದೆ. ಹೀಗೆ ಪ್ರಕೃತಿಯಲ್ಲಿ ವೇದ್ಯಾಸ್ತರಣ ಸಾಧನದ್ರವ್ಯ ಪ್ರಕೃತಿಯಾಗಿ ಪ್ರಾಪ್ತವಾಗಿದ್ದ ಕುಶವು ಚೋದಕದಿಂದ ವಿಕೃತಿಯಲ್ಲಿ ಪ್ರಾಪ್ತವಾಗುವಾಗ ಅದನ್ನು 'ಶರಮಯಂ' ಎಂದು ವಿಶೇಷ ವಿಹಿತವಾದ ಶರವು ಬಾಧಿಸುತ್ತದೆ ನಕಾರವಿಲ್ಲದಿದ್ದರೂ ನಿಷೇಧಿಸುತ್ತದೆ. ಹೊರತು ವೇದ್ಯಾಸ್ತರಣರೂಪವಾದ ಒಂದು ಕಾರ್ಯದಲ್ಲಿ ಕುಶ-ಶರಗಳೆರಡರ ಸಮುಚ್ಚಯವು ಸಾಧನವಾಗುವುದಿಲ್ಲ ಎಂದೇ ಸಿದ್ಧಾಂತ ಮಾಡಿದ್ದಾರೆ.

'ಅಸದ್ವಾ ಇದಮಗ್ರ ಆಸೀತ್' ಎಂಬಲ್ಲಿ 'ಅಸತ್ತು ಹಿಂದೆ ಇತ್ತು' ಎಂದು ಹೇಳುತ್ತಿದೆ ಹೊರತು 'ಬ್ರಹ್ಮ ಸತ್ ಅಲ್ಲ' ಎಂದು ನಿಷೇಧ ಮಾಡುತ್ತಿಲ್ಲ. ನಿಷೇಧ ಮಾಡಲು ಯದ್ಯಪಿ 'ಅಸತ್' ಎಂಬಲ್ಲಿ 'ಅ'ಕಾರರೂಪವಾದ ನಕಾರವಿದೆ. ಆದರೆ ಅದು ಕ್ರಿಯಾಪದ ಸಂಗತವಾಗಿಲ್ಲ. ನಾಮಪದ ಸಂಗತವಾಗಿದೆ. ಆದರಿಂದ ಅದು ನಿಷೇಧಕವಲ್ಲ' ಎಂದರೆ ಅದು ಸರಿಯಲ್ಲ.

'ಘಟಃ ನಪಟಃ' ಎಂಬಲ್ಲಿ ನಕಾರವು ನಾಮಪದಸಂಗತವಾದರೂ ಘಟದಲ್ಲಿ ಪಟತಾದಾತ್ಮ್ಯನಿಷೇಧ ಮಾಡುವುದು ಕಂಡಿದೆ. ಪ್ರಕೃತ 'ಅ-ಸತ್' ಎಂಬಲ್ಲಿರುವ ನಕಾರವೂ ಬ್ರಹ್ಮನಲ್ಲಿ ಸದಾತ್ಮತ್ವನಿಷೇಧಕವಾಗಿದೆ. 'ಅಸೂರ್ಯಂಪಶ್ಯಾ ರಾಜದಾರಾಃ' ಎಂಬಲ್ಲಿ ನಕಾರವು 'ಸೂರ್ಯ' ಎಂಬ ನಾಮಪದದೊಂದಿಗೇ ಸಂಗತವಾಗಿದ್ದರೂ ಸೂರ್ಯದರ್ಶನ ಕ್ರಿಯಾ ನಿಷೇಧಕವಾಗುವುದು ಕಂಡಿದೆ.

**ಕಿಂ ಚ ಶ್ರುತ್ಯಾಕ್ಷಿಪ್ತಸ್ಯ ಸಾರ್ವಜ್ಞಾದೇಃ ಶ್ರುತ್ಯಾ ನಿಷೇಧೇಽಪಿ ಶ್ರುತಸ್ಯ ಸರ್ವಕರ್ತೃತ್ವಾದೇಃ ಕಥಂ ನಿಷೇಧಃ?**

ಜಗತ್ಕರ್ತೃತ್ವ ಶ್ರುತಿಯಿಂದ ಅರ್ಥಾತ್ ಸಿದ್ಧವಾಗುವ ಸಾರ್ವಜ್ಞಾದಿಗುಣವನ್ನು ನಿರ್ಗುಣಶ್ರುತಿಯು ನಿಷೇಧಿಸುತ್ತದೆ ಎಂದು ಒಪ್ಪಿದರೂ, ಶ್ರುತಿಯಲ್ಲಿ ಸ್ಪಷ್ಟ ಉಕ್ತವಾಗಿರುವ ಸರ್ವಕರ್ತೃತ್ವಾದಿ ಗುಣವನ್ನು ನಿರ್ಗುಣಶ್ರುತಿ ಹೇಗೆ ನಿಷೇಧಿಸುವುದು?

'ಸರ್ವಕರ್ತೃತ್ವಶ್ರುತಿಯು ದ್ವೈತಶ್ರುತಿತಾತ್ಪರ್ಯದ ಅಪರಿಜ್ಞಾನಪ್ರಾಪ್ತವಾದ ಸರ್ವಕರ್ತೃತ್ವ ವನ್ನು ನಿರ್ಗುಣಶ್ರುತಿಯಲ್ಲಿ ನಿಷೇಧಿಸುವುದಕ್ಕಾಗಿ ಅನುವಾದ ಮಾಡುತ್ತದೆ, ಹೊರತು, ವಿಧಾನ ಮಾಡುವುದಿಲ್ಲ. ಆದರಿಂದ ಆದರ ವಿರೋಧವು ನಿರ್ಗುಣಶ್ರುತಿಗೆ ಬರುವುದಿಲ್ಲ' ಎಂದು ಅದ್ವೈತಿ ಹೇಳಿದರೆ ನಾವು ವಿಪರೀತವಾಗಿ ಕೇಳುತ್ತೇವೆ—

**ಕಿಂಚ ಅದ್ವೈತಶ್ರುತೇಃ ನಿರ್ಗುಣಶ್ರುತ್ಯಂತರಸ್ಯ ವಾ ತಾತ್ಪರ್ಯಾಪರಿಜ್ಞಾನ ಪ್ರಾಪ್ತಂ ನಿರ್ಗುಣತ್ವಮೇವ ಸಗುಣವಾಕ್ಯೇನ ನಿಷೇದ್ಧುಂ ನಿರ್ಗುಣ ವಾಕ್ಯೇನ ಅನೂದ್ಯತೇ ಇತಿ ಕಿಂ ನ ಸ್ಯಾತ್ ? 'ವೈಗುಣ್ಯಮೇವ ಪಶ್ಯಂತಿ ನ ಗುಣಾನಿ ನಿಯುಂಜತೇ' ಇತಿ ಭಾರತೋಕ್ತೇಃ ।**

ಅದ್ವೈತ ಶ್ರುತಿಯ ಅಥವಾ ಬೇರೆ ನಿರ್ಗುಣಶ್ರುತಿಯ ತಾತ್ಪರ್ಯದ ಅಪರಿಜ್ಞಾನದಿಂದ ಪ್ರಾಪ್ತವಾದ ನಿರ್ಗುಣತ್ವವನ್ನು ಸಗುಣವಾಕ್ಯದಿಂದ ನಿಷೇಧಿಸಲೆಂದೇ ಈ ನಿರ್ಗುಣವಾಕ್ಯವು ಅನುವಾದಿಸುತ್ತದೆ ಎಂದು ನಾವೇಕೆ ಹೇಳಬಾರದು? ಎಂದು. ವಸ್ತುತಃ ಹೀಗೇ ಹೇಳಬೇಕು. ಏಕೆಂದರೆ ಭಾರತ ಮೋಕ್ಷಧರ್ಮವಚನ ಹೀಗೇ ಹೇಳುತ್ತದೆ—'ಶ್ರುತಿಗಳಲ್ಲಿ ಗುಣಗಳು ಉಕ್ತವಾಗುತ್ತಿರುವುದನ್ನು ಇವರು ಸಹಿಸುವುದಿಲ್ಲ. ನಿರ್ಗುಣತ್ವವೇ ಈ ಶ್ರುತಿಗಳ ತಾತ್ಪರ್ಯಾರ್ಥ ವೆಂದು ಕಂಡುಕೊಳ್ಳುತ್ತಾರೆ' ಎಂದು.

**ಕಿಂ ಚ ನಿರ್ಗುಣವಾಕ್ಯ ಏವ 'ಸಾಕ್ಷೀ ಚೇತಾ' ಇತ್ಯಾದಿನಾ ದ್ರಷ್ಟೃತ್ವಾದಿ ಗುಣವಿಧಾನಾತ್ ನ ತೇನ ತನ್ನಿಷೇಧ ಇತಿ ನ ತದರ್ಥಂ ಸಾರ್ವಜ್ಞಾದಿವಾಕ್ಯಂ ತದನುವಾದಕಂ ।**

ನಿರ್ಗುಣವಾಕ್ಯದಲ್ಲಿಯೇ 'ಸಾಕ್ಷೀ ಚೇತಾ ಕೇವಲೋ ನಿರ್ಗುಣಶ್ಚ' ಎಂದು ನಿರ್ಗುಣತ್ವವನ್ನು ಹೇಳುತ್ತಲೇ ದ್ರಷ್ಟೃತ್ವ ಚೇತನತ್ವಾದಿ ಗುಣಗಳನ್ನು ವಿಧಾನಮಾಡುವುದರಿಂದ ನಿರ್ಗುಣವಾಕ್ಯವು ಆ

ದ್ರಷ್ಟೃತ್ವಾದಿ ಗುಣಗಳನ್ನು ನಿಷೇಧ ಮಾಡುವುದು ಶಕ್ಯವಿಲ್ಲ. ಆದರಿಂದ 'ಎಲ್ಲ ಗುಣಗಳನ್ನು ಸಾಮಾನ್ಯವಾಗಿ ಆ ವಾಕ್ಯ ನಿಷೇಧ ಮಾಡಲಿ' ಎಂಬ ಅಭಿಪ್ರಾಯದಿಂದ ಸಾರ್ವಜ್ಞಾದಿಶ್ರುತಿಯು ಸಾರ್ವಜ್ಞಾದಿ ಗುಣಗಳನ್ನು ಅನುವಾದ ಮಾಡುತ್ತದ ಎನ್ನಲಾಗದು. ಹೀಗಾಗಿ ಸಗುಣವಾಕ್ಯವು ನಿರ್ಗುಣವಾಕ್ಯಕ್ಕೆ ಬಾಧಕವೇ.

**ಅನ್ಯಥಾ ಸಾರ್ವಜ್ಞಾದೇಃ ವ್ಯಾವಹಾರಿಕಂ ಸತ್ವಮಪಿ ನ ಸ್ಯಾತ್। ನಹಿ ನಿಷಿದ್ಧೇ ಬ್ರಾಹ್ಮಣ ಹನನಾದೌ ಅವಾಂತರಮಪಿ ತಾತ್ಪರ್ಯಂ।**

'ಸಾರ್ವಜ್ಞಾದಿಗುಣಗಳಲ್ಲಿ ಸಗುಣಶ್ರುತಿಗೆ ತಾತ್ಪರ್ಯವಿಲ್ಲ, ಅವುಗಳ ನಿಷೇಧದಲ್ಲಿಯೇ ತಾತ್ಪರ್ಯ' ಎನ್ನುವುದಾದರೆ ಅದ್ವೈತಮತದಲ್ಲಿ ಸಾರ್ವಜ್ಞಾದಿ ಗುಣಗಳಿಗೆ ಅವರು ಸ್ವೀಕರಿಸಿರುವ ವ್ಯಾವಹಾರಿಕ ಸತ್ವವೂ ಸಿದ್ಧಿಸಲಾರದು.

'ಗುಣನಿಷೇಧದಲ್ಲಿಯೇ ಶ್ರುತಿಗೆ ತಾತ್ಪರ್ಯ' ಎಂದರೆ ಮಹಾತಾತ್ಪರ್ಯವೆಂದೇ ಅಭಿಪ್ರಾಯ. ಅವಾಂತರ ತಾತ್ಪರ್ಯ ಗುಣಗಳಲ್ಲಿ ಇದ್ದೇ ಇದೆ. ಆದರಿಂದ ಗುಣಗಳಿಗೆ ವ್ಯಾವಹಾರಿಕ ಸತ್ವ ಕೂಡುತ್ತದೆ' ಎಂದರೆ ಅದು ಸರಿಯಲ್ಲ.

ಶ್ರುತಿಗೆ ತಾನು ನಿಷೇಧ ಮಾಡಿದ ವಿಷಯದಲ್ಲಿ ಅವಾಂತರ ತಾತ್ಪರ್ಯವೂ ಇರುವುದಿಲ್ಲ. ಇರುವುದು ಎಲ್ಲೂ ಕಂಡಿಲ್ಲ. ಉದಾಹರಣೆಗೆ— 'ಬ್ರಾಹ್ಮಣೋ ನ ಹಂತವ್ಯಃ' ಎಂದು ಶ್ರುತಿಯು ಬ್ರಹ್ಮಹತ್ಯೆಯನ್ನು ನಿಷೇಧಿಸಿದೆ. ಆದರಿಂದ ಬ್ರಹ್ಮಹತ್ಯೆಗೈಯುವುದರಲ್ಲಿ ಶ್ರುತಿಗೆ ಮಹಾ ತಾತ್ಪರ್ಯವೂ ಇಲ್ಲ, ಅವಾಂತರ ತಾತ್ಪರ್ಯವೂ ಇಲ್ಲ, ಎಂದೇ ಕಂಡಿದೆ. ಬ್ರಹ್ಮಹತ್ಯೆಗೈಯುವುದನ್ನು ವ್ಯಾವಹಾರಿಕವಾಗಿಯೂ ಸರಿಯೆಂದು ಶ್ರುತಿ ಒಪ್ಪುವುದಿಲ್ಲ.

'ಘಟಾದಿಗಳು ವ್ಯಾವಹಾರಿಕವಾಗಿ ಅನುಮಾನಾದಿ ಪ್ರಮಾಣಸಿದ್ಧವಾಗಿರುವುದರಿಂದ ಶ್ರುತಿಯು ಅವುಗಳ ವ್ಯಾವಹಾರಿಕಸತ್ವವನ್ನು ನಿಷೇಧಿಸದೆ ಕೇವಲ ಪಾರಮಾರ್ಥಿಕಸತ್ವವನ್ನೇ ನಿಷೇಧಿಸುತ್ತದೆ. ಹಾಗೇ ಸಾರ್ವಜ್ಞಾದಿಗುಣಗಳ ವ್ಯಾವಹಾರಿಕ ಸತ್ವವನ್ನು ನಿರ್ಗುಣ ಶ್ರುತಿಯು ಬಾಧಿಸುವುದಿಲ್ಲ. ಆದರಿಂದ 'ಬ್ರಹ್ಮನು ಸರ್ವಜ್ಞ. ಸರ್ವಕರ್ತನಾದ್ದರಿಂದ' ಎಂದು ಅನುಮಾನಾದಿ ಪ್ರಮಾಣಸಿದ್ಧವಾದ ಸಾರ್ವಜ್ಞಾದಿ ಗುಣಗಳು ವ್ಯಾವಹಾರಿಕ ಸತ್ಯವೆನ್ನುವುದು ಅದ್ವೈತಕ್ಕೆ ಸಮ್ಮತವೆ' ಎಂದರೆ ಅದೂ ಸರಿಯಲ್ಲ—

**ನ ಚೌಪನಿಷದಸ್ಯ ಬ್ರಹ್ಮಣಃ ಸಾರ್ವಜ್ಞಾದಿಕಂ ಅನುಮಾನಾದಿಸಿದ್ಧಂ।**

ಸರಿಯಲ್ಲ ಏಕೆಂದರೆ ಉಪನಿಷದೇಕವೇದ್ಯವೆಂದು ಅದ್ವೈತಿಯು ಒಪ್ಪಿರುವ ಬ್ರಹ್ಮನಲ್ಲಿ ಸಾರ್ವಜ್ಞಾದಿ ಗುಣಗಳು ವ್ಯಾವಹಾರಿಕವಾಗಿಯಾದರೂ ಬೇರೆ ಅನುಮಾನಾದಿ ಪ್ರಮಾಣ ಸಿದ್ಧವೆನ್ನಲಾಗದು. ಆದರಿಂದ ಆ ಗುಣಗಳ ವ್ಯಾವಹಾರಿಕ ಸತ್ವವನ್ನು ನಿರ್ಗುಣಶ್ರುತಿಯು ಬಾಧಿಸುವ ಪ್ರಸಕ್ತಿಯೆ ಇಲ್ಲ.



ननु सगुणवाक्यं ''वाचं धेनुमुपासीत'' इत्यादिवदुपासनार्थम्। उपासनायाः कर्तव्यत्वे गुणेषु च तात्पर्ये वाक्यभेदादिति चेन्न ।

''उपासनायाः कार्यत्वे विष्णोरात्मत्व एव च ।।
उभयत्रापि तात्पर्यमात्मोपासादिके विधौ ।।''

इति स्मृतिविरोधात् ।

''यः सर्वज्ञः'' इत्यादौ उपासनाविधेरश्रवणाच्च। कल्पनस्य च निर्गुणवाक्येऽपि शक्यत्वात् ।

किंच ''आत्मेत्येवोपासीत'' ''अथ योऽन्यां देवतामुपास्ते'' इत्यादावद्वैतस्याप्युपास्यत्वं श्रूयते ।

किंच त्वयैव तृतीयस्य तृतीये पादे ''आनंदादयः'' इतिसूत्रे ''आनंदं ब्रह्म'' इत्यादिश्रुतिसिद्धा आनंदादयः, ''व्यतिहार'' इतिसूत्रे ''तद्योऽहम्'' इतिश्रुत्युक्तं जीवस्येश्वरत्वमीश्वरस्य च जीवत्वमुपास्यमित्युक्तम् । तथा

''उत्तरस्मिंस्तापनीये शैब्यप्रश्नेऽथ काठके ।
मांडूकादौ च सर्वत्र निर्गुणोपास्तिरीरिता ।।''

इति निर्गुणं ब्रह्माप्युपास्यमित्युक्तम् ।

एवं चोपास्यत्वेऽप्यानंदादेरिव ऐक्यस्येव निर्गुणब्रह्मण इव च सत्यकामत्वादेरपि तात्त्विकतास्तु । भाषितं हि त्वयैव ''व्यतिहार'' इतिसूत्रे यथा ध्यानार्थेऽपि सत्यकामत्वाद्युपदेशे तद्गुण ईश्वरः सिध्यति तद्वदैक्यमिति । भामत्यां च 'तादात्म्यदार्ढ्यं तु भवन्नोपेक्षामहे । सत्यकामादिगुणोपदेश इव तद्गुणेश्वरसिद्धेः। इति ।

नचानंदादिवाक्यसत्यकामादिवाक्ययोर्मानांतराविरोधे तदप्राप्तौ उपासनाविध्यश्रवणे निर्गुणश्रुतिविरोधे च तुल्येऽपि आनंदादयो

**वास्तवाः सत्यकामादयस्तु वाग्धेनुत्वादिवत् पुंतंत्रा वा व्यावहारिका वेति युक्तम् ।**

**यदि चानंदादयः स्वरूपभूता इति न निर्गुणश्रुतिविरोधः तर्हि बलशक्त्यादयोऽपि तथैव । ''ज्ञानात्मको भगवान् बलात्मको भगवान्'' इत्यादिश्रुतेः । ''समस्तकल्याणगुणात्मक'' इत्यादि-स्मृतेश्च ।**

उभयत्र तात्पर्यस्य स्मृतिसिद्धत्वाद् वाक्यभेदो न दूषणमित्याह– **उपासनाया इति** ।। आत्मत्वे स्वामित्वे । ''अथ योऽन्यां देवताम्'' इति यद्यप्यद्वैतोपासना न प्रतीयते । तथापि ''आत्मेत्येवोपासीत'' इति पूर्ववाक्यविहिताभेदोपासनाविधि-शेषत्वेनास्योदाहरणमिति ध्येयम् ।। **व्यतिहार सूत्र इति** ।। ''व्यतिहारो विशिंषंति हीतरवत्'' इति सूत्र इत्यर्थः ।। **तद्योऽहमिति** ।। ''तद्योऽहं सोऽसौ योऽसौ सोऽहम्'' इति श्रुत्युक्तमित्यर्थः ।। **उत्तरस्मिन्निति** ।। सर्वसंहारसमर्थः परिभवासहः प्रभुर्व्याप्तः सदोज्ज्वलोऽविद्याकार्यहीनः स्वात्मबंधहरः सर्वदा द्वैतरहितः आनंदरूपः सर्वाधिष्ठानसन्मात्रो निरस्ताविद्यातमोऽहमेवेति तस्मादेवात्मानं परं ब्रह्मानुसंदध्यात्'' इत्युत्तरतापनीये, ''अथ हैनं शैब्यः सत्यकामः पप्रच्छ स यो ह वै तद्भगवन् मनुष्येषु प्रायणांतमोंकारमभिध्यायीत कतमं वाव स तेन लोकं जयतीति। तस्मै स होवाच एतद्वै सत्यकाम परं चापरं च ब्रह्म यदयमोंकारः'' इत्यादिना द्विविधमपि ब्रह्म उक्त्वा यः पुनरेतं त्रिमात्रेणोमित्येतेनैवाक्षरेण परं पुरुषमभिध्यायीत'' इति निर्गुणब्रह्मोपासनाप्रतिपादके प्रश्नोपनिषदंतर्गतशैब्यप्रश्ने,

'अशब्दमस्पर्शमरूपमव्ययं तथाऽरसं नित्यमगंधवच्च यत् ।
अनाद्यनंतं महतः परं ध्रुवं निचाय्य तं मृत्युमुखात्प्रमुच्यते ।।
तं दुर्दर्शं गूढमनुप्रविष्टं गुहाहितं गह्वरेष्ठं पुराणम् ।
अध्यात्मयोगाधिगमेन देवं मत्वा धीरो हर्षशोकौ जहाति ।। इति काठके,

''नांतःप्रज्ञं न बहिःप्रज्ञं नोभयतःप्रज्ञं न प्रज्ञानघनं नप्रज्ञं नाप्रज्ञं अदृष्टमव्य-

वहार्यमग्राह्यमलक्षणमचिंत्यमव्यपदेश्यमैकात्म्यप्रत्ययसारं प्रपंचोपशमं शिवमद्वैतं चतुर्थं मन्यंते स आत्मा स विज्ञेयः'' इति मांडूक्यादौ च

''तमेवैकं जानथ आत्मानमन्या वाचो विमुंचथामृतस्यैष सेतुः''

इति मुंडकादौ च निर्गुणोपासनोक्तावित्यर्थः । उपास्यत्वस्य तात्विकत्वविरोधित्वे परस्य स्ववचनविरोध इति भावेनाह— **भाषितं हीति । तदप्राप्ताविति ।।** मानांतराप्राप्तावित्यर्थः ।। **उपासनाविध्यश्रवण इति ।।** यद्यपि ''सोऽन्वेष्टव्यः स विजिज्ञासितव्यः'' इति सत्यकामादिवाक्ये उपासनाविधिः श्रूयते । तथापि स विजिज्ञासितव्यः इति ज्ञेयत्वमेवोच्यते न तूपास्यत्वमिति वा, प्रजापातिवाक्ये तथा श्रवणेऽपि दहरविद्यादिप्रकरणाम्नाते तस्मिन् तदश्रवणमिति वा तथोक्तमिति ध्येयम् ।। **पुंतंत्रा वेति ।।** पुरुषबुद्धिकल्पिता वेत्यर्थः ।



**ನನು ಸಗುಣವಾಕ್ಯಂ ವಾಚಂ ಧೇನುಮುಪಾಸೀತ ಇತ್ಯಾದಿವತ್ ಉಪಾಸನಾರ್ಥಂ। ಉಪಾಸನಾಯಾಃ ಕಾರ್ಯತ್ವೇ ಗುಣೇಷು ಚ ತಾತ್ಪರ್ಯೇ ವಾಕ್ಯಭೇದಾದಿತಿ ಚೇನ್ನ।**

**ಉಪಾಸನಾಯಾಃ ಕಾರ್ಯತ್ವೇ ವಿಷ್ಣೋರಾತ್ಮತ್ವ ಏವ ಚ ।**
**ಉಭಯತ್ರಾಪಿ ತಾತ್ಪರ್ಯಂ ಆತ್ಮೋಪಾಸಾದಿಕೇ ವಿಧೌ ॥**

**ಇತಿ ಸ್ಮೃತಿವಿರೋಧಾತ್**

'ವಾಚಂ ಧೇನುಮುಪಾಸೀತ' (ಬೃ.ಉ.7.10.1) 'ವಾಕ್ಕನ್ನು ಹಸುವೆಂದು ಉಪಾಸನ ಮಾಡಬೇಕು' ಈ ವಾಕ್ಯದಲ್ಲಿ 'ವಾಕ್ ಹಸುವೆ ಆಗಿದೆ' ಎನ್ನುತ್ತಿಲ್ಲ. ಹಸುವೆಂದು ಉಪಾಸನ ಮಾಡಬೇಕೆನ್ನುತ್ತಿದೆ. ಹಾಗೇ ಸಗುಣವಾಕ್ಯವು ಬ್ರಹ್ಮವನ್ನು ಸಗುಣವೇ ಆಗಿದೆ ಎನ್ನುತ್ತಿಲ್ಲ, ಸಗುಣವೆಂದು ಉಪಾಸನೆ ಮಾಡಬೇಕು ಎನ್ನುತ್ತಿದೆ. ಹಸುವೆಂದು ಉಪಾಸನೆ ಮಾಡಲು ವಾಕ್ ಹಸುವೇ ಆಗಿರಬೇಕೆಂದಿಲ್ಲ. ಆದರಿಂದ ಉಪಾಸನಾ ವಾಕ್ಯವು 'ವಾಕ್ ಹಸುವೇ ಆಗಿದೆ' ಎನ್ನುವಲ್ಲಿ ಪ್ರಮಾಣವಾಗುವುದಿಲ್ಲ. ಹಾಗೇ ಸಗುಣವಾಕ್ಯವು ಉಪಾಸನಾ ವಾಕ್ಯವಾದ್ದರಿಂದ 'ಬ್ರಹ್ಮನು ಸಗುಣನೇ ಆಗಿದ್ದಾನೆ' ಎನ್ನುವಲ್ಲಿ ಪ್ರಮಾಣವಾಗುವುದಿಲ್ಲ. 'ಬ್ರಹ್ಮನಲ್ಲಿ ಗುಣೋಪಾಸನೆಯು ಕರ್ತವ್ಯವಾಗಿದೆ' ಮತ್ತು 'ಬ್ರಹ್ಮನಲ್ಲಿ ಗುಣಗಳು ಇವೆ' ಎಂದು ಎರಡನ್ನೂ ಉಪಾಸನಾವಾಕ್ಯವು ಹೇಳುತ್ತದೆ ಎರಡರಲ್ಲಿಯೂ ತಾತ್ಪರ್ಯವಿದೆ ಎಂದರೆ ವಾಕ್ಯಭೇದದೋಷ ಬರುತ್ತದೆ' ಎಂದು ಅದ್ವೈತಿ ಹೇಳುತ್ತಾನೆ. ಇದು ಸರಿಯಲ್ಲ.

'ಆತ್ಮೋಪಾಸನಾದಿ ವಿಧಿ ವಾಕ್ಯದಲ್ಲಿ 'ಆತ್ಮನೆಂದು ಸ್ವಾಮಿ ಎಂದು ವಿಷ್ಣೂಪಾಸನೆ ಕರ್ತವ್ಯ' ಎನ್ನುವುದರಲ್ಲಿ ಮತ್ತು 'ವಿಷ್ಣುವು ಆತ್ಮ ಸ್ವಾಮಿಯಾಗಿದ್ದಾನೆ' ಎನ್ನುವುದರಲ್ಲಿ ಎರಡರಲ್ಲಿಯೂ ತಾತ್ಪರ್ಯ ವಿರುತ್ತದೆ' ಎಂದು ಸ್ಮೃತಿವಚನದ ವಿರೋಧ ಬರುತ್ತದೆ. ಎರಡರಲ್ಲಿಯೂ ತಾತ್ಪರ್ಯವು ಸ್ಮೃತಿಸಿದ್ಧವಾಗಿರುವಾಗ ಎರಡನ್ನೂ ಒಪ್ಪಬೇಕಾಗುತ್ತದೆ. ಆಗ ವಾಕ್ಯಭೇದವು ದೋಷವಾಗುವುದಿಲ್ಲ.

**ವಿಶೇಷವಿಚಾರ**—'ಆತ್ಮತ್ವವಿಶಿಷ್ಟನಾದ ವಿಷ್ಣು ಉಪಾಸ್ಯ' ಎಂದು ಉಪಾಸನಾವಿಧಿವಾಕ್ಯವು ಹೇಳುತ್ತಿರುವುದರಿಂದ ಆತ್ಮತ್ವರೂಪ ವಿಶೇಷಣಾಂಶದಲ್ಲಿಯೂ ವಾಕ್ಯಕ್ಕೆ ತಾತ್ಪರ್ಯವಿದ್ದೇ ಇದೆ. ವಿಶಿಷ್ಟ ಬೋಧಸ್ಥಳದಲ್ಲಿ ವಿಶೇಷಣದಲ್ಲಿಯೂ ತಾತ್ಪರ್ಯವಿರುವುದು ಸರ್ವತ್ರ ಕಂಡಿದೆ. 'ಪ್ರಾಪ್ತವಾದ ಒಂದು ಕರ್ಮದಲ್ಲಿ ಅನೇಕ ಗುಣವಿಧಾನ ಕೂಡುವುದಿಲ್ಲ. ಕರ್ಮ ಅಪ್ರಾಪ್ತವಾಗಿದ್ದರೆ ದ್ರವ್ಯದೇವತಾದಿ ಅನೇಕಗುಣವಿಶಿಷ್ಟವಾದ ಒಂದು ಕರ್ಮದ ವಿಧಾನವು ಶಕ್ಯ. ಆದರೆ ಅನೇಕ ವಿಧಿಕಲ್ಪನೆಗೆ ಸಮರ್ಥವಾದ ಏಕವಿಶಿಷ್ಟವಿಧಿ ಇದ್ದರೆ ಅದರ ಬಲದಿಂದ ಅನೇಕ ಗುಣವಿಧಾನಕಲ್ಪನೆ ಸಾಧ್ಯ' ಎಂದು ವಾರ್ತಿಕದಲ್ಲಿ ವಿಶೇಷಣದಲ್ಲಿ ವಿಶಿಷ್ಟವಿಧಿತಾತ್ಪರ್ಯ ಸ್ವೀಕೃತವಾಗಿದೆ. ಅದ್ವೈತಸಿದ್ಧಿಯಲ್ಲಿ ವಿಶೇಷಣ ತಾತ್ಪರ್ಯ ನಿರಾಕರಣೆ ಮಾಡಿರುವುದು ಪೂರ್ವಮೀಮಾಂಸಾಕ್ಕೆ ವಿರುದ್ಧವಾಗಿದೆ.

'ಹೀಗೆ ವಿಶೇಷಣ ತಾತ್ಪರ್ಯ ಪೂರ್ವಮೀಮಾಂಸಾದಲ್ಲಿಯೇ ಸಿದ್ಧವಿರುವಾಗ ಸ್ಮೃತಿಪ್ರಮಾಣವನ್ನೇಕೆ ದ್ವೈತಿಗಳು ಉದಾಹರಿಸುತ್ತಾರೆ? ವಾಕ್ಯಭೇದವನ್ನು ಪರಿಗಣಿಸದ ಸ್ಮೃತಿಯನ್ನೇ ಅಪ್ರಮಾಣವೆಂದು ಅದ್ವೈತಿ ಹೇಳುತ್ತಿದ್ದಾನೆ' ಎಂದರೆ 'ಯೋಷಿತಮಗ್ನಿಂ ಧ್ಯಾಯೀತ' ಎಂಬಲ್ಲಿ ಯೋಷಿತ್ತಿನಲ್ಲಿ ಅಗ್ನಿಸಾದೃಶ್ಯವನ್ನು ಚಿಂತಿಸಬೇಕು ಹೊರತು ಅಗ್ನಿತ್ವವನ್ನಲ್ಲ. ಅದು ಬಾಧಿತ. ಹೀಗಾಗಿ ಅಲ್ಲಿ ಅಗ್ನಿಪದಕ್ಕೆ ಅಮುಖ್ಯಾರ್ಥವಿವಕ್ಷೆ ಇದೆ. ಆದರೆ ಆತ್ಮೋಪಾಸನೆಯ ಸ್ಥಳದಲ್ಲಿ ಆತ್ಮಾ ಅಂದರೆ ಸ್ವಾಮಿ. ಆದರಿಂದ ವಿಷ್ಣುವಿನಲ್ಲಿ ಆತ್ಮಶಬ್ದ ಮುಖ್ಯವೆ. ಆದರಿಂದ 'ಆತ್ಮನೆಂದು ವಿಷ್ಣೂಪಾಸನೆ ಕರ್ತವ್ಯ' ಎನ್ನುವುದರಲ್ಲಿಯೂ, 'ವಿಷ್ಣುವು ಆತ್ಮ' ಎನ್ನುವುದರಲ್ಲಿಯೂ ಉಪಾಸನಾ ವಾಕ್ಯಕ್ಕೆ ತಾತ್ಪರ್ಯವಿದೆ ಎಂದು ಸ್ಮೃತಿವಚನವು ಹೇಳುತ್ತದೆ.

ಆತ್ಮೋಪಾಸನಾವಿಧಿವಾಕ್ಯದಿಂದ ಬರುವ ಬೋಧವು ಹೀಗೆ ಸಮೂಹಾಲಂಬನಾತ್ಮಕ ವಾಗಿದ್ದರೆ ವಾಕ್ಯಭೇದದೋಷಕ್ಕೆ ಪ್ರಸಕ್ತಿ. ಸ್ಮೃತಿವಚನದ ಅಭಿಪ್ರಾಯ ಹಾಗೆ ಇಲ್ಲ. 'ಆತ್ಮತ್ವವಿಶಿಷ್ಟಾಕಾರೇಣ ವಿಷ್ಣೂಪಾಸನೆ ಕರ್ತವ್ಯ' ಎಂದು ವಿಶಿಷ್ಟಬೋಧವೆ ಅಭಿಪ್ರೇತವಾಗಿದೆ. ಅದರಿಂದ ವಾಕ್ಯಭೇದದೋಷ ಸ್ಮೃತ್ಯಭಿಪ್ರೇತವಾದ ವಿಶಿಷ್ಟಬೋಧದಲ್ಲಿ ಬರುವುದಿಲ್ಲ. ಸ್ಮೃತಿಯನ್ನು ಅಪ್ರಮಾಣವೆನ್ನಬೇಕಾಗಿಲ್ಲ.

**'ಯಃ ಸರ್ವಜ್ಞ' ಇತ್ಯಾದೌ ಉಪಾಸನಾವಿಧೇರಶ್ರವಣಾಚ್ಚ ।**
**ಕಲ್ಪನಸ್ಯಚ ನಿರ್ಗುಣವಾಕ್ಯೇಽಪಿ ಶಕ್ಯತ್ವಾತ್ ।**

'ಸಗುಣವಾಕ್ಯವು ಉಪಾಸನಾ ಪರವಾದ್ದರಿಂದ ಗುಣವತ್ತ್ವ ವಿಷಯದಲ್ಲಿ ಅದಕ್ಕೆ ತಾತ್ಪರ್ಯವಿಲ್ಲ, ನಿರ್ಗುಣವಾಕ್ಯವು ಉಪಾಸನಾಪರವಲ್ಲವಾದ್ದರಿಂದ ನಿರ್ಗುಣತ್ವವಿಷಯದಲ್ಲಿ ತಾತ್ಪರ್ಯವಿದೆ. ಆದರಿಂದ ನಿರ್ಗುಣವಾಕ್ಯಕ್ಕೆ ಸಗುಣವಾಕ್ಯದಿಂದ ಬಾಧ ಕೂಡುವುದಿಲ್ಲವೆ'ಂದು ಅದ್ವೈತಿ ಹೇಳುವುದು ಸರಿಯಲ್ಲ. ಸಗುಣವಾಕ್ಯವೆಲ್ಲವೂ ಉಪಾಸನಾ ಪರವೆನ್ನಲಾಗುವುದಿಲ್ಲ. 'ಯಃ ಸರ್ವಜ್ಞಃ' ಎಂಬ ಸಗುಣಶ್ರುತಿಯಲ್ಲಿ 'ಉಪಾಸೀತ' ಎಂದು ಶಬ್ದವಿಲ್ಲ. ತಾತ್ಪರ್ಯವಶಾತ್ 'ಉಪಾಸೀತ' ಎಂಬ ಶಬ್ದವನ್ನು ಕಲ್ಪಿಸುತ್ತೇವೆ ಎಂದರೆ ನಿರ್ಗುಣ ವಾಕ್ಯದಲ್ಲಿಯೂ ಹಾಗೆ ಕಲ್ಪಿಸುವುದು ಶಕ್ಯ.

**ಕಿಂಚ 'ಆತ್ಮೇತ್ಯೇವೋಪಾಸೀತ' 'ಅಥ ಯೋಽನ್ಯಾಂ ದೇವತಾಮುಪಾಸ್ತೇ' ಇತ್ಯಾದೌ ಅದ್ವೈತಸ್ಯಾಪಿ ಉಪಾಸ್ಯತ್ವಂ ಶ್ರೂಯತೇ ।**

'ಆತ್ಮೇತ್ಯೇವೋಪಾಸೀತ' ಎಂಬ ವಾಕ್ಯ (ಬೃ.ಉ.3.5.1) ಅದ್ವೈತಮತದಲ್ಲಿ ಅದ್ವೈತೋಪಾಸನಾ ವಿಧಿವಾಕ್ಯ. 'ಆತ್ಮ' ಎಂದರೆ ಜೀವಾತ್ಮ. ಬ್ರಹ್ಮನನ್ನು ಜೀವಾತ್ಮಾಭೇದೇನ ಉಪಾಸನಾ ಮಾಡಬೇಕು. ಭೇದೋಪಾಸನೆ ಕೂಡದು.

ಅಥ ಯೋಽನ್ಯಾಂ ದೇವತಾಮುಪಾಸ್ತೇ ಅನ್ಯೋಽಸಾವನ್ಯೋಽಹಮಸ್ಮೀತಿ ನ ಸ ವೇದ ಯಥಾ ಪಶುಃ (ಬೃ.ಉ.3.5.4) 'ಪರಮಾತ್ಮನನ್ನು ಅವನು ಬೇರೆ ನಾನು ಬೇರೆ ಎಂದು ಉಪಾಸನೆ ಮಾಡುವವನು ಅಜ್ಞಾನಿ, ಪಶುವಿನಂತೆ' ಎಂದು ಭೇದೋಪಾಸನಾ ನಿಂದೆ ಮಾಡುವ ಅರ್ಥವಾದ ವಾಕ್ಯ ಇದು. ಈ ವಾಕ್ಯದಲ್ಲಿಯೂ ಅದ್ವೈತೋಪಾಸನೆ ವಿಹಿತವಾಗಿದೆ.

ಯದ್ಯಪಿ ಇದು ಅರ್ಥವಾದ. ಆದರಿಂದ ಉಪಾಸನೆ ವಿಹಿತವಾಗಿಲ್ಲ, ಆದರೂ 'ಆತ್ಮೇತ್ಯೇವೋಪಾಸೀತ' ಎಂಬ ಅದ್ವೈತೋಪಾಸನೆಯು ಪ್ರಶಸ್ತ ಎನ್ನಲು ಭೇದೋಪಾಸನಾ ನಿಂದೆಯನ್ನು ಮಾಡುವುದರಿಂದ ಅರ್ಥಾತ್ ಅದ್ವೈತೋಪಾಸನೆ ವಿಹಿತವಾಗುತ್ತಿದೆ ಎಂದು ಅಭಿಪ್ರಾಯ.

**ಕಿಂ ಚ ತ್ವಯೈವ ತೃತೀಯಸ್ಯ ತೃತೀಯೇ ಪಾದೇ ಆನಂದಾದಯಃ ಇತಿಸೂತ್ರೇ 'ಆನಂದಂ ಬ್ರಹ್ಮ' ಇತ್ಯಾದಿ ಶ್ರುತಿಸಿದ್ಧಾಃ ಆನಂದಾದಯಃ, ವ್ಯತಿಹಾರ ಇತಿ ಸೂತ್ರೇ 'ತದ್ಯೋಽಹಂ' ಇತಿ ಶ್ರುತ್ಯುಕ್ತಂ ಜೀವಸ್ಯ ಈಶ್ವರತ್ವಂ ಈಶ್ವರಸ್ಯ ಚ ಜೀವತ್ವಂ ಉಪಾಸ್ಯಮಿತ್ಯುಕ್ತಂ । ತಥಾ**

**ಉತ್ತರಸ್ಮಿಂಸ್ತಾಪನೀಯೇ ಶೈಬ್ಯಪ್ರಶ್ನೇಽಥ ಕಾಠಕೇ**
**ಮಾಂಡೂಕಾದೌ ಚ ಸರ್ವತ್ರ ನಿರ್ಗುಣೋಪಾಸ್ತಿರೀರಿತಾ ॥**

**ಇತಿ ನಿರ್ಗುಣಂ ಬ್ರಹ್ಮಾಪ್ಯುಪಾಸ್ಯಮಿತ್ಯುಕ್ತಂ ।**

ಮತ್ತು ನೀನೇ ಬ್ರಹ್ಮಸೂತ್ರ ತೃತೀಯಾಧ್ಯಾಯ ತೃತೀಯಪಾದದಲ್ಲಿ ಆನಂದಾದಯಃ

ಪ್ರಧಾನಸ್ಯ (ಬ್ರ.ಸೂ.3.3.12) ಎಂಬ ಸೂತ್ರದಲ್ಲಿ 'ಆನಂದಂ ಬ್ರಹ್ಮ ರಾತಿರ್ದಾತುಃ ಪರಾಯಣಂ' (ಬೃ.ಉ.5.9.28) ಎಂಬ ಶ್ರುತ್ಯುಕ್ತವಾದ ಆನಂದಾದಿಗಳು ಉಪಾಸ್ಯವೆಂದು ಹೇಳಿರುವೆ.

'ವ್ಯತಿಹಾರೋ ವಿಶಿಂಷಂತಿ ಹೀತರವತ್' (ಬ್ರ.ಸೂ.3.3.38) ಎಂಬ ಸೂತ್ರ ಶಾಂಕರಭಾಷ್ಯದಲ್ಲಿಯೂ 'ತದ್ಯೋಽಹಂ ಸೋಽಸೌ, ಯೋಽಸೌ ಸೋಽಹಮಸ್ಮಿ' ನಾನು ಅವನೇ ಅವನು ನಾನೇ ಆಗಿದ್ದೇನೆ' ಎಂಬ ಐತರೇಯಾರಣ್ಯಕ ವಾಕ್ಯದಲ್ಲಿ ಹೇಳಿದಂತೆ 'ಜೀವನಲ್ಲಿ ಈಶ್ವರತ್ವ ಈಶ್ವರನಲ್ಲಿ ಜೀವತ್ವಗಳು ಎರಡೂ ಉಪಾಸ್ಯವಾಗಿವೆ' ಎಂದಿದೆ.

ಮತ್ತು ನೃಸಿಂಹೋತ್ತರತಾಪನೀಯದಲ್ಲಿ 'ಸರ್ವಸಂಹಾರ ಸಮರ್ಥ, ತಿರಸ್ಕಾರವನ್ನು ಸಹಿಸದವನು, ಸರ್ವಶಕ್ತ ಸರ್ವವ್ಯಾಪ್ತ ಸದಾಉಜ್ವಲ ಅವಿದ್ಯಾಕಾರ್ಯರಹಿತ ತನ್ನ ಬಂಧನವನ್ನು ತಾನೇ ಪರಿಹರಿಸಿಕೊಂಡಿರುವವನು ಸರ್ವದಾ ದ್ವೈತರಹಿತ ಆನಂದಸ್ವರೂಪ ಸರ್ವಾಶ್ರಯ ಸತ್ಯಸ್ವರೂಪ ಅವಿದ್ಯೆ ತಮಸ್ಸುಗಳನ್ನು ದೂರಮಾಡಿಕೊಂಡವನು ನೃಸಿಂಹ ನಾನೇ. ಅದರಿಂದ ಆತ್ಮನನ್ನು ಪರಬ್ರಹ್ಮನೆಂದು ಅನುಸಂಧಾನ ಮಾಡಬೇಕು' ಎಂದು ನಿರ್ಗುಣಬ್ರಹ್ಮನ ಉಪಾಸನೆ ವಿಹಿತವಾಗಿದೆ.

ಹಾಗೇ ಪ್ರಶ್ನೋಪನಿಷತ್ತಿನಲ್ಲಿ ಶೈಬ್ಯ ಸತ್ಯಕಾಮನು ಪಂಚಮಪ್ರಶ್ನೆಯನ್ನು ಮಾಡುತ್ತಾನೆ- ಪ್ರಣವೋಪಾಸನೆಗೆ ಯಾವ ಲೋಕಪ್ರಾಪ್ತಿಯು ಫಲವಾಗಿ ಲಭಿಸುತ್ತದೆ? ಎಂದು ಕೇಳುತ್ತಾನೆ. ಪಿಪ್ಪಲಾದರು ಪರ ಅಪರ ಬ್ರಹ್ಮಗಳನ್ನು ಉಪದೇಶಿಸಿ 'ತ್ರಿಮಾತ್ರಪ್ರಣವೋಪಾಸಕನು ಪರಮ ಪುರುಷಧ್ಯಾನದಿಂದ ಬ್ರಹ್ಮಲೋಕವನ್ನು ಹೊಂದುತ್ತಾನೆ' ಎನ್ನುತ್ತ ಸಗುಣಬ್ರಹ್ಮೋಪಾಸನೆಯನ್ನು ವಿಧಾನ ಮಾಡುತ್ತಾರೆ.

ಹಾಗೇ ಕಾಠಕದಲ್ಲಿಯೂ 'ಅಶಬ್ದ ಅಸ್ಪರ್ಶ ಅರೂಪ ಅರಸ ಅಗಂಧ ಅನಾದಿ ಅನಂತನಾದ ಪರಬ್ರಹ್ಮನ ಉಪಾಸನೆಯಿಂದ ಮುಕ್ತಿ ಲಭಿಸುತ್ತದೆ. ಆ ಪರಬ್ರಹ್ಮ ಕಾಣಲು ಸಿಗುವವನಲ್ಲ ಗುಪ್ತವಾಗಿ ಹೃದಯ ಗುಹೆಯಲ್ಲಿ ಅವನನ್ನು ಧ್ಯಾನಮಾಡಿದರೆ ಹರ್ಷಶೋಕಗಳಿಂದ ಮುಕ್ತನಾಗುತ್ತಾನೆ (ಕಠ. 3.15,16) ಎಂದು ನಿರ್ಗುಣೋಪಾಸನೆ ವಿಹಿತವಾಗಿದೆ.

ಹಾಗೇ ಮಾಂಡೂಕ್ಯದಲ್ಲಿಯೂ 'ಅಂತಃಪ್ರಜ್ಞನಲ್ಲ ಬಹಿಃಪ್ರಜ್ಞನಲ್ಲ ಉಭಯತಃಪ್ರಜ್ಞನಲ್ಲ ಪ್ರಜ್ಞಾನ ಘನನಲ್ಲ ಅಪ್ರಜ್ಞನಲ್ಲ, ಅದೃಷ್ಟ ಅವ್ಯವಹಾರ್ಯ ಅಗ್ರಾಹ್ಯ ಅಲಕ್ಷಣ ಅಚಿಂತ್ಯ ಅವ್ಯಪದೇಶ್ಯ ಏಕಾತ್ಮ್ಯಪ್ರತ್ಯಯಸಾರ ಪ್ರಪಂಚೋಪಶಮ ಶಿವ ಅದ್ವೈತನಾದ ತುರೀಯನೇ ಆತ್ಮ ಅವನನ್ನು ಉಪಾಸನೆ ಮಾಡಬೇಕೆ'ಂದು ನಿರ್ಗುಣೋಪಾಸನೆ ವಿಹಿತವಾಗಿದೆ.

'ತಮೇವೈಕಂ ಜಾನಥ ಆತ್ಮಾನಂ' ಆ ನಿರ್ಗುಣ ಆತ್ಮನನ್ನೇ ಉಪಾಸನೆ ಮಾಡಿರಿ ಬೇರೆಲ್ಲವನ್ನೂ ಬಿಡಿರಿ. ಅವನೇ ಮೋಕ್ಷಕಾರಣ ಎಂದು ಮುಂಡಕದಲ್ಲಿಯೂ ನಿರ್ಗುಣಬ್ರಹ್ಮನ ಉಪಾಸನೆಯೇ ವಿಹಿತವಾಗಿದ ಎಂದು ನೀನೇ ಹೇಳಿರುವಿ.

ಉಪಾಸನೆ ಭ್ರಮರೂಪವಾದ್ದರಿಂದ ಉಪಾಸ್ಯನು ಅತಾತ್ವಿಕನೆಂದಾದರೆ ಅದ್ವೈತಿಗೇ ಇದು ಅನಿಷ್ಟ. ನಿರ್ಗುಣ ಬ್ರಹ್ಮ ಅತಾತ್ವಿಕ ಎಂದಾದೀತು.

ಏವಂ ಚ ಆನಂದಾದಿಗಳೂ ಐಕ್ಯವೂ ನಿರ್ಗುಣಬ್ರಹ್ಮವೂ ಉಪಾಸ್ಯವಾಗಿದ್ದರೂ ಹೇಗೆ ತಾತ್ವಿಕವೋ ಹಾಗೇ ಸತ್ಯಕಾಮತ್ವಾದಿ ಬ್ರಹ್ಮಗುಣಗಳು ಉಪಾಸ್ಯವಾದರೂ ತಾತ್ವಿಕವೇ ಎಂದಾಗಲಿ.

ಮತ್ತು ಸತ್ಯಕಾಮತ್ವಾದಿ ಅವಾಸ್ತವವೆಂದರೆ ಅದ್ವೈತಿಗೆ ಸ್ವವಚನ ವಿರೋಧವೂ ಬರುತ್ತದೆ. ಶಾಂಕರಭಾಷ್ಯದಲ್ಲಿ 'ವ್ಯತಿಹಾರೋ ವಿಶಿಂಷಂತಿ ಹೀತರವತ್' ಎಂಬ ಸೂತ್ರದಲ್ಲಿ ಹೇಳಿದೆ— 'ಧ್ಯಾನೋಪಾಸನೆಗಾಗಿ ಸತ್ಯಕಾಮತ್ವಾದಿ ಗುಣಗಳನ್ನು ಉಪದೇಶಿಸಿದ್ದರೂ ಆ ಗುಣಗಳಲ್ಲಿಯೂ ಶ್ರುತಿಗೆ ತಾತ್ಪರ್ಯವಿರುವುದರಿಂದ ಆ ಗುಣವುಳ್ಳ ಈಶ್ವರನು ಸಿದ್ಧನಾಗುತ್ತಾನೆ. ಹಾಗೇ ಐಕ್ಯವು ಉಪಾಸ್ಯವಾದರೂ ಐಕ್ಯದಲ್ಲಿಯೂ ತಾತ್ಪರ್ಯವಿರುವುದರಿಂದ ಐಕ್ಯ ಸಿದ್ಧಿಸುತ್ತದೆ' ಎಂದು.

ಭಾಮತಿಯಲ್ಲಿಯೂ ಹೀಗೆ ಹೇಳಿದೆ— ಶ್ರುತಿಯು ಐಕ್ಯೋಪಾಸನೆಯನ್ನು ವಿಧಿಸುವುದರಿಂದ ಐಕ್ಯಕ್ಕೆ ದಾರ್ಢ್ಯವೇ ಬರುತ್ತದೆ. ಅದನ್ನು ನಾವು ಉಪೇಕ್ಷೆ ಮಾಡುವುದಿಲ್ಲ. ಇದಕ್ಕೆ ಉದಾಹರಣೆ— ಸತ್ಯಕಾಮತ್ವಾದಿ ಉಪಾಸನೆಯನ್ನು ವಿಧಿಸುವುದರಿಂದ ಆ ಗುಣಉಳ್ಳ ಈಶ್ವರನು ಸಿದ್ಧಿಸುತ್ತಾನೆ' ಎಂದು—

**ಏವಂಚ ಉಪಾಸ್ಯತ್ವೇಽಪಿ, ಆನಂದಾದೇರಿವ, ಐಕ್ಯಸ್ಯೇವ, ನಿರ್ಗುಣಬ್ರಹ್ಮಣ ಇವ ಚ ಸತ್ಯಕಾಮತ್ವಾದೇರಪಿ ತಾತ್ವಿಕತಾ ಅಸ್ತು। ಭಾಷಿತಂ ಹಿ ತ್ವಯ್ಯೈವ 'ವ್ಯತಿಹಾರ' ಇತಿ ಸೂತ್ರೇ 'ಯಥಾ ಧ್ಯಾನಾರ್ಥೇಪಿ ಸತ್ಯಕಾಮತ್ವಾದ್ಯುಪದೇಶೇ ತದ್ಗುಣಃ ಈಶ್ವರಃ ಸಿಧ್ಯತಿ, ತದ್ವತ್ ಐಕ್ಯಮಿ'ತಿ। ಭಾಮತ್ಯಾಂ ಚ 'ತಾದಾತ್ಮ್ಯ ದಾರ್ಢ್ಯಂ ತು ಭವತ್ ನೋಪೇಕ್ಷಾಮಹೇ। ಸತ್ಯಕಾಮಾದಿ ಗುಣೋಪದೇಶೇ ಇವ ತದ್ಗುಣೇಶ್ವರಸಿದ್ಧೇಃ' ಇತಿ।**

**ವಿಶೇಷವಿಚಾರ**—ಇಲ್ಲಿ ಅದ್ವೈತಸಿದ್ಧಿಯಲ್ಲಿ ಹೀಗೆ ಆಕ್ಷೇಪವಿದೆ—'ತದ್ಗುಣನಾದ ಈಶ್ವರನು ಸಿದ್ಧನಾಗುತ್ತಾನೆ' ಎಂದು ಭಾಷ್ಯದಲ್ಲಿರುವ 'ತದ್ಗುಣ' ಶಬ್ದವು ಅತದ್ಗುಣ ಸಂವಿಜ್ಞಾನ ಬಹುವ್ರೀಹಿ ತಾತ್ಪರ್ಯದಿಂದ ಗುಣರಹಿತಪರಬ್ರಹ್ಮಪರವೆಂದು ಗ್ರಹಿಸಬೇಕು. ಹಾಗೇ 'ಟೀಕಾ ನೇಯಾ' ಅಂದರೆ ಭಾಮತಿಯಲ್ಲಿ 'ಸತ್ಯಕಾಮಾದಿಗುಣೋಪದೇಶಾತ್ ತದ್ಗುಣೇಶ್ವರಸಿದ್ಧಿಃ' ಎಂದುದನ್ನೂ ಇದಕ್ಕೆ ಅನುಗುಣವಾಗಿ ನಯನ ಮಾಡಬೇಕು, '

ಇಲ್ಲಿ ಸಿದ್ಧಿಕಾರ 'ಟೀಕಾ ನೇಯಾ' ಎಂದು ಹೇಳುತ್ತ ಹಾಗೆ ಹೇಳುವಲ್ಲಿ ಕ್ಲೇಶ ಉಂಟೆಂಬುದನ್ನೂ 'ಭಾಷ್ಯ ಟೀಕಾವಚನಗಳು ಪ್ರಮಾಣವೇ' ಎಂಬುದನ್ನೂ ಪರ್ಯಾಯವಾಗಿ ಅವನೇ ಒಪ್ಪಿಕೊಂಡಂತಾಗಿದೆ. ಆದರಿಂದ ಅವನ ಆಕ್ಷೇಪವನ್ನು ನಾವು ಉಪೇಕ್ಷೆ ಮಾಡಬಹುದು, ಉತ್ತರ ಕೊಡಬೇಕಾಗಿಲ್ಲ, 'ಗುಣದಲ್ಲಿ ತಾತ್ಪರ್ಯವಿಲ್ಲ ಗುಣೋಕ್ತಿ ಪ್ರಮಾಣವಲ್ಲ' 'ಅದರಿಂದ

ಅರ್ಥಾತ್ ಗುಣಉಳ್ಳ ಈಶ್ವರನು ಸಿದ್ಧನಾಗುತ್ತಾನೆ' ಎನ್ನುವುದು ವ್ಯಾಹತವಾಗುತ್ತದೆ. ಗುಣವಿದೆ ಎನ್ನುವಲ್ಲಿ ತಾತ್ಪರ್ಯವಿಲ್ಲದಿದ್ದರೆ ಗುಣಸಿದ್ಧಿಯಾಗದು, ಗುಣಸಿದ್ಧಿಯಾಗದಿದ್ದರೆ ಗುಣದಿಂದ ಈಶ್ವರಸಿದ್ಧಿ ಹೇಗಾದೀತು? ಅಸಿದ್ಧಹೇತುವಿನಿಂದ ಸಾಧ್ಯಸಿದ್ಧಿ ಉಂಟೆ?

'ಬ್ರಹ್ಮನಲ್ಲಿ ಆನಂದಾದಿಗಳು ವಾಸ್ತವ, ಕಾರಣಾಂತರದಿಂದ ಸತ್ಯಕಾಮತ್ವಾದಿಗಳು ಮಾತ್ರ ಅವಾಸ್ತವ' ಎನ್ನಲು ಏನೂ ಕಾರಣವಿಲ್ಲ—

**ನ ಚ ಆನಂದಾದಿವಾಕ್ಯ-ಸತ್ಯಕಾಮಾದಿವಾಕ್ಯಯೋಃ ಮಾನಾಂತರಾವಿರೋಧೇ, ತದಪ್ರಾಪ್ತೌ, ಉಪಾಸನಾವಿಧ್ಯಶ್ರವಣೇ, ನಿರ್ಗುಣಶ್ರುತಿವಿರೋಧೇ ಚ ತುಲ್ಯೇಽಪಿ ಆನಂದಾದಯೋ ವಾಸ್ತವಾಃ ಸತ್ಯಕಾಮಾದಯಸ್ತು ವಾಗ್‌ಧೇನುತ್ವಾದಿವತ್ ಪುಂತಂತ್ರಾ ವಾ, ವ್ಯಾವಹಾರಿಕಾ ವಾ ಇತಿ ಯುಕ್ತಂ ।**

ಆನಂದಾದಿಗಳನ್ನು ಹೇಳುವ ಶ್ರುತಿವಾಕ್ಯಗಳಿಗೂ ಸತ್ಯಕಾಮತ್ವಾದಿಗಳನ್ನು ಹೇಳುವ ಶ್ರುತಿವಾಕ್ಯಗಳಿಗೂ ಪ್ರಮಾಣಾಂತರ ವಿರೋಧವಿಲ್ಲದಿರುವುದು ಸಮಾನವೆ. ಅವು ಹೇಳುವ ವಿಷಯಗಳು ಪ್ರಮಾಣಾಂತರ ಸಿದ್ಧವಾಗಿಲ್ಲದಿರುವುದು ಸಮಾನವೆ. ಆ ವಿಷಯಗಳು ಉಪಾಸನೆಗಾಗಿ ಉಕ್ತವಾಗದಿರುವುದೂ ಸಮಾನವೆ. ಅವುಗಳಿಗೆ ನಿರ್ಗುಣಶ್ರುತಿವಿರೋಧ ಬರುತ್ತಿರುವುದೂ ಸಮಾನವೆ. ಹಾಗಿದ್ದರೂ ಆನಂದಾದಿಗಳು ವಾಸ್ತವ, ಸತ್ಯಕಾಮತ್ವಾದಿಗಳು ಮಾತ್ರ ವಾಸ್ತವವಲ್ಲ ಏಕೆ? ಸತ್ಯಕಾಮತ್ವಾದಿಗಳು 'ವಾಚಂ ಧೇನುಮುಪಾಸೀತ' ಇತ್ಯಾದಿ ವಾಕ್ಯಗಳು ಹೇಳುವಂತೆ ಪುರುಷ ಪ್ರಯತ್ನಾಧೀನವಾಗಿ ಉಪಾಸನೆಗಾಗಿ ಕಲ್ಪಿತವಾದವುಗಳು ಎನ್ನುವುದಾಗಲಿ, ಕೇವಲ ಪ್ರಾತಿಭಾಸಿಕ ಅಥವಾ ವ್ಯಾವಹಾರಿಕ ಎನ್ನುವುದಾಗಲಿ ಏಕೆ? ಏನೂ ವಿಶೇಷ ಕಾರಣವಿಲ್ಲ.

**ವಿಶೇಷವಿಚಾರ**—ಯದ್ಯಪಿ ಸತ್ಯಕಾಮಾದಿ ವಾಕ್ಯಗಳಲ್ಲಿ 'ಸೋಽನ್ವೇಷ್ಟವ್ಯಃ ಸ ವಿಜಿಜ್ಞಾಸಿತವ್ಯಃ' ಎಂದಿದೆ. (ಛಾಂ.8.2.1) 'ಅನ್ವೇಷ್ಟವ್ಯಃ' ಪರೋಕ್ಷವಾಗಿ ತಿಳಿಯಬೇಕು, 'ವಿಜಿಜ್ಞಾಸಿತವ್ಯಃ' ಉಪಾಸನ ಮಾಡಬೇಕು' ಎಂದು ಉಪಾಸನಾವಿಧಿ ಮೇಲ್ನೋಟಕ್ಕೆ ಕಾಣುತ್ತದೆ. ಆದರೆ 'ವಿಜಿಜ್ಞಾಸಿತವ್ಯಃ' ಎಂದರೆ ವಿಚಾರದಿಂದ ತಿಳಿಯಬೇಕೆಂದಿಷ್ಟೇ ಅರ್ಥ. ಧ್ಯಾನೋಪಾಸನೆ ಮಾಡಬೇಕೆಂದಲ್ಲ.

ಇಂದ್ರವಿರೋಚನರಿಗೆ ಉಪಾಸನೆಗಾಗಿ ಪ್ರಜಾಪತಿಯ ಉಪದೇಶವಿದೆಂದಿಟ್ಟುಕೊಂಡರೂ ಸತ್ಯಕಾಮಾದಿ ವಾಕ್ಯಗಳು ದಹರವಿದ್ಯಾದಿ ಪ್ರಕರಣ (ಛಾ.8.1.2)ದಲ್ಲಿಯೂ ಬರುತ್ತವೆ. 'ಯದಿದಮಸ್ಮಿನ್ ಬ್ರಹ್ಮಪುರೇ ದಹರಂ ಪುಂಡರೀಕಂ ವೇಶ್ಮ' ಎಂದು ಪ್ರಾರಂಭಿಸಿ 'ಏತತ್ ಸತ್ಯಂ ಬ್ರಹ್ಮಪುರಂ ಏಷ ತ ಆತ್ಮಾ ಅಪಹತ ಪಾಪ್ಮಾ...ಸತ್ಯಕಾಮಃ ಸತ್ಯಸಂಕಲ್ಪಃ' ಎಂದು ಮುಂತಾಗಿ ಸತ್ಯಕಾಮತ್ವಾದಿಗಳು ಇಲ್ಲಿ ಉಕ್ತವಾಗಿವೆ, ಉಪಾಸನಾವಿಧಿ ಇಲ್ಲ.

**ಯದಿಚ ಆನಂದಾದಯಃ ಸ್ವರೂಪಭೂತಾಃ ಇತಿ ನ ನಿರ್ಗುಣಶ್ರುತಿ ವಿರೋಧಃ**

**ತರ್ಹಿ ಬಲಶಕ್ತ್ಯಾದಯೋऽಪಿ ತಥೈವ । ಜ್ಞಾನಾತ್ಮಕೋ ಭಗವಾನ್ ಬಲಾತ್ಮಕೋ ಭಗವಾನ್ ಇತ್ಯಾದಿ ಶ್ರುತೇಃ । 'ಸಮಸ್ತಕಲ್ಯಾಣ ಗುಣಾತ್ಮಕಃ' ಇತ್ಯಾದಿಸ್ಮೃತೇಶ್ಚ ।**

ಆದರೂ ಆನಂದಾದಿಗುಣಗಳು ಬ್ರಹ್ಮನಿಗಿಂತ ಬೇರೆಯಲ್ಲ ಆವನ ಸ್ವರೂಪಭೂತವಾಗಿವೆ, ಆದರಿಂದ ಅವುಗಳಿಗೆ ನಿರ್ಗುಣಶ್ರುತಿವಿರೋಧವಿಲ್ಲ, ನಿರ್ಗುಣ ಶ್ರುತಿಯು ಬ್ರಹ್ಮನಿಗಿಂತ ಭಿನ್ನವಾದ ಆವನ ಗುಣಗಳನ್ನು ಮಾತ್ರ ನಿಷೇಧಿಸುತ್ತವೆ'—ಎನ್ನುವುದಾದರೆ, 'ಬಲಾದಿಗುಣಗಳೂ ಕೂಡ ಹಾಗೇ ಬ್ರಹ್ಮಸ್ವರೂಪಭೂತವಾಗಿವೆ' ಎಂದು ಶ್ರುತಿಸ್ಮೃತಿಗಳು ಹೇಳುತ್ತಿವೆ. ಆದರಿಂದ ನಿರ್ಗುಣ ಶ್ರುತಿವಿರೋಧಕ್ಕೆ ಅವಕಾಶವಿಲ್ಲ. 'ಜ್ಞಾನಸ್ವರೂಪನು ಭಗವಂತ, ಬಲಸ್ವರೂಪನು ಭಗವಂತ' ಎಂದು ಶ್ರುತಿ ಇದೆ. 'ಸಮಸ್ತಕಲ್ಯಾಣಗುಣಸ್ವರೂಪನು ಭಗವಂತನೆಂ'ದು ಸ್ಮೃತಿ ಇದೆ.



**ननु निर्गुणाद्युपासनं भ्रमोऽपि मणिप्रभायां मणिभ्रम इव फलसंवादि । उक्तं हि**

**''स्वयं भ्रमोऽपि संवादी यथा सम्यक् फलप्रदः ।**
**ब्रह्मतत्त्वोपासनापि तथा मुक्तिफलप्रदा ।।'' इति ।**

**नचैवं ब्रह्मासिद्धिः, उपासनस्य भ्रमत्वेऽपि शब्दजन्यस्य ज्ञानस्य प्रमात्वादिति चेन्न ।**

**प्रकृतेऽपि तथात्वोपपत्तेः । मणिप्रभायां मणित्वस्येव ब्रह्मणो मिथ्यात्वाभावेन ध्यानस्यापि सत्यब्रह्मविषयत्वाच्च । नच ब्रह्मविषयशाब्दधीजन्यस्य तदपरोक्षधीजनकस्य च ब्रह्मध्यानस्या-ब्रह्मविषयता युक्ता, ब्रह्मज्ञानहेतूनां श्रवणादीनामपि तथात्वा-पातात् ।**

**''ईक्षतिकर्म'' इतिसूत्रे-**

**''ईक्षणध्यानयोरेकः कार्यकारणभूतयोः ।**
**अर्थ औत्सर्गिकं तत्वविषयत्वं तथेक्षतेः ।।''**

**इति भामत्यां ''परात्परं पुरिशयं पुरुषमीक्षते'' इति ईक्षणकर्मणः**

परब्रह्मण एव ''परं पुरुषमभिध्यायीत'' इति ध्यातव्यत्वोक्त्या तद्विरोधाच्च ।

ननु ऐक्याद्युपासनं परोक्षप्रमाप्रवाहरूपम्, नतु ''वाचं धेनुमुपासीत'' इत्यादाविव ज्ञानविजातीयं वृत्त्यंतरं बुद्धिपूर्वकारोपो वेति चेत् समं प्रकृतेऽपि ।

नचैक्यादिकं ध्येयं ज्ञेयं च, सार्वज्ञादिकं तु ध्येयमेवेति युक्तम् । तत्र ''तत्त्वमसि'' इत्यादेरिवेहाप्यविधिरूपस्य वस्तुतत्व-निष्ठस्य ''यः सर्वज्ञ'' इत्यादेः सत्त्वेन विशेषहेत्वभावात् ।

ब्रह्मणो जगत्कर्तृत्वादिनारोप्योपास्यत्वे अग्निब्रह्मवाक्यवत् ब्रह्मण्यपि कारणवाक्यानां समन्वयस्यावक्तव्यत्वेन समन्वयाध्याया-नारंभापाताच्च ।

''य आत्माऽऽपहतपाप्मा'' इत्यारभ्य ''सत्यकामः सत्यसंकल्पः सोऽन्वेष्टव्यः स विजिज्ञासितव्य'' इति सत्यकामत्वादी-नामपहतपाप्मत्वादिभिः सह जिज्ञास्यत्वश्रवणाच्च । अपहतपाप्मत्वा-दीनामप्युपास्यत्वे तस्य भूताकाशेऽपि संभवेन दहराकाशस्य ब्रह्मत्वप्रतिपादकदहराधिकरणविरोधः ।

''एष सर्वेश्वर एष भूताधिपतिः'' इत्यादिधर्मानुक्त्वा तेषां ''तमेतं वेदानुवचनेन ब्राह्मणा विविदिषंति'' इति मुमुक्षुज्ञे-यत्वोक्तेश्च । ''यः सर्वज्ञः सर्वविद्यस्यैष महिमा भुवि'' इत्याद्युक्त्वा ''तद्विज्ञानेन परिपश्यंति धीरा'' इत्यपरोक्षप्रमाविषयत्वोक्तेश्च । ''तुर्यं तत्सर्वदृक्सदा'' इति तुरीये सार्वज्ञश्रवणाच्च ।

उपास्यत्वेऽपीति निर्गुणब्रह्मण इव सत्यकामत्वादीनामपि तात्त्विकता स्यादित्युक्तस्योद्धारमाशंकते— नन्विति । स्वयमिति ।। मणिप्रभायां मणिप्रत्यय

इत्यर्थः । दृष्टांतोऽपि विषम इत्याह— **मणिप्रभायामिति** ।। ननूपासनस्याब्रह्म विषयत्वात् भ्रमत्वमेवेत्याशंक्य निराकरोति–**तथात्वापातादिति** ।। अब्रह्मविषयत्वा-पातादित्यर्थः । ध्यानस्याब्रह्मविषयत्वांगीकारे स्ववचनविरोधमप्याह— **ईक्षतीति** ।। **नन्विति** ।। सत्यकामत्वाद्युपासनं तु वाग्धेनुत्वाद्युपासनसदृशमिति भावः ।। **ध्येयमेवेति** ।। तथाच ज्ञेयमेव तात्विकं न ध्येयमिति भावः ।। **अग्निब्रह्मवाक्यवदिति** ।। ''योषितमग्निं ध्यायीत'' ''नाम ब्रह्मेत्युपासीत'' इति योषिन्नाम्नोरग्निब्रह्मत्वप्रतिपादकवाक्यवदित्यर्थः ।



'ಆನಂದಾದಿಗುಣವೂ ಐಕ್ಯವೂ ನಿರ್ಗುಣಬ್ರಹ್ಮವೂ ಉಪಾಸ್ಯವೇ ಆದರೂ ತಾತ್ವಿಕವೆ ಎನ್ನುವುದಾದರೆ ಸತ್ಯಕಾಮತ್ವಾದಿ ಗುಣವೂ ಉಪಾಸ್ಯವಾದರೂ ತಾತ್ವಿಕ ಏಕಾಗಬಾರದು?' ಎಂದು ನಾವು ಕೇಳಿದ್ದಕ್ಕೆ ಅದ್ವೈತಿ ಪ್ರಶ್ನೆ ಮಾಡುತ್ತಾನೆ—ಯದ್ಯಪಿ ಉಪಾಸನೆ ಭ್ರಮರೂಪ ವಾಗಿರುವುದರಿಂದ ನಿರ್ಗುಣಬ್ರಹ್ಮ, ಆನಂದಾದಿಗುಣ ಮತ್ತು ಐಕ್ಯಗಳ ಉಪಾಸನೆಗಳೂ ಭ್ರಮವೆ. ಆದರೂ ಅವು ಫಲಸಂವಾದಿ, ಫಲಜನಕ. ಶುಕ್ತಿರಜತಾದಿ ಭ್ರಮಗಳಂತೆ ಫಲವಿಸಂವಾದಿಯಲ್ಲ. ಅವು ಭ್ರಮವೇ ಆದರೂ ಅರ್ಥಕ್ರಿಯಾರೂಪಫಲಜನಕವಲ್ಲದಿದ್ದರೂ ಮಣಿಪ್ರಭೆಯಲ್ಲಿ ಮಣಿಭ್ರಮ ಉಂಟಾದರೆ ಮಣಿಪ್ರಾಪ್ತಿ ರೂಪಫಲ ಸಿಗುವಂತೆ ನಿರ್ಗುಣಬ್ರಹ್ಮಾದಿಗಳ ಉಪಾಸನೆಯು ಮುಕ್ತಿಫಲ ಜನಕವಾಗಿದೆ. ಇದನ್ನು ಪೂರ್ವಿಕರು ಹೀಗೆ ಹೇಳಿದ್ದಾರೆ— 'ಮಣಿಭ್ರಮವು ಸ್ವತಃ ಭ್ರಮೆಯೆ ಆದರೂ ಮಣಿಪ್ರಾಪ್ತಿರೂಪ ಫಲಪ್ರದವಾಗುವಂತೆ ಬ್ರಹ್ಮತತ್ತ್ವೋಪಾಸನೆಯೂ ಸ್ವತಃಭ್ರಮವೇ ಆದರೂ ಮುಕ್ತಿಫಲಪ್ರದವಾಗುತ್ತದೆ'—

**ನನು ನಿರ್ಗುಣಾದ್ಯುಪಾಸನಂ ಭ್ರಮೋಽಪಿ ಮಣಿಪ್ರಭಾಯಾಂ ಮಣಿಭ್ರಮ ಇವ ಫಲ ಸಂವಾದಿ । ಉಕ್ತಂ ಹಿ—**

**ಸ್ವಯಂ ಭ್ರಮೋಽಪಿ ಸಂವಾದೀ ಯಥಾ ಸಮ್ಯಕ್ ಫಲಪ್ರದಃ।**
**ಬ್ರಹ್ಮತತ್ತ್ವೋಪಾಸನಾಪಿ ತಥಾ ಮುಕ್ತಿಫಲಪ್ರದಾ ।। ಇತಿ ।**

ಯದ್ಯಪಿ ಮಣಿಪ್ರಭೆಯಲ್ಲಿ ಮಣಿತ್ವಾರೋಪರೂಪವಾದ ಮಣಿಭ್ರಮವು ಮಣಿಪ್ರಾಪ್ತಿರೂಪ ಫಲಕ್ಕೆ ಕಾರಣವಾದರೂ ಆ ಭ್ರಮದಿಂದ ಮಣಿಪ್ರಭೆಯಲ್ಲಿ ಮಣಿಯ ಅಭೇದರೂಪ ವಿಷಯಸತ್ಯತ್ವಕ್ಕೆ ಅದು ಸಾಧಕವಾಗದು. ಹಾಗೇ ಬ್ರಹ್ಮೋಪಾಸನೆಯೂ ಭ್ರಮವೆಂದು ಒಪ್ಪಿದರೆ ಅದು ಬ್ರಹ್ಮಸತ್ಯತ್ವಕ್ಕೆ ಸಾಧಕವಾಗಲಾರದು ಎಂಬ ಸಮಸ್ಯೆ ಬರುತ್ತದೆ. ಅದಕ್ಕೆ ಅದ್ವೈತಿ ಹೀಗೆ ಉತ್ತರ ಕೊಡುತ್ತಾನೆ— ಬ್ರಹ್ಮೋಪಾಸನೆಗೆ ಮೊದಲು ಅದಕ್ಕೆ ಕಾರಣವಾದ

ಬ್ರಹ್ಮಜ್ಞಾನ ಬೇಕು. ಬ್ರಹ್ಮಜ್ಞಾನವು ಉಪನಿಷದ್‌ವಾಕ್ಯಜನ್ಯವಾಗಿದ್ದು ಯಥಾರ್ಥಜ್ಞಾನವೇ ಆಗಿರುವುದರಿಂದ ಆ ಜ್ಞಾನದಿಂದ ಬ್ರಹ್ಮಸತ್ಯತ್ವ ಸಿದ್ಧಿಯಾಗುವುದು ಎಂದು.

ಹಾಗಾದರೆ ನಾವೂ ಹೇಳುತ್ತೇವೆ, ಸತ್ಯಕಾಮತ್ವಾದಿ ಉಪಾಸನೆಯು ಭ್ರಮರೂಪವಾಗಿದ್ದು ಸತ್ಯಕಾಮತ್ವಾದಿ ಗುಣಗಳ ಸತ್ಯತ್ವಕ್ಕೆ ಸಾಧಕವಾಗದಿದ್ದರೂ ಆ ಉಪಾಸನೆಗೆ ಕಾರಣವಾಗಿ ಮೊದಲಿಗೆ ಉಪನಿಷದ್‌ವಾಕ್ಯಗಳಿಂದ ಬರುವ ಸತ್ಯಕಾಮತ್ವಾದಿ ಜ್ಞಾನವು ಯಥಾರ್ಥವಾದ್ದರಿಂದ ಆ ಜ್ಞಾನದಿಂದಲೆ ಸತ್ಯಕಾಮತ್ವಾದಿ ಗುಣಗಳಿಗೆ ಸತ್ಯತ್ವಸಿದ್ಧಿ ಎನ್ನಲು ಬರುತ್ತದೆ—

**ನ ಚೈವಂ ಬ್ರಹ್ಮಾಸಿದ್ಧಿಃ। ಉಪಾಸನಸ್ಯ ಭ್ರಮತ್ವೇಽಪಿ ಶಬ್ದಜನ್ಯಸ್ಯ ಜ್ಞಾನಸ್ಯ ಪ್ರಮಾತ್ವಾದಿತಿ ಚೇನ್ನ। ಪ್ರಕೃತೇಽಪಿ ತಥಾತ್ವೋಪಪತ್ತೇಃ॥**

ವಸ್ತುತಃ ಬ್ರಹ್ಮೋಪಾಸನೆಯನ್ನು ಭ್ರಮೆ ಎಂದು ಅದ್ವೈತಿ ಒಪ್ಪಿರುವುದೇ ಸರಿಯಲ್ಲ. ಭ್ರಮೆಯೆಂದು ಒಪ್ಪಿ ಮಣಿಭ್ರಮೆಯ ದೃಷ್ಟಾಂತದಿಂದ ಫಲಜನಕತ್ವವನ್ನು ಉಪಪಾದನ ಮಾಡಿದ್ದು ಸರಿಯಲ್ಲ—

**ಮಣಿಪ್ರಭಾಯಾಂ ಮಣಿತ್ವಸ್ಯೇವ ಬ್ರಹ್ಮಣೋ ಮಿಥ್ಯಾತ್ವಾಭಾವೇನ ಧ್ಯಾನಸ್ಯಾಪಿ ಸತ್ಯಬ್ರಹ್ಮ ವಿಷಯತ್ವಾಚ್ಚ।**

ಮಣಿಪ್ರಭೆಯಲ್ಲಿ ಮಣಿತ್ವ ಮಿಥ್ಯಾ. ಮಿಥ್ಯಾಭೂತವಾದ ಮಣಿತ್ವ ಧ್ಯಾನವು ಭ್ರಮೆಯಾಗಿರಲಿ. ಆದರೆ, ಬ್ರಹ್ಮ ಸತ್ಯ. ಸತ್ಯ ಬ್ರಹ್ಮ ವಿಷಯದಲ್ಲಿ ಬರುವ ಧ್ಯಾನರೂಪ ಉಪಾಸನೆ ಏಕೆ ಭ್ರಮೆಯಾಗಿರಬೇಕು? ಅದು ಪ್ರಮಾರೂಪವೆ. ಆದರಿಂದ ಬ್ರಹ್ಮೋಪಾಸನೆಯಿಂದ ಮುಕ್ತಿಫಲ ಬರುವುದು ಸಹಜವೆ. ಅದಕ್ಕೆ ಮಿಥ್ಯಾಭೂತ ಮಣಿತ್ವ ಭ್ರಮವು ಫಲಜನಕವಾಗುವುದನ್ನು ಉದಾಹರಣೆಯಾಗಿ ಏಕೆ ಕೊಡಬೇಕು? ಅದು ಅಸಂಗತ.

**ನ ಚ ಬ್ರಹ್ಮವಿಷಯ ಶಾಬ್ದಧೀಜನ್ಯಸ್ಯ ತದಪರೋಕ್ಷ ಧೀಜನಕಸ್ಯ ಚ ಬ್ರಹ್ಮ ಧ್ಯಾನಸ್ಯ ಅಬ್ರಹ್ಮವಿಷಯತಾ ಯುಕ್ತಾ। ಬ್ರಹ್ಮಜ್ಞಾನ ಹೇತೂನಾಂ ಶ್ರವಣಾದೀನಾಮಪಿ ತಥಾತ್ವಾಪಾತಾತ್।**

'ಶುದ್ಧ ಬ್ರಹ್ಮ ಸತ್ಯವೇ ಆದರೂ ನಿರ್ಗುಣ–ಸಗುಣರೂಪವಾದ ಎರಡೂ ವಿಶಿಷ್ಟ ಬ್ರಹ್ಮಗಳು ಬ್ರಹ್ಮವೇ ಅಲ್ಲ. ಅವು ಎರಡೂ ಮಿಥ್ಯಾ. ಆದರಿಂದ ಅವುಗಳ ಉಪಾಸನೆಯೂ ಅಬ್ರಹ್ಮ ವಿಷಯಕ. ಭ್ರಮವೆ ಎನ್ನುತ್ತೇನೆ' ಎಂದು ಅದ್ವೈತಿ ಹೇಳುತ್ತಾನೆ. ಇದು ಸರಿಯಲ್ಲ. ಅಬ್ರಹ್ಮಧ್ಯಾನರೂಪವಾದ ಬ್ರಹ್ಮೋಪಾಸನೆಗೆ ಕಾರಣವಾದ ಬ್ರಹ್ಮಜ್ಞಾನವು ಬ್ರಹ್ಮವಿಷಯಕ ಮತ್ತು ಜನ್ಯವಾದ ಬ್ರಹ್ಮಾಪರೋಕ್ಷ ಜ್ಞಾನವೂ ಬ್ರಹ್ಮವಿಷಯಕವೆಂದರೆ ಅದು ಯುಕ್ತವಾಗಲಾರದು. ಧ್ಯಾನಜ್ಞಾನಗಳು ಸಮಾನವಿಷಯಕವಾದರೆ ಮಾತ್ರ ಅವುಗಳಿಗೆ ಕಾರ್ಯಕಾರಣಭಾವ ಯುಕ್ತವಾಗುವುದು.

इत्यर्थः । दृष्टांतोऽपि विषम इत्याह— **मणिप्रभायामिति ।।** ननूपासनस्याब्रह्म विषयत्वात् भ्रमत्वमेवेत्याशंक्य निराकरोति–**तथात्वापातादिति ।।** अब्रह्मविषयत्वापातादित्यर्थः । ध्यानस्याब्रह्मविषयत्वांगीकारे स्ववचनविरोधमप्याह— **ईक्षतीति ।। नन्विति ।।** सत्यकामत्वाद्युपासनं तु वाग्धेनुत्वाद्युपासनसदृशमिति भावः **।। ध्येयमेवेति ।।** तथाच ज्ञेयमेव तात्विकं न ध्येयमिति भावः ।। **अग्निब्रह्मवाक्यवदिति ।।** ''योषितमग्निं ध्यायीत'' ''नाम ब्रह्मेत्युपासीत'' इति योषिन्नाम्नोरग्निब्रह्मत्वप्रतिपादकवाक्यवदित्यर्थः ।



'ಆನಂದಾದಿಗುಣವೂ ಐಕ್ಯವೂ ನಿರ್ಗುಣಬ್ರಹ್ಮವೂ ಉಪಾಸ್ಯವೇ ಆದರೂ ತಾತ್ತ್ವಿಕವೆ ಎನ್ನುವುದಾದರೆ ಸತ್ಯಕಾಮತ್ವಾದಿ ಗುಣವೂ ಉಪಾಸ್ಯವಾದರೂ ತಾತ್ತ್ವಿಕ ಏಕಾಗಬಾರದು?' ಎಂದು ನಾವು ಕೇಳಿದ್ದಕ್ಕೆ ಅದ್ವೈತಿ ಪ್ರಶ್ನೆ ಮಾಡುತ್ತಾನೆ—ಯದ್ಯಪಿ ಉಪಾಸನೆ ಭ್ರಮರೂಪವಾಗಿರುವುದರಿಂದ ನಿರ್ಗುಣಬ್ರಹ್ಮ, ಆನಂದಾದಿಗುಣ ಮತ್ತು ಐಕ್ಯಗಳ ಉಪಾಸನೆಗಳೂ ಭ್ರಮವೆ. ಆದರೂ ಅವು ಫಲಸಂವಾದಿ, ಫಲಜನಕ. ಶುಕ್ತಿರಜತಾದಿ ಭ್ರಮಗಳಂತೆ ಫಲವಿಸಂವಾದಿಯಲ್ಲ. ಅವು ಭ್ರಮವೇ ಆದರೂ ಅರ್ಥಕ್ರಿಯಾರೂಪಫಲಜನಕವಲ್ಲದಿದ್ದರೂ ಮಣಿಪ್ರಭೆಯಲ್ಲಿ ಮಣಿಭ್ರಮ ಉಂಟಾದರೆ ಮಣಿಪ್ರಾಪ್ತಿ ರೂಪಫಲ ಸಿಗುವಂತೆ ನಿರ್ಗುಣಬ್ರಹ್ಮಾದಿಗಳ ಉಪಾಸನೆಯು ಮುಕ್ತಿಫಲ ಜನಕವಾಗಿದೆ. ಇದನ್ನು ಪೂರ್ವಿಕರು ಹೀಗೆ ಹೇಳಿದ್ದಾರೆ— 'ಮಣಿಭ್ರಮವು ಸ್ವತಃ ಭ್ರಮೆಯೆ ಆದರೂ ಮಣಿಪ್ರಾಪ್ತಿರೂಪ ಫಲಪ್ರದವಾಗುವಂತೆ ಬ್ರಹ್ಮತತ್ತ್ವೋಪಾಸನೆಯೂ ಸ್ವತಃಭ್ರಮವೇ ಆದರೂ ಮುಕ್ತಿಫಲಪ್ರದವಾಗುತ್ತದೆ'—

**ನನು ನಿರ್ಗುಣಾದ್ಯುಪಾಸನಂ ಭ್ರಮೋಽಪಿ ಮಣಿಪ್ರಭಾಯಾಂ ಮಣಿಭ್ರಮ ಇವ ಫಲ ಸಂವಾದಿ । ಉಕ್ತಂ ಹಿ—**

**ಸ್ವಯಂ ಭ್ರಮೋಽಪಿ ಸಂವಾದೀ ಯಥಾ ಸಮ್ಯಕ್ ಫಲಪ್ರದಃ।**
**ಬ್ರಹ್ಮತತ್ತ್ವೋಪಾಸನಾಪಿ ತಥಾ ಮುಕ್ತಿಫಲಪ್ರದಾ ।। ಇತಿ ।**

ಯದ್ಯಪಿ ಮಣಿಪ್ರಭೆಯಲ್ಲಿ ಮಣಿತ್ವಾರೋಪರೂಪವಾದ ಮಣಿಭ್ರಮವು ಮಣಿಪ್ರಾಪ್ತಿರೂಪ ಫಲಕ್ಕೆ ಕಾರಣವಾದರೂ ಆ ಭ್ರಮದಿಂದ ಮಣಿಪ್ರಭೆಯಲ್ಲಿ ಮಣಿಯ ಅಭೇದರೂಪ ವಿಷಯಸತ್ಯತ್ವಕ್ಕೆ ಅದು ಸಾಧಕವಾಗದು. ಹಾಗೇ ಬ್ರಹ್ಮೋಪಾಸನೆಯೂ ಭ್ರಮವೆಂದು ಒಪ್ಪಿದರೆ ಅದು ಬ್ರಹ್ಮಸತ್ಯತ್ವಕ್ಕೆ ಸಾಧಕವಾಗಲಾರದು ಎಂಬ ಸಮಸ್ಯೆ ಬರುತ್ತದೆ. ಆದಕ್ಕೆ ಅದ್ವೈತಿ ಹೀಗೆ ಉತ್ತರ ಕೊಡುತ್ತಾನೆ— ಬ್ರಹ್ಮೋಪಾಸನೆಗೆ ಮೊದಲು ಅದಕ್ಕೆ ಕಾರಣವಾದ

ಬ್ರಹ್ಮಜ್ಞಾನ ಬೇಕು. ಬ್ರಹ್ಮಜ್ಞಾನವು ಉಪನಿಷದ್‌ವಾಕ್ಯಜನ್ಯವಾಗಿದ್ದು ಯಥಾರ್ಥಜ್ಞಾನವೇ ಆಗಿರುವುದರಿಂದ ಆ ಜ್ಞಾನದಿಂದ ಬ್ರಹ್ಮಸತ್ಯತ್ವ ಸಿದ್ಧಿಯಾಗುವುದು ಎಂದು.

ಹಾಗಾದರೆ ನಾವೂ ಹೇಳುತ್ತೇವೆ, ಸತ್ಯಕಾಮತ್ವಾದಿ ಉಪಾಸನೆಯು ಭ್ರಮರೂಪವಾಗಿದ್ದು ಸತ್ಯಕಾಮತ್ವಾದಿ ಗುಣಗಳ ಸತ್ಯತ್ವಕ್ಕೆ ಸಾಧಕವಾಗದಿದ್ದರೂ ಆ ಉಪಾಸನೆಗೆ ಕಾರಣವಾಗಿ ಮೊದಲಿಗೆ ಉಪನಿಷದ್‌ವಾಕ್ಯಗಳಿಂದ ಬರುವ ಸತ್ಯಕಾಮತ್ವಾದಿ ಜ್ಞಾನವು ಯಥಾರ್ಥವಾದ್ದರಿಂದ ಆ ಜ್ಞಾನದಿಂದಲೆ ಸತ್ಯಕಾಮತ್ವಾದಿ ಗುಣಗಳಿಗೆ ಸತ್ಯತ್ವಸಿದ್ಧಿ ಎನ್ನಲು ಬರುತ್ತದೆ—

**ನ ಚೈವಂ ಬ್ರಹ್ಮಾಸಿದ್ಧಿಃ। ಉಪಾಸನಸ್ಯ ಭ್ರಮತ್ವೇಽಪಿ ಶಬ್ದಜನ್ಯಸ್ಯ ಜ್ಞಾನಸ್ಯ ಪ್ರಮಾತ್ವಾದಿತಿ ಚೇನ್ನ। ಪ್ರಕೃತೇಽಪಿ ತಥಾತ್ವೋಪಪತ್ತೇಃ॥**

ವಸ್ತುತಃ ಬ್ರಹ್ಮೋಪಾಸನೆಯನ್ನು ಭ್ರಮೆ ಎಂದು ಅದ್ವೈತಿ ಒಪ್ಪಿರುವುದೇ ಸರಿಯಲ್ಲ. ಭ್ರಮೆಯೆಂದು ಒಪ್ಪಿ ಮಣಿಭ್ರಮೆಯ ದೃಷ್ಟಾಂತದಿಂದ ಫಲಜನಕತ್ವವನ್ನು ಉಪಪಾದನ ಮಾಡಿದ್ದು ಸರಿಯಲ್ಲ—

**ಮಣಿಪ್ರಭಾಯಾಂ ಮಣಿತ್ವಸ್ಯೇವ ಬ್ರಹ್ಮಣೋ ಮಿಥ್ಯಾತ್ವಾಭಾವೇನ ಧ್ಯಾನಸ್ಯಾಪಿ ಸತ್ಯಬ್ರಹ್ಮ ವಿಷಯತ್ವಾಚ್ಚ।**

ಮಣಿಪ್ರಭೆಯಲ್ಲಿ ಮಣಿತ್ವ ಮಿಥ್ಯಾ. ಮಿಥ್ಯಾಭೂತವಾದ ಮಣಿತ್ವ ಧ್ಯಾನವು ಭ್ರಮೆಯಾಗಿರಲಿ. ಆದರೆ, ಬ್ರಹ್ಮ ಸತ್ಯ. ಸತ್ಯ ಬ್ರಹ್ಮ ವಿಷಯದಲ್ಲಿ ಬರುವ ಧ್ಯಾನರೂಪ ಉಪಾಸನೆ ಏಕೆ ಭ್ರಮೆಯಾಗಿರಬೇಕು? ಅದು ಪ್ರಮಾರೂಪವೆ. ಆದರಿಂದ ಬ್ರಹ್ಮೋಪಾಸನೆಯಿಂದ ಮುಕ್ತಿಫಲ ಬರುವುದು ಸಹಜವೆ. ಅದಕ್ಕೆ ಮಿಥ್ಯಾಭೂತ ಮಣಿತ್ವ ಭ್ರಮವು ಫಲಜನಕವಾಗುವುದನ್ನು ಉದಾಹರಣೆಯಾಗಿ ಏಕೆ ಕೊಡಬೇಕು? ಅದು ಅಸಂಗತ.

**ನ ಚ ಬ್ರಹ್ಮವಿಷಯ ಶಾಬ್ದಧೀಜನ್ಯಸ್ಯ ತದಪರೋಕ್ಷ ಧೀಜನಕಸ್ಯ ಚ ಬ್ರಹ್ಮ ಧ್ಯಾನಸ್ಯ ಅಬ್ರಹ್ಮವಿಷಯತಾ ಯುಕ್ತಾ। ಬ್ರಹ್ಮಜ್ಞಾನ ಹೇತೂನಾಂ ಶ್ರವಣಾದೀನಾಮಪಿ ತಥಾತ್ವಾಪಾತಾತ್।**

'ಶುದ್ಧ ಬ್ರಹ್ಮ ಸತ್ಯವೇ ಆದರೂ ನಿರ್ಗುಣ–ಸಗುಣರೂಪವಾದ ಎರಡೂ ವಿಶಿಷ್ಟ ಬ್ರಹ್ಮಗಳು ಬ್ರಹ್ಮವೇ ಅಲ್ಲ. ಅವು ಎರಡೂ ಮಿಥ್ಯಾ. ಆದರಿಂದ ಅವುಗಳ ಉಪಾಸನೆಯೂ ಅಬ್ರಹ್ಮ ವಿಷಯಕ. ಭ್ರಮವೆ ಎನ್ನುತ್ತೇನೆ' ಎಂದು ಅದ್ವೈತಿ ಹೇಳುತ್ತಾನೆ. ಇದು ಸರಿಯಲ್ಲ. ಅಬ್ರಹ್ಮಧ್ಯಾನರೂಪವಾದ ಬ್ರಹ್ಮೋಪಾಸನೆಗೆ ಕಾರಣವಾದ ಬ್ರಹ್ಮಜ್ಞಾನವು ಬ್ರಹ್ಮವಿಷಯಕ ಮತ್ತು ಜನ್ಯವಾದ ಬ್ರಹ್ಮಾಪರೋಕ್ಷ ಜ್ಞಾನವೂ ಬ್ರಹ್ಮವಿಷಯಕವೆಂದರೆ ಅದು ಯುಕ್ತವಾಗಲಾರದು. ಧ್ಯಾನಜ್ಞಾನಗಳು ಸಮಾನವಿಷಯಕವಾದರೆ ಮಾತ್ರ ಅವುಗಳಿಗೆ ಕಾರ್ಯಕಾರಣಭಾವ ಯುಕ್ತವಾಗುವುದು.

ಯದ್ಯಪಿ ಬಾಧೋಪಸ್ಥಿತಿ ಇಲ್ಲದಿದ್ದಾಗ 'ಗಂಧಪ್ರಾಗಭಾವಕಾಲೀನ ಘಟವು ಗಂಧ ಉಳ್ಳದ್ದೆ'ಂದು ಭ್ರಮಾತ್ಮಕ ಅನುಮಿತಿಯು ಪ್ರಮಾತ್ಮಕ ಪರಾಮರ್ಶದಿಂದ ಬರುವುದು ಕಂಡಿದೆ. ಆದರೆ ಶ್ರವಣಾದಿಗಳಲ್ಲಿ ಹೀಗೆ ಇಲ್ಲ. ಶ್ರವಣ ಧ್ಯಾನಗಳಿಗೂ ಧ್ಯಾನ ಅಪರೋಕ್ಷಗಳಿಗೂ ಸಮಾನವಿಷಯತ್ವವಿದ್ದರೆ ಮಾತ್ರ ಅವುಗಳಿಗೆ ಕಾರ್ಯಕಾರಣಭಾವ ಕೂಡುತ್ತದೆ.

ಹೀಗಾಗಿ ಬ್ರಹ್ಮಧ್ಯಾನವು ಬ್ರಹ್ಮವಿಷಯಕ ಶಾಬ್ದಬೋಧಜನ್ಯವಾಗಿದೆ, ಮತ್ತು ಬ್ರಹ್ಮವಿಷಯಕ ಅಪರೋಕ್ಷಜನಕವಾಗಿದೆ. ಎಂದಮೇಲೆ, ಬ್ರಹ್ಮಧ್ಯಾನವು ಕೂಡ ಬ್ರಹ್ಮವಿಷಯಕವೆ, ಯಥಾರ್ಥವೆ ಎನ್ನಬೇಕು. ಹೀಗೆ ಹೇಳದಿದ್ದರೆ ಶ್ರವಣ-ಮನನ-ಮಹಾವಾಕ್ಯೋಪದೇಶಗಳಿಂದ ಉಂಟಾಗುವ ಬ್ರಹ್ಮಧ್ಯಾನವು ಮಾತ್ರ ವಿಶಿಷ್ಟಮಿಥ್ಯಾವಿಷಯಕ. ಅದಕ್ಕೆ ಕಾರಣವಾದ ಶ್ರವಣಾದಿಗಳು ಎಲ್ಲವೂ ಅವಿಶಿಷ್ಟಶುದ್ಧವಿಷಯಕವೆಂದಾಗದು. ಅವೂ ವಿಶಿಷ್ಟಅಬ್ರಹ್ಮವಿಷಯಕವೇ ಆಗಬೇಕಾದೀತು. ಧರ್ಮಜ್ಞಾನ ಕಾರಣವಾದ ಧರ್ಮಶ್ರವಣಾದಿಗಳು ಧರ್ಮಜ್ಞಾನದಂತೆಯೇ ಧರ್ಮ ವಿಷಯಕವಾಗಿರುವುದೇ ಕಂಡಿದೆ.

**'ಈಕ್ಷತಿಕರ್ಮ' ಇತಿ ಸೂತ್ರೇ—**
**ಈಕ್ಷಣ ಧ್ಯಾನಯೋರೇಕಃ ಕಾರ್ಯಕಾರಣಭೂತಯೋಃ ।**
**ಅರ್ಥ ಔತ್ಸರ್ಗಿಕಂ ತತ್ತ್ವವಿಷಯತ್ವಂ ತಥೇಕ್ಷತೇಃ ॥**

**ಇತಿ ಭಾಮತ್ಯಾಂ 'ಪರಾತ್ಪರಂ ಪುರಿಶಯಂ ಪುರುಷಮೀಕ್ಷತೇ' ಇತಿ ಈಕ್ಷಣ ಕರ್ಮಣಃ ಪರಬ್ರಹ್ಮಣ ಏವ 'ಪರಂ ಪುರುಷಮಭಿಧ್ಯಾಯೀತ' ಇತಿ ಧ್ಯಾತವ್ಯತ್ವೋಕ್ತ್ಯಾ ತದ್ವಿರೋಧಾಚ್ಚ ।**

ಧ್ಯಾನವು ಅಬ್ರಹ್ಮವಿಷಯಕವೆಂದರೆ ಅದ್ವೈತಿಗೆ ಸ್ವವಚನ ವಿರೋಧ ಬರುತ್ತದೆ. 'ಈಕ್ಷತಿ ಕರ್ಮವ್ಯಪದೇಶಾತ್ ಸಃ' (ಬ್ರ.ಸೂ.1.3.13) ಎಂಬ ಸೂತ್ರಟೀಕಾ ಭಾಮತಿಯಲ್ಲಿ ಹೀಗೆ ಹೇಳಿದೆ— 'ಕಾರ್ಯ-ಕಾರಣರೂಪವಾದ ಸಾಕ್ಷಾತ್ಕಾರ-ಧ್ಯಾನಗಳಿಗೆ ವಿಷಯ ಒಂದೇ ಆಗಿರುವುದು ಯುಕ್ತ. ಸಾಕ್ಷಾತ್ಕಾರವು ಸತ್ಯವಿಷಯವಾಗಿರುತ್ತದೆ ಎಂದು ಉತ್ಸರ್ಗ. ಬಾಧಕವಿರುವಲ್ಲಿ ಮಾತ್ರ ಆರೋಪಿತವೇ ಸಾಕ್ಷಾತ್ಕಾರದಲ್ಲಿ ಕಾಣಬಹುದು. ಪ್ರಕೃತ ಅಂಥ ಬಾಧಕವಿಲ್ಲ ಎಂದಮೇಲೆ ಸಾಕ್ಷಾತ್ಕಾರವು ಔತ್ಸರ್ಗಿಕವಾಗಿ ಸತ್ಯವಿಷಯವಾದ್ದರಿಂದ ಅದಕ್ಕೆ ಕಾರಣವಾದ ಧ್ಯಾನವೂ ಸತ್ಯವಿಷಯಕವೇ ಎನ್ನಬೇಕು. ಆದ್ದರಿಂದ 'ಪರಾತ್ಪರನಾದ ಅಂತರ್ಯಾಮಿಯಾದ ಪುರುಷನ ಸಾಕ್ಷಾತ್ಕಾರ ಲಭಿಸುತ್ತದೆ' ಎಂದು ಸಾಕ್ಷಾತ್ಕಾರ ವಿಷಯನಾಗಿ ಶ್ರುತ್ಯುಕ್ತನಾದ ಪರಬ್ರಹ್ಮನೇ 'ಪರಮಪುರುಷನನ್ನು ಧ್ಯಾನಿಸಬೇಕು' ಎಂದು ಹೇಳಿದ ಧ್ಯೇಯವಿಷಯನಾಗಬೇಕು' ಎಂದು. ಧ್ಯಾನವು ಅಬ್ರಹ್ಮವಿಷಯಕವೆಂದು ಈಗ ಅದ್ವೈತಿ ಹೇಳಿದರೆ ಸ್ವವಚನ ವಿರೋಧ.

**ನನು ಐಕ್ಯಾದ್ಯುಪಾಸನಂ ಪರೋಕ್ಷ ಪ್ರಮಾ ಪ್ರವಾಹರೂಪಂ । ನತು 'ವಾಚಂ ಧೇನುಮುಪಾಸೀತ' ಇತ್ಯಾದಾವಿವ ಜ್ಞಾನವಿಜಾತೀಯಂ ವೃತ್ಯಂತರಂ, ಬುದ್ಧಿ ಪೂರ್ವಕಾರೋಪೋ ವಾ ಇತಿ ಚೇತ್ ಸಮಂ ಪ್ರಕೃತೇऽಪಿ ।**

'ಐಕ್ಯಾದಿ ಉಪಾಸನೆಯು ಪರೋಕ್ಷಪ್ರಮಾಪ್ರವಾಹರೂಪವಾಗಿದೆ ಹೊರತು 'ವಾಚಂ ಧೇನುಮುಪಾಸೀತ' ಎಂದು ಹೇಳಿದ ಉಪಾಸನೆಯಂತೆ ಜ್ಞಾನವಿಜಾತೀಯವಾದ ಬೇರೆಯೆ ಒಂದು ಅಂತಃಕರಣವೃತ್ತಿಯಾಗಿರುವುದಿಲ್ಲ, ಅಥವಾ ಬುದ್ಧಿಪೂರ್ವಕ ಆರೋಪವೂ ಆಗಿರುವುದಿಲ್ಲ. ಎಂದು ಅದ್ವೈತಿ ಹೇಳಿದರೆ ಅದು ಪ್ರಕೃತದಲ್ಲಿಯೂ ಸಮಾನ. ಐಕ್ಯೋಪಾಸನೆ ಪ್ರಮಾರೂಪವೆಂದಾದರೆ ಸತ್ಯಕಾಮೋಪಾಸನೆಯೂ ಹಾಗೇ ಪ್ರಮಾರೂಪವೆ. 'ಐಕ್ಯವು ಬ್ರಹ್ಮಸ್ವರೂಪವೆ. ಆದರೆ ಸತ್ಯಕಾಮಾದಿಗಳು ಮಾತ್ರ ಬಹಿರ್ಭೂತ' ಎಂದು ಮುಂತಾಗಿ, ವೈಲಕ್ಷಣ್ಯವು ಅಪ್ರಾಮಾಣಿಕ.

**ನಚ ಐಕ್ಯಾದಿಕಂ ಧ್ಯೇಯಂ ಜ್ಞೇಯಂ ಚ, ಸಾರ್ವಜ್ಞಾದಿಕಂ ತು ಧ್ಯೇಯಮೇವ ಇತಿ ಯುಕ್ತಂ। ತತ್ರ, 'ತತ್ವಮಸಿ ಇತ್ಯಾದೇರಿವ ಇಹಾಪಿ ಅವಿಧಿರೂಪಸ್ಯ ವಸ್ತು ತತ್ವನಿಷ್ಠಸ್ಯ 'ಯಃ ಸರ್ವಜ್ಞಃ' ಇತ್ಯಾದೇಃ ಸತ್ವೇನ ವಿಶೇಷಹೇತ್ವಭಾವಾತ್ ।**

'ಐಕ್ಯಕ್ಕೂ ಸಾರ್ವಜ್ಞಾದಿಗಳಿಗೂ ವೈಲಕ್ಷಣ್ಯವಿದೆ. ಐಕ್ಯವು ಧ್ಯೇಯವೂ ಹೌದು, ಜ್ಞೇಯವೂ ಹೌದು. ಆದರೆ ಸಾರ್ವಜ್ಞಾದಿ ಕೇವಲ ಧ್ಯೇಯ, ಹೊರತು ಜ್ಞೇಯವಲ್ಲ. ಜ್ಞೇಯವಾದುದೇ ತಾತ್ವಿಕ. ಕೇವಲಧ್ಯೇಯ ಅತಾತ್ವಿಕ' ಎಂದು ಅದ್ವೈತಿಯು ಹೇಳಿದರೆ ಅದು ಸರಿಯಲ್ಲ. ಐಕ್ಯವಿಷಯದಲ್ಲಿ ಉಪಾಸನಾವಿಧಿರೂಪವಲ್ಲದ ವಸ್ತುತತ್ವನಿರೂಪಣಪರವಾದ 'ತತ್ತ್ವಮಸಿ' ವಾಕ್ಯವಿರುವಂತೆ, ಸಾರ್ವಜ್ಞಾದಿ ವಿಷಯದಲ್ಲಿಯೂ ಉಪಾಸನಾವಿಧಿರೂಪವಲ್ಲದ ವಾಸ್ತವ ತತ್ವನಿರೂಪಣ ಪರವಾದ 'ಯಃ ಸರ್ವಜ್ಞಃ' ಇತ್ಯಾದಿ ವಾಕ್ಯಗಳು ಇವೆ. ಆದರಿಂದ 'ಐಕ್ಯವು ಧ್ಯೇಯವೂ ಜ್ಞೇಯವೂ ಆಗಿದೆ, ಸಾರ್ವಜ್ಞಾದಿ ಕೇವಲ ಧ್ಯೇಯ' ಎನ್ನಲು ವಿಶೇಷಕಾರಣವೇನೂ ಇಲ್ಲ.

**ಬ್ರಹ್ಮಣೋ ಜಗತ್ಕರ್ತೃತ್ವಾದಿನಾ ಆರೋಪ್ಯ ಉಪಾಸ್ಯತ್ವೇ ಅಗ್ನಿಬ್ರಹ್ಮವಾಕ್ಯವತ್ ಬ್ರಹ್ಮಣ್ಯಪಿ ಕಾರಣವಾಕ್ಯಾನಾಂ ಸಮನ್ವಯಸ್ಯ ಅವಕ್ತವ್ಯತ್ವೇನ ಸಮನ್ವಯಾ ಧ್ಯಾಯಾನಾರಂಭಾಪಾತಾಚ್ಚ ।**

'ಬ್ರಹ್ಮನಲ್ಲಿ ಜಗತ್ಕರ್ತೃತ್ವ ನಿರ್ಣಯ ಮಾಡಿಕೊಂಡು ಉಪಾಸನೆ ಮಾಡುವುದು ವಿಹಿತವಲ್ಲ. ಕೃರ್ತೃತ್ವವು ಬ್ರಹ್ಮನ ತಟಸ್ಥ ಲಕ್ಷಣ, ಅವನ ಸ್ವರೂಪದಲ್ಲಿ ಸೇರಿರದ ಭಿನ್ನವಾದ ಮಿಥ್ಯಾಭೂತವಾದ ಲಕ್ಷಣ. ಅದನ್ನು ಬ್ರಹ್ಮನಲ್ಲಿ ಆರೋಪಿಸಿ ಧ್ಯಾನಮಾಡುವುದೇ ವಿಹಿತವಾಗಿದೆ. ಆದರಿಂದ ಸಗುಣವಾಕ್ಯಗಳು ಉಪಾಸನಾಪರ' ಎಂದು ಅದ್ವೈತಿ ಹೇಳುತ್ತಾನೆ. ಇದನ್ನು ಒಪ್ಪಿದರೆ, ಬ್ರಹ್ಮೋಪಾಸನೆಯು ಅಗ್ನಿಬ್ರಹ್ಮೋಪಾಸನೆಗಳಂತೆಯೆ ಆರೋಪಪೂರ್ವಕ ಉಪಾಸನೆಯಾಗುವುದು. ಆಗ 'ಅಗ್ನಿಬ್ರಹ್ಮ ವಾಕ್ಯವತ್' ಅಂದರೆ 'ಯೋಷಿತಮಗ್ನಿಂ ಧ್ಯಾಯೀತ' ಎಂದು ಅಗ್ನ್ಯುಪಾಸನೆಗೂ, 'ನಾಮ ಬ್ರಹ್ಮೋಪಾಸೀತ' ಎಂಬ ಬ್ರಹ್ಮೋಪಾಸನೆಗೂ, ಮೊದಲಿಗೆ ಅಗ್ನಿ ವಾಕ್ಯದಲ್ಲಿ ಯೋಷಿತ್ತಿನಲ್ಲಿ ಅಗ್ನಿತ್ವವನ್ನೂ, ಬ್ರಹ್ಮವಾಕ್ಯದಲ್ಲಿ ನಾಮದಲ್ಲಿ ಬ್ರಹ್ಮತ್ವವನ್ನೂ ಸಮನ್ವಯ ಮಾಡಿ ನಿರ್ಣಯಿಸಿಕೊಳ್ಳಬೇಕಾಗಿಲ್ಲ ಹೇಗೋ ಹಾಗೇ ಬ್ರಹ್ಮನಲ್ಲಿ ಜಗತ್ಕರ್ತೃತ್ವೋಪಾಸನೆಗೆ ಮೊದಲು ಸಮನ್ವಯಾಧ್ಯಾಯದಲ್ಲಿ ಹೇಳಿದಂತೆ 'ಸದೇವ ಸೋಮ್ಯೇದಮಗ್ರ ಆಸೀತ್' ಇತ್ಯಾದಿ

ಜಗತ್‌ಕಾರಣಪ್ರತಿಪಾದಕವಾಕ್ಯಗಳಲ್ಲಿ ಬ್ರಹ್ಮನಲ್ಲಿ ಕರ್ತೃತ್ವಸಮನ್ವಯ ಮಾಡಬೇಕಿಲ್ಲ. ಬ್ರಹ್ಮನೆ ಜಗತ್ಕಾರಣ, ಪ್ರಧಾನಾದಿಗಳಲ್ಲ ಎನ್ನುವ ನಿರ್ಣಯ ಮಾಡಿಕೊಳ್ಳಬೇಕಿಲ್ಲ ಎಂದಂತಾಗುವುದು. ಆಗ ಬ್ರಹ್ಮಸೂತ್ರ ಸಮನ್ವಯಾಧ್ಯಾಯ ವ್ಯರ್ಥವಾಗುವುದು.

'ಕಾರಣ ವಾಕ್ಯಗಳಿಗೆ ಬ್ರಹ್ಮನಲ್ಲಿ ಕರ್ತೃತ್ವಾದಿ ತಟಸ್ಥಲಕ್ಷಣ ಬೋಧನದ್ವಾರಾ ಬ್ರಹ್ಮದಲ್ಲಿಯೇ ತಾತ್ಪರ್ಯವೆಂದು ತಿಳಿಯಲು ಬ್ರಹ್ಮನೇ ಕರ್ತೃ ಎಂದು ನಿರ್ಣಯ ಮಾಡಿಕೊಳ್ಳಬೇಕು. ಅದಕ್ಕೆ ಸಮನ್ವಯಾಧ್ಯಾಯ ಬೇಕು' ಎಂದರೆ ಇದೂ ಸರಿಯಲ್ಲ. ಬ್ರಹ್ಮನ ತಟಸ್ಥಲಕ್ಷಣ ಅಂದರೆ ಬ್ರಹ್ಮನಲ್ಲಿ ಇಲ್ಲದ ಕರ್ತೃತ್ವವು ಬ್ರಹ್ಮನ ಲಕ್ಷಣ. ಎನ್ನುತ್ತಾನೆ ಅದ್ವೈತಿ. ಇದು ಹೇಗಾದೀತು? ಲಕ್ಷ್ಯದಲ್ಲಿರುವ ಸಮಾನಸತ್ತಾಕವಾದ ಧರ್ಮವೇ ಲಕ್ಷಣವಾಗುವುದು. ಆರೋಪಿತವಾದುದೂ ಲಕ್ಷಣವಾಗುತ್ತದೆ ಎಂದರೆ, ಕರ್ತೃತ್ವವು ಪ್ರಧಾನದಲ್ಲಿ ಆರೋಪಿತವಾಗಿ ಪ್ರಧಾನದ ಲಕ್ಷಣ ಏಕಾಗಬಾರದು? ಆದರಿಂದ ಸಮನ್ವಯದಲ್ಲಿ ಸಿದ್ಧಾಂತಿಯು ಪೂರ್ವಪಕ್ಷ ನಿರಾಕರಣೆ ಮಾಡುವುದೇ ಸಂಗತವಾಗಲಾರದು. ಮತ್ತು ಯೋಷಿತ್ತಿನ ತಟಸ್ಥ ಲಕ್ಷಣ ಅಗ್ನಿತ್ವ, ನಾಮದ ತಟಸ್ಥ ಲಕ್ಷಣ ಬ್ರಹ್ಮತ್ವ ಎಂದು ಆ ಲಕ್ಷಣಗಳನ್ನೂ ಸಮನ್ವಯಮಾಡಬೇಕಾದೀತು.

**ವಿಶೇಷಾಂಶ :** ಇಲ್ಲಿ 'ಅಗ್ನಿಬ್ರಹ್ಮವಾಕ್ಯವತ್' ಎಂದು ಆಮೋದಪಾಠ. 'ನಾಮ್ನಿ ಬ್ರಹ್ಮವಾಕ್ಯಾನಾಮಿವ' ಎಂದು ತರಂಗಿಣೀಪಾಠ. ತರಂಗಿಣೀ ಪಾಠದಲ್ಲಿ ನಾಮದಲ್ಲಿ 'ಸತ್ಯಂಜ್ಞಾನಂ' ಇತ್ಯಾದಿ ಬ್ರಹ್ಮಲಕ್ಷಣ ವಾಕ್ಯಗಳಿಗೆ ಹೇಗೆ ಸಮನ್ವಯ ಹೇಳಬೇಕಾಗಿಲ್ಲವೋ ಹಾಗೇ ಬ್ರಹ್ಮನಲ್ಲಿ ಕಾರಣವಾಕ್ಯಗಳಿಗೆ ಸಮನ್ವಯ ಹೇಳುವುದೂ ಬೇಕಾಗಿಲ್ಲ' ಎಂದರ್ಥ.

**'ಯ ಆತ್ಮಾ ಅಪಹತ ಪಾಪ್ಮಾ' ಇತ್ಯಾರಭ್ಯ 'ಸತ್ಯಕಾಮಃ ಸತ್ಯಸಂಕಲ್ಪಃ ಸೋಽನ್ವೇಷ್ಟವ್ಯಃ ಸ ವಿಜಿಜ್ಞಾಸಿತವ್ಯಃ' ಇತಿ ಸತ್ಯಕಾಮತ್ವಾದೀನಾಂ ಅಪಹತಪಾಪ್ಮತ್ವಾದಿಭಿಃ ಸಹ ಜಿಜ್ಞಾಸ್ಯತ್ವಶ್ರವಣಾಚ್ಚ। ಅಪಹತಪಾಪ್ಮತ್ವಾದೀನಾಮಪಿ ಉಪಾಸ್ಯತ್ವೇ ತಸ್ಯ ಭೂತಾಕಾಶೇಽಪಿ ಸಂಭವೇನ ದಹರಾಕಾಶಸ್ಯ ಬ್ರಹ್ಮತ್ವಪ್ರತಿಪಾದಕ ದಹರಾಧಿಕರಣ ವಿರೋಧಃ।**

'ಯಾವ ಆತ್ಮನು ಅಪಹತಪಾಪ್ಮನಾಗಿರುವನೋ' ಎಂದು ಪ್ರಾರಂಭಿಸಿ 'ಸತ್ಯಕಾಮನೂ ಸತ್ಯಸಂಕಲ್ಪನೂ ಆದ ಆ ಆತ್ಮನನ್ನು ಶ್ರವಣಮಾಡಿ ವಿಚಾರಮಾಡಬೇಕು' ಎಂದು (ಛಾಂದೋಗ್ಯ 8.7.1) ಅಪಹತ ಪಾಪ್ಮತ್ವಾದಿಗಳ ಜೊತೆಗೇ ಸತ್ಯಕಾಮತ್ವಾದಿಗಳನ್ನು ಜಿಜ್ಞಾಸೆ ಮಾಡಬೇಕು. ಕೇವಲ ಧ್ಯಾನ ಮಾಡುವುದಲ್ಲ ಎಂದಿರುವುದರಿಂದ ಜಿಜ್ಞಾಸ್ಯವಾದ ಅಪಹತ ಪಾಪ್ಮತ್ವಾದಿಗಳಂತೆಯೇ ಜಿಜ್ಞಾಸ್ಯವಾದ ಸತ್ಯಕಾಮತ್ವಾದಿಗಳನ್ನೂ ಕೂಡ ತಾತ್ವಿಕವೆಂದೇ ಉಪನಿಷತ್ತು ಪರಿಗಣಿಸಿರುವುದು ಸ್ಪಷ್ಟವಿದೆ. ಅಪಹತ ಪಾಪ್ಮತ್ವಾದಿಗಳೂ ಕೂಡ ಉಪಾಸ್ಯವಾಗಿದ್ದು ಅತಾತ್ವಿಕವೇ ಎನ್ನುವುದಾದರೆ ಅತಾತ್ವಿಕವಾದ ಅಪಹತ ಪಾಪ್ಮತ್ವವು ಭೂತಾಕಾಶದಲ್ಲಿಯೂ ಇರಬಹುದಾದ್ದರಿಂದ 'ದಹರಾಕಾಶ' ಎಂದರೆ 'ಭೂತಾಕಾಶವಲ್ಲ, ಬ್ರಹ್ಮಸ್ವರೂಪ' ಎಂದು ಬ್ರಹ್ಮಸೂತ್ರದಲ್ಲಿ ಸಿದ್ಧಾಂತ ಮಾಡಿದ್ದು

ಅಯುಕ್ತವಾದೀತು. ಹೀಗಾಗಿ ಬ್ರಹ್ಮಸೂತ್ರದ ದಹರಾಧಿಕರಣವಿರೋಧ ಬಂದೀತು.

**ವಿಶೇಷವಿಚಾರ**—'ಸೋನ್ವೇಷ್ಟವ್ಯಃ ಸ ವಿಜಿಜ್ಞಾಸಿತವ್ಯಃ' ಎಂಬಲ್ಲಿ 'ಸಃ' ಎಂದು ಪೂರ್ವೋಕ್ತ ಸತ್ಯಕಾಮತ್ವಯುಕ್ತನಾದ ಆತ್ಮನನ್ನು ಪರಾಮರ್ಶಮಾಡಿದರೂ, 'ಚಿತ್ರಗುಮಾನಯ' ಎಂಬಲ್ಲಿ 'ಚಿತ್ರಗೋಯುಕ್ತನನ್ನು ಕರೆತಾ' ಎಂದರೆ ಚಿತ್ರಗೋವನ್ನು ಬಿಟ್ಟೇ ತತ್‌ಸ್ವಾಮಿಯನ್ನು ಕರೆತರುವ ಅಭಿಪ್ರಾಯ. ಹಾಗೇ ಸತ್ಯಕಾಮತ್ವವನ್ನು ಬಿಟ್ಟೇ ತದಾಶ್ರಯನಾದ ಆತ್ಮನನ್ನು ಜಿಜ್ಞಾಸೆ ಮಾಡಬೇಕೆನ್ನುವ ಅಭಿಪ್ರಾಯ ಎಂದು ಅದ್ವೈತಿ ಹೇಳಿದರೆ ನಾವು ಹೇಳುತ್ತೇವೆ— 'ಯೋ ಲಂಬಕರ್ಣಶ್ಚಿತ್ರಗುಶ್ಚ ತಮಾನಯ' 'ಉದ್ದಕಿವಿ ಉಳ್ಳವನೂ ಚಿತ್ರಗೋಯುಕ್ತನೂ ಆಗಿರುವವನ್ನು ಕರೆತಾ' ಎಂದಾಗ ಚಿತ್ರಗೋವನ್ನು ಬಿಟ್ಟು ಬಿಡಲು ಶಕ್ಯವಿದ್ದರೂ, ಉದ್ದಕಿವಿಯನ್ನು ಬಿಟ್ಟು ವ್ಯಕ್ತಿಯನ್ನು ಕರೆತರಲಾಗದು. ಹಾಗೇ ಬ್ರಹ್ಮಸ್ವರೂಪಭೂತವಾದ ಸತ್ಯಕಾಮತ್ವಾದಿಗಳನ್ನು ಬಿಟ್ಟು ಬಿಡಲಾಗದು. ಆದರಿಂದ ಸತ್ಯಕಾಮತ್ವಾದಿಗಳೂ ಕೂಡ ಆತ್ಮನಂತೇ, ಅವನ ಅಪಹತ ಪಾಪ್ಮತ್ವಾದಿಗಳಂತೇ ಜಿಜ್ಞಾಸ್ಯವೆ.

**ಏಷ ಸರ್ವೇಶ್ವರಃ ಏಷ ಭೂತಾಧಿಪತಿಃ ಇತ್ಯಾದಿ ಧರ್ಮಾನುಕ್ತ್ವಾ ತೇಷಾಂ 'ತಮೇತಂ ವೇದಾನುವಚನೇನ ಬ್ರಾಹ್ಮಣಾ ವಿವಿದಿಷಂತಿ' ಇತಿ ಮುಮುಕ್ಷು ಜ್ಞೇಯತ್ವೋಕ್ತೇಶ್ಚ ।**

**'ಯಃ ಸರ್ವಜ್ಞಃ ಸರ್ವವಿತ್ ಯಸ್ಯೈಷ ಮಹಿಮಾ ಭುವಿ' ಇತ್ಯಾದ್ಯುಕ್ತ್ವಾ 'ತದ್ ವಿಜ್ಞಾನೇನ ಪರಿಪಶ್ಯಂತಿ ಧೀರಾಃ' ಇತಿ ಅಪರೋಕ್ಷ ಪ್ರಮಾ ವಿಷಯತ್ವೋಕ್ತೇಶ್ಚ। 'ತುರ್ಯಂ ತತ್ ಸರ್ವದೃಕ್ ಸದಾ' ಇತಿ ತುರಿಯೇ ಸಾರ್ವಜ್ಞ ಶ್ರವಣಾಚ್ಚ।**

'ಈ ಪರಮಾತ್ಮನು ಸರ್ವೇಶ್ವರ ಸರ್ವಾಧಿಪತಿ' ಎಂದು ಬೃಹದಾರಣ್ಯಕ (6.4.22)ದಲ್ಲಿ ಪ್ರಾರಂಭಿಸಿ 'ಈತನನ್ನು ಬ್ರಹ್ಮಜ್ಞಾನಯೋಗ್ಯರು ವೇದಾಧ್ಯಯನದಿಂದ ತಿಳಿಯಲು ಬಯಸುತ್ತಾರೆ, ವಿಚಾರ ಮಾಡುತ್ತಾರೆ' ಎಂದು ಹೇಳುವ ಮೂಲಕ ಸರ್ವೇಶ್ವರತ್ವಾದಿ ಗುಣಗಳು ಮುಮುಕ್ಷುಗಳಿಗೆ ಜ್ಞೇಯವೆಂದು ಹೇಳಿದೆ. ಆದರಿಂದ ಗುಣಗಳು ಅತಾತ್ವಿಕವಲ್ಲ.

'ಸರ್ವಜ್ಞನಾದ ಪರಮಾತ್ಮನ ಅವಸ್ಥಾತ್ರಯ ನಿಯಾಮಕತ್ವಮಹಿಮೆ ಲೋಕದಲ್ಲಿ ಪ್ರಕಟವಾಗಿದೆ. ಅವನೆ ಹೃದಯಾಕಾಶದಲ್ಲಿ ನೆಲೆಸಿದ್ದಾನೆ.' (ಮುಂಡಕ. 2.2.9) ಎಂದು ಹೇಳಿ ಅಲ್ಲಿಯೇ 'ಆ ಪರಮಾತ್ಮನನ್ನು ಜ್ಞಾನಿಗಳು ಧ್ಯಾನದಿಂದ ಸಾಕ್ಷಾತ್ಕರಿಸಿಕೊಳ್ಳುತ್ತಾರೆ' ಎನ್ನುತ್ತ ಸಾರ್ವಜ್ಞಾದಿ ಗುಣಗಳು ತಾತ್ವಿಕ, ಸಾಕ್ಷಾತ್ಕಾರ ಯೋಗ್ಯ ಎಂದಿದೆ. ಮಾಂಡೂಕ್ಯದಲ್ಲಿ 'ತುರೀಯವು ಸದಾ 'ಸರ್ವದೃಕ್' ಸರ್ವಜ್ಞ' (ಮಾಂಡೂಕ್ಯ 2.4) ಎಂದು ಅದ್ವೈತಿಯು ಮುಮುಕ್ಷು ಜ್ಞೇಯವೆಂದು ಒಪ್ಪಿರುವ ಅದ್ವೈತತುರೀಯದಲ್ಲಿಯೂ ಸದಾ ಸರ್ವಜ್ಞತ್ವವನ್ನು ಹೇಳಿದೆ.

**ವಿಶೇಷವಿಚಾರ**—ಇಲ್ಲಿ ಎಲ್ಲ ಕಡೆ ಉಪನಿಷತ್ತು ಬ್ರಹ್ಮನಲ್ಲಿರುವ ಸಾರ್ವಜ್ಞಾದಿಗುಣಗಳನ್ನು ಬಿಟ್ಟು ಅವನ ಜ್ಞಾನಸ್ವರೂಪವನ್ನೇ ಜ್ಞೇಯವೆಂದು ಉಪದೇಶಿಸುತ್ತದೆ ಎನ್ನಲು ಕಾರಣವಿಲ್ಲ.

ಸಾರ್ವಜ್ಞಾದಿಗಳು ಬ್ರಹ್ಮನ ಸ್ವರೂಪಭೂತವಾದ್ದರಿಂದ ಅವುಗಳನ್ನು ಬಿಡುವುದು ಶಕ್ಯವೂ ಅಲ್ಲ. ಸಾರ್ವಜ್ಞ್ಯವು ಸೋಪಾಧಿಕವೆಂದರೆ ಜ್ಞಾನವು ಕೂಡ ವಿಷಯೋಪಾಧಿಕವೆ. ನಿರ್ವಿಷಯವಾದ ಜ್ಞಾನವೆಂಬುದೇ ಇಲ್ಲ. ಆದರಿಂದ ಶಾಂಕರಭಾಷ್ಯದಲ್ಲಿ 'ಸರ್ವದೃಕ್' ಎಂಬುದನ್ನು 'ಸರ್ವಂ ಚ ತತ್ ದೃಕ್ ಚ' 'ಸರ್ವಾತ್ಮಕವಾಗಿದೆ ಜ್ಞಾನ ಸ್ವರೂಪವಾಗಿದೆ' ಹೊರತು ಸರ್ವವಿಷಯಕಜ್ಞಾನ ಸ್ವರೂಪವಾಗಿಲ್ಲ ಎನ್ನುತ್ತ ಕರ್ಮಧಾರಯ ಸಮಾಸ ಮಾಡಿದ್ದು ವ್ಯರ್ಥ.



**''सत्यः सो अस्य महिमा'' इत्यादौ साक्षात्सत्यत्वश्रुतेश्च । तत्र होममात्रानुवादेन आहवनीयस्येव स इति श्रुत्युक्तमहिममात्रानुवादेन सत्यत्वस्य विधानात् ।**

**''सत्यः सो अस्य'' इत्यादेरैंद्रसूक्तस्थत्वेऽपि ''तत्त्वा यामि सुवीर्यं तद्ब्रह्म पूर्वचित्तय''इति ब्रह्मश्रुत्या ''इंद्रः सूर्यमरोचयत्, इंद्रे ह विश्वा भुवनानि येमिर'' इत्यादिसूर्यप्रकाशकत्वादिलिंगैश्च ज्योतिरधिकरणन्यायेन सूक्तस्य परमेश्वरपरत्वात् ।**

**इयं श्रुतिर्व्यावहारिकसत्त्वपरा चेद्ब्रह्मसत्त्वश्रुतिरपि प्रातिभासिक-सत्त्वपराऽस्तु । नचात्र मानांतरप्राप्तिरस्ति । अत्र निर्गुणवाक्यं बाधकं चेत् तत्राप्यसद्वा इत्यादिवाक्यं बाधकम् । तत् अव्यक्तत्वाद्यभिप्रायं चेत् इदमपि त्रैगुण्यराहित्याद्यभिप्रायम् । यदि च ब्रह्म भ्रमाधिष्ठानत्वात्सत् तर्हि तत एव सविशेषम् ।**

**नच निर्गुणस्यारोपरूपोपासनाविषयत्वे तज्ज्ञानान्मुक्त्ययोगः । धर्मिज्ञानाधीनसंदेह सापेक्ष वेदांतविचार साध्य सप्रकारक ज्ञानस्यैव मोचकत्वोक्तेः ।**

ननु सत्यः सो अस्य महिमेत्यत्र सत्यकामत्वादिषु सत्यत्वं नोच्यते । किंतु सत्यपदार्थस्य तन्महिमत्वमात्रमुच्यत इत्याशंक्याह— **तत्रेति** । ननु तथापि ब्रह्मगुणानां न सत्यत्वसिद्धिः । एतद्वाक्यस्यैंद्रसूक्तस्थितत्वादित्याशंक्याह— **सत्य**

**इति । ज्योतिरधिकरणन्यायेनेति ।।** ''ज्योतिश्चरणाभिधानात्'' इत्यत्र ''वि मे कर्णा पतयतो विचक्षुर्वीदं ज्योतिर्हृदय आहितं यत्'' इत्यत्र श्रूयमाणं ज्योतिः किमग्निरुत विष्णुरिति संदेहे अस्य मंत्रस्याग्निसूक्तस्थत्वात् ज्योतिरग्निरेवेति प्राप्ते कर्णादिविदूरत्वरूपविष्णुलिंगात् सूक्तमपि तत्परमेवेति विष्णुरेव ज्योतिरिति सिद्धांतितम् । तन्यायेनेत्यर्थः ।। **नचेति** ।। येन तात्पर्याभावेन तात्विकत्वं महिम्नो न सिध्येदिति भावः ।। **मोचकत्वोक्तेरिति** ।। ''तमेवं विद्वानमृत इह भवति'' इत्यादाविति शेषः ।



**'ಸತ್ಯಃ ಸೋ ಅಸ್ಯ ಮಹಿಮಾ' ಇತ್ಯಾದೌ ಸಾಕ್ಷಾತ್ ಸತ್ಯತ್ವ ಶ್ರುತೇಶ್ಚ । ತತ್ರ ಹೋಮ ಮಾತ್ರಾನುವಾದೇನ ಆಹವನೀಯಸ್ಯೇವ ಸ ಇತಿ ಶ್ರುತ್ಯುಕ್ತ ಮಹಿಮ ಮಾತ್ರಾನುವಾದೇನ ಸತ್ಯತ್ವಸ್ಯ ವಿಧಾನಾತ್ ।**

ಅಯಂ ಸಹಸ್ರಮೃಷೀಭಿಃ ಸಹಸ್ಕೃತಃ

ಸಮುದ್ರ ಇವ ಪಪ್ರಥೇ ।

**ಸತ್ಯಃ ಸೋ ಅಸ್ಯ ಮಹಿಮಾ**

ಗೃಣೇ ಶವೋ ಯಜ್ಞೇಷು ವಿಪ್ರರಾಜ್ಯೇ (ಋಗ್ವೇದ.5.3.25)

ಈ ಋಗ್ವೇದ ಮಂತ್ರದಲ್ಲಿ ಪರಮಾತ್ಮನ ಸತ್ಯಕಾಮತ್ವಾದಿ ಮಹಿಮೆಗಳನ್ನು 'ಸತ್ಯ'ವೆಂದು ನೇರವಾಗಿ ಹೇಳಿದೆ. ಆದರಿಂದ ಅವುಗಳನ್ನು ಅತಾತ್ವಿಕವೆನ್ನಲಾಗದು.

ಇಲ್ಲಿ ಅದ್ವೈತಿ ಹೇಳುತ್ತಾನೆ— 'ಈ ಮಂತ್ರವು ಮಹಿಮೆಯಲ್ಲಿ ಸತ್ಯತ್ವವನ್ನು ಹೇಳುತ್ತಿಲ್ಲ. ಸತ್ಯವಾದ ಬ್ರಹ್ಮದಲ್ಲಿ ಸರ್ವಾಭೇದರೂಪ ಮಹಿಮೆ ಇದೆ ಎನ್ನುತ್ತಿದೆ' ಎಂದು. ಇದು ಸರಿಯಲ್ಲ. 'ಸೋ ಅಸ್ಯ ಮಹಿಮಾ' ಎಂದು ಪ್ರಸಿದ್ಧವಾಚಕವಾದ 'ಸಃ' ಶಬ್ದದಿಂದ ಪ್ರಸಿದ್ಧವಾದ ಸಾರ್ವಜ್ಞಾದಿ ಮಹಿಮೆಯನ್ನು ಅನುವಾದ ಮಾಡಿ ಸತ್ಯತ್ವವಿಧಾನ ಮಾಡುತ್ತದೆ ಎನ್ನಬೇಕು. ಸರ್ವಾಭೇದವು ಸರ್ವಜ್ಞತ್ವದಂತೆ ಒಂದು ಮಹಿಮೆಯಲ್ಲ. ಅದು ಮಹಿಮೆ ಎಂದು ಪ್ರಸಿದ್ಧವಾಗಿಲ್ಲ.

'ಮಹಿಮೆಯನ್ನು 'ಸತ್ಯ' ಎನ್ನುವ ಪಕ್ಷದಲ್ಲಿಯೂ, ಈ ಮಂತ್ರವು ಆಹವನೀಯದಂತೆ ಅನಾರಭ್ಯ ಅಧೀತವಲ್ಲ. ಇದು ಇಂದ್ರಸೂಕ್ತ. ಇಂದ್ರನ ಮಹಿಮೆಯ ಪ್ರಕರಣ. 'ಸಹಸ್ಕೃತಃ ಸಮುದ್ರ ಇವ ಪಪ್ರಥೇ' ಸಮುದ್ರದಂತೆ ವಿಸ್ತೃತವಾದುದು ಇಂದ್ರನ ಬಲ ಪೌರುಷಮಹಿಮೆ' ಎನ್ನುತ್ತಿದೆ'— ಎಂದು ಅದ್ವೈತಿ ಹೇಳುವುದೂ ಸರಿಯಲ್ಲ.

'ಆಹವನೀಯೇ ಜುಹೋತಿ' ಎಂದು ವಿಧಿಪ್ರಾಪ್ತಹೋಮಾನುವಾದ ಮಾಡಿ ಆಹವನೀಯ ವಿಧಾನ ಮಾಡಿದಂತೆ 'ಸಃ ಮಹಿಮಾ' ಎಂದು ಶ್ರುತ್ಯುಕ್ತವಾದ ಸತ್ಯಕಾಮತ್ವಾದಿ ಮಹಿಮೆಯನ್ನು ಅನುವಾದಮಾಡಿ ಸತ್ಯತ್ವವಿಧಾನ ಮಾಡುತ್ತಿದೆ. ಸತ್ಯ ಶಬ್ದದಿಂದ ಸತ್ಯತ್ವವುಳ್ಳ ಇಂದ್ರನಲ್ಲಿ ಬಲವಿಸ್ತಾರರೂಪಮಹಿಮೆಯ ವಿಧಾನ ಎಂದೇ ಹೇಳೋಣ ಎಂದರೆ, ಅದು ಸರಿಯಲ್ಲ. 'ಆಹವನೀಯೇ ಜುಹೋತಿ' ಎಂಬಲ್ಲಿ ಆಹವನೀಯ ಶಬ್ದದಿಂದ ಆಹವನೀಯತ್ವ ಉಳ್ಳ ಅಗ್ನಿಯಲ್ಲಿ ಹೋಮ ವಿಧಾನವಲ್ಲ. ಹೋಮದಲ್ಲಿ ಆಹವನೀಯರೂಪ ಗುಣವಿಧಾನ.

**ಸತ್ಯಃ ಸೋ ಅಸ್ಯೇತ್ಯಾದೇಃ ಐಂದ್ರ ಸೂಕ್ತಸ್ಥತ್ವೇऽಪಿ 'ತತ್ತ್ವಾ ಯಾಮಿ ಸುವೀರ್ಯಂ ತದ್ ಬ್ರಹ್ಮ ಪೂರ್ವಚಿತ್ತಯೇ' ಇತಿ ಬ್ರಹ್ಮಶ್ರುತ್ಯಾ 'ಇಂದ್ರಃ ಸೂರ್ಯಮರೋಚಯತ್ ಇಂದ್ರೇ ಹ ವಿಶ್ವಾ ಭುವನಾನಿ ಯೇಮಿರೇ' ಇತ್ಯಾದಿ ಸೂರ್ಯ ಪ್ರಕಾಶತ್ವಾದಿ ಲಿಂಗೈಶ್ಚ ಜ್ಯೋತಿರಧಿಕರಣನ್ಯಾಯೇನ ಸೂಕ್ತಸ್ಯ ಪರಮೇಶ್ವರ ಪರತ್ವಾತ್ ।**

'ಸತ್ಯಃ ಸೋ ಅಸ್ಯ ಮಹಿಮಾ' ಎಂಬುದು ಇಂದ್ರಸೂಕ್ತದ ಮಧ್ಯದಲ್ಲಿ ಬಂದರೂ 'ಸಃ ಮಹಿಮಾ' ಎಂದರೆ ಈ ಸೂಕ್ತದಲ್ಲಿಯೇ ಹೇಳಿದ 'ಸಮುದ್ರ ಇವ ಪ್ರಪಥೇ' ಸಮುದ್ರದಂತೆ ವಿಸ್ತಾರವಾದ ಇಂದ್ರನ ಬಲವೀರ್ಯವೆಂಬ ಮಹಿಮೆ' ಎಂದರ್ಥವಲ್ಲ. ಏಕೆಂದರೆ ಈ ಸೂಕ್ತ ಇಂದ್ರನ ಸ್ತುತಿಯಲ್ಲ. ಇಂದ್ರನಾಮಕನಾದ ಭಗವಂತನ ಸ್ತುತಿ. ಇದು ಶ್ರುತಿ ಪ್ರಮಾಣ ಮತ್ತು ಲಿಂಗ ಪ್ರಮಾಣಗಳಿಂದ ನಿರ್ಣಯವಾಗುತ್ತದೆ.

ಬ್ರಹ್ಮಶಬ್ದವು ಶ್ರುತಿಪ್ರಮಾಣ. 'ತತ್ವಾ ಯಾಮಿ ಸುವೀರ್ಯಂ ತದ್ ಬ್ರಹ್ಮ ಪೂರ್ವಚಿತ್ತಯೇ' ಎಂಬಲ್ಲಿ 'ಪೂರ್ವ ಚಿತ್ತಿ' ಅನಾದಿಯಾದ ಸ್ವರೂಪಸುಖದ ಅಭಿವ್ಯಕ್ತಿ. ಅದಕ್ಕಾಗಿ 'ಬ್ರಹ್ಮ ತ್ವಾ ಯಾಮಿ' 'ಬ್ರಹ್ಮ' ಬ್ರಹ್ಮಶಬ್ದದಿಂದ ಕರೆಸಿಕೊಳ್ಳುವ 'ತ್ವಾ' ನಿನ್ನನ್ನು 'ಯಾಮಿ' ಹೊಂದುತ್ತೇನೆ. ಉಪಾಸನ ಮಾಡುತ್ತೇನೆ' ಎಂದರ್ಥ.

ಯದ್ಯಪಿ ಸಾಯಣಭಾಷ್ಯಪ್ರಕಾರ 'ಬ್ರಹ್ಮ' ಎಂದರೆ ಅನ್ನ. 'ತ್ವಾಂ ಬ್ರಹ್ಮ ಯಾಚಾಮಿ' 'ನಿನ್ನನ್ನು ಅನ್ನನೀಡೆಂದು ಬೇಡುತ್ತೇನೆ' ಎಂದರ್ಥ. 'ಯಾಚಾಮಿ' ಎಂಬಲ್ಲಿ 'ಚಾ' ಲೋಪವಾಗಿ 'ಯಾಮಿ' ಎಂದಾಗಿದೆ ಎನ್ನುತ್ತಾರೆ. ಇದು ಸರಿಯಲ್ಲ. 'ಯಾಮಿ' ಎಂಬುದು ವರ್ಣಲೋಪ ದಿಂದಾಗಿದೆ ಎಂಬ ಕಲ್ಪನೆ ಉಚಿತವಲ್ಲ. 'ಬ್ರಹ್ಮ ಯಾಚಾಮಿ' ಅಂದರೆ ದೇವೋತ್ತಮನಾದ ಇಂದ್ರನಲ್ಲಿ ಅಲ್ಪವಾದ ಲೌಕಿಕ ಅನ್ನಯಾಚನೆ ಎಂಬ ಅರ್ಥವೂ, ಉಚಿತವಲ್ಲ. ಬ್ರಹ್ಮಶಬ್ದವು 'ತದೇವ ಬ್ರಹ್ಮ ಪರಮಂ ಕವೀನಾಂ' ಎಂಬಂತೆ ಮುಖ್ಯವಾಗಿ ಪರಮಾತ್ಮನ ಪ್ರಸಿದ್ಧ ನಾಮ. ಅದನ್ನು ಬಿಟ್ಟು 'ಅನ್ನ' ಎಂದು ಅಮುಖ್ಯಾರ್ಥ ಮಾಡಿದ್ದೂ ಅನುಚಿತ. ಹೀಗಾಗಿ ಬ್ರಹ್ಮಶಬ್ದರೂಪವಾದ 'ಶ್ರುತಿ' ಎಂಬ ಪ್ರಮಾಣ ಭಗವತ್ಪರವಾಗಿದೆ.

'ಲಿಂಗ' ಎಂಬ ಪ್ರಮಾಣವೂ ಇಲ್ಲಿ ಭಗವತ್ಪರ—

ಇಂದ್ರೋ ಮಹ್ನಾ ರೋದಸೀ ಪಪ್ರಥತ್ ಶವ
ಇಂದ್ರಃ ಸೂರ್ಯಮರೋಚಯತ್ ।
ಇಂದ್ರೇ ಹ ವಿಶ್ವಾ ಭುವನಾನಿ ಯೇಮಿರೇ
ಇಂದ್ರೇ ಸುವಾನಾಸ ಇಂದವಃ (ಋಗ್ವೇದ 5.7.25)

ಈ ಮಂತ್ರದಲ್ಲಿ 'ಇಂದ್ರಃ ಸೂರ್ಯಮರೋಚಯತ್' 'ಇಂದ್ರನು ಸೂರ್ಯನನ್ನು ಬೆಳಗಿಸಿದನು' ಎಂದರೆ 'ಯದಾದಿತ್ಯಗತಂ ತೇಜೋ ಜಗದ್ಭಾಸಯತೇಽಖಿಲಂ' ಎಂದು ಭಗವದ್ಗೀತೆ ಹೇಳಿದಂತೆ ಪರಮಾತ್ಮನೆ ಸೂರ್ಯನಿಗೆ ಪ್ರಕಾಶ ಕೊಡುವವನು. ಮತ್ತು 'ಇಂದ್ರೇ ಹ ವಿಶ್ವಾ ಭುವನಾನಿ ಯೇಮಿರೇ' ಎಂದರೆ 'ಪರಮಾತ್ಮನಲ್ಲಿಯೇ ಎಲ್ಲ ಲೋಕಗಳು ನಿಯಮ್ಯವಾಗಿ ನೆಲೆಸಿವೆ'

ಹೀಗೆ ಸೂರ್ಯಪ್ರಕಾಶಕತ್ವ, ಜಗನ್ನಿಯಾಮಕತ್ವರೂಪ ಲಿಂಗಗಳೂ ಭಗವಂತನ ಅಸಾಧಾರಣ ಲಕ್ಷಣಗಳಾದ್ದರಿಂದ ಇಂದ್ರಪ್ರಕರಣಕ್ಕೆ ಬಾಧಕವಾಗಿರುವ ಪ್ರಬಲ ಶ್ರುತಿ–ಲಿಂಗ ಪ್ರಮಾಣಗಳಿಂದ ಈ ಸೂಕ್ತವು ಇಂದ್ರ ನಾಮಕ ಪರಮಾತ್ಮಪರ.

ಇದು ಜ್ಯೋತಿರಧಿಕರಣನ್ಯಾಯ. 'ಜ್ಯೋತಿಶ್ಚರಣಾಭಿಧಾನಾತ್' (ಬ್ರ.ಸೂ.1.1.24) ಎಂಬ ಸೂತ್ರದಲ್ಲಿ,

ವಿ ಮೇ ಕರ್ಣಾ ಪತಯತೋ ವಿಚಕ್ಷು
ರ್ವೀದಂ ಜ್ಯೋತಿ ರ್ಹೃದಯ ಆಹಿತಂ ಯತ್ (ಋಗ್ವೇದ 4.5.11)

'ನನ್ನ ಕಿವಿಗಳು ಜ್ಯೋತಿಗೆ ವಿಮುಖವಾಗಿ ಹೋಗುತ್ತಿವೆ. ಕಣ್ಣು ಕೂಡ ವಿಮುಖವಾಗಿ ಹೋಗುತ್ತಿವೆ. ಹೃದಯದಲ್ಲಿರುವ ಆ ಜ್ಯೋತಿ ಕಣ್ಣುಕಿವಿಗಳಿಗೆ ಗೋಚರವಾಗುತ್ತಿಲ್ಲ.'

ಇಲ್ಲಿ ಜ್ಯೋತಿ ಎಂದರೆ ಅಗ್ನಿಯೆ ? ಪರಮಾತ್ಮನೆ ? ಎಂದು ವಿಚಾರ. ಇದು ಅಗ್ನಿಸೂಕ್ತಸ್ಥವಾದ ಮಂತ್ರವಾದ್ದರಿಂದ ಅಗ್ನಿಪ್ರಕರಣಾನುಸಾರ ಅಗ್ನಿಯೆ ಜ್ಯೋತಿ ಎಂದು ಪೂರ್ವಪಕ್ಷ. ಕಣ್ಣುಕಿವಿಗಳಿಗೆ ಅಗೋಚರವಾಗಿರುವುದು ಪರಮಾತ್ಮನ ಲಿಂಗ. ಪ್ರಕರಣಬಾಧಕ ವಾದ ಲಿಂಗದಿಂದ ಈ ಸೂಕ್ತವು ಪರಮಾತ್ಮಪರ. ಹೀಗಾಗಿ ಇಲ್ಲಿ ಹೇಳಿದ ಜ್ಯೋತಿಯು ಪರಮಾತ್ಮನೆ ಎಂದು ಸಿದ್ಧಾಂತ.

ಈ ಅಧಿಕರಣ ನ್ಯಾಯದಂತೆ ಇಂದ್ರಸೂಕ್ತದಲ್ಲಿ ದುರ್ಬಲವಾದ ಇಂದ್ರಪ್ರಕರಣವನ್ನು ಪ್ರಬಲವಾದ ಬ್ರಹ್ಮಶ್ರುತಿಲಿಂಗಗಳು ಬಾಧಿಸುವುದರಿಂದ ಇದು ಇಂದ್ರನ ಸೂಕ್ತವಲ್ಲ, ಇಂದ್ರನಾಮಕ ವಿಷ್ಣುವಿನ ಸೂಕ್ತ. ಆದರಿಂದ 'ಸಃ' ಮಹಿಮಾ ಎಂದರೆ ವಿಷ್ಣುವಿನ ಸಾರ್ವಜ್ಞಾದಿ ಪ್ರಸಿದ್ಧ ಮಹಿಮೆಯೆ. ಅದನ್ನು ಸೂಕ್ತವು ಅನುವಾದ ಮಾಡಿ ಸತ್ಯತ್ವ ವಿಧಾನ ಮಾಡುತ್ತಿದೆ.

**ಇಯಂ ಶ್ರುತಿರ್ವ್ಯಾವಹಾರಿಕ ಸತ್ವಪರಾ ಚೇತ್ ಬ್ರಹ್ಮಸತ್ವ ಶ್ರುತಿರಪಿ ಪ್ರಾತಿಭಾಸಿಕ ಸತ್ವಪರಾ ಅಸ್ತು । ನ ಚಾತ್ರ ಮಾನಾಂತರ ಪ್ರಾಪ್ತಿರಸ್ತಿ ।**

'ಸತ್ಯಃ ಸೋ ಅಸ್ಯ ಮಹಿಮಾ' ಎಂಬ ಶ್ರುತಿಯು ಪರಮಾತ್ಮನ ಮಹಿಮೆಯನ್ನು 'ಸತ್ಯ' ಎನ್ನುತ್ತಿದ್ದರೂ 'ಶ್ರುತಿಗೆ ಅದರಲ್ಲಿ ತಾತ್ಪರ್ಯವಿಲ್ಲ. ಅದು ವ್ಯಾವಹಾರಿಕ ಸತ್ಯತ್ವಾಭಿಪ್ರಾಯದಿಂದ ಹಾಗೆ ಹೇಳುತ್ತಿದೆ' ಎಂದರೆ, 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಎಂದು ಉಪನಿಷತ್ತು ಬ್ರಹ್ಮಸತ್ಯತ್ವವನ್ನು ಹೇಳಿದರೂ ಅದರಲ್ಲಿ ತಾತ್ಪರ್ಯವಿಲ್ಲ. ಅದು ಪ್ರಾತಿಭಾಸಿಕ ಸತ್ಯತ್ವಾಭಿಪ್ರಾಯದಿಂದ ಹಾಗೆ ಹೇಳುತ್ತಿದೆ ಎನ್ನೋಣ. ಏಕೆಂದರೆ ಮಹಿಮೆಯ ಸತ್ಯತ್ವವು ಪ್ರಮಾಣಾಂತರ ಪ್ರಾಪ್ತವಲ್ಲ. 'ಅದರಲ್ಲಿ ತಾತ್ಪರ್ಯವಿಲ್ಲ' ಎನ್ನಲು ಕಾರಣವಿಲ್ಲ.

**ಅತ್ರ ನಿರ್ಗುಣವಾಕ್ಯಂ ಬಾಧಕಂ ಚೇತ್ ತತ್ರಾಪಿ ಅಸದ್ವಾ ಇತ್ಯಾದಿ ವಾಕ್ಯಂ ಬಾಧಕಂ। ತತ್ ಅವ್ಯಕ್ತತ್ವಾದ್ಯಭಿಪ್ರಾಯಂ ಚೇತ್ ಇದಮಪಿ ತ್ರೈಗುಣ್ಯರಾಹಿತ್ಯಾದ್ಯಭಿಪ್ರಾಯಂ। ಯದಿ ಚ ಬ್ರಹ್ಮ ಭ್ರಮಾಧಿಷ್ಠಾನತ್ವಾತ್ ಸತ್, ತರ್ಹಿ ತತ ಏವ ಸವಿಶೇಷಂ।**

'ಸತ್ಯಃ ಸೋ ಅಸ್ಯಮಹಿಮಾ' ಎಂಬಲ್ಲಿ 'ಸತ್ಯ' ಶಬ್ದವು ಮಹಿಮ ತಾತ್ವಿಕತ್ವವನ್ನು ಹೇಳಬೇಕೆಂದರೆ ಅದಕ್ಕೆ 'ನಿರ್ಗುಣಶ್ಚ' ಎಂಬ ವಾಕ್ಯ ಬಾಧಕವಿದೆ, ಎಂದರೆ, 'ಸತ್ಯಂ ಜ್ಞಾನಂ' ಎಂಬಲ್ಲಿ ಸತ್ಯಶಬ್ದವು ಕೂಡ ಬ್ರಹ್ಮತಾತ್ವಿಕತ್ವವನ್ನು ಹೇಳಬೇಕೆಂದರೆ ಅದಕ್ಕೆ 'ಅಸದ್ವಾ ಇದಮಗ್ರ ಆಸೀತ್' ಎಂಬ ವಾಕ್ಯವು ಬಾಧಕವಾಗಿದೆ ಎನ್ನುತ್ತೇವೆ.

'ಅಸದ್ವಾ' ಎಂಬಲ್ಲಿ 'ಅಸತ್' ಎಂದರೆ ಅವ್ಯಕ್ತವಾಗಿದೆ, ವ್ಯಕ್ತವಾಗಿಲ್ಲ ಎಂದರ್ಥ ಮಾಡುವುದಾದರೆ 'ನಿರ್ಗುಣಶ್ಚ' ಎಂಬಲ್ಲಿ 'ನಿರ್ಗುಣ' ಎಂದರೂ 'ಸತ್ವಾದಿಗುಣತ್ರಯರಹಿತ' ಎಂದು ಅರ್ಥಮಾಡಲು ಬರುತ್ತದೆ.

ಬ್ರಹ್ಮವು ಪ್ರಪಂಚಾರೋಪಾಧಿಷ್ಠಾನವಾದ್ದರಿಂದ ಸತ್ಯವೇ ಆಗಿರಬೇಕೆನ್ನುವುದಾದರೆ ಅದೇ ಕಾರಣಕ್ಕೆ ಬ್ರಹ್ಮ ಸವಿಶೇಷವೂ ಆಗಿರಬೇಕಾಗುತ್ತದೆ. ಅಧಿಷ್ಠಾನವಾಗಬೇಕಾದರೆ ಅದರ ಸಾಧಾರಣಧರ್ಮ ಜ್ಞಾತವಾಗಿದ್ದು ವಿಶೇಷವಾದ ಅಸಾಧಾರಣ ಧರ್ಮ ಅಜ್ಞಾತವಾಗಿರಬೇಕು ತಾನೆ? ನಿರ್ವಿಶೇಷವು ಸಾಧಾರಣ ಅಸಾಧಾರಣ ಧರ್ಮ ಯಾವುದೂ ಇಲ್ಲದ್ದೆಂದಮೇಲೆ ಅದು ಹೇಗೆ ಅಧಿಷ್ಠಾನವಾದೀತು?

**ನ ಚ ನಿರ್ಗುಣಸ್ಯ ಆರೋಪರೂಪ-ಉಪಾಸನಾವಿಷಯತ್ವೇ ತಜ್ಜ್ಞಾನಾತ್ ಮುಕ್ತ್ಯಯೋಗಃ। ಧರ್ಮಿಜ್ಞಾನಾಧೀನ ಸಂದೇಹಸಾಪೇಕ್ಷ ವೇದಾಂತವಿಚಾರ ಸಾಧ್ಯ ಸಪ್ರಕಾರಕಜ್ಞಾನಸ್ಯೈವ ಮೋಚಕತ್ವೋಕ್ತೇಃ।**

'ಉತ್ತರ ತಾಪನೀಯಾದಿಗಳಲ್ಲಿ ನಿರ್ಗುಣದ ಉಪಾಸನೆ ಉಕ್ತವಾಗಿದೆ. ಅದರಿಂದ, 'ಸಗುಣವು ಉಪಾಸ್ಯವಾದ್ದರಿಂದ ಅತಾತ್ವಿಕ ಎನ್ನುವುದಾದರೆ ನಿರ್ಗುಣವೂ ಹಾಗೇ ಉಪಾಸ್ಯವಾದ್ದರಿಂದ ಅತಾತ್ವಿಕವಾಗಬೇಕು.

ಉಪಾಸ್ಯವೇ ಆದರೂ ನಿರ್ಗುಣವು ತಾತ್ವಿಕವೆನ್ನುವುದಾದರೆ ಸಗುಣವೂ ಕೂಡ ಹಾಗೆಯೆ

ಉಪಾಸ್ಯವಾದರೂ ತಾತ್ವಿಕವೆ' ಎಂದು ನಾವು ಹಿಂದೆ ಹೇಳಿದ್ದಕ್ಕೆ ಅದ್ವೈತಿ ಈಗ ಹೇಳುತ್ತಾನೆ— 'ನಿರ್ಗುಣವು ಭ್ರಮರೂಪ ಉಪಾಸನಾ ವಿಷಯವೇ ಅಲ್ಲ. 'ವಿಷಯವಾಗಿದೆ ಉಪಾಸ್ಯವಾಗಿದೆ' ಎಂದರೆ ಉಪಾಸನೆಯೇ ನಿರ್ಗುಣಜ್ಞಾನದ ಪ್ರಯೋಜನ ಹೊರತು ಮುಕ್ತಿಯು ಪ್ರಯೋಜನವಲ್ಲ ನಿರ್ಗುಣವು ಮೋಚಕವಲ್ಲವೆಂದಾದೀತು. ಅದರಿಂದ 'ನಿರ್ಗುಣವು ಉಪಾಸ್ಯವಾದರೂ ತಾತ್ವಿಕವಾಗಿರುವಂತೆ ಸತ್ಯಕಾಮತ್ವಾದಿಗಳೂ ಉಪಾಸ್ಯವಾದರೂ ತಾತ್ವಿಕವೇ ಆಗಲಿ' ಎಂದು ನಮಗೆ ನೀವು ಆಪಾದನೆ ಮಾಡಬಾರದು. ಎಂದು.

ಇದಕ್ಕೆ ನಾವು ಹೇಳಬೇಕು, ನಿರ್ಗುಣವು ಮೋಚಕವೆನ್ನುವುದೇ ಅಸಿದ್ಧ. 'ತಮೇವಂ ವಿದ್ವಾನಮೃತ ಇಹ ಭವತಿ' 'ಏವಂ ವಿದ್ವಾನ್' 'ಸಾರ್ವಜ್ಞಾದಿ ಗುಣಉಳ್ಳವನು ಪರಮಾತ್ಮ ಎಂದು ಉಪಾಸನೆ ಮಾಡುವವನೆ ಮುಕ್ತನಾಗುತ್ತಾನೆ' ಎಂದು ಶ್ರುತಿಸಿದ್ಧವಾಗಿದೆ. ಅದರಿಂದ ಸಗುಣವೇ ಮೋಚಕ, 'ನಿರ್ಗುಣವು ಉಪಾಸ್ಯವೆಂದಾದರೆ ಮೋಚಕವಲ್ಲ ವೆಂದಾದೀತೆಂ'ದು ಅದ್ವೈತಿ ಆಪಾದನೆ ಮಾಡಿದರೆ, 'ಆಗಲಿ, ಅದು ನಮಗೆ ಇಷ್ಟಾಪತ್ತಿ' ಎಂದು ನಾವು ಹೇಳುತ್ತೇವೆ.

ಸಾಧಾರಣ ಧರ್ಮಯುಕ್ತವಾದ ಧರ್ಮಿಯ ಜ್ಞಾನಾಧೀನವಾಗಿ ಸಂದೇಹ ಬಂದ ಬಳಿಕ ವೇದಾಂತ ವಿಚಾರ ಮಾಡಿದಾಗ ಅಸಾಧಾರಣ ಧರ್ಮಪ್ರಕಾರಕ ನಿಶ್ಚಯ ಬಂದರೇ ಅದು ಮೋಚಕವಾಗುವುದು, ನಿಷ್ಪ್ರಕಾರಕವಾದ ನಿರ್ಗುಣಜ್ಞಾನವು ಮೋಚಕವಲ್ಲ, ಎಂದು 'ತಮೇವಂ ವಿದ್ವಾನ್' 'ಹೀಗೆ, ಸಾರ್ವಜ್ಞಾದಿಗುಣಉಳ್ಳವನೆಂದು ತಿಳಿಯುವವನು ಮುಕ್ತನಾಗುತ್ತಾನೆ' ಎಂಬ ಶ್ರುತಿಯು ಸ್ಪಷ್ಟ ಹೇಳುತ್ತಿದೆ. ಅದರಿಂದ ಸಗುಣೋಪಾಸನೆಗೇ ಮೋಚಕತ್ವ ಯುಕ್ತ.



उपासनांतराणामिव श्रुतिबलादेव विचित्रफलत्वोपपत्तेश्च । सगुणेऽपि साम्यापत्तेश्च । ''पृथगात्मानम्'' इत्यादिश्रुतिषु,

''यो मामशेषदोषोज्झं गुणसर्वस्वबृंहितम् ।
जानात्यस्मै प्रसन्नोऽहं दद्यां मुक्तिं न चान्यथा ।।

भोक्तारं यज्ञतपसां सर्वलोकमहेश्वरम् ।
सुहृदं सर्वभूतानां ज्ञात्वा मां शांतिमृच्छति ।।''

इत्यादिस्मृतिषु च सविशेषज्ञानादेव मोक्षोक्तेः । तस्य तथोपासनाकर्तव्यतापरत्वे सगुणोपासनाविधिशेषार्थवादत्वे वा निर्गुणज्ञानान्मुक्तिश्रुतिरपि तथा स्यात् ।

**एतेन ''एष नित्यो महिमा ब्राह्मणस्य'' ''सत्यः सो अस्य महिमा'' इत्यादेरपि तथोपासनापरत्वादिकं निरस्तम् ।**

यदि च भ्रमत्वमात्रेण विचित्रफलसाधनत्वं तदा दोषमाह— **सगुणेऽपीति ।।** सगुणोपासनेनापीत्यर्थः ।



**ಉಪಾಸನಾಂತರಾಣಾಮಿವ ಶ್ರುತಿ ಬಲಾದೇವ ವಿಚಿತ್ರ ಫಲತ್ವೋಪಪತ್ತೇಶ್ಚ ।**

'ಬೇರೆ ಸಗುಣೋಪಾನೆಗೆ ಮೋಕ್ಷಫಲ ಎಲ್ಲಿಯೂ ಕಂಡಿಲ್ಲ, ಮೋಕ್ಷೇತರಫಲವೇ ಕಂಡಿದೆ. ಆದರಿಂದ ಸಾರ್ವಜ್ಞಾದಿ ಉಪಾಸನೆಗೂ ಇತರ ಫಲವೆ' ಎಂದರೆ ಹೇಳುತ್ತೇವೆ—'ಬೇರೆ ಸಗುಣೋಪಾಸನೆಗಳಿಗೆ ಮೋಕ್ಷೇತರ ಫಲ ಉಕ್ತವಾಗಿದ್ದರೂ ಸಾರ್ವಜ್ಞಾದಿ ಉಪಾಸನೆಗೆ ಅವುಗಳಿಗಿಂತ ವಿಲಕ್ಷಣವಾದ ಮೋಕ್ಷರೂಪ ಫಲವನ್ನು ಶ್ರುತ್ಯುಕ್ತವಾದ್ದರಿಂದ ಒಪ್ಪಬಹುದು. ಬೇರೆ ಸಗುಣೋಪಾಸನೆಗಳಿಗೆ ಪರಸ್ಪರ ವಿಲಕ್ಷಣ ಮೋಕ್ಷೇತರ ಫಲಗಳನ್ನು ಶ್ರುತ್ಯುಕ್ತವಾದ್ದರಿಂದ ಅಂಗೀಕರಿಸುತ್ತೇವೆ ತಾನೆ? ಹಾಗೇ ಸಾರ್ವಜ್ಞಾದಿ ಉಪಾಸನೆಗೂ ಆ ಎಲ್ಲ ಉಪಾಸನೆಗಳಿಗಿಂತ ವಿಲಕ್ಷಣವಾದ ಮೋಕ್ಷಫಲವನ್ನು ಶ್ರುತ್ಯುಕ್ತವಾದ್ದರಿಂದ ಸ್ವೀಕರಿಸುವುದು ಯುಕ್ತವೆ.

**ಸಗುಣೇऽಪಿ ಸಾಮ್ಯಾಪತ್ತೇಶ್ಚ ।**

'ಆರೋಪರೂಪವಾದ ಉಪಾಸನೆಗೆ ನಿರ್ಗುಣವು ವಿಷಯವಾದರೆ ನಿರ್ಗುಣಜ್ಞಾನದಿಂದ ಮೋಕ್ಷೇತರ ವಿಲಕ್ಷಣ ಫಲವೇ ಹೊರತು ಮೋಕ್ಷಫಲವಾಗಲಾರದು' ಎಂದು ಅದ್ವೈತಿ ನಮಗೆ ಆಪಾದಿಸಿದರೆ, ನಾವು ಕೂಡ, 'ಆರೋಪರೂಪ ಉಪಾಸನೆಗೆ ಸಗುಣವು ವಿಷಯವಾದರೂ ಅದರ ಜ್ಞಾನದಿಂದ ಮೋಕ್ಷಲಾಭವಾಗಲಾರದೆಂ'ದು ಪ್ರತಿಯಾಗಿ ಆಪಾದಿಸಬೇಕು. 'ನಿರ್ಗುಣ ಉಪಾಸ್ಯವೆಂದಾದರೆ ನಿರ್ಗುಣಜ್ಞಾನದಿಂದ ಮೋಕ್ಷವಾಗದು' ಎಂದು ಅದ್ವೈತಿ ಹೇಳಿದರೆ ಅದು ಸಗುಣವಿಷಯದಲ್ಲಿಯೂ ಸಮಾನ.

**'ಪೃಥಗಾತ್ಮಾನಂ' ಇತ್ಯಾದಿ ಶ್ರುತಿಷು,**
**ಯೋ ಮಾಮಶೇಷ ದೋಷೋಜ್ಝಂ ಗುಣಸರ್ವಸ್ವ ಬೃಂಹಿತಂ ।**
**ಜಾನಾತ್ಯಸ್ಮೈ ಪ್ರಸನ್ನೋಹಂ ದದ್ಯಾಂ ಮುಕ್ತಿಂ ನಚಾನ್ಯಥಾ ॥**
**ಭೋಕ್ತಾರಂ ಯಜ್ಞತಪಸಾಂ ಸರ್ವಲೋಕಮಹೇಶ್ವರಂ ।**
**ಸುಹೃದಂ ಸರ್ವಭೂತಾನಾಂ ಜ್ಞಾತ್ವಾ ಮಾಂ ಶಾಂತಿಮೃಚ್ಛತಿ ॥**
**ಇತ್ಯಾದಿ ಸ್ಮೃತಿಷು ಚ ಸವಿಶೇಷ ಜ್ಞಾನಾದೇವ ಮೋಕ್ಷೋಕ್ತೇಃ ।**

'ಪೃಥಗಾತ್ಮಾನಂ ಪ್ರೇರಿತಾರಂ ಚ ಮತ್ವಾ ಜುಷ್ಟಸ್ತತಸ್ತೇನಾಮೃತತ್ವ ಮೇತಿ' 'ಪರಮಾತ್ಮನನ್ನು

ಜೀವವಿಲಕ್ಷಣ, ಜೀವಪ್ರೇರಕ ಎಂದು ಉಪಾಸನೆ ಮಾಡಿದರೆ ಅದರಿಂದ ಮುಕ್ತಿಹೊಂದುತ್ತಾನೆ' ಎಂದು ಶ್ವೇತಾಶ್ವತರ (1.6) ಮುಂತಾದ ಶ್ರುತಿಗಳಲ್ಲಿ ಸವಿಶೇಷಜ್ಞಾನದಿಂದಲೇ ಮೋಕ್ಷ ಎಂದಿದೆ.

'ಯಾರು ನನ್ನನ್ನು ಸಕಲದೋಷರಹಿತ ಗುಣಪೂರ್ಣ ಎಂದು ತಿಳಿಯುವನೋ ಅವನಿಗೇ ನಾನು ಒಲಿದು ಮುಕ್ತಿ ನೀಡುವೆನು ಹೊರತು ಅನ್ಯನಿಗೆ ಅಲ್ಲ'. ಎಂದು ನಸ್ಥಾನತೋಽಪ್ಯಧಿಕರಣ ಅನುವ್ಯಾಖ್ಯಾನೋಕ್ತವಚನ.

'ಯಜ್ಞ ತಪಸ್ಸುಗಳೆಲ್ಲವನ್ನೂ ಸ್ವೀಕರಿಸುವವನು ಸರ್ವಲೋಕೇಶ್ವರನು ಸರ್ವಜೀವರಿಗೆ ಪರಮೋಪಕಾರಿ ನಾನೆಂದು ತಿಳಿದರೇ ಭಕ್ತನು ಮುಕ್ತಿಹೊಂದುವನು' ಎಂದು ಗೀತಾವಚನ (5.29) ಮುಂತಾಗಿ ಸ್ಮೃತಿಗಳೂ ಸವಿಶೇಷಜ್ಞಾನದಿಂದಲೇ ಮೋಕ್ಷ ಎನ್ನುತ್ತಿವೆ.

'ಸಗುಣ ನಿರ್ಗುಣ ಶ್ರುತಿಗಳು ಸಮಬಲ ವಿರೋಧಿಗಳು, ಪರಸ್ಪರ ವಿರೋಧದಿಂದ ಎರಡೂ ನಿರ್ಣಾಯಕವಾಗಲಾರವು' ಎಂದು ತಿಳಿಯಬಾರದು. ಶ್ರುತಿನಿರ್ಣಯಕ್ಕೆಂದೇ ಹೊರಟಿರುವ ಸ್ಮೃತಿಗಳನುಸಾರವಾಗಿ ನಿರ್ಗುಣಶ್ರುತಿಯನ್ನೇ ಗುಣತ್ರಯರಾಹಿತ್ಯ ಪರವಾಗಿಟ್ಟುಕೊಂಡು ಕೂಡಿಸಬೇಕು.

**ತಸ್ಯ ತಥೋಪಾಸನಾಕರ್ತವ್ಯತಾಪರತ್ವೇ ಸಗುಣೋಪಾಸನಾವಿಧಿಶೇಷಾರ್ಥವಾದತ್ವೇ ವಾ ನಿರ್ಗುಣಜ್ಞಾನಾತ್ ಮುಕ್ತಿಶ್ರುತಿರಪಿ ತಥಾ ಸ್ಯಾತ್ ।**

'ಸಗುಣೋಪಾಸನೆಯಿಂದ ಮುಕ್ತಿ' ಎಂದು ಹೇಳುವ 'ಪೃಥಗಾತ್ಮಾನಂ' ಇತ್ಯಾದಿ ಸಗುಣಶ್ರುತಿಗಳಿಗೆ ಸಗುಣೋಪಾಸನೆಯು ಕರ್ತವ್ಯವಾಗಿದೆ ಎನ್ನುವಲ್ಲಿಯೇ ತಾತ್ಪರ್ಯಹೊರತು ಅದರಿಂದ ಮುಕ್ತಿ ಸಿಗುತ್ತದೆ ಎನ್ನುವಲ್ಲಿ ತಾತ್ಪರ್ಯವಿಲ್ಲ. ಅಥವಾ ಇವು ಸಗುಣೋಪಾಸನೆಯ ವಿಧಿಗೆ ಶೇಷವಾದ, 'ಸಗುಣೋಪಾಸನೆ ಪ್ರಶಸ್ತ' ಎಂದು ಹೊಗಳುವ ಅರ್ಥವಾದಗಳಾಗಿವೆ' ಎನ್ನುವುದಾದರೆ, 'ನಿರ್ಗುಣಜ್ಞಾನದಿಂದ ಮುಕ್ತಿ' ಎಂದು ಹೇಳುವ ಶ್ರುತಿಯೂ ಕೂಡ ನಿರ್ಗುಣ ಉಪಾಸನೆ ಕರ್ತವ್ಯವೆನ್ನುತ್ತಿದೆ, ಅಥವಾ ನಿರ್ಗುಣೋಪಾಸನಾ ವಿಧಿಶೇಷವಾಗಿ ಅದನ್ನು ಹೊಗಳುವ ಅರ್ಥವಾದವೆ ಹೊರತು ಅದರಿಂದ ಮುಕ್ತಿ ಸಿಗುತ್ತದೆ ಎನ್ನುವಲ್ಲಿ ಅದಕ್ಕೆ ತಾತ್ಪರ್ಯವಿಲ್ಲ' ಎಂದು ಕೂಡ ಹೇಳುವುದು ಶಕ್ಯವಿದೆ.

**ಏತೇನ 'ಏಷ ನಿತ್ಯೋ ಮಹಿಮಾ ಬ್ರಾಹ್ಮಣಸ್ಯ' 'ಸತ್ಯಃ ಸೋ ಅಸ್ಯಮಹಿಮಾ' ಇತ್ಯಾದೇರಪಿ ತಥೋಪಾಸನಾಪರತ್ವಾದಿಕಂ ನಿರಸ್ತಂ ।**

'ಏಷ ನಿತ್ಯೋ' 'ಸತ್ಯಃ ಸೋ' ಇತ್ಯಾದಿ ಸಗುಣವಾಕ್ಯಗಳು ಗುಣೋಪಾಸನಾಕರ್ತವ್ಯತ್ವ ಪರ ಹೊರತು ಗುಣಗಳನ್ನು ನಿತ್ಯ ಸತ್ಯ ಎಂದು ಹೇಳುವಲ್ಲಿ ಅವುಗಳಿಗೆ ತಾತ್ಪರ್ಯವಿಲ್ಲ ಎನ್ನುವುದು, ಇದರಿಂದಲೇ ಅಂದರೆ, ಸಗುಣಶ್ರುತಿಗೆ ಉಪಾಸನಾಪರತ್ವವನ್ನು ಹೇಳಿದರೆ, ನಿರ್ಗುಣಶ್ರುತಿಯನ್ನೂ

ಹಾಗೇ ಉಪಾಸನಾಪರವೆನ್ನಲು ಬರುತ್ತದೆ ಎಂದು ಅತಿಪ್ರಸಕ್ತಿಯನ್ನು ತೋರಿಸಿದ್ದರಿಂದಲೆ ಅಯುಕ್ತವೆಂದು ಸಿದ್ಧವಾಗುವುದು.



श्रूयते च निर्गुणज्ञानस्यापि फलांतरं ''स यो ह वै तत्परमं ब्रह्म वेद नास्याब्रह्मवित्कुले भवति, य एवं वेदाहं ब्रह्मास्मीति तस्य ह न देवाश्चनाभूत्या ईशत'' इत्यादौ । श्रुतिबलान्निर्गुणज्ञानस्य संयोगपृथक्त्वन्यायेन मुक्तिरपि फलं चेत् सगुणज्ञानस्यापि तथास्तु ।

नच सगुणज्ञानाच्छ्रुता मुक्तिरवांतरा, ''पुण्यपापे विधूय'' इति सर्वकर्मनिवृत्त्युक्तेः । अन्यथा निर्गुणज्ञानाच्छ्रुताप्यवांतरैव । परममुक्तिस्तु ''असन्नेव स भवति'' इतिश्रुत्युक्ता शून्यतापत्तिरिति स्यात् ।

एतेन सगुणवाक्यं निष्प्रपंचप्रकरणस्थं चेन्निषेधायानुवादकम्, उपासनाप्रकरणस्थं चेदुपासनार्थमिति निरस्तम् । गुणविशेष-विधिसंनिहितस्य सामान्यनिषेधकस्य निष्प्रपंचवाक्यस्य विहितगुणानिषेधकत्वात्, प्राप्त्यभावेन सगुणवाक्यस्याननुवादक-त्वाच्च ।

अन्यथा ''असद्वा इदमग्र आसीत्'' ''इदं वा अग्रे नैव किंचनासीत् ।'' इति सर्वनिषेधप्रकरणस्थं, ''रसो वै स'' इत्यादिकमपि निषेधाय ब्रह्मानुवादकं स्यात् ।

ननु ''ये चेमेरण्ये श्रद्धा तप इत्युपासते'' इत्यादिना 'स एनान् ब्रह्म गमयति' इत्यंतेन सगुणोपासनायाः फलांतरश्रवणात् न मोक्षफलत्वमित्याशंक्याह— **श्रूयते चेति । सर्वनिषेधेति ।।** सर्वस्य निषेधप्रतिपादकप्रकरणस्थमित्यर्थः।।



**ಶ್ರೂಯತೇ ಚ ನಿರ್ಗುಣಜ್ಞಾನಸ್ಯಾಪಿ ಫಲಾಂತರಂ। 'ಸ ಯೋ ಹ ವೈ ತತ್ ಪರಮಂ ಬ್ರಹ್ಮ ವೇದ ನಾಸ್ಯಾಬ್ರಹ್ಮವಿತ್ ಕುಲೇ ಭವತಿ' 'ಯ ಏವಂ ವೇದಾಹಂ ಬ್ರಹ್ಮಾಸ್ಮೀತಿ ತಸ್ಯ ಹ ನ ದೇವಾಶ್ಚನ ಅಭೂತ್ಯಾ ಈಶತೇ' ಇತ್ಯಾದೌ।**

'ಯೇ ಚೇಮೇಽರಣ್ಯೇ ಶ್ರದ್ಧಾ ತಪ ಇತ್ಯುಪಾಸತೇ' ಕಾಮ್ಯ ಕರ್ಮವು ಸಂಸಾರಕ್ಕೇ ಕಾರಣವೆಂದು ಅರಿತು ಯಾರು ಅರಣ್ಯದಲ್ಲಿ ಶ್ರದ್ಧೆಯಿಂದ ತಪಸ್ಸು ಮುಂತಾದುವನ್ನು ಮಾಡುತ್ತ ಸಗುಣೋಪಾಸನೆ ಮಾಡುವರೋ ಅವರನ್ನು 'ಸ ಏನಾನ್ ಬ್ರಹ್ಮ ಗಮಯತಿ' ಅರ್ಚಿರಾದಿ ಮಾರ್ಗದಿಂದ ಬ್ರಹ್ಮಲೋಕಕ್ಕೆ ಒಯ್ಯುತ್ತಾನೆ ಎಂದು ಸಗುಣೋಪಾಸನೆಗೆ ಬೇರೆ ಫಲವು (ಛಾಂದೋಗ್ಯ 5.3.1) ಶ್ರುತಿಯಲ್ಲಿ ಉಕ್ತವಾಗಿದೆ, ಮೋಕ್ಷಫಲವಲ್ಲ ಆದರಿಂದ ನಿರ್ಗುಣಶ್ರುತಿಯೇ ಪ್ರಬಲ' ಎಂದರೆ, ನಿರ್ಗುಣಜ್ಞಾನಕ್ಕೂ ಕೂಡ ಅದೇರೀತಿ ಬೇರೆ ಫಲ ಶ್ರುತಿಯಲ್ಲಿ ಉಕ್ತವಾಗಿದೆ— 'ಬೃಹದಾರಣ್ಯಕ (3.5.4)ದಲ್ಲಿ 'ಪರಬ್ರಹ್ಮಜ್ಞಾನಿಯ ಕುಲದಲ್ಲಿ ಅಜ್ಞಾನಿ ಜನಿಸುವುದಿಲ್ಲ.' 'ಅಹಂ ಬ್ರಹ್ಮಾಸ್ಮಿ' ಎಂದು ಉಪಾಸನೆ ಮಾಡುವವನಿಗೆ ದೇವತೆಗಳೂ ಕೂಡ ಫಲದಾರಿದ್ರ್ಯ ಉಂಟುಮಾಡಲು ಶಕ್ತರಾಗುವುದಿಲ್ಲ'ಎಂದು ಹೇಳಿದೆ.

**ಶ್ರುತಿಬಲಾತ್ ನಿರ್ಗುಣಜ್ಞಾನಸ್ಯ ಸಂಯೋಗ ಪೃಥಕ್ತ್ವ ನ್ಯಾಯೇನ ಮುಕ್ತಿರಪಿ ಫಲಂ ಚೇತ್, ಸಗುಣಜ್ಞಾನಸ್ಯಾಪಿ ತಥಾಸ್ತು।**

'ಶ್ರುತಿಬಲದಿಂದ ನಿರ್ಗುಣಜ್ಞಾನಕ್ಕೆ ಸಂಯೋಗಪೃಥಕ್ತ್ವ ನ್ಯಾಯದಿಂದ ಫಲಾಂತರದೊಂದಿಗೆ ಮುಕ್ತಿಫಲವನ್ನೂ ಅಂಗೀಕರಿಸುತ್ತೇನೆ' ಎಂದರೆ, ಸಗುಣಜ್ಞಾನಕ್ಕೂ ಅದೇ ನ್ಯಾಯದಿಂದ ಶ್ರುತಿಬಲದಿಂದ ಫಲಾಂತರದೊಂದಿಗೆ ಮುಕ್ತಿಫಲವನ್ನೂ ಕೂಡ ನಾವು ಒಪ್ಪುತ್ತೇವೆ.

'ಸಂಯೋಗಪೃಥಕ್ತ್ವ ನ್ಯಾಯ'ವೆಂದರೆ—ಪೂರ್ವಮೀಮಾಂಸಾದಲ್ಲಿ 'ಏಕಸ್ಯ ತೂಭಯತ್ವೇ ಸಂಯೋಗಪೃಥಕ್ತ್ವಂ' (ಜೈಮಿನಿಸೂತ್ರ 4.3.5) ಎಂಬ ಸೂತ್ರದಲ್ಲಿ ಹೀಗೆ ವಿಚಾರ ಬಂದಿದೆ— ಇಲ್ಲಿ ಪೂರ್ವಪಕ್ಷ—ದಧ್ಯಾದಿ ಒಂದು ವಸ್ತುವಿಗೆ ನಿತ್ಯತ್ವ ಕಾಮ್ಯತ್ವಗಳೆರಡನ್ನೂ ಒಪ್ಪುವುದಾದರೆ, 'ಸಂಯೋಗ'ಗಳಿಗೆ, ಅಂದರೆ ಕ್ರತುಸಂಯೋಗ ಮತ್ತು ಫಲಸಂಯೋಗಗಳಿಗೆ 'ಪೃಥಕ್ತ್ವ' ಭಿನ್ನವಾಕ್ಯತ್ವ ಬರಬೇಕಾಗುವುದು. 'ದಧ್ನೇಂದ್ರಿಯ ಕಾಮಸ್ಯ ಜುಹುಯಾತ್' ಎಂದು ಅಗ್ನಿಹೋತ್ರ ಪ್ರಕರಣದಲ್ಲಿ ಕಾಮ್ಯ ದಧಿ ಉಕ್ತವಾಗಿದೆ. ಕಾಮ್ಯ ದಧಿಯು ಸಿದ್ಧರೂಪ. ಅನನುಷ್ಠೇಯ. ಅದಕ್ಕೆ ಫಲಾರ್ಥವಾಗಿ ವಿಧಿಯು ಕೂಡುವುದಿಲ್ಲ. ಹೀಗೆ ಕಾಮ್ಯ ದಧಿಗೆ ಕ್ರತುಸಂಯೋಗವು, ಅಂದರೆ ಕ್ರತ್ವರ್ಥತ್ವವು ಕೂಡದಿರುವುದರಿಂದ ಅದನ್ನು ಈ ಶ್ರುತಿ ಹೇಳಲಾರದು. ಕ್ರತುಸಂಯೋಗಕ್ಕಾಗಿ ಬೇರೆಯೆ ದಧಿ ಯನ್ನು ಬೇರೆಯೆ ವಾಕ್ಯದಿಂದ ಗ್ರಹಿಸಬೇಕಾಗುತ್ತದೆ. ಆದರಿಂದ ಒಂದೇ ದಧಿಗೆ ನಿತ್ಯತ್ವಕಾಮ್ಯತ್ವಗಳೆರಡೂ ಕೂಡಲಾರವು ಎಂದು.

**ಸಿದ್ಧಾಂತ**—'ದಧ್ನಾ ಜುಹೋತಿ' ಎಂದು ಕಾಮಸಂಯೋಗರಹಿತವಾದ ಬೇರೆ ವಾಕ್ಯವೂ

ಕೂಡ ಇದೇ ಅಗ್ನಿಹೋತ್ರ ಪ್ರಕರಣದಲ್ಲಿ ಇದೆ. ಪ್ರಕರಣದಿಂದಲೇ ಹೋಮಕ್ರಿಯಾರೂಪ ಆಶ್ರಯದ ಸಂಬಂಧ ಸಿಗುತ್ತಿರುವುದರಿಂದ ತದೇಕವಾಕ್ಯತಯಾ ದಧಿಯು ಕ್ರತ್ವರ್ಥವಾಗಿ ವಿಹಿತ ಮತ್ತು ನಿತ್ಯವೇ ಆಗಿದೆ. ಆದರಿಂದ ಎರಡು ಶ್ರುತಿವಾಕ್ಯಗಳ ಬಲದಿಂದ ಒಂದೇ ದಧಿ ಕಾಮ್ಯವೂ ನಿತ್ಯವೂ ಆಗಬಹುದು. ನಿತ್ಯತ್ವ ಕಾಮ್ಯತ್ವಗಳು ಪರಸ್ಪರ ವಿರೋಧಿಯಲ್ಲ. ಅಕರಣೇ ಪ್ರತ್ಯವಾಯ ಜನಕವಾದರೆ ಕಾಮ್ಯವೂ ನಿತ್ಯವೆನಿಸಬಹುದು. ಹೀಗಾಗಿ ಬೇರೆಬೇರೆ ಶ್ರುತಿಬಲದಿಂದ ಒಂದೇ ದಧಿ ಉಭಯ ಪ್ರಯೋಜನಉಳ್ಳದ್ದು, ಕ್ರತುಸಂಯೋಗ ಮತ್ತು ಫಲಸಂಯೋಗ ಎರಡರಿಂದಲೂ ಯುಕ್ತ ಎಂದು ಒಪ್ಪಬೇಕು.

**ನ ಚ ಸಗುಣ ಜ್ಞಾನಾತ್ ಶ್ರುತಾ ಮುಕ್ತಿಃ ಅವಾಂತರಾ । 'ಪುಣ್ಯಪಾಪೇ ವಿಧೂಯ' ಇತಿ ಸರ್ವಕರ್ಮನಿವೃತ್ತ್ಯುಕ್ತೇಃ । ಅನ್ಯಥಾ ನಿರ್ಗುಣಜ್ಞಾನಾತ್ ಶ್ರುತಾಪಿ ಅವಾಂತರೈವ । ಪರಮಮುಕ್ತಿಸ್ತು 'ಅಸನ್ನೇವ ಸ ಭವತಿ' ಇತಿ ಶ್ರುತ್ಯುಕ್ತಾ ಶೂನ್ಯತಾಪತ್ತಿರಿತಿ ಸ್ಯಾತ್ ।**

'ಸಗುಣಜ್ಞಾನಕ್ಕೆ ಮುಕ್ತಿ ಫಲ ಶ್ರುತವಾಗಿದ್ದರೂ ಆ ಮುಕ್ತಿ ಅವಾಂತರ, ಗೌಣಮುಕ್ತಿ. ಪರಮ ಮುಕ್ತಿಯಲ್ಲ. ಪರಮ ಮುಕ್ತಿ ಬೇರೆಯೇ ಇದೆ, ಅದು ನಿರ್ಗುಣ ಮುಕ್ತಿ' ಎಂದರೆ ಅದು ಸರಿಯಲ್ಲ.

ಯದಾ ಪಶ್ಯಃ ಪಶ್ಯತೇ ರುಗ್ಮವರ್ಣಂ
ಕರ್ತಾರಮೀಶಂ ಪುರುಷಂ ಬ್ರಹ್ಮಯೋನಿಂ ।
ತದಾ ವಿದ್ವಾನ್ **ಪುಣ್ಯಪಾಪೇ ವಿಧೂಯ**
ನಿರಂಜನಃ ಪರಮಂ ಸಾಮ್ಯಮುಪೈತಿ ॥ (ಮುಂಡಕ 3.1.3)

'ರುಕ್ಮವರ್ಣ ಜಗತ್‌ಕರ್ತ ಬ್ರಹ್ಮಾದಿಜನಕನಾದ ಪರಮಪುರುಷನನ್ನು ಕಂಡರೆ ಜ್ಞಾನಿಯು ಸರ್ವಕರ್ಮಮುಕ್ತನಾಗಿ ಪಾಪಲೇಪರಹಿತನಾಗಿ ಪರಮಸಾಮ್ಯರೂಪವಾದ ಮುಕ್ತಿಗೆ ಭಾಗಿಯಾಗುತ್ತಾನೆ' ಎಂದು ಸಗುಣಜ್ಞಾನಕ್ಕೆ ಸರ್ವಕರ್ಮಕ್ಷಯರೂಪವಾದ ಪರಮಮುಕ್ತಿಯೇ ಫಲವಾಗಿ ಶ್ರುತವಾಗಿದೆ. ಸರ್ವಕರ್ಮಕ್ಷಯರೂಪವಾದ ಮುಕ್ತಿಯನ್ನು ಕೂಡ ಅವಾಂತರಮುಕ್ತಿ ಎಂದು ಕರೆದು ಪರಮಮುಕ್ತಿ ಬೇರೆಯೆ ಇದೆ ಎನ್ನುವುದಾದರೆ ನಿರ್ಗುಣಜ್ಞಾನಜನ್ಯವೆಂದು ನೀವು ಹೇಳುವ ಬ್ರಹ್ಮೈಕ್ಯವನ್ನೂ ಅವಾಂತರಮುಕ್ತಿ ಎಂದು ಕರೆದು, 'ಅಸನ್ನೇವ ಸ ಭವತಿ ಅಸದ್ ಬ್ರಹ್ಮೇತಿ ವೇದ ಚೇತ್' 'ಅಸತ್ತಾದ ಶೂನ್ಯದ ಉಪಾಸನೆಯಿಂದ ಶೂನ್ಯತ್ವಾಪತ್ತಿರೂಪವಾದ ಮುಕ್ತಿ' ಎಂದು ಬೇರೆಯೆ ಮುಕ್ತಿಯನ್ನು ಪರಮಮುಕ್ತಿ ಎನ್ನಬೇಕಾದೀತು.

**ಏತೇನ 'ಸಗುಣವಾಕ್ಯಂ ನಿಷ್ಪ್ರಪಂಚ ಪ್ರಕರಣ ಸ್ಥಂ ಚೇತ್, ನಿಷೇಧಾಯ ಅನುವಾದಕಂ । ಉಪಾಸನಾ ಪ್ರಕರಣ ಸ್ಥಂ ಚೇತ್ ಉಪಾಸನಾರ್ಥಂ' ಇತಿ ನಿರಸ್ತಂ । ಗುಣವಿಶೇಷವಿಧಿ ಸಂನಿಹಿತಸ್ಯ ಸಾಮಾನ್ಯನಿಷೇಧಕಸ್ಯ ನಿಷ್ಪ್ರಪಂಚ ವಾಕ್ಯಸ್ಯ ವಿಹಿತಗುಣಾನಿಷೇಧಕತ್ವಾತ್ ।**

**ಪ್ರಾಪ್ತ್ಯಭಾವೇನ ಸಗುಣವಾಕ್ಯಸ್ಯ ಅನನುವಾದಕತ್ವಾಚ್ಚ ।**

'ಸಗುಣವಾಕ್ಯವು ಗುಣಸಾಧಕವಾಗಲಾರದು. ಅದು ಪ್ರಪಂಚಲಯ ಪ್ರಕರಣದಲ್ಲಿ ಬಂದಿದ್ದರೆ ನಿಷ್ಪ್ರಪಂಚ ವಾಕ್ಯದಲ್ಲಿ ನಿಷೇಧಮಾಡುವುದಕ್ಕಂದೇ ಅನುವಾದಿಸಲ್ಪಡುತ್ತಿದೆ. ಉಪಾಸನಾ ಪ್ರಕರಣದಲ್ಲಿ ಬಂದಿದ್ದರೆ ಉಪಾಸನೆಗಾಗಿ ಉಪದೇಶಿಸಲ್ಪಡುತ್ತಿದೆ' ಎಂದು ಅದ್ವೈತಿಗಳು ಹೇಳುತ್ತಾರೆ. ಅದು 'ಏತೇನ ನಿರಸ್ತಂ' ಇನ್ನು ಮುಂದೆ ನಾವು ಹೇಳುವ ಯುಕ್ತಿಗಳಿಂದ ನಿರಾಸವಾಗುತ್ತದೆ. ಆಯುಕ್ತಿಗಳು ಹೀಗೆ— ಗುಣವಿಶೇಷ ವಿಧಾನ ಮಾಡುವ ವಾಕ್ಯದ ಸಮೀಪದಲ್ಲಿ ಸಾಮಾನ್ಯವಾಗಿ ಸರ್ವಗುಣನಿಷೇಧಮಾಡುವ 'ನಿರ್ಗುಣಶ್ಚ' ಇತ್ಯಾದಿ ನಿಷ್ಪ್ರಪಂಚವಾಕ್ಯ ಬಂದರೆ ಅದು ವಿಹಿತವಾದ ಗುಣವಿಶೇಷವನ್ನು ನಿಷೇಧಿಸಲಾರದು. ನಿಷೇಧಿಸಿದರೆ, ತಾನು ಹೇಳಿದ್ದನ್ನೇ ತಾನು ಅಪಲಾಪ ಮಾಡಿದರೆ, ಸ್ವವಚನವಿರೋಧ, ವ್ಯಾಹತಿ ಬರುತ್ತದೆಯಾದ್ದರಿಂದ ತನ್ನಿಂದ ವಿಹಿತವಾದ ಗುಣಗಳನ್ನು ಬಿಟ್ಟು ಬೇರೆ ತ್ರಿಗುಣಾದಿಗಳನ್ನೇ ತಾನು ನಿಷೇಧಿಸಬೇಕು. ಆದರಿಂದ ಸಗುಣವಾಕ್ಯವು ನಿರ್ಗುಣವಾಕ್ಯದಲ್ಲಿ ನಿಷೇಧಮಾಡುವುದಕ್ಕಾಗಿ ಗುಣಗಳನ್ನು ಅನುವಾದಿಸುತ್ತದೆ ಎನ್ನಲಾಗದು.

ಮತ್ತು ಸಗುಣವಾಕ್ಯವು ಸಾರ್ವಜ್ಞಾದಿ ಗುಣಗಳನ್ನು ಅನುವಾದಿಸಿದರೆ ಸಗುಣನಿರ್ಗುಣ ವಾಕ್ಯಗಳಿಗೆ ಏಕವಾಕ್ಯತಾ ಬರಬಹುದು. ಆದರೆ ಅನುವಾದಿಸುವುದು ಅಶಕ್ಯವಾಗಿದೆ. ಅನುವಾದಕ್ಕೆ ಪ್ರಾಪ್ತಿ ಬೇಕು. ಪ್ರತ್ಯಕ್ಷಾದಿ ಪ್ರಮಾಣ ಯಾವುದರಿಂದಲೂ ಸಾರ್ವಜ್ಞಾದಿ ಗುಣಗಳು ಪ್ರಾಪ್ತವಾಗಿಲ್ಲ.

ಆದರಿಂದ, ನಿರ್ಗುಣವಾಕ್ಯವು ಸಗುಣಪ್ರಕರಣದಲ್ಲಿ ಬಂದರೆ ಅದು ಸಗುಣವಾಕ್ಯದಲ್ಲಿ ನಿಷೇಧಮಾಡುವುದಕ್ಕಾಗಿ ನಿರ್ಗುಣತ್ವವನ್ನು ಅನುವಾದಿಸುತ್ತದೆ. ಉಪಾಸನಾ ಪ್ರಕರಣದಲ್ಲಿ ಬಂದಿದ್ದರೆ ಉಪಾಸನೆಗಾಗಿ ಉಪದೇಶಿಸಲ್ಪಡುತ್ತದೆ. ಹೀಗಾಗಿ ನಿರ್ಗುಣ ವಾಕ್ಯವು ನಿರ್ಗುಣತ್ವಸಾಧಕವಾಗುವುದಿಲ್ಲ ಎಂಬ ಅತಿಪ್ರಸಕ್ತಿ ಇದೆ.

**ಅನ್ಯಥಾ 'ಅಸದ್ವಾ ಇದಮಗ್ರ ಆಸೀತ್' ಇದಂ ವಾ ಅಗ್ರೇ ನೈವ ಕಿಂಚನಾಸೀತ್' ಇತಿ ಸರ್ವನಿಷೇಧ ಪ್ರಕರಣಸ್ಥಂ 'ರಸೋ ವೈ ಸಃ' ಇತ್ಯಾದಿಕಮಪಿ ನಿಷೇಧಾಯ ಬ್ರಹ್ಮಾನುವಾದಕಂ ಸ್ಯಾತ್ ।**

ಸಗುಣವಾಕ್ಯದಲ್ಲಿ ವಿಹಿತವಾದ ಗುಣವಿಶೇಷವನ್ನು ಕೂಡ ನಿರ್ಗುಣವಾಕ್ಯವು ಸರ್ವಗುಣನಿಷೇಧಕವಾದ್ದರಿಂದ ನಿಷೇಧಿಸಬಹುದೆಂದರೆ, ಮತ್ತು ಸಾರ್ವಜ್ಞಾದಿ ಗುಣಗಳು ಪ್ರಮಾಣಾಂತರದಿಂದ ಪ್ರಾಪ್ತವಾಗಿರದಿದ್ದರೂ ಅವುಗಳ ಅನುವಾದ ಶಕ್ಯವೆಂದರೆ ಅತಿಪ್ರಸಕ್ತಿ— 'ಸೃಷ್ಟಿಗೆ ಪೂರ್ವದಲ್ಲಿ ಶೂನ್ಯವೆ ಸರ್ವನಿಷೇಧವೆ ಇತ್ತು' 'ಸೃಷ್ಟಿಗೆ ಪೂರ್ವದಲ್ಲಿ ಏನೂ ಇರಲಿಲ್ಲ' ಎಂದು ಸರ್ವನಿಷೇಧ ಪ್ರತಿಪಾದಕವಾದ ಪ್ರಕರಣದಲ್ಲಿ ಅದ್ವೈತಿಯ ನಿರ್ಗುಣ ಬ್ರಹ್ಮವು 'ರಸೋ ವೈ ಸಃ' ಇತ್ಯಾದಿ ವಾಕ್ಯದಲ್ಲಿ ಉಕ್ತವಾಗಿರುವುದು ನಿಷೇಧಕ್ಕಾಗಿ ಅನುವಾದ ಎಂದಾದೀತು ಎಂದು.



**उपासनाप्रकरणस्थत्वमात्रेण चोपास्यत्वे उद्गीथोपासना-प्रकरणस्थस्य ''स एषोऽनंत'' इति श्रुतानंतत्वादेरपि भूताकाशे उपासनामात्रमिति सुवचत्वेनाकाशाद्यधिकरणेषु अनंतत्वादिलिंगै-र्ब्रह्मत्वोक्त्ययोगाच्च ।**

**अकाशाद्यधिकरणेष्विति ।।** ''आकाशस्तल्लिंगात्'' अस्य लोकस्य का गतिरिति आकाश इति होवाच । सर्वाणि ह वा इमानि भूतानि आकाशादेव समुत्पद्यंते आकाशं प्रत्यस्तं यंति आकाशो ह्येवैभ्यो ज्यायानाकाशः परायणम्'' इत्यत्र किं आकाशः परं ब्रह्म उत भूताकाश इति संदेहे आकाशशब्दस्य भूताकाशे प्रसिद्धत्वेन तस्यैव शीघ्रं बुद्ध्यारोहात् वाय्वादिभूतकारणत्वस्य तत्रोपपत्तेश्च भूताकाश इति प्राप्ते सावधारणसर्वभूतोत्पत्त्यादिकारणत्वरूपस्य ''स एष परोवरीयानुद्गीथः स एषोऽनंतः'' इत्युपसंहारस्थानंतत्वरूपस्य च लिंगस्य दर्शनादाकाशः परं ब्रह्मेति सिद्धांत इति ।

''अत एव प्राणः'' इत्यत्र उद्गीथे ''प्रस्तोतर्या देवता प्रस्तावमन्वायत्ता'' इत्युपक्रम्य प्रवृत्ते 'कतमा सा देवतेति प्राण इति होवाच सर्वाणि ह वा इमानि भूतानि प्राणमेवाभिसंविशंति प्राणमभ्युज्जिहते, सैषा देवता प्रस्तावमन्वायत्ते'त्यत्र किं प्राणः पंचवृत्तिः प्रसिद्धः उत परं ब्रह्मेति संशये ''यदा वै पुरुषः स्वपिति प्राणं तर्हि वागप्येति'' इत्यादौ मुख्येऽपि भूतसंवेशनोद्गमनस्य दर्शनात् उद्गीथप्रतिहारयो-रादित्यदेवताकत्वेन प्रस्तावस्याप्यब्रह्मभूतप्राणदेवताकत्वस्योचितत्वाच्च प्रसिद्धः प्राण एवेति प्राप्ते सर्वभूतोत्पत्तिप्रलयकारणत्वरूपस्य ब्रह्मलिंगस्य प्राणे श्रवणात् प्राणः परंब्रह्मेति सिद्धांत इति ।।''

''अंतस्तद्धर्मोपदेशात्'' ''य एषोंऽतरादित्ये हिरण्मयः पुरुषो दृश्यते'' इत्यादावादित्यांतर्वर्तितया श्रूयमाणः पुरुषः किं देवतात्मा संसारी किं वा परमेश्वर इति संशये हिरण्यश्मश्रुरित्यादिना रूपवत्त्वश्रवणात् अंतरादित्य इति साधारत्वश्रवणात् ये चामुष्मिन्पराञ्चो लोकास्तेषां चेष्टे इत्यैश्वर्यमर्यादाश्रवणाच्च संसारी नतु परमेश्वरः । तस्य अरूपमव्ययं स्वे महिम्नि प्रतिष्ठितः एष सर्वेश्वर इत्यादौ

नीरूपत्वस्वमहिमस्थत्वसर्वैश्वर्यादिश्रवणादिति प्राप्ते ''य आत्मा अपहतपाप्मा'' इत्यादौ परमेश्वरधर्मत्वेन श्रुतस्यापहतपाप्मत्वस्य ''स ह वै सर्वेभ्यः पाप्मभ्य उदित'' इत्युन्नामप्रवृत्तिनिमित्ततया आदित्यपुरुषे श्रवणात् सैवर्क् तत्साम तदुक्थं तद्यजुस्तद् ब्रह्मेति सामादिसर्वात्मकत्वावेदनात् ईश्वरस्य साधकानुग्रहार्थमिच्छावशान्माया-मयरूपपरिग्रहस्योपपत्तेराधारविशेषस्थत्वस्यैश्वर्यमर्यादायाश्चोपासनार्थत्वाच्च परमेश्वर इति सिद्धांत इति ।



**ಉಪಾಸನಾಪ್ರಕರಣಸ್ಥತ್ವ ಮಾತ್ರೇಣ ಚ ಉಪಾಸ್ಯತ್ವೇ ಉದ್ಗೀಥೋಪಾಸನಾ ಪ್ರಕರಣಸ್ಥಸ್ಯ 'ಸ ಏಷೋಽನಂತಃ' ಇತಿ ಶ್ರುತಾನಂತತ್ವಾದೇರಪಿ ಭೂತಾಕಾಶೇ ಉಪಾಸನಾ ಮಾತ್ರಮಿತಿ ಸುವಚತ್ವೇನ ಆಕಾಶಾದ್ಯಧಿಕರಣೇಷು ಅನಂತತ್ವಾದಿ ಲಿಂಗೈಃ ಬ್ರಹ್ಮತ್ವೋಕ್ತ್ಯಯೋಗಾಚ್ಚ ।**

ಸಾರ್ವಜ್ಞಾದಿಗುಣಗಳು ಉಪಾಸನಾಪ್ರಕರಣದಲ್ಲಿರುವುದರಿಂದ ಅವು ಕೇವಲ ಉಪಾಸ್ಯವೇ ಹೊರತು ಮುಮುಕ್ಷು ಜ್ಞೇಯವಲ್ಲ ಎನ್ನುವುದಾದರೆ 'ಸತ್ಯಂ ಜ್ಞಾನಮನಂತಂ' ಎಂದು ಮುಮುಕ್ಷು ಜ್ಞೇಯತ್ವೇನ ಅದ್ವೈತಿಯು ಸ್ವೀಕರಿಸಿರುವ ಅನಂತತ್ವಾದಿ ಬ್ರಹ್ಮಲಕ್ಷಣಗಳೂ ಕೂಡ ಛಾಂದೋಗ್ಯದಲ್ಲಿ 'ಓಮಿತ್ಯೇತದಕ್ಷರಮುದ್ಗೀಥಮುಪಾಸೀತ' ಎಂದು ಪ್ರಾರಂಭವಾಗುವ ಉದ್ಗೀಥೋಪಾಸನಾ ಪ್ರಕರಣದಲ್ಲಿ 'ಸ ಏಷೋಽನಂತಃ' ಎಂದು ಮುಂತಾಗಿ ಉಕ್ತವಾಗಿವೆ, ಅವು ಕೂಡ ಕೇವಲ ಭೂತಾಕಾಶದಲ್ಲಿ ಉಪಾಸ್ಯಗಳೇ ಎಂದಾದೀತು. ಆಗ ಆಕಾಶಾದ್ಯಧಿಕರಣಗಳಲ್ಲಿ ಅನಂತತ್ವಾದಿಗಳನ್ನು ಬ್ರಹ್ಮಲಿಂಗಗಳೆಂದಿಟ್ಟುಕೊಂಡು ಆ ಲಿಂಗಗಳಿಂದ ಆಕಾಶಶಬ್ದವಾಚ್ಯವು ಬ್ರಹ್ಮ ಎಂದು ಸಿದ್ಧಾಂತ ಮಾಡಿದ್ದು ಕೂಡಲಾರದು.

ಆಕಾಶಾದ್ಯಧಿಕರಣಗಳೆಂದರೆ ಆಕಾಶಾಧಿಕರಣ ಪ್ರಾಣಾಧಿಕರಣ ಅಂತರಧಿಕರಣ ಮುಂತಾದುವು ವಿವಕ್ಷಿತವಾಗಿವೆ.

**ಆಕಾಶಾಧಿಕರಣ**—ಅಸ್ಯ ಲೋಕಸ್ಯ ಕಾ ಗತಿರಿತಿ ಆಕಾಶ ಇತಿ ಹೋವಾಚ। ಸರ್ವಾಣಿ ಹವಾ ಇಮಾನಿ ಭೂತಾನಿ ಆಕಾಶಾದೇವ ಸಮುತ್ಪದ್ಯಂತೇ ಆಕಾಶಂ ಪ್ರತ್ಯಸ್ತಂ ಯಂತಿ ಆಕಾಶೋ ಹ್ಯೇವೈಭ್ಯೋ ಜ್ಯಾಯಾನ್ ಆಕಾಶಃ ಪರಾಯಣಂ(ಛಾ.1.3.13) ಪೃಥಿವಿಗೆ ಏನು ಆಶ್ರಯ ಎಂದು ಶಿಲಕನು ಕೇಳಿದಾಗ ಪ್ರವಾಹಣನು ಹೇಳುತ್ತಾನೆ. 'ಆಕಾಶ' ಎಂದು. ಏಕೆಂದರೆ ಎಲ್ಲರೂ ಹುಟ್ಟುವುದು ಆಕಾಶದಿಂದ. ಪ್ರಳಯದಲ್ಲಿಯೂ ಅದನ್ನೇ ಹೋಗಿ ಸೇರುತ್ತಾರೆ, ಏಕೆಂದರೆ ಆಕಾಶ ಎಲ್ಲರಿಗಿಂತ ದೊಡ್ಡದು. ಎಲ್ಲಕ್ಕೂ ಉತ್ತಮ ಆಶ್ರಯ' ಎಂದು. ಇಲ್ಲಿ ಆಕಾಶವೆಂದರೆ ಬ್ರಹ್ಮವೆ ಅಥವಾ ಭೂತಾಕಾಶವೆ? ಎಂದು ಸಂದೇಹ. ಆಕಾಶ ಶಬ್ದವು ಭೂತಾಕಾಶದಲ್ಲಿ ಪ್ರಸಿದ್ಧವಾದ್ದರಿಂದ ಅದೇ

ಮೊದಲಿಗೆ ಬುದ್ಧಿಯಲ್ಲಿ ಉಪಸ್ಥಿತವಾಗುತ್ತದೆ. ವಾಯು ಅಗ್ನಿ ಅಪ್ ಪೃಥಿವೀ ಭೂತಗಳ ಉತ್ಪತ್ತಿಕಾರಣತ್ವವೂ ಭೂತಾಕಾಶಕ್ಕೇ ಕೂಡುತ್ತದೆ ಎಂದು ಪೂರ್ವಪಕ್ಷ. ಆಕಾಶಾದೇವ ಆಕಾಶದಿಂದಲೇ ಎಂದು ಅವಧಾರಣಪೂರ್ವಕವಾಗಿ ಹೇಳಿದ ಭೂತೋತ್ಪತ್ತ್ಯಾದಿಕಾರಣತ್ವವು ಬ್ರಹ್ಮನ ಅಸಾಧಾರಣಲಿಂಗ. 'ಸ ಏಷ ಪರೋವರೀಯಾನ್ ಉದ್ಗೀಥಃ ಸ ಏಷೋಽನಂತಃ' 'ಆಕಾಶವೇ ಸರ್ವೋತ್ತಮ ಬಹಳ ಸ್ತುತ್ಯ ಅನಂತ' ಎನ್ನುವ ಅನಂತತ್ವಾದಿ ಬ್ರಹ್ಮಲಿಂಗವೂ ಉಪಸಂಹಾರದಲ್ಲಿ ಶ್ರುತವಾಗಿದೆ. ಆದರಿಂದ ಇಲ್ಲಿ 'ಆಕಾಶ' ಎಂದರೆ ಬ್ರಹ್ಮವೇ ಎಂದು ಸಿದ್ಧಾಂತ.

**ಪ್ರಾಣಾಧಿಕರಣ**—ಪ್ರಸ್ತೋತರ್ಯಾ ದೇವತಾ ಪ್ರಸ್ತಾವಮನ್ವಾಯತ್ತಾ(ಛಾಂ.1.3.14) ಹೇ ಪ್ರಸ್ತೋತೃ ಎಂಬ ಋತ್ವಿಜನೆ, ಪ್ರಸ್ತಾವ ಎಂಬ ಸಾಮಭಾಗದಲ್ಲಿ ಯಾವ ದೇವತೆ ಇದ್ದಾನೆ? ಎಂದು ಪ್ರಾರಂಭಿಸಿ 'ಕತಮಾ ಸಾ ದೇವತೇತಿ, ಪ್ರಾಣ ಇತಿ ಹೋವಾಚ ಸರ್ವಾಣಿ ಹ ವಾ ಇಮಾನಿ ಭೂತಾನಿ ಪ್ರಾಣಮೇವ ಅಭಿಸಂವಿಶಂತಿ, ಪ್ರಾಣಮಭ್ಯುಜ್ಜಿಹತೇ ಸೈಷಾ ದೇವತಾ ಪ್ರಸ್ತಾವಮನ್ವಾಯತ್ತಾ' 'ಯಾರು ಆ ದೇವತೆ ಎಂದರೆ ಪ್ರಾಣವೇ ಆ ದೇವತೆ. ಎಲ್ಲ ಜನರೂ ಸುಪ್ತಿಯಲ್ಲಿ ಪ್ರಾಣದಲ್ಲಿಯೇ ಸೇರಿಕೊಳ್ಳುತ್ತಾರೆ. ಪ್ರಾಣದಿಂದಲೇ ಎಚ್ಚೆತ್ತುಕೊಳ್ಳುತ್ತಾರೆ, ಪ್ರಾಣನೇ ಪ್ರಸ್ತಾವದೇವತೆ' ಎಂಬಲ್ಲಿ ಸಂಶಯ—'ಪ್ರಾಣ' ಎಂದರೆ ಇಲ್ಲಿ ಪ್ರಾಣಾಪಾನಾದಿಪಂಚವೃತ್ತಿ ಉಳ್ಳ ಮುಖ್ಯವಾಯುವೆ ಅಥವಾ ಪರಬ್ರಹ್ಮವೆ? ಪೂರ್ವಪಕ್ಷ—ಮುಖ್ಯ ವಾಯುವೇ ಪ್ರಾಣ. ಯದಾ ವೈ ಪುರುಷಃ ಸ್ವಪಿತಿ, ಪ್ರಾಣಂ ತರ್ಹಿವಾಗ್ ಅಪ್ಯೇತಿ' ಪುರುಷ ನಿದ್ದೆ ಮಾಡುವಾಗ ವಾಕ್ ಪ್ರಾಣದಲ್ಲಿ ಸೇರಿಹೋಗುತ್ತದೆ. ಇತ್ಯಾದಿ ವಾಕ್ಯಗಳಲ್ಲಿ ಮುಖ್ಯವಾಯುವಿನಲ್ಲಿಯೇ ನಿದ್ದೆ ಎಚ್ಚರಗಳು ಕಂಡಿವೆ. ಮತ್ತು ಉದ್ಗೀಥ ಪ್ರತಿಹಾರಗಳಲ್ಲಿ ಬ್ರಹ್ಮವ್ಯತಿರಿಕ್ತವಾದ ಆದಿತ್ಯದೇವತೆ ಇರುವಂತೆ ಪ್ರಸ್ತಾವದಲ್ಲಿಯೂ ಬ್ರಹ್ಮೇತರ ಮುಖ್ಯವಾಯು ದೇವತೆ ಎನ್ನುವುದು ಉಚಿತ. ಆದರಿಂದ ಪ್ರಸಿದ್ಧ ಮುಖ್ಯವಾಯುವೇ ಪ್ರಾಣ ಎಂದು. ಸಿದ್ಧಾಂತ—ಎಲ್ಲ ಪ್ರಾಣಿಗಳ ಉತ್ಪತ್ತಿ ಲಯಕಾರಣತ್ವವು ಬ್ರಹ್ಮನ ಅಸಾಧಾರಣ ಲಿಂಗ. ಅದು ಪ್ರಾಣದಲ್ಲಿ ಶ್ರುತವಾಗಿರುವುದರಿಂದ ಪ್ರಾಣವು ಪರಬ್ರಹ್ಮವೇ ಎಂದು.

**ಅಂತರಧಿಕರಣ**—ಯ ಏಷೋಽಂತರಾದಿತ್ಯೇ ಹಿರಣ್ಮಯಃ ಪುರುಷೋ ದೃಶ್ಯತೇ (ಛಾಂ.1.3.6) ಸೂರ್ಯನೊಳಗೆ ಕಾಣುವನೆಂದು ಹೇಳಲಾದ ಹಿರಣ್ಮಯ ಪುರುಷನು ಯಾರು? ದೇವತಾತ್ಮನಾದ ಸಂಸಾರಿ ಜೀವನೆ? ಅಥವಾ ಪರಮಾತ್ಮನೆ? ಎಂದು ಸಂಶಯ. ಪೂರ್ವಪಕ್ಷ—ಹಿರಣ್ಯಶ್ಮಶ್ರು ಎಂದು ಮುಂತಾದ ಆಕಾರವನ್ನು ಹೇಳಿದ್ದರಿಂದ, ಸೂರ್ಯನೊಳಗೆ ಎಂದು ಆಧಾರವನ್ನು ಹೇಳಿದ್ದರಿಂದ, ಈ ಲೋಕ ಪರಲೋಕಗಳಿಗೆ ಒಡೆಯನೆಂದು ಅವನ ಅಧಿಕಾರಕ್ಕೆ ಮಿತಿಯನ್ನು ಹೇಳಿರುವುದರಿಂದ ದೇವತಾತ್ಮನಾದ ಸಂಸಾರಿ ಜೀವನೇ ಸೂರ್ಯನೊಳಗಿರುವ ಪುರುಷ. ಹೊರತು, ಪರಮಾತ್ಮನಲ್ಲ, ಏಕೆಂದರೆ ಪರಮಾತ್ಮನು 'ಅರೂಪಂ ಅವ್ಯಯಂ' 'ನಿರಾಕಾರನು, ನಿತ್ಯ,' 'ಸ್ವೇ ಮಹಿಮ್ನಿ ಪ್ರತಿಷ್ಠಿತಃ' ಸ್ವಾಧಾರ. 'ಏಷ ಸರ್ವೇಶ್ವರಃ' ಎಲ್ಲಕ್ಕೂ ಒಡೆಯನೆಂದು ಶ್ರುತನಾಗಿದ್ದಾನೆ. ಸಿದ್ಧಾಂತ— 'ಯ ಆತ್ಮಾ ಅಪಹತಪಾಪ್ಮಾ' ಎಂದು ಪರಮಾತ್ಮನ

ಲಿಂಗವಾಗಿ ಶ್ರುತವಾಗಿರುವ ಅಪಹತ ಪಾಪ್ಮತ್ವವು ಇಲ್ಲಿ 'ತಸ್ಯೋದಿತಿ ನಾಮ ಸ ಹ ವೈಸರ್ವೇಭ್ಯಃ ಪಾಪ್ಮಭ್ಯಃ ಉದಿತಃ' 'ಈ ಆದಿತ್ಯಾಂತರ್ಗತನು ಅಪಹತಪಾಪ್ಮನಾದ್ದರಿಂದ 'ಉತ್' ಎನಿಸಿದ್ದಾನೆ' ಎನ್ನುತ್ತ 'ಉತ್' ಎಂಬ ನಾಮದ ಪ್ರವೃತ್ತಿ ನಿಮಿತ್ತವು, ಅಪಹತಪಾಪ್ಮತ್ವವು ಆವನಲ್ಲಿಯೆ ಇದೆ ಎಂದೂ, 'ಸೈವರ್ಕ್ ತತ್ ಸಾಮ...' ಋಕ್ ಸಾಮ ಉಕ್ಥ ಯಜು ಬ್ರಹ್ಮ ಎಲ್ಲವೂ ಅವನ ನಾಮವೇ ಎಂದೂ ಹೇಳಿರುವುದರಿಂದ ಆದಿತ್ಯಾಂತರ್ಗತನಾದ ಪುರುಷನು ಪರಮಾತ್ಮನೆ. ಯದ್ಯಪಿ ಪರಮಾತ್ಮನು ಸರ್ವೇಶ್ವರ ಅವನ ಅಧಿಕಾರಕ್ಕೆ ಮಿತಿಯಿಲ್ಲ. ಆದರೂ ಸಾಧಕರಿಗೆ ಅನುಗ್ರಹ ಮಾಡುವುದಕ್ಕಾಗಿ ಸ್ವೇಚ್ಛೆಯಿಂದ ಮಾಯಾ ಮಯ ಶರೀರವನ್ನು ಧರಿಸುವುದರಿಂದ ಆ ಶರೀರದಲ್ಲಿ ಅವನು ಆಧಾರ ವಿಶೇಷಸ್ಥನಾಗುತ್ತಾನೆ ಎಂದರೆ ಏನೂ ಅಯುಕ್ತವಲ್ಲ. ಅವನ ಸಾಮರ್ಥ್ಯಕ್ಕೆ ಮಿತಿಯೂ ಉಪಾಸನಾರ್ಥ ಉಕ್ತವಾಗಿದೆ. ಆದರಿಂದ ಅದೂ ಕೂಡ ಆದಿತ್ಯಾಂತರ್ಗತನು ಪರಮಾತ್ಮನೆನ್ನಲು ಬಾಧಕವಾಗುವುದಿಲ್ಲ ಎಂದು.



अनुपास्तिप्रकरणेऽपि सत्यकामत्वादेः श्रवणाच्च । यदिच ''वेधाद्यर्थभेदात्'' इतिसूत्रे त्वद्भाष्योक्तरीत्या यथा सर्वं प्रविध्येत्यादिमंत्राणामुपासनाप्रकरणादुत्कर्षः तथानंतादिवाक्यस्यापि, यदिवाऽनंतादिवाक्यस्योपास्यत्वे वस्तुत्वे च तात्पर्यं, तर्हि सगुणवाक्यस्यापि तथास्तु । तस्मान्नासदुपासनार्था गुणोक्तिः । अन्यथा सार्वज्ञादिकं वाग्धेनुत्वादिवत् प्रातीतिकमेव स्यात् ।

किंच न क्वाप्यसदुपासना । ''नाविद्यमानं ब्रुवते वेदा ध्यातुं न वैदिकाः''। ''नच रमंत्यहो असदुपासनयाऽत्महन'' इत्यादिस्मृतिभिः ''अचेतनासत्यायोग्यान्यनुपास्यान्यफलत्वविपर्ययाभ्यां'' इति सांकर्षणसूत्रेण च तन्निषेधात् ।

''वाचं धेनुम्'' इत्यत्रापि ''धेनुमिवायतीमि''ति श्रुत्यंतराद्धेनुशब्दो गौणः । ''योषितमग्निं ध्यायीत'' इत्यत्रापि ''रेतो जुह्वति'' इतिश्रुतेर्योषितो रेतोरूपाहुत्याधारत्वादग्निशब्दो गौणः । छांदोग्यभाष्यरीत्या यौगिको वा न त्वारोपः ।

अनुपास्तिप्रकरणेऽपीति ।। दहरविद्याप्रकरणेऽपीत्यर्थः ।। वेधाद्यर्थ-

**भेदादिति सूत्रे इति ।।** आथर्वणिकानामुपनिषदारम्भे ''सर्वं प्रविध्य हृदयं प्रविध्य'' इति मंत्रः श्रूयते । तत्र किमयं मंत्रो विद्यासूपसंहर्तव्यः किं वा नेति संदेहे विद्यासन्निधानाद्विद्यांगतया तत्रोपसंहर्तव्य इति प्राप्ते आभिचारिकविषयस्य हृदयवेधाद्यर्थस्य विद्याभिः संबंधाभावेन तदनंगत्वान्न तत्रोपसंहर्तव्योऽयं मंत्र इति एतत्सूत्रे त्वद्भाष्योक्तरीत्येत्यर्थः **।। अनंतादिवाक्यस्यापीति ।।** ''स एषोऽनंत'' इत्यादिवाक्यस्यापीत्यर्थः **।। वैदिका इति ।।** वैदिकाश्चेत्यर्थः **।। अचेतनेति ।।** निष्फलत्वादनर्थफलकत्वाच्चाचेतनादीन्यनुपास्यानीत्यर्थः ।

ननु यद्यसदुपासना न स्यात्तर्हि ''वाचं धेनुं'' इत्यादेः का गतिरित्याशंक्याह **— वाचमिति ।।** तथाच धेनुमिवायतीमिति श्रुतिप्रतिपन्नं सादृश्यमेव निमित्तीकृत्य वाग्योषितोरग्निधेनुशब्दौ प्रवर्तेते, इत्यर्थः ।। **छांदोग्यभाष्यरीत्येति ।।**

''नारायणादयः पंच क्रमात्पंचाग्नयः स्मृताः ।
अदनादंगनेतृत्वान्नितरामचलत्वतः ।।''
इत्युक्तरीत्या ।



**ಅನುಪಾಸ್ತಿಪ್ರಕರಣೇऽಪಿ ಸತ್ಯಕಾಮತ್ವಾದೇಃ ಶ್ರವಣಾಚ್ಚ ।**

ಉಪಾಸನಾ ಪ್ರಕರಣವಲ್ಲದ 'ಯ ಆತ್ಮಾऽಪಹತಪಾಪ್ಮಾ ವಿಜರೋ ವಿಮೃತ್ಯು-ರ್ವಿಶೋಕೋऽವಿಜಿಘತ್ಸೋऽ ಪಿಪಾಸಃ ಸತ್ಯಕಾಮಃ ಸತ್ಯಸಂಕಲ್ಪಃ ಸೋऽನ್ವೇಷ್ಟವ್ಯಃ ಸ ವಿಜಿಜ್ಞಾಸಿತವ್ಯಃ' (ಛಾಂ.8.2.1) ಎಂಬ ದಹರವಿದ್ಯಾ ಪ್ರಕರಣದ ಜಿಜ್ಞಾಸಾವಾಕ್ಯದಲ್ಲಿಯೂ ಸತ್ಯಕಾಮತ್ವಾದಿ ಗುಣಗಳು ಶ್ರುತವಾಗಿರುವುದರಿಂದಲೂ ಅವು ಕೇವಲ ಉಪಾಸನೆಗೆ ಯೋಗ್ಯವಲ್ಲ, ಅತಾತ್ತ್ವಿಕವಲ್ಲ.

**ಯದಿ ಚ 'ವೇಧಾದ್ಯರ್ಥಭೇದಾತ್' ಇತಿ ಸೂತ್ರೇ ತ್ವದ್ ಭಾಷ್ಯೋಕ್ತರೀತ್ಯಾ ಯಥಾ 'ಸರ್ವಂ ಪ್ರವಿಧ್ಯ' ಇತ್ಯಾದಿ ಮಂತ್ರಾಣಾಂ ಉಪಾಸನಾ ಪ್ರಕರಣಾತ್ ಉತ್ಕರ್ಷಃ, ತಥಾ ಅನಂತಾದಿ ವಾಕ್ಯಸ್ಯಾಪಿ, ಯದಿ ವಾ ಅನಂತಾದಿ ವಾಕ್ಯಸ್ಯ ಉಪಾಸ್ಯತ್ವೇ ವಸ್ತುತ್ವೇ ಚ ತಾತ್ಪರ್ಯಂ, ತರ್ಹಿ ಸಗುಣವಾಕ್ಯಸ್ಯಾಪಿ, ತಥಾಸ್ತು । ತಸ್ಮಾತ್ ನಾಸದುಪಾಸನಾರ್ಥಾ ಗುಣೋಕ್ತಿಃ । ಅನ್ಯಥಾ ಸಾರ್ವಜ್ಞ್ಯಾದಿಕಂ ವಾಗ್ಧೇನುತ್ವಾದಿವತ್ ಪ್ರಾತೀತಿಕಮೇವ ಸ್ಯಾತ್ ।**

ಅಥರ್ವಶಾಖೆಯವರು ಅಧ್ಯಯನಾರಂಭದಲ್ಲಿ 'ಸರ್ವಂ ಪ್ರವಿಧ್ಯ ಹೃದಯಂ ಪ್ರವಿಧ್ಯ ಧಮನೀಃ ಪ್ರವೃಜ್ಯ ಶಿರೋಽಭಿಪ್ರವೃಜ್ಯ ತ್ರಿಧಾ ವಿಪೃಕ್ತಃ' 'ಶತ್ರುವಿನ ಸರ್ವಾಂಗವನ್ನು ಸೀಳು ವಿಶೇಷವಾಗಿ ಹೃದಯವನ್ನು ಸೀಳು, ನರನಾಡಿಗಳನ್ನು ಕತ್ತರಿಸು, ತಲೆಯನ್ನು ಪುಡಿ ಮಾಡು, ಶತ್ರು ಮೂರು ಭಾಗವಾಗಿ ಕಡಿದು ಬೀಳಲಿ' ಎಂದು ಶಾಂತಿಮಂತ್ರವನ್ನು ಹೇಳುತ್ತಾರೆ. ಅಭಿಚಾರ ಪ್ರಯೋಗದಲ್ಲಿ ಹೇಳುವ ಈ ಮಂತ್ರವನ್ನು ಬ್ರಹ್ಮೋಪಾಸನೆಯಲ್ಲಿ ಸೇರಿಸಿಕೊಳ್ಳಬೇಕೆ ಬೇಡವೇ ಎಂದು ವಿಚಾರ 'ವೇಧಾದ್ಯರ್ಥಭೇದಾತ್' (ಬ್ರ.ಸೂ.3.3.26) ಸೂತ್ರದ ಶಾಂಕರಭಾಷ್ಯದಲ್ಲಿದೆ.

ಬ್ರಹ್ಮವಿದ್ಯಾಧ್ಯಯನಕ್ಕೆ ಮೊದಲು ನಿಯಮೇನ ಬರುವುದರಿಂದ ಈ ಮಂತ್ರಕ್ಕೆ ಸನ್ನಿಧಿರೂಪ ಪ್ರಮಾಣದಿಂದ ಬ್ರಹ್ಮವಿದ್ಯಾಂಗತ್ವವಿದೆ, ಬ್ರಹ್ಮೋಪಾಸನೆಯಲ್ಲಿ ಇದನ್ನು ಸೇರಿಸಿಕೊಳ್ಳಬೇಕು ಎಂದು ಪೂರ್ವಪಕ್ಷ. ಸಿದ್ಧಾಂತ ಹೀಗೆ— ದರ್ಶಪೂರ್ಣಮಾಸಯಾಗದಲ್ಲಿ ಪೂಷ ದೇವತೆ ಇಲ್ಲ. ಪ್ರಕರಣದಲ್ಲಿ ಪೂಷಮಂತ್ರವಿದೆ. ಅದಕ್ಕೆ ಪ್ರಯೋಜನವಿಲ್ಲವಾಗುವುದರಿಂದ ಅದನ್ನು ಪೂಷ ದೇವತೆಯುಳ್ಳ ಬೇರೆ ಯಾಗದ ಪ್ರಕರಣಕ್ಕೆ ಉತ್ಕರ್ಷಮಾಡಬೇಕು. ಒಂದೆಡೆಯಿಂದ ಇನ್ನೊಂದೆಡೆಗೆ ಒಯ್ಯುವುದು ಉತ್ಕರ್ಷ. ಹಾಗೇ ಬ್ರಹ್ಮೋಪಾಸನೆಯಲ್ಲಿ ಅಭಿಚಾರಯೋಗ್ಯವಾದ ಹೃದಯವೇಧಾದಿಗಳಿಗೆ ಸಂಬಂಧವಿಲ್ಲದ್ದರಿಂದ ಅದನ್ನು ಸಂಬಂಧಉಳ್ಳ ಅಭಿಚಾರಪ್ರಕರಣಕ್ಕೆ ಒಯ್ಯಬೇಕು. ಹಾಗೆಯೇ ಪ್ರಕೃತ ಸ ಏಷೋಽನಂತಃ ಇತ್ಯಾದಿ ಅನಂತಾದಿ ವಾಕ್ಯವನ್ನೂ ಕೂಡ ಉಪಾಸನಾ ಪ್ರಕರಣದಿಂದ ತೆಗೆದು ಜ್ಞಾನಪ್ರಕರಣಕ್ಕೆ ಉತ್ಕರ್ಷಮಾಡಬೇಕು. ಆದರಿಂದ ಅನಂತತ್ವಾದಿಗಳು ತಾತ್ತ್ವಿಕವೆ. ಅಥವಾ ಉಪಾಸನಾಪ್ರಕರಣದಿಂದ ಉತ್ಕರ್ಷಮಾಡದೆ ಹಾಗೇ ಇಟ್ಟುಕೊಂಡರೂ ಉಪಾಸನೆಯೂ ಯುಕ್ತ, ಜ್ಞಾನವೂ ಯುಕ್ತ. ಉಪಾಸ್ಯತ್ವ ವಾಸ್ತವತ್ವ ಎರಡರಲ್ಲಿಯೂ ತಾತ್ಪರ್ಯವೆಂದಾಗುವುದು. ಇದು ತಾತ್ತ್ವಿಕತ್ವಕ್ಕೆ ಬಾಧಕವಾಗುವುದಿಲ್ಲ ಎಂದು ಅದ್ವೈತಿಗಳು ಹೇಳುತ್ತಾರೆ.

ಆದರೆ ಅನಂತತ್ವಾದಿಗಳ ವಿಷಯದಲ್ಲಿ ಅವರು ಹೇಳುವ ಈ ಸಮಾಧಾನ ಸಗುಣವಾಕ್ಯದಲ್ಲಿ ಬರುವ ಸತ್ಯಕಾಮತ್ವಾದಿಗಳ ವಿಷಯದಲ್ಲಿಯೂ ಸಮಾನ. ಅವುಗಳನ್ನು ಉಪಾಸ್ಯವಾದ್ದರಿಂದ ಅತಾತ್ತ್ವಿಕವೆನ್ನಬೇಕಾಗಿಲ್ಲ. ಉಪಾಸನಾ ಪ್ರಕರಣದಿಂದ ಜ್ಞಾನಪ್ರಕರಣಕ್ಕೆ ಉತ್ಕರ್ಷ ಮಾಡಬಹುದು ಅಥವಾ ಉಪಾಸನಾ ಪ್ರಕರಣದಲ್ಲೇ ಇರಿಸಿಕೊಂಡು ಉಪಾಸನಾ ಯೋಗ್ಯತ್ವದೊಂದಿಗೆ ಜಿಜ್ಞಾಸಾಯೋಗ್ಯತ್ವವನ್ನೂ ಇಟ್ಟುಕೊಂಡು ಎರಡರಲ್ಲಿಯೂ ತಾತ್ಪರ್ಯವಿದೆ ಎನ್ನಲು ಬರುತ್ತದೆ. ಆಗ ಅದು ತಾತ್ತ್ವಿಕತ್ವಕ್ಕೆ ಬಾಧಕವಾಗುವುದಿಲ್ಲ.

ಅದರಿಂದ ಸತ್ಯಕಾಮತ್ವಾದಿಗುಣಗಳನ್ನು ದಹರ ವಿದ್ಯಾಪ್ರಕರಣದಲ್ಲಿ ಹೇಳಿದ್ದು ಅಸುದುಪಾಸನೆಗಾಗಿ ಅಲ್ಲ. ಅಸದುಪಾಸನೆಗಾಗಿಯೇ ಹೇಳಿದ್ದೆಂದರೆ ಸಾರ್ವಜ್ಞಾದಿಗಳೂ ಕೂಡ, ವಾಕ್ಕಿನಲ್ಲಿ ಧೇನುತ್ವದ ಅಸದುಪಾಸನೆಯಂತೆ, ಬ್ರಹ್ಮನಲ್ಲಿ ಅಸದುಪಾಸನೆಗಾಗಿಯೇ ಹೇಳಿದ್ದೆಂದಾಗುವುದು. ವಾಕ್ಕಿನಲ್ಲಿ ಆರೋಪಿತವಾಗುವ ಧೇನುತ್ವದಂತೆಯೇ ಬ್ರಹ್ಮನಲ್ಲಿ ಆರೋಪಿತವಾಗುವ ಸಾರ್ವಜ್ಞಾದಿ ಗುಣವೂ ಪ್ರಾತಿಭಾಸಿಕವೆಂದಾಗುವುದು ಎಂದು ಅನಿಷ್ಟಾಪತ್ತಿ ಇದೆ.

ವಾಕ್ಕಿನಲ್ಲಿ ಆರೋಪಿತವಾಗುವ ಧೇನುತ್ವವು ಪಾರಮಾರ್ಥಿಕವಂತೂ ಅಲ್ಲ, ವ್ಯಾವಹಾರಿಕವೂ ಅಲ್ಲವೆಂದ ಮೇಲೆ, ಪ್ರಾತಿಭಾಸಿಕವೆ. ಹಾಗೇ ಬ್ರಹ್ಮನಲ್ಲಿ ಆರೋಪಿತವಾದ ಸಾರ್ವಜ್ಞಾದಿಗಳು ಪ್ರಾತೀತಿಕವೇ, ಪ್ರಾತಿಭಾಸಿಕವೇ ಎಂದಾದೀತು. ಅದನ್ನು ಅದ್ವೈತಿಗಳು ಒಪ್ಪುವುದಿಲ್ಲ. ಬ್ರಹ್ಮನಲ್ಲಿ ಸಾರ್ವಜ್ಞಾದಿಗಳು ವ್ಯಾವಹಾರಿಕ ಎನ್ನುತ್ತಾರೆ. ಅವುಗಳಲ್ಲಿ ಉಪನಿಷತ್ತಿಗೆ ಅವಾಂತರ ತಾತ್ಪರ್ಯವಿದೆ ಎನ್ನುತ್ತಾರೆ.

ಹೀಗೆ ಸಾರ್ವಜ್ಞಾದಿಗಳು ಈಶ್ವರನಲ್ಲಿ ಹೊರತು ಬೇರೆಲ್ಲಿಯೂ ಇಲ್ಲ, ಈಶ್ವರನಲ್ಲಿಯೂ ಇಲ್ಲ, ಅವನಲ್ಲಿ ಆರೋಪಿಸಿಯೇ ಉಪಾಸನೆ ಮಾಡಬೇಕೆಂದರೆ ಅದು ಪ್ರಾತಿಭಾಸಿಕವೇ ಆಗಬೇಕು ತಾನೆ?

**ಕಿಂಚ ನ ಕ್ವಾಪಿ ಅಸದುಪಾಸನಾ ।**

**'ನಾವಿದ್ಯಮಾನಂ ಬ್ರುವತೇ ವೇದಾ ಧ್ಯಾತುಂ ನ ವೈದಿಕಾಃ ।'**

**'ನ ಚ ರಮಂತ್ಯಹೋ ಅಸದುಪಾಸನಯಾಽಽತ್ಮಹನಃ'**

**ಇತ್ಯಾದಿ ಸ್ಮೃತಿಭಿಃ,**

**'ಅಚೇತನಾಸತ್ಯಾಯೋಗ್ಯಾನ್ಯನುಪಾಸ್ಯಾನ್ಯಫಲತ್ವವಿಪರ್ಯಯಾಭ್ಯಾಂ'**

**ಇತಿ ಸಾಂಕರ್ಷಣ ಸೂತ್ರೇಣ ಚ ತನ್ನಿಷೇಧಾತ್॥**

ಅಸದುಪಾಸನೆಯು ಎಲ್ಲಿಯೂ ವಿಹಿತವಾಗಿಲ್ಲ. ಅದನ್ನು ಮಾಡಬಾರದು. 'ವೇದಗಳು ಪುರಾಣಗಳು ಅವಿದ್ಯಮಾನವಿಷಯವನ್ನು ಉಪಾಸನೆಗಾಗಿ ಹೇಳುವುದಿಲ್ಲ' ಎಂದೂ, 'ಅಸದುಪಾಸನೆಯಿಂದ ಸುಖವಿಲ್ಲ' ಎಂದೂ ಸ್ಮೃತಿ ವಚನಗಳಿವೆ. 'ಅಚೇತನ ಅಸತ್ಯ ಅಯೋಗ್ಯ ವಸ್ತುಗಳನ್ನು ಉಪಾಸನೆ ಮಾಡಕೂಡದು. ಮಾಡಿದರೆ ಫಲವಿಲ್ಲ, ಮಾತ್ರವಲ್ಲ, ಅನರ್ಥಫಲವೂ ಇದೆ' ಎಂಬ ಸಾಂಕರ್ಷಣ ಸೂತ್ರವಿದೆ. ಅವು ಅಸದುಪಾಸನೆಯನ್ನು ನಿಷೇಧಿಸುತ್ತಿವೆ.

**ವಾಚಂ ಧೇನು ಮಿತ್ಯತ್ರಾಪಿ 'ಧೇನುಮಿವಾಯತೀಂ' ಇತಿ ಶ್ರುತ್ಯಂತರಾತ್ ಧೇನು ಶಬ್ದೋ ಗೌಣಃ । 'ಯೋಷಿತಮಗ್ನಿಂ ಧ್ಯಾಯೀತ' ಇತ್ಯತ್ರಾಪಿ 'ರೇತೋ ಜುಹ್ವತಿ' ಇತಿ ಶ್ರುತೇಃ ಯೋಷಿತೋ ರೇತೋರೂಪಾಹುತ್ಯಾಧಾರತ್ವಾದ್ ಅಗ್ನಿಶಬ್ದೋ ಗೌಣಃ । ಛಾಂದೋಗ್ಯಭಾಷ್ಯರೀತ್ಯಾ ಯೌಗಿಕೋ ವಾ । ನ ತ್ವಾರೋಪಃ ।**

'ವಾಚಂ ಧೇನುಮುಪಾಸೀತ । ತಸ್ಯಾಶ್ಚತ್ವಾರಃ ಸ್ತನಾಃ (ಬೃ.ಬ.7.10.1) ವಾಕ್ಕನ್ನು ಧೇನುವೆಂದು ಉಪಾಸನೆ ಮಾಡಬೇಕು. ಈ ಧೇನುವಿಗೂ ನಾಲ್ಕು ಸ್ತನಗಳು ಎಂದು ಅವಿದ್ಯಮಾನವಿಷಯವೆ ಉಪಾಸನೆಗೆ ವಿಹಿತವಾಗಿದೆ' ಎಂದರೆ ಇಲ್ಲಿ ಅವಿದ್ಯಮಾನವಾದ ಧೇನುತ್ವವನ್ನು ಉಪಾಸನೆ ಮಾಡಬೇಕು ಎಂದು ಹೇಳಿಲ್ಲ. ವಾಕ್ಕಿನಲ್ಲಿ ಧೇನುಸಾದೃಶ್ಯವಿದೆ. ಅದನ್ನು ಉಪಾಸನೆ ಮಾಡಬೇಕೆಂದು ಉಪನಿಷತ್ತು ಹೇಳುತ್ತಿದೆ. ಧೇನುಶಬ್ದವು ಧೇನುಸದೃಶದಲ್ಲಿ ಗೌಣ. ವೇದದಲ್ಲಿ ಬೇರೆಕಡೆ 'ರಾತ್ರಿಂ ಧೇನುಮಿವಾಯತೀಂ' 'ರಾತ್ರಿಯು ಧೇನುವಿನಂತೆ ಅಭೀಷ್ಟ ನೀಡಲು

ಬರುತ್ತಿದೆ, ಅದನ್ನು ಉಪಾಸನೆ ಮಾಡಬೇಕೆಂ'ದು 'ಇವ' ಶಬ್ದದಿಂದ ಧೇನು ಸಾದೃಶ್ಯವನ್ನು ಉಪಾಸನೆ ಮಾಡಲು ವಿಧಿಸಿದೆ. ಪ್ರಕೃತ ಇವ ಶಬ್ದವಿಲ್ಲದ್ದರಿಂದ ಸಾದೃಶ್ಯದಲ್ಲಿ ಲಕ್ಷಣಾ ಮಾಡಬೇಕು.

'ಯೋಷಿತ ಮಗ್ನಿಂ ಧ್ಯಾಯೀತ' ಎಂದು ಸ್ತ್ರೀಯಲ್ಲಿ ಅವಿದ್ಯಮಾನವಾದ ಅಗ್ನಿತ್ವವನ್ನು ಉಪಾಸನೆ ಮಾಡಬೇಕೆಂದು ಹೇಳುತ್ತಿಲ್ಲ.

ಯೋಷಾ ವಾವ ಗೌತಮಾಗ್ನಿಃ...ತಸ್ಮಿನ್ನೇತಸ್ಮಿನ್ನಗ್ನೌ
ದೇವಾ ರೇತೋ ಜುಹ್ವತಿ । ತಸ್ಯಾ ಆಹುತೇರ್ಗರ್ಭಃ ಸಂಭವತಿ ।

'ಸ್ತ್ರೀಯು ಪಂಚ ಅಗ್ನಿಗಳಲ್ಲಿ ಒಂದು ಅಗ್ನಿ. ಈ ಅಗ್ನಿಯಲ್ಲಿ ದೇವತೆಗಳು ಪುರುಷನ ರೇತಸ್ಸನ್ನು ಹೋಮಿಸುತ್ತಾರೆ. ಈ ಆಹುತಿಯಿಂದ ಗರ್ಭೋತ್ಪತ್ತಿ' (ಛಾಂ.5.20.10) ಎಂದು ಉಪನಿಷತ್ತಿನಲ್ಲಿ ಹೇಳಿದಂತೆ, ರೇತೋರೂಪ ಆಹುತಿಗೆ ಸ್ತ್ರೀಯು ಆಧಾರವಾದ್ದರಿಂದ ಅಗ್ನಿಶಬ್ದವು ಸ್ತ್ರೀಯಲ್ಲಿ ಅಗ್ನಿಸದೃಶಳಲ್ಲಿ ಲಾಕ್ಷಣಿಕ.ಸ್ತ್ರೀಯಲ್ಲಿ ಅಗ್ನಿಸಾದೃಶ್ಯವನ್ನು ಉಪಾಸನೆ ಮಾಡಬೇಕೆಂದರ್ಥ.

ಅಥವಾ, ಯೋಷಿನ್ನಾಮಕ ಭಗವಂತನನ್ನು ಪಂಚಮಾಗ್ನಿಯೆಂದು ಉಪಾಸನೆ ಮಾಡಬೇಕೆಂದರ್ಥ.

ನಾರಾಯಣಾದಯಃ ಪಂಚ ಕ್ರಮಾತ್ ಪಂಚಾಗ್ನಯಃ ಸ್ಮೃತಾಃ
ಅದನಾದ್ ಅಂಗನೇತೃತ್ವಾದ್ ನಿತರಾಮಚಲತ್ವತಃ

ಆಕಾಶ ಮೇಘ ಪೃಥಿವೀ ಪುರುಷ ಸ್ತ್ರೀ ಎಂದು ಐದು ಸ್ಥಳಗಳಲ್ಲಿ ಕ್ರಮವಾಗಿ ಅವೇ ಹೆಸರಿನಿಂದ ಇರುವ ನಾರಾಯಣ ವಾಸುದೇವ ಸಂಕರ್ಷಣ ಪ್ರದ್ಯುಮ್ನ ಅನಿರುದ್ಧ ಎಂಬ ಪಂಚರೂಪಿ ಪರಮಾತ್ಮನೇ ಪಂಚ ಅಗ್ನಿರೂಪನಾಗಿದ್ದಾನೆ. ಅವನಲ್ಲಿ ಕ್ರಮವಾಗಿ ಐದು ಆಹುತಿ ರೂಪದಿಂದ ಜೀವನನ್ನು ದೇವತೆಗಳು ಹೋಮಿಸುತ್ತಾರೆ. ಐದನೆಯದಾದ ರೇತೋರೂಪಾಹುತಿ ಯಿಂದ ಗರ್ಭೋತ್ಪತ್ತಿ. ಜೀವನು ಭೂಮಿಯಲ್ಲಿ ಜನಿಸುತ್ತಾನೆ' ಎಂದು ಛಾಂದೋಗ್ಯಭಾಷ್ಯದಲ್ಲಿ ಹೇಳಿದ್ದಾರೆ.

**ವಿಶೇಷವಿಚಾರ**—ಪರಮಾತ್ಮನಿಗೆ 'ಅಗ್ನಿ' ನಾಮ ಹೇಗೆಂದರೆ, ಅಗ್ನಿಶಬ್ದವು ಯೌಗಿಕ. ಅದ ಧಾತುವಿಗೆ ನಿ ಪ್ರತ್ಯಯ. ದಕಾರಕ್ಕೆ ಗಕಾರಾದೇಶ. ಭಕ್ಷಕ ಎಂದರ್ಥ. 'ಅಂಗಂ ನಯತಿ' ಶರೀರಪ್ರೇರಕ ಎಂಬ ಅರ್ಥದಲ್ಲಿಯೂ ಅಗ್ನಿಶಬ್ದವು ನಿರುಕ್ತಿಬಲದಿಂದ ಸಿದ್ಧವಾಗುತ್ತದೆ. 'ನಿತರಾಂ ಅಚಲಃ' ಸ್ವತಃಪ್ರವೃತ್ತಿಯಲ್ಲಿ ಅಸಮರ್ಥ ಎಂಬ ಅರ್ಥದಲ್ಲಿ 'ನಿ–ಅಗ್' 'ಅಗ್–ನಿ' 'ಅಗ್ನಿ' ಎಂದಾಗುತ್ತದೆ, ನಿರುಕ್ತಿಯಿಂದ. 'ಅಗ್' ಸ್ವತಃ ಪ್ರವೃತ್ತಿ ಮಾಡದ ಪ್ರಪಂಚಕ್ಕೆ 'ನಿ' ನಾಯಕ ಪ್ರೇರಕ ಅಗ್ನಿ. ಯೋಷಿತಮಗ್ನಿಂ ಧ್ಯಾಯೀತ ಎಂಬಲ್ಲಿ ಯೋಷಿತ್ ಶಬ್ದವೂ ಪರಮಾತ್ಮ ವಾಚಕ. 'ಯೋಷಾ ಜೋಷ್ಯೋ ಯತೋಽಖಿಲೈಃ' 'ಎಲ್ಲರಿಗೂ ಪ್ರೀತಿಪಾತ್ರ' ಎಂಬ ಅರ್ಥದಲ್ಲಿ ಭಗವಂತನೆ 'ಯೋಷಾ' 'ಯೋಷಿತ್' ಎನಿಸುತ್ತಾನೆ.

ಯದ್ಯಪಿ 'ಪೂರ್ವಮೀಮಾಂಸಾ ರಥಕಾರಾಧಿಕರಣದಲ್ಲಿ ರೂಢಿಯ ಅರ್ಥವೇ ಬುದ್ಧಿಗೆ ಬೇಗನೆ ಹೊಳೆಯುತ್ತದೆ, ಯೋಗಾರ್ಥ ಹೊಳೆಯುವುದರಲ್ಲಿ ವಿಲಂಬವಾಗುತ್ತದೆ. ಅದರಿಂದ ಯೋಗಕ್ಕಿಂತ ರೂಢಿ ಪ್ರಬಲ, ರೂಢಿ ಸಂಭವವಿರುವಾಗ ಯೋಗವನ್ನು ಆಶ್ರಯಿಸಬಾರದು' ಎಂದು ಸಿದ್ಧಾಂತ ಮಾಡಿದ್ದಾರೆ. ಅದರಿಂದ ಅಗ್ನಿ ಯೋಷಾ ಶಬ್ದಗಳಿಗೆ ಯೋಗವನ್ನು ಹೇಳಿದರೆ ಪೂರ್ವಮೀಮಾಂಸಾ ವಿರೋಧ ಎಂದು ಅದ್ವೈತಿ ಹೇಳುತ್ತಾನೆ. ಆದರೆ ಅವ್ಯುತ್ಪನ್ನನಿಗೆ ಮಾತ್ರ ಹೀಗೆ ಯೋಗಾರ್ಥದ ಉಪಸ್ಥಿತಿಯಲ್ಲಿ ವಿಲಂಬವಾಗಬಹುದು. ವ್ಯುತ್ಪನ್ನನಿಗೆ ವಿಲಂಬವಿಲ್ಲದೆ ಬೇಗನೆ ಉಪಸ್ಥಿತವಾಗುವುದರಿಂದ ಯೋಗವನ್ನು ಆಶ್ರಯಿಸುವುದು ಅಯುಕ್ತವೇನಲ್ಲ.

'ಅಗ್ನಿಸಾದೃಶ್ಯ ಧೇನುಸಾದೃಶ್ಯಗಳನ್ನು ಗೌಣೀವೃತ್ತಿಯಿಂದ ಇಟ್ಟುಕೊಂಡರೆ ಅವು ಅಮುಖ್ಯಾರ್ಥವಾಗುವುವು. ಅಗ್ನಿತ್ವಾರೋಪದಿಂದ ಮುಖ್ಯಾರ್ಥತ್ವ ಸಂಭವವಿರುವಾಗ ಅಮುಖ್ಯವಾದ ಗೌಣತ್ವವನ್ನು ಆಶ್ರಯಿಸಬಾರದು. ಯೋಷಿತ್ತಿನಲ್ಲಿ ಮುಖ್ಯ ಅಗ್ನಿತ್ವವನ್ನೂ ವಾಕ್ಕಿನಲ್ಲಿ ಮುಖ್ಯ ಧೇನುತ್ವವನ್ನೂ ಆರೋಪಿಸಿ ಉಪಾಸನೆ ಮಾಡುವುದೇ ಯುಕ್ತ. 'ಆರೋಪಿತವಾದ ಅಸತ್ತಾದ ವಸ್ತುವನ್ನು ಉಪಾಸನೆ ಮಾಡುವುದು ನಿಷಿದ್ಧವಲ್ಲವೆ?' ಎಂದರೆ 'ವ್ಯಾವಹಾರಿಕವಾದ ವಸ್ತು ಉಪಾಸನೆಗೆ ಲಭ್ಯವಿರುವಾಗ ಪ್ರಾತಿಭಾಸಿಕ ವಸ್ತುವನ್ನು ಆರೋಪಿಸಿ ಉಪಾಸನೆ ಮಾಡುವುದು ಯುಕ್ತವಲ್ಲ' ಎನ್ನುವುದು ನಿಷೇಧದ ಅರ್ಥ' ಎಂದು ಅದ್ವೈತಿ ಹೇಳುತ್ತಾನೆ.

ಇದು ಸರಿಯಲ್ಲ. ಪ್ರವೃತ್ತಿ ನಿಮಿತ್ತವಾದ ಅಗ್ನಿತ್ವ ಧೇನುತ್ವ ವಿಶಿಷ್ಟವಾದ ಪದಾರ್ಥಗಳಲ್ಲಿಯೇ ಅಗ್ನಿಧೇನು ಶಬ್ದಗಳಿಗೆ ಶಕ್ತಿಗ್ರಹ. 'ಆರೋಪಿತ ಅಗ್ನಿತ್ವಾದಿ ವಿಶಿಷ್ಟ'ವೆಂದರೆ ಮೊಲದ ಕೊಂಬಿನಂತೆ ಅಸತ್. ಅದರಲ್ಲಿ ಶಕ್ತಿಗ್ರಹವಾಗುವುದಿಲ್ಲ. ಅದು ಮುಖ್ಯಾರ್ಥವೇ ಆಗುವುದಿಲ್ಲ. ಅಗ್ನಿತ್ವವಿಶಿಷ್ಟವೇ ಮುಖ್ಯಾರ್ಥ. ಅದು ಅಸಂಭವವಾಗಿರುವಾಗ ಅಗ್ನಿಸದೃಶರೂಪ ಅಮುಖ್ಯಾರ್ಥದಲ್ಲಿ ಅಗ್ನಿಶಬ್ದ ಗೌಣವೆಂದೇ ಸ್ವೀಕರಿಸಬೇಕು.

ಇನ್ನು 'ವ್ಯಾವಹಾರಿಕ ವಸ್ತು ಲಭ್ಯವಿರುವಾಗ ಪ್ರಾತಿಭಾಸಿಕವನ್ನು ಉಪಾಸನೆ ಮಾಡುವುದು ಯುಕ್ತವಲ್ಲ' ಎಂದು ಅದ್ವೈತಿ ಹೇಳಿದ್ದು ಅವನಿಗೇ ಪ್ರತಿಕೂಲ. ಅವನು ವ್ಯಾವಹಾರಿಕವಾದ ಅಗ್ನಿಧೇನು ಸಾದೃಶ್ಯ ಲಭ್ಯವಿರುವಾಗಲೇ ಆರೋಪಿತ ಅಗ್ನಿತ್ವಧೇನುತ್ವರೂಪ ಪ್ರಾತಿಭಾಸಿಕ ಉಪಾಸನೆಯನ್ನು ಸ್ವೀಕರಿಸಿದ್ದಾನೆ. ಅದು ಯುಕ್ತವಲ್ಲವೆಂದು ತಾನೇ ಹೇಳುತ್ತಿದ್ದಾನೆ, ಇದು ಸ್ವವ್ಯಾಹತ. 'ಅಗ್ನಿರ್ಮಾಣವಕಃ' ಎಂಬಲ್ಲಿಯೂ ಮಾಣವಕನಲ್ಲಿ ಅಗ್ನಿತ್ವಾರೋಪವೆನ್ನುತ್ತ ಅಗ್ನಿಶಬ್ದವು ಮುಖ್ಯವೆನ್ನುವುದಿಲ್ಲ, ಗೌಣವೆನ್ನುತ್ತಾನೆ. ಇದೂ ವ್ಯಾಹತ.

'ಧೇನುಮಿವಾಯತೀಂ' ಎಂದು ಶ್ರುತ್ಯಂತರ ಯಾವುದೆಂದರೆ—

ಯಾಂ ಜನಾಃ ಪ್ರತಿನಂದಂತಿ ರಾತ್ರಿಂ ಧೇನುಮಿವಾಯತೀಂ ।
ಸಂವತ್ಸರಸ್ಯ ಯಾ ಪತ್ನೀ ಸಾ ನೋ ಧೇಹಿ ಸುಮಂಗಲಿ ಸ್ವಾಹಾ ॥

ಎಂದು ಅಷ್ಟಕಾ ಎಂಬ ಪಿತೃದೇವತಾಕ ಹೋಮದಲ್ಲಿ ಮಂತ್ರವಿದೆ, 'ಧೇನುವಿನಂತೆ ಅಭೀಷ್ಟದಾಯಕಳಾಗಿ ಬರುವ ರಾತ್ರಿಯನ್ನು ಜನರು ಆನಂದದಿಂದ ಇದಿರುಗೊಳ್ಳುತ್ತಾರೆ. ಸಂವತ್ಸರನ ಪತ್ನಿಯಾದ, ಹೇ ದೇವಿ, ಸುಮಂಗಲಿ ನೀನು ನಮ್ಮನ್ನು ಪೋಷಿಸು. ನಿನಗಿದೋ ಆಹುತಿ' ಎಂದು ಅಷ್ಟಕಾಶ್ರಾದ್ಧ ಹೋಮಮಂತ್ರ ಧೇನುಸಾದೃಶ್ಯವನ್ನು ರಾತ್ರಿಗೆ ಹೇಳಿದೆ. ಇನ್ನೊಂದು ಶ್ರುತಿ—

ಅಬೋಧ್ಯಗ್ನಿಃ ಸಮಿಧಾ ಜನಾನಾಂ
ಪ್ರತಿ ಧೇನುಮಿವಾಯತೀಮುಷಾಸಂ ।
ಯಹ್ವಾ ಇವ ಪ್ರವಯಾಮುಜ್ಜಿಹಾನಾಃ
ಪ್ರಭಾನವಃ ಸಸ್ರತೇ ನಾಕಮಚ್ಛ ॥ (ಋಗ್ವೇದ 3.8.12)

'ಜನರಿಗೆ ಅಭೀಷ್ಟದಾಯಕಳಾಗಿ ಧೇನುವಿನಂತೆ ಉದಿಸಿ ಬರುವ ಉಷಾರಾಣಿಯ ಕಾಲದಲ್ಲಿ, ಋತ್ವಿಜರು ಅರ್ಪಿಸುವ ಸಮಿಧೆಗಳಿಂದ ಅಗ್ನಿ ಜ್ವಲಿಸುತ್ತಾನೆ. ಅಗ್ನಿಯ ಪ್ರಭೆಗಳು ವೃಕ್ಷಶಾಖೆಗಳನ್ನೂ ದಾಟಿ ಆಕಾಶದವರೆಗೂ ಪಸರಿಸುತ್ತವೆ' ಇಲ್ಲಿಯೂ ಉಷಃಕಾಲದಲ್ಲಿ ಧೇನುಸಾದೃಶ್ಯ ಉಕ್ತವಾಗಿದೆ. ಈ ಎರಡೂ ಮಂತ್ರಗಳಲ್ಲಿ 'ಧೇನುಮಿವಾಯತೀಂ' ಎಂಬ ಅಂಶ ಸಮಾನವಾಗಿದೆ.



"नाम ब्रह्मेत्युपास्ते" इत्यत्रापि "नामाभिमानिनी चोषा तस्यां ब्रह्म परं स्मरेत्" इत्यादिस्मृतेः ब्रह्माधिष्ठाने नामादौ ब्रह्मशब्दः गौणः । नामेति प्रथमा वा "वनं वसति मारुतः" इत्यादिवत्सप्तम्यर्थे । ब्रह्मेति प्रथमा वा "ब्राह्मणोऽस्य मुखम्" इतिवत् पंचम्यर्थे । सुपां सुलुगित्यादिसूत्रात् ।

अन्यथा "श्रुतं ह्येव मे भगवद्दृशेभ्यस्तरति शोकमात्मविदिति" इति पृष्टवंतं नारदं प्रति अनात्मोपास्त्युक्तिरयुक्ता स्यात् ।

प्रतिमायामपि देवताधिष्ठानत्वबुद्धित एव फलं नतु देवतात्वबुद्धितः । "शिला देव इति ज्ञानं, भौम इज्यधीः" इत्यादिना तन्निषेधात् ।

यथाच "अन्यदेव तद्विदितात्" इतिश्रुतावश्रौतज्ञानस्य कात्स्न्र्येन ज्ञानस्य वा निषेधः तथा "तदेव ब्रह्म त्वं विद्धि नेदं

ಯದ್ಯಪಿ 'ಪೂರ್ವಮೀಮಾಂಸಾ ರಥಕಾರಾಧಿಕರಣದಲ್ಲಿ ರೂಢಿಯ ಅರ್ಥವೇ ಬುದ್ಧಿಗೆ ಬೇಗನೆ ಹೊಳೆಯುತ್ತದೆ, ಯೋಗಾರ್ಥ ಹೊಳೆಯುವುದರಲ್ಲಿ ವಿಲಂಬವಾಗುತ್ತದೆ. ಆದರಿಂದ ಯೋಗಕ್ಕಿಂತ ರೂಢಿ ಪ್ರಬಲ, ರೂಢಿ ಸಂಭವವಿರುವಾಗ ಯೋಗವನ್ನು ಆಶ್ರಯಿಸಬಾರದು' ಎಂದು ಸಿದ್ಧಾಂತ ಮಾಡಿದ್ದಾರೆ. ಆದರಿಂದ ಅಗ್ನಿ ಯೋಷಾ ಶಬ್ದಗಳಿಗೆ ಯೋಗವನ್ನು ಹೇಳಿದರೆ ಪೂರ್ವಮೀಮಾಂಸಾ ವಿರೋಧ ಎಂದು ಅದ್ವೈತಿ ಹೇಳುತ್ತಾನೆ. ಆದರೆ ಅವ್ಯುತ್ಪನ್ನನಿಗೆ ಮಾತ್ರ ಹೀಗೆ ಯೋಗಾರ್ಥದ ಉಪಸ್ಥಿತಿಯಲ್ಲಿ ವಿಲಂಬವಾಗಬಹುದು. ವ್ಯುತ್ಪನ್ನನಿಗೆ ವಿಲಂಬವಿಲ್ಲದೆ ಬೇಗನೆ ಉಪಸ್ಥಿತವಾಗುವುದರಿಂದ ಯೋಗವನ್ನು ಆಶ್ರಯಿಸುವುದು ಅಯುಕ್ತವೇನಲ್ಲ.

'ಅಗ್ನಿಸಾದೃಶ್ಯ ಧೇನುಸಾದೃಶ್ಯಗಳನ್ನು ಗೌಣೀವೃತ್ತಿಯಿಂದ ಇಟ್ಟುಕೊಂಡರೆ ಅವು ಅಮುಖ್ಯಾರ್ಥವಾಗುವುವು. ಅಗ್ನಿತ್ವಾರೋಪದಿಂದ ಮುಖ್ಯಾರ್ಥತ್ವ ಸಂಭವವಿರುವಾಗ ಅಮುಖ್ಯವಾದ ಗೌಣತ್ವವನ್ನು ಆಶ್ರಯಿಸಬಾರದು. ಯೋಷಿತ್ತಿನಲ್ಲಿ ಮುಖ್ಯ ಅಗ್ನಿತ್ವವನ್ನೂ ವಾಕ್ಕಿನಲ್ಲಿ ಮುಖ್ಯ ಧೇನುತ್ವವನ್ನೂ ಆರೋಪಿಸಿ ಉಪಾಸನೆ ಮಾಡುವುದೇ ಯುಕ್ತ. 'ಆರೋಪಿತವಾದ ಅಸತ್ತಾದ ವಸ್ತುವನ್ನು ಉಪಾಸನೆ ಮಾಡುವುದು ನಿಷಿದ್ಧವಲ್ಲವೆ?' ಎಂದರೆ 'ವ್ಯಾವಹಾರಿಕವಾದ ವಸ್ತು ಉಪಾಸನೆಗೆ ಲಭ್ಯವಿರುವಾಗ ಪ್ರಾತಿಭಾಸಿಕ ವಸ್ತುವನ್ನು ಆರೋಪಿಸಿ ಉಪಾಸನೆ ಮಾಡುವುದು ಯುಕ್ತವಲ್ಲ' ಎನ್ನುವುದು ನಿಷೇಧದ ಅರ್ಥ' ಎಂದು ಅದ್ವೈತಿ ಹೇಳುತ್ತಾನೆ.

ಇದು ಸರಿಯಲ್ಲ. ಪ್ರವೃತ್ತಿ ನಿಮಿತ್ತವಾದ ಅಗ್ನಿತ್ವ ಧೇನುತ್ವ ವಿಶಿಷ್ಟವಾದ ಪದಾರ್ಥಗಳಲ್ಲಿಯೇ ಅಗ್ನಿಧೇನು ಶಬ್ದಗಳಿಗೆ ಶಕ್ತಿಗ್ರಹ. 'ಆರೋಪಿತ ಅಗ್ನಿತ್ವಾದಿ ವಿಶಿಷ್ಟ'ವೆಂದರೆ ಮೊಲದ ಕೊಂಬಿನಂತೆ ಅಸತ್. ಅದರಲ್ಲಿ ಶಕ್ತಿಗ್ರಹವಾಗುವುದಿಲ್ಲ. ಅದು ಮುಖ್ಯಾರ್ಥವೇ ಆಗುವುದಿಲ್ಲ. ಅಗ್ನಿತ್ವವಿಶಿಷ್ಟವೇ ಮುಖ್ಯಾರ್ಥ. ಅದು ಅಸಂಭವವಾಗಿರುವಾಗ ಅಗ್ನಿಸದೃಶರೂಪ ಅಮುಖ್ಯಾರ್ಥದಲ್ಲಿ ಅಗ್ನಿಶಬ್ದ ಗೌಣವೆಂದೇ ಸ್ವೀಕರಿಸಬೇಕು.

ಇನ್ನು 'ವ್ಯಾವಹಾರಿಕ ವಸ್ತು ಲಭ್ಯವಿರುವಾಗ ಪ್ರಾತಿಭಾಸಿಕವನ್ನು ಉಪಾಸನೆ ಮಾಡುವುದು ಯುಕ್ತವಲ್ಲ' ಎಂದು ಅದ್ವೈತಿ ಹೇಳಿದ್ದು ಅವನಿಗೇ ಪ್ರತಿಕೂಲ. ಅವನು ವ್ಯಾವಹಾರಿಕವಾದ ಅಗ್ನಿಧೇನು ಸಾದೃಶ್ಯ ಲಭ್ಯವಿರುವಾಗಲೇ ಆರೋಪಿತ ಅಗ್ನಿತ್ವಧೇನುತ್ವರೂಪ ಪ್ರಾತಿಭಾಸಿಕ ಉಪಾಸನೆಯನ್ನು ಸ್ವೀಕರಿಸಿದ್ದಾನೆ. ಅದು ಯುಕ್ತವಲ್ಲವೆಂದು ತಾನೇ ಹೇಳುತ್ತಿದ್ದಾನೆ, ಇದು ಸ್ವವ್ಯಾಹತ. 'ಅಗ್ನಿರ್ಮಾಣವಕಃ' ಎಂಬಲ್ಲಿಯೂ ಮಾಣವಕನಲ್ಲಿ ಅಗ್ನಿತ್ವಾರೋಪವೆನ್ನುತ್ತ ಅಗ್ನಿಶಬ್ದವು ಮುಖ್ಯವೆನ್ನುವುದಿಲ್ಲ. ಗೌಣವೆನ್ನುತ್ತಾನೆ. ಇದೂ ವ್ಯಾಹತ.

'ಧೇನುಮಿವಾಯತೀಂ' ಎಂದು ಶ್ರುತ್ಯಂತರ ಯಾವುದೆಂದರೆ—

ಯಾಂ ಜನಾಃ ಪ್ರತಿನಂದಂತಿ ರಾತ್ರಿಂ ಧೇನುಮಿವಾಯತೀಂ ।
ಸಂವತ್ಸರಸ್ಯ ಯಾ ಪತ್ನೀ ಸಾ ನೋ ಧೇಹಿ ಸುಮಂಗಲಿ ಸ್ವಾಹಾ ॥

ಎಂದು ಅಷ್ಟಕಾ ಎಂಬ ಪಿತೃದೇವತಾಕ ಹೋಮದಲ್ಲಿ ಮಂತ್ರವಿದೆ, 'ಧೇನುವಿನಂತೆ ಅಭೀಷ್ಟದಾಯಕಳಾಗಿ ಬರುವ ರಾತ್ರಿಯನ್ನು ಜನರು ಆನಂದದಿಂದ ಇದಿರುಗೊಳ್ಳುತ್ತಾರೆ. ಸಂವತ್ಸರನ ಪತ್ನಿಯಾದ, ಹೇ ದೇವಿ, ಸುಮಂಗಲಿ ನೀನು ನಮ್ಮನ್ನು ಪೋಷಿಸು. ನಿನಗಿದೋ ಆಹುತಿ' ಎಂದು ಅಷ್ಟಕಾಶ್ರಾದ್ಧ ಹೋಮಮಂತ್ರ ಧೇನುಸಾದೃಶ್ಯವನ್ನು ರಾತ್ರಿಗೆ ಹೇಳಿದೆ. ಇನ್ನೊಂದು ಶ್ರುತಿ—

ಅಬೋಧ್ಯಗ್ನಿಃ ಸಮಿಧಾ ಜನಾನಾಂ
ಪ್ರತಿ ಧೇನುಮಿವಾಯತೀಮುಷಾಸಂ ।
ಯಹ್ವಾ ಇವ ಪ್ರವಯಾಮುಜ್ಜಿಹಾನಾಃ
ಪ್ರಭಾನವಃ ಸಸ್ರತೇ ನಾಕಮಚ್ಛ ॥ (ಋಗ್ವೇದ 3.8.12)

'ಜನರಿಗೆ ಅಭೀಷ್ಟದಾಯಕಳಾಗಿ ಧೇನುವಿನಂತೆ ಉದಿಸಿ ಬರುವ ಉಷಾರಾಣಿಯ ಕಾಲದಲ್ಲಿ, ಋತ್ವಿಜರು ಅರ್ಪಿಸುವ ಸಮಿಧೆಗಳಿಂದ ಅಗ್ನಿ ಜ್ವಲಿಸುತ್ತಾನೆ. ಅಗ್ನಿಯ ಪ್ರಭೆಗಳು ವೃಕ್ಷಶಾಖೆಗಳನ್ನೂ ದಾಟಿ ಆಕಾಶದವರೆಗೂ ಪಸರಿಸುತ್ತವೆ' ಇಲ್ಲಿಯೂ ಉಷಃಕಾಲದಲ್ಲಿ ಧೇನುಸಾದೃಶ್ಯ ಉಕ್ತವಾಗಿದೆ. ಈ ಎರಡೂ ಮಂತ್ರಗಳಲ್ಲಿ 'ಧೇನುಮಿವಾಯತೀಂ' ಎಂಬ ಅಂಶ ಸಮಾನವಾಗಿದೆ.



''नाम ब्रह्मेत्युपास्ते'' इत्यत्रापि ''नामाभिमानिनी चोषा तस्यां ब्रह्म परं स्मरेत्'' इत्यादिस्मृतेः ब्रह्माधिष्ठाने नामादौ ब्रह्मशब्दः गौणः। नामेति प्रथमा वा ''वनं वसति मारुतः'' इत्यादिवत्सप्तम्यर्थे । ब्रह्मेति प्रथमा वा ''ब्राह्मणोऽस्य मुखम्'' इतिवत् पंचम्यर्थे । सुपां सुलुगित्यादिसूत्रात् ।

अन्यथा ''श्रुतं ह्येव मे भगवद्दृशेभ्यस्तरति शोकमात्मविदिति'' इति पृष्टवंतं नारदं प्रति अनात्मोपास्त्युक्तिरयुक्ता स्यात् ।

प्रतिमायामपि देवताधिष्ठानत्वबुद्धित एव फलं नतु देवतात्वबुद्धितः । ''शिला देव इति ज्ञानं, भौम इज्यधीः'' इत्यादिना तन्निषेधात् ।

यथाच ''अन्यदेव तद्विदितात्'' इतिश्रुतावश्रौतज्ञानस्य कात्स्न्र्येन ज्ञानस्य वा निषेधः तथा ''तदेव ब्रह्म त्वं विद्धि नेदं

**यदिदमुपासत'' इतिश्रुतावपि अश्रौतध्यानस्य कात्स्र्न्येन ध्यानस्य वा निषेधः । अन्यथा ''तस्याभिध्यानात्'' इतिश्रुतिविरोधात् ।**

**तस्मात्साधकाभावादित्याद्यो न युक्तः ।**

**नामाभिमानिनी चेति ।** उषाख्या अनिरुद्धभार्या च नामाभिमानिनीत्यर्थः । तथाचोदाहृतस्मृतिप्रतिपन्नब्रह्माधिष्ठानत्वमेव नाम्नि ब्रह्मशब्दप्रवृत्तौ निमित्तमिति ब्रह्माधिष्ठानत्वेन नामोपासनां कुर्यादिति तद्वाक्यार्थ इति भावः ।। **गौण इति** ।। लाक्षणिक इत्यर्थः । तेन सादृश्यनिमित्तकत्वाभावात् कथमस्य गौणतेति शंका निरस्ता ।

ननु ब्रह्मप्रकरणे अब्रह्मोपासनोक्तिरयुक्तेत्यतः पक्षांतरमाह— **नामेति** ।। तथाच नाम्नि ब्रह्मेत्युपासीतेति नाम ब्रह्मणः सकाशादुत्पन्नमिति वा तद्वाक्यार्थः । द्वितीयपक्षे प्राकरणिकं ब्रह्मैवोपास्यत्वेनान्वेतीति नाब्रह्मोपासनाप्रसक्तिरिति भावः । ननु कथं द्वितीयादेः सप्तम्यर्थत्वं सुब्विभक्तौ लक्षणायोगादित्याशंक्याह– **सुपामिति**।। छंदसि सुपां सु भवति लुक् च भवतीति सूत्रावयवार्थः ।। **भौम इज्यधीरिति** ।। पिंडीभूतवह्नौ यष्टव्यदेवतात्वधीरित्यर्थः ।। **निषेधादिति** ।। जनेष्वभिज्ञेषु स एव गोखर इति वाक्यशेषावगतनिंदया निषेधावगमादित्यर्थः । ननु यदि ब्रह्मैवोपास्यं तर्हि उपास्ये ब्रह्मत्वनिषेधश्रुतेः का गतिरित्याशंक्य सदृष्टांतं तच्छ्रुत्यविरोधमुपपादयति **यथेति । अन्यथेति** ।। न चात्र ब्रह्मणो ध्यातव्यत्वमेवोच्यते न तूपास्यत्वमिति वाच्यम् । ध्यानव्यतिरिक्तोपासनायां प्रमाणाभावादित्यर्थः ।।



**ನಾಮ ಬ್ರಹ್ಮೇತ್ಯುಪಾಸ್ತೇ' ಇತ್ಯತ್ರಾಪಿ.**

**'ನಾಮಾಭಿಮಾನಿನೀ ಚೋಷಾ ತಸ್ಯಾಂ ಬ್ರಹ್ಮ ಪರಂ ಸ್ಮರೇತ್ ।'**

**ಇತ್ಯಾದಿ ಸ್ಮೃತೇಃ ಬ್ರಹ್ಮಾಧಿಷ್ಠಾನೇ ನಾಮಾದೌ ಬ್ರಹ್ಮಶಬ್ದಃ ಗೌಣಃ ।**

'ನಾಮ ಬ್ರಹ್ಮೇತ್ಯುಪಾಸ್ತೇ' 'ನಾಮವನ್ನು ಬ್ರಹ್ಮ ಎಂದು ಉಪಾಸನ ಮಾಡಬೇಕು' (ಛಾಂ.7.1.1) ಎಂದು ನಾಮದಲ್ಲಿ ಅವಿದ್ಯಮಾನವಾದ ಬ್ರಹ್ಮತ್ವದ ಉಪಾಸನೆ ವಿಹಿತವಾಗಿಲ್ಲ. ನಾಮಾಭಿಮಾನಿನಿ ಉಷಾದೇವಿಯಲ್ಲಿ ಪರಬ್ರಹ್ಮನ ಸನ್ನಿಧಾನವನ್ನು ಚಿಂತಿಸಬೇಕು, ನಾಮದಲ್ಲಿ

ಬ್ರಹ್ಮಾಧಿಷ್ಠಾನತ್ವವನ್ನು ಚಿಂತಿಸಬೇಕು, ಎಂದು ತತ್ವವಿವೇಕವೆಂಬ ಛಾಂದೋಗ್ಯಭಾಷ್ಯೋದಾಹೃತಸ್ಮೃತಿ ವಚನವಿದೆ. ಆದರ ಪ್ರಕಾರ ಬ್ರಹ್ಮಶಬ್ದವು ಬ್ರಹ್ಮಾಧಿಷ್ಠಾನದಲ್ಲಿ ಗೌಣ.

**ವಿಶೇಷಾಂಶ**—ಇಲ್ಲಿ ನ್ಯಾಯಾಮೃತ ಪ್ರಚಲಿತಪಾಠದಲ್ಲಿ 'ಬ್ರಹ್ಮಾಧಿಷ್ಠಾನೇ ನಾಮಾದೌ ಬ್ರಹ್ಮಶಬ್ದಃ।' ಎಂದಿಷ್ಟೇ ಇದೆ. 'ಬ್ರಹ್ಮಶಬ್ದಃ ಗೌಣಃ' ಎಂದು 'ಗೌಣಃ' ಶಬ್ದವಿಲ್ಲ. ಆದರೆ ಆಮೋದದಲ್ಲಿ 'ನಾಮಾದೌ ಬ್ರಹ್ಮಶಬ್ದಃ ಗೌಣಃ' ಎಂದು ಪಾಠವಿಟ್ಟುಕೊಂಡು ಅದರ ಮೇಲೆ ಅನುಪಪತ್ತಿ ಶಂಕಾ ಸಮಾಧಾನಗಳನ್ನು ಹೇಳಿದ್ದಾರೆ— 'ಗೌಣ' ಎಂದರೆ ಗೌಣೀವೃತ್ತಿಯಿಂದ ಬೋಧಕವಾದ ಶಬ್ದವೆಂಬುದು ಪ್ರಸಿದ್ಧ. 'ನಾಮ ಬ್ರಹ್ಮೇತ್ಯುಪಾಸ್ತೇ' ಎಂಬಲ್ಲಿ ಬ್ರಹ್ಮಶಬ್ದವು ಗೌಣೀವೃತ್ತಿಯಿಂದ ಬ್ರಹ್ಮಸದೃಶವನ್ನು ಬೋಧಿಸುತ್ತಿಲ್ಲ, 'ನಾಮವನ್ನು ಬ್ರಹ್ಮಸದೃಶವೆಂದು ಉಪಾಸನೆ ಮಾಡಬೇಕೆಂ'ದು ಈ ವಾಕ್ಯವು ಹೇಳುತ್ತಿಲ್ಲ. 'ನಾಮವನ್ನು ಬ್ರಹ್ಮಾಧಿಷ್ಠಾನವೆಂದು ಉಪಾಸನೆ ಮಾಡಬೇಕು' ಎಂದು ಹೇಳುತ್ತಿದೆ. ಆದರಿಂದ 'ಗಂಗಾಯಾಂ ಘೋಷಃ' ಎಂಬಲ್ಲಿ ಗಂಗಾಶಬ್ದವು ಗಂಗಾತೀರವೆಂದು ಲಕ್ಷಣಾವೃತ್ತಿಯಿಂದ ಬೋಧಿಸುವಂತೆ ಪ್ರಕೃತದಲ್ಲಿ ಬ್ರಹ್ಮಶಬ್ದವು ಲಕ್ಷಣಾವೃತ್ತಿಯಿಂದ ಬ್ರಹ್ಮಾಧಿಷ್ಠಾನವನ್ನು ಹೇಳುತ್ತದೆ ಎನ್ನಬೇಕಾಗಿತ್ತು, 'ಬ್ರಹ್ಮಶಬ್ದವು ಲಾಕ್ಷಣಿಕ' ಎನ್ನಬೇಕಾಗಿತ್ತು. 'ಗೌಣ' ಎಂದಿದೆ. 'ಗೌಣ' ಅಂದರೆ ಗೌಣೀವೃತ್ತಿಯಿಂದ ಬೋಧಿಸುತ್ತದೆ ಎಂದು ಹೇಳಿದ್ದು ಹೇಗೆ ಕೂಡುತ್ತದೆ? ಎಂದು ಅನುಪಪತ್ತಿ ಶಂಕಾ. ಇದಕ್ಕೆ ಸಮಾಧಾನ— 'ಇಲ್ಲಿ 'ಗೌಣ' ಎಂದರೆ ಅಮುಖ್ಯ ಎಂದರ್ಥ. ಅಮುಖ್ಯ ವೃತ್ತಿಯಾಗಿರುವ ಲಕ್ಷಣಾವೃತ್ತಿಯಿಂದ ಬೋಧಿಸುತ್ತದೆ ಎಂದರ್ಥ' ಎಂದು.

ನಾಮದಲ್ಲಿ ಅವಿದ್ಯಮಾನವಾದ ಬ್ರಹ್ಮತ್ವದ ಉಪಾಸನೆ ವಿಹಿತವಾಗಿಲ್ಲ ಏಕೆ? ಎಂದರೆ ಬ್ರಹ್ಮಶಬ್ದವು ಇಲ್ಲಿ ಬ್ರಹ್ಮತ್ವವನ್ನು ಹೇಳುತ್ತಿಲ್ಲ, ಬ್ರಹ್ಮಾಧಿಷ್ಠಾನತ್ವವನ್ನು ಲಕ್ಷಣಾವೃತ್ತಿಯಿಂದ ಹೇಳುತ್ತಿದೆ. ನಾಮದಲ್ಲಿ ಬ್ರಹ್ಮಾಧಿಷ್ಠಾನತ್ವವು ಅವಿದ್ಯಮಾನವಲ್ಲ, ವಿದ್ಯಮಾನವಾಗಿದೆ ಎಂದು ಸಮಾಧಾನ ನೀಡಿದ್ದಾಯಿತು.

**ನಾಮೇತಿ ಪ್ರಥಮಾ ವಾ 'ವನಂ ವಸತಿ ಮಾರುತಃ' ಇತ್ಯಾದಿವತ್ ಸಪ್ತಮ್ಯರ್ಥೇ।**

ಇದು ಬ್ರಹ್ಮಪ್ರಕರಣ. ಇಲ್ಲಿ ಬ್ರಹ್ಮವ್ಯತಿರಿಕ್ತವಾದ ಬ್ರಹ್ಮಾಧಿಷ್ಠಾನಭೂತ ನಾಮದ ಉಪಾಸನೆ ಸರಿಯಲ್ಲ. ಬ್ರಹ್ಮವನ್ನೇ ಉಪಾಸ್ಯವೆನ್ನಬೇಕು. ಎಂದರೆ ಆದಕ್ಕೆ ಇನ್ನೂ ಬೇರೆ ರೀತಿಯಿಂದಲೂ ಸಮಾಧಾನ ಶಕ್ಯವಿದೆ— 'ನಾಮ ಬ್ರಹ್ಮ' 'ನಾಮವು ಬ್ರಹ್ಮ' ಎಂದು ನಾಮಶಬ್ದವು ಪ್ರಥಮಾವಿಭಕ್ತಿಯಲ್ಲಿದ್ದರೂ ಆ ಪ್ರಥಮಾವಿಭಕ್ತಿಗೆ ಸಪ್ತಮೀ ವಿಭಕ್ತ್ಯರ್ಥವನ್ನು ಗ್ರಹಿಸಬೇಕು. ಏಕೆಂದರೆ 'ನಾಮ್ನಿ' ಎಂದು ಸಪ್ತಮ್ಯಂತವಾದ ಶಬ್ದವು ವೈದಿಕ ವ್ಯಾಕರಣ ಪ್ರಕಾರ 'ನಾಮ' ಎಂದು ಪ್ರಥಮಾಂತವಾಗಿದೆ. ಸಪ್ತಮಿಗೆ ಪ್ರಥಮಾದೇಶ ಬಂದಿದೆ. ಈಗ 'ನಾಮ ಬ್ರಹ್ಮ' ಎಂದರೆ 'ನಾಮದಲ್ಲಿ ನಿಯಾಮಕನಾಗಿ ಬ್ರಹ್ಮನಿದ್ದಾನೆ' ಎಂದರ್ಥ. 'ನಾಮದಲ್ಲಿ ಬ್ರಹ್ಮನಿದ್ದಾನೆ' ಎಂದು

ಬ್ರಹ್ಮನ ಉಪಾಸನೆ ಮಾಡಿದರೆ ಅದು ಅವಿದ್ಯಮಾನೋಪಾಸನೆಯಾಗುವುದಿಲ್ಲ. ನಾಮದಲ್ಲಿ ಬ್ರಹ್ಮ ಅವಿದ್ಯಮಾನನಲ್ಲ. ಅಬ್ರಹ್ಮೋಪಾಸನೆಯೂ ಆಗುವುದಿಲ್ಲ. ನಾಮದಲ್ಲಿ ಬ್ರಹ್ಮವೇ ಉಪಾಸ್ಯ.

**ವಿಶೇಷವಿಚಾರ—**ಸಪ್ತಮಿಗೆ ಪ್ರಥಮಾದೇಶ ಬರುವುದಕ್ಕೆ ಉದಾಹರಣೆಯಾಗಿ 'ವನಂ ವಸತಿ ಮಾರುತಃ' ಅಂದರೆ 'ಗಾಳಿಯು ವನದಲ್ಲಿ ವಾಸಮಾಡುತ್ತದೆ' ಎಂದರ್ಥ ಎಂದು ಹೇಳಿದಂತೆ ನ್ಯಾಯಾಮೃತದಲ್ಲಿ ಕಾಣುತ್ತದೆ. 'ವನೇ' ಎಂಬ ಸಪ್ತಮಿಗೆ 'ವನಂ' ಎಂದು ಪ್ರಥಮಾದೇಶ ಎಂದು ವಿವರಣೆ ನೀಡಬೇಕು. ಆದರೆ 'ಗಾಳಿಯು ವನವಾಸ ಮಾಡುತ್ತದೆ' ಎನ್ನುವ ವಾಕ್ಯ ಅಬೋಧಕವಾಗಿದೆ. ಅದಕ್ಕೆ, ಅದ್ವೈತ ಸಿದ್ಧಿಯಲ್ಲಿ ನ್ಯಾಯಾಮೃತದ ಅನುವಾದ ಮಾಡುತ್ತ 'ನಾಮೇತಿ ಪ್ರಥಮಾವಚನಂ ವಸಂತೋ ಮಾರುತ ಇತಿವತ್ ಸಪ್ತಮ್ಯರ್ಥೇ' ಎಂದಿದೆ. 'ವಸಂತೇ ಮಾರುತಃ' 'ವಸಂತದಲ್ಲಿ ಬೀಸುವ ಗಾಳಿ' ಎಂಬುದೇ ಸಪ್ತಮೀಗೆ ಪ್ರಥಮಾದೇಶದಿಂದ 'ವಸಂತೋ ಮಾರುತಃ' ಎಂದಾಗಿದೆ ಎಂದು ಉದಾಹರಣೆ ಉಚಿತ. ಅದೇ ಸರಿಯಾದ ಪಾಠ. 'ವಚನಂ ವಸಂತೋ' ಎಂಬುದು 'ವನಂ ವಸತಿ' ಎಂದಾಗಿದೆ!

**ಬ್ರಹ್ಮೇತಿ ಪ್ರಥಮಾ ವಾ 'ಬ್ರಾಹ್ಮಣೋऽಸ್ಯ ಮುಖಂ' ಇತಿವತ್ ಪಂಚಮ್ಯರ್ಥೇ, ಸುಪಾಂ ಸುಲುಗಿತ್ಯಾದಿ ಸೂತ್ರಾತ್ ।**

ಇನ್ನೊಂದು ಉದಾಹರಣೆ— 'ಬ್ರಾಹ್ಮಣೋऽಸ್ಯ ಮುಖಮಾಸೀತ್' 'ಬ್ರಾಹ್ಮಣನು ಪರಮಪುರುಷನ ಮುಖವಾಗಿದ್ದ' ಅಂದರೆ ಬ್ರಾಹ್ಮಣನು ಪರಮಪುರುಷನ ಮುಖದಿಂದ ಜನಿಸಿದ. ಈ ಅರ್ಥದಲ್ಲಿ 'ಮುಖಾತ್' ಎಂದು ಪಂಚಮಿ ಇರಬೇಕಿತ್ತು. ಅದಕ್ಕೆ ಪ್ರಥಮಾದೇಶ ಬಂದುದರಿಂದ 'ಮುಖಂ' ಎಂದಾಗಿದೆ.

ಹೀಗೆ ಬೇರೆ ವಿಭಕ್ತಿಗಳಿಗೆ ಪ್ರಥಮಾದೇಶ ಬರುವುದು 'ಸುಪಾಂ ಸುಲುಕ್ ಪೂರ್ವಸವರ್ಣಾಚ್ಛೇಯಾಡಾಡ್ಯಾಯಾಜಾಲಃ' ಎಂಬ ಸೂತ್ರದಿಂದ. 'ಸುಪಾಂ' ಎಲ್ಲ ವಿಭಕ್ತಿಗಳಿಗೂ 'ಸು' ಪ್ರಥಮಾವಿಭಕ್ತಿಯು ಆದೇಶವಾಗಿ ಬರಬಹುದು ಎಂದು ಹೇಳಿದ್ದರಿಂದ 'ನಾಮ ಬ್ರಹ್ಮ' ಎಂಬಲ್ಲಿ 'ಬ್ರಹ್ಮಣಃ' ಬ್ರಹ್ಮನಿಂದ ಎಂದು ಪಂಚಮಿಗೆ ಪ್ರಥಮಾ ಬಂದಿರುವುದರಿಂದ 'ನಾಮವು ಬ್ರಹ್ಮನಿಂದ ಜನಿಸಿದೆ' 'ಅಂದರೆ ಬ್ರಹ್ಮವು ನಾಮಜನಕ' ಎಂದು ಬ್ರಹ್ಮನ ಉಪಾಸನೆ ಮಾಡಬೇಕೆಂದು ಹೇಳಿದಂತಾಯಿತು. ಆಗ ಇದು ಅವಿದ್ಯಮಾನೋಪಾಸನೆಯಾಗುವುದಿಲ್ಲ. ಅಬ್ರಹ್ಮೋಪಾಸನೆಯೂ ಆಗುವುದಿಲ್ಲ.

'ಗಂಗಾಯಾಂ ಘೋಷಃ' ಇತ್ಯಾದಿ ಎಲ್ಲ ಸ್ಥಳದಲ್ಲಿ ಪ್ರಾತಿಪದಿಕಕ್ಕೇ ಲಕ್ಷಣಾ ಕಂಡಿದೆ. ವಿಭಕ್ತಿಗೆ ಲಕ್ಷಣಾ ಎಲ್ಲಿಯೂ ಕಂಡಿಲ್ಲ. ಅದರಿಂದ ಪ್ರಥಮಾಕ್ಕೆ ಸಪ್ತಮರ್ಥ್ಯದಲ್ಲಿ ಮತ್ತು ಪಂಚಮ್ಯರ್ಥದಲ್ಲಿ ಲಕ್ಷಣಾ ಎನ್ನುವುದು ಅಸಂಗತವೆಂದು ಆಕ್ಷೇಪಕ್ಕೆ ಎಡೆ ಇಲ್ಲ. ವಿಭಕ್ತಿಗೆ ಲಕ್ಷಣಾ ಮಾಡಿಲ್ಲ, ಬೇರೆ ವಿಭಕ್ತಿಗೇ ಪ್ರಥಮಾದೇಶವೆಂದಿಟ್ಟುಕೊಂಡು ಬೇರೆ ಅರ್ಥ ಹೇಳಿದ್ದಾರೆ.

'ನಾಮ' 'ಬ್ರಹ್ಮ' ಶಬ್ದಗಳಿಗೆ ಸಮಾನವಿಭಕ್ತಿಕತ್ವವಿಲ್ಲದಿದ್ದರೆ ಇತಿ ಶಬ್ದಕ್ಕೆ ಅನ್ವಯವಿಲ್ಲದಂತಾಗುವುದು ಎಂದೂ ಸಿದ್ಧಿಕಾರನ ಆಕ್ಷೇಪವಿದೆ. ಆದರೆ ಇದು ಅರ್ಥಶೂನ್ಯ. 'ನಾಮ್ನಿ ಬ್ರಹ್ಮ' ಅಂದರೆ ನಾಮದಲ್ಲಿ ನಿಯಾಮಕನಾಗಿ ಬ್ರಹ್ಮನಿದ್ದಾನೆ 'ಇತಿ' ಎಂದು ಉಪಾಸನೆ ಮಾಡಬೇಕೆಂದು ಇತಿಶಬ್ದಕ್ಕೆ ಅನ್ವಯ ಕೂಡುತ್ತದೆ.

**ಅನ್ಯಥಾ 'ಶ್ರುತಂ ಹ್ಯೇವ ಮೇ ಭಗವದ್‌ದೃಶೇಭ್ಯಸ್ತರತಿ ಶೋಕಮಾತ್ಮವಿದಿತಿ' ಇತಿ ಪೃಷ್ಟವಂತಂ ನಾರದಂ ಪ್ರತಿ ಅನಾತ್ಮೋಪಾಸ್ತ್ಯುಕ್ತಿರಯುಕ್ತಾ ಸ್ಯಾತ್ ।**

ಪ್ರಥಮಾಕ್ಕೆ ಇಲ್ಲಿ ಸಪ್ತಮ್ಯರ್ಥ ಪಂಚಮ್ಯರ್ಥಗಳನ್ನು ಇಟ್ಟುಕೊಳ್ಳುವ ಆವಶ್ಯಕತೆ ಏನಿದೆ? ಎಂದರೆ ಹಾಗೆ ಅರ್ಥವಿಟ್ಟುಕೊಳ್ಳದಿದ್ದರೆ ಇದು ಅವಿದ್ಯಮಾನೋಪಾಸನೆಯಾಗುವದು, ಮತ್ತು ಇದು ಅಬ್ರಹ್ಮೋಪಾಸನೆಯಾಗುವುದು ಬ್ರಹ್ಮೋಪಾಸನವಾಗಲಾರದು. ಬ್ರಹ್ಮೋಪಾಸನೆಯನ್ನು ನಾರದರಿಗೆ ಸನತ್ಕುಮಾರರು ಹೇಳುವ ಸಂದರ್ಭವಿದು. 'ನಾನು ವೇದಾದಿ ಸಕಲ ವಿದ್ಯೆಗಳನ್ನು ಅಧ್ಯಯನ ಮಾಡಿದ್ದೇನೆ, ಆದರೆ ಬ್ರಹ್ಮಜ್ಞಾನ ಬರಲಿಲ್ಲ. 'ಸೋಹಂ ಭಗವೋ ಮಂತ್ರವಿದೇವಾಸ್ಮಿ ನಾತ್ಮವಿತ್' 'ಬ್ರಹ್ಮಜ್ಞಾನದಿಂದಲೇ ಸರ್ವಶೋಕನಿವೃತ್ತಿ' ಎಂದು ತಮ್ಮಂಥ ಜ್ಞಾನಿಗಳು ಹೇಳುವುದನ್ನು ಕೇಳಿದ್ದೇನೆ, ಅದರಿಂದ ಬ್ರಹ್ಮೋಪಾಸನೆಯನ್ನು ನನಗೆ ಉಪದೇಶಿಸಿರಿ' ಎಂದು ನಾರದರು ಕೇಳಿದರು. ಆಗ ಸನತ್ಕುಮಾರರು ಬೇರೆ ಅವಿದ್ಯಮಾನ ಅಸದುಪಾಸನೆಯನ್ನು ಅಬ್ರಹ್ಮೋಪಾಸನೆಯನ್ನು ಉಪದೇಶಿಸಿದರೆ ಅಯುಕ್ತವಾದೀತು. ಗುರುವು ಶಿಷ್ಯನಿಗೆ ಮಹಾವಂಚನೆ ಮಾಡಿದಂತಾದೀತು. ಅದರಿಂದ ಪ್ರಥಮಾಕ್ಕೆ ಸಪ್ತಮ್ಯಾದ್ಯರ್ಥದ ಅಭಿಪ್ರಾಯದಿಂದಲೇ ಪ್ರಥಮಾಂತ ಶಬ್ದದಿಂದ ಬ್ರಹ್ಮೋಪಾಸನೆಯ ಉಪದೇಶ ನೀಡಿದರೆಂದು ಹೇಳಬೇಕಾಗುತ್ತದೆ.

**ಪ್ರತಿಮಾಯಾಮಪಿ ದೇವತಾಧಿಷ್ಠಾನತ್ವ ಬುದ್ಧಿತ ಏವ ಫಲಂ । ನತು ದೇವತಾತ್ವ ಬುದ್ಧಿತಃ । 'ಶಿಲಾ ದೇವ ಇತಿಜ್ಞಾನಂ' ಭೌಮ ಇಜ್ಯಧೀಃ' ಇತ್ಯಾದಿನಾ ತನ್ನಿಷೇಧಾತ್ ।**

ಹಾಗಾದರೆ, ಪ್ರತಿಮೆಯಲ್ಲಿ ದೇವತಾತ್ವಾರೋಪಮಾಡಿ ಉಪಾಸನೆ ಮಾಡುವುದರಿಂದ ಫಲ ಲಾಭ ಅನುಭವ ಸಿದ್ಧವಾಗಿರುವುದು ಹೇಗೆ ಕೂಡುತ್ತದೆ? ಎಂದರೆ ಅಚೇತನವಾದ ಪ್ರತಿಮೆ ಫಲ ನೀಡುವುದು ಸರ್ವಥಾ ಅಸಂಭವ. ಪ್ರತಿಮೆಯಲ್ಲಿ ದೇವತಾಸನ್ನಿಧಾನವಿದೆ ಎಂದು ಉಪಾಸನೆ ಮಾಡಿದಾಗ ದೇವತಾಪ್ರಸಾದದಿಂದ ಫಲ ಲಾಭ. ಇದು ಅನ್ವಯವ್ಯತಿರೇಕಸಿದ್ಧ. ದೇವತಾತ್ವಾರೋಪ ದಿಂದ ಪ್ರತಿಮೆಯ ಉಪಾಸನೆ ಮಾಡಿದಾಗ ಕದಾಚಿತ್ ಫಲ ಕಂಡುಬರಬಹುದು. ಆದರೆ ಅದು ಕಾಕತಾಲೀಯ. ಅಚೇತನವಾದ ಪ್ರತಿಮೆಯೇ ಫಲ ನೀಡುವುದಾದರೆ ಪ್ರತಿಮೆಯೇ ಉಪಾಸನೆಗೆ ಏಕೆ ಬೇಕು? ಘಟಪಟಾದಿ ಯಾವುದೇ ಅಚೇತನವನ್ನು ಉಪಾಸನೆ ಮಾಡಬಹುದು ತಾನೆ?

ಭಿನ್ನಸ್ಯಾಭೇದತೋ ದೃಷ್ಟಿರಪಿ ಭೇದದೃಶಿರ್ಮತಾ...
ಶಿಲಾ ದೇವ ಇತಿಜ್ಞಾನಂ ದೇವೋಽಸ್ಮೀತಿ ತು ಯಾ ದೃಶಿಃ

ಭೇದಜ್ಞಾನಮಿತಿ ಪ್ರೋಕ್ತಂ ಯಾ ಚಾನ್ಯಾಽಪ್ಯನ್ಯಥಾಮತಿಃ
ತಸ್ಮಾತ್ ತದಪಹಾನಾಯ ಸಂಸೇವ್ಯಾ ಗುರವೋ ವರಾಃ ॥

ಭಿನ್ನವಸ್ತುಗಳನ್ನು ಅಭಿನ್ನವೆಂದು ತಿಳಿಯುವುದೂ ಕೂಡ 'ಭೇದಜ್ಞಾನ'ವೆನಿಸುತ್ತದೆ. ಶಿಲಾಪ್ರತಿಮೆಯನ್ನು ದೇವನೆಂದು, 'ತಾನು ದೇವ'ನೆಂದು ಮುಂತಾಗಿ ತಿಳಿಯುವುದು ಭೇದಜ್ಞಾನಗಳೆ, ಅವುಗಳನ್ನು ದೂರಮಾಡಿಕೊಳ್ಳಲು ಉತ್ತಮ ಗುರುಗಳನ್ನು ಸೇವಿಸಬೇಕು ಎಂದು ಭಾಗವತ ತಾತ್ಪರ್ಯ(10.72.13)ದಲ್ಲಿ ಉದಾಹೃತವಾದ ಸ್ಕಾಂದಪುರಾಣವಚನ ಹೇಳುತ್ತದೆ. ಭಾಗವತದಲ್ಲಿ-

ಯಸ್ಯಾತ್ಮ ಬುದ್ಧಿಃ ಕುಣಪೇ ತ್ರಿಧಾತುಕೇ
ಸ್ವಧೀಃ ಕಲತ್ರಾದಿಷು ಭೌಮ ಇಜ್ಯಧೀಃ
ಯತ್ತೀರ್ಥ ಬುದ್ಧಿಶ್ಚ ಜಲೇ ನ ಕರ್ಹಿಚಿತ್
ಜನೇಷ್ವಭಿಜ್ಞೇಷು ಸ ಏವ ಗೋಖರಃ ॥ (ಭಾಗ.10.72.13)

'ಯಾರಿಗೆ ವಾತಪಿತ್ತಕಫಗಳೆಂಬ ತ್ರಿಧಾತುಕವಾದ ಜಡ ಶರೀರದಲ್ಲಿ ಆತ್ಮ 'ತಾನೆ' ಎಂಬ ಭಾವನೆ. ಹೆಂಡತಿ ಮಕ್ಕಳಲ್ಲಿ ತನ್ನವರೆಂಬ ಭಾವನೆ. 'ಭೌಮ ಇಜ್ಯಧೀಃ' ದೇವಪ್ರತಿಮೆಯಾಗಿರುವ ಬೆಂಕಿಯಲ್ಲಿ ಅದೇ ದೇವರೆಂಬ ಭಾವನೆಗಳಿರುತ್ತವೆ ಹೊರತು ಜ್ಞಾನಿ ಜನರಲ್ಲಿ ಪೂಜ್ಯಭಾವನೆ ಇಲ್ಲವೋ ಅವನು ಮನುಷ್ಯನೇ ಅಲ್ಲ, 'ಗೋಖರಃ' 'ಭೂಮಿಯಲ್ಲಿ ಅವನೇ ಕತ್ತೆ' ಎಂದು ಜಡವಾದ ಬೆಂಕಿ ಮುಂತಾದವುಗಳಲ್ಲಿ ದೇವತಾತ್ವಾರೋಪ ನಿಷಿದ್ಧವಾಗಿದೆ. 'ಕತ್ತೆ!' ಎನ್ನುವ ನಿಂದೆಯಿಂದ ಇದು ತಿಳಿದುಬರುತ್ತದೆ.

**ಯಥಾಚ 'ಅನ್ಯದೇವ ತದ್ವಿದಿತಾತ್' ಇತಿಶ್ರುತೌ ಅಶ್ರೌತಜ್ಞಾನಸ್ಯ, ಕಾರ್ತ್ಸ್ನ್ಯೇನ ಜ್ಞಾನಸ್ಯ ವಾ ನಿಷೇಧಃ, ತಥಾ 'ತದೇವ ಬ್ರಹ್ಮ ತ್ವಂ ವಿದ್ಧಿ, ನೇದಂ ಯದಿದಂ ಉಪಾಸತೇ' ಇತಿ ಶ್ರುತಾವಪಿ ಅಶ್ರೌತಧ್ಯಾನಸ್ಯ, ಕಾರ್ತ್ಸ್ನ್ಯೇನ ಧ್ಯಾನಸ್ಯ ವಾ ನಿಷೇಧಃ ।**

'ತದೇವ ಬ್ರಹ್ಮ ತ್ವಂ ವಿದ್ಧಿ ನೇದಂ ಯದಿದಮುಪಾಸತೇ' ಉಪಾಸ್ಯವು ಬ್ರಹ್ಮವಲ್ಲ, ಬ್ರಹ್ಮ ಬೇರೆಯೇ ಇದೆ ಎಂದು ತಲವಕಾರೋಪನಿಷತ್ತು ಹೇಳಿದರೆ ಅದರ ಅರ್ಥ ಬೇರೆಯೆ ಇದೆ. ಕಠೋಪನಿಷತ್ತಿನಲ್ಲಿ 'ಅನ್ಯದೇವ ತದ್ವಿದಿತಾತ್' ನೀನು ತಿಳಿದಿದ್ದು ಯಾವುದೂ ಬ್ರಹ್ಮವಲ್ಲ. 'ತಿಳಿದಿರುವುದಕ್ಕಿಂತ ಬೇರೆಯೆ ಆ ಬ್ರಹ್ಮವಿದೆ' ಎಂದರೆ, ಅದಕ್ಕೆ 'ಬ್ರಹ್ಮವನ್ನು ತಿಳಿಯಲಾಗದೆ'ಂದೇ ಅಭಿಪ್ರಾಯವಿದ್ದರೆ, ತಿಳಿಸಲು ಅದು ಬ್ರಹ್ಮವನ್ನು ಏಕೆ ಉಪದೇಶಿಸಬೇಕು? ಅದರಿಂದ ಆ ಅಭಿಪ್ರಾಯವಿಲ್ಲ, ವೇದದಲ್ಲಿ ಹೇಳಿದ ರೀತಿಯಿಂದ ಬ್ರಹ್ಮವನ್ನು ತಿಳಿಯಬೇಕು ಹೊರತು ಬೇರೆ ಊಹಾಪೋಹಗಳಿಂದ ತಿಳಿಯಲಾಗದು ಮತ್ತು ವೇದೋಕ್ತ ರೀತಿಯಿಂದ ತಿಳಿಯುವಾಗಲೂ ಪೂರ್ತಿಯಾಗಿ ತಿಳಿಯಲಾಗದು. ಯಥಾಶಕ್ತಿ ತಿಳಿಯಬೇಕಷ್ಟೆ ಎಂದು ಅಭಿಪ್ರಾಯ ಹೇಳಬೇಕು.

ಹಾಗೇ ತಲವಕಾರದಲ್ಲಿಯೂ 'ಉಪಾಸ್ಯವು ಬ್ರಹ್ಮವಲ್ಲ' ಎಂಬ ಮಾತಿಗೆ ಬ್ರಹ್ಮವನ್ನು ಶ್ರುತ್ಯುಕ್ತ ರೀತಿಯಾಗಿಯೇ ಉಪಾಸನೆ ಮಾಡಬೇಕು ಹೊರತು ಸ್ವೇಚ್ಛಾನುಸಾರ ಧರ್ಮಾರೋಪ

ಮಾಡಿ ಉಪಾಸನೆ ಮಾಡಬಾರದು ಮತ್ತು ಯಥಾಶಕ್ತಿ ಮಾತ್ರವೇ ಉಪಾಸನೆ ಮಾಡಬೇಕು. ಪೂರ್ತಿ ಉಪಾಸನೆ ಯಾರಿಗೂ ಶಕ್ಯವಿಲ್ಲ ಎಂದು ಅಭಿಪ್ರಾಯವಿಟ್ಟುಕೊಳ್ಳಬೇಕು. ಜ್ಞಾನವಿಷಯದಲ್ಲಿ ಹೇಗೆ ವ್ಯವಸ್ಥೆಯೋ ಹಾಗೇ ಧ್ಯಾನ ವಿಷಯದಲ್ಲಿಯೂ ವ್ಯವಸ್ಥೆಯನ್ನು ತಿಳಿಯಬೇಕು.

**ಅನ್ಯಥಾ ತಸ್ಯಾಭಿಧ್ಯಾನಾತ್ ಇತಿ ಶ್ರುತಿವಿರೋಧಾತ್ ।**

**ತಸ್ಮಾತ್ ಸಾಧಕಾಭಾವಾದಿತ್ಯಾದ್ಯೋ ನ ಯುಕ್ತಃ ।**

ಬ್ರಹ್ಮವಿಷಯದಲ್ಲಿ ಧ್ಯಾನ ಸರ್ವಥಾ ನಿಷಿದ್ಧವೆ ಎಂದರೆ ಶ್ರುತಿ ವಿರೋಧ ಬರುತ್ತದೆ.

ತಸ್ಯಾಭಿಧ್ಯಾನಾತ್ ಯೋಜನಾತ್ ತತ್ತ್ವಭಾವಾತ್
ಭೂಯಶ್ಚಾಂತೇ ವಿಶ್ವಮಾಯಾ ನಿವೃತ್ತಿಃ ॥ (ಶ್ವೇತಾ.1.10)

'ಮನಸಿನ ಏಕಾಗ್ರತೆಯಿಂದ ಯಥಾರ್ಥಜ್ಞಾನದಿಂದ ಪುನಃ ಪುನಃ ಬ್ರಹ್ಮ ಧ್ಯಾನ ಮಾಡಿದರೆ ಕೊನೆಯಲ್ಲಿ ವಿಶ್ವಬಂಧಕವಾದ ಮಾಯೆ ನಿವೃತ್ತವಾಗುತ್ತದೆ' ಎಂಬ ಶ್ವೇತಾಶ್ವತರ ಶ್ರುತಿ ಬ್ರಹ್ಮಧ್ಯಾನವನ್ನು ವಿಧಾನ ಮಾಡುವುದು ಕೂಡಲಾರದು.

'ಧ್ಯಾನವನ್ನೇ ಇಲ್ಲಿ ಶ್ರುತಿಯು ವಿಧಿಸಿದೆ, ಉಪಾಸನೆಯನ್ನಲ್ಲ' ಎನ್ನಬಾರದು. ಧ್ಯಾನಕ್ಕಿಂತ ಬೇರೆ ಉಪಾಸನೆ ಎಂಬುದಿಲ್ಲ. ಅದಕ್ಕೆ ಪ್ರಮಾಣವಿಲ್ಲ.

ಹೀಗಾಗಿ 'ಬ್ರಹ್ಮನಲ್ಲಿ ಯಾವುದೇ ಧರ್ಮವಿಲ್ಲ, ಅದಕ್ಕೆ ಸಾಧಕಪ್ರಮಾಣವಿಲ್ಲ' ಎಂಬ ಮೊದಲನೆ ಪಕ್ಷ ಸರಿಯಲ್ಲ.

ಸಗುಣ ಶ್ರುತಿ-ಸ್ಮೃತಿ-ಸೂತ್ರ-ತದನುಸಾರಿ ಪ್ರಮಾಣಗಳೆಲ್ಲವೂ ಈ ವಿಷಯದಲ್ಲಿ ಪ್ರಮಾಣವಾಗಿವೆ. ಅವು ಅದ್ವೈತಿಗಳು ಹೇಳುವಂತೆ ಸೋಪಾಧಿಕ-ಅಧ್ಯಸ್ತ-ಅನಿತ್ಯಧರ್ಮ ವಿಷಯಕವಲ್ಲ, ಅನುವಾದಕವಲ್ಲ, ಅಸದುಪಾಸನ ಪರವೂ ಅಲ್ಲ. ನಿರ್ಗುಣಶ್ರುತಿಯಂತೆಯೇ ಸಾಧಕವಾಗಿವೆ.



**नापि बाधकसद्भावादिति द्वितीयः ।**

**सामान्यतो मिथ्यात्वश्रुतिभंगे अखंडार्थत्वभंगे चोक्तन्यायेनाद्वैतश्रुत्यादीनामबाधकत्वात् ।**

**नापि निर्गुणवाक्यं बाधकम् । वैपरीत्यस्यापि सुवचत्वात् । नच निषेधत्वादिना तत्प्रबलम् । असद्वा इत्यादिवाक्यस्य सदेवेत्यादिवाक्गतप्राबल्यापत्तेरित्युक्तत्वात् । अपच्छेदन्यायस्य च निरासात् ।**

**नच निर्गुणत्वं पुरुषार्थः येन तद्वाक्यं तत्परं स्यात् । किंतु गुणितैव । नच निर्गुणज्ञानस्य मोचकत्वात् फलवत्संनिधाविति न्यायेन सगुणवाक्यं तदनुगुणं नेयमिति युक्तम् । सगुणज्ञानस्यैव मोचकत्वोक्तेः ।**

**तस्मात् सगुणत्वनिर्गुणत्वयोर्विरोधेन समुच्चयायोगात् अनुष्ठान इव च वस्तुनि विकल्पासंभवात् एकेनान्यस्य प्रतीतार्थत्यागरूपे बाधे वक्तव्ये निर्गुणवाक्यस्यैव स युक्तः । न तु प्रबलस्य सगुणवाक्यस्य ।**

**तस्य प्राबल्यं च उपक्रमाधिकरणन्यायेनानुपसंजातविरोधित्वात् । लिंगाच्छ्रुतेरिव शीघ्रगामित्वाच्च । निर्गुणश्रुतिर्हि प्रतियोगिप्रतीत्यपेक्षया विलंबते ।**

**''पदे जुहोति'' इतिवद्विशेषविषयत्वाच्च । सार्वज्ञश्रुतिर्हि विशिष्य सार्वज्ञादिपरा, निर्गुणश्रुतिस्तु सामान्यतो गुणनिषेधिका ।**

।। **उक्तन्यायेनेति** ।। अद्वैतश्रुतेश्चिन्मात्रतात्पर्यकत्वेऽबाधकत्वात् द्वितीयाभावविशिष्टे तदुपलक्षिते वा तात्पर्येऽखंडार्थत्वहानेरित्युक्तन्यायेनेत्यर्थः ।। **किंतु गुणितैवेति** ।। लोके तथा दर्शनादिति भावः ।। **फलवत्सन्निधाविति** ।। ''फलवत्सन्निधौ अफलं तदंगम्'' इति न्यायेन सगुणवाक्यस्य निर्गुणवाक्यांगत्वे सिद्धे प्रधानभूतनिर्गुणवाक्यानुसारेण सगुणवाक्यं नेयमित्यर्थः ।। **मोचकत्वोक्तेरिति** ।। 'तमेवं विद्वान् इत्यादिश्रुतिष्विति शेषः ।। **निर्गुणश्रुतिस्त्विति** ।। ''केवलो निर्गुणः'' इत्यादिश्रुतिरित्यर्थः । यद्यपि ''अशब्दमस्पर्शमरूपमव्ययं, अस्थूलमनणु'' इत्यादिश्रुतिर्विशिष्य गुणनिषेधिकाप्यस्तीति न तदपेक्षया सगुणश्रुतेः ''पदे जुहोति'' इत्यादिवत् प्राबल्यं वक्तुं शक्यम् । तथाप्युदाहृतन्यायांतरेणैव तच्छ्रुतेः प्राबल्यम् । शब्दादिनिषेधस्तु अदुःखमसुखमित्यादिवत् प्रकृतनिषेधपर इत्यवधेयम् ।।



**ನಾಪಿ ಬಾಧಕಸದ್ಭಾವಾದಿತಿ ದ್ವಿತೀಯಃ। ಸಾಮಾನ್ಯತೋ ಮಿಥ್ಯಾತ್ವ ಶ್ರುತಿಭಂಗೇ ಅಖಂಡಾರ್ಥತ್ವಭಂಗೇ ಚ ಉಕ್ತನ್ಯಾಯೇನ ಅದ್ವೈತ ಶ್ರುತ್ಯಾದೀನಾಂ ಅಬಾಧಕತ್ವಾತ್।**

ಬ್ರಹ್ಮನು ಸಗುಣನೆನ್ನುವಲ್ಲಿ ಬಾಧಕ ಪ್ರಮಾಣಗಳಿವೆ ಎಂಬ ಎರಡನೆ ಪಕ್ಷವೂ ಯುಕ್ತವಲ್ಲ. ಸಾಮಾನ್ಯತೋ ಮಿಥ್ಯಾತ್ವ ಶ್ರುತಿಭಂಗ ಪ್ರಕರಣದಲ್ಲಿ ಮತ್ತು ಅಖಂಡಾರ್ಥತ್ವ ನಿರಾಸ ಪ್ರಕರಣದಲ್ಲಿ ಹೇಳಿದ ರೀತಿಯಿಂದ ಶ್ರುತ್ಯಾದಿಗಳು ಸಗುಣಬಾಧಕವಾಗುವುದಿಲ್ಲ.

ಅದ್ವೈತ ಶ್ರುತಿಯು ಚಿನ್ಮಾತ್ರ ಪರವಾದರೆ ಸಗುಣಕ್ಕೆ ಬಾಧಕವಾಗಲಾರದು. ದ್ವಿತೀಯಾಭಾವವಿಶಿಷ್ಟ ಅಥವಾ ಉಪಲಕ್ಷಿತ ಪರವಾದರೆ ಬ್ರಹ್ಮಜ್ಞಾನ ಸಪ್ರಕಾರವೆ ಆಗುವುದು ಅಖಂಡಾರ್ಥತ್ವವಿಲ್ಲವಾಗುವುದು ಮತ್ತು 'ನಿರ್ಗುಣವಾಕ್ಯ ಸಗುಣಬಾಧಕ'ವೆಂದರೆ 'ಸಗುಣವಾಕ್ಯ ನಿರ್ಗುಣಬಾಧಕವೇಕಾಗಬಾರದೆಂ'ಬ ಆಕ್ಷೇಪವೂ ಬರುವುದು.

ಮತ್ತು ನಿರ್ಗುಣವಾಕ್ಯ ಬಾಧಕವಾಗಬೇಕಾದರೆ ಅದು ಪ್ರಬಲವಾಗಿರಬೇಕು, ಪ್ರಬಲವಾಗಲು ಏನು ಕಾರಣ? ನಿರ್ಗುಣ ವಾಕ್ಯ ಗುಣನಿಷೇಧರೂಪವಾದ್ದರಿಂದ, ಸಗುಣವಾಕ್ಯಕ್ಕಿಂತ ಪರದಲ್ಲಿ ಬರುವುದರಿಂದ, ನಿರ್ಗುಣತ್ವವು ಪುರುಷಾರ್ಥವಾದ್ದರಿಂದ ಅಥವಾ ಅದರ ಜ್ಞಾನ ಮೋಕ್ಷಸಾಧಕವಾದ್ದರಿಂದ ಎಂದು ಈ ಯಾವ ಕಾರಣವೂ ಯುಕ್ತವಾಗುವುದಿಲ್ಲ.

ನಿರ್ಗುಣವಾಕ್ಯ ನಿಷೇಧಕವಾದ್ದರಿಂದ ಪ್ರಬಲ ಎಂದರೆ 'ಅಸದ್ವಾ ಇದಮಗ್ರ ಆಸೀತ್' ಎಂಬ ನಿಷೇಧಕವಾಕ್ಯ ಸದೇವ ಸೋಮ್ಯೇದಮಗ್ರ ಆಸೀತ್ ಎಂಬ ವಿಧಿವಾಕ್ಯಕ್ಕೆ ನಿಷೇಧಕವಾಗಿ ಪ್ರಬಲವೆನಿಸೀತು. ಸತ್ತಾದ ಬ್ರಹ್ಮನನ್ನು ಹೇಳುವ ವಾಕ್ಯಕ್ಕಿಂತ ಅಸತ್ತಾದ ಶೂನ್ಯವನ್ನು ಹೇಳುವ ವಾಕ್ಯ ಪ್ರಬಲವೆನಿಸಿ ಬಾಧಕವೆನಿಸೀತೆಂದು ಹಿಂದೆಯೇ ಹೇಳಿದ್ದೇವೆ—

**ನಾಪಿ ನಿರ್ಗುಣವಾಕ್ಯಂ ಬಾಧಕಂ। ವೈಪರೀತ್ಯಸ್ಯಾಪಿ ಸುವಚತ್ವಾತ್। ನಚ ನಿಷೇಧತ್ವಾದಿನಾ ತತ್ ಪ್ರಬಲಂ। ಅಸದ್ವಾ ಇತ್ಯಾದಿ ವಾಕ್ಯಸ್ಯ ಸದೇವೇತ್ಯಾದಿ ವಾಕ್ಯಾತ್ ಪ್ರಾಬಲ್ಯಾಪತ್ತೇಃ ಇತ್ಯುಕ್ತತ್ವಾತ್।**

'ಪರವು ಪ್ರಬಲ. ಅದು ಪೂರ್ವವನ್ನು ಬಾಧಿಸುತ್ತದೆ ಎಂಬುದು ಅಪಚ್ಛೇದಗಳಲ್ಲಿ ಕಂಡಿದೆ. ಅದರಿಂದ ನಿರ್ಗುಣಶ್ರುತಿ ಪರ, ಪ್ರಬಲ, ಅದು ಪೂರ್ವದ ಸಗುಣಶ್ರುತಿಯನ್ನು ಬಾಧಿಸುತ್ತದೆ' ಎಂದು ಭಾಮತೀಕಾರ ಹೇಳುತ್ತಾನೆ. ಇದು ಸರಿಯಲ್ಲ ಎಂದು ಹಿಂದೆಯೇ ಅಪಚ್ಛೇದ ನ್ಯಾಯವೈಷಮ್ಯಪ್ರಕರಣದಲ್ಲಿ ವಿಸ್ತಾರವಾಗಿ ನಿರೂಪಿಸಿದ್ದೇವೆ–

**ಅಪಚ್ಛೇದ ನ್ಯಾಯಸ್ಯ ಚ ನಿರಾಸಾತ್**

'ಪೌರ್ವಾಪರ್ಯೇ ಪೂರ್ವದೌರ್ಬಲ್ಯಂ ಪ್ರಕೃತಿವತ್' (ಜೈ.ಸೂ.6.5.54) ಅಪಚ್ಛೇದಗಳಲ್ಲಿ ಎರಡು ಪ್ರಾಯಶ್ಚಿತ್ತ ನಿಮಿತ್ತಗಳು ಕ್ರಮವಾಗಿ ಬಂದೊದಗಿದಾಗ ಪೂರ್ವಕ್ಕೆ

ಪರದಿಂದ ಬಾಧ. ಪ್ರಕೃತಿಯಾಗದಲ್ಲಿ ಉಕ್ತವಾದ ಕುಶಾದಿಗಳಿಗೆ 'ಶರಮಯಂ ಬರ್ಹಿರ್ಭವತಿ' ಎಂದು ವಿಶೇಷ ವಿಹಿತವಾದ ಶರಾದಿಗಳಿಂದ ಬಾಧ ಬರುವಂತೆ' ಎಂದು ಸೂತ್ರಾರ್ಥ.

ಜ್ಯೋತಿಷ್ಟೋಮವೆಂಬ ಸೋಮಯಾಗದಲ್ಲಿ ಪ್ರಾತಃಸವನದಲ್ಲಿ ಬಹಿಷ್ಪವಮಾನವೆಂಬ ಸ್ತೋತ್ರಗಾನಕ್ಕೆ ಋತ್ವಿಜರು ಮತ್ತು ಯಜಮಾನ ಯಾಗಶಾಲೆಯಿಂದ ಹವಿರ್ಧಾನ ಮಂಡಪದ ಕಡೆಗೆ ಹೋಗಬೇಕು. ಆಗ ಇರುವೆ ಸಾಲಿನಂತೆ ಒಬ್ಬರ ಹಿಂದೆ ಒಬ್ಬರಂತೆ ಕ್ರಮವಾಗಿ ಅಧ್ವರ್ಯು ಪ್ರಸ್ತೋತೃ ಪ್ರತಿಹರ್ತೃ ಉದ್ಗಾತೃ ಬ್ರಹ್ಮ ಯಜಮಾನ ಮತ್ತು ಪ್ರಶಾಸ್ತೃಗಳು ಮುಂದಿನವನ ಕಚ್ಚೆಯನ್ನು ಹಿಂದಿನವನು ಸ್ಪರ್ಶಿಸುತ್ತ ನಡೆಯಬೇಕು. ಸ್ಪರ್ಶವನ್ನು ಬಿಟ್ಟರೆ ಅದು ಅಪಚ್ಛೇದವೆನಿಸುತ್ತದೆ. ಅದಕ್ಕೆ ಪ್ರಾಯಶ್ಚಿತ್ತಗಳು ಉಕ್ತವಾಗಿವೆ.

ಪ್ರಸ್ತೋತೃ ಅಧ್ವರ್ಯುವಿನ ಕಚ್ಚೆಯನ್ನು ಬಿಟ್ಟರೆ, ಬ್ರಹ್ಮನಿಗೆ, ಅವನ ಇಷ್ಟವಾದಷ್ಟು ದಕ್ಷಿಣೆ ನೀಡಬೇಕು. ಪ್ರತಿಹರ್ತೃ ಪ್ರಸ್ತೋತನ ಕಚ್ಚೆ ಬಿಟ್ಟರೆ ಸರ್ವಸ್ವದಾನವು ಪ್ರಾಯಶ್ಚಿತ್ತ. ಉದ್ಗಾತೃ ಪ್ರತಿಹರ್ತನ ಕಚ್ಚೆ ಬಿಟ್ಟರೆ ದಕ್ಷಿಣೆಯಿಲ್ಲದೆ ಆ ಯಾಗ ಸಮಾಪ್ತಿಮಾಡಿ ತಿರುಗಿ ಯಾಗ ಮಾಡಬೇಕು. ಆ ಯಾಗದಲ್ಲಿ ಹಿಂದೆ ಕೊಡಬೇಕಾಗಿದ್ದ ದಕ್ಷಿಣೆ ನೀಡಬೇಕು.

ಕ್ರಮೇಣ ಉದ್ಗಾತೃವೂ ಪ್ರತಿಹರ್ತೃವೂ ಇಬ್ಬರೂ ಅಪಚ್ಛೇದ ಮಾಡಿದರೆ, ಮೊದಲಿನ ಉದ್ಗಾತ್ರಪಚ್ಛೇದ ನಿಮಿತ್ತವಾಗಿ ದಕ್ಷಿಣೆಯಿಲ್ಲದೆ ಯಾಗ ಸಮಾಪ್ತಿ ಮಾಡಬೇಕೆ? ಅಥವಾ ಪ್ರತಿಹರ್ತ್ರಪಚ್ಛೇದ ಪ್ರಯುಕ್ತ ಸರ್ವಸ್ವ ದಾನ ಮಾಡಬೇಕೆ? ಎಂಬ ಪ್ರಶ್ನೆ ಬಂದಾಗ ಪೂರ್ವಕ್ಕೆ ಅನುಪಸಂಜಾತ ವಿರೋಧನ್ಯಾಯದಿಂದ ಪ್ರಾಬಲ್ಯವಿಟ್ಟುಕೊಂಡು ಅದಕ್ಕೆ ಪ್ರಾಯಶ್ಚಿತ್ತ ಮಾಡುವುದೂ ಅಲ್ಲ. ಪೂರ್ವಪರಗಳಿಗೆ ಸಮಬಲತ್ವವಿಟ್ಟುಕೊಂಡು ಎರಡು ಪ್ರಾಯಶ್ಚಿತ್ತಗಳಿಗೆ ವಿಕಲ್ಪವೂ ಅಲ್ಲ, ಪರಪ್ರಾಬಲ್ಯವಿಟ್ಟುಕೊಂಡು ಪ್ರತಿಹರ್ತ್ರಪಚ್ಛೇದ ನಿಮಿತ್ತಕವಾದ ಸರ್ವಸ್ವದಾನವನ್ನೇ ನೀಡಬೇಕೆಂದು ಸಿದ್ಧಾಂತ ಮಾಡಿದ್ದಾರೆ.

ಪರಪ್ರಾಬಲ್ಯ ಹೇಗೆಂದರೆ ಉಪಕ್ರಮೋಪಸಂಹಾರಗಳಲ್ಲಿ ಪ್ರಥಮ ಪ್ರವೃತ್ತವಾದ ಉಪಕ್ರಮವು ಅನುಪಸಂಜಾತ ವಿರೋಧಿಯಾದ್ದರಿಂದ ಅದು ಪ್ರಬಲವಾದ ಪ್ರಯುಕ್ತ ಉಪಕ್ರಮದೊಂದಿಗೆ ಏಕವಾಕ್ಯವಾಗಿ ಬರುವ ಉಪಸಂಹಾರವು ಉಪಕ್ರಮಾನುಸಾರಿಯಾಗಬೇಕು. ಉಪಕ್ರಮವನ್ನು ವಿರೋಧಿಸುವುದಾದರೆ ಅದು ಹುಟ್ಟುವುದೆ ಇಲ್ಲ. ಆದರೆ ಅಪಚ್ಛೇದ ಸ್ಥಳದಲ್ಲಿ ನಿಮಿತ್ತದ್ವಯ ಪರಸ್ಪರ ನಿರಪೇಕ್ಷವಾಗಿ ಹುಟ್ಟುವುದರಿಂದ ಪರನಿಮಿತ್ತಕ್ಕೆ ಪ್ರಾಬಲ್ಯಯುಕ್ತ. ಪರನಿಮಿತ್ತಜ್ಞಾನ ಹುಟ್ಟುವಾಗ ಪೂರ್ವನಿಮಿತ್ತದ ಜ್ಞಾನವನ್ನು ಬಾಧಿಸುತ್ತಲೇ ಹುಟ್ಟುತ್ತದೆ. ಆದರಿಂದ ಪೂರ್ವನಿಮಿತ್ತಜ್ಞಾನ ಕಾರ್ಯಕಾರಿಯಾಗುವುದಿಲ್ಲ. ಉತ್ತರನಿಮಿತ್ತ ಜ್ಞಾನಕ್ಕೆ ಬಾಧಕವಿಲ್ಲದ್ದರಿಂದ ಅದನ್ನೇ ಅನುಷ್ಠಾನ ಮಾಡಬೇಕು. ಪ್ರಕೃತ ನಿರ್ಗುಣಜ್ಞಾನವೇ ಪ್ರಬಲ, ಬಾಧಕರಹಿತವಾದ್ದರಿಂದ ಅದನ್ನೇ ಆದರಿಸಬೇಕು. ಎಂದು ಅದ್ವೈತಿಯ ಆಕ್ಷೇಪ.

ಆದರೆ ಸಗುಣ ನಿರ್ಗುಣ ವಾಕ್ಯಗಳಿಗೆ ಪೌರ್ವಾಪರ್ಯವಿದ್ದರೂ ಬಾಧ್ಯಬಾಧಕಭಾವಕ್ಕೆ ಅಷ್ಟುಮಾತ್ರವೇ ಪ್ರಯೋಜಕವಲ್ಲ. ಉಪಜೀವ್ಯವು ಉಪಜೀವಕಕ್ಕೆ ಬಾಧಕವಾಗುತ್ತದೆ. ಅಪಚ್ಛೇದಗಳಲ್ಲಿ ಪೂರ್ವಪರಗಳಿಗೆ ಉಪಜೀವ್ಯ–ಉಪಜೀವಕ ಭಾವವಿಲ್ಲ. ಅಲ್ಲಿ ಪೂರ್ವದೌರ್ಬಲ್ಯವನ್ನು ಮೀಮಾಂಸಕರು ಹೇಳಲಿ. ಉಪಜೀವ್ಯ ಉಪಜೀವಕಭಾವವಿರುವಲ್ಲಿ ಉಪಜೀವ್ಯವು ಪೂರ್ವಪ್ರವೃತ್ತವಾದ ಮಾತ್ರಕ್ಕೆ ದುರ್ಬಲವಾಗುವುದಿಲ್ಲ. ಅದು ಪ್ರಬಲವೆ. ಸಗುಣವಾಕ್ಯ ಪೂರ್ವಪ್ರವೃತ್ತನಾದರೂ ಉಪಜೀವ್ಯವಾದ್ದರಿಂದ ಪ್ರಬಲ. ಅದೇ ನಿರ್ಗುರ್ಣವಾಕ್ಯಕ್ಕೆ ಬಾಧಕವಾಗುತ್ತದೆ.

ಮೊದಲಿಗೆ ಪ್ರತಿಹರ್ತ್ರಪಚ್ಛೇದ, ಬಳಿಕ ಉದ್ಗಾತ್ರಪಚ್ಛೇದವಾದಲ್ಲಿ ಪರದಿಂದ ಪೂರ್ವಬಾಧ. ಪರವಾದ ಉದ್ಗಾತ್ರಪಚ್ಛೇದ ಪ್ರಯುಕ್ತವಾಗಿ ದಕ್ಷಿಣೆ ಇಲ್ಲದೇ ಯಾಗ ಮುಗಿಸಬೇಕು. ಬಳಿಕ ತಿರುಗಿ ಯಾಗ ಮಾಡಿ ಹಿಂದೆ ಕೊಡಬೇಕಾಗಿದ್ದ ದಕ್ಷಿಣೆಯನ್ನು ಆಗ ಕೊಡಬೇಕು ಎಂದಿದ್ದಾರೆ ಮೀಮಾಂಸಕರು. ಆದರೆ ಈ ಬಾಧ ಅತ್ಯಂತ ಬಾಧವೇನಲ್ಲ. ಪ್ರತಿಹರ್ತ್ರಪಚ್ಛೇದ ಪ್ರಾಯಶ್ಚಿತ್ತ ವಿಧಿಗೆ ಪ್ರತಿಹರ್ತ್ರಪಚ್ಛೇದ ಮಾತ್ರ ಸಂಭವಿಸಿದ ಸ್ಥಳದಲ್ಲಾಗಲಿ, ಪ್ರತಿಹರ್ತ್ರಪಚ್ಛೇದವು ಪರವಾದ ಸ್ಥಳದಲ್ಲಾಗಲಿ ಅವಕಾಶವಿದ್ದೇ ಇದೆ.

ಪ್ರತಿಹರ್ತ್ಯ ಉದ್ಗಾತ್ರಪಚ್ಛೇದಗಳು ಒಮ್ಮೆಲೆ ಸಂಭವಿಸಿದಾಗಲೂ ಸರ್ವಸ್ವದಾನ ತದಭಾವಗಳಿಗೆ ವಿಕಲ್ಪ ಬರುವುದರಿಂದ ಪ್ರತಿಹರ್ತ್ರಪಚ್ಛೇದ ಪ್ರಯುಕ್ತ ಸರ್ವಸ್ವದಾನಕ್ಕೆ ಪಾಕ್ಷಿಕವಾಗಿ ಬಾಧವೇ ಹೊರತು ಸರ್ವಥಾ ಬಾಧವಿಲ್ಲ—

'ತತ್ರವಿಪ್ರತಿಷೇಧಾದ್ ವಿಕಲ್ಪಃ ಸ್ಯಾತ್' (6.5.51) 'ಎರಡು ಅಪಚ್ಛೇದಗಳು ಒಮ್ಮೆಲೆ ಸಂಭವಿಸಿದಾಗ ಪರಸ್ಪರ ವಿರೋಧದಿಂದ ವಿಕಲ್ಪ ಉಂಟಾಗುತ್ತದೆ' ಎಂದು ಸೂತ್ರಾರ್ಥ. ಉದ್ಗಾತ್ರ ಪಚ್ಛೇದ ಪ್ರಯುಕ್ತವಾಗಿ ಯಾಗವನ್ನು ಎರಡುಬಾರಿ ಮಾಡುವುದು ಆವಶ್ಯಕವಾಗುವುದರಿಂದ ಮೊದಲಬಾರಿಗೆ ದಕ್ಷಿಣಾಭಾವ, ಎರಡನೆಬಾರಿಗೆ ಸರ್ವಸ್ವದಾನ ಎಂದು ಒಂದೇ ಯಾಗದಲ್ಲಿ ಎರಡೂ ಪ್ರಾಯಶ್ಚಿತ್ತಗಳಿಗೆ ಅವಕಾಶವಿದೆ. ಹೀಗಾಗಿ ಸಮುಚ್ಚಯ ಎಂದು ಪೂರ್ವಪಕ್ಷ ಬಂದರೆ, ಸಿದ್ಧಾಂತ— ಯಾಗದ ಮೊದಲನೆ ಪ್ರಯೋಗದಲ್ಲಿ ಪ್ರತಿಹರ್ತ್ರಪಚ್ಛೇದರೂಪ ನಿಮಿತ್ತವಿರುವುದ ರಿಂದ ಆ ಪ್ರಯೋಗದಲ್ಲಿಯೇ ಸರ್ವಸ್ವದಾನರೂಪ ಪ್ರಾಯಶ್ಚಿತ್ತ ವಿಹಿತ. ಎರಡನೆ ಪ್ರಯೋಗದಲ್ಲಿ ಆ ನಿಮಿತ್ತವಿಲ್ಲದ್ದರಿಂದ ಪ್ರಾಯಶ್ಚಿತ್ತಕ್ಕೆ ಅವಕಾಶವಿಲ್ಲ. ಹೀಗಾಗಿ ಒಂದೇ ಪ್ರಯೋಗದಲ್ಲಿ ಉದ್ಗಾತೃಪ್ರತಿಹರ್ತ್ರಪಚ್ಛೇದ ಪ್ರಾಯಶ್ಚಿತ್ತಗಳು ಸರ್ವಸ್ವದಾನ ದಕ್ಷಿಣಾಭಾವ ಎರಡೂ ಪ್ರಾಪ್ತವಾಗುವುದರಿಂದ, ಅವುಗಳಿಗೆ ಭಾವಾಭಾವರೂಪ ವಿರೋಧವಿರುವಾಗ ಸಮುಚ್ಚಯ ಕೂಡದಿರುವುದರಿಂದ ವಿಕಲ್ಪವೆ ಯುಕ್ತ. ಅದು ಅಷ್ಟದೋಷ ದುಷ್ಟವಾದರೂ ಆ ದೋಷವನ್ನು ಸಹಿಸಿಕೊಳ್ಳಬೇಕು ಎಂದು.

ವಸ್ತುತಃ 'ಪ್ರಯೋಗಾಂತರೇ ನಿಕ್ಷೇಪಃ' 'ಎರಡನೇ ಪ್ರಯೋಗದಲ್ಲಿ ನಿಮಿತ್ತವಿಲ್ಲದಿದ್ದರೂ ಪ್ರಾಯಶ್ಚಿತ್ತಾನುಷ್ಠಾನ ಅನುಮತ'ವೆಂದು ಮೀಮಾಂಸಕಮತವಿರುವುದರಿಂದ ಬಾಧ ಬರಲೇ ಇಲ್ಲ.

'ಯದ್ಯುದ್ಗಾತಾ ಜಘನ್ಯಃ ಸ್ಯಾತ್ ಪುನರ್ಯಜ್ಞೇ ಸರ್ವವೇದಸಂ ದದ್ಯಾತ್' (ಜೈ.ಸೂ.6.5.55) 'ಉದ್ಗಾತ್ರಪಚ್ಛೇದವು ಪ್ರತಿಹರ್ತ್ರಪಚ್ಛೇದದ ಅನಂತರ ಸಂಭವಿಸಿದ ಸ್ಥಳದಲ್ಲಿ ಪುನಃ ಪ್ರಯೋಗದಲ್ಲಿ ಸರ್ವಸ್ವದಾನವನ್ನೇ ಮಾಡಬೇಕು ಹೊರತು ಸಾಧಾರಣವಾಗಿ ಕೊಡುವ ದ್ವಾದಶ ಶತ ದಕ್ಷಿಣೆಯನ್ನಲ್ಲ' ಎಂದು ಸೂತ್ರಾರ್ಥ. ಎರಡನೆ ಪ್ರಯೋಗದಲ್ಲಿ ಏನು ದಕ್ಷಿಣೆ ನೀಡಬೇಕೆಂದರೆ 'ತತ್ರ ತದ್ ದದ್ಯಾತ್ ಯತ್ ಪೂರ್ವಸ್ಮಿನ್ ದಾಸ್ಯನ್ ಸ್ಯಾತ್' 'ಪ್ರಥಮ ಪ್ರಯೋಗದಲ್ಲಿ ಏನು ಕೊಡಬೇಕಾಗಿತ್ತೋ ಅದನ್ನು ಎರಡನೆ ಪ್ರಯೋಗದಲ್ಲಿ ಕೊಡಬೇಕು' ಎಂದು ವಿಧಿ ಇದೆ. ಈಗ ಸಂಶಯ— ಸಾಧಾರಣವಾಗಿ ಯಜ್ಞದಲ್ಲಿ ನೀಡುವ ದ್ವಾದಶಶತದಕ್ಷಿಣೆಯೋ, ಅಥವಾ ಪ್ರಾಯಶ್ಚಿತ್ತವಾಗಿ ನೀಡುವ ಸರ್ವಸ್ವದಾನವೋ? ಎರಡೂ ಪ್ರಥಮ ಪ್ರಯೋಗದಲ್ಲಿ ವಿಹಿತವಾಗಿವೆ ತಾನೆ?

'ಸ್ವಾಭಾವಿಕವಾಗಿ ಪ್ರಾಪ್ತವಾಗುವ ದ್ವಾದಶ ಶತವೇ ಯುಕ್ತ, ಆಗಂತುಕವಾಗಿ ಬಂದ ಸರ್ವಸ್ವದಾನವಲ್ಲ' ಎಂದು ಪೂರ್ವಪಕ್ಷ.

**ಸಿದ್ಧಾಂತ**—ಪ್ರಥಮಪ್ರಯೋಗದಲ್ಲಿ ಮೊದಲಿಗೆ ಸ್ವಾಭಾವಿಕವಾಗಿ ದ್ವಾದಶಶತದಕ್ಷಿಣೆಯೇ ಪ್ರಾಪ್ತವಾಗಿದ್ದರೂ ಅದು ಅನಂತರ ಅಲ್ಲಿಯೇ ಬರುವ ಆಗಂತುಕವಾದ ಸರ್ವಸ್ವದಾನದಿಂದ ಬಾಧಿತವಾಯಿತು. ಹೀಗಾಗಿ 'ಪ್ರಥಮ ಪ್ರಯೋಗದಲ್ಲಿ ಏನು ಕೊಡಬೇಕಾಗಿತ್ತೋ ಅದು' ಎಂದರೆ ಸರ್ವಸ್ವದಾನವೆ. ಅದು ಬಾಧಿತವಾಗಿಲ್ಲ.

ಅದರಿಂದ ಅಪಚ್ಛೇದಗಳಲ್ಲಿ ಪೂರ್ವಕ್ಕೆ ಪರದಿಂದ ಬಾಧವೆ ಇಲ್ಲ. ಪೂರ್ವದ ಸಗುಣಶ್ರುತಿಯನ್ನು ಪರವಾದ ನಿರ್ಗುಣಶ್ರುತಿಯು ಬಾಧಿಸುತ್ತದೆ ಎನ್ನಲು ಅಪಚ್ಛೇದ ನ್ಯಾಯವನ್ನು ಭಾಮತೀಕಾರ ಉದಾಹರಿಸಿದ್ದು ಅಸಂಗತ.

**ನ ಚ ನಿರ್ಗುಣತ್ವಂ ಪುರುಷಾರ್ಥಃ ಯೇನ ತದ್‌ವಾಕ್ಯಂ ತತ್ಪರಂ ಸ್ಯಾತ್ । ಕಿಂತು ಗುಣಿತ್ವೈವ ।**

'ನಿರ್ಗುಣತ್ವವು ಪುರುಷಾರ್ಥವಾದ್ದರಿಂದ ಅಂದರೆ ಲೋಕಕ್ಕೆ ಇಷ್ಟವಾದ್ದರಿಂದ, ನಿರ್ಗುಣವಾಕ್ಯಕ್ಕೆ ಅದರಲ್ಲಿ ತಾತ್ಪರ್ಯವಿದೆ' ಎನ್ನುವುದು ಸರಿಯಲ್ಲ, ಗುಣಪೂರ್ಣತ್ವವೇ ಪುರುಷಾರ್ಥ, ಎಲ್ಲರಿಗೂ ಅದೇ ಇಷ್ಟವಾಗಿರುವುದು ಲೋಕದಲ್ಲಿ ಕಂಡಿದೆ.

**ನ ಚ ನಿರ್ಗುಣಜ್ಞಾನಸ್ಯ ಮೋಚಕತ್ವಾತ್ 'ಫಲವತ್‌ಸನ್ನಿಧೌ' ಇತಿ ನ್ಯಾಯೇನ ಸಗುಣವಾಕ್ಯಂ ತದನುಗುಣಂ ನೇಯಮಿತಿ ಯುಕ್ತಂ । ಸಗುಣಜ್ಞಾನಸ್ಯೈವ ಮೋಚಕತ್ವೋಕ್ತೇಃ ।**

ನಿರ್ಗುಣಜ್ಞಾನವೇ ಮೋಕ್ಷಸಾಧನವಾಗಿರುವುದರಿಂದ 'ಫಲವತ್ ಸನ್ನಿಧೌ ಅಫಲಂ ತದಂಗಂ' ಫಲೋಕ್ತಿಯುಳ್ಳ ವಾಕ್ಯದ ಸಮೀಪದಲ್ಲಿ ಫಲೋಕ್ತಿ ಇಲ್ಲದ ವಾಕ್ಯವಿದ್ದರೆ ಅದು ಫಲೋಕ್ತಿಉಳ್ಳ ವಾಕ್ಯಕ್ಕೆ ಅಂಗವಾಗಿರುತ್ತದೆ' ಎಂಬ ನ್ಯಾಯದಂತೆ, ಅಫಲವಾದ ಸಗುಣವಾಕ್ಯವು ಫಲವತ್ತಾದ ನಿರ್ಗುಣವಾಕ್ಯಕ್ಕೆ ಅಂಗವಾಗುವುದು. ಆದರಿಂದ ಅದು ಪ್ರಧಾನವಾದ ನಿರ್ಗುಣವಾಕ್ಯಾನುಸಾರವಾಗಿಯೇ ಅರ್ಥಕೊಡುವುದು ಹೊರತು ವಿರುದ್ಧವಾಗಿ ಅಲ್ಲ' ಎಂದರೆ ಅದು ಸರಿಯಲ್ಲ. 'ತಮೇವಂ ವಿದ್ವಾನ್ ಅಮೃತ ಇಹ ಭವತಿ' ಸಗುಣಜ್ಞಾನಿಯೇ ಮುಕ್ತನಾಗುತ್ತಾನೆ' ಸಗುಣಜ್ಞಾನವೇ ಮೋಚಕ, ನಿರ್ಗುಣಜ್ಞಾನ ಮೋಚಕವಲ್ಲ ಎಂದು ಹಿಂದೆಯೆ ಹೇಳಿದ್ದೇವೆ.

**ತಸ್ಮಾತ್ ಸಗುಣತ್ವ ನಿರ್ಗುಣತ್ವಯೋರ್ವಿರೋಧೇನ ಸಮುಚ್ಚಯಾಯೋಗಾತ್, ಅನುಷ್ಠಾನ ಇವ ಚ ವಸ್ತುನಿ ವಿಕಲ್ಪಾಸಂಭವಾತ್, ಏಕೇನಾನ್ಯಸ್ಯ ಪ್ರತೀತಾರ್ಥತ್ಯಾಗ ರೂಪೇ ಬಾಧೇ ವಕ್ತವ್ಯೇ, ನಿರ್ಗುಣವಾಕ್ಯಸ್ಯೈವ ಸ ಯುಕ್ತೋ, ನತು ಪ್ರಬಲಸ್ಯ ಸಗುಣವಾಕ್ಯಸ್ಯ।**

ಹೀಗಾಗಿ ಪ್ರಬಲ ದುರ್ಬಲಗಳಾಗಿರುವ ಸಗುಣತ್ವ ನಿರ್ಗುಣತ್ವಗಳಿಗೆ ವಿರೋಧವಿರುವಾಗ ಅವುಗಳಿಗೆ ಸಮುಚ್ಚಯ ಕೂಡುವುದಿಲ್ಲ. ಬ್ರಹ್ಮನಲ್ಲಿ ಸಗುಣತ್ವ ನಿರ್ಗುಣತ್ವಗಳು ಎರಡೂ ಜೊತೆಗೆ ಇವೆ ಎನ್ನಲಾಗುವುದಿಲ್ಲ. ಅಸಿದ್ಧಕ್ರಿಯಾರೂಪವಾದ ಅನುಷ್ಠಾನದಲ್ಲಿ 'ಹಾಗೂ ಮಾಡಬಹುದು ಹೀಗೂ ಮಾಡಬಹುದು' ಎಂದು ವಿಕಲ್ಪ ಕೂಡಿದರೂ ಸಿದ್ಧವಸ್ತುವಿನಲ್ಲಿ ವಿಕಲ್ಪ ಅಸಂಭವ. ಅನುಷ್ಠಾನವು ಅಸಿದ್ಧವಾದ ಕ್ರಿಯೆ. ಎರಡು ವಿರುದ್ಧ ಅನುಷ್ಠಾನಗಳನ್ನು ವಿಕಲ್ಪದಿಂದ ಮಾಡಬಹುದು. ಈ ಕ್ರಿಯೆಯನ್ನು ಮಾಡಬಹುದು ಅಥವಾ ಆ ಕ್ರಿಯೆಯನ್ನೂ ಮಾಡಬಹುದು. ಇಚ್ಛೆಯು ಇಲ್ಲಿ ನಿಯಾಮಕ. ಆದರೆ ಸಿದ್ಧವಾದ ವಸ್ತುವಿನ ಸ್ವಾಭಾವಿಕವಾದ ಯಾವದ್ ದ್ರವ್ಯಭಾವಿಯಾದ ಧರ್ಮವನ್ನು ಬದಲಿಸಲಾಗದು. 'ಈ ವಸ್ತು ಘಟವೂ ಆಗಿರಬಹುದು. ಪಟವೂ ಆಗಿರಬಹುದು' ಎನ್ನಲಾಗದು. ಘಟದಲ್ಲಿ ಇಚ್ಛಾನುಸಾರ ಘಟತ್ವವನ್ನು ದೂರಮಾಡಿ ಪಟತ್ವವನ್ನು ತಂದು ಸೇರಿಸಲಾಗದು—'ವಸ್ತುನಿ ವಿಕಲ್ಪಾಸಂಭವಾತ್' ಸಗುಣದಲ್ಲಿ ಇಚ್ಛಾನುಸಾರ ಸಗುಣತ್ವವನ್ನು ತೆಗೆದು ನಿರ್ಗುಣತ್ವವನ್ನು ತಂದುಹಾಕಲು ಬರುವುದಿಲ್ಲ.

ಹೀಗೆ ಸಗುಣತ್ವನಿರ್ಗುಣತ್ವಗಳಿಗೆ ವಿರೋಧವಿರುವಾಗ ಅವುಗಳಿಗೆ ಸಮುಚ್ಚಯವನ್ನಾಗಲಿ ವಿಕಲ್ಪವನ್ನಾಗಲಿ ಮಾಡಲು ಶಕ್ಯವಿಲ್ಲದಿರುವುದರಿಂದ ಒಂದು ಇನ್ನೊಂದನ್ನು ಬಾಧಿಸುತ್ತದೆ ಎಂದೇ ಹೇಳಬೇಕು. ಶ್ರುತಿ ಅಪೌರುಷೇಯವಾಗಿದ್ದು ಪ್ರಮಾಣವೇ ಆಗಿರುವುದರಿಂದ ಅಪ್ರಾಮಾಣ್ಯ ರೂಪವಾದ ಬಾಧವನ್ನು ಎರಡಕ್ಕೂ ಹೇಳಲಾಗದು. ಆದರೆ ಅವುಗಳ ಪ್ರತೀತಾರ್ಥತ್ಯಾಗ ಮಾಡಿ ಅರ್ಥಾಂತರಪರವಾಗಿ ಗ್ರಹಿಸಬಹುದು. ಶ್ರುತಿಗಳಲ್ಲಿ ಪ್ರತೀತಾರ್ಥತ್ಯಾಗವೇ ಬಾಧ. ಇಂಥ ಬಾಧವನ್ನು ಕೂಡ ಸಗುಣವಾಕ್ಯಕ್ಕೆ ಹೇಳಲಾಗದು. ನಿರ್ಗುಣವಾಕ್ಯಕ್ಕೇ ಹೇಳಬೇಕು. ಏಕೆಂದರೆ ಸಗುಣವಾಕ್ಯ ಪ್ರಬಲ.

**ತಸ್ಯ ಪ್ರಾಬಲ್ಯಂ ಚ ಉಪಕ್ರಮಾಧಿಕರಣ ನ್ಯಾಯೇನ ಅನುಪಸಂಜಾತ ವಿರೋಧಿತ್ವಾತ್ ।**

ಸಗುಣವಾಕ್ಯವು ಪ್ರಬಲ ಏಕೆಂದರೆ ಉಪಕ್ರಮಾಧಿಕರಣ ನ್ಯಾಯದಿಂದ ಅನುಪಸಂಜಾತ ವಿರೋಧಿತ್ವವಿರುವುದರಿಂದ. ನಿರ್ಗುಣ ಶ್ರುತಿಯು ಬ್ರಹ್ಮಲ್ಲಿ ಗುಣವಿಲ್ಲವೆಂದು ನಿಷೇಧಮಾಡ ಬೇಕಾದರೆ ಗುಣವು ಬ್ರಹ್ಮನಲ್ಲಿ ಮೊದಲಿಗೆ ಪ್ರಸಕ್ತವಾಗಿರಬೇಕು. ಇಲ್ಲದಿದ್ದರೆ, ಅಪ್ರಸಕ್ತ ನಿಷೇಧ ಮಾಡಿದರೆ, ಉನ್ಮತ್ತವಾಕ್ಯದಂತೆ ಅಪ್ರಮಾಣವಾದೀತು. ಪ್ರಸಕ್ತಿಗಾಗಿ ನಿರ್ಗುಣ ಶ್ರುತಿಯು ಕಾಯ್ದುತಿರುವಾಗ ಸಗುಣಶ್ರುತಿಯು ವಿರೋಧಿಯಾಗಿ ಉಪಸ್ಥಿತವಾಗುತ್ತದೆ. ಹೀಗೆ ನಿರ್ಗುಣಶ್ರುತಿಯು ಉಪಸಂಜಾತ ವಿರೋಧಿ. ಆದರೆ ಸಗುಣ ಶ್ರುತಿಯು ತಾನು ಗುಣವನ್ನು ಹೇಳಲು ನಿರ್ಗುಣಶ್ರುತಿಗೆ ಕಾಯುವುದಿಲ್ಲ. ಅದು ಗುಣವನ್ನು ಹೇಳುವ ಕಾಲದಲ್ಲಿ ನಿರ್ಗುಣಶ್ರುತಿಯು ವಿರೋಧಿಯಾಗಿ ಉಪಸ್ಥಿತವಾಗಿರುವುದಿಲ್ಲ. ಆದರಿಂದ ಅದು ಅನುಪಸಂಜಾತ ವಿರೋಧಿ. ಆದರಿಂದ ಸಗುಣಶ್ರುತಿ ಪ್ರಬಲ. ಇದು ಉಪಕ್ರಮಾಧಿಕರಣ ನ್ಯಾಯ.

ಉಪಕ್ರಮಾಧಿಕರಣದಲ್ಲಿ, ಉಪಕ್ರಮವಾಕ್ಯವು ತನ್ನ ಅರ್ಥವನ್ನು ತಿಳಿಸುವ ಕಾಲದಲ್ಲಿ ಅದಕ್ಕೆ ವಿರುದ್ಧವಾದ ಅರ್ಥವನ್ನು ಹೇಳುವ ಉಪಸಂಹಾರವಾಕ್ಯವು ಉಪಸ್ಥಿತವಾಗಿರುವುದಿಲ್ಲ. ಅದರಿಂದ ಅದು ಅನುಪಸಂಜಾತ ವಿರೋಧಿ. ಉಪಸಂಹಾರವು ಉಪಸಂಜಾತ ವಿರೋಧಿ ತನ್ನ ಅರ್ಥಹೇಳಲು ಹೊರಟಾಗ ವಿರುದ್ಧವಾದ ಉಪಕ್ರಮವಾಕ್ಯದ ಉಪಸ್ಥಿತಿ ಇರುತ್ತದೆ. ಹೀಗಾಗಿ ಅನುಪಸಂಜಾತ ವಿರೋಧಿಯಾದ ಉಪಕ್ರಮವಾಕ್ಯವೇ ಪ್ರಬಲ ಎಂದು ಮೀಮಾಂಸಕರು ಸಿದ್ಧಾಂತ ಮಾಡಿದ್ದಾರೆ.

ಉಪಕ್ರಮಾಧಿಕರಣ ನ್ಯಾಯದಿಂದ ಸಗುಣಶ್ರುತಿ ನಿರ್ಗುಣಶ್ರುತಿಗಿಂತ ಪ್ರಬಲ ಹೇಗೆ ಎಂಬುದು ಆಮೋದದಲ್ಲಿ ಹಿಂದೆ 'ಪ್ರತ್ಯಕ್ಷವು ಜಾತ್ಯಾ ಉಪಕ್ರಮಾದಿ ನ್ಯಾಯಗಳಿಂದ ಲಿಂಗಕ್ಕಿಂತ ಪ್ರಬಲ' ಎಂಬ ಪ್ರಕರಣದಲ್ಲಿ ಹೇಳಿದಂತೆಯೇ ತಿಳಿಯಬೇಕು—

'ಶ್ರುತೇರ್ಜಾತಾಧಿಕಾರಃ ಸ್ಯಾತ್'(ಜೈ.ಸೂ.3.3.1) 'ಉಚ್ಚೈಸ್ತ್ವಾದಿಗಳು, ಮಂತ್ರವಾಚಿ ಋಗಾದಿ ಪದಗಳು ಶ್ರುತವಾಗಿರುವುದರಿಂದ ಮಂತ್ರಧರ್ಮಗಳು' ಎಂದು ಪೂರ್ವಪಕ್ಷ ಸೂತ್ರ. ಸೃಷ್ಟಿಯ ಆದಿಯಲ್ಲಿ ಅಗ್ನಿಯಿಂದ ಋಗ್ವೇದ, ವಾಯುವಿನಿಂದ ಯಜುರ್ವೇದ, ಆದಿತ್ಯನಿಂದ ಸಾಮವೇದವೆಂದು ಮೂರು ವೇದಗಳು ವ್ಯಕ್ತವಾದುವು ಎಂದು ಉಪಕ್ರಮದಲ್ಲಿ ಹೇಳಿ ಉಪಸಂಹಾರದಲ್ಲಿ ಋಕ್ಕನ್ನು 'ಉಚ್ಚೈಃ' ಗಟ್ಟಿಯಾಗಿ, ಯಜುಸ್ಸನ್ನು 'ಉಪಾಂಶು' ಮೆತ್ತಗೆ, ಸಾಮವನ್ನು ಗಟ್ಟಿಯಾಗಿ ಹೇಳಬೇಕು ಎಂದಿದೆ. ಇಲ್ಲಿ ಋಕ್ ಎಂದರೆ ಋಙ್ಮಂತ್ರವೇ ಅಥವಾ ಋಗ್ವೇದವೆ? ಯಜುಸ್ಸೆಂದರೆ ಯಜುರ್ಮಂತ್ರವೇ ಯಜುರ್ವೇದವೆ ? ಸಾಮವೆಂದರೆ ಸಾಮಮಂತ್ರವೆ ಸಾಮವೇದವೆ ? ಎಂದು ಸಂಶಯ.

ಋಕ್ ಯಜುಸ್ ಸಾಮಗಳು ಮಂತ್ರಗಳೇ. ಹೀಗಾಗಿ ಋಙ್ಮಂತ್ರಗಳು ಯಜುರ್ವೇದ

ದಲ್ಲಿಯೂ ಬರುವುದರಿಂದ ಯಜುರ್ವೇದದ ಋಕ್‌ಗಳನ್ನು ಗಟ್ಟಿಯಾಗಿಯೇ ಹೇಳಬೇಕು. ಯಜುರ್ವೇದದಂತೆ ಮೆತ್ತಗೆ ಅಲ್ಲ ಎಂದು ಪೂರ್ವಪಕ್ಷ. ಏಕೆಂದರೆ ಋಚಾ, ಯಜುಷಾ ಸಾಮ್ನಾ ಎಂದು ಮಂತ್ರವಾಚಕವಾದ ಪದಗಳೇ ಉಪಸಂಹಾರದಲ್ಲಿ ಶ್ರುತವಾಗಿವೆ. ಉಪಕ್ರಮದಲ್ಲಿ ಯದ್ಯಪಿ ಋಗ್ವೇದ ಯಜುರ್ವೇದ ಸಾಮವೇದಗಳೆಂದು ವೇದವಾಚಕ ಪದಗಳೇ ಇವೆ. ಆದರೆ ಅವು ಅರ್ಥವಾದಗಳು. ಅರ್ಥವಾದವು ವಿಧಿಗೆ ಅಂಗ, ವಿಧಿಗಿಂತ ಗುಣವಾಗಿದೆ. ಗುಣಪ್ರಧಾನ ಗಳಿಗೆ ವಿರೋಧ ಬಂದಾಗ ಪ್ರಧಾನವಾದ ವಿಧಿವಾಕ್ಯಾನುಸಾರ ಗುಣವಾದ ಅರ್ಥವಾದಕ್ಕೆ ಅರ್ಥಗ್ರಹಿಸಬೇಕು. ಹೀಗಾಗಿ ಉಚ್ಚೈಸ್ತ್ವಾದಿಗಳು ಮಂತ್ರಧರ್ಮಗಳೇ ಹೊರತು ವೇದಧರ್ಮಗಳಲ್ಲ ಎಂದು.

**ಸಿದ್ಧಾಂತ ಹೀಗೆ**—ಪ್ರಧಾನವು ಅಸ್ತಿತ್ವಕ್ಕೆ ಬಂದಾಗಲೇ ಗುಣಕ್ಕಿಂತ ಪ್ರಬಲವೆನಿಸುತ್ತದೆ. ಪ್ರಕೃತ ಪ್ರಧಾನವಾದ ವಿಧಿವಾಕ್ಯ ಉಪಸಂಹಾರದಲ್ಲಿ ಬರುತ್ತದೆ. ಉಪಕ್ರಮದಲ್ಲಿ ಅಂಗವಾದ ಅರ್ಥವಾದ ಬರುತ್ತದೆ. ಅದು ಬರುವಾಗ ಉಪಸಂಹಾರದ ವಿಧಿವಾಕ್ಯ ಇನ್ನೂ ಅಸ್ತಿತ್ವಕ್ಕೇ ಬಂದಿರುವುದಿಲ್ಲ. ಆದರಿಂದ ವಿಧಿವಾಕ್ಯ ಉಪಕ್ರಮದ ಅರ್ಥವಾದಕ್ಕೆ ಅನ್ವಯವಾಗದ ವಿರುದ್ಧವಾಗುವ ಅರ್ಥವನ್ನು ಹೇಳಲಾರದು. ಅವಿರುದ್ಧವಾದ ಅರ್ಥವನ್ನು ಹೇಳಬೇಕಾಗುತ್ತದೆ. ಅದಕ್ಕೆ ಲಕ್ಷಣಾವನ್ನು ಆಶ್ರಯಿಸಬೇಕಾಗುತ್ತದೆ. ಹೀಗಾಗಿ ಉಪಸಂಹಾರದಲ್ಲಿರುವ ವಿಧಿವಾಕ್ಯಗಳು ಉಪಕ್ರಮದ ಅರ್ಥವಾದಗಳಿಗೆ ಅನುಸಾರವಾಗಿ ಲಕ್ಷಣಯಾ ಋಗಾದಿಪದಗಳಿಂದ ಋಗ್ವೇದಾದಿಗಳನ್ನೇ ಹೇಳುತ್ತವೆ. ಆದರಿಂದ ಉಚ್ಚೈಸ್ತ್ವಾದಿಗಳು ಋಗಾದಿ ವೇದಧರ್ಮಗಳೇ ಹೊರತು ಋಗಾದಿ ಮಂತ್ರಧರ್ಮಗಳಲ್ಲ ಎಂದು.

**ಲಿಂಗಾತ್ ಶ್ರುತೇರಿವ ಶೀಘ್ರಗಾಮಿತ್ವಾಚ್ಚ । ನಿರ್ಗುಣಶ್ರುತಿರ್ಹಿ ಪ್ರತಿಯೋಗಿ ಪ್ರತೀತ್ಯಪೇಕ್ಷಯಾ ವಿಲಂಬತೇ ।**

ಲಿಂಗವು ತಾನೇ ಬೋಧಕವಾಗುವುದಿಲ್ಲ. ಬೋಧಕವಾದ ಶ್ರುತಿಯನ್ನು ಕಲ್ಪನೆ ಮಾಡಿಯೇ ಆಮೂಲಕ ಬೋಧಕವಾಗುತ್ತದೆ. ಶ್ರುತಿಯು ಬೇರೆ ಪ್ರಮಾಣವನ್ನು ಕಲ್ಪನೆ ಮಾಡದೆ ತಾನೇ ಬೋಧಕವಾಗುತ್ತದೆ. ಆದರಿಂದ ಲಿಂಗಕ್ಕಿಂತ ಶೀಘ್ರಗಾಮಿಯಾದ ಶ್ರುತಿಯೇ ಲಿಂಗಕ್ಕಿಂತ ಪ್ರಬಲ ಎಂದು ಮೀಮಾಂಸಕರು ಹೇಳಿದ್ದಾರೆ.

ಸಿದ್ಧಾಂತದಲ್ಲಿಯೂ ಲಿಂಗವು ವ್ಯಾಪ್ತಿಪಕ್ಷಧರ್ಮತಾಜ್ಞಾನ ಸಹಕಾರದಿಂದಲೇ ಬೋಧಕ. ಶ್ರುತಿಯು ಬೇರೆ ಪ್ರಮಾಣಗಳ ಅಪೇಕ್ಷೆಯಿಲ್ಲದೆ ಬೋಧಕವಾಗುವುದರಿಂದ ಶೀಘ್ರಗಾಮಿಯಾಗಿ ಪ್ರಬಲವೆನಿಸುತ್ತದೆ.

ಪ್ರಕೃತ ಸಗುಣಶ್ರುತಿಯು ಶೀಘ್ರವಾಗಿ ಗುಣಬೋಧಕ. ನಿರ್ಗುಣಶ್ರುತಿಯು ಗುಣನಿಷೇಧ ಮಾಡಲು ಪ್ರತಿಯೋಗಿಯಾದ ಗುಣವನ್ನು ನೆನಪಿಸುವ ಬೇರೆ ಪ್ರಮಾಣವನ್ನು ಆಶ್ರಯಿಸಿಯೇ

ಗುಣನಿಷೇಧವನ್ನು ಬೋಧಿಸುತ್ತದೆ. ಆದರಿಂದ ವಿಲಂಬದಿಂದ ಪ್ರವೃತ್ತಿಮಾಡಿ ಸಗುಣಶ್ರುತಿಗಿಂತ ದುರ್ಬಲವೆನಿಸುತ್ತದೆ.

ಶ್ರುತಿಲಿಂಗಗಳಲ್ಲಿ ಶೀಘ್ರಪ್ರವೃತ್ತಿ ವಿಲಂಬಪ್ರವೃತ್ತಿಗಳು ಪ್ರಾಬಲ್ಯ ದೌರ್ಬಲ್ಯಗಳಿಗೆ ಕಾರಣವಾಗುವುದು ವೇದದಲ್ಲಿ ಕಂಡಿದೆ ಎನ್ನುತ್ತಾರೆ ಮೀಮಾಂಸಕರು. 'ಶ್ರುತಿ–ಲಿಂಗ—ವಾಕ್ಯ–ಪ್ರಕರಣ–ಸ್ಥಾನ–ಸಮಾಖ್ಯಾನಾಂ ಸಮವಾಯೇ ಪಾರದೌರ್ಬಲ್ಯಂ ಅರ್ಥವಿಪ್ರಕರ್ಷಾತ್' (ಜೈ.ಸೂ.3.3.14) 'ಶ್ರುತಿ ಲಿಂಗ ವಾಕ್ಯ ಪ್ರಕರಣ ಸ್ಥಾನ ಮತ್ತು ಸಮಾಖ್ಯಾ ಎಂಬ ಆರು ವಿನಿಯೋಗ ಪ್ರಮಾಣಗಳು ಪರಸ್ಪರ ವಿರುದ್ಧ ಪ್ರವೃತ್ತಿ ಮಾಡುತ್ತಿದ್ದರೆ ಅವು ಒಂದೆಡೆ ಸೇರಿದಾಗ ಪೂರ್ವಪ್ರಮಾಣಕ್ಕಿಂತ ಪರಪ್ರಮಾಣವು, 'ಅರ್ಥವಿಪ್ರಕರ್ಷ' ಹೆಚ್ಚು ವಿಲಂಬಪ್ರವೃತ್ತಿ ಉಳ್ಳದ್ದಾದ್ದರಿಂದ ದುರ್ಬಲವೆನಿಸುವುದು' ಎಂದು ಸೂತ್ರಾರ್ಥ.

ಶ್ರುತಿ ಮತ್ತು ಲಿಂಗಗಳಿಗೆ ವಿರೋಧ ಬಂದಾಗ ಲಿಂಗಕ್ಕೆ ಶ್ರುತಿಗಿಂತ ವಿಲಂಬ ಪ್ರವೃತ್ತಿ ಇರುವುದರಿಂದ ಲಿಂಗವು ದುರ್ಬಲವೆನ್ನಲು ಉದಾಹರಣೆ— ಅಗ್ನಿಚಯನ ಪ್ರಕರಣದಲ್ಲಿ 'ಐಂದ್ರ್ಯಾ ಗಾರ್ಹಪತ್ಯಂ ಉಪತಿಷ್ಠತೇ' ಅಂದರೆ, 'ಕದಾಚನ ಸ್ತರೀರಸಿ ನೇಂದ್ರ ಸಶ್ಚಸಿ ದಾಶುಷೇ' 'ಹೇ ಇಂದ್ರನೆ ನೀನು ಎಂದೂ ನಮಗೆ ಹಾನಿ ಉಂಟುಮಾಡುವವನಲ್ಲ, ಹವಿಸ್ಸನ್ನು ಅರ್ಪಿಸುವ ಯಜಮಾನನನ್ನು ಅನುಗ್ರಹಿಸುವಿ' ಎಂದು ಇಂದ್ರಮಂತ್ರದಿಂದ ಗಾರ್ಹಪತ್ಯಾಗ್ನಿಯನ್ನು ಸ್ತುತಿಸಬೇಕೆಂದು ವಿಧಿ ಇದೆ. ಇಂದ್ರನನ್ನು ಹೊಗಳುತ್ತಿರುವುದರಿಂದ ಈ ಮಂತ್ರವನ್ನು ಇಂದ್ರೋಪಸ್ಥಾನದಲ್ಲಿ ಹೇಳಬೇಕೆ ಅಥವಾ ಶ್ರುತಿಯು ಈ ಮಂತ್ರದಿಂದ ಗಾರ್ಹಪತ್ಯನನ್ನು ಸ್ತುತಿಸಬೇಕೆಂದು ಹೇಳುವುದರಿಂದ ಗಾರ್ಹಪತ್ಯೋಪಸ್ಥಾನದಲ್ಲಿ ಹೇಳಬೇಕೆ ಎಂದು ಸಂದೇಹ.

ಶ್ರುತಿಯು 'ಐಂದ್ರ್ಯಾ' ಎಂದು ತೃತೀಯಾವಿಭಕ್ತಿಯಿಂದ ಈ ಮಂತ್ರವನ್ನು ಗಾರ್ಹಪತ್ಯೋಪಸ್ಥಾನಾಂಗವಾಗಿ ವಿಧಾನಮಾಡುತ್ತಿರುವಂತೆ ಕಂಡರೂ ಇಂದ್ರನನ್ನು ಸ್ತುತಿಸುವ ಈ ಮಂತ್ರದಿಂದ ಗಾರ್ಹಪತ್ಯೋಪಸ್ಥಾನ ಅಶಕ್ಯ. ಶಕ್ಯವಾದ ಕಾರ್ಯದಲ್ಲಿ ವಿಧಿಯು ಪ್ರವೃತ್ತಿ ಮಾಡಬೇಕು. ಮಂತ್ರಕ್ಕೆ ಶಕ್ತಿ ಇರುವುದು, ಇಂದ್ರೋಪಸ್ಥಾನದಲ್ಲಿ, ಇದು ಮಂತ್ರದ ಲಿಂಗ. ಆದರಿಂದ ಶ್ರುತಿಯು 'ಐಂದ್ರ್ಯಾ' ಎಂಬ ತೃತೀಯಾವಿಭಕ್ತಿಯಿಂದ ಮಂತ್ರಕ್ಕೆ ಗಾರ್ಹಪ್ರತ್ಯೋಪಸ್ಥಾನಾಂಗತ್ವವನ್ನು ವಿಧಿಸುತ್ತಿದ್ದರೂ, 'ಗಾರ್ಹಪತ್ಯ' ಶಬ್ದಕ್ಕೆ ಸದೃಶಲಕ್ಷಣಯಾ ಇಂದ್ರನೆಂದೇ ಅರ್ಥಮಾಡಬೇಕು. ಗಾರ್ಹಪತ್ಯನು ಅಗ್ನಿ, ಇಂದ್ರನು ದೇವತೆ. ಇಬ್ಬರೂ ಯಾಗಕ್ಕೆ ಆವಶ್ಯಕರಾದ್ದರಿಂದ ಸದೃಶರು, ಎಂದು ಪೂರ್ವಪಕ್ಷ.

**ಸಿದ್ಧಾಂತ ಹೀಗೆ—** ಸರ್ವಥಾ ಅಶಕ್ಯವಾದ ಕಾರ್ಯದಲ್ಲಿ ಮಾತ್ರ ವೇದವು ವಿಧಿಯಲ್ಲಿ ಪ್ರವೃತ್ತಿ ಮಾಡಲಾರದು. ಪ್ರಕೃತ ಇಂದ್ರಮಂತ್ರವು ಗಾರ್ಹಪತ್ಯನನ್ನು ಸ್ತುತಿಸುವುದು ಸರ್ವಥಾ ಅಶಕ್ಯವೇನಲ್ಲ. ಅದು ಗೌಣವೃತ್ತಿಯಿಂದ ಗಾರ್ಹಪತ್ಯನನ್ನು ಹೇಳಬಲ್ಲುದು. 'ಇಂದ್ರ ಮಂತ್ರದಿಂದ ಗಾರ್ಹಪತ್ಯೋಪಸ್ಥಾನ'ವನ್ನು ಕೂಡಿಸಲು ಮಂತ್ರದ 'ಇಂದ್ರ' ಶಬ್ದಕ್ಕಾಗಲಿ ವಿಧಿ ವಾಕ್ಯದ

'ಗಾರ್ಹಪತ್ಯ' ಶಬ್ದಕ್ಕಾಗಲಿ ಯಾವುದಾದರೊಂದಕ್ಕೆ ಗೌಣಾರ್ಥ ಕಲ್ಪಿಸುವುದು ಆವಶ್ಯಕವೆಂದಮೇಲೆ ಮಂತ್ರದ ಇಂದ್ರಶಬ್ದಕ್ಕೇ ಗೌಣಾರ್ಥವನ್ನು ಹೇಳುವುದು ಉಚಿತ. ಏಕೆಂದರೆ ವಿಧಿವಾಕ್ಯದಂತೆ ಮಂತ್ರವು ಅಪೂರ್ವವಾದುದನ್ನೇನೂ ಹೇಳಲಾರದು. ಸಿದ್ಧವಿಷಯವನ್ನೇ ಅದು ಹೇಳುತ್ತದೆ. ವಿಧಿವಾಕ್ಯ ಅಪೂರ್ವಕರ್ಮವನ್ನು ಹೇಳುತ್ತದೆ. ಆದರಿಂದ ವಿಧಿಯಲ್ಲಿ ಲಕ್ಷಣಾ ಇಲ್ಲ, ಗೌಣಾರ್ಥಕಲ್ಪನೆ ಉಚಿತವಲ್ಲ. ಹೀಗಾಗಿ ವಿಧಿಗನುಸಾರವಾಗಿ ಮಂತ್ರಕ್ಕೇ ಗಾರ್ಹಪತ್ಯ ಬೋಧಕತ್ವವನ್ನು ಒಪ್ಪಬೇಕು.

ಯದ್ಯಪಿ ವಿಧಿವಾಕ್ಯದಲ್ಲಿ 'ಐಂದ್ರ್ಯಾ' ಎಂಬ ತೃತೀಯಾವಿಭಕ್ತಿ ರೂಪವಾದ ವಿನಿಯೋಕ್ತ್ರೀ ಶ್ರುತಿಯು ಮಂತ್ರವನ್ನು ಗಾರ್ಹಪತ್ಯೋಪಸ್ಥಾನದಲ್ಲಿ ವಿನಿಯೋಗ ಮಾಡುತ್ತಿರುವಾಗಲೇ ಮಂತ್ರದಲ್ಲಿರುವ ಇಂದ್ರಶಬ್ದವು ಮುಖ್ಯವೃತ್ತಿಯಿಂದ ಇಂದ್ರನನ್ನು ಹೇಳುತ್ತಿರುವುದರಿಂದ ಇಂದ್ರಬೋಧನಶಕ್ತಿರೂಪವಾದ ಲಿಂಗವು ಮಂತ್ರವನ್ನು ಇಂದ್ರೋಪಸ್ಥಾನದಲ್ಲಿ ವಿನಿಯೋಗ ಮಾಡಬಲ್ಲುದು. ಆದರೂ ಗಾರ್ಹಪತ್ಯೋಪಸ್ಥಾನಾಂಗತ್ವವನ್ನು ಹೇಳುವ ಶ್ರುತಿ ಪ್ರತ್ಯಕ್ಷವಿದೆ. ಅದು ಶೀಘ್ರವಾಗಿ ಮಂತ್ರವನ್ನು ವಿನಿಯೋಗ ಮಾಡಿಬಿಡುತ್ತದೆ. ಲಿಂಗವು ಶ್ರುತಿಯನ್ನು ಕಲ್ಪಿಸಿ ಇಂದ್ರೋಪಸ್ಥಾನದಲ್ಲಿ ವಿನಿಯೋಗ ಮಾಡುವುದರೊಳಗೆ ಶ್ರುತಿಯು ಗಾರ್ಹಪತ್ಯೋಪಸ್ಥಾನದಲ್ಲಿ ವಿನಿಯೋಗ ಮಾಡಿರುವುದರಿಂದ ಮಂತ್ರವು ಅಷ್ಟರಿಂದಲೆ ಸಾರ್ಥಕವೆನಿಸಿರುತ್ತದೆ. ಆದರಿಂದ ಅದನ್ನು ಇಂದ್ರೋಪಸ್ಥಾನದಲ್ಲಿ ವಿನಿಯೋಗ ಮಾಡುವ ಆವಶ್ಯಕತೆ ಉಳಿಯುವುದಿಲ್ಲ. ಹೀಗಾಗಿ ಇಲ್ಲಿ ಲಿಂಗವು ಶ್ರುತಿಯನ್ನು ಕಲ್ಪಿಸುವುದೇ ಇಲ್ಲ, ಎಂದು.

**'ಪದೇ ಜುಹೋತಿ' ಇತಿವತ್ ವಿಶೇಷ ವಿಷಯತ್ವಾಚ್ಚ। ಸಾರ್ವಜ್ಞ ಶ್ರುತಿರ್ಹಿ ವಿಶಿಷ್ಯ ಸಾರ್ವಜ್ಞಾದಿ ಪರಾ, ನಿರ್ಗುಣ ಶ್ರುತಿಸ್ತು ಸಾಮಾನ್ಯತೋ ಗುಣ ನಿಷೇಧಿಕಾ।**

ಪೂರ್ವಮೀಮಾಂಸದಲ್ಲಿ ಹೇಳಿದಂತೆ 'ಪದೇ ಜುಹೋತಿ' ಎಂದು ಪದಹೋಮ ವಿಧಾಯಕ ವಾಕ್ಯವು ಯಾಗವಿಶೇಷ ವಿಷಯಕ. 'ಆಹವನೀಯೇ ಜುಹೋತಿ' ಎಂದು ಯಾಗಸಾಮಾನ್ಯದಲ್ಲಿ ಆಹವನೀಯವಿಧಿಯು ಯಾಗಸಾಮನ್ಯ ವಿಷಯಕ. ಪ್ರಬಲವಾದ ವಿಶೇಷವಿಷಯಕ ಪದಹೋಮವಾಕ್ಯಾನುಸಾರವಾಗಿ ದುರ್ಬಲವಾಗಿರುವ ಯಾಗ ಸಾಮಾನ್ಯವಿಷಯಕ ಆಹವನೀಯ ವಿಧಿವಾಕ್ಯವನ್ನು ಪದಹೋಮವ್ಯತಿರಿಕ್ತ ಯಾಗವಿಷಯವಾಗಿ ಸಂಕೋಚ ಮಾಡಬೇಕು. ಪ್ರಕೃತ 'ಸಾಕ್ಷೀ ಚೇತಾ ಕೇವಲೋ ನಿರ್ಗುಣಶ್ಚ' ಎಂಬ ನಿರ್ಗುಣಶ್ರುತಿಯು ಸಾಮಾನ್ಯತಃ ಗುಣನಿಷೇಧ ಮಾಡುವುದರಿಂದ ಗುಣಸಾಮಾನ್ಯವಿಷಯಕ ದುರ್ಬಲ. 'ಯಃ ಸರ್ವಜ್ಞಃ' ಇತ್ಯಾದಿ ಸಗುಣಶ್ರುತಿಯು ಸಾರ್ವಜ್ಞಾದಿ ವಿಶೇಷಗುಣವಿಧಾಯಕವಾದ್ದರಿಂದ ಗುಣವಿಶೇಷವಿಷಯಕ, ಪ್ರಬಲ. ಅದು ದುರ್ಬಲವಾದ ನಿರ್ಗುಣಶ್ರುತಿಯನ್ನು ಸಾರ್ವಜ್ಞಾದೀತರ ಗುಣತ್ರಯಾದಿ ನಿಷೇಧಕವಾಗುವಂತೆ ಸಂಕೋಚಗೊಳಿಸುತ್ತದೆ.

ಇಲ್ಲಿ 'ನಿರ್ಗುಣಶ್ರುತಿ' ಎಂದರೆ ಗುಣಸಾಮಾನ್ಯನಿಷೇಧಕವಾದ 'ನಿರ್ಗುಣಶ್ಚ' ಎಂಬ ಶ್ರುತಿ ಎಂದಿಟ್ಟುಕೊಂಡು ಪ್ರಾಬಲ್ಯ ದೌರ್ಬಲ್ಯ ವಿಚಾರ ಮಾಡಿದ್ದಾರೆ. 'ಅಶಬ್ದಮಸ್ಪರ್ಶ

ಮರೂಪಮವ್ಯಯಂ' 'ಅಸ್ಥೂಲಮನಣು' ಇತ್ಯಾದಿ ವಿಶೇಷ ವಿಷಯಕ ನಿರ್ಗುಣ ಶ್ರುತಿಯನ್ನಿಟ್ಟುಕೊಳ್ಳುವುದಾದರೆ, ಹಿಂದೆ ಹೇಳಿದಂತೆ ಉಪಕ್ರಮಾಧಿಕರಣ ನ್ಯಾಯ, ಲಿಂಗಾತ್ ಶ್ರುತಿ ಶೀಘ್ರಗಾಮಿ ಎಂಬ ನ್ಯಾಯಗಳಿಂದಲೇ ಸಗುಣ ಶ್ರುತಿಗೆ ಪ್ರಾಬಲ್ಯವೆಂದು ತಿಳಿಯಬೇಕು. 'ಅದುಃಖಮಸುಖಂ' ಇತ್ಯಾದಿ ಶ್ರುತಿಗಳು ಚೇತನತ್ವಾದಿನಾ ಪ್ರಸಕ್ತವಾದ ಸುಖದುಃಖಾದಿಗಳನ್ನು ನಿಷೇಧಿಸುವಂತೆ 'ಅಶಬ್ದಮಸ್ಪರ್ಶಂ' ಇತ್ಯಾದಿ ಶ್ರುತಿಯೂ ವಾಕ್ಯಾಂತರಗಳಿಂದ ಪ್ರಸಕ್ತವಾದ ಶಬ್ದಸ್ಪರ್ಶಾದಿ ನಿಷೇಧಕವಾಗುವುದರಿಂದ ಪ್ರತಿಯೋಗಿಪ್ರಸಕ್ತಿ ಸಾಪೇಕ್ಷವಾಗಿ ವಿಲಂಬಪ್ರವೃತ್ತಿ ಮಾಡುವುದರಿಂದಲೆ ದುರ್ಬಲವೆನ್ನಬೇಕು.

'ಅವಿಶೇಷೇಣ ಯಚ್ಛಾಸ್ತ್ರಂ, ಅನ್ಯಾಯ್ಯತ್ವಾತ್ ವಿಕಲ್ಪಸ್ಯ ತತ್ ಸಂದಿಗ್ಧಂ, ಆರಾದ್ ವಿಶೇಷಶಿಷ್ಟಂ ಸ್ಯಾತ್'(ಜೈ.ಸೂ.10.8.16) 'ಅವಿಶೇಷೇಣ ಶಾಸ್ತ್ರ' ಅಂದರೆ ಆಹವನೀಯವಿಧಾಯಕ ಸಾಮಾನ್ಯಶಾಸ್ತ್ರವು ವಿಲಂಬ ಪ್ರವೃತ್ತಿ ಮಾಡುತ್ತ ಸಂದಿಗ್ಧವಾಗಿದೆ. ಪದಹೋಮಾದಿ ವಿಧಾಯಕ ವಿಶೇಷಶಾಸ್ತ್ರ ಅದಕ್ಕಿಂತ 'ಆರಾತ್' ದೂರದಲ್ಲಿರುತ್ತದೆ. ಅಂದರೆ, ವಿಶೇಷಶಾಸ್ತ್ರದ ವಿಷಯದಲ್ಲಿ ಸಾಮಾನ್ಯಶಾಸ್ತ್ರವು ಪ್ರವೃತ್ತಿ ಮಾಡುವುದೇ ಇಲ್ಲ. ಹೀಗಾಗಿ ಎರಡೂ ಶಾಸ್ತ್ರಗಳನ್ನು ಸಮಬಲವೆಂದು ತಪ್ಪಾಗಿ ತಿಳಿದು ವಿಕಲ್ಪವನ್ನು ಅಂಗೀಕರಿಸುವುದು ನ್ಯಾಯವಲ್ಲ' ಎಂದು ಸೂತ್ರಾರ್ಥ.

ಪದಹೋಮ—ಸೋಮಕ್ರಯಣಕ್ಕಾಗಿ ಒಯ್ಯುವ ಹಸುವಿನ ಹೆಜ್ಜೆಯಲ್ಲಿ ಹೋಮ ಮಾಡಬೇಕು— 'ಪದೇ ಜುಹೋತಿ' ಎಂದು ವಿಧಿ ಇದೆ.

ಸೋಮಲತೆ ತುಂಬಿದ ಗಾಡಿ ಚಲಿಸುವಾಗ ಅದರ ದಾರಿಯಲ್ಲಿಯೂ ಹೋಮ ವಿಹಿತವಾಗಿದೆ— 'ವರ್ತ್ಮನಿ ಜುಹೋತಿ' ಇದು ವರ್ತ್ಮಹೋಮ.

ಪಶುಯಾಗದಲ್ಲಿ ಗಾರ್ಹಪತ್ಯಾಗ್ನಿಯಲ್ಲಿ ಪತ್ನೀಸಂಯಾಜಹೋಮವೂ ವಿಹಿತವಾಗಿದೆ— 'ಗಾರ್ಹಪತ್ಯೇ ಪತ್ನೀ ಸಂಯಾಜಾನ್ ಜುಹೋತಿ'

ಯಾವುದೇ ಪ್ರಕರಣವಿಶೇಷಕ್ಕೆ ಸಂಬಂಧಿಸದೆ ಸಾಮಾನ್ಯವಾಗಿ 'ಆಹವನೀಯದಲ್ಲಿ ಹೋಮ ಮಾಡಬೇಕು' ಎಂದೂ ವಿಧಿ ಇದೆ— 'ಆಹವನೀಯೇ ಜುಹೋತಿ'.

ಈಗ ಹೋಮ ಸಾಮಾನ್ಯದಲ್ಲಿ ವಿಹಿತವಾದ ಆಹವನೀಯಕ್ಕೆ ಹೋಮವಿಶೇಷಗಳಲ್ಲಿ ವಿಹಿತವಾದ ಪದ, ವರ್ತ್ಮ ಮತ್ತು ಗಾರ್ಹಪತ್ಯಗಳಿಂದ ವಿಕಲ್ಪವೋ ಬಾಧವೋ? ಎಂದು ಸಂದೇಹ.

ಪ್ರತ್ಯಕ್ಷಸಿದ್ಧವಾದ ಶ್ರುತಿಯಿಂದ ವಿನಿಯೋಗವು ಶೀಘ್ರವಾದ್ದರಿಂದ ಪ್ರಬಲ, ಶ್ರುತಿಕಲ್ಪನ ದ್ವಾರಾ ಲಿಂಗದಿಂದ ವಿನಿಯೋಗವು ವಿಲಂಬವಾದ್ದರಿಂದ ದುರ್ಬಲ, ಎಂದು ಶ್ರೌತವಿನಿಯೋಗ ಲೈಂಗಿಕವಿನಿಯೋಗಗಳಲ್ಲಿ ಬಲಾಬಲನಿರ್ಣಯ ಸುಲಭ. ಆದರೆ ಸಾಮಾನ್ಯಶಾಸ್ತ್ರ ವಿಶೇಷ ಶಾಸ್ತ್ರಗಳೆರಡೂ ಪ್ರತ್ಯಕ್ಷವಿರುವುದ ರಿಂದ ಬಲಾಬಲನಿರ್ಣಯ ಶಕ್ಯವಿಲ್ಲ. ಆದರಿಂದ ವಿಕಲ್ಪವೇ ಸರಿ ಎಂದು ಪೂರ್ವಪಕ್ಷ.

**ಸಿದ್ಧಾಂತ ಹೀಗೆ—** ಪದ ವರ್ತ್ಮ ಗಾರ್ಹಪತ್ಯಗಳು ಹೋಮವಿಶೇಷಗಳಲ್ಲಿ ಶ್ರುತಿಯಿಂದ ನೇರವಾಗಿಯೇ ತಿಳಿದು ಬರುತ್ತವೆ. ಲಕ್ಷಣಾ ಬೇಕಿಲ್ಲ. ಆದರೆ ಆಹವನೀಯವು ಹೋಮವಿಶೇಷದಲ್ಲಿ ಪ್ರಾಪ್ತವಾಗಬೇಕಾದರೆ ಆಹವನೀಯವಿಧಾಯಕ ಸಾಮಾನ್ಯಶಾಸ್ತ್ರಕ್ಕೇ ಹೋಮವಿಶೇಷದಲ್ಲಿ, ಅಂದರೆ, ಪದ ವರ್ತ್ಮ ಗಾರ್ಹಪತ್ಯಾತಿರಿಕ್ತ ಹೋಮಗಳಲ್ಲಿ ಲಕ್ಷಣಾ ಮಾಡಬೇಕಾಗುತ್ತದೆ. ಹೀಗೆ ಲಕ್ಷಣಾ ಇಲ್ಲದೇ ಶೀಘ್ರವಾಗಿ ವಿಹಿತವಾಗುವ ಪ್ರಬಲವಾದ ಪದ ವರ್ತ್ಮ ಗಾರ್ಹಪತ್ಯಗಳಿಂದ ವಿಲಂಬ ಪ್ರವೃತ್ತಿಯ ಆಹವನೀಯಕ್ಕೆ ಬಾಧವನ್ನೇ ಹೇಳಬೇಕು ಅಂದರೆ ಪ್ರತೀತಾರ್ಥತ್ಯಾಗಮಾಡಿ ಲಾಕ್ಷಣಿಕಾರ್ಥವನ್ನೇ ಹೇಳಬೇಕು ಹೊರತು ವಿಕಲ್ಪವನ್ನಲ್ಲ ಎಂದು.



**''दीक्षणीयायामनुब्रूयात्'' इतिवत् निरवकाशत्वाच्च । निर्गुणश्रुतिर्हि ''देवात्मशक्तिं स्वगुणैर्निगूढां, दैवी ह्येषा गुणमयी'' इत्यादिश्रुतिस्मृतिष्विव सत्त्वादिगुणे सावकाशा ।**

**बहुत्वाच्च । निर्गुणशब्देतरे सर्वेऽपि हि शब्दाः स्वनिमित्त-गुणार्थकाः ।**

**धर्मिग्राहकत्वेनोपजीव्यत्वाच्च । प्रवृत्तिनिमित्तापेक्षैर्हि ब्रह्मादिशब्दैर्धर्मिणं निर्दिश्य तत्र धर्मा निषेध्याः।**

**नचोद्देश्यविशेषणत्वाद्ग्रहैकत्ववत् निमित्तमविवक्षितम् । ग्रहैकत्वनये उद्देश्यस्वरूपे लब्धेऽपि यदधिकं तस्यैवाविवक्षेति स्थितिः । अन्यथा ग्रहत्वस्याप्यविवक्षा स्यात् । अत एवोक्तं हविरार्तिनये मृष्यामहे हविषा विशेषणमिति ।**

**लक्षकेणापि हि शब्देन इतरव्यावृत्तमसंकीर्णमेव स्वरूपमुद्देष्टव्यम्। अन्यथा यत्र क्वचन धर्मनिषेधः स्यात् ।**

**ग्रहैकत्वनय इति** ।। तथा चात्राप्युद्देश्यतावच्छेदकत्वेन प्रवृत्तिनिमित्तस्य विवक्षाऽऽवश्यकीति भावः ।। **हविरार्तिनय इति** ।। 'यथाश्रुतीति चेत्' दर्शपूर्णमासयोर्दोहौ प्रकृत्य श्रुतम् । ''यस्योभयं हविरार्तिमार्छेदैंद्रं पंचशरावमोदनं

निर्वपेत्'' इति प्रायश्चित्तं सायंदोहस्य प्रातर्दोहस्य चार्तौ स्यात् उतान्यतरविनाशेऽपीति संशये ग्रहैकत्वाधिकरणे उद्देश्यविशेषणस्याविवक्षायां स्थितायामपि यथेह नार्तिमात्रं निमित्तं किंतु हविषा विशिष्टम् एवं संख्ययापि विशेषितं निमित्तमस्त्विति पूर्वः पक्षः ।

सिद्धांतस्तु— कस्यचिदार्तेः सर्वदा संभवादनियतत्वाभावेन निमित्तत्वापर्यवसानात् तत्पर्यवसानाय ग्रहत्वेनेव हविषा विशेषणीये तात्पर्यपर्यवसानात् ग्रहैकत्ववदुभयत्वमपि न विवक्षितुं शक्यमित्यन्यतरार्तावपि स्यात् । उभयपदं तु न केवलं प्रातर्दोहार्तिरिव निमित्तम् । नापि सायं दोहार्तिरिव । किं तूभयमपि प्रत्येकं निमित्तमिति योज्यमिति हविरार्तिनय इति इत्यर्थः । ननु शक्तपदेनैव धर्मिबोधने प्रवृत्तिनिमित्तस्याप्युद्देश्यतावच्छेदकत्वेन विवक्षासिद्धिः । नतु लाक्षणिकपदेनापि तद्बोधन इत्याशंक्याह— **लक्षकेणापीति ॥**



'ದೀಕ್ಷಣೀಯಾಯಾಮನುಬ್ರೂಯಾದಿ'ತಿವತ್ ನಿರವಕಾಶತ್ವಾಚ್ಚ ।

'ಯಾವತ್ಯಾ ವಾಚಾ ಕಾಮಯೀತ ತಾವತ್ಯಾ ದೀಕ್ಷಣೀಯಾಯಾಮನುಬ್ರೂಯತ್' ದೀಕ್ಷಣೀಯೇಷ್ಟಿಯಲ್ಲಿ ಯಥೇಚ್ಛವಾಗಿ ಗಟ್ಟಿಯಾಗಿಯೇ ಮಂತ್ರೋಚ್ಚಾರಣ ಮಾಡಬೇಕು' ಎಂದು ವಿಶೇಷವಾಗಿ ಹೇಳಿದೆ.

'ಯತ್‌ಕಿಂಚಿತ್ ಪ್ರಾಚೀನಂ ಅಗ್ನಿಷೋಮೀಯಾತ್ ತೇನೋಪಾಂಶು ಚರಂತಿ' ಎಂಬಲ್ಲಿ 'ಯತ್‌ಕಿಂಚಿತ್' ಶಬ್ದವಿದೆ. 'ಯತ್‌ಕಿಂಚಿತ್' ಶಬ್ದವು ಪ್ರಕೃತವಾದ ಯಾವದ್ವಿಶೇಷವಾಚಿ. 'ಅಗ್ನೀಷೋಮೀಯಕ್ಕಿಂತ ಹಿಂದಿನ ಎಲ್ಲ ಕರ್ಮಗಳಲ್ಲಿಯೂ ಮಂತ್ರವನ್ನು ಮೆತ್ತಗೆ ಹೇಳಬೇಕೆ'ಂದು ಎಲ್ಲ ಕರ್ಮಗಳಲ್ಲಿ ಉಪಾಂಶುಸ್ವರವನ್ನು ಈ ವಿಧಿವಾಕ್ಯ ವಿಧಾನ ಮಾಡುತ್ತಿದೆ. ಸಾಮಾನ್ಯವಾಗಿ ವಿಹಿತವಾದ ಈ ಉಪಾಂಶುಸ್ವರವನ್ನು ವಿಶೇಷವಾಗಿ ದೀಕ್ಷಣೀಯೇಷ್ಟಿಯಲ್ಲಿ ವಿಹಿತವಾದ ಉಚ್ಚಸ್ವರವು ಬಾಧಿಸುತ್ತದೆ. ಏಕೆಂದರೆ 'ಯತ್‌ಕಿಂಚಿತ್' ಎಂದು ಎಲ್ಲ ಕರ್ಮಗಳಲ್ಲಿ ವಿಹಿತವಾದ ಉಪಾಂಶುಸ್ವರವು ದೀಕ್ಷಣೀಯ ವ್ಯತಿರಿಕ್ತ ಎಲ್ಲ ಕರ್ಮಗಳಲ್ಲಿ ಸಾವಕಾಶವಾಗಿದೆ. 'ಯಾವತ್ಯಾವಾಚಾದೀಕ್ಷಣೀಯಾಯಾಂ' ಎಂದು ದೀಕ್ಷಣೀಯದಲ್ಲಿ ವಿಹಿತವಾದ ಉಚ್ಚಸ್ವರವು ನಿರವಕಾಶ. ನಿರವಕಾಶವು ಸಾವಕಾಶವನ್ನು ಬಾಧಿಸುತ್ತದೆ.

ಹಾಗೇ ನಿರ್ಗುಣ ಶ್ರುತಿಯು ಸಾರ್ವಜ್ಞಾದೀತರ ಗುಣತ್ರಯಾದಿ ನಿಷೇಧದಲ್ಲಿ

ಸಾವಕಾಶವಾಗಿದೆ. ಸಾರ್ವಜ್ಞಾದಿ ವಿಷಯಕ ಸಗುಣಶ್ರುತಿಯು ನಿರವಕಾಶವಾಗಿದೆ. ಆದರಿಂದ ಸಗುಣಶ್ರುತಿಯು ಪ್ರಬಲವಾಗಿದ್ದು ಅದು ನಿರ್ಗುಣಶ್ರುತಿಯನ್ನು ಬಾಧಿಸುತ್ತದೆ.

'ದೇಶಸಂಬದ್ಧಮುಪಾಂಶುತ್ವಂ ತೇಷಾಂ ಸ್ಯಾತ್ ಶ್ರುತಿನಿರ್ದೇಶಾತ್ ತಸ್ಯ ಚ ತತ್ರ ಭಾವಾತ್' (ಜೈ.ಸೂ.9.1.20) 'ಅಗ್ನೀಷೋಮೀಯಕ್ಕಿಂತ ಹಿಂದಿನ ಕರ್ಮಗಳಿಗೆ ವಿಹಿತವಾದ ಉಪಾಂಶು ಸ್ವರವು ದೀಕ್ಷಣೀಯಾದಿಗಳಿಗೆ ಅವಶ್ಯ ಸಂಬಂಧಿಸಿರುತ್ತದೆ. ಶ್ರುತಿಯಲ್ಲಿ 'ಅಗ್ನೀಷೋಮೀಯಾತ್' ಎಂದು ನಿರ್ದೇಶವಿರುವುದರಿಂದ, ಅವುಗಳಲ್ಲಿ ಉಪಾಂಶುಸ್ವರಪ್ರಯುಕ್ತ ಅಪೂರ್ವವಿರುವುದರಿಂದ, ಎಂದು ಸೂತ್ರಾರ್ಥ.

ಜ್ಯೋತಿಷ್ಟೋಮಪ್ರಕರಣದಲ್ಲಿ 'ತ್ಸರಾ ವಾ ಏಷಾ ಯಜ್ಞಸ್ಯ ತಸ್ಮಾತ್ ಯತ್‌ಕಿಂಚಿತ್ ಪ್ರಾಚೀನಂ ಅಗ್ನೀಷೋಮೀಯಾತ್ ತೇನೋಪಾಂಶು ಚರಂತಿ' ಜ್ಯೋತಿಷ್ಟೋಮಾಂಗವಾದ ಅಗ್ನೀಷೋಮೀಯ ಪಶು ಯಾಗಕ್ಕಿಂತ ಹಿಂದಿನ ದೀಕ್ಷಣೀಯೇಷ್ಟಿ ಪ್ರಾಯಣೀಯೇಷ್ಟಿ ಆತಿಥ್ಯೇಷ್ಟಿ ಮುಂತಾದ ಕರ್ಮಗಳಲ್ಲಿ ಮಂತ್ರಗಳನ್ನು ಉಪಾಂಶುಸ್ವರದಿಂದ ಅಂದರೆ ಮೆತ್ತಗೇ ಹೇಳಿದರೆ ಜ್ಯೋತಿಷ್ಟೋಮಯಾಗದಿಂದ ಬರಬೇಕಾಗಿರುವ ಫಲ ಸುಲಭವಾಗಿ ಬರುತ್ತದೆ' ಎಂದಿದೆ. 'ತ್ಸರಾ' ಎಂದರೆ, ರಹಸ್ಯ ಸಂಚಾರ. ಬಕಪಕ್ಷಿಯನ್ನು ಸೆರೆ ಹಿಡಿಯಲು ಬೇಡನು ಸದ್ದುಮಾಡದೆ ಹೆಜ್ಜೆ ಇಡುತ್ತ ಬಳಿ ಸಾರುತ್ತಾನೆ. ಆಗ ಹಕ್ಕಿಯನ್ನು ಹಿಡಿದುಕೊಳ್ಳುವುದು ಸುಲಭ. ಇದು ಬೇಡನ 'ತ್ಸರಾ' ಹಾಗೇ 'ಯಜ್ಞಸ್ಯ ಏಷಾ ತ್ಸರಾ' 'ಉಪಾಂಶು ಸ್ವರವು ಜ್ಯೋತಿಷ್ಟೋಮವೆಂಬ ಸೋಮಯಾಗದ ರಹಸ್ಯ ಸಂಚಾರ', ಸುಲಭವಾಗಿ ಆದರಿಂದ ಫಲವನ್ನು ಹೊಂದುವ ಉಪಾಯ.

ಇಲ್ಲಿ ಶ್ರುತಿಯು ಹೇಳುತ್ತಿರುವ ಉಪಾಂಶುಸ್ವರವು ಜ್ಯೋತಿಷ್ಟೋಮವೆಂಬ ಪ್ರಧಾನ ಸೋಮಯಾಗದ ಪೂರ್ವಭಾಗವಾಗಿ ಮಾಡುವ ಗ್ರಹಹೋಮಾದಿ ಕರ್ಮಗಳಿಗೆ ಸಂಬಂಧಿಸಿದ್ದೆ? ಅಥವಾ ಅಂಗಯಾಗವಾದ ಅಗ್ನೀಷೋಮೀಯ ಪಶುಯಾಗದ ಪೂರ್ವಭಾವಿಯಾಗಿರುವ ದೀಕ್ಷಣೀಯ ಪ್ರಾಯಣೀಯಾದಿಕರ್ಮಗಳಿಗೆ ಸಂಬಂಧಿಸಿದ್ದೆ? ಎಂದು ಸಂದೇಹ.

'ತ್ಸರಾ ವಾ ಏಷಾ ಯಜ್ಞಸ್ಯ' ಎಂಬಲ್ಲಿರುವ 'ಯಜ್ಞಸ್ಯ' ಎಂಬ ಪದವನ್ನು 'ತ್ಸರಾ' ಎಂಬಲ್ಲಿ ಅನ್ವಯಿಸದೆ ಮುಂದೆ ಬರುವ 'ಪ್ರಾಚೀನಂ' ಎಂಬ ಶಬ್ದಕ್ಕೆ ಅನ್ವಯ ಮಾಡಿದರೆ 'ಜ್ಯೋತಿಷ್ಟೋಮ ಯಜ್ಞದ ಪ್ರಾಚೀನ ಭಾಗವು ಉಪಾಂಶು ಸ್ವರಯುಕ್ತವಾಗಬೇಕು' ಎಂದು ಅರ್ಥ ಸಿಗುತ್ತದೆ. ಆಗ ಜ್ಯೋತಿಷ್ಟೋಮದ ವಿಕೃತಿ ಯಾಗಗಳಲ್ಲಿಯೂ ಅವುಗಳ ಪೂರ್ವಭಾಗದಲ್ಲಿ ಉಪಾಂಶುಸ್ವರಾನುಷ್ಠಾನ ಅತಿದೇಶದಿಂದ ಲಭ್ಯವಾಗುತ್ತದೆ. 'ಯಜ್ಞಸ್ಯ ತ್ಸರಾ' ಎಂದು ಅನ್ವಯಿಸಿದರೆ ಅದು ಕೇವಲ ಉಪಾಂಶುಸ್ವರವನ್ನು ಹೊಗಳುವ ಅರ್ಥವಾದವಾಗುತ್ತದೆ. ವ್ಯರ್ಥವಾಗುತ್ತದೆ. ಎಂದು ಪೂರ್ವಪಕ್ಷ.

'ಯಜ್ಞಸ್ಯ ಪ್ರಾಚೀನಂ' ಅಂದರೆ ಜ್ಯೋತಿಷ್ಟೋಮಯಜ್ಞದ ಪೂರ್ವಭಾಗವೆಂದು ಷಷ್ಠೀವಿಭಕ್ತಿ ಹೇಳುತ್ತದೆ. ಯಜ್ಞದ ಪೂರ್ವಭಾಗವೆಂದರೆ ಅದು ಒಂದೇ ಇರುತ್ತದೆ. ಆಗ 'ಯತ್‌ಕಿಂಚಿತ್ ಪ್ರಾಚೀನಂ' ಅಂದರೆ 'ಎಲ್ಲ ಪೂರ್ವಭಾಗಗಳೆ'ಂದು ಹೇಳುವುದು ಕೂಡುವುದಿಲ್ಲ.

ಯತ್‌ಕಿಂಚಿತ್ ಶಬ್ದಕ್ಕೆ ಅನ್ವಯ ಕೂಡುವುದಿಲ್ಲ. ಆದರಿಂದ 'ಅಗ್ನೀಷೋಮೀಯಾತ್ ಪ್ರಾಚೀನಂ' ಎಂದು ಅನ್ವಯಿಸಬೇಕು. ಆಗ ಅಗ್ನೀಷೋಮೀಯ ಪಶುಯಾಗಕ್ಕಿಂತ ಹಿಂದಿನ ದೀಕ್ಷಣೀಯಾದಿ ಕರ್ಮಗಳು ಅನೇಕ ಇವೆ. ಅವುಗಳಲ್ಲಿ ಎಲ್ಲವುಗಳಲ್ಲಿಯೂ ಉಪಾಂಶು ಸ್ವರ ವಿಹಿತವಾಗುವುದು. 'ಯತ್‌ಕಿಂಚಿತ್ ಪ್ರಾಚೀನಂ ಅಗ್ನೀಷೋಮೀಯಾತ್ ತೇನೋಪಾಂಶು ಚರಂತಿ' ಎಂದು ಅನ್ವಯ ಕೂಡುತ್ತದೆ. ಈಗ 'ಯಜ್ಞಸ್ಯ' ಎಂಬುದನ್ನು 'ತ್ವರಾ' ಎಂಬಲ್ಲಿಯೇ ಅನ್ವಯಿಸಬೇಕು.

ಯದ್ಯಪಿ ದೀಕ್ಷಣೀಯೇಷ್ಟಿಯಲ್ಲಿ ಯಥೇಚ್ಛ ಉಚ್ಚಸ್ವರ, ಪ್ರಾಯಣೀಯದಲ್ಲಿ ಮಂದ್ರಸ್ವರ. ಆತಿಥ್ಯೇಷ್ಟಿಯಲ್ಲಿ ಮಂದ್ರತರ ಸ್ವರ. ಉಪಸದ್ಹೋಮಗಳಲ್ಲಿ ಉಪಾಂಶುಸ್ವರ ಅಗ್ನೀಷೋಮೀಯ ಹೋಮದಲ್ಲಿ ಉಚ್ಚಸ್ವರ ಎಂದು ಭೇದವಿದೆ. 'ಯತ್‌ಕಿಂಚಿತ್' ಎಲ್ಲ ಅಂಗಯಾಗಗಳಲ್ಲಿಯೂ ಉಪಾಂಶುಸ್ವರ ವಿಧಾನ ಕೂಡುವುದಿಲ್ಲ. ಆದರೂ ಯತ್‌ಕಿಂಚಿತ್ ಶಬ್ದವನ್ನು ದೀಕ್ಷಣೀಯಾದಿ ವ್ಯತಿರಿಕ್ತ ಎಲ್ಲ ಯಾಗ ವಿಷಯದಲ್ಲಿ ಸಂಕೋಚ ಮಾಡಲು ಬರುತ್ತದೆ. ಅದು ಸಾವಕಾಶ. ದೀಕ್ಷಣೀಯಾದಿಗಳಲ್ಲಿ ಯಥೇಚ್ಛಸ್ವರವು ನಿರವಕಾಶ. ನಿರವಕಾಶದಿಂದ ಸಾವಕಾಶವು ಸಂಕೋಚಕ್ಕೆ ಯೋಗ್ಯವಾಗುತ್ತದೆ ಎಂದು ಸಿದ್ಧಾಂತ.

ಹಾಗೇ ಪ್ರಕೃತ ಸಗುಣಶ್ರುತಿಯು ನಿರವಕಾಶ. ನಿರ್ಗುಣಶ್ರುತಿ ಸಾವಕಾಶ.

'ತೇ ಧ್ಯಾನಯೋಗಾನುಗತಾ ಅಪಶ್ಯನ್ ದೇವಾತ್ಮಶಕ್ತಿಂ ಸ್ವಗುಣೈರ್ನಿಗೂಢಾಂ'

'ದೇವ-ಆತ್ಮ-ಶಕ್ತಿ'ಗಳು ಅಂದರೆ ಈಶ-ಜೀವ-ಜಡಗಳು ತಮ್ಮತಮ್ಮ ಗುಣಗಳಿಂದ ಸದಾ ಯುಕ್ತರಾಗಿರುವುದನ್ನು ಜ್ಞಾನಿಗಳು ಕಂಡಿದ್ದಾರೆ' ಎಂದು ಶ್ವೇತಾಶ್ವತರ ಶ್ರುತಿ(1.3)

'ದೈವೀ ಹ್ಯೇಷಾ ಗುಣಮಯೀ ಮಮ ಮಾಯಾ ದುರತ್ಯಯಾ'

'ನನಗೂ ಕೂಡ ಪ್ರಕೃತಿಯ ಸತ್ವಾದಿಗುಣ ಬಂಧನವಿದೆ ಎನ್ನುವ ಭ್ರಾಂತಿ ಜನರಿಗೆ ನನ್ನ ವಶದಲ್ಲಿರುವ ಸತ್ವಾದಿಗುಣಮಯ ಪ್ರಕೃತಿಯಿಂದಾದುದು, ಅದನ್ನು ಯಾರಿಗೂ ದಾಟಲಾಗದು' ಎಂದು ಗೀತಾವಚನ. ಅದರಂತೆ 'ನಿರ್ಗುಣಶ್ಚ' ಎಂಬ ಶ್ರುತಿಯೂ ಕೂಡ 'ಗುಣ' ಶಬ್ದದಿಂದ ಪ್ರಕೃತಿಯ ಗುಣತ್ರಯವನ್ನೇ ಹೇಳಿ ನಿಷೇಧ ಮಾಡುವುದು ಕೂಡುತ್ತದೆ. ಆದರಿಂದ ಸಾವಕಾಶ.

**ಬಹುತ್ವಾಚ್ಚ । ನಿರ್ಗುಣಶಬ್ದೇತರೇ ಸರ್ವೇಽಪಿ ಹಿ ಶಬ್ದಾಃ ಸ್ವನಿಮಿತ್ತ ಗುಣಾರ್ಥಕಾಃ ।**

ಸಗುಣಶ್ರುತಿಯು ನಿರ್ಗುಣಶ್ರುತಿಗಿಂತ ಹೆಚ್ಚಿನ ಸಂಖ್ಯೆಯಲ್ಲಿರುವುದರಿಂದ ಪ್ರಬಲ. ಏಕೆಂದರೆ 'ನಿರ್ಗುಣಃ' ಎಂಬ ಶಬ್ದಕ್ಕಿಂತ ಬೇರೆ ಎಲ್ಲ ಶಬ್ದಗಳೂ ತಮ್ಮ ಪ್ರವೃತ್ತಿನಿಮಿತ್ತ ಭೂತವಾದ ಗುಣಗಳನ್ನು ಹೇಳುತ್ತವೆ.

**ಧರ್ಮಿಗ್ರಾಹಕತ್ವೇನ ಉಪಜೀವ್ಯತ್ವಾಚ್ಚ । ಪ್ರವೃತ್ತಿನಿಮಿತ್ತಾಪೇಕ್ಷೈರ್ಹಿ ಬ್ರಹ್ಮಾದಿ ಶಬ್ದೈಃ ಧರ್ಮಿಣಂ ನಿರ್ದಿಶ್ಯ ತತ್ರ ಧರ್ಮಾ ನಿಷೇಧ್ಯಾಃ ॥**

ಸಗುಣಶ್ರುತಿಯು ಧರ್ಮಿಗ್ರಾಹಕವಾಗಿ ನಿರ್ಗುಣಶ್ರುತಿಗೆ ಉಪಜೀವ್ಯವಾದ್ದರಿಂದಲೂ ಪ್ರಬಲ. ಉಪಜೀವ್ಯ ಏಕೆಂದರೆ, ನಿರ್ಗುಣಶ್ರುತಿಯು ಧರ್ಮಿಯನ್ನು ನಿರ್ದೇಶ ಮಾಡಿಯೇ ಅದರಲ್ಲಿ ಗುಣನಿಷೇಧ ಮಾಡಬೇಕಾಗುತ್ತದೆ. ಕೇವಲ 'ಗುಣಗಳಿಲ್ಲ' ಎಂದರೆ ಯಾರಲ್ಲಿ? ಎಂದು ಧರ್ಮಿಯನ್ನು ಹೇಳಲೇಬೇಕುತಾನೆ? ಆದರಿಂದ ಬ್ರಹ್ಮ ಆತ್ಮ ಇತ್ಯಾದಿ ಧರ್ಮಿನಿರ್ದೇಶಕ್ಕಾಗಿ ಧರ್ಮಿವಾಚಕ ಸಗುಣ ಶ್ರುತಿಗಳೇ ಬೇಕು. ಅವು ತಮ್ಮ ಪ್ರವೃತ್ತಿ ನಿಮಿತ್ತವಾದ ಬ್ರಹ್ಮತ್ವ ಆತ್ಮತ್ವಾದಿ ಗುಣಗಳನ್ನು ನಿಮಿತ್ತ ಮಾಡಿಕೊಂಡೇ ಪ್ರವೃತ್ತಿ ಮಾಡುತ್ತವೆ. ನಿರ್ಗುಣಶ್ರುತಿ ಆ ಗುಣಗಳನ್ನೂ ಕೂಡ ನಿಷೇಧ ಮಾಡಿದರೆ ವ್ಯಾಹತಿ ಮತ್ತು ಉಪಜೀವ್ಯ ವಿರೋಧವೂ ಬರುತ್ತವೆ.

**ನ ಚ ಉದ್ದೇಶ್ಯ ವಿಶೇಷಣತ್ವಾತ್ ಗ್ರಹೈಕತ್ವವತ್ ನಿಮಿತ್ತಂ ಅವಿವಕ್ಷಿತಂ ।**

'ಗುಣನಿಷೇಧಕ್ಕೆ ಧರ್ಮಿ ಉದ್ದೇಶ್ಯ. ಪ್ರವೃತ್ತಿನಿಮಿತ್ತ ಧರ್ಮಗಳು ಉದ್ದೇಶ್ಯ ವಿಶೇಷಣಗಳು. 'ಗ್ರಹಂ ಸಂಮಾರ್ಷ್ಟಿ' ಎಂಬಲ್ಲಿ 'ಒಂದು ಗ್ರಹವನ್ನು ತೊಳೆಯಬೇಕು' ಎಂದರೆ ಧರ್ಮಿಯಾದ ಗ್ರಹದಲ್ಲಿ ಏಕವಚನೋಕ್ತವಾದ ಏಕತ್ವವೆಂಬ ವಿಶೇಷಣ ಅವಿವಕ್ಷಿತವೆಂದು ಮೀಮಾಂಸಕರ ಸಿದ್ಧಾಂತ. ಹಾಗೇ ಗುಣನಿಷೇಧಕ್ಕೆ ಧರ್ಮಿಯಾದ ಬ್ರಹ್ಮ ಆತ್ಮ ಮುಂತಾದುವು ಧರ್ಮಿಯಾದ್ದರಿಂದ ಅವುಗಳಲ್ಲಿ ಬ್ರಹ್ಮತ್ವ ಆತ್ಮತ್ವಾದಿವಿಶೇಷಣಗಳು ಧರ್ಮಿವಿಶೇಷಣಗಳಾಗಿರುವುದರಿಂದ ಅವಿವಕ್ಷಿತವಾಗಿವೆ. ಆದ್ದರಿಂದ ಅವುಗಳನ್ನು 'ನಿರ್ಗುಣಶ್ಚ' ಎಂದು ಸಾಮಾನ್ಯನಿಷೇಧದಲ್ಲಿ ನಿಷೇಧಿಸಿದರೆ ಉಪಜೀವ್ಯ ವಿರೋಧ ಬರುವುದಿಲ್ಲ' ಎಂದು ಅದ್ವೈತಿ ಹೇಳುತ್ತಾನೆ.

**ಗ್ರಹೈಕತ್ವ ನಯೇ ಉದ್ದೇಶ್ಯ ಸ್ವರೂಪೇ ಲಬ್ಧೇऽಪಿ ಯದಧಿಕಂ, ತಸ್ಯೈವ ಅವಿವಕ್ಷೇತಿ ಸ್ಥಿತಿಃ । ಅನ್ಯಥಾ ಗ್ರಹತ್ವಸ್ಯಾಪಿ ಅವಿವಕ್ಷಾ ಸ್ಯಾತ್ ।**

ಪೂರ್ವಮೀಮಾಂಸಾದ ಗ್ರಹೈಕತ್ವಾಧಿಕರಣದಲ್ಲಿ ಸಮ್ಮಾರ್ಜನ ವಿಧಿಗೆ ಉದ್ದೇಶ್ಯವಾದ ಗ್ರಹದಲ್ಲಿ ಅಂದರೆ ಸೋಮಪಾತ್ರೆಯಲ್ಲಿ ಏಕತ್ವರೂಪ ವಿಶೇಷಣ ಮಾತ್ರ ಅವಿವಕ್ಷಿತ ಹೊರತು ಗ್ರಹತ್ವವು ಅವಿವಕ್ಷಿತವಲ್ಲ, ಯಾವ ಧರ್ಮವನ್ನು ಹೇಳಿದರೆ ಮಾತ್ರ ಉದ್ದೇಶ್ಯಸ್ವರೂಪವು ತಿಳಿದುಬರುವುದೋ ಆ ಧರ್ಮಕ್ಕಿಂತ ಅಧಿಕವಾಗಿ ಬೇರೆ ವಿಶೇಷಣಗಳನ್ನು ಹೇಳಿದ್ದರೆ ಅವು ಮಾತ್ರ ಅವಿವಕ್ಷಿತವಾಗಿರುತ್ತವೆ. ಉದ್ದೇಶ್ಯತಾವಚ್ಛೇದಕ ಗ್ರಹತ್ವರೂಪ ಧರ್ಮವನ್ನು ಹೇಳದೆ ಉದ್ದೇಶ್ಯವಾದ ಗ್ರಹಸ್ವರೂಪ ಸಿದ್ಧವಾಗುವುದೇ ಇಲ್ಲ. ಆದರಿಂದ ಗ್ರಹಸ್ವರೂಪ ಸಿದ್ಧಿಗಾಗಿ ಹೇಳಬೇಕಾಗಿರುವ ಗ್ರಹತ್ವಕ್ಕಿಂತ ಹೊರತಾಗಿ ಬೇರೆ ಏಕತ್ವವನ್ನು ಗ್ರಹದಲ್ಲಿ ವಿಶೇಷಣವಾಗಿ ಹೇಳಿದ್ದರಿಂದ ಅದು ಅವಿವಕ್ಷಿತವೆನಿಸಿತು. ಇದು ವಾಸ್ತವಸ್ಥಿತಿ. ಇಲ್ಲದಿದ್ದರೆ ಏಕತ್ವದೊಂದಿಗೆ ಗ್ರಹತ್ವವನ್ನೂ ಕೂಡ ಅವಿವಕ್ಷಿತ ಎಂದು ಮೀಮಾಂಸಕರು ಸ್ವೀಕರಿಸುತ್ತಿದ್ದರು.

ಈ ಗ್ರಹೈಕತ್ವಾಧಿಕರಣ ಅಥವಾ ಗ್ರಹಸಮ್ಮಾರ್ಜನಾಧಿಕರಣವು ಹಿಂದೆ 'ಸಾಮಾನ್ಯತೋ ಮಿಥ್ಯಾತ್ವಶ್ರುತಿ ನಿರಾಸ' ಪ್ರಕರಣದಲ್ಲಿ ಉಕ್ತವಾಗಿದೆ.

**ಅತ ಏವೋಕ್ತಂ ಹವಿರಾರ್ತಿನಯೇ 'ಮೃಷ್ಯಾಮಹೇ ಹವಿಷಾ ವಿಶೇಷಣಮಿತಿ'**

ಹವಿರ್ನಾಶರೂಪವಾದ ಉದ್ದೇಶ್ಯದಲ್ಲಿ ಉದ್ದೇಶ್ಯತಾವಚ್ಛೇದಕರೂಪವಾದ ಹವಿಸ್ಸನ್ನು 'ಉಭಯ ಹವಿರ್ನಾಶವಾದರೆ ಪ್ರಾಯಶ್ಚಿತ್ತ ಮಾಡಬೇಕು' ಎಂಬಲ್ಲಿ ವಿಶೇಷಣವೆನ್ನಬಹುದು. ವಿವಕ್ಷಿತ ವೆನ್ನಬಹುದು. ಅದನ್ನು ಸಹಿಸಿಕೊಳ್ಳುತ್ತೇವೆ. ಏಕೆಂದರೆ 'ನಾಶ' ಎಂದಿಷ್ಟೇ ಹೇಳಿದರೆ ಉದ್ದೇಶ್ಯವಾದ 'ನಾಶ' ಯಾವುದೆಂದು ಉದ್ದೇಶ್ಯಸ್ವರೂಪವೇ ತಿಳಿಯುವುದಿಲ್ಲ. 'ಹವಿಸ್ಸಿನ ನಾಶ' ಎಂದರೆ ಉದ್ದೇಶ್ಯ ಸ್ವರೂಪ ತಿಳಿಯುತ್ತದೆ. ಇದು ತಿಳಿದಮೇಲೆ 'ಉಭಯ' ಎಂದು ಬೇರೆ ಅಧಿಕ ವಿಶೇಷಣವನ್ನು ಸೇರಿಸಿದರೆ ಅದನ್ನು ನಾವು ಸಹಿಸುವುದಿಲ್ಲ ಎಂದು ಹವಿರಾರ್ತ್ಯಧಿಕರಣದಲ್ಲಿ ಹೇಳಿದ್ದಾರೆ.

ಹವಿರಾರ್ತ್ಯಧಿಕರಣ ಹೀಗಿದೆ— 'ಯಥಾಶ್ರುತೀತಿ ಚೇತ್'(ಜೈ.ಸೂ.6.4.22) ಯಥಾಶ್ರುತ ವಾಗಿ 'ಎರಡು ಕ್ಷೀರದೋಹನ ಹವಿಸ್ಸುಗಳು ನಾಶವಾಗುವುದೇ ಪ್ರಾಯಶ್ಚಿತ್ತಕ್ಕೆ ನಿಮಿತ್ತವಾಗುವುದು' ಎಂದರೆ ಅದು ಸರಿಯಲ್ಲ' ಎಂದು ಸೂತ್ರಾರ್ಥ.

ದರ್ಶಪೂರ್ಣಮಾಸ ಪ್ರಕರಣದಲ್ಲಿ 'ಹಿಂದಿನ ದಿನದ ಸಾಯಂಕಾಲ ಗೋದೋಹನದ ಹಾಲಿನ ಹವಿಸ್ಸು ಮತ್ತು ಮರುದಿನ ಬೆಳಗಿನ ದೋಹನದ ಹಾಲಿನ ಹವಿಸ್ಸು ಇವುಗಳು ಎರಡು ನಾಶವಾದರೆ 'ಪಂಚಶರಾವಂ ಓದನಂ' ಕುಡವ ಪ್ರಮಾಣದ ಐದು ಹರಿವಾಣ ನೈವೇದ್ಯ ಹವಿಸ್ಸನ್ನು 'ನಿರ್ವಪೇತ್' ಆಹುತಿ ನೀಡಬೇಕು' ಎಂದು ಪ್ರಾಯಶ್ಚಿತ್ತ ಶ್ರುತವಾಗಿದೆ. ಯಥಾಶ್ರುತವಾಗಿ 'ಎರಡೂ ಹವಿಸ್ಸು ನಾಶವಾದರೆ ಮಾತ್ರ ಪ್ರಾಯಶ್ಚಿತ್ತವೆಂದು ತಿಳಿಯಬೇಕು' ಎಂದು ಪೂರ್ವಪಕ್ಷ. ಗ್ರಹೈಕತ್ವಾಧಿಕರಣದಲ್ಲಿ ಉದ್ದೇಶ್ಯ ವಿಶೇಷಣವಾದ ಏಕತ್ವ ಅವಿವಕ್ಷಿತ ಎಂದಿದ್ದರೂ ದೋಹನಹವಿಸ್ಸಿಗೆ ವಿಶೇಷಣವಾದ ಉಭಯತ್ವವು ವಿವಕ್ಷಿತವೇ. ಏಕೆಂದರೆ 'ಉಭಯಂ ಹವಿಃ' 'ಎರಡು ಹವಿಸ್ಸು ನಾಶವಾದರೆ' ಎಂದು ಶ್ರುತಿಯು ಹೇಳಿದೆ ಎಂದು.

ಸಿದ್ಧಾಂತ ಹೀಗೆ— ಕೇವಲ ನಾಶಕ್ಕೆ ಪ್ರಾಯಶ್ಚಿತ್ತ ವಿಧಾನ ಶಕ್ಯವಿಲ್ಲ. ಯಾವುದಾದರೊಂದು ನಾಶ ನಿಯತವಾಗಿ ಯಾವಾಗಲೂ ಇರುತ್ತದೆ. ಅನಿಯತವಾಗಿರುವುದಿಲ್ಲ. ಅತಿಪ್ರಸಂಗ ವಿರುವುದರಿಂದ ಅದು ಪ್ರಾಯಶ್ಚಿತ್ತಕ್ಕೆ ನಿಮಿತ್ತವಾಗಲಾರದು. ಆದರಿಂದ ಹವಿಸ್ಸಿನ ನಾಶವನ್ನೇ ಉದ್ದೇಶ ಮಾಡಬೇಕು. ಗ್ರಹದಲ್ಲಿ ಸಮ್ಮಾರ್ಜನ ವಿಧಾನ ಮಾಡುವಾಗ ಉದ್ದೇಶ್ಯವಾದ ಗ್ರಹದಲ್ಲಿ ಗ್ರಹತ್ವವಿಶೇಷಣವನ್ನು ವಿವಕ್ಷೆ ಮಾಡಲೇಬೇಕು. ಗ್ರಹತ್ವವು ಧರ್ಮಿತಾವಚ್ಛೇದಕ. ಅದಿಲ್ಲದಿದ್ದರೆ ಧರ್ಮಿಯಾದ ಉದ್ದೇಶ್ಯದ ಸ್ವರೂಪವೆ ಏನೆಂದು ತಿಳಿಯಲಾರದು. ಹಾಗೇ ನಾಶರೂಪವಾದ ಧರ್ಮಿಯಲ್ಲಿ ಧರ್ಮಿತಾವಚ್ಛೇಕವಾದ ಹವಿಸ್ಸು ವಿಶೇಷಣವಾಗಿ ಅವಶ್ಯಬೇಕು. ಆಗಲೆ ಧರ್ಮಿಯಾದ ನಾಶದ ಸ್ವರೂಪ ತಿಳಿಯುತ್ತದೆ. ಹೀಗೆ ಹವಿಸ್ಸನ್ನು ವಿಶೇಷಣವಾಗಿ ಕೊಟ್ಟಮೇಲೆ ಹವಿಸ್ಸಿನಲ್ಲಿ ಪುನಃ ಉಭಯತ್ವವಿಶೇಷಣ ಬೇಕಾಗಿಲ್ಲ. ಹವಿರ್ವಿಶೇಷಣದಿಂದಲೆ ಉದ್ದೇಶ್ಯಸ್ವರೂಪ ಸಿದ್ಧವಾಗಿದೆ. ಅಧಿಕವಾಗಿ ಉಭಯತ್ವ ವಿಶೇಷಣವು ಶ್ರುತವಾಗಿದ್ದರೂ ಶ್ರುತಿಗೆ ಅದರಲ್ಲಿ ವಿವಕ್ಷೆ ಇಲ್ಲ.

ಗ್ರಹದಲ್ಲಿ ಗ್ರಹತ್ವವಿಶೇಷಣವು ಆವಶ್ಯಕವೆಂದು ಶ್ರುತಿಗೆ ಅದರಲ್ಲಿ ವಿವಕ್ಷೆ ಇದ್ದರೂ ಪುನಃ ಏಕತ್ವರೂಪ ವಿಶೇಷಣ ಅನಾವಶ್ಯಕವಾದ್ದರಿಂದ ಅದು ಅವಿವಕ್ಷಿತವೆಂದು ಹಿಂದೆ ಹೇಳಿದ್ದಾರೆ. ಹಾಗೇ ಇಲ್ಲಿಯೂ ಉಭಯತ್ವರೂಪ ಉದ್ದೇಶ್ಯವಿಶೇಷಣ ಶ್ರುತವಾದರೂ ಅದರಲ್ಲಿ ವಿವಕ್ಷೆ ಇಲ್ಲ. ಯಾವುದಾದರೊಂದು ಹವಿಸ್ಸು ನಾಶವಾದರೂ ಪ್ರಾಯಶ್ಚಿತ್ತ ಮಾಡಬೇಕು. ಎರಡೂ ಹವಿಸ್ಸು ನಾಶವಾದಾಗಲೇ ಪ್ರಾಯಶ್ಚಿತ್ತವೆಂದು ತಿಳಿಯಬಾರದು.

ಹಾಗಾದರೆ ಶ್ರುತಿಯಲ್ಲಿ ಉಭಯ ಶಬ್ದ ಏಕೆ ಶ್ರುತವಾಗಿದೆ ಎಂದರೆ, ಯಾವುದಾದರೂ ಕೇವಲ ಒಂದು ಹವಿಸ್ಸಿನ ನಾಶಮಾತ್ರವೆ ಪ್ರಾಯಶ್ಚಿತ್ತಕ್ಕೆ ನಿಮಿತ್ತವಾಗಲು ಯೋಗ್ಯವೆನ್ನುವಂತಿಲ್ಲ. ಎರಡು ಹವಿರ್ನಾಶಗಳಿಗೂ ಪ್ರತ್ಯೇಕವಾಗಿ ಆ ಯೋಗ್ಯತೆ ಇದೆ. ಅದರಿಂದ ಯಾವುದಾದರೊಂದು ಹವಿರ್ನಾಶವಾದಾಗಲೂ ಪ್ರಾಯಶ್ಚಿತ್ತ ಮಾಡಬೇಕೆಂದು ಶ್ರುತಿಗೆ ಅಭಿಪ್ರಾಯವಿದೆ.

ಯದ್ಯಪಿ 'ಪ್ರವೃತ್ತಿನಿಮಿತ್ತವನ್ನು ಹೇಳದ ಲಾಕ್ಷಣಿಕ ಪದದಿಂದ ಉದ್ದೇಶವನ್ನು ಹೇಳಿ ಅದರಲ್ಲಿ ನಿರ್ಗುಣತ್ವವನ್ನು ವಿಧಾನ ಮಾಡಿದಾಗ ಪ್ರವೃತ್ತಿನಿಮಿತ್ತವಾದ ಬ್ರಹ್ಮತ್ವ ಆತ್ಮತ್ವಾದಿ ಧರ್ಮಗಳು ಧರ್ಮಿಯಲ್ಲಿ ಉಕ್ತವಾಗದಿರುವುದರಿಂದ ಅವನ್ನು ನಿಷೇಧ ಮಾಡಿದರೆ ವ್ಯಾಹತಿ ಬರುವುದಿಲ್ಲ. ಉಪಜೀವ್ಯ ವಿರೋಧವು ಬರುವುದಿಲ್ಲ' ಎಂದು ಅದ್ವೈತಿ ಹೇಳುತ್ತಾನೆ.

ಆದರೆ ಲಾಕ್ಷಣಿಕಪದದಿಂದ ಉದ್ದೇಶ್ಯ ಧರ್ಮಿಯನ್ನು ಹೇಳುವಾಗಲೂ ಇತರ ವ್ಯಾವರ್ತಕವಾದ ಲಕ್ಷ್ಯತಾವಚ್ಛೇದಕವಾದ ಅಸಾಧಾರಣ ಧರ್ಮವನ್ನು ಧರ್ಮಿಯಲ್ಲಿ ಹೇಳಬೇಕಾಗುತ್ತದೆ. ಗಂಗಾಪದದಿಂದ ಲಕ್ಷಣಯಾ ಗಂಗಾತ್ವರೂಪ ಪ್ರವೃತ್ತಿನಿಮಿತ್ತವನ್ನು ಬಿಟ್ಟು ತೀರವನ್ನು ಉದ್ದೇಶ್ಯವಾಗಿ ಹೇಳಿದಾಗಲೂ ಲಕ್ಷ್ಯತಾವಚ್ಛೇದಕವಾದ ಇತರ ವ್ಯಾವರ್ತಕ ಅಸಾಧಾರಣ ಧರ್ಮವಾದ ತೀರತ್ವವನ್ನು ಅದರಲ್ಲಿ ಹೇಳಲೇಬೇಕು. ಇಲ್ಲದಿದ್ದರೆ ಉದ್ದೇಶ್ಯ ಸ್ವರೂಪವು ತಿಳಿಯುವುದಿಲ್ಲ. ಹೀಗಾಗಿ ಶಕ್ಯತಾವಚ್ಛೇದಕವಾದ ಇಲ್ಲವೆ ಲಕ್ಷ್ಯತಾವಚ್ಛೇದಕವಾದ ಅಸಾಧಾರಣ ಧರ್ಮವು ಉದ್ದೇಶ್ಯದಲ್ಲಿ ಉಕ್ತವಾಗುವಾಗ ಅದನ್ನೂ ಕೂಡ ನಿರ್ಗುಣತ್ವಶ್ರುತಿಯು ನಿಷೇಧಿಸಿದರೆ ವ್ಯಾಹತಿ ಅನಿವಾರ್ಯ. ನಿಷೇಧಕವಾಕ್ಯ ಅಪ್ರಮಾಣವಾಗುತ್ತದೆ—

**ಲಕ್ಷಕೇಣಾಪಿ ಹಿ ಶಬ್ದೇನ ಇತರವ್ಯಾವೃತ್ತಂ ಅಸಂಕೀರ್ಣಮೇವ ಸ್ವರೂಪಂ ಉದ್ದೇಷ್ಟವ್ಯಂ । ಅನ್ಯಥಾ ಯತ್ರ ಕ್ವಚನ ಧರ್ಮನಿಷೇಧಃ ಸ್ಯಾತ್ ।**

ಲಾಕ್ಷಣಿಕ ಪದದಿಂದಲೂ ಧರ್ಮಿಯಲ್ಲಿ ಇತರ ವ್ಯಾವೃತ್ತವಾದ ಅಸಾಧಾರಣ ಸ್ವರೂಪವನ್ನೇ ಹೇಳಿ ಉದ್ದೇಶಮಾಡಬೇಕಾಗುತ್ತದೆ. ಇಲ್ಲದಿದ್ದರೆ ನಿರ್ಗುಣತ್ವಶ್ರುತಿಯು ಬ್ರಹ್ಮನಲ್ಲಿಯೇ ಗುಣನಿಷೇಧ ಮಾಡುತ್ತಿದೆ ಎಂದು ತಿಳಿಯುವುದು ಶಕ್ಯವಾಗುವುದಿಲ್ಲ. ಯಾವುದಾದರೊಂದು ವಸ್ತುವಿನಲ್ಲಿ ಧರ್ಮನಿಷೇಧ ಮಾಡಿದಂತಾದೀತು. ಬ್ರಹ್ಮನಲ್ಲಿ ನಿರ್ಗುಣತ್ವ ಸಿದ್ಧವಾಗದು.



किंच निर्गुणवाक्यस्य छागपशुन्यायेन "त्रैगुण्यवर्जितं, विना हेयैर्गुणादिभिः" इत्यादिविशेषोपसंहारोऽस्तु । नचैवं "न हिंस्यात्" इत्यस्यापि "ब्राह्मणो न हंतव्य" इत्यत्रोपसंहारात् व्यर्थहिंसा न निषिध्येतेति वाच्यम् । सार्वज्ञादिगुणेष्विव व्यर्थहिंसायां विध्यभावात् ।

एतेन "त्रैगुण्यवर्जितम्" इत्यादेरेव काकेभ्यो दधि रक्ष्यतामित्यादिवत् सामान्यपरतास्त्विति निरस्तम् । अत्र सार्वज्ञादिश्रुतिभिरिव तत्र मानांतरेण विरोधाभावात् प्रत्युत तदानुगुण्यात् ।

किंच "एवं धर्मान्पृथक् पश्यन्" इतिश्रुतौ "सविशेषणे हि" इतिन्यायेन गुणानां पार्थक्यस्यैव निषेधात् तत्समाख्यानादन्यत्रापि तथैव निषेधो युक्तः। पार्थक्याभावेऽपि च विशेषबलादेव ज्ञानानंदयोरिवैकतरपरिशेषाभावो युक्तः । अन्यथाऽऽनंदस्फुरणा-भावान्मुक्तिरपुमर्थः स्यात् ।

अपिच "साक्षी चेता केवलो निर्गुणश्च" इतिवाक्यात्पूर्व-त्रोत्तरत्र च गुणोक्तेस्तन्मध्यस्थं निर्गुणवाक्यं उपांशुयाजन्यायेन तदनुगुणं नेयम् । किंच निर्गुणशब्देन गुणमात्रनिषेधोऽयुक्तः । साक्षी चेतेत्यादिभिर्द्रष्टृत्वादिविधानेन व्याघातादिति संकोचोऽस्तु ।

**विशेषोपसंहार इति ।।** उदाहृतवचनप्रतिपन्नविशेषनिषेधपरत्वमस्त्वि-त्यर्थः ।। **सार्वज्ञादिगुणेष्विति ।।** तथाच बाधकाभावेन न हिंस्यादित्यत्र तथात्वेऽप्यत्र "यः सर्वज्ञ" इत्यादिविधायकश्रुतिरूपबाधकसत्त्वान्न तथात्वमित्यर्थः । एतेनेत्येतद्विवृणोति— **अत्रेति । श्रुताविति ।।** "यथोदकं दुर्गे वृष्टं पर्वतेषु विधावति। एवं धर्मान्पृथक् पश्यंस्तानेवानुविधावति" इति श्रुतौ भिन्नधर्मदर्शननिंदया सविशेषणे हि इति न्यायेन भिन्नत्वस्यैव निषेधादित्यर्थः ।

ननु धर्माणां धर्म्यपेक्षया पृथक्त्वाभावे धर्मो वा धर्मी वा स्यान्न धर्मधर्मिभाव इत्यत आह— **पार्थक्याभावेऽपि चेति** ।। एकस्यैव ज्ञानानंदोभयात्मकत्वात् धर्मधर्मिरूपत्वमविरुद्धमित्यर्थः ।। **पूर्वत्रेति** ।। "एको देवः सर्वभूतेषु गूढः" इत्यादावित्यर्थः ।। **उत्तरत्र चेति** ।। "एको वशी निष्क्रियाणां बहूनामेकं बीजं वहुधा यः करोति" इत्युत्तरत्र चेत्यर्थः ।। **इति संकोचोऽस्त्विति** ।। इतिशब्दः प्रकारार्थे । तथाचोक्तप्रकारेण संकोचोऽस्त्वित्यर्थः ।।



**ಕಿಂಚ ನಿರ್ಗುಣವಾಕ್ಯಸ್ಯ ಭಾಗಪಶುನ್ಯಾಯೇನ 'ತ್ರೈಗುಣ್ಯವರ್ಜಿತಂ' 'ವಿನಾ ಹೇಯೈರ್ಗುಣಾದಿಭಿಃ' ಇತ್ಯಾದಿ ವಿಶೇಷೋಪಸಂಹಾರೋಽಸ್ತು ।**

'ಪಶುನಾ ಯಜೇತ' ಎಂಬ ವಿಧಿವಾಕ್ಯದಲ್ಲಿ ಪಶುವು ಯಾಗದ್ರವ್ಯವೆಂದು ಉಕ್ತವಾಗಿದೆ. 'ಛಾಗಸ್ಯ ವಪಾಯಾ ಮೇದಸೋಽನು ಬ್ರೂಹಿ' ಎಂಬ ಮಂತ್ರದಲ್ಲಿ ಛಾಗವು ಯಾಗದ್ರವ್ಯವೆಂದಿದೆ. ಇಲ್ಲಿ ಪರಸ್ಪರ ವಿರೋಧವಿಲ್ಲ. ಉಪಕ್ರಮದ ವಿಧಿವಾಕ್ಯವು ಹೇಳಿದ ಪಶುಸಾಮಾನ್ಯವನ್ನು ಉಪಸಂಹಾರ ಮಂತ್ರವು ಹೇಳುವ ಪಶುವಿಶೇಷವಾದ ಛಾಗದಲ್ಲಿ ಪರ್ಯವಸಾನ ಮಾಡುವುದು ಯುಕ್ತವೆಂದು ಪೂರ್ವಮೀಮಾಂಸೆಯಲ್ಲಿ ಹೇಳಿದೆ.

ಹಾಗೇ ಪ್ರಕೃತದಲ್ಲಿಯೂ ಪರಸ್ಪರ ವಿರೋಧವಿಲ್ಲ. ಸಾಮಾನ್ಯತಃ ಗುಣನಿಷೇಧವನ್ನು ಹೇಳುವ ನಿರ್ಗುಣವಾಕ್ಯವನ್ನು, ಮೊದಲಿಗೆ ಸಾರ್ವಜ್ಞಾದಿ ಗುಣವಿಶೇಷವನ್ನು ಹೇಳುವ ಸಗುಣವಾಕ್ಯಾನುಸಾರವಾಗಿ, ಸಾರ್ವಜ್ಞಾದೀತರ ಪ್ರಾಕೃತಗುಣನಿಷೇಧ ಪರವಾಗಿ ಸಂಕೋಚ ಮಾಡುವುದು ಯುಕ್ತವಾಗುವುದು. 'ತ್ರೈಗುಣ್ಯ ವರ್ಜಿತಮಜಂ ವಿಭುಮಾದ್ಯಮೀಶಂ ವಂದೇ ಭವಘ್ನಮಮರಾಸುರಸಿದ್ಧವಂದ್ಯಂ' 'ವಿನಾ ಹೇಯೈರ್ಗುಣಾದಿಭಿಃ' ಎಂದು ತ್ರೈಗುಣ್ಯನಿಷೇಧ ಮತ್ತು ಹೇಯ ಲೌಕಿಕ ಗುಣಾದಿನಿಷೇಧಗಳು ಪ್ರಮಾಣಸಿದ್ಧವಾದ್ದರಿಂದ ಅವುಗಳಲ್ಲಿ ನಿರ್ಗುಣಶ್ರುತಿಗೆ ಸಂಕೋಚಮಾಡುವುದು ಪ್ರಶಸ್ತ.

**ನ ಚೈವಂ 'ನ ಹಿಂಸ್ಯಾತ್' ಇತ್ಯಸ್ಯಾಪಿ 'ಬ್ರಾಹ್ಮಣೋ ನ ಹಂತವ್ಯಃ' ಇತ್ಯತ್ರೋಪಸಂಹಾರಾತ್ ವ್ಯರ್ಥಹಿಂಸಾ ನ ನಿಷಿಧ್ಯೇತ ಇತಿ ವಾಚ್ಯಂ । ಸಾರ್ವಜ್ಞಾದಿ ಗುಣೇಷ್ವಿವ ವ್ಯರ್ಥಹಿಂಸಾಯಾಂ ವಿಧ್ಯಭಾವಾತ್ ।**

ಹಾಗಾದರೆ 'ನ ಹಿಂಸ್ಯಾತ್ ಸರ್ವಾ ಭೂತಾನಿ' ಎಂಬ ಸಾಮಾನ್ಯನಿಷೇಧವನ್ನೂ ಕೂಡ 'ಬ್ರಾಹ್ಮಣೋ ನ ಹಂತವ್ಯಃ' ಎಂಬ ವಿಶೇಷ ನಿಷೇಧದಲ್ಲಿ ಪರ್ಯವಸಾನ ಮಾಡುವ ಪ್ರಸಂಗ ಬರುತ್ತದೆ. 'ಬ್ರಾಹ್ಮಣ ಹಿಂಸೆಯನ್ನು ಮಾತ್ರ ಮಾಡಬಾರದು, ಇತರ ಪ್ರಾಣಿಗಳನ್ನು ವ್ಯರ್ಥವಾಗಿ

ಹಿಂಸೆ ಮಾಡಿದರೆ ಪಾಪವಿಲ್ಲ' ಎಂದಾದೀತು—ಎಂದರೆ ಅದು ಸರಿಯಲ್ಲ. ಸಾರ್ವಜ್ಞಾದಿ ಗುಣವಿಷಯದಲ್ಲಿ ವಿಧಾನವಿರುವುದರಿಂದ ಸಾರ್ವಜ್ಞಾದೀತರ ಗುಣನಿಷೇಧದಲ್ಲಿ ನಿರ್ಗುಣವಾಕ್ಯ ಪರ್ಯವಸಾನ ಮಾಡುವುದು ಯುಕ್ತವೆ. ಆದರೆ ವ್ಯರ್ಥಹಿಂಸಾ ವಿಷಯದಲ್ಲಿ ವಿಧಾನವಿಲ್ಲ. ಇರುತ್ತಿದ್ದರೆ 'ವ್ಯರ್ಥಹಿಂಸಾದಿಂದ ಪಾಪವಿಲ್ಲ, ಬ್ರಾಹ್ಮಣ ಹಿಂಸೆಯಿಂದ ಮಾತ್ರ ಪಾಪ'ವೆಂದು ಅಭಿಪ್ರಾಯದಿಂದ ಸರ್ವಪ್ರಾ ಹಿಂಸಾ ನಿಷೇಧವನ್ನು ಬ್ರಾಹ್ಮಣಹಿಂಸಾ ನಿಷೇಧದಲ್ಲಿ ಪರ್ಯವಸಾನ ಮಾಡಬಹುದಿತ್ತು.

**ಏತೇನ 'ತ್ರೈಗುಣ್ಯವರ್ಜಿತಂ ಇತ್ಯಾದೇರೇವ ಕಾಕೇಭ್ಯೋ ದಧಿ ರಕ್ಷ್ಯತಾಂ ಇತ್ಯಾದಿವತ್ ಸಾಮಾನ್ಯಪರತಾಸ್ತು' ಇತಿ ನಿರಸ್ತಂ । ಅತ್ರ ಸಾರ್ವಜ್ಞಾದಿ ಶ್ರುತಿಭಿರಿವ ತತ್ರ ಮಾನಾಂತರೇಣ ವಿರೋಧಾಭಾವಾತ್ । ಪ್ರತ್ಯುತ ತದಾನುಗುಣ್ಯಾತ್**

'ತ್ರೈಗುಣ್ಯವರ್ಜಿತಂ' ಎಂಬ ಗುಣವಿಶೇಷ ನಿಷೇಧಕ ವಾಕ್ಯವನ್ನೇ 'ಕಾಕೇಭ್ಯೋ ದಧಿ ರಕ್ಷ್ಯತಾಂ' ಎಂಬ ವಾಕ್ಯದಂತೆ ಸಾಮಾನ್ಯತಃ ಗುಣನಿಷೇಧಪರವೆಂದು ಏಕೆ ಇಟ್ಟುಕೊಳ್ಳಬಾರದು? ಕಾಕದಿಂದ ದಧಿರಕ್ಷಣ ಮಾಡೆನ್ನುವ 'ಕಾಕೇಭ್ಯೋ ದಧಿ ರಕ್ಷ್ಯತಾಂ' ಎಂಬುದಕ್ಕೆ ದಧ್ಯುಪಘಾತಕ ಸಾಮಾನ್ಯದಿಂದ ದಧಿರಕ್ಷಣ ಮಾಡಬೇಕೆನ್ನುವ ತಾತ್ಪರ್ಯವನ್ನು ಒಪ್ಪುತ್ತೇವೆ. ಹಾಗೇ ತ್ರೈಗುಣ್ಯಮಾತ್ರ ನಿಷೇಧವನ್ನು ಹೇಳುವ ವಾಕ್ಯಕ್ಕೆ ಗುಣಸಾಮಾನ್ಯ ನಿಷೇಧದಲ್ಲಿಯೇ ವಿವಕ್ಷೆ ಎಂದರೆ ವಿರೋಧವಿರುವುದಿಲ್ಲ, ಎಂದು ಅದ್ವೈತಿ ಹೇಳಿದರೆ ಅದು ಸರಿಯಲ್ಲ. ಏಕೆಂದರೆ, 'ತ್ರೈಗುಣ್ಯವರ್ಜಿತಂ' ಎಂಬ ಗುಣ ವಿಶೇಷ ನಿಷೇಧವನ್ನು ಗುಣಸಾಮಾನ್ಯ ನಿಷೇಧ ಪರವಾಗಿಟ್ಟುಕೊಂಡರೆ 'ಯಃ ಸರ್ವಜ್ಞಃ' ಇತ್ಯಾದಿ ಸಾರ್ವಜ್ಞಾದಿ ವಾಕ್ಯಗಳ ವಿರೋಧ ಬರುತ್ತದೆ. ಆದರಿಂದ ಗುಣಸಾಮಾನ್ಯ ನಿಷೇಧಪರತ್ವವನ್ನು ಒಪ್ಪಬಾರದು. 'ಕಾಕೇಭ್ಯೋ ದಧಿ ರಕ್ಷ್ಯತಾಂ' ಎಂಬಲ್ಲಿ ದಧ್ಯುಪಘಾತಕ ಸಾಮಾನ್ಯನಿಷೇಧ ತಾತ್ಪರ್ಯವಿಟ್ಟುಕೊಂಡರೆ ಅದಕ್ಕೆ ಪ್ರಮಾಣಾಂತರ ವಿರೋಧ ಬರುವುದಿಲ್ಲ, ಪ್ರಮಾಣಾಂತರದ ಆನುಕೂಲ್ಯವೇ ಇದೆ.

**ಕಿಂಚ 'ಏವಂ ಧರ್ಮಾನ್ ಪೃಥಕ್ ಪಶ್ಯನ್'ಇತಿ ಶ್ರುತೌ ಸವಿಶೇಷಣೇಹೀತಿ ನ್ಯಾಯೇನ ಗುಣಾನಾಂ ಪಾರ್ಥಕ್ಯಸ್ಯೈವ ನಿಷೇಧಾತ್ ತತ್ ಸಮಾಖ್ಯಾನಾತ್ ಅತ್ರಾಪಿ ತಥೈವ ನಿಷೇಧೋ ಯುಕ್ತಃ ।**

'ಏವಂ ಧರ್ಮಾನ್ ಪೃಥಕ್ ಪಶ್ಯನ್ ತಾನೇವಾನುವಿಧಾವತಿ' ಎಂಬ ಶ್ರುತಿಯಲ್ಲಿ 'ಗುಣಗಳನ್ನು ಬೇರೆಯಾಗಿ ಕಾಣುವವನು ನರಕಭಾಗಿಯಾಗುತ್ತಾನೆ' ಎಂದು ನಿಂದೆ ಮಾಡುತ್ತ ಬ್ರಹ್ಮನಲ್ಲಿ ಭಿನ್ನಧರ್ಮಗಳನ್ನು ನಿಷೇಧಮಾಡಿದೆ. 'ಸವಿಶೇಷಣೇ ಹಿ ವಿಧಿನಿಷೇಧೌ ಸತಿ ವಿಶೇಷ್ಯೇ ಬಾಧೇ ವಿಶೇಷಣಮುಪಸಂಕ್ರಾಮತಃ' 'ವಿಶೇಷಣಯುಕ್ತವಾದ ಧರ್ಮಿಯಲ್ಲಿ ವಿಧಿನಿಷೇಧಗಳನ್ನು ಮಾಡಿದ ಸ್ಥಳದಲ್ಲಿ ಅವು ವಿಶೇಷ್ಯದಲ್ಲಿ ಕೂಡದಿದ್ದರೆ ವಿಶೇಷಣದಲ್ಲಿಯೇ ಪರ್ಯವಸಾನ

ವಾಗುವುವು' ಎಂಬ ನ್ಯಾಯದಂತೆ, 'ಬ್ರಹ್ಮನಿಗಿಂತ 'ಪೃಥಕ್' ಬೇರೆಯಾದ ಗುಣಗಳನ್ನು ಕಾಣಬಾರದೆಂ'ದರೆ ಈ ನಿಷೇಧವು ವಿಶೇಷ್ಯವಾದ ಗುಣಗಳಲ್ಲಿ ಕೂಡದಿರುವುದರಿಂದ ವಿಶೇಷಣವಾದ ಪೃಥಕ್ತ್ವದಲ್ಲಿ ಪರ್ಯವಸಾನ ಹೊಂದುತ್ತದೆ, 'ಬ್ರಹ್ಮನಲ್ಲಿ ಗುಣಗಳನ್ನು ಕಾಣಬೇಕು, ಆದರೆ ಬ್ರಹ್ಮನಿಗಿಂತ ಬೇರೆಯಾಗಿ ಕಾಣಬಾರದು' ಎಂದು. ಹೀಗೆ ಈ ಶ್ರುತಿಯಲ್ಲಿ ಗುಣಗಳನ್ನು ಸ್ವರೂಪತಃ ನಿಷೇಧ ಮಾಡದೆ ಅವುಗಳಲ್ಲಿ ಭೇದರೂಪವಾದ ವಿಶೇಷಣವನ್ನು ನಿಷೇಧ ಮಾಡುವುದರಿಂದ ಈ ಶ್ರುತಿಯ ಸಮಾಖ್ಯೆಯಿಂದ 'ನಿರ್ಗುಣಶ್ಚ' ಎಂಬ ಶ್ರುತಿಯೂ ಕೂಡ ಗುಣಗಳನ್ನು ಸ್ವರೂಪೇಣ ನಿಷೇಧ ಮಾಡುತ್ತಿಲ್ಲ, ಅವುಗಳಲ್ಲಿ ಭೇದಮಾತ್ರವನ್ನು ನಿಷೇಧ ಮಾಡುತ್ತಿದೆ ಎಂದು ಸಿದ್ಧವಾಗುತ್ತದೆ.

**ಪಾರ್ಥಕ್ಯಾಭಾವೇಽಪಿ ಚ ವಿಶೇಷ ಬಲಾದೇವ ಜ್ಞಾನಾನಂದಯೋರಿವ ಏಕತರ ಪರಿಶೇಷಾಭಾವೋ ಯುಕ್ತಃ । ಅನ್ಯಥಾ ಆನಂದ ಸ್ಫುರಣಾಭಾವಾತ್ ಮುಕ್ತಿಃ ಅಪುಮರ್ಥಃ ಸ್ಯಾತ್ ।**

'ಧರ್ಮಕ್ಕೆ ಧರ್ಮಿಯಿಂದ ಭೇದವಿಲ್ಲವೆಂದರೆ ಧರ್ಮ ಒಂದಿದೆ, ಬೇರೆ ಧರ್ಮಿ ಇಲ್ಲ, ಎಂದು. ಅಥವಾ ಧರ್ಮಿಯೊಂದಿದೆ, ಬೇರೆ ಧರ್ಮವಿಲ್ಲ ಎಂದು, ಯಾವುದಾದರೂ ಒಂದು ಇದೆ, ಎರಡಿಲ್ಲವೆನ್ನುವ ಪ್ರಸಂಗ ಬರುತ್ತದೆ'—ಎನ್ನಬಾರದು. ಧರ್ಮಧರ್ಮಿಗಳಿಗೆ ಭೇದವಿಲ್ಲದಿದ್ದರೂ ವಿಶೇಷಬಲದಿಂದ ಧರ್ಮಧರ್ಮಿಗಳು ಎರಡೂ ಇವೆ ಎನ್ನಬೇಕು.

ಇದಕ್ಕೆ ಉದಾಹರಣೆ—ಬ್ರಹ್ಮನಲ್ಲಿ ಜ್ಞಾನ ಆನಂದಗಳು ಇವೆ. ಆದರೆ ಅವು ಬ್ರಹ್ಮನಿಗಿಂತ ಭಿನ್ನ ಅಲ್ಲ. ಆದರೂ 'ಜ್ಞಾನವಾಗಲಿ ಆನಂದವಾಗಲಿ ಒಂದೇ ಇದೆ. ಜ್ಞಾನಾನಂದಗಳು ಎರಡು ಇಲ್ಲ' ಎನ್ನುವುದಿಲ್ಲ. ಎರಡೂ ಇವೆ. ವಿಶೇಷ ಬಲದಿಂದ ಇದು ಕೂಡುತ್ತದೆ ಎನ್ನಬೇಕು ಎಂದು. ಹೀಗೆ ಒಪ್ಪದಿದ್ದರೆ, ಮುಕ್ತಿಯಲ್ಲಿ ಮುಕ್ತಾತ್ಮನಿಗೆ ಜ್ಞಾನ ಅಥವಾ ಆನಂದ ಮಾತ್ರ ಇದೆ ಎಂದರೆ, ಜ್ಞಾನಮಾತ್ರವಿದ್ದರೆ ಆನಂದವಿಲ್ಲದ್ದರಿಂದ ಆನಂದಜ್ಞಾನವಿಲ್ಲ. ಆನಂದ ಮಾತ್ರವಿದ್ದರೂ ಜ್ಞಾನವಿಲ್ಲದ್ದರಿಂದ ಆನಂದದ ಜ್ಞಾನವಿಲ್ಲವೆಂದು ಆನಂದ-ಜ್ಞಾನಗಳು ಎರಡು ಇಲ್ಲವೆಂದಾದೀತು. ಮುಕ್ತಿಯು ಅಪುರುಷಾರ್ಥವಾದೀತು. ಅಂದರೆ ಯಾವ ಪುರುಷನಿಗೂ ಇಷ್ಟವಾಗದೆ ಹೋದೀತೆಂದು ಅನಿಷ್ಟಪ್ರಸಂಗವಿದೆ.

**ಅಪಿ ಚ 'ಸಾಕ್ಷೀ ಚೇತಾ ಕೇವಲೋ ನಿರ್ಗುಣಶ್ಚ' ಇತಿ ವಾಕ್ಯಾತ್ ಪೂರ್ವತ್ರ ಉತ್ತರತ್ರ ಚ ಗುಣೋಕ್ತೇಃ ತನ್ಮಧ್ಯಸ್ಥಂ ನಿರ್ಗುಣವಾಕ್ಯಂ ಉಪಾಂಶುಯಾಜ ನ್ಯಾಯೇನ ತದನುಗುಣಂ ನೇಯಂ ।**

'ಸಾಕ್ಷೀ ಚೇತಾ ಕೇವಲೋ ನಿರ್ಗುಣಶ್ಚ' ಎಂಬ ನಿರ್ಗುಣವಾಕ್ಯದ ಹಿಂದೂ ಮುಂದೂ ಗುಣಗಳೇ ಉಕ್ತವಾಗಿವೆ. ಆದರಿಂದ ಅವುಗಳ ಮಧ್ಯದಲ್ಲಿರುವ ಈ ನಿರ್ಗುಣವಾಕ್ಯವೂ ಕೂಡ ಅವುಗಳಿಗೆ ಅನುಗುಣವಾಗಿ ಗುಣಪರವೇ ಆಗಿದೆ ಎಂದು ತಿಳಿಯಬೇಕು.

ಇದಕ್ಕೆ ಉದಾಹರಣೆ— ಉಪಾಂಶುಯಾಜವಾಕ್ಯ. ಉಪಾಂಶು ಯಾಜನ್ಯಾಯವು ಹಿಂದೆ 'ಏಕಮೇವಾದ್ವಿತೀಯಂ' ಶ್ರುತ್ಯರ್ಥ ವಿಚಾರದಲ್ಲಿ ಬಂದಿದೆ. 'ಜಾಮಿ ವಾ ಏತದ್ ಯಜ್ಞಸ್ಯ ಕ್ರಿಯತೇ' ಎಂದು ಜಾಮಿತೋಪಕ್ರಮ ಮತ್ತು 'ಅಗ್ನಿಷೋಮಾವುಪಾಂಶು ಯಷ್ಟವ್ಯೌ ಅಜಾಮಿತ್ವಾಯ' ಎಂದು ಅಜಾಮಿತೋಪಸಂಹಾರ ಇವು ಎರಡೂ ಸೇರಿ ಒಂದು ವಾಕ್ಯವು 'ಉಪಾಂಶುಯಾಜವಾಕ್ಯ'ವಾಗಿದೆ. ಇದರ ಮಧ್ಯದಲ್ಲಿ 'ವಿಷ್ಣುರುಪಾಂಶು ಯಷ್ಟವ್ಯಃ' 'ಪ್ರಜಾಪತಿರುಪಾಂಶು ಯಷ್ಟವ್ಯಃ' 'ಅಗ್ನಿಷೋಮಾವುಪಾಂಶು ಯಷ್ಟವ್ಯೌ' ಎಂಬ ಮೂರು ವಿಷ್ಣ್ವಾದಿ ವಾಕ್ಯಗಳು ಬರುತ್ತಿವೆ. ಇವು ದೇವತೆಗಳನ್ನು ಹೇಳುತ್ತ ವಿಧಾಯಕ ತವ್ಯಪ್ರತ್ಯಯದಿಂದಲೂ ಯುಕ್ತವಾಗಿದ್ದು ಪ್ರಧಾನ ವಿಧಿ ವಾಕ್ಯಗಳಂತೆ ಕಾಣುತ್ತ ವಿಷ್ಣ್ವಾದಿ ಮೂರು ಯಾಗ ವಿಧಾನಮಾಡುವಂತೆ ಕಂಡರೂ ಹಾಗೆ ಸ್ವೀಕರಿಸಬಾರದು. ಅವು ವಿಧಾಯಕವಲ್ಲ. ವಿಧಾಯಕವಾದ ಉಪಾಂಶುಯಾಜವಾಕ್ಯದ ಮಧ್ಯದಲ್ಲಿ ಬರುವುದರಿಂದ ಅದಕ್ಕನುಸಾರವಾಗಿ ಇವು ಅದಕ್ಕೇ ಅರ್ಥವಾದವಾಗಿವೆ ಎಂದೇ ಸ್ವೀಕರಿಸಬೇಕು.

ಹಾಗೇ ಪೂರ್ವೋತ್ತರ ಸಗುಣವಾಕ್ಯಗಳ ನಡುವೆ ಬರುವ ಈ ನಿರ್ಗುಣವಾಕ್ಯವೂ ಅವುಗಳಿಗೆ ಅನುಸಾರವಾಗಿ ಗುಣಪರವೆಂದೇ ಸ್ವೀಕರಿಸಬೇಕು. ಈ ವಾಕ್ಯದ ಹಿಂದೆ

'ಏಕೋ ದೇವಃ ಸರ್ವಭೂತೇಷು ಗೂಢಃ ।
ಸರ್ವವ್ಯಾಪೀ ಸರ್ವಭೂತಾಂತರಾತ್ಮಾ ।
ಕರ್ಮಾಧ್ಯಕ್ಷಃ ಸರ್ವಭೂತಾಧಿವಾಸಃ ।
ಸಾಕ್ಷೀ ಚೇತಾ ಕೇವಲೋ ನಿರ್ಗುಣಶ್ಚ ॥'

ಎಂದು ಹಿಂದೆ ಗುಣಪರವಾಕ್ಯಗಳಿವೆ. ಮುಂದೆಯೂ

'ಏಕೋ ವಶೀ ನಿಷ್ಕ್ರಿಯಾಣಾಂ ಬಹೂನಾಂ ।
ಏಕಂ ಬೀಜಂ ಬಹುಧಾ ಯಃ ಕರೋತಿ ।
ತಮಾತ್ಮಸ್ಥಂ ಯೇऽನುಪಶ್ಯಂತಿ ಧೀರಾಃ ।
ತೇಷಾಂ ಸುಖಂ ಶಾಶ್ವತಂ ನೇತರೇಷಾಂ ।'

ಎಂದು ಸರ್ವಸ್ವಾಮಿತ್ವಾದಿ ಗುಣಗಳನ್ನು ಹೇಳಿ ಅವುಗಳ ಜ್ಞಾನದಿಂದ ಶಾಶ್ವತವಾದ ಮುಕ್ತಿಸುಖ ರೂಪ ಫಲವನ್ನು ಹೇಳಿದೆ (ಶ್ವೇತಾಶ್ವತರ ಉ.6-11,12)

**ಕಿಂ ಚ ನಿರ್ಗುಣಶಬ್ದೇನ ಗುಣಮಾತ್ರನಿಷೇಧೋऽಯುಕ್ತಃ । ಸಾಕ್ಷೀ ಚೇತೇತ್ಯಾದಿಭಿಃ ದ್ರಷ್ಟೃತ್ವಾದಿ ವಿಧಾನೇನ ವ್ಯಾಘಾತಾತ್, ಇತಿ ಸಂಕೋಚೋऽಸ್ತು ।**

'ಸಾಕ್ಷೀ ಚೇತಾ ಕೇವಲೋ ನಿರ್ಗುಣಶ್ಚ' ಎಂಬ ಈ ವಾಕ್ಯದಲ್ಲಿಯೇ 'ಸಾಕ್ಷೀ' ಅಂದರೆ ಸಾಕ್ಷಾದ್ ದ್ರಷ್ಟಾ 'ಚೇತಾ' ಅಂದರೆ ಸರ್ವಜ್ಞ 'ಕೇವಲ' ಜಡಮಿಶ್ರವಾಗದ ಚಿನ್ಮಯ

ಸ್ವರೂಪದವನು ಎಂದು ಅನೇಕ ಗುಣವಿಶೇಷಗಳನ್ನು ಹೇಳಿ 'ನಿರ್ಗುಣ' ಶಬ್ದದಿಂದ ಆ ಎಲ್ಲ ಗುಣಗಳನ್ನೂ ಸಾಮಾನ್ಯವಾಗಿ ನಿಷೇಧ ಮಾಡಿದರೆ ಸ್ವವಚನ ವಿರೋಧ ಸ್ಪಷ್ಟ. ಆದರಿಂದ ಅಯುಕ್ತ. ಆದರಿಂದ ಹಿಂದೆ ಹೇಳಿದಂತೆ ನಿರ್ಗುಣತ್ವಕ್ಕೆ ತ್ರಿಗುಣರಹಿತತ್ವದಲ್ಲಿ ಸಂಕೋಚವೆನ್ನೋಣ.



साक्षित्वादेस्तात्त्विकत्वादविरोध इति तु निरस्तम् । उक्तं च–

''युक्तोऽयुक्तश्च यद्यर्थ आगमस्य प्रतीयते ।
स्यात्तत्र युक्त एवार्थः'' ''नावाक्या युक्तिरिष्यते ।।''
इति (अनु.२.१.२०, सू.भाष्य २.१.१८) एवंच–

उपक्रमादिन्यायेन श्रुतिलिंगनयात्तथा ।
विशेषसामान्यनयान्न्यायान्निरवकाशतः ।। १ ।।

वाहुल्यन्यायतश्चोपजीव्यत्वन्यायतस्तथा ।
पशुच्छागनयाच्चैव सविशेषनयात्तथा ।। २ ।।

उपांशुयाजन्यायेन युक्तायुक्तनयात्तथा ।
आदृतत्वात्सूत्रकृता प्रबला सगुणश्रुतिः ।। ३ ।।

तस्मादहिंसावाक्यमग्नीषोमीयेतरहिंसाया इव निर्गुणवाक्यं श्रौतसार्वज्ञादीतरतर्काभासप्राप्तहेयसुखादिगुणानां निषेधकमिति न तद्बाधकम् । एवंच–

हिंसाऽहिंसावाक्यसाम्याद्गुणिनिर्गुणवाक्ययोः ।
अविरोधेऽप्यमानत्वं ब्रूषे सौगतसौहृदात् ।।

नावाक्येति ।। न वाक्यविरुद्धेत्यर्थः । सगुणवाक्यस्य प्राबल्योपपादनन्यायान् संगृह्णाति– एवंचेति । तर्काभासप्राप्तेति ।। ब्रह्म दुःखि चेतनत्वाज्जीवादिवदित्यादितर्काभासप्राप्तेत्यर्थः ।।



**ಸಾಕ್ಷಿತ್ವಾದೇಸ್ತಾತ್ವಿಕತ್ವಾದವಿರೋಧ ಇತಿ ತು ನಿರಸ್ತಂ ।**

**ಉಕ್ತಂ ಚ– 'ಯುಕ್ತೋಽಯುಕ್ತಶ್ಚ ಯದ್ಯರ್ಥ ಆಗಮಸ್ಯ ಪ್ರತೀಯತೇ ।**

**ಸ್ಯಾತ್ತತ್ರ ಏಕ ಏವಾರ್ಥಃ ಯುಕ್ತಿಶ್ಚ ತ್ರಿವಿಧಾ ಮತಾ' ॥**

**(ಅನುವ್ಯಾಖ್ಯಾನ 2.1.20)**

'ಸರ್ವಸಾಕ್ಷಿತ್ವ ಜ್ಞಾನರೂಪತ್ವ ಕೇವಲತ್ವಗಳು ತಾತ್ವಿಕ ಗುಣಗಳಾದ್ದರಿಂದ ಸರ್ವಜ್ಞತ್ವಾದಿ ಅತಾತ್ವಿಕಗುಣಾಭಾವ ರೂಪವಾದ ನಿರ್ಗುಣತ್ವಕ್ಕೆ ವಿರೋಧಿಯಲ್ಲ. ಆದರಿಂದ ವ್ಯಾಹತಿಯಿಲ್ಲ' ಎನ್ನುವುದನ್ನು ಹಿಂದೆಯೇ ನಿರಾಕರಿಸಿದ್ದೇವೆ, ಶ್ರುತಿ ಬೋಧಿತವಾದ ಸರ್ವಜ್ಞತ್ವಾದಿ ಗುಣಗಳನ್ನು ಅತಾತ್ವಿಕಗುಣಗಳೆನ್ನಲಾಗದು ಎಂದು.

'ಆಗಮವಾಕ್ಯದಲ್ಲಿ ಮೇಲುನೋಟಕ್ಕೆ ಯುಕ್ತಿಯುಕ್ತವಾದ ಅರ್ಥವೂ ಯುಕ್ತಿಯುಕ್ತವಲ್ಲದ ಅರ್ಥವೂ ಕಂಡುಬಂದರೆ ಅಲ್ಲಿ ಯುಕ್ತಿಯುಕ್ತವಾದ ಅರ್ಥವನ್ನೇ ವಾಕ್ಯದ ಅರ್ಥವೆಂದು ಸ್ವೀಕರಿಸಬೇಕು. ಯುಕ್ತಿಗಳು ಮೂರು ಬಗೆ—ಪ್ರತ್ಯಕ್ಷ ಮೂಲಕವಾದ ಯುಕ್ತಿ, ಅನುಮಾನ ಮೂಲಕವಾದ ಯುಕ್ತಿ ಮತ್ತು ಆಗಮ ಮೂಲಕವಾದ ಯುಕ್ತಿ ಎಂದು' ಹೀಗೆ ಶ್ರೀಮದಾಚಾರ್ಯರು ನವಿಲಕ್ಷಣತ್ವಾಧಿಕರಣ ಅನುವ್ಯಾಖ್ಯಾನದಲ್ಲಿ ಹೇಳಿದ್ದಾರೆ. ಮತ್ತು,

**'ನಾವಾಕ್ಯಾ ಯುಕ್ತಿರಿಷ್ಯತೇ' ಇತಿ ।**

ಸೂತ್ರಭಾಷ್ಯ (2.1.18)ದಲ್ಲಿಯೂ ಶ್ರೀಮದಾಚಾರ್ಯರು ಹೇಳಿದ್ದಾರೆ—

ಪರಸ್ಪರ ವಿರೋಧೇ ತು ವಾಕ್ಯಾನಾಂ ಯತ್ರ ಯುಕ್ತತಾ ।

ತಥೈವಾರ್ಥಃ ಪರಿಜ್ಞೇಯೋ ನಾವಾಕ್ಯಾಯುಕ್ತಿರಿಷ್ಯತೇ ॥

ಇತಿ ಬೃಹತ್ಸಂಹಿತಾಯಾಂ ॥

'ವಾಕ್ಯಗಳಿಗೆ ಪರಸ್ಪರ ವಿರೋಧ ಕಂಡಲ್ಲಿ ಯಾವ ವಾಕ್ಯ ಹೇಳುವುದು ಯುಕ್ತಿಯುಕ್ತವಾಗಿರುತ್ತದೋ ಆ ವಾಕ್ಯದ ಅರ್ಥವು ಪ್ರಾಮಾಣಿಕವಾಗಿರುತ್ತದೆ. ವಾಕ್ಯವಿರುದ್ಧವಾದ ಕೇವಲ ಯುಕ್ತಿಯಿಂದ ಸಿದ್ಧವಾಗುವ ಅರ್ಥವನ್ನು ಪ್ರಾಮಾಣಿಕವೆಂದು ಸ್ವೀಕರಿಸಲಾಗದು' ಎಂದು ಬೃಹತ್ಸಂಹಿತಾ ವಚನವು ಹೇಳುತ್ತಿದೆ'

**ವಿಶೇಷಾಂಶ–**

'ಯುಕ್ತೋಽಯುಕ್ತಶ್ಚ ಯತ್ರಾರ್ಥ ಆಗಮಸ್ಯ ಪ್ರತೀಯತೇ ।

ಸ್ಯಾತ್ತತ್ರ ಯುಕ್ತ ಏವಾರ್ಥೋ ನಾವಾಕ್ಯಾಯುಕ್ತಿರಿಷ್ಯತೇ ॥'

ಎಂದು ನ್ಯಾಯಾಮೃತ ಪ್ರಚಲಿತಪಾಠದಲ್ಲಿ ನಾಲ್ಕು ಪಾದಗಳ ಒಂದು ಶ್ಲೋಕ ಉದಾಹೃತವಾಗಿರುವಂತೆ ಕಾಣುತ್ತದೆ. ಆದರೆ ಹಾಗೆ ಒಂದು ಶ್ಲೋಕ ಎಲ್ಲಿಯೂ ಇಲ್ಲ. ಮೊದಲಿನ ಮೂರುಪಾದಗಳು ಅನುವ್ಯಾಖ್ಯಾನ ಶ್ಲೋಕದವುಗಳು. ಕೊನೆಯ ಒಂದು ಪಾದವು ಸೂತ್ರಭಾಷ್ಯ

ಶ್ಲೋಕದ ಕೊನೆಯ ಪಾದ. ಆದರಿಂದ 'ಏವಾರ್ಥಃ' ಎಂಬುದನ್ನು ಸಂಧಿಮಾಡಿ 'ಏವಾರ್ಥೋ' ಎನ್ನುವ ಪಾಠ ಸರಿಯಲ್ಲ. ಮತ್ತು 'ಯತ್ರ' ಎಂಬಲ್ಲಿ 'ಯದಿ' ಎಂದು ಪಾಠ.

**ಏವಂಚ ಉಪಕ್ರಮಾದಿನ್ಯಾಯೇನ ಶ್ರುತಿಲಿಂಗನಯಾತ್ ತಥಾ ।**
**ವಿಶೇಷಸಾಮಾನ್ಯನಯಾತ್ ನ್ಯಾಯಾನ್ನಿರವಕಾಶತಃ ।**
**ಬಾಹುಲ್ಯನ್ಯಾಯತಶ್ಚೋಪಜೀವ್ಯತ್ವ ನ್ಯಾಯತಸ್ತಥಾ**
**ಪಶುಚ್ಛಾಗನಯಾಚ್ಚೈವ ಸವಿಶೇಷ ನಯಾತ್ ತಥಾ**
**ಉಪಾಂಶುಯಾಜ ನ್ಯಾಯೇನ ಯುಕ್ತಾಯುಕ್ತ ನಯಾತ್ತಥಾ**
**ಆದೃತತ್ವಾತ್ ಸೂತ್ರಕೃತಾ ಪ್ರಬಲಾ ಸಗುಣ ಶ್ರುತಿಃ ।**

ಏವಂಚ ಉಪಕ್ರಮಾಧಿಕರಣನ್ಯಾಯ ಶ್ರುತಿಲಿಂಗನ್ಯಾಯ ವಿಶೇಷಸಾಮಾನ್ಯನ್ಯಾಯ ನಿರವಕಾಶತ್ವನ್ಯಾಯ ಬಾಹುಲ್ಯನ್ಯಾಯ ಉಪಜೀವ್ಯತ್ವನ್ಯಾಯ ಪಶುಚ್ಛಾಗನ್ಯಾಯ ಸವಿಶೇಷಣ ನ್ಯಾಯ ಉಪಾಂಶುಯಾಜನ್ಯಾಯ ಮತ್ತು ಯುಕ್ತಾಯುಕ್ತನ್ಯಾಯ ಈ ಎಲ್ಲ ನ್ಯಾಯಗಳಿಂದ ಸಗುಣಶ್ರುತಿಯನ್ನು ಸೂತ್ರಕಾರರು ಆದರಿಸಿರುವುದರಿಂದ ಸಗುಣಶ್ರುತಿಯೇ ಪ್ರಬಲ.

**ತಸ್ಮಾತ್ ಅಹಿಂಸಾವಾಕ್ಯಂ ಅಗ್ನೀಷೋಮೀಯೇತರ ಹಿಂಸಾಯಾ ಇವ, ನಿರ್ಗುಣ ವಾಕ್ಯಂ ಶ್ರೌತಸಾರ್ವಜ್ಞಾದೀತರ ತರ್ಕಾಭಾಸಪ್ರಾಪ್ತ ಹೇಯ ಸುಖಾದಿಗುಣಾನಾಂ ನಿಷೇಧಕಂ ಇತಿ ನ ತದ್ಬಾಧಕಂ । ಏವಂ ಚ ।**

**ಹಿಂಸಾऽಹಿಂಸಾವಾಕ್ಯಸಾಮ್ಯಾದ್ ಗುಣನಿರ್ಗುಣವಾಕ್ಯಯೋಃ ।**
**ಅವಿರೋಧೇऽಪ್ಯಮಾನತ್ವಂ ಬ್ರೂಷೇ ಸೌಗತ ಸೌಹೃದಾತ್ ॥**

ಆದರಿಂದ ಅಗ್ನೀಷೋಮೀಯ ಹಿಂಸೇತರವಾದ ವ್ಯರ್ಥವಾದ ಹಿಂಸೆಗೆ ನಿಷೇಧಕವಾಗಿರುವ 'ನ ಹಿಂಸ್ಯಾತ್ ಸರ್ವಾ ಭೂತಾನಿ' ಎಂಬ ನಿಷೇಧವು ಹೇಗೆ ಅಗ್ನೀಷೋಮೀಯ ಹಿಂಸೆಗೆ ಬಾಧಕವಾಗುವುದಿಲ್ಲವೋ, ಹಾಗೇ ಶ್ರುತಿಬೋಧಿತಸಾರ್ವಜ್ಞಾದೀತರವಾದ, 'ಬ್ರಹ್ಮನು ದುಃಖಿ, ಚೇತನನಾದ್ದರಿಂದ, ಜೀವನಂತೆ' ಇತ್ಯಾದಿ ತರ್ಕಾಭಾಸಪ್ರಾಪ್ತವಾಗುವ ಹೇಯ ಪ್ರಾಕೃತ ಸುಖಾದಿಗುಣಗಳಿಗೆ ಮಾತ್ರ ನಿಷೇಧಕವಾದ ನಿರ್ಗುಣವಾಕ್ಯವು ಶ್ರುತಿಬೋಧಿತವಾದ ಸಾರ್ವಜ್ಞಾದಿಗುಣಗಳಿಗೆ ಬಾಧಕವಾಗುವುದಿಲ್ಲ, ನಿಷೇಧಕವಾಗುವುದಿಲ್ಲ.

ಏವಂಚ– ಸಗುಣವಾಕ್ಯ ನಿರ್ಗುಣವಾಕ್ಯಗಳಿಗೆ ಅಗ್ನೀಷೋಮೀಯಹಿಂಸಾ–ಅಹಿಂಸಾವಾಕ್ಯ ಗಳಂತೇ ವಿರೋಧವಿಲ್ಲದಿರುವಾಗ 'ನಿರ್ಗುಣವಾಕ್ಯವಿರೋಧವಿರುವ ಪ್ರಯುಕ್ತ ಸಗುಣವಾಕ್ಯ ಅಪ್ರಮಾಣ' ಎಂದು ಅದ್ವೈತಿ ನೀನು ಹೇಳುವುದಕ್ಕೆ ಕಾರಣವು ಕೇವಲ ಬೌದ್ಧಮತದ ಮೇಲಿನ ಅಭಿಮಾನ !



नाप्यनुभूतिर्निर्विशेषा अनुभूतित्वादिति व्यतिरेक्यनुमानं बाधकम् । अप्रसिद्धविशेषणत्व स्वव्याघात श्रुतिबाधाभाससाम्या-प्रयोजकत्व प्रतिकूलतर्कपराहत्यादिदोषात् ।

नापि भिन्नत्वेऽभिन्नत्वे च धर्मत्वानुपपत्तिः, एवमसंबद्धत्वे धर्मत्वायोगः संबद्धत्वे संबंधस्यापि संबंधांतरमित्यनवस्थेति न ब्रह्म धर्मवदित्यादिकुतर्का बाधकाः । धर्माभावरूपधर्म भावाभावाभ्यां व्याघातात् ।

अभेदेऽपि ज्ञानानंदयोरेकतरपरिशेषाभाववद् विशेषबलादेव धर्म-धर्मिभावोपपत्तेश्च । संबंधस्यापि मिथ्यात्वादिवत्स्वनिर्वाहक-त्वाच्च । अन्यथाऽऽनंदस्य ज्ञानमात्रत्वे दुःखज्ञानमप्यानंदः स्यात् । भिन्नत्वेऽखंडार्थत्वहानिः ।

एवं ब्रह्म जगदभिन्नं चेन्मिथ्या स्यात्, भिन्नं चेद्भेदस्य सत्यत्वमित्यादितर्कबाधात् त्वदभिप्रेतं ब्रह्मापि न सिध्येत् । श्रुतिबाधात्तर्काणामाभासत्वं त्विहापि समम् ।

एवंच— शुष्कतर्कैः श्रौतगुणबाधे ब्रह्मापि बाधितम् ।
भवेच्छ्रुत्या शुष्कतर्कधिक्कारस्तु द्वयोः समः ॥

**स्वव्याघातेति ॥** इतरव्यावर्तकानुभूतित्वरूपपक्षतावच्छेदकाश्रयानुभूतौ निर्विशेषसाधने स्वव्याघातादिति भावः । यद्वा निर्विशेषत्वानुमित्यैव विशेषाभावरूपधर्मसिद्धेः स्वव्याघात इत्यर्थः ॥ **आभाससाम्येति** ॥ घटो निर्विशेषः घटत्वात् व्यतिरेकेण पटवदित्याभाससाम्येत्यर्थः ॥ **भिन्नत्व इति** ॥ मेरुमंदरयोः परस्परं घटस्य च स्वेनेव धर्मिधर्मभावादर्शनादिति भावः । भिन्नस्यापि दंडकुंडलादेः पुरुषधर्मत्वं दृश्यते इत्यतो बाधकांतरमाह— **एवमसंबद्धत्व इति** ॥ बाधका इति नापीत्यनेन संबध्यते । विशेषस्य धर्मधर्मिभावाद्यनियामकत्वे बाधकमाह— **अन्यथेति** ।

❖❖❖

**ನಾಪಿ ಅನುಭೂತಿಃ ನಿರ್ವಿಶೇಷಾ, ಅನುಭೂತಿತ್ವಾತ್ ಇತಿ ವ್ಯತಿರೇಕ್ಯನುಮಾನಂ ಬಾಧಕಂ । ಅಪ್ರಸಿದ್ಧವಿಶೇಷಣತ್ವ – ಸ್ವವ್ಯಾಘಾತ – ಶ್ರುತಿಬಾಧ – ಆಭಾಸಸಾಮ್ಯ – ಅಪ್ರಯೋಜಕತ್ವ – ಪ್ರತಿಕೂಲತರ್ಕಪರಾಹತ್ಯಾದಿ ದೋಷಾತ್ ॥**

ಅನುಭೂತಿರೂಪವಾದ ಶುದ್ಧಚೈತನ್ಯವು ವಿಶೇಷರಹಿತವಾಗಿದೆ, ಅನುಭೂತಿಯಾಗಿರುವುದರಿಂದ, ಯಾವುದು ವಿಶೇಷಯುಕ್ತವೋ ಅದು ಅನುಭೂತಿಯೆ ಆಗಿರುವುದಿಲ್ಲ, ಘಟಾದಿಗಳಂತೆ ಎಂದು ಕೇವಲ ವ್ಯತಿರೇಕಿ ಅನುಮಾನ ನಿರ್ವಿಶೇಷ ಬ್ರಹ್ಮನನ್ನು ಸಾಧಿಸುವುದರಿಂದ ಅದು ಸಗುಣಶ್ರುತಿಗೆ ಬಾಧಕ ಎಂದು ಅದ್ವೈತಿಯು ಹೇಳುತ್ತಾನೆ. ಇದೂ ಸರಿಯಲ್ಲ. ಈ ಅನುಮಾನಕ್ಕೆ ಅಪ್ರಸಿದ್ಧ ವಿಶೇಷಣತ್ವವು ಮೊದಲನೆ ದೋಷ. ನಿರ್ವಿಶೇಷತ್ವರೂಪ ಸಾಧ್ಯವು ಎಲ್ಲಿಯೂ ಪ್ರಸಿದ್ಧವಲ್ಲ.

'ವಿಶೇಷವತ್ತ್ವವು ಯಾವುದೋ ಒಂದು ಕಡೆ ಇಲ್ಲ, ಧರ್ಮವಾದ್ದರಿಂದ. ಅದು ಯಾವ ಸ್ಥಳವೆಂದರೆ, ಲೋಕದಲ್ಲಿ ಪ್ರಸಿದ್ಧವಾದುದು ಯಾವುದು ಅಲ್ಲವಾದ್ದರಿಂದ, ಅದು ಬ್ರಹ್ಮವೆ' ಹೀಗೆ ಅನುಮಾನದಿಂದ ನಿರ್ವಿಶೇಷತ್ವವೆಂಬ ಸಾಧ್ಯ ಪ್ರಸಿದ್ಧವಾಗುವುದು ಎಂದು ಅದ್ವೈತಿಯು ಹೇಳಿದರೆ, ಹೇಳಬೇಕು—'ಧರ್ಮವಾದುದು ಯಾವುದೋ ಒಂದುಕಡೆ ಇರುವುದಿಲ್ಲ' ಎಂಬ ನಿಯಮವೇ ಸರಿಯಲ್ಲ, ಧರ್ಮತ್ವವೆಂಬ ಹೇತು ಅಪ್ರಯೋಜಕ. ಕೇವಲಾನ್ವಯಿಯಾದ ಅಭಿಧೇಯತ್ವಾದಿ ಧರ್ಮ ಎಲ್ಲ ಕಡೆಯೂ ತನ್ನಲ್ಲಿಯೂ ಇರುವುದು ಕಂಡಿದೆ.

ಅನುಭೂತಿಯು ಇಲ್ಲಿ ಪಕ್ಷ, ಅನುಭೂತಿತ್ವವು ಪಕ್ಷತಾವಚ್ಛೇದಕ. ಪಕ್ಷತಾವಚ್ಛೇದಕವಾದ ಅನುಭೂತಿತ್ವರೂಪ ವಿಶೇಷಣಯುಕ್ತವಾದ ಪಕ್ಷವನ್ನು ನಿರ್ವಿಶೇಷವೆಂದು, ವಿಶೇಷಣರಹಿತವೆಂದು ಸಾಧನೆ ಮಾಡುವುದು ಸ್ವವಚನ ವಿರೋಧ.

'ಅನುಭೂತಿಯು ನಿರ್ವಿಶೇಷ' ಎಂದು ಸಾಧನೆ ಮಾಡಿದರೂ ನಿರ್ವಿಶೇಷತ್ವರೂಪ ಸಾಧ್ಯಧರ್ಮವಿಶೇಷವು ಅನುಭೂತಿರೂಪ ಪಕ್ಷದಲ್ಲಿ ಸಿದ್ಧವಾಗುವುದು. ಇದೂ ಸ್ವವ್ಯಾಹತ.

ಬ್ರಹ್ಮನು ಸಗುಣನೆಂದು ಶ್ರುತಿ ಇರುವುದರಿಂದ ನಿರ್ವಿಶೇಷತ್ವಾನುಮಾನವು ಶ್ರುತಿಬಾಧಿತ.

ಅನುಭೂತಿಯು ಜ್ಞಾನವಲ್ಲ, ಕ್ರಿಯೆಯಾದ್ದರಿಂದ, ಗಮನಕ್ರಿಯೆಯಂತೆ. ಘಟವು ನಿರ್ವಿಶೇಷವಾಗಿದೆ. ಘಟವಾದ್ದರಿಂದ, ವ್ಯತಿರೇಕೇಣ ಪಟದಂತೆ ಎಂದು ಮುಂತಾಗಿ ಆಭಾಸಸಾಮ್ಯದೋಷ.

'ಬ್ರಹ್ಮ ಅನುಭೂತಿಯಾಗಿದ್ದರೂ ವಿಶೇಷರಹಿತವಾಗಬೇಕಿಲ್ಲ' ಎಂದರೆ ಅದಕ್ಕೆ ಬಾಧಕವಿಲ್ಲದ್ದರಿಂದ ಅಪ್ರಯೋಜಕತ್ವವು ದೋಷ.

'ಬ್ರಹ್ಮನಿರ್ವಿಶೇಷವಾದರೆ ವೇದಾಂತ ಪ್ರತಿಪಾದ್ಯವಾಗಲಾರದು. ಏಕೆಂದರೆ 'ಇದಮಿತ್ಥಂ'

'ಇದು ಇಂಥ ವಿಶೇಷ ಉಳ್ಳದ್ದೆಂ'ಬ ಜ್ಞಾನವೇ ವೇದಾಂತದಿಂದ ಬರುತ್ತದೆ' ಎಂದು ಪ್ರತಿಕೂಲತರ್ಕವು ದೋಷ.

ಅನುಭೂತಿತ್ವವೆಂಬ ಹೇತುವು ಅನುಭೂತಿತ್ವಾದಿರೂಪ ವಿಶೇಷಕ್ಕೇ ವ್ಯಾಪ್ಯವಾದ್ದರಿಂದ ಸಾಧ್ಯಾಭಾವವ್ಯಾಪ್ಯ ಹೇತುವಾದ್ದರಿಂದ ವಿರುದ್ಧತ್ವವೂ ಹೇತುದೋಷವೆಂದು 'ಆದಿ' ಪದದಿಂದ ಗ್ರಹಿಸಬೇಕು.

**ನಾಪಿ 'ಭಿನ್ನತ್ವೇ ಅಭಿನ್ನತ್ವೇ ಚ ಧರ್ಮತ್ವಾನುಪಪತ್ತಿಃ, ಏವಂ ಅಸಂಬದ್ಧತ್ವೇ ಧರ್ಮತ್ವಾಯೋಗಃ, ಸಂಬದ್ಧತ್ವೇ ಸಂಬಂಧಸ್ಯಾಪಿ ಸಂಬಂಧಾಂತರಮಿತಿ ಅನವಸ್ಥೇತಿ, ನ ಬ್ರಹ್ಮ ಧರ್ಮವತ್ ಇತ್ಯಾದಿ ಕುತರ್ಕಾ ಬಾಧಕಾಃ ।**

ಗುಣಗಳು ಬ್ರಹ್ಮನಿಗಿಂತ ಭಿನ್ನವಾದರೆ, ಮೇರು ಮಂದರಗಳಂತೆ ಪರಸ್ಪರ ಧರ್ಮಧರ್ಮಿಭಾವ ಕೂಡುವುದಿಲ್ಲ. ಅಭಿನ್ನವಾದರೂ ಘಟದಿಂದ ಅಭಿನ್ನವಾದ ಘಟಕ್ಕೆ ತನ್ನಿಂದ ಧರ್ಮಧರ್ಮಿಭಾವ ಕಂಡಿಲ್ಲವಾದ್ದರಿಂದ ಬ್ರಹ್ಮನಿಗೆ ತನ್ನಿಂದ ಅಭಿನ್ನವಾದ ಗುಣಗಳಿಂದ ಧರ್ಮಧರ್ಮಿಭಾವವಿಲ್ಲ. ಇದೊಂದು ಕುತರ್ಕ. ಪುರುಷನಿಂದ ಭಿನ್ನವಾದ ದಂಡಕುಂಡಲಗಳಿಗೆ ಪುರುಷನಲ್ಲಿ ಧರ್ಮಧರ್ಮಿಭಾವ ಕಂಡಿದೆಯಾದ್ದರಿಂದ ಭಿನ್ನವಾದ ಗುಣಗಳಿಗೆ ಬ್ರಹ್ಮನಲ್ಲಿ ಧರ್ಮತ್ವವೇಕೆ ಬರಬಾರದು? ಎಂದರೆ, ಬ್ರಹ್ಮನಿಗೆ ಗುಣಗಳ ಸಂಬಂಧವಿಲ್ಲದಿದ್ದರೆ ಅವು ಅವನ ಧರ್ಮವಾಗಲಾರವು. ಸಂಬಂಧವಿದೆಯಾದರೆ ಆ ಸಂಬಂಧಕ್ಕೆ ಇನ್ನೊಂದು ಸಂಬಂಧ ಬೇಕು. ಪುನಃ ಆ ಸಂಬಂಧಕ್ಕೂ ಇನ್ನೊಂದು ಸಂಬಂಧವೆಂದು ಅನವಸ್ಥಾದೋಷ. ಹೀಗೆ ಯಾವ ರೀತಿ ನೋಡಿದರೂ ಗುಣಗಳು ಬ್ರಹ್ಮನ ಧರ್ಮವಾಗಲಾರವು' ಇದು ಇನ್ನೊಂದು ಕುತರ್ಕ. ಈ ಎರಡೂ ಕುತರ್ಕಗಳು ಏನೂ ಸಾಧಿಸಲಾರವು. ಏಕೆಂದರೆ—

**ಧರ್ಮಾಭಾವರೂಪಧರ್ಮ ಭಾವಾಭಾವಾಭ್ಯಾಂ ವ್ಯಾಘಾತಾತ್ ।**

ಈ ಕುತರ್ಕಗಳು ಏನೂ ಸಾಧಿಸಲಾರವು ಏಕೆಂದರೆ, ಈ ತರ್ಕಗಳಿಂದ ಬ್ರಹ್ಮನಲ್ಲಿ ಧರ್ಮಾಭಾವವನ್ನು ಸಾಧಿಸಿದರೆ ಆ ಧರ್ಮಾಭಾವವೂ ಒಂದು ಧರ್ಮವೇ ಆಗಿರುವುದರಿಂದ, ಅದು ಬ್ರಹ್ಮನಲ್ಲಿದೆ ಎಂದರೆ, 'ಧರ್ಮವಿದೆ ಧರ್ಮವಿಲ್ಲ' ಎಂದು ಸ್ವವಚನಗಳಿಗೇ ವ್ಯಾಘಾತ. ಧರ್ಮಾಭಾವವು ಬ್ರಹ್ಮನಲ್ಲಿಲ್ಲವೆಂದರೂ 'ಧರ್ಮವಿದೆ' ಎಂದಂತಾಗುವುದರಿಂದ 'ಧರ್ಮವಿಲ್ಲ' ಎನ್ನುವುದು ವ್ಯಾಹತವಾಗುವುದು. ಹೀಗೆ ಸ್ವವ್ಯಾಹತವಾಗಿರುವ ಕುತರ್ಕ ಏನೂ ಸಾಧಿಸಲಾರದು.

**ಅಭೇದೇಽಪಿ ಜ್ಞಾನಾನಂದಯೋಃ ಏಕತರಪರಿಶೇಷಾಭಾವವತ್ ವಿಶೇಷ ಬಲಾದೇವ ಧರ್ಮಧರ್ಮಿ ಭಾವೋಪಪತ್ತೇಶ್ಚ ।**

ಬ್ರಹ್ಮನಿಗೆ ಗುಣಗಳಿಂದ ಅಭೇದವನ್ನೇ ನಾವು ಒಪ್ಪುತ್ತೇವೆ. ಅದ್ವೈತಿಯ ಬ್ರಹ್ಮನಲ್ಲಿಯೂ ಜ್ಞಾನಾನಂದಗಳು ಅಭಿನ್ನವೆ. ಆದರೂ ಬ್ರಹ್ಮನಲ್ಲಿ ಜ್ಞಾನ ಒಂದೇ ಇದೆ. ಆನಂದ ಬೇರೆ ಇಲ್ಲ, ಅಥವಾ

ಆನಂದ ಒಂದೇ ಇದೆ ಜ್ಞಾನ ಬೇರೆ ಇಲ್ಲ ಎಂದು ಏಕತರ ಪರಿಶೇಷವನ್ನು ಅವನು ಒಪ್ಪಿಲ್ಲ. ಎರಡೂ ಬ್ರಹ್ಮನಲ್ಲಿ ಇವೆ ಎನ್ನುತ್ತಾನೆ. ಹಾಗೇ ವಿಶೇಷ ಬಲದಿಂದ ಗುಣಗಳಿಗೆ ಬ್ರಹ್ಮನಲ್ಲಿ ಧರ್ಮಧರ್ಮಿ ಭಾವವನ್ನು ಏಕೆ ಒಪ್ಪಬಾರದು?

**ಸಂಬಂಧಸ್ಯಾಪಿ ಮಿಥ್ಯಾತ್ವಾದಿವತ್ ಸ್ವನಿರ್ವಾಹಕತ್ವಾಚ್ಚ ।**

ಬ್ರಹ್ಮನಲ್ಲಿ ಗುಣಗಳ ಸಂಬಂಧವೂ ಇನ್ನೊಂದು ಸಂಬಂಧದಿಂದ ಸಂಬದ್ಧ. ಆ ಸಂಬಂಧವೂ ಪುನಃ ಇನ್ನೊಂದು ಸಂಬಂಧದಿಂದ ಸಂಬದ್ಧ ಎಂದು ಅನವಸ್ಥೆಯನ್ನು ಅದ್ವೈತಿ ಹೇಳಬಾರದು. ಏಕೆಂದರೆ ಅವನೇ ಮಿಥ್ಯಾತ್ವದಲ್ಲಿ ಇನ್ನೊಂದು ಮಿಥ್ಯಾತ್ವವಿರುವುದರಿಂದಲೇ ಮಿಥ್ಯಾ ಆಗಿದೆ ಎನ್ನುತ್ತಾನೆಯೆ? ಇಲ್ಲ. ಹಾಗೆಂದರೆ ಅನವಸ್ಥಾ. ಅದರಿಂದ ಮಿಥ್ಯಾತ್ವವು ಸ್ವ ನಿರ್ವಾಹಕ. ತನ್ನಿಂದಲೆ ತಾನು ಮಿಥ್ಯಾ ಎನಿಸುತ್ತದೆ, ಅದಕ್ಕೆ ಇನ್ನೊಂದು ಮಿಥ್ಯಾತ್ವದ ಅಪೇಕ್ಷೆ ಇಲ್ಲ ಎನ್ನುತ್ತಾನೆ. ಹಾಗೇ ನಾವೂ ಸಂಬಂಧವು ಕೂಡ ತನ್ನಿಂದಲೆ ತಾನು ಸಂಬದ್ಧ ಹೊರತು ಅದಕ್ಕೆ ಇನ್ನೊಂದು ಸಂಬಂಧದ ಅಪೇಕ್ಷೆ ಇಲ್ಲ, ಅದು ಸ್ವನಿರ್ವಾಹಕ ಎನ್ನುತ್ತೇವೆ.

**ಅನ್ಯಥಾ ಆನಂದಸ್ಯ ಜ್ಞಾನಮಾತ್ರತ್ವೇ ದುಃಖಜ್ಞಾನಮಪಿ ಆನಂದಃ ಸ್ಯಾತ್। ಭಿನ್ನತ್ವೇ ಅಖಂಡಾರ್ಥತ್ವಹಾನಿಃ ।**

'ಅನ್ಯಥಾ' ವಿಶೇಷವು ಅಭಿನ್ನದಲ್ಲಿ ಧರ್ಮಧರ್ಮಿಭಾವಕ್ಕೆ ನಿಯಾಮಕವಲ್ಲವೆಂದರೆ, ಆನಂದವು ಜ್ಞಾನದಿಂದ ಅಭಿನ್ನವೆನ್ನುವ ಪಕ್ಷದಲ್ಲಿ ದುಃಖಜ್ಞಾನವೂ ಆನಂದವೆನಿಸೀತು. ಆನಂದವು ಜ್ಞಾನದಿಂದ ಭಿನ್ನವೆನ್ನುವುದಾದರೆ ಆನಂದ–ಜ್ಞಾನಪದಗಳಿಗೆ ಅದ್ವೈತಿಯು ಒಪ್ಪಿರುವ ಅಖಂಡಾರ್ಥತ್ವವಿಲ್ಲವಾದೀತು. ಅಖಂಡ ಬ್ರಹ್ಮಜ್ಞಾನವೆ ಇಲ್ಲವಾದೀತು.

**ಏವಂ ಬ್ರಹ್ಮ ಜಗದಭಿನ್ನಂ ಚೇತ್ ಮಿಥ್ಯಾ ಸ್ಯಾತ್। ಭಿನ್ನಂ ಚೇತ್ ಭೇದಸ್ಯ ಸತ್ಯತ್ವಂ–ಇತ್ಯಾದಿ ತರ್ಕಬಾಧಾತ್ ತ್ವದಭಿಪ್ರೇತಂ ಬ್ರಹ್ಮಾಪಿ ನ ಸಿಧ್ಯೇತ್। ಶ್ರುತಿಬಾಧಾತ್ ತರ್ಕಾಣಾಮಾಭಾಸತ್ವಂ ತು ಇಹಾಪಿ ಸಮಂ ।**

ಬ್ರಹ್ಮವು ಜಗತ್ತಿಗಿಂತ ಅಭಿನ್ನವೆಂದರೆ ಜಗತ್ತಿನಂತೆ ಮಿಥ್ಯಾ ಆದೀತು. ಭಿನ್ನವೆಂದರೆ ಭೇದವು ಸತ್ಯವೆಂದಾದೀತು. ಇಂಥ ತರ್ಕಬಾಧದಿಂದ ನಿನಗೆ ನಿನ್ನ ಸತ್ಯವಾದ ಬ್ರಹ್ಮವೂ ಸಿದ್ಧವಾಗದೆ ಹೋದೀತು. 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಎಂಬ ಬ್ರಹ್ಮಸತ್ಯತ್ವ ಶ್ರುತಿಯಿಂದ ಬಾಧವಿರುವುದ ರಿಂದ ಬ್ರಹ್ಮಮಿಥ್ಯಾತ್ವತರ್ಕವು ಬಾಧಿತವಾಗುವುದು ಎಂದರೆ, ನಾವು ಹೇಳುತ್ತೇವೆ. 'ಬ್ರಹ್ಮ ನಿರ್ವಿಶೇಷತ್ವಸಾಧಕ ತರ್ಕವೂ ಕೂಡ ಸಗುಣತ್ವಸಾಧಕ ಶ್ರುತಿಯಿಂದ ಬಾಧಿತವಾಗುವುದು' ಎಂದು.

**ಏವಂ ಚ— ಶುಷ್ಕತರ್ಕೈಃ ಶ್ರೌತಗುಣ ಬಾಧೇ ಬ್ರಹ್ಮಾಪಿ ಬಾಧಿತಂ ।**
**ಭವೇಚ್ಛ್ರುತ್ಯಾ ಶುಷ್ಕತರ್ಕ ಧಿಕ್ಕಾರಸ್ತು ದ್ವಯೋಃ ಸಮಃ ।**

ಏವಂ ಚ 'ಭಿನ್ನತ್ವೇ ಅಭಿನ್ನತ್ವೇಚ ಧರ್ಮತ್ವಾನುಪಪತ್ತಿಃ' ಎಂದು ಮುಂತಾಗಿ ಶುಷ್ಕ

'ಇದು ಇಂಥ ವಿಶೇಷ ಉಳ್ಳದ್ದೆಂ'ಬ ಜ್ಞಾನವೇ ವೇದಾಂತದಿಂದ ಬರುತ್ತದೆ' ಎಂದು ಪ್ರತಿಕೂಲತರ್ಕವು ದೋಷ.

ಅನುಭೂತಿತ್ವವೆಂಬ ಹೇತುವು ಅನುಭೂತಿತ್ವಾದಿರೂಪ ವಿಶೇಷಕ್ಕೇ ವ್ಯಾಪ್ಯವಾದ್ದರಿಂದ ಸಾಧ್ಯಾಭಾವವ್ಯಾಪ್ಯ ಹೇತುವಾದ್ದರಿಂದ ವಿರುದ್ಧತ್ವವೂ ಹೇತುದೋಷವೆಂದು 'ಆದಿ' ಪದದಿಂದ ಗ್ರಹಿಸಬೇಕು.

**ನಾಪಿ 'ಭಿನ್ನತ್ವೇ ಅಭಿನ್ನತ್ವೇ ಚ ಧರ್ಮತ್ವಾನುಪಪತ್ತಿಃ, ಏವಂ ಅಸಂಬದ್ಧತ್ವೇ ಧರ್ಮತ್ವಾಯೋಗಃ, ಸಂಬದ್ಧತ್ವೇ ಸಂಬಂಧಸ್ಯಾಪಿ ಸಂಬಂಧಾಂತರಮಿತಿ ಅನವಸ್ಥೇತಿ, ನ ಬ್ರಹ್ಮ ಧರ್ಮವತ್ ಇತ್ಯಾದಿ ಕುತರ್ಕಾ ಬಾಧಕಾಃ।**

ಗುಣಗಳು ಬ್ರಹ್ಮನಿಗಿಂತ ಭಿನ್ನವಾದರೆ, ಮೇರು ಮಂದರಗಳಂತೆ ಪರಸ್ಪರ ಧರ್ಮಧರ್ಮಿಭಾವ ಕೂಡುವುದಿಲ್ಲ. ಅಭಿನ್ನವಾದರೂ ಘಟದಿಂದ ಅಭಿನ್ನವಾದ ಘಟಕ್ಕೆ ತನ್ನಿಂದ ಧರ್ಮಧರ್ಮಿಭಾವ ಕಂಡಿಲ್ಲವಾದ್ದರಿಂದ ಬ್ರಹ್ಮನಿಗೆ ತನ್ನಿಂದ ಅಭಿನ್ನವಾದ ಗುಣಗಳಿಂದ ಧರ್ಮಧರ್ಮಿಭಾವವಿಲ್ಲ. ಇದೊಂದು ಕುತರ್ಕ. ಪುರುಷನಿಂದ ಭಿನ್ನವಾದ ದಂಡಕುಂಡಲಗಳಿಗೆ ಪುರುಷನಲ್ಲಿ ಧರ್ಮಧರ್ಮಿಭಾವ ಕಂಡಿದೆಯಾದ್ದರಿಂದ ಭಿನ್ನವಾದ ಗುಣಗಳಿಗೆ ಬ್ರಹ್ಮನಲ್ಲಿ ಧರ್ಮತ್ವವೇಕೆ ಬರಬಾರದು? ಎಂದರೆ, ಬ್ರಹ್ಮನಿಗೆ ಗುಣಗಳ ಸಂಬಂಧವಿಲ್ಲದಿದ್ದರೆ ಅವು ಅವನ ಧರ್ಮವಾಗಲಾರವು. ಸಂಬಂಧವಿದೆಯಾದರೆ ಆ ಸಂಬಂಧಕ್ಕೆ ಇನ್ನೊಂದು ಸಂಬಂಧ ಬೇಕು. ಪುನಃ ಆ ಸಂಬಂಧಕ್ಕೂ ಇನ್ನೊಂದು ಸಂಬಂಧವೆಂದು ಅನವಸ್ಥಾದೋಷ. ಹೀಗೆ ಯಾವ ರೀತಿ ನೋಡಿದರೂ ಗುಣಗಳು ಬ್ರಹ್ಮನ ಧರ್ಮವಾಗಲಾರವು' ಇದು ಇನ್ನೊಂದು ಕುತರ್ಕ. ಈ ಎರಡೂ ಕುತರ್ಕಗಳು ಏನೂ ಸಾಧಿಸಲಾರವು. ಏಕೆಂದರೆ—

**ಧರ್ಮಾಭಾವರೂಪಧರ್ಮ ಭಾವಾಭಾವಾಭ್ಯಾಂ ವ್ಯಾಘಾತಾತ್ ।**

ಈ ಕುತರ್ಕಗಳು ಏನೂ ಸಾಧಿಸಲಾರವು ಏಕೆಂದರೆ, ಈ ತರ್ಕಗಳಿಂದ ಬ್ರಹ್ಮನಲ್ಲಿ ಧರ್ಮಾಭಾವವನ್ನು ಸಾಧಿಸಿದರೆ ಆ ಧರ್ಮಾಭಾವವೂ ಒಂದು ಧರ್ಮವೇ ಆಗಿರುವುದರಿಂದ, ಅದು ಬ್ರಹ್ಮನಲ್ಲಿದೆ ಎಂದರೆ, 'ಧರ್ಮವಿದೆ ಧರ್ಮವಿಲ್ಲ' ಎಂದು ಸ್ವವಚನಗಳಿಗೇ ವ್ಯಾಘಾತ. ಧರ್ಮಾಭಾವವು ಬ್ರಹ್ಮನಲ್ಲಿಲ್ಲವೆಂದರೂ 'ಧರ್ಮವಿದೆ' ಎಂದಂತಾಗುವುದರಿಂದ 'ಧರ್ಮವಿಲ್ಲ' ಎನ್ನುವುದು ವ್ಯಾಹತವಾಗುವುದು. ಹೀಗೆ ಸ್ವವ್ಯಾಹತವಾಗಿರುವ ಕುತರ್ಕ ಏನೂ ಸಾಧಿಸಲಾರದು.

**ಅಭೇದೇಽಪಿ ಜ್ಞಾನಾನಂದಯೋಃ ಏಕತರಪರಿಶೇಷಾಭಾವವತ್ ವಿಶೇಷ ಬಲಾದೇವ ಧರ್ಮಧರ್ಮಿ ಭಾವೋಪಪತ್ತೇಶ್ಚ।**

ಬ್ರಹ್ಮನಿಗೆ ಗುಣಗಳಿಂದ ಅಭೇದವನ್ನೇ ನಾವು ಒಪ್ಪುತ್ತೇವೆ. ಅದ್ವೈತಿಯ ಬ್ರಹ್ಮನಲ್ಲಿಯೂ ಜ್ಞಾನಾನಂದಗಳು ಅಭಿನ್ನವೆ. ಆದರೂ ಬ್ರಹ್ಮನಲ್ಲಿ ಜ್ಞಾನ ಒಂದೇ ಇದೆ. ಆನಂದ ಬೇರೆ ಇಲ್ಲ, ಅಥವಾ

ಆನಂದ ಒಂದೇ ಇದೆ ಜ್ಞಾನ ಬೇರೆ ಇಲ್ಲ ಎಂದು ಏಕತರ ಪರಿಶೇಷವನ್ನು ಅವನು ಒಪ್ಪಿಲ್ಲ. ಎರಡೂ ಬ್ರಹ್ಮನಲ್ಲಿ ಇವೆ ಎನ್ನುತ್ತಾನೆ. ಹಾಗೇ ವಿಶೇಷ ಬಲದಿಂದ ಗುಣಗಳಿಗೆ ಬ್ರಹ್ಮನಲ್ಲಿ ಧರ್ಮಧರ್ಮಿ ಭಾವವನ್ನು ಏಕೆ ಒಪ್ಪಬಾರದು?

**ಸಂಬಂಧಸ್ಯಾಪಿ ಮಿಥ್ಯಾತ್ವಾದಿವತ್ ಸ್ವನಿರ್ವಾಹಕತ್ವಾಚ್ಚ ।**

ಬ್ರಹ್ಮನಲ್ಲಿ ಗುಣಗಳ ಸಂಬಂಧವೂ ಇನ್ನೊಂದು ಸಂಬಂಧದಿಂದ ಸಂಬದ್ಧ. ಆ ಸಂಬಂಧವೂ ಪುನಃ ಇನ್ನೊಂದು ಸಂಬಂಧದಿಂದ ಸಂಬದ್ಧ ಎಂದು ಅನವಸ್ಥೆಯನ್ನು ಅದ್ವೈತಿ ಹೇಳಬಾರದು. ಏಕೆಂದರೆ ಅವನೇ ಮಿಥ್ಯಾತ್ವದಲ್ಲಿ ಇನ್ನೊಂದು ಮಿಥ್ಯಾತ್ವವಿರುವುದರಿಂದಲೇ ಮಿಥ್ಯಾ ಆಗಿದೆ ಎನ್ನುತ್ತಾನೆಯೆ? ಇಲ್ಲ. ಹಾಗೆಂದರೆ ಅನವಸ್ಥಾ. ಅದರಿಂದ ಮಿಥ್ಯಾತ್ವವು ಸ್ವ ನಿರ್ವಾಹಕ. ತನ್ನಿಂದಲೆ ತಾನು ಮಿಥ್ಯಾ ಎನಿಸುತ್ತದೆ, ಅದಕ್ಕೆ ಇನ್ನೊಂದು ಮಿಥ್ಯಾತ್ವದ ಅಪೇಕ್ಷೆ ಇಲ್ಲ ಎನ್ನುತ್ತಾನೆ. ಹಾಗೇ ನಾವೂ ಸಂಬಂಧವು ಕೂಡ ತನ್ನಿಂದಲೆ ತಾನು ಸಂಬದ್ಧ ಹೊರತು ಅದಕ್ಕೆ ಇನ್ನೊಂದು ಸಂಬಂಧದ ಅಪೇಕ್ಷೆ ಇಲ್ಲ, ಅದು ಸ್ವನಿರ್ವಾಹಕ ಎನ್ನುತ್ತೇವೆ.

**ಅನ್ಯಥಾ ಆನಂದಸ್ಯ ಜ್ಞಾನಮಾತ್ರತ್ವೇ ದುಃಖಜ್ಞಾನಮಪಿ ಆನಂದಃ ಸ್ಯಾತ್। ಭಿನ್ನತ್ವೇ ಅಖಂಡಾರ್ಥತ್ವಹಾನಿಃ ।**

'ಅನ್ಯಥಾ' ವಿಶೇಷವು ಅಭಿನ್ನದಲ್ಲಿ ಧರ್ಮಧರ್ಮಿಭಾವಕ್ಕೆ ನಿಯಾಮಕವಲ್ಲವೆಂದರೆ, ಆನಂದವು ಜ್ಞಾನದಿಂದ ಅಭಿನ್ನವೆನ್ನುವ ಪಕ್ಷದಲ್ಲಿ ದುಃಖಜ್ಞಾನವೂ ಆನಂದವೆನಿಸೀತು. ಆನಂದವು ಜ್ಞಾನದಿಂದ ಭಿನ್ನವೆನ್ನುವುದಾದರೆ ಆನಂದ–ಜ್ಞಾನಪದಗಳಿಗೆ ಅದ್ವೈತಿಯು ಒಪ್ಪಿರುವ ಅಖಂಡಾರ್ಥತ್ವವಿಲ್ಲವಾದೀತು. ಅಖಂಡ ಬ್ರಹ್ಮಜ್ಞಾನವೆ ಇಲ್ಲವಾದೀತು.

**ಏವಂ ಬ್ರಹ್ಮ ಜಗದಭಿನ್ನಂ ಚೇತ್ ಮಿಥ್ಯಾ ಸ್ಯಾತ್। ಭಿನ್ನಂ ಚೇತ್ ಭೇದಸ್ಯ ಸತ್ಯತ್ವಂ–ಇತ್ಯಾದಿ ತರ್ಕಬಾಧಾತ್ ತ್ವದಭಿಪ್ರೇತಂ ಬ್ರಹ್ಮಾಪಿ ನ ಸಿಧ್ಯೇತ್। ಶ್ರುತಿಬಾಧಾತ್ ತರ್ಕಾಣಾಮಾಭಾಸತ್ವಂ ತು ಇಹಾಪಿ ಸಮಂ ।**

ಬ್ರಹ್ಮವು ಜಗತ್ತಿಗಿಂತ ಅಭಿನ್ನವೆಂದರೆ ಜಗತ್ತಿನಂತೆ ಮಿಥ್ಯಾ ಆದೀತು. ಭಿನ್ನವೆಂದರೆ ಭೇದವು ಸತ್ಯವೆಂದಾದೀತು. ಇಂಥ ತರ್ಕಬಾಧದಿಂದ ನಿನಗೆ ನಿನ್ನ ಸತ್ಯವಾದ ಬ್ರಹ್ಮವೂ ಸಿದ್ಧವಾಗದೆ ಹೋದೀತು. 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಎಂಬ ಬ್ರಹ್ಮಸತ್ಯತ್ವ ಶ್ರುತಿಯಿಂದ ಬಾಧವಿರುವುದರಿಂದ ಬ್ರಹ್ಮಮಿಥ್ಯಾತ್ವತರ್ಕವು ಬಾಧಿತವಾಗುವುದು ಎಂದರೆ, ನಾವು ಹೇಳುತ್ತೇವೆ. 'ಬ್ರಹ್ಮ ನಿರ್ವಿಶೇಷತ್ವಸಾಧಕ ತರ್ಕವೂ ಕೂಡ ಸಗುಣತ್ವಸಾಧಕ ಶ್ರುತಿಯಿಂದ ಬಾಧಿತವಾಗುವುದು' ಎಂದು.

**ಏವಂ ಚ— ಶುಷ್ಕತರ್ಕೈಃ ಶ್ರೌತಗುಣ ಬಾಧೇ ಬ್ರಹ್ಮಾಪಿ ಬಾಧಿತಂ ।**
**ಭವೇಚ್ಛ್ರುತ್ಯಾ ಶುಷ್ಕತರ್ಕ ಧಿಕ್ಕಾರಸ್ತು ದ್ವಯೋಃ ಸಮಃ ।**

ಏವಂ ಚ 'ಭಿನ್ನತ್ವೇ ಅಭಿನ್ನತ್ವೇಚ ಧರ್ಮತ್ವಾನುಪಪತ್ತಿಃ' ಎಂದು ಮುಂತಾಗಿ ಶುಷ್ಕ

ತರ್ಕಗಳಿಂದ, ಅಂದರೆ ಶ್ರುತಿವಿರುದ್ಧವಾದ ತರ್ಕಗಳಿಂದ ಶ್ರುತ್ಯುಕ್ತವಾದ ಬ್ರಹ್ಮಗುಣಗಳಿಗೆ ಬಾಧ ಉಂಟೆಂದರೆ ನಿನ್ನ ಬ್ರಹ್ಮವೂ ಕೂಡ 'ಬ್ರಹ್ಮ ಜಗದಭಿನ್ನಂ ಚೇತ್ ಮಿಥ್ಯಾಸ್ಯಾತ್' ಇತ್ಯಾದಿ ತರ್ಕಬಾಧಿತವೇ ಆಗುವುದು. ನಿರ್ಗುಣಶ್ರುತಿಯಿಂದಲೆ ನಿರ್ಗುಣವಿರೋಧಿಯಾದ ಶುಷ್ಕತರ್ಕಕ್ಕೆ ಬಾಧವೆನ್ನುವುದಾದರೆ ಸಗುಣಶ್ರುತಿಯಿಂದಲೇ ಸಗುಣವಿರೋಧಿಯಾದ ಶುಷ್ಕತರ್ಕಕ್ಕೆ ಬಾಧವೆಂದು ನಾವೂ ಹೇಳುತ್ತೇವೆ.



किंच निर्विशेषत्वरूपविशेष भावाभावाभ्यां मूकोऽहमितिवत् स्वव्याघातः । यदि निर्विशेषत्वरूपविशेषोऽप्यनेनैव निषिध्यते तर्हीयमपि वचनक्रिया मूक इत्यनेनैव निषिध्यत इति समम् । तदुक्तं

''निर्विशेषत्वमेतेन मूकोऽहमितिवद्भवेत्'' इति ।

किंच ब्रह्मणः शून्यादनिर्वाच्याच्च तत्वतो विशेषाभावे तत्वतस्तदेव स्यात् । भावे तु सविशेषत्वम् ।

किंच ब्रह्मणो निर्विशेषत्वे वेदांतविचारविषयत्वमयुक्तम् ।

तदुक्तं ''इदमित्थमिति ज्ञानं जिज्ञासायाः प्रयोजनम् ।
इत्थंभावो हि धर्मोऽस्य न चेन्न प्रतियोगिता ।।''इति ।

किंच ब्रह्मणि धर्मारोपार्थमेव केचिद्धर्माः सत्याः स्वीकार्याः इदंत्वादिना ज्ञात एव शुक्त्यादौ धर्मांतरारोपात् ।

तदुक्तं ''धर्मारोपोऽपि सामान्यधर्मादीनां हि दर्शने ।
सर्वधर्मविहीनस्य धर्मारोपः क्व दृश्यत ।।'' इति ।

अभावरूपधर्माः संतीति चेन्नाभावत्वं तत्र हेतुः अतिप्रसंगात् । किंतु प्रामाणिकत्वम्, तच्च भावेष्वपि समम् । यदि चाभावो ब्रह्माभिन्नः यदि वा पंचमप्रकारो नतु सन्निति सदद्वैताविरोधी तर्हि भावोऽपि तथास्तु ।

तस्मात् ब्रूतेऽसतोऽपि मोहादीन्दोषान्विष्णोर्गुणान्सतः ।
निह्नुते परमे तत्त्वे द्वेषादेवासुरो जनः ।।

**तस्मात् ब्रह्म सगुणमेवेति ।।**

**जिज्ञासाया इति ।।** विचारस्येत्यर्थः ।। **तत्रेति ।।** धर्मसत्त्व इत्यर्थः ।। **अतिप्रसंगादिति ।।** व्यावहारिक घटाभावेऽनारोपित सत्त्वापातात् ब्रह्मणोऽसत्त्वापाताच्चेत्यर्थः ।। **असतोऽपीति ।।** अविद्यमानानपीत्यर्थः ।।



**ಕಿಂಚ ನಿರ್ವಿಶೇಷತ್ವರೂಪ ವಿಶೇಷ ಭಾವಾಭಾವಾಭ್ಯಾಂ ಮೂಕೋಽಹಮಿತಿವತ್ ಸ್ವವ್ಯಾಘಾತಃ । ಯದಿ ನಿರ್ವಿಶೇಷತ್ವರೂಪ ವಿಶೇಷೋಽಪಿ ಅನೇನೈವ ನಿಷಿಧ್ಯತೇ, ತರ್ಹಿ, ಇಯಮಪಿ ವಚನಕ್ರಿಯಾ ಮೂಕ ಇತ್ಯನೇನೈವ ನಿಷಿಧ್ಯತೇ ಇತಿ ಸಮಂ ।**

**ತದುಕ್ತಂ—'ನಿರ್ವಿಶೇಷತ್ವಮೇತೇನ ಮೂಕೋಽಹಮಿತಿವದ್ ಭವೇತ್' ಇತಿ ।**

ನಿರ್ವಿಶೇಷತ್ವರೂಪವಾದ ವಿಶೇಷವು ಇದೆ ಎಂದರೂ ಸವಿಶೇಷತ್ವವೆ, ಇಲ್ಲವೆಂದರೂ ಸವಿಶೇಷತ್ವವೆ ಎಂದು ಸ್ವವ್ಯಾಹತಿ ಬರುತ್ತದೆ. ಇದಕ್ಕೆ ಉದಾಹರಣೆ— 'ನಾನು ಮೂಕ' ಎಂದು ತಾನೇ ಹೇಳಿದರೆ, ನೀನು ಮೂಕನಾಗಿದ್ದರೆ 'ನಾನು ಮೂಕ' ಎನ್ನಲಾರೆ, ನೀನು ಮೂಕನಲ್ಲದಿದ್ದರೂ 'ನಾನು ಮೂಕ' ಎನ್ನಲಾರೆ. ಹೀಗೆ ಸ್ವವ್ಯಾಹತಿ. 'ಬ್ರಹ್ಮ ನಿರ್ವಿಶೇಷ' ಎಂಬ ಮಾತಿನಿಂದಲೆ ಬ್ರಹ್ಮನಲ್ಲಿ ನಿರ್ವಿಶೇಷತ್ವರೂಪ ವಿಶೇಷವೂ ನಿಷಿದ್ಧವಾಗುವುದು' ಎಂದರೆ, 'ನಾನು ಮೂಕ' ಎನ್ನುವ ವಚನಕ್ರಿಯೆಯೂ ಕೂಡ 'ನಾನು ಮೂಕ' ಎನ್ನುವ ವಚನದಿಂದಲೇ ನಿರಾಕೃತವಾಗುವುದು. ಆದರಿಂದ ವ್ಯಾಹತಿ ಇಲ್ಲ' ಎಂದಾದೀತು.

**ಕಿಂಚ ಬ್ರಹ್ಮಣಃ ಶೂನ್ಯಾತ್, ಅನಿರ್ವಾಚ್ಯಾಚ್ಚ ತತ್ವತೋ ವಿಶೇಷಾಭಾವೇ ತತ್ವತಃ ತದೇವ ಸ್ಯಾತ್ । ಭಾವೇ ತು ಸವಿಶೇಷತ್ವಂ ।**

ಬ್ರಹ್ಮನಲ್ಲಿ ಶೂನ್ಯಕ್ಕಿಂತ ಮತ್ತು ಅನಿರ್ವಾಚ್ಯಕ್ಕಿಂತ ತಾತ್ವಿಕ ವಿಶೇಷವಿಲ್ಲವೆಂದರೆ ತಾತ್ವಿಕವಾಗಿ ಅದು ಶೂನ್ಯವೆ, ಅನಿರ್ವಾಚ್ಯವೆ ಎಂದಾಗುವುದು. ತಾತ್ವಿಕ ವಿಶೇಷವೆ ಇದೆ ಎಂದರೆ ಸವಿಶೇಷತ್ವ ಬರುವುದು.

**ಕಿಂಚ ಬ್ರಹ್ಮಣೋ ನಿರ್ವಿಶೇಷತ್ವೇ ವೇದಾಂತವಿಚಾರವಿಷಯತ್ವಮಯುಕ್ತಂ**

ಬ್ರಹ್ಮವು ನಿರ್ವಿಶೇಷವೆಂದರೆ ಅದು ವೇದಾಂತವಿಚಾರಕ್ಕೆ ವಿಷಯವಾಗುವುದು ಅಯುಕ್ತ.

ತದುಕ್ತಂ— ಇದಮಿತ್ಥಮಿತಿ ಜ್ಞಾನಂ ಜಿಜ್ಞಾಸಾಯಾಃ ಪ್ರಯೋಜನಂ ।
ಇತ್ಥಂಭಾವೋ ಹಿ ಧರ್ಮೋಽಸ್ಯ ನ ಚೇನ್ನ ಪ್ರತಿಯೋಗಿತಾ। ಇತಿ।

ಇದನ್ನು ಸಂಧ್ಯಾಧಿಕರಣ ಅನುವ್ಯಾಖ್ಯಾನದಲ್ಲಿ ಹೇಳಿದ್ದಾರೆ— ಬ್ರಹ್ಮನಲ್ಲಿ ಯಾವುದೇ ಧರ್ಮವಿಲ್ಲವೆಂದಾದರೆ, ಬ್ರಹ್ಮವು ಜಿಜ್ಞಾಸ್ಯವೇ ಆಗಲಾರದು. ಏಕೆಂದರೆ ಜಿಜ್ಞಾಸೆ ಎಂದರೆ ಧರ್ಮನಿರ್ಣಯ, ವ್ಯಾಪ್ಯಧರ್ಮ ದರ್ಶನ. ಶಶವಿಷಾಣದಂತೆ ಬ್ರಹ್ಮ ಧರ್ಮಶೂನ್ಯವಾದರೆ ಬ್ರಹ್ಮನಲ್ಲಿ ವ್ಯಾಪ್ಯಧರ್ಮದರ್ಶನ ಹೇಗಾದೀತು? ಆಗುವುದೆಂದರೆ ವ್ಯಾಘಾತ. ಈ ವಸ್ತು ಹೀಗಿದೆ 'ಇದಂ ಇತ್ಥಂ' ಈ ವ್ಯಾಪ್ಯಧರ್ಮದಿಂದ ಕೂಡಿದೆ. ಅದರಿಂದ 'ಇತ್ಥಂ' ಈ ವ್ಯಾಪಕ ಧರ್ಮದಿಂದ ಕೂಡಿದೆ, ಎಂಬ ಅನುಮಿತ್ಯಾತ್ಮಕವಾದ ಧರ್ಮವಿಶಿಷ್ಟಜ್ಞಾನವೇ ಜಿಜ್ಞಾಸೆಯ ಪ್ರಯೋಜನ. ಸ್ವರೂಪ ಮಾತ್ರ ಜ್ಞಾನವು ಮೊದಲಿಗೇ ಇರುವುದರಿಂದ ಅದು ಜಿಜ್ಞಾಸೆಯ ಪ್ರಯೋಜನವೆನಿಸಲಾರದು. ಸ್ವರೂಪಜ್ಞಾನ ಮೊದಲಿಗೆ ಇಲ್ಲವೆಂದರೆ ಆಶ್ರಯಾಸಿದ್ಧಿಯಿಂದ ಅನುಮಾನವೇ ಉಂಟಾಗದು. ಹೀಗಾಗಿ ನಿರ್ಧರ್ಮಕ ಬ್ರಹ್ಮ ಜಿಜ್ಞಾಸ್ಯ ಹೇಗಾದೀತು?

ಇಲ್ಲಿ ಅದ್ವೈತಿ ಹೇಳುತ್ತಾನೆ— 'ಬ್ರಹ್ಮನಲ್ಲಿರುವ ಒಂದು ವ್ಯಾಪ್ಯಧರ್ಮದ ವೈಶಿಷ್ಟ್ಯದಿಂದ ಬ್ರಹ್ಮನಲ್ಲಿ ವ್ಯಾಪಕವಾದ ಇನ್ನೊಂದು ಧರ್ಮದ ವೈಶಿಷ್ಟ್ಯವನ್ನು ಅನುಮಾನ ಮಾಡುತ್ತೇವೆ ಎಂದು ನಾವು ಹೇಳುವುದಿಲ್ಲ. ಒಂದು ಧರ್ಮದ ನಿಷೇಧದಿಂದ ಭ್ರಾಂತಿ ಪ್ರಸಕ್ತವಾದ ಇನ್ನೊಂದು ಧರ್ಮದ ವ್ಯಾವೃತ್ತಿ ಸಿದ್ಧವಾಗುತ್ತದೆ. 'ಸಿದ್ಧಂ ತು ನಿವರ್ತಕತ್ವಾತ್' ಎಂದು ಪೂರ್ವಾಚಾರ್ಯರು ಇದನ್ನೇ ಹೇಳಿದ್ದಾರೆ. ಹೀಗೆ ನಿರ್ಧರ್ಮಕ ಬ್ರಹ್ಮನ ಜಿಜ್ಞಾಸೆ ಕೂಡುತ್ತದೆ' ಎಂದು.

ಇದು ಸರಿಯಲ್ಲ. 'ಇದಂ ಇತ್ಥಂ' ಎಂದರೆ ಇದು ಈ ವ್ಯಾಪ್ಯಧರ್ಮಉಳ್ಳದ್ದು, ಅದರಿಂದ ಈ ವ್ಯಾಪಕಧರ್ಮ ಉಳ್ಳದ್ದು ಎಂದೇ ಅರ್ಥ. ಇತ್ಥಂಭಾವವೇ ಧರ್ಮ. ಎಲ್ಲೂ ಇಲ್ಲದ ಧರ್ಮ ನಿವೃತ್ತಿಯು ಎಲ್ಲೂ ಇಲ್ಲದ ಒಂದು ಧರ್ಮನಿವೃತ್ತಿಯನ್ನು ಅನುಮಾನ ಮಾಡಿಕೊಡುವುದಿಲ್ಲ. ಬ್ರಹ್ಮನಲ್ಲಿ ಇರುವ ಒಂದು ಧರ್ಮನಿವೃತ್ತಿಯೇ ಅವನಲ್ಲಿ ಇನ್ನೊಂದು ಧರ್ಮನಿವೃತ್ತಿ ಇದೆಯೆಂದು ಸಾಧಿಸಬಲ್ಲುದು. ಆದರಿಂದ ಬ್ರಹ್ಮನಲ್ಲಿ ಯಾವುದೇ ಧರ್ಮವಿಲ್ಲದಿದ್ದರೆ 'ಪ್ರತಿಯೋಗಿತಾ' ಅಂದರೆ ವಿರೋಧಿತ್ವ ಇನ್ನೊಂದು ಧರ್ಮದ ನಿವೃತ್ತಿಯೂ ಕೂಡ ಇಲ್ಲವಾದೀತು.

ಕಿಂಚ—ಬ್ರಹ್ಮಣಿ ಧರ್ಮಾರೋಪಾರ್ಥಮೇವ ಕೇಚಿದ್ಧರ್ಮಾಃ ಸತ್ಯಾಃ ಸ್ವೀಕಾರ್ಯಾಃ ಇದಂತ್ವಾದಿನಾ ಜ್ಞಾತೇ ಏವ ಶುಕ್ತ್ಯಾದೌ ಧರ್ಮಾಂತರಾರೋಪಾತ್ ।

ಬ್ರಹ್ಮನಲ್ಲಿ ಆರೋಪಿತ ಧರ್ಮಗಳ ನಿವೃತ್ತಿಗಾಗಿ ಶಾಸ್ತ್ರವು ಧರ್ಮಗಳನ್ನು ನಿಷೇಧ ಮಾಡುತ್ತದೆ ಎನ್ನುತ್ತಾನೆ ಅದ್ವೈತಿ. ಅದರಿಂದ ಬ್ರಹ್ಮನಲ್ಲಿ ಧರ್ಮ ಆರೋಪಿತವಾಗಿದೆ ಎಂದಂತಾಯಿತು. ಆದರೆ ಧರ್ಮಾರೋಪ ಮಾಡುವುದಕ್ಕೂ ಮೊದಲಿಗೆ ಕೆಲವು ಸತ್ಯಧರ್ಮಗಳನ್ನು ಬ್ರಹ್ಮನಲ್ಲಿ

ಒಪ್ಪಲೇಬೇಕಾಗುತ್ತದೆ. 'ಇದಂ ರಜತಂ' ಎಂದು ಶುಕ್ತಿಯಲ್ಲಿ ರಜತಾರೋಪ ಮಾಡುವುದಕ್ಕೆ ಮೊದಲ ನಿಯಮೇನ 'ಇದಂ' ಎಂದು ಇದಂತ್ವ ಮುಂತಾದ ಸತ್ಯಧರ್ಮವನ್ನು ಶುಕ್ತಿಯಲ್ಲಿ ಕಂಡಿರಬೇಕು.

**ತದುಕ್ತಂ— ಧರ್ಮಾರೋಪೋऽಪಿ ಸಾಮಾನ್ಯಧರ್ಮಾದೀನಾಂ ಹಿ ದರ್ಶನೇ ।**
**ಸರ್ವಧರ್ಮವಿಹೀನಸ್ಯ ಧರ್ಮಾರೋಪಃ ಕ್ವ ದೃಶ್ಯತೇ ಇತಿ ।**

ಇದು ಕೂಡ ಸಂಧ್ಯಾಧಿಕರಣ ಅನುವ್ಯಾಖ್ಯಾನದಲ್ಲಿ ಉಕ್ತವಾಗಿದೆ. 'ಸತ್ಯವಾದ ಚಾಕಚಕ್ಯ ಮುಂತಾದ ಪ್ರಧಾನ ಸಾಮಾನ್ಯ ಧರ್ಮ ಇದಂತ್ವ ತತ್ತ್ವ ಮುಂತಾದ ಧರ್ಮಗಳನ್ನು ಶುಕ್ತ್ಯಾದಿ ಅಧಿಷ್ಠಾನದಲ್ಲಿ ಕಂಡಾಗಲೇ ಮಿಥ್ಯಾರಜತಾದಿ ಧರ್ಮಾರೋಪ ಉಂಟಾದೀತು. ಸರ್ವಧರ್ಮಶೂನ್ಯವಾದ ಶಶವಿಷಾಣಾದಿಗಳಲ್ಲಿ ಧರ್ಮಾರೋಪ ಮಾಡುವುದು ಎಲ್ಲಿ ಕಂಡಿದೆ?' ಎಂದು.

**ಅಭಾವರೂಪಧರ್ಮಾಃ ಸಂತೀತಿ ಚೇತ್, ನ ಅಭಾವತ್ವಂ ತತ್ರ ಹೇತುಃ । ಅತಿಪ್ರಸಂಗಾತ್ । ಕಿಂತು ಪ್ರಾಮಾಣಿಕತ್ವಂ । ತಚ್ಚ ಭಾವೇಷ್ವಪಿ ಸಮಂ ।**

'ಬ್ರಹ್ಮ ಸರ್ವಧರ್ಮಶೂನ್ಯವಲ್ಲ. ಅದೃಶ್ಯತ್ವಾದಿ ಅಭಾವರೂಪ ಸತ್ಯಧರ್ಮಗಳು ಅವನಲ್ಲಿವೆ' ಎಂದರೆ, ಧರ್ಮಸತ್ಯತ್ವಕ್ಕೆ ಅಭಾವತ್ವವು ಪ್ರಯೋಜಕವಲ್ಲ. ಅಭಾವತ್ವವು ಪ್ರಯೋಜಕವೆಂದರೆ, ಬ್ರಹ್ಮನಲ್ಲಿ ಸತ್ತ್ವಾಭಾವವೂ ಸತ್ಯವೆಂದಾದೀತು. ವ್ಯಾವಹಾರಿಕ ಘಟಾಭಾವದಲ್ಲಿಯೂ ಅನಾರೋಪಿತ ಸತ್ತ್ವವಿದೆ ಎಂದಾದೀತು. ಅಭಾವವಲ್ಲದ ಶೂನ್ಯವಲ್ಲದ ಬ್ರಹ್ಮ ಅಸತ್ತೆಂದಾದೀತು. ಪ್ರಾಮಾಣಿಕತ್ವವೇ ಸತ್ಯತ್ವಕ್ಕೆ ಪ್ರಯೋಜಕವೆನ್ನಬೇಕು. ಆಗ ಅಭಾವರೂಪವಾದ ಅದೃಶ್ಯತ್ವಾದಿಗಳಂತೆಯೇ ಭಾವರೂಪವಾದ ಸರ್ವಜ್ಞತ್ವಾದಿಗಳೂ ಪ್ರಾಮಾಣಿಕವಾದ್ದರಿಂದ ಅವು ಸತ್ಯವೇ ಆಗಿರಬೇಕು.

**ಯದಿ ಚಾಭಾವೋ ಬ್ರಹ್ಮಾಭಿನ್ನಃ ಯದಿ ವಾ ಪಂಚಮಪ್ರಕಾರಃ, ನತು ಸನ್ ಇತಿ ಸದದ್ವೈತಾವಿರೋಧೀ ತರ್ಹಿ ಭಾವೋऽಪಿ ತಥಾಸ್ತು ।**

'ಅಭಾವವು ಬ್ರಹ್ಮಾಭಿನ್ನವಾದ್ದರಿಂದ ಸದದ್ವೈತಕ್ಕೆ ವಿರೋಧಿಯಾಗುವುದಿಲ್ಲ. ಅಥವಾ ಅಭಾವವು ಭಿನ್ನವಾದರೂ ಸತ್ಯವೆಂದು ಅದನ್ನು ಪರಿಗಣಿಸುವುದಿಲ್ಲ. ಪಂಚಮಪ್ರಕಾರ, 'ಸದಸದ್‌ವಿಲಕ್ಷಣ' ಎಂಬ ಚತುರ್ಥಪ್ರಕಾರಕ್ಕಿಂತಲೂ ವಿಲಕ್ಷಣವಾದುದು, 'ಸದಸದ್‌ವಿಲಕ್ಷಣ ವಿಲಕ್ಷಣ' ಎನ್ನುತ್ತೇವೆ. ಹೀಗಾಗಿ ಸತ್ ಬ್ರಹ್ಮ ಒಂದೇ ಎನ್ನುವ ಸದದ್ವೈತಮತಕ್ಕೆ ಅದರಿಂದ ಹಾನಿ ಇಲ್ಲ' ಎಂದು ಅದ್ವೈತಿ ಹೇಳಿದರೆ ನಾವು ಹೇಳಬೇಕು—ಸರ್ವಜ್ಞತ್ವಾದಿ ಭಾವಧರ್ಮಗಳೂ ಕೂಡ ಬ್ರಹ್ಮನಿಂದ ಅಭಿನ್ನವೆಂದು ಸ್ವೀಕರಿಸು. ಆಗ ನಿನ್ನ ಸದದ್ವೈತ ಮತಕ್ಕೆ ಹಾನಿ ಬರುವುದಿಲ್ಲ. ಅಥವಾ ಬ್ರಹ್ಮಭಿನ್ನವಾದರೂ ಪಂಚಮ ಪ್ರಕಾರವಾಗಿಯೇ ಇರಲಿ, ಆಗಲೂ ನಿನ್ನ ಸದದ್ವೈತಮತಕ್ಕೆ ಹಾನಿ ಇಲ್ಲ.

**ತಸ್ಮಾತ್–**

**ಬ್ರೂತೇಽಸತೋಽಪಿ ಮೋಹಾದೀನ್ ದೋಷಾನ್ ವಿಷ್ಣೋರ್ಗುಣಾನ್ ಸತಃ ।**

**ನಿಹ್ನುತೇ ಪರಮೇ ತತ್ತ್ವೇ ದ್ವೇಷಾದೇವಾಸುರೋ ಜನಃ ॥**

**ತಸ್ಮಾತ್ ಬ್ರಹ್ಮ ಸಗುಣಮೇವೇತಿ ।**

ಆದರಿಂದ ಅಸುರಸ್ವಭಾವದ ಜನರು ವಿಷ್ಣುವಿನಲ್ಲಿಲ್ಲದ ಅಜ್ಞಾನಾದಿ ದೋಷಗಳನ್ನು ಇವೆ ಎನ್ನುತ್ತಾರೆ. ಇರುವ ಸಾರ್ವಜ್ಞಾದಿಗುಣಗಳನ್ನು ಇಲ್ಲವೆನ್ನುತ್ತಾರೆ. ಇದು ಕೇವಲ ಪರತತ್ತ್ವದ ಮೇಲಿನ ದ್ವೇಷದಿಂದ. ಆದರಿಂದ ಬ್ರಹ್ಮನು ಸಗುಣನೆ.

**ಬ್ರಹ್ಮನ ನಿರ್ಗುಣತ್ವನಿರಾಸ ಇಲ್ಲಿಗೆ ಮುಗಿಯಿತು.**

## ನಿರ್ಗುಣೇ ಪ್ರಮಾಣಭಂಗಃ

किंच निर्विशेषे किं प्रमाणम् । नच तत्स्वतःसिद्धम् । निरस्तत्वात् । यद्यद्विप्रतिपन्नं तत्सर्वमपि स्वतःसिद्धमिति सुवचत्वाच्च । विप्रतिपत्त्ययोगाच्च । शास्त्रवैयर्थ्याच्च । नचाज्ञाननिवृत्त्यर्थं शास्त्रम् । अज्ञानाविरोधिन्याः स्वतःसिद्धेर्घटादावपि सुवचत्वात् । नच तत्र प्रत्यक्षं मानम् । अपसिद्धान्तात्। ''नेंद्रियाणि नानुमानम्'' इत्यादिश्रुतेश्च । शास्त्रवैयर्थ्याच्च । अतएव नानुमानम्, व्याप्त्या व्यापकतावच्छेदकविशिष्टत्वेन पक्षधर्मतया च पक्षसंसृष्टत्वेन सिद्ध्या तेन निर्विशेषासिद्धेश्च ।

।। **विप्रतिपत्त्ययोगाच्चेति** ।। सिद्धे वस्तुनि संशयायोगेन विप्रतिपत्त्ययोगादिति भावः ।। **शास्त्रवैयर्थ्याच्चेति** ।। तत्सिद्धेः शास्त्रनिरपेक्षत्वांगीकारादिति भावः ।। **अज्ञानाविरोधिन्या इति** ।। तथाच स्वतःसिद्धिरिति परिभाषामात्रमिति भावः ।। **तत्रेति** ।। निर्विशेषब्रह्मणीत्यर्थः ।। **अपसिद्धांतादिति** ।। तस्य शास्त्रैकसमधिगम्यत्वांगीकारादिति भावः ।। **अत एवेति** ।। अपसिद्धांतादिदोषादेवेत्यर्थः ।



**ಕಿಂಚ ನಿರ್ವಿಶೇಷೇ ಕಿಂ ಪ್ರಮಾಣಂ? ನ ಚ ತತ್ ಸ್ವತಃಸಿದ್ಧಂ। ನಿರಸ್ತತ್ವಾತ್। ಯದ್ಯದ್ ವಿಪ್ರತಿಪನ್ನಂ ತತ್ ಸರ್ವಮಪಿ ಸ್ವತಃ ಸಿದ್ಧಮಿತಿ ಸುವಚತ್ವಾಚ್ಚ। ವಿಪ್ರತಿಪತ್ತ್ಯಯೋಗಾಚ್ಚ। ಶಾಸ್ತ್ರವೈಯರ್ಥ್ಯಾಚ್ಚ।**

ನಿರ್ವಿಶೇಷವಾದ ವಸ್ತು ಒಂದು ಇದೆ ಎನ್ನಲು ಏನು ಪ್ರಮಾಣ?

ಬ್ರಹ್ಮ ಪ್ರತಿಯೊಬ್ಬರಿಗೂ ಆತ್ಮಸ್ವರೂಪವಾಗಿದ್ದು ಸ್ವತಃ ಸಿದ್ಧವಾಗಿದೆ ಎಂದಮೇಲೆ ಅದರ ವಿಷಯದಲ್ಲಿ ಪ್ರಮಾಣಪ್ರಶ್ನೆ ಏಕೆ? ಎಂದರೆ ಅದು ಸರಿಯಲ್ಲ. ಬ್ರಹ್ಮನು 'ಸ್ವತಃಸಿದ್ಧ' ಎಂದರೆ ಬೇರೆ ಪ್ರಮಾಣಗಳಿಗೆ ಗೋಚರನಾಗದೆ ತನಗೆ ತಾನೇ ಗೋಚರನಾಗುತ್ತಾನೆ. ತನ್ನನ್ನು ತಾನೇ ತಿಳಿಯುತ್ತಾನೆ ಎಂದರ್ಥ ತಾನೆ? ಇದನ್ನು ಕರ್ತೃಕರ್ಮವಿರೋಧವೆಂದು ತಿಳಿದು ಅದ್ವೈತಿ ತಾನೇ ನಿರಾಸಮಾಡಿದ್ದಾನೆ— ತಿಳಿಯುವ ಕ್ರಿಯೆಗೆ ಬ್ರಹ್ಮ ತಾನೇ ಕರ್ತ, ತಾನೆ ಕರ್ಮ ಎಂದರೆ ತನ್ನ ಹೆಗಲನ್ನು ತಾನೇ ಏರುವಂತೆ, ತನ್ನಿಂದ ತಾನೆ ಹುಟ್ಟುವಂತೆ ಆತ್ಮಾಶ್ರಯ. ಕರ್ತೃಕರ್ಮ ಎರಡು

ಒಂದಾಗದು. 'ಪರ ಸಮವೇತ ಕ್ರಿಯಾಜನ್ಯಫಲ ಶಾಲಿತ್ವಂ ಕರ್ಮತ್ವಂ' ಕ್ರಿಯೆ ಒಬ್ಬನಲ್ಲಿರುತ್ತದೆ. ಅವನು ಕರ್ತ. ಕ್ರಿಯೆಯ ಫಲವಿನ್ನೊಬ್ಬನಲ್ಲಿ. ಅವನು ಕರ್ಮ ಎಂದು.

ಬ್ರಹ್ಮವು ಸ್ವತಃ ಸಿದ್ಧವಾಗಿರುವಾಗ ಅದರ ವಿಷಯದಲ್ಲಿ ಪ್ರಮಾಣವೇನೆಂದು ಪ್ರಶ್ನೆಯೆ ಅಸಂಗತವೆಂದರೆ ವಿವಾದಾಸ್ಪದವಾದ ಯಾವುದೇ ವಿಷಯದಲ್ಲಿ 'ಅದು ಸ್ವತಃ ಸಿದ್ಧ. ಪ್ರಮಾಣ ಪ್ರಶ್ನೆಯೆ ಬೇಡ' ಎನ್ನುವುದು ಸುಲಭ. ಅದನ್ನು ಕೇಳಿ ನಾವು ಸುಮ್ಮನಾಗಬೇಕಾಗುವುದು.

ನಿರ್ವಿಶೇಷ ವಿಷಯದಲ್ಲಿ 'ಸ್ವತಃ ಸಿದ್ಧಿ'ಯೇ ಇರುವುದಾದರೆ ಅದರ ವಿಷಯದಲ್ಲಿ ಸಂಶಯ ವಿಪ್ರತಿಪತ್ತಿಗಳು ಉಂಟಾಗಲು ಏನು ಕಾರಣ? ಸಿದ್ಧವಾದ ವಿಷಯದಲ್ಲಿ ಅವು ಇರುವುದಿಲ್ಲ ತಾನೆ?

ನಿರ್ಗುಣಬ್ರಹ್ಮ ಸ್ವತಃ ಸಿದ್ಧವೇ ಆಗಿರುವುದಾದರೆ ಅದನ್ನು ತಿಳಿಸಲು ಶಾಸ್ತ್ರದ ಅಪೇಕ್ಷೆ ಇಲ್ಲ. ಹೀಗಾಗಿ ಅದನ್ನು ತಿಳಿಸಲೆಂದು ಹೊರಟಿರುವ 'ಕೇವಲೋ ನಿರ್ಗುಣಶ್ಚ' ಎಂಬ ಅದ್ವೈತಿ ಒಪ್ಪಿರುವ ಶಾಸ್ತ್ರ ವ್ಯರ್ಥವಾದೀತು.

'ಬ್ರಹ್ಮನು ಶಶವಿಷಾಣದಂತೆ ಅಸತ್ತಲ್ಲ ಎನ್ನುವಲ್ಲಿ ಪ್ರಮಾಣಗಳಿವೆ. ವಿವಾದಸ್ಪದವಾದ ಎಲ್ಲಕಡೆ ಹೀಗೆ 'ಅಸತ್ತಲ್ಲ' ಎನ್ನುವಲ್ಲಿ ಪ್ರಮಾಣವಿರುವುದಿಲ್ಲ. ಆದರಿಂದ ಅತಿಪ್ರಸಕ್ತಿ ಇಲ್ಲ.' ಎಂದು ಅದ್ವೈತಸಿದ್ಧಿಕಾರ ಹೇಳುತ್ತಾನೆ. ಆದರೆ ಅಸತ್ತಲ್ಲ ಎನ್ನಲು ಮೊದಲಿಗೆ, ಸತ್ಯವಾಗಿದೆ ಎನ್ನುವುದಕ್ಕೇ ಪ್ರಮಾಣ ಬೇಕು. 'ಸತ್ಯವಾಗಿದೆ' ಎನ್ನುವ ಪ್ರಮಾಣವೇ 'ಅಸತ್ತಲ್ಲ' ಎನ್ನಲು ಪ್ರಮಾಣ. ಬ್ರಹ್ಮನು ಸತ್ಯ ಎನ್ನುವುದಕ್ಕೇ ಪ್ರಮಾಣವಿಲ್ಲ. 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಎಂಬ ವಾಕ್ಯವು ಬ್ರಹ್ಮನಲ್ಲಿ ಸತ್ಯತ್ವವನ್ನು ಹೇಳುವುದಿಲ್ಲವೆಂದೇ ಅದ್ವೈತಿ ಹೇಳುತ್ತಾನೆ.

**ನ ಚ ಅಜ್ಞಾನನಿವೃತ್ತ್ಯರ್ಥಂ ಶಾಸ್ತ್ರಂ। ಅಜ್ಞಾನಾವಿರೋಧಿನ್ಯಾಃ ಸ್ವತಃ ಸಿದ್ಧೇಃ ಘಟಾದಾವಪಿ ಸುವಚತ್ವಾತ್ ।**

'ಸ್ವತಃಸಿದ್ಧವಾಗಿರುವ ನಿರ್ವಿಶೇಷವನ್ನು ತಿಳಿಸಲು ಶಾಸ್ತ್ರ ಬೇಕಾಗಿಲ್ಲ ನಿಜ. ಆದರೆ ಅದರ ಬಗ್ಗೆ ಅಜ್ಞಾನವನ್ನು ದೂರಮಾಡಲು ಶಾಸ್ತ್ರ ಬೇಕು.' ಎಂದರೆ ಇದು ಸ್ವವ್ಯಾಹತ. 'ನಿರ್ಗುಣದ ಬಗ್ಗೆ ಸ್ವತಃಸಿದ್ಧಿ ಇದೆ. ಆದರೆ ಅಜ್ಞಾನ ನಿವೃತ್ತಿಯಾಗಿಲ್ಲ' ಎಂದರೆ ಅದು ಸಿದ್ಧಿಯೇ ಅಲ್ಲ, ಬರಿ ಹೆಸರಷ್ಟೆ. ಅಜ್ಞಾನಕ್ಕೆ ಅವಿರೋಧಿಯಾಗುವ ಸ್ವತಃ ಸಿದ್ಧಿಯು ಯಾವುದೇ ಪ್ರಮೇಯ ಸಿದ್ಧಿಗೆ ಅನುಪಯುಕ್ತ. ಅಜ್ಞಾತವಾದ ಘಟಾದಿ ಎಲ್ಲ ವಿಷಯಗಳಲ್ಲಿಯೂ ಹೀಗೆ ಸ್ವತಃಸಿದ್ಧಿಯನ್ನು ಅಜ್ಞಾನಾವರಣವನ್ನೂ ಸುಲಭವಾಗಿ ಹೇಳಬಹುದು.

**ನಚ ತತ್ರ ಪ್ರತ್ಯಕ್ಷಂ ಮಾನಂ। ಅಪಸಿದ್ಧಾಂತಾತ್। ನೇಂದ್ರಿಯಾಣಿ ನಾನು ಮಾನಂ ಇತ್ಯಾದಿಶ್ರುತೇಶ್ಚ। ಶಾಸ್ತ್ರ ವೈಯರ್ಥ್ಯಾಚ್ಚ।**

ನಿರ್ಗುಣವಿಷಯದಲ್ಲಿ ಪ್ರತ್ಯಕ್ಷವು ಪ್ರಮಾಣವೆಂದು ಅದ್ವೈತಿಯು ಹೇಳಲಾರ. ಹೇಳಿದರೆ

'ಔಪನಿಷದಃ ಪುರುಷಃ' ಬ್ರಹ್ಮನು ಉಪನಿಷತ್ತಿಗೆ ಮಾತ್ರ ಗಮ್ಯ ಎನ್ನುವ ಅವನ ಸಿದ್ಧಾಂತಕ್ಕೆ ಹಾನಿ. ಅಪಸಿದ್ಧಾಂತ ದೋಷ. 'ನೇಂದ್ರಿಯಾಣಿ ನಾನುಮಾನಂ ವೇದಾ ಹ್ಯೇವೈನಂ ವೇದಯಂತಿ' 'ಪ್ರತ್ಯಕ್ಷಾನುಮಾನಗಳಿಗೆ ಬ್ರಹ್ಮನ ವಿಷಯದಲ್ಲಿ ತಿಳಿಸಲು ಸಾಮರ್ಥ್ಯವಿಲ್ಲ. ವೇದಗಳೇ ತಿಳಿಸಬೇಕು' ಎಂದು ಶ್ರುತಿ ಇದೆ. ಮತ್ತು ಪ್ರತ್ಯಕ್ಷವೇ ತಿಳಿಸುತ್ತಿದ್ದರೆ ಶಾಸ್ತ್ರ ವ್ಯರ್ಥವೂ ಆಗುತ್ತದೆ.

**ಅತ ಏವ ನಾನುಮಾನಂ। ವ್ಯಾಪ್ತ್ಯಾ ವ್ಯಾಪಕತಾವಚ್ಛೇದಕ ವಿಶಿಷ್ಟತ್ವೇನ, ಪಕ್ಷಧರ್ಮತಯಾ ಪಕ್ಷಸಂಸೃಷ್ಟತ್ವೇನ ಸಿದ್ಧ್ಯಾ ತೇನ ನಿರ್ವಿಶೇಷಾಸಿದ್ಧೇಶ್ಚ।**

ನಿರ್ಗುಣವು ಅನುಮಾನವೇದ್ಯ ಎಂದರೂ ಇವೇ ದೋಷಗಳು ಬರುತ್ತವೆ. ಮತ್ತು ವ್ಯಾಪ್ತಿಯಿಂದ ಮತ್ತು ಪಕ್ಷಧರ್ಮತಾದಿಂದ ಪಕ್ಷದಲ್ಲಿ ವ್ಯಾಪಕವನ್ನು ತಿಳಿಯುವುದೇ ಅನುಮಾನ. ವ್ಯಾಪಕವು ವ್ಯಾಪ್ತಿಯಿಂದ ವ್ಯಾಪಕತಾವಚ್ಛೇದಕ ವಿಶಿಷ್ಟರೂಪದಿಂದಲೇ ಸಿದ್ಧವಾಗುವುದು. ಪಕ್ಷಧರ್ಮತಾದಿಂದಲೂ ಅದು ಪಕ್ಷವೃತ್ತಿಯಾಗಿಯೇ ಸಿದ್ಧವಾಗುವುದು. ನಿರ್ವಿಶೇಷದಲ್ಲಿ ವ್ಯಾಪಕತಾವಚ್ಛೇದಕ ಧರ್ಮವೂ ಇಲ್ಲ, ಪಕ್ಷವೃತ್ತಿತ್ವವೂ ಇಲ್ಲವೆಂದಮೇಲೆ ಅನುಮಾನದಿಂದ ಅದು ಸಿದ್ಧವಾಗುವುದು ಅಸಂಭವ.



नापि पदरूपः शब्दस्तत्र मानम् । गुणक्रियाजातिरूपनिमित्ताभावेन मुख्यवृत्तेरयोगात् । अस्वीकाराच्च । वैदिकशब्दस्य डित्थादिवत्सांकेतिकत्वायोगाच्च । आरोपितनिमित्तविशिष्टविषयप्रतीतेश्च निर्विशेषे प्रामाण्यायोगात् । गौण्याश्च मुख्यार्थगुणयुक्ततयैव स्वार्थोपस्थापकत्वात् । लक्षणायाश्च शक्यार्थसंबंधिताबच्छेदकरूपवत्तयैव स्वार्थोपस्थापकत्वात् । पदस्यान्वयप्रतियोगितावच्छेदकरूपेणैव स्वार्थोपस्थापकतया निर्विशेषे वृत्तिमात्रायोगाच्च । अत एव नोपनिषद्वाक्यरूपः शब्दस्तत्र मानम् । असंसर्गत्वात् । धर्मिज्ञानाधीनविचारजन्यं निर्धारितैककोट्यवलंबिनं सप्रकारकनिश्चयं प्रत्येव तस्य हेतुत्वाच्च । निष्प्रकारकज्ञानं नेत्युक्तत्वाच्च । निर्विशेषविषयकज्ञानस्य निष्प्रकारकत्वे तेन निर्विशेषत्वासिद्ध्या तत्सिद्ध्यर्थमेव विशेषाभावरूपविशेषविषयकत्वस्यावश्यकत्वाच्च । तस्मात्सगुणमेव ब्रह्मेति ॥

ननु तत्र शब्द एव प्रमाणमित्याशंक्य शब्दः किं पदरूप उत वाक्यरूपः । आद्येऽपि स किं मुख्यया वृत्त्या उत गौण्या आहोस्विल्लक्षणया बोधकः । मुख्यत्वेऽपि किं गुणादिप्रवृत्तिनिमित्तकः उत सांकेतिक इति विकल्प्याद्यं निराकरोति **–नापि पदरूप इति** ।। द्वितीयं निराह– **वैदिकशब्दस्येति** ।। ननु निर्विशेषत्वेऽपि आरोपितगुणादेः संभवात् पदस्य तत्प्रवृत्तिनिमित्तकत्वमस्त्वित्याशंक्याह— **आरोपितेति** ।। तृतीयं निराचष्टे— **गौण्याश्चेति** ।। नापि तुरीय इत्याह— **लक्षणायाश्चेति** ।। अन्त्ये त्वाह— **अतएवेति** ।। अतःशब्दार्थमेवाह— **असंसर्गत्वादिति** ।। वाक्यस्य पदार्थसंसर्ग एव प्रमाणत्वादिति भावः । करणस्वाभाव्यान्निर्विशेषे प्रमाणाभावमुक्त्वा फलस्वाभाव्यादपि तमाह— **निर्विषयत्वासिद्ध्या तत्सिद्ध्यर्थमिति** ।।



**ನಾಪಿ ಪದರೂಪಃ ಶಬ್ದಸ್ತತ್ರ ಮಾನಂ। ಗುಣ ಕ್ರಿಯಾ ಜಾತಿ ರೂಪ ನಿಮಿತ್ತಾಭಾವೇನ ಮುಖ್ಯವೃತ್ತೇರಯೋಗಾತ್। ಅಸ್ವೀಕಾರಾಚ್ಚ।**

ಆಗಮದಿಂದಲೂ ನಿರ್ವಿಶೇಷ ಸಿದ್ಧಿ ಕೂಡುವುದಿಲ್ಲ. ಆಗಮವು ಒಂದು ಪದವಿರಬಹುದು, ಅಥವಾ ಪದಸಮೂಹರೂಪ ವಾಕ್ಯವಿರಬಹುದು. ಅದು ನಿರ್ವಿಶೇಷವನ್ನು ಮುಖ್ಯವೃತ್ತಿಯಿಂದಾಗಲಿ ಗೌಣೀವೃತ್ತಿಯಿಂದ ಅಥವಾ ಲಕ್ಷಣಾವೃತ್ತಿಯಿಂದಾಗಲಿ ತಿಳಿಸಬೇಕು. ಆದರೆ ಗುಣ ಕ್ರಿಯಾ ಜಾತಿರೂಪ ಪ್ರವೃತ್ತಿನಿಮಿತ್ತ ಒಂದೂ ಇಲ್ಲದ ನಿರ್ವಿಶೇಷವನ್ನು ಪದವು ಮುಖ್ಯವೃತ್ತಿಯಿಂದ, ಶಕ್ತಿಯಿಂದ, ಬೋಧಿಸಲಾರದು. ಬೋಧಿಸಿದರೆ ವ್ಯಾಹತಿ. ಪ್ರವೃತ್ತಿನಿಮಿತ್ತವಿಲ್ಲದ ನಿರ್ವಿಶೇಷವು ಪ್ರವೃತ್ತಿನಿಮಿತ್ತ ವಿಶಿಷ್ಟರೂಪದಿಂದ ಪದದಿಂದ ಬೋಧ್ಯವಾಗಲಾರದು. ಹಾಗೆ ಬೋಧ್ಯವಾಗುವುದನ್ನು ಅದ್ವೈತಿಯೂ ಒಪ್ಪಿಯೂ ಇಲ್ಲ.

**ವೈದಿಕಶಬ್ದಸ್ಯ ಡಿತ್ಥಾದಿವತ್ ಸಾಂಕೇತಿಕತ್ವಾಯೋಗಾಚ್ಚ। ಆರೋಪಿತ ನಿಮಿತ್ತ ವಿಶಿಷ್ಟವಿಷಯ ಪ್ರತೀತೇಶ್ಚ ನಿರ್ವಿಶೇಷೇ ಪ್ರಾಮಾಣ್ಯಾಯೋಗಾತ್।**

ಸಂಕೇತರೂಪ ಮುಖ್ಯವೃತ್ತಿಯಿಂದಲೂ ಬೋಧ್ಯವಲ್ಲವೆಂದು ಅದ್ವೈತಿಯೆ ಹೇಳುತ್ತಾನೆ. ಡಿತ್ಥ ಡವಿತ್ಥ ಡಾಂಭಿಟ್ಟ ಮುಂತಾಗಿ ವ್ಯಕ್ತಿಗಳಿಗೆ ಹೆಸರಿಟ್ಟರೆ ಆ ಹೆಸರುಗಳು ಸಾಂಕೇತಿಕವಾಗುತ್ತವೆ. ಮುಖ್ಯವೃತ್ತಿಯಿಂದಲೆ ವ್ಯಕ್ತಿಗಳನ್ನು ಹೇಳುತ್ತವೆ. ನಿರ್ಗುಣವನ್ನು ಈರೀತಿಯ ಸಾಂಕೇತಿಕಶಬ್ದವು ಬೋಧಿಸಲಾರದು. ಏಕೆಂದರೆ ವೇದೈಕವೇದ್ಯವಾದ ನಿರ್ವಿಶೇಷವನ್ನು ವೈದಿಕ ಪದವೇ ಹೇಳಬೇಕು. ವೈದಿಕಪದವು ಸಾಂಕೇತಿಕವಾಗದು. ಸಾಂಕೇತಿಕವಾಗಬೇಕಾದರೆ ಸಂಕೇತಮಾಡುವ ಪುರುಷನಿರ

ಬೇಕಾಗುತ್ತದೆ. ಅಪೌರುಷೇಯವಾದ ವೇದದಲ್ಲಿ ಪುರುಷನಿಲ್ಲ. ನಿರ್ವಿಶೇಷವಾದ್ದರಿಂದ ಸಾಂಕೇತಿಕ ಶಬ್ದದ ಪ್ರವೃತ್ತಿ ನಿಮಿತ್ತವೂ ಬ್ರಹ್ಮನಲ್ಲಿಲ್ಲ.

ಸತ್ಯವಾದ ಪ್ರವೃತ್ತಿನಿಮಿತ್ತ ಬ್ರಹ್ಮನಲ್ಲಿಲ್ಲದಿದ್ದರೂ ಆರೋಪಿತವಾದುದು ಇರಬಹುದು ಎಂದರೆ ಆರೋಪಿತವಾದ ಪ್ರವೃತ್ತಿನಿಮಿತ್ತ ವಿಶಿಷ್ಟರೂಪದಿಂದ ನಿರ್ವಿಶೇಷವನ್ನು ವೇದವು ಹೇಳಿದರೆ ಅದು ಪ್ರಮಾಣವಾಗಲಾರದು. ಇಲ್ಲದ ಧರ್ಮವನ್ನು ಆರೋಪಿಸಿ, ಇದೆ ಎಂದರೆ ಅದು ಅಪ್ರಮಾಣವೇ ಆಗುವುದು.

**ಗೌಣ್ಯಾಶ್ಚ ಮುಖ್ಯಾರ್ಥಗುಣಯುಕ್ತತಯೈವ ಸ್ವಾರ್ಥೋಪಸ್ಥಾಪಕತ್ವಾತ್ । ಲಕ್ಷಣಾಯಾಶ್ಚ ಶಕ್ಯಾರ್ಥಸಂಬಂಧಿತಾವಚ್ಛೇದಕ ರೂಪವತ್ತಯೈವ ಸ್ವಾರ್ಥೋಪ ಸ್ಥಾಪಕತ್ವಾತ್ ।**

ಗೌಣೀವೃತ್ತಿಯಿಂದ ಶಬ್ದವು ಬೋಧಿಸಬೇಕಾದರೆ ಮುಖ್ಯಾರ್ಥದ ಸಾದೃಶ್ಯವನ್ನು ಅದು ಹೇಳಬೇಕು. ತನ್ನ ಗೌಣಅರ್ಥದಲ್ಲಿ ತನ್ನ ಮುಖ್ಯಾರ್ಥಕ್ಕೆ ಸದೃಶವಾದ ಗುಣವಿದೆ ಎನ್ನಬೇಕು. ನಿರ್ಗುಣನಲ್ಲಿ ಅದು ಇಲ್ಲ. ಲಕ್ಷಣಾವೃತ್ತಿಯಿಂದ ಶಬ್ದವು ಬೋಧಿಸಬೇಕೆಂದರೆ ತನ್ನ ಮುಖ್ಯಾರ್ಥ ಸಂಬಂಧಿತಾವಚ್ಛೇದಕ ರೂಪವಿಶಿಷ್ಟವಾಗಿ ತನ್ನ ಲಕ್ಷ್ಯಾರ್ಥದ ಉಪಸ್ಥಿತಿ ಉಂಟು ಮಾಡಬೇಕು. ಉದಾ: 'ಗಂಗಾಯಾಂ ಘೋಷಃ' ಎಂಬಲ್ಲಿ ಲಾಕ್ಷಣಿಕವಾದ ಗಂಗಾ ಶಬ್ದವು ಲಕ್ಷಣಾವೃತ್ತಿಯಿಂದ ಲಕ್ಷ್ಯಾರ್ಥವಾದ ಪ್ರವಾಹಸಂಬಂಧಿ ತೀರವನ್ನು ಪ್ರವಾಹಸಂಬಂಧಿತಾವಚ್ಛೇದಕ ತೀರತ್ವೇನ, 'ತೀರ' ಎಂದು, ಬೋಧಿಸಬೇಕು. ತೀರದಲ್ಲಿ ತೀರತ್ವದಂತೆ ನಿರ್ಗುಣಬ್ರಹ್ಮನಲ್ಲಿ ಯಾವ ಧರ್ಮವೂ ಇಲ್ಲದ್ದರಿಂದ ಲಕ್ಷಣಯಾ ಶಬ್ದವು ಬ್ರಹ್ಮಬೋಧವನ್ನು ಉಂಟುಮಾಡಲಾರದು.

'ಸಂಸರ್ಗ ಬೋಧಕವಾದ ವಾಕ್ಯದಲ್ಲಿ ಬರುವ ಶಬ್ದಗಳಿಗೆ ಮಾತ್ರ ಈ ಎಲ್ಲ ನಿಯಮಗಳು. ಸಂಸರ್ಗವಿಲ್ಲದ ಸಂಸರ್ಗವಲ್ಲದ ಅಖಂಡಾರ್ಥವನ್ನು ಬೋಧಿಸುವ ಸತ್ಯಜ್ಞಾನಾದಿ ವಾಕ್ಯಗಳಲ್ಲಿ ಈ ಯಾವ ನಿಯಮವೂ ಇಲ್ಲ' ಎಂದರೆ, ಅದು ಸರಿಯಲ್ಲ. ಸಂಸರ್ಗಬೋಧಕವಲ್ಲದ ವಾಕ್ಯವು ಪ್ರಮಾಣ ವಾಕ್ಯವೇ ಅಲ್ಲ. ವಾಕ್ಯವು ಸಂಸರ್ಗಬೋಧಕವಾಗಿಯೇ ಪ್ರಮಾಣವಾಗಬೇಕು. ಹಾಗಾಗಬೇಕಾದರೆ ಅದು ಆಕಾಂಕ್ಷಾ ಯೋಗ್ಯತಾ ಸನ್ನಿಧಿಗಳಿಂದ ಕೂಡಿರಬೇಕು. ಇಲ್ಲದಿದ್ದರೆ ಜರದ್ಗವವಾಕ್ಯದಂತೆ ಸಂಸರ್ಗಾಬೋಧಕವಾಗಿ ಅಪ್ರಮಾಣವಾಗುವುದು. ಆಕಾಂಕ್ಷಾದಿಗಳು ಮೂರೂ ಸಂಸರ್ಗಘಟಿತವಾಗಿರುವುದರಿಂದ ಸಂಸರ್ಗಾಬೋಧಕ ವಾಕ್ಯವು ಆಕಾಂಕ್ಷಾದಿ ರಹಿತವಾಗಿದ್ದು ಅಪ್ರಮಾಣವೇ ಆಗುವುದು.

**ಪದಸ್ಯ ಅನ್ವಯ ಪ್ರತಿಯೋಗಿತಾವಚ್ಛೇದಕರೂಪೇಣೈವ ಸ್ವಾರ್ಥೋಪ ಸ್ಥಾಪಕತಯಾ ನಿರ್ವಿಶೇಷೇ ವೃತ್ತಿಮಾತ್ರಾಯೋಗಾಚ್ಚ ।**

ಮುಖ್ಯವೃತ್ತಿ, ಗೌಣೀವೃತ್ತಿ, ಲಕ್ಷಣಾವೃತ್ತಿ ಎಂಬ ಈ ಎಲ್ಲ ವೃತ್ತಿಗಳಲ್ಲಿಯೂ ಪದವು ಅನ್ವಯ

ಪ್ರತಿಯೋಗಿತಾವಚ್ಛೇದಕ ರೂಪವಿಶಿಷ್ಟವಾಗಿಯೇ ತನ್ನ ಅರ್ಥದ ಉಪಸ್ಥಿತಿ ಉಂಟುಮಾಡಬೇಕು. ಗಂಗಾ ಶಬ್ದವು ಶಕ್ತಿಯಿಂದ ಪ್ರವಾಹವೆಂಬ ತನ್ನ ಅರ್ಥವನ್ನು ಶಕ್ಯತಾವಚ್ಛೇದಕ ಪ್ರವಾಹತ್ವ ವಿಶಿಷ್ಟ ರೂಪದಿಂದಲೇ ತಿಳಿಸುವುದು. ಗೌಣೀವೃತ್ತಿಯಿಂದ ತೀರವೆಂಬ ತನ್ನ ಅರ್ಥವನ್ನು ಪ್ರವಾಹ ಸದೃಶಗುಣವತ್ವವಿಶಿಷ್ಟರೂಪದಿಂದಲೇ, ತಿಳಿಸುವುದು. ಲಕ್ಷಣಾವೃತ್ತಿಯಿಂದ ತನ್ನ ಅರ್ಥವಾದ ತೀರವನ್ನು ಲಕ್ಷ್ಯತಾವಚ್ಛೇದಕ ತೀರತ್ವವಿಶಿಷ್ಟರೂಪದಿಂದಲೇ ಬೋಧಿಸುವುದು. ಈ ಪ್ರವಾಹತ್ವ ತೀರತ್ವಾದಿಗಳು ಮೀನ ಘೋಷಾದಿಇತರಾನ್ವಯ ಪ್ರತಿಯೋಗಿತಾವಚ್ಛೇದಕವಾಗಿರುತ್ತವೆ. ಇತರ ಅನ್ವಯಬೋಧದ ಉದ್ದೇಶದಿಂದಲೇ ಪದೋಚ್ಚಾರಣೆ. ಅನ್ವಯ ಹೊಂದದ ನಿರ್ವಿಶೇಷವನ್ನು ಪದವು ಯಾವ ವೃತ್ತಿಯಿಂದಲೂ ಬೋಧಿಸಲಾರದು. ಬೋಧಿಸಿದರೆ ಯಾವುದಾದರೊಂದು ಅನ್ವಯ ಪ್ರತಿಯೋಗಿತಾವಚ್ಛೇದಕ ಧರ್ಮವಿಶಿಷ್ಟವಾಗಿಯೇ ನಿರ್ವಿಶೇಷವನ್ನು ಬೋಧಿಸಬೇಕು. ಆಗ ವ್ಯಾಹತಿದೋಷ ಬರುವುದರಿಂದ ವಾಕ್ಯವು ಅಪ್ರಮಾಣವಾಗುವುದು.

**ವಿಶೇಷಾಂಶ**—ಯದ್ಯಪಿ ವೇದಾಂತವಾಕ್ಯವು ಅಖಂಡಾರ್ಥ ಪರ. ಅನ್ವಯಬೋಧೋದ್ದೇಶವೇ ಇಲ್ಲದ್ದು. ಯಾವುದೇ ವೃತ್ತಿಯನ್ನು ಅವಲಂಬಿಸದೇ ನಿರ್ವಿಶೇಷವನ್ನು ತಿಳಿಸುತ್ತದೆ ಎಂದು ಅದ್ವೈತಿ ಹೇಳುತ್ತಾನೆ. ಮಲಗಿದವನನ್ನು ಎಬ್ಬಿಸುವ 'ಏಳು' ಎನ್ನುವ ವಾಕ್ಯವು ಜಾಗರದ ವಾಕ್ಯದಂತೆ ಯಾವುದೇ ವೃತ್ತಿಯನ್ನು ಅವಲಂಬಿಸದೇ ಅವನಿಗೆ ಬೋಧಕವಾಗುತ್ತದೆ. ಅದನ್ನು ಕೇಳಿ ಅವನು ಎಚ್ಚೆತ್ತುಕೊಳ್ಳುತ್ತಾನೆ. ಹಾಗೇ ಇದು, ಎಂದು.

ಆದರೆ ದೃಷ್ಟಾಂತ ಸರಿಯಲ್ಲ. ಮಲಗಿದವನಿಗೆ ವಾಕ್ಯವು ಏನೂ ಬೋಧಿಸುವುದಿಲ್ಲ. ವಾಕ್ಯ ಅವನಿಗೆ ಕೇಳಿಸಿರುವುದೇ ಇಲ್ಲ. ಆದರೂ ಅವನಿಗೆ ಅದು ಪ್ರಮಾಣವಾಗುತ್ತದೆ ಎಂದರೆ ವ್ಯಾಹತವಾಗುವುದು. ಒಂದುವೇಳೆ ಕೇಳಿಸಿದರೂ ಪದಪದಾರ್ಥ ಸಂಬಂಧೋಪಸ್ಥಿತಿ ಇಲ್ಲದ್ದರಿಂದ ಶಬ್ದವಿಧಯಾ ಬೋಧಕವಾಗದು. ಶಬ್ದಪ್ರಮಾಣವಾಗದು. ಅನುಮಾನವಿಧಯಾ ಬೋಧಕ ವಾಗುವುದರಿಂದ ಅನುಮಾನ ಪ್ರಮಾಣವಾಗುವುದು. ಏಕೆಂದರೆ ಯಾವುದೇ ಶಬ್ದವನ್ನು ಗಟ್ಟಿಯಾಗಿ ಹೇಳಿದರೆ ಮಲಗಿದವನು ಎಚ್ಚೆತ್ತುಕೊಳ್ಳುತ್ತಾನೆ. ಬೆನ್ನುತಟ್ಟಿದರೂ ಎಚ್ಚೆತ್ತುಕೊಳ್ಳುತ್ತಾನೆ. ಅದರಿಂದ ಶಬ್ದವು ಅವನ ಕಿವಿಗೆ ಜೋರಾಗಿ ತಗುಲುವುದರಿಂದ ಅವನು ಎಚ್ಚೆತ್ತುಕೊಳ್ಳುತ್ತಾನೆ ಎನ್ನಬೇಕು. ಶಬ್ದವು ಇಲ್ಲಿ ಶಬ್ದವಿಧಯಾ ಪ್ರಮಾಣವಲ್ಲ.

ಇಲ್ಲಿ ಅದ್ವೈತಿ ಹೇಳುತ್ತಾನೆ—'ಏಳು!' ಎಂದು ಮಲಗಿದವನನ್ನು ಎಬ್ಬಿಸುವ ಶಬ್ದವು ಅವನು ತಾನು ಎಚ್ಚೆತ್ತುಕೊಳ್ಳಬೇಕೆನ್ನುವ ತಾತ್ಪರ್ಯ ತಿಳಿದಾಗ, ಪದಪದಾರ್ಥಸಂಬಂಧವನ್ನು ಬೋಧಿ ಸದೆಯೆ ಬೋಧಕವಾಗುವುದು. ಶಬ್ದವು ಶಕ್ತಿ ಅಥವಾ ಲಕ್ಷಣಾದಿಂದ ಶಬ್ದವಿಧಯಾ ಬೋಧಿಸುವ ಸ್ಥಳದಲ್ಲಿಯೂ ತಾತ್ಪರ್ಯಗ್ರಹವೇ ಬೋಧಕ್ಕೆ ಮುಖ್ಯಕಾರಣವಾಗಿರುತ್ತದೆ. ತಾತ್ಪರ್ಯಗ್ರಹವಿಲ್ಲದೆ ಬೋಧ ಉಂಟಾಗದು. ಏಕೆಂದರೆ ಶಕ್ತಿಯಾಗಲೀ, ಮುಖ್ಯಾರ್ಥ ಸಂಬಂಧವಾಗಲಿ ಶಬ್ದಕ್ಕೆ ಒಂದೇ ಕಡೆ ಇರುವುದಿಲ್ಲ. ಅನೇಕಕಡೆ ಇರುತ್ತದೆ. ತಾತ್ಪರ್ಯಗ್ರಹದಿಂದಲೇ ನಿರ್ದಿಷ್ಟವಾದ ಒಂದು

ಅರ್ಥವು ಶಬ್ದದಿಂದ ಗೃಹೀತವಾಗಬೇಕು. ನಿದ್ರಿಸುವವನನ್ನು ಏಳು ಎನ್ನುವ ಶಬ್ದವು ಏಳಬೇಕೆನ್ನುವ ತಾತ್ಪರ್ಯಗ್ರಹದಿಂದಲೇ ವೃತ್ತಿಜ್ಞಾನವಿಲ್ಲದೆಯೇ ಬೋಧಿಸುತ್ತದೆ. ವೇದಾಂತವಾಕ್ಯದ ತಾತ್ಪರ್ಯ ಜ್ಞಾನವು ಪ್ರತಿಬಂಧಕ ಪಾಪ ನಿವೃತ್ತಿಯಾದಾಗ ಸ್ವತಃ ಉಂಟಾಗುತ್ತದೆ. 'ಜ್ಞಾನಮುತ್ಪದ್ಯತೇ ಪುಂಸಾಂ ಕ್ಷಯಾತ್ ಪಾಪಸ್ಯ ಕರ್ಮಣಃ' ಎಂಬ ವಚನದಿಂದ ಇದು ಸಿದ್ಧವಾಗುತ್ತದೆ. ಪ್ರತಿಬಂಧಕ ಪಾಪಕ್ಷಯಉಳ್ಳ ಮಹಾಪುರುಷನಿಗೆ ಪದಪದಾರ್ಥ ಸಂಸರ್ಗಜ್ಞಾನವಿಲ್ಲದೆಯೇ ವೇದಾಂತ ವಾಕ್ಯದಿಂದ ನಿರ್ವಿಶೇಷಬ್ರಹ್ಮಸಾಕ್ಷಾತ್ಕಾರವಾಗುತ್ತದೆ' ಎಂದು ಅದ್ವೈತಿ ಹೇಳುತ್ತಾನೆ.

ಆದರೆ ಪ್ರತಿಬಂಧಕ ಪಾಪಕ್ಷಯಉಳ್ಳ ಮಹಾಪುರುಷನಿಗೆ ವೇದಾಂತವಾಕ್ಯ ಬೋಧಕವಾದರೂ ನಮ್ಮಂಥವರಿಗೆ ಬೋಧಕವಲ್ಲದ್ದರಿಂದ ನಮಗೆ ವೇದಾಂತ ಅಪ್ರಮಾಣವೆ.

ವಸ್ತುತಃ ಪ್ರತಿಬಂಧಕ ಪಾಪನಿವೃತ್ತಿ ಮಾತ್ರದಿಂದಲೇ ವಾಕ್ಯದಿಂದ ಪದಪದಾರ್ಥ ಸಂಸರ್ಗಜ್ಞಾನವಿಲ್ಲದೇ ಬೋಧ ಉಂಟಾಗುವುದು ಅಸಂಭವ. ಏನೂ ಕಾರಣವಿಲ್ಲದೆ ಕೇವಲ ಪ್ರತಿಬಂಧಕಾಭಾವ ಮಾತ್ರದಿಂದಲೇ ಕಾರ್ಯ ಉಂಟಾಗುವುದು ಎಲ್ಲಿಯೂ ಕಂಡಿಲ್ಲ. ಕಾರಣವಿದ್ದು ಪ್ರತಿಬಂಧಕದಿಂದ ಕಾರ್ಯವು ಪ್ರತಿಬದ್ಧವಾದ ಸ್ಥಳದಲ್ಲಿ ಮಾತ್ರ ಪ್ರತಿಬಂಧಕಾಭಾವವನ್ನು ಕೂಡ ಕಾರಣವೆನ್ನಬಹುದು. ಮತ್ತು ಕಾರಣವಾದ ಪದಪದಾರ್ಥಸಂಬಂಧ ಜ್ಞಾನದೊಂದಿಗೇ ತಾತ್ಪರ್ಯಗ್ರಹರೂಪ ಕಾರಣ ಇರಬೇಕಾಗುತ್ತದೆ. ಕಾರಣ ಯಾವುದೂ ಬೇಡವೆಂದರೆ ವಾಕ್ಯವಾದರೂ ಏಕೆ ಬೇಕು? ಅದೂ ಇಲ್ಲದೇ ಬ್ರಹ್ಮಸಾಕ್ಷಾತ್ಕಾರವಾಗಲಿ!

**ಅತ ಏವ ನೋಪನಿಷದ್ವಾಕ್ಯರೂಪಃ ಶಬ್ದಸ್ತತ್ರ ಮಾನಂ । ಅಸಂಸರ್ಗತ್ವಾತ್ ।**

ವಾಕ್ಯವು ಪದಪದಾರ್ಥಸಂಸರ್ಗಬೋಧಕವಾಗಿಯೇ ಪ್ರಮಾಣವೆನಿಸುವುದು. ನಿರ್ವಿಶೇಷ ಬ್ರಹ್ಮವು ಸಂಸರ್ಗಿಯಲ್ಲ, ಸಂಸರ್ಗವೂ ಅಲ್ಲವೆಂದಮೇಲೆ ಉಪನಿಷದ್ವಾಕ್ಯರೂಪಶಬ್ದವು ಶಬ್ದವಿಧಯಾ ಬ್ರಹ್ಮನಲ್ಲಿ ಪ್ರಮಾಣವಾಗಲಾರದು.

**ಧರ್ಮಿಜ್ಞಾನಾಧೀನ ವಿಚಾರಜನ್ಯಂ ನಿರ್ಧಾರಿತೈಕಕೋಟ್ಯವಲಂಬಿನಂ ಸಪ್ರಕಾರಕ ನಿಶ್ಚಯಂ ಪ್ರತ್ಯೇವ ತಸ್ಯ ಹೇತುತ್ವಾಚ್ಚ । ನಿಷ್ಪ್ರಕಾರಕಂ ಜ್ಞಾನಂ ನೇತ್ಯುಕ್ತತ್ವಾಚ್ಚ ।**

'ಬ್ರಹ್ಮ ಸಾಕ್ಷಾತ್ಕಾರವಾಗಲು ಉಪನಿಷದ್ ವಾಕ್ಯ ಅವಶ್ಯಬೇಕು. ಲೌಕಿಕ ವಾಕ್ಯವು ಸಂಸರ್ಗಬೋಧಕವೆಂದು ನಿಯಮವಿದ್ದರೂ ಉಪನಿಷದ್ ವಾಕ್ಯವು ಅಖಂಡ ನಿರ್ವಿಶೇಷವಿಷಯಕ ನಿರ್ವಿಕಲ್ಪಕಜ್ಞಾನವನ್ನೇ ಉಂಟುಮಾಡುತ್ತದೆ. ಉಪನಿಷದಾವೃತ್ತಿಯಿಂದ ಪ್ರತಿಬಂಧಕಪಾಪ ನಿವೃತ್ತಿಯಾದಾಗ ಸ್ವತ ಏವ ಬ್ರಹ್ಮಸಾಕ್ಷಾತ್ಕಾರವಾಗುವುದು' ಎಂದು ಅದ್ವೈತಿ ಹೇಳುತ್ತಾನೆ.

ಅದೂ ಸರಿಯಲ್ಲ. ಉಪನಿಷದಾವೃತ್ತಿ ಎಂದರೆ ಕೇವಲ ಅರ್ಥಜ್ಞಾನವಿಲ್ಲದ ಮಂತ್ರ ಜಪವಲ್ಲ. ಅಂಥ ಜಪದಿಂದ ಪಾಪ ನಿವೃತ್ತಿಯಾಗುವುದಿಲ್ಲ. ಉಪನಿಷದ್ ವಿಚಾರಾವೃತ್ತಿಯೇ ಪಾಪನಿವರ್ತಕ. ಉಪನಿಷತ್ತಿನಿಂದ ಧರ್ಮಿತಾವಚ್ಛೇದಕ ವಿಶಿಷ್ಟ ಧರ್ಮಿಜ್ಞಾನ ಬರಬೇಕು. ಆಗ

ಧರ್ಮಿಜ್ಞಾನ ಜನ್ಯವಿಚಾರದಿಂದ ಸಂಶಯ ಕೋಟಿಗಳಲ್ಲಿ ಒಂದು ಮಾತ್ರ ಸರಿ ಎಂದು ಸಪ್ರಕಾರಕ ನಿಶ್ಚಯವಾಗಬೇಕು, ಅದರಿಂದ ಸಂಶಯಾದಿ ನಿವೃತ್ತಿಯಾಗಬೇಕು. ಪಾಪ ಪರಿಹಾರವಾಗಬೇಕು. ಆಗ ಸಾಕ್ಷಾತ್ಕಾರ ಸಾಧ್ಯ. ಹೀಗೆ ಉಪನಿಷತ್ತು ಸಪ್ರಕಾರಕ ನಿಶ್ಚಯಕ್ಕೇ ಕಾರಣವಾಗುವುದು ಹೊರತು ಅಪ್ರಾಮಾಣಿಕವಾದ ನಿರ್ವಿಶೇಷ ವಿಷಯದಲ್ಲಿ, ಅಪ್ರಾಮಾಣಿಕವಾದ ನಿರ್ವಿಕಲ್ಪಕಜ್ಞಾನಕ್ಕೆ ಉಪನಿಷತ್ತು ಕಾರಣವಾಗದು.

'ಉಪನಿಷತ್ತು ನಿಷ್ಪ್ರಕಾರಕ ಜ್ಞಾನ ಉಂಟುಮಾಡಿದರೂ ಅದರಿಂದ ಸಂಶಯ ನಿವೃತ್ತಿ ಯಾಗಬಹುದು. ಏಕೆಂದರೆ ವಿರೋಧಿಕೋಟಿ ನಿವರ್ತಕವಾದ ಉಪಲಕ್ಷಣ ಧರ್ಮವನ್ನೇ ಧರ್ಮಿತಾವಚ್ಛೇದಕವಾಗಿ ಮಾಡಿಕೊಂಡು ಅದರಿಂದ ಉಪಸ್ಥಿತವಾದ ಕೇವಲ ಧರ್ಮಿಯ ಜ್ಞಾನವನ್ನು ಉಪನಿಷತ್ತು ಉಂಟುಮಾಡಿದಾಗ ಸಂಶಯ ನಿವೃತ್ತಿಯಾಗುವುದು. ಸಿದ್ಧಾಂತ ಕೋಟಿ ಪ್ರಕಾರಕ ನಿಶ್ಚಯವೇ ಸಂಶಯ ನಿವೃತ್ತಿಯನ್ನು ಉಂಟುಮಾಡಬೇಕಾಗಿಲ್ಲ' ಎಂದು ಅದ್ವೈತಿ ಹೇಳುತ್ತಾನೆ.

ಇದೂ ಸರಿಯಲ್ಲ. ನಿಷ್ಪ್ರಕಾರಕ ಜ್ಞಾನವೆಂಬುದೆ ಅಪ್ರಾಮಾಣಿಕ. ಮತ್ತು ಉಪಲಕ್ಷಿತ ಧರ್ಮಿಜ್ಞಾನವು ಕೂಡ ಉಪಲಕ್ಷಣ ಪ್ರಕಾರಕವಾಗಿಯೇ ಇರುತ್ತದೆ. ಸಂಶಯನಿವರ್ತಕವಾಗುತ್ತದೆ. ಇಲ್ಲದಿದ್ದರೆ, ಕೇವಲ ಧರ್ಮಿಜ್ಞಾನದಿಂದಲೇ ಸಂಶಯ ನಿವೃತ್ತಿಯಾದೀತು. ಆಗಲಿ ಎಂದರೆ ಸಂಶಯ ಹೇತುವಾದ ಧರ್ಮಿಜ್ಞಾನವೇ ಸಂಶಯ ನಿವರ್ತಕವಾದೀತು.

**ನಿರ್ವಿಶೇಷ ವಿಷಯಕ ಜ್ಞಾನಸ್ಯ ನಿಷ್ಪ್ರಕಾರಕತ್ವೇ ತೇನ ನಿರ್ವಿಶೇಷತ್ವಾಸಿದ್ಧ್ಯಾ ತತ್ಸಿದ್ಧ್ಯರ್ಥಮೇವ ವಿಶೇಷಾಭಾವರೂಪ ವಿಶೇಷ ವಿಷಯಕತ್ವಸ್ಯ ಆವಶ್ಯಕತ್ವಾಚ್ಚ ।**

'ಉಪನಿಷದ್‌ವಾಕ್ಯರೂಪ ಕರಣಸ್ವಭಾವದಿಂದ ನಿರ್ವಿಶೇಷಸಿದ್ಧಿಯಾಗದಿದ್ದರೂ ವಾಕ್ಯದಿಂದ ಬರುವ ನಿರ್ವಿಶೇಷ ವಿಷಯಕ ನಿಷ್ಪ್ರಕಾರಕ ಜ್ಞಾನರೂಪ ಫಲಸ್ವಭಾವದಿಂದ ನಿರ್ವಿಶೇಷಸಿದ್ಧಿ' ಎನ್ನಲಾಗದು. ನಿರ್ವಿಶೇಷತ್ವವು ಸಿದ್ಧವಾಗಬೇಕಾದರೆ 'ಬ್ರಹ್ಮವು ನಿರ್ವಿಶೇಷ' ಎಂಬ ವ್ಯವಹಾರ ಉಂಟಾಗಬೇಕಾದರೆ, 'ಬ್ರಹ್ಮವು ನಿರ್ವಿಶೇಷ' ಎಂದು ಜ್ಞಾನವು ನಿರ್ವಿಶೇಷತ್ವ ಪ್ರಕಾರಕವಾಗಿರ ಬೇಕು. ನಿರ್ವಿಶೇಷತ್ವ ಪ್ರಕಾರಕವಾದರೆ ಆ ಜ್ಞಾನದಿಂದ ನಿರ್ವಿಶೇಷತ್ವರೂಪ ವಿಶೇಷವೇ ಸಿದ್ಧವಾಗುತ್ತದೆ.

**ತಸ್ಮಾತ್ ಸಗುಣಮೇವ ಬ್ರಹ್ಮೇತಿ ॥**

ಹೀಗಾಗಿ ನಿರ್ವಿಶೇಷ ಬ್ರಹ್ಮನಲ್ಲಿ ಪ್ರಮಾಣವೇನೂ ಇಲ್ಲವಾಗಿ ಬ್ರಹ್ಮ ಸಗುಣವೇ ಎಂದಾಗುವುದು.

**ಇಲ್ಲಿಗೆ ನಿರ್ಗುಣದಲ್ಲಿ ಪ್ರಮಾಣ ನಿರಾಸ ಮುಗಿಯಿತು.**

## ಬ್ರಹ್ಮಣೋ ನಿರಾಕಾರತ್ವಭಂಗಃ

**एतेन ब्रह्मणो निराकारत्वमपि निरस्तम् । "आदित्यवर्णं तमसः परस्तात् । यदा पश्यः पश्यते रुग्मवर्णम् । ऋतं सत्यं परं ब्रह्म पुरुषं कृष्णपिंगलम् । विश्वतश्चक्षुः । सहस्रशीर्षा पुरुषः । सहस्रशीर्षं देवं विश्वाक्षं विश्वशंभुवम् । यदेकमव्यक्तमनंतरूपम्" इत्यादिश्रुतिभिः, "पश्य मे पार्थ रूपाणि शतशोऽथ सहस्रशः । नानाविधानि दिव्यानि नानावर्णाकृतीनि च । सर्वतः पाणिपादं तत्सर्वतोऽक्षिशिरोमुखम्" इत्यादिस्मृतिभिः तदनुगृहीतैः ब्रह्म सविग्रहं स्रष्टृत्वात् पालयितृत्वा-द्वेदोपदेष्टृत्वादित्याद्यनुमानैश्चाकारसिद्धेः । विग्रहं विनापि नित्यज्ञाने-नैव कर्तृत्वे ज्ञानेच्छे अपि विना नित्यप्रयत्नेनैव तत्स्यात् ।**

ननु सृष्टौ विग्रहः साक्षान्न कारणम्, किंतु ज्ञानादिद्वारैव । तथाच नित्य-सिद्धोपादानगोचरापरोक्षज्ञानत्वेनैवेश्वरस्य स्रष्टृत्वोपपत्तिरित्यप्रयोजकतामाशंक्याह— **विग्रहं विनापीति** ।। तथाच विग्रहस्य साक्षादेव हेतुत्वमिति स्रष्टुरीश्वरस्य विग्रहः आवश्यक इति नाप्रयोजकतेति भावः ।।



**ಏತೇನ ಬ್ರಹ್ಮಣೋ ನಿರಾಕಾರತ್ವಮಪಿ ನಿರಸ್ತಂ**

ಮುಂದೆ ಹೇಳುವ ಯುಕ್ತಿಗಳಿಂದ ಬ್ರಹ್ಮ ನಿರಾಕಾರ ಎನ್ನುವ ವಾದವೂ ನಿರಾಸವಾಗುವುದು.

**ಆದಿತ್ಯವರ್ಣಂ ತಮಸಃ ಪರಸ್ತಾತ್**

ತೈತ್ತಿರೀಯ ಶ್ರುತಿ— ವೇದಾಹಮೇತಂ ಪುರುಷಂ ಮಹಾಂತಂ
ಆದಿತ್ಯವರ್ಣಂ ತಮಸಃ ಪರಸ್ತಾತ್ ॥

ಪ್ರಕೃತಿಯ ಆಚೆ ಇರುವ ಸೂರ್ಯನಂತೆ ಹೊಳೆಯುವ ಪರಮ ಪುರುಷ ನಾರಾಯಣನನ್ನು ಕಂಡುಕೊಂಡೆನೆಂದು ಮಂತ್ರದ್ರಷ್ಟೃವು ಸ್ವಾನುಭವವನ್ನು ಹೇಳುತ್ತಿದ್ದಾನೆ.

**ಯದಾ ಪಶ್ಯಃ ಪಶ್ಯತೇ ರುಗ್ಮವರ್ಣಂ**

ಯದಾ ಪಶ್ಯಃ ಪಶ್ಯತೇ ರುಗ್ಮವರ್ಣಂ
ಕರ್ತಾರಮೀಶಂ ಪುರುಷಂ ಬ್ರಹ್ಮಯೋನಿಂ ।
ತದಾ ವಿದ್ವಾನ್ ಪುಣ್ಯಪಾಪೇ ವಿಧೂಯ
ನಿರಂಜನಃ ಪರಮಂ ಸಾಮ್ಯಮುಪೈತಿ ॥ (ಆಥರ್ವಣ ಉ.3.1.3)

ಬಂಗಾರದ ಬಣ್ಣದವನು ಜಗತ್ಕರ್ತ, ಗುಣಪೂರ್ಣ, ಬ್ರಹ್ಮನಿಗೆ ಜನಕ ಇಂಥ ಪರಮಪುರುಷನನ್ನು ಜೀವನು ಕಂಡಾಗ ಅಪ್ರಾರಬ್ಧ ಪುಣ್ಯಪಾಪಗಳನ್ನು ಕಳೆದುಕೊಂಡು ಪಾಪಲೇಪರಹಿತನಾಗಿ ಪರಮಾತ್ಮನಂತೆ ಸ್ವರೂಪಸುಖಾಭಿವ್ಯಕ್ತಿ ಪಡೆಯುತ್ತಾನೆ.

**ಋತಂ ಸತ್ಯಂ ಪರಂ ಬ್ರಹ್ಮ ಪುರುಷಂ ಕೃಷ್ಣ ಪಿಂಗಲಂ**

ಋತಂ ಸತ್ಯಂ ಪರಂ ಬ್ರಹ್ಮ ಪುರುಷಂ ಕೃಷ್ಣಪಿಂಗಲಂ ।
ಊರ್ಧ್ವರೇತಂ ವಿರೂಪಾಕ್ಷಂ ವಿಶ್ವರೂಪಾಯ ವೈ ನಮೋ ನಮಃ ॥
-ಮಹಾನಾರಾಯಣೋಪನಿಷತ್

'ಕಪ್ಪುವರ್ಣಮಿಶ್ರಿತ ಹಳದಿಗೆಂಪು ಬಣ್ಣದಿಂದ ಹೊಳೆಯುವ ನಿರ್ದೋಷ ಜ್ಞಾನರೂಪಿ ಪರಬ್ರಹ್ಮನಾದ, ಕಪಿಲ ವ್ಯಾಸಾದಿರೂಪಗಳಲ್ಲಿ ತಪಸ್ಸುಮಾಡುತ್ತ ಬ್ರಹ್ಮಚರ್ಯ ನಿಯಮದಲ್ಲಿರುವ, ನಾನಾರೂಪಿ ವಿರೂಪಾಕ್ಷ ನಾರಾಯಣನನ್ನು ನಮಿಸುತ್ತೇನೆ' ಎಂದು ಉಪನಿಷತ್ತೂ,

ಋತಂ ಸತ್ಯಂ ಪರಂ ಬ್ರಹ್ಮ ಪುರುಷಂ ಕೃಷ್ಣಪಿಂಗಲಂ ।
ಊರ್ಧ್ವರೇತಂ ವಿರೂಪಾಕ್ಷಂ ಶಂಕರಂ ನೀಲಲೋಹಿತಂ ॥

'ಋತ ಸತ್ಯ ಪರಬ್ರಹ್ಮನಾದ ಕೃಷ್ಣಪಿಂಗಲರೂಪನಾದ ಪರಮಪುರುಷನಾರಾಯಣನನ್ನು ಕುರಿತು ನೀಲಲೋಹಿತವರ್ಣನಾದ ವಿರೂಪಾಕ್ಷ ಶಂಕರನು ಬ್ರಹ್ಮಚರ್ಯ ನಿಯಮದಿಂದ ಇದ್ದು ಆರಾಧಿಸುತ್ತಾನೆ ಎಂದು ತಾಪನೀಯ ಶ್ರುತಿಯೂ ಪರಬ್ರಹ್ಮನನ್ನು ಸಾಕಾರನೆಂದೇ ಹೇಳುತ್ತಿದೆ.

**ವಿಶ್ವತಶ್ಚಕ್ಷುಃ**

ವಿಶ್ವತಶ್ಚಕ್ಷು ರುತ ವಿಶ್ವತೋಮುಖೋ
ವಿಶ್ವತೋ ಬಾಹುರುತ ವಿಶ್ವತಸ್ಪಾತ್ ॥
ಸಂ ಬಾಹುಭ್ಯಾಂ ನಮತಿ ಸಂ ಪತತ್ರೈಃ
ದ್ಯಾವಾ ಪೃಥಿವೀ ಜನಯನ್ ದೇವ ಏಕಃ ॥ (ಮಹಾನಾರಾಯಣೋಪನಿಷತ್)

ಭೂಮ್ಯಂತರಿಕ್ಷಗಳನ್ನು ಸೃಜಿಸುವ ಸರ್ವೋತ್ತಮನಾದ ಪರಮಾತ್ಮನು ಸಹಸ್ರಾಕ್ಷ, ಸಹಸ್ರಮುಖ, ಸಹಸ್ರಬಾಹು, ಸಹಸ್ರಪಾದನಾಗಿದ್ದು ಬಾಹುಗಳಿಂದಲೂ ಗರುಡನ ರೆಕ್ಕೆಗಳಿಂದಲೂ ವಿಶ್ವವನ್ನು ವಶೀಕರಿಸಿಕೊಂಡಿದ್ದಾನೆ.

**ಸಹಸ್ರಶೀರ್ಷಾ ಪುರುಷಃ**

ಸಹಸ್ರಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್
ಸ ಭೂಮಿಂ ವಿಶ್ವತೋ ವೃತ್ವಾ ಅತ್ಯತಿಷ್ಠದ್ದಶಾಂಗುಲಂ ॥ -ಪುರುಷಸೂಕ್ತ

ಪರಮಪುರುಷ ನಾರಾಯಣನು ಬ್ರಹ್ಮಾಂಡವನ್ನು ವ್ಯಾಪಿಸಿ 'ಹತ್ತು ಅಂಗುಲ' ಅಂದರೆ ಅನಂತಗುಣಗಳಿಂದ ಎಲ್ಲವನ್ನೂ ಮೀರಿದ್ದಾನೆ.

**ಸಹಸ್ರಶೀರ್ಷಂ ದೇವಂ ವಿಶ್ವಾಕ್ಷಂ ವಿಶ್ವಶಂಭುವಂ**

ಸಹಸ್ರಶೀರ್ಷಂ ದೇವಂ ವಿಶ್ವಾಕ್ಷಂ ವಿಶ್ವಶಂಭುವಂ
ವಿಶ್ವಂ ನಾರಾಯಣಂ ದೇವಂ ಅಕ್ಷರಂ ಪರಮಂ ಪದಂ ॥-ಮಹಾನಾರಾಯಣೋಪನಿಷತ್

ಸಹಸ್ರಶೀರ್ಷ, ಸಹಸ್ರಾಕ್ಷ, ಸರ್ವಲೋಕ ಸುಖಕರ ಪೂರ್ಣ ನಾಶರಹಿತ ಉತ್ತಮ ಪ್ರಾಪ್ಯನಾದ ದೇವನನ್ನು ಧ್ಯಾನಿಸಬೇಕು.

**ಯದೇಕಮವ್ಯಕ್ತಮನಂತರೂಪಂ ಇತ್ಯಾದಿಶ್ರುತಿಭಿಃ ಆಕಾರಸಿದ್ಧೇಃ**

ಯದೇಕಮವ್ಯಕ್ತಮನಂತ ರೂಪಂ
ವಿಶ್ವಂ ಪುರಾಣಂ ತಮಸಃ ಪರಸ್ತಾತ್ ।
ತದೇವರ್ತಂ ತದು ಸತ್ಯಮಾಹುಃ
ತದೇವ ಬ್ರಹ್ಮ ಪರಮಂ ಕವೀನಾಂ॥ -ಮಹಾನಾರಾಯಣೋಪನಿಷತ್

ಪರತತ್ವವು ಸ್ವಗತ ಭೇದಶೂನ್ಯ, ಅವ್ಯಕ್ತ, ಅನಂತರೂಪ, ಪೂರ್ಣ ಪುರಾತನ ಪ್ರಕೃತಿದೂರ ಯಥಾರ್ಥಜ್ಞಾನಸ್ವರೂಪ, ಸತ್ಯ, ಜ್ಞಾನಿಗಳಿಗೆ ಮುಖ್ಯವಾಗಿ ಅದೇ ಬ್ರಹ್ಮ ಎನಿಸುತ್ತದೆ' ಇತ್ಯಾದಿ ಶ್ರುತಿಗಳಿಂದ ಪರಬ್ರಹ್ಮ ಸಾಕಾರನೆಂದು ಸಿದ್ಧವಾಗುತ್ತದೆ.

**ಪಶ್ಯಮೇ ಪಾರ್ಥ ರೂಪಾಣಿ ಶತಶೋಽಥ ಸಹಸ್ರಶಃ**
**ನಾನಾವಿಧಾನಿ ದಿವ್ಯಾನಿ ನಾನಾವರ್ಣಾಕೃತೀನಿ ಚ ॥** (ಗೀತಾ 11.5)
**ಸರ್ವತಃ ಪಾಣಿಪಾದಂ ತತ್ ಸರ್ವತೋಽಕ್ಷಿ ಶಿರೋಮುಖಂ ॥** (ಗೀತಾ 13.14)
**ಇತ್ಯಾದಿ ಸ್ಮೃತಿಭಿಃ ಆಕಾರಸಿದ್ಧೇಃ ।**

'ಅರ್ಜುನ, ಅಪ್ರಾಕೃತ ನಾನಾವಿಧ ನಾನಾ ವರ್ಣಾಕೃತಿ ಉಳ್ಳವು ನೂರಾರು ಸಾವಿರಾರು ರೂಪಗಳು ನನ್ನವು, ಅವುಗಳನ್ನು ನೋಡು' 'ಪರಬ್ರಹ್ಮನು ಎಲ್ಲ ಅವಯವಗಳಲ್ಲಿಯೂ ಕೈಕಾಲುಗಳ ಕಾರ್ಯಶಕ್ತಿ ಉಳ್ಳವನು, ಎಲ್ಲ ಅವಯವಗಳಲ್ಲಿಯೂ ಕಣ್ಣು ತಲೆ ಮುಖಗಳ ಕಾರ್ಯಶಕ್ತಿ ಉಳ್ಳವನು' ಇತ್ಯಾದಿ ಸ್ಮೃತಿಗಳಿಂದಲೂ ಪರಬ್ರಹ್ಮ ಸಾಕಾರನೆಂದು ಸಿದ್ಧವಾಗುತ್ತದೆ.

**ತದನುಗೃಹೀತೈಃ 'ಬ್ರಹ್ಮ ಸವಿಗ್ರಹಂ ಸ್ರಷ್ಟೃತ್ವಾತ್ ಪಾಲಯಿತೃತ್ವಾತ್ ವೇದೋಪದೇಷ್ಟೃತ್ವಾತ್' ಇತ್ಯಾದ್ಯನುಮಾನೈಶ್ಚ ಆಕಾರಸಿದ್ಧೇಃ ।**

ಈ ಶ್ರುತಿ ಸ್ಮೃತಿಗಳ ಬೆಂಬಲ ಉಳ್ಳ 'ಪರಬ್ರಹ್ಮನಿಗೆ ಆಕಾರವಿದೆ. ಸೃಷ್ಟಿಕರ್ತನಾದ್ದರಿಂದ ಪಾಲಕನಾದ್ದರಿಂದ ವೇದೋಪದೇಶಕನಾದ್ದರಿಂದ' ಇತ್ಯಾದಿ ಅನುಮಾನಗಳಿಂದಲೂ ಪರಬ್ರಹ್ಮ ಸಾಕಾರನೆಂದು ಸಿದ್ಧವಾಗುತ್ತದೆ.

**ವಿಗ್ರಹಂ ವಿನಾಪಿ ನಿತ್ಯಜ್ಞಾನೇನೈವ ಕರ್ತೃತ್ವೇ, ಜ್ಞಾನೇಚ್ಛೇ ಅಪಿ ವಿನಾ ನಿತ್ಯಪ್ರಯತ್ನೇನೈವ ತತ್ ಸ್ಯಾತ್॥**

'ಶರೀರವಿಲ್ಲದೆಯೆ ನಿತ್ಯಜ್ಞಾನದ ಬಲದಿಂದಲೇ ಸೃಷ್ಟ್ಯಾದಿ ಕರ್ತೃತ್ವವು ಕೂಡುವುದರಿಂದ ಪರಬ್ರಹ್ಮನಿಗೆ ಶರೀರ ಉಂಟೆಂದು ಈ ಅನುಮಾನಗಳಿಂದ ಸಿದ್ಧವಾಗುವುದಿಲ್ಲ. ಸೃಷ್ಟ್ಯಾದಿಗಳಿಗೆ ಶರೀರ ನೇರವಾಗಿ ಕಾರಣವಲ್ಲ. ಶರೀರದಿಂದ ಜ್ಞಾನಾದಿಗಳು ಉಂಟಾಗಬೇಕು, ಜ್ಞಾನಾದಿಗಳಿಂದ ಸೃಷ್ಟ್ಯಾದಿ ವ್ಯಾಪಾರ. ನಿತ್ಯಜ್ಞಾನಾದಿಗಳಿರುವುದರಿಂದ ಜ್ಞಾನಾದಿಗಳ ಉತ್ಪತ್ತಿಗಾಗಿ ಶರೀರವನ್ನು ಪರಬ್ರಹ್ಮನು ಆಶ್ರಯಿಸಬೇಕಿಲ್ಲ. ಹೀಗಾಗಿ ಅವನಿಗೆ ಶರೀರವನ್ನು ಒಪ್ಪಬೇಕಿಲ್ಲ' ಎಂದರೆ, ಜ್ಞಾನಇಚ್ಛೆಗಳನ್ನೂ ಒಪ್ಪಬೇಕಿಲ್ಲ ಎಂದಾದೀತು. ಜ್ಞಾನ ಇಚ್ಛೆಗಳೂ ಕೂಡ ಸೃಷ್ಟ್ಯಾದಿಗಳಿಗೆ ನೇರ ಕಾರಣವಲ್ಲ. ಅವು ಪ್ರಯತ್ನ ಉಂಟುಮಾಡಬೇಕು. ಪ್ರಯತ್ನದಿಂದ ಸೃಷ್ಟ್ಯಾದಿ ವ್ಯಾಪಾರ. ಆದರಿಂದ ನಿತ್ಯಪ್ರಯತ್ನವೇ ಸಾಕು, ಜ್ಞಾನೇಚ್ಛೆಗಳು ಬೇಡ ಎನ್ನಬೇಕಾದೀತು.



**किंच कुलालादौ न शरीरं ज्ञानाद्युपक्षीणं, किंतु ज्ञानादिकमेव शरीरचेष्टोपक्षीणम्। अत एव ''विकरणत्वान्नेति चेत्तदुक्तम्'' इतिसूत्रे ईश्वरस्य कर्तृत्वार्थं ''बुद्धिमान् मनोवान् अंगप्रत्यंगवान्'' इतिश्रुत्या सकरणत्वमुक्तम् । किंच ''तदेवानु प्राविशत्'' ''ब्रह्मविदाप्नोति परम्'' इत्यादिश्रुतिसिद्धं सर्वगतस्य ब्रह्मणः प्रवेष्टृत्वं गम्यत्वमित्यादि न विग्रहविशेषं विना युक्तम् । नच श्रुतिरवांतरब्रह्मपरा वा रूपोपासनापरा वा आरोपितरूपपरा वेति युक्तम् । ''आदित्यवर्णम्'' इत्यत्र प्रकृत्याख्यतमःपरत्वोक्तेः । ''य एषोऽन्तरादित्ये हिरण्मयः पुरुषो दृश्यते'' इत्यत्र च वर्तमानत्वेनापरोक्षज्ञानविषयत्वोक्तेश्च । नहि ''योषित्यग्नित्वं दृश्यत'' इत्युच्यते ।**

**अत एवेति** ।। विग्रहस्य साक्षात्कारणत्वादेवेत्यर्थः । ब्रह्मणो विग्रहवत्त्वे

श्रुत्यर्थापत्तिमपि प्रमाणयति— **किंच तदेवेति ।।** उपासनापरत्वे बाधकमाह— **य एषोऽन्तरिति ।।**



**ಕಿಂಚ ಕುಲಾಲಾದೌ ನ ಶರೀರಂ ಜ್ಞಾನಾದ್ಯುಪಕ್ಷೀಣಂ। ಕಿಂತು ಜ್ಞಾನಾದಿಕಮೇವ ಶರೀರಚೇಷ್ಟೋಪಕ್ಷೀಣಂ।**

'ಕುಂಬಾರನಂಥ ಕರ್ತೃಗಳಿಗೆ ಜ್ಞಾನೇಚ್ಛೆಗಳನ್ನು ಉಂಟುಮಾಡಿಕೊಳ್ಳುವುದರ ಮಟ್ಟಿಗೇ ಶರೀರದ ಆವಶ್ಯಕತೆಯೇ ಹೊರತು ಘಟೋತ್ಪತ್ತಿ ಕಾರ್ಯದಲ್ಲಿ ಶರೀರದ ಪಾತ್ರವೇನಿಲ್ಲ. ಘಟೋತ್ಪಾದನ ಮಾಡುವಲ್ಲಿ ಜ್ಞಾನೇಚ್ಛೆಗಳೇ ನೇರವಾಗಿ ಉಪಯುಕ್ತವಾಗುತ್ತದೆ' ಎಂದು ತಿಳಿಯುವುದು ಸರಿಯಲ್ಲ. ಜ್ಞಾನೇಚ್ಛೆಗಳೂ ಕೂಡ ನೇರವಾಗಿ ಘಟೋತ್ಪಾದನೆಯಲ್ಲಿ ಉಪಯುಕ್ತವಾಗುವುದಿಲ್ಲ. ಅವುಗಳಿಂದ ಮುಂದೆ ಕುಂಬಾರನ ಶರೀರದಲ್ಲಿ ಘಟೋತ್ಪಾದನೆಯ ಚಟುವಟಿಕೆಗಳು ಕ್ರಿಯೆಗಳು ಉಂಟಾಗಬೇಕು. ಹೀಗಾಗಿ ಪರಬ್ರಹ್ಮನಿಗೆ ಸೃಷ್ಟ್ಯಾದಿಕರ್ತೃತ್ವ ವಿಷಯದಲ್ಲಿ ಮುಖ್ಯವಾಗಿ ಶರೀರವೇ ಉಪಯುಕ್ತವಾಗುವುದರಿಂದ ಸೃಷ್ಟ್ಯಾದಿಕರ್ತೃತ್ವಾನುಮಾನಗಳಿಂದ ಆವನಿಗೆ ಶರೀರವು ಸಿದ್ಧವಾಗುತ್ತದೆ.

**ಅತಏವ 'ವಿಕರಣತ್ವಾನ್ನೇತಿ ಚೇತ್ ತದುಕ್ತಂ' ಇತಿ ಸೂತ್ರೇ ಈಶ್ವರಸ್ಯ ಕರ್ತೃತ್ವಾರ್ಥಂ 'ಬುದ್ಧಿಮಾನ್ ಮನೋವಾನ್ ಅಂಗಪ್ರತ್ಯಂಗವಾನ್' ಇತಿ ಶ್ರುತ್ಯಾ ಸಕರಣತ್ವಂ ಉಕ್ತಂ।**

ಸೃಷ್ಟ್ಯಾದಿ ಕರ್ತೃತ್ವಗಳಿಗೆ ಶರೀರ ಆವಶ್ಯಕವಾದ್ದರಿಂದಲೇ ಬ್ರಹ್ಮಸೂತ್ರದ ಶಬ್ದಮೂಲತ್ವಾಧಿಕರಣದಲ್ಲಿ 'ವಿಕರಣತ್ವಾನ್ನೇತಿ ಚೇತ್ ತದುಕ್ತಂ' (2.1.32) 'ಪರಮಾತ್ಮನು ಶರೀರೇಂದ್ರಿಯಾದಿ ರಹಿತನಾದ್ದರಿಂದ ಕರ್ತನಲ್ಲ' ಎಂದರೆ, ಹಾಗಲ್ಲ, ಆವನಿಗೆ ಶರೀರಾದಿಗಳುಂಟು. 'ಅಪಾಣಿಪಾದೋ ಜವನೋ ಗ್ರಹೀತಾ' 'ಕೈಕಾಲುಗಳಿಲ್ಲದೆಯೂ ವೇಗದಿಂದ ಬಂದು ಹಿಡಿಯುವವನು' (ಶ್ವೇತಾಶ್ವತರ 3.19) ಎಂದು ಮುಂತಾದ ವಚನಗಳು ಪ್ರಾಕೃತ ಶರೀರಾದ್ಯಭಾವ ಪರವೆಂದು ಸಮಾಧಾನ ಹೇಳಿ, ಮುಂದೆ, ಕರ್ತೃತ್ವೋಪಪಾದನೆಗಾಗಿ ಪತ್ಯುರಧಿಕರಣದಲ್ಲಿ, 'ಅಂತವತ್ವಂ ಅಸರ್ವಜ್ಞತಾ ವಾ' (2.2.41) ಸೂತ್ರಭಾಷ್ಯದಲ್ಲಿ ಭಗವಂತನಿಗೆ ಅಪ್ರಾಕೃತ ಜ್ಞಾನಾನಂದಾತ್ಮಕ ಶರೀರಾದಿಗಳಿವೆ. ಆದರಿಂದ ಆವನಿಗೆ ಕರ್ತೃತ್ವ ಅನುಪಪನ್ನವಲ್ಲವೆನ್ನುತ್ತ ಆದಕ್ಕೆ 'ಪರಮ ಪುರುಷನು ಬುದ್ಧಿಮನ ಇಂದ್ರಿಯಗಳುಳ್ಳವನು ಹಸ್ತ ಪಾದಾದಿ ಅಂಗಾಂಗಗಳುಳ್ಳವನು' ಎಂದು ಶ್ರುತಿಯನ್ನು ತೋರಿಸಿದ್ದಾರೆ.

**ಕಿಂಚ 'ತದೇವಾನುಪ್ರಾವಿಶತ್' 'ಬ್ರಹ್ಮವಿದಾಪ್ನೋತಿ ಪರಂ' ಇತ್ಯಾದಿ ಶ್ರುತಿಸಿದ್ಧಂ**

**ಸರ್ವಗತಸ್ಯ ಬ್ರಹ್ಮಣಃ ಪ್ರವೇಷ್ಟೃತ್ವಂ ಗಮ್ಯತ್ವಂ ಇತ್ಯಾದಿ ನ ವಿಗ್ರಹವಿಶೇಷಂ ವಿನಾ ಯುಕ್ತಂ ।**

'ತತ್ ಸೃಷ್ಟ್ವಾ ತದೇವಾನುಪ್ರಾವಿಶತ್' ಪ್ರಪಂಚ ಸೃಷ್ಟಿಮಾಡಿ ಅದರ ರಕ್ಷಣೆಗಾಗಿ ಅದರೊಳಗೆ ಪ್ರವೇಶಿಸಿದನು' ಎಂದು ಭಗವಂತನಿಗೆ ಪ್ರಪಂಚದಲ್ಲಿ ಪ್ರವೇಶಕರ್ತೃತ್ವವನ್ನು ಶ್ರುತಿಯು ಹೇಳಿದೆ. 'ಬ್ರಹ್ಮವಿದಾಪ್ನೋತಿ ಪರಂ' ಬ್ರಹ್ಮಜ್ಞಾನಿ ಮುಕ್ತಿಯಲ್ಲಿ ಪರಬ್ರಹ್ಮನನ್ನು ಸೇರುವನು ಎಂದು ಮುಕ್ತಗಮ್ಯತ್ವವನ್ನು ಶ್ರುತಿಯು ಹೇಳಿದೆ. ಸರ್ವವ್ಯಾಪ್ತನಾದ ಪರಬ್ರಹ್ಮನಿಗೆ ಈ ಪ್ರವೇಷ್ಟೃತ್ವ ಮುಕ್ತಗಮ್ಯತ್ವಾದಿಗಳು ವಿಲಕ್ಷಣಶರೀರಗಳಿಲ್ಲದೆ ಕೂಡುವುದಿಲ್ಲ.

**ನಚ ಶ್ರುತಿರವಾಂತರ ಬ್ರಹ್ಮಪರಾ ವಾ, ರೂಪೋಪಾಸನಾಪರಾ ವಾ, ಆರೋಪಿತ ರೂಪಪರಾ ವಾ ಇತಿ ಯುಕ್ತಂ । 'ಆದಿತ್ಯವರ್ಣಂ' ಇತ್ಯತ್ರ ಪ್ರಕೃತ್ಯಾಖ್ಯ ತಮಃಪರತ್ವೋಕ್ತೇಃ । 'ಯ ಏಷೋಽಂತರಾದಿತ್ಯೇ ಪುರುಷೋ ದೃಶ್ಯತೇ' ಇತ್ಯತ್ರ ಚ ವರ್ತಮಾನತ್ವೇನ ಅಪರೋಕ್ಷಜ್ಞಾನ ವಿಷಯತ್ವೋಕ್ತೇಶ್ಚ । ನಹಿ ಯೋಷಿತಿ ಅಗ್ನಿತ್ವಂ ದೃಶ್ಯತೇ ಇತ್ಯುಚ್ಯತೇ ।**

'ಈ ಶ್ರುತಿಗಳು ಪರಬ್ರಹ್ಮವಿಷಯಕವಲ್ಲ, ಅಪರಬ್ರಹ್ಮವಿಷಯಕ, ಸಗುಣಬ್ರಹ್ಮಪರ ವೆನ್ನಬಹುದು. ಅಥವಾ ವಿಗ್ರಹೋಪಾಸನಾಪರವೆನ್ನಬಹುದು, ಅಥವಾ ಉಪಾಸನೆಗಾಗಿ ಆರೋಪಿತವಾಗಿರುವ ರೂಪಪರವೆನ್ನಬಹುದು' ಎನ್ನುವುದು ಯುಕ್ತವಲ್ಲ.

'ಆದಿತ್ಯವರ್ಣಂ ತಮಸಃ ಪರಸ್ತಾತ್' ಎಂದು ಶ್ರುತಿಯಲ್ಲಿ 'ಪ್ರಕೃತಿರೂಪ ತಮಸ್ಸಿಗಿಂತ ಆಚೆ ಇರುವವನು' ಎಂದಿದೆ. ಆದರಿಂದ ಇದು ಪ್ರಾಕೃತಶರೀರಉಳ್ಳ ಸಗುಣಬ್ರಹ್ಮನಲ್ಲ, ಉಪಾಸನೆಗಾಗಿ ಹೇಳಿದ ಶರೀರವೂ ಅಲ್ಲ.

ಆರೋಪಿತ ಶರೀರವೂ ಅಲ್ಲ. ಛಾಂದೋಗ್ಯದಲ್ಲಿ 'ಸೂರ್ಯಮಂಡಲದೊಳಗೆ ಬಂಗಾರದ ಬಣ್ಣದ ಪುರುಷ ಕಾಣಿಸಿಕೊಳ್ಳುತ್ತಾನೆ' ಎಂದು ವರ್ತಮಾನನಾಗಿ ಅಪರೋಕ್ಷಗೋಚರನಾಗುತ್ತಾನೆ ಎಂದಿದೆ. ಆದರಿಂದ ಇದು ಉಪಾಸನಾಪರವೂ ಅಲ್ಲ, ಉಪಾಸನೆಗಾಗಿ ಆರೋಪಿಸಿದ್ದೂ ಅಲ್ಲ. ಉಪಾಸನೆಯಲ್ಲಿ ಉಪಾಸ್ಯ ಆಕಾರವು 'ದೃಶ್ಯತೇ' ಸಾಕ್ಷಾತ್ಕಾರಗೋಚರವಾಗುತ್ತದೆ ಎನ್ನುವುದು ಕಂಡಿಲ್ಲ. 'ಯೋಷಿತಮಗ್ನಿಂ ಧ್ಯಾಯೀತ' ಎಂದು ಉಪಾಸನೆಯನ್ನು ಹೇಳುವ ಶ್ರುತಿಯು 'ಯೋಷಿತ್ತಿನಲ್ಲಿ ಅಗ್ನಿತ್ವವು ಸಾಕ್ಷಾತ್ಕಾರಗೋಚರವಾಗುತ್ತದೆ' ಎನ್ನುವುದಿಲ್ಲ.



**''सहस्रशीर्षा'' इत्यत्र ''तमेवं विद्वानमृत इह भवति'' इति, ''यदा पश्य'' इत्यत्र च ''तदा विद्वान् पुण्यपापे विधूय'' इति, ''न**

संदृशे तिष्ठति रूपमस्य'' इत्यत्र च ''य एनं विदुरमृतास्ते भवंति'' इति तज्ज्ञानस्य मोचकत्वोक्तेश्च । ''देवा अप्यस्य रूपस्य नित्यं दर्शनकांक्षिण'' इत्युक्तरूपस्य ''ज्ञातुं द्रष्टुं च तत्वेन प्रवेष्टुं च परंतप'' इतिस्मृतौ मुक्तगम्यत्वाद्युक्तेश्च ।

अत एवेदं रूपं न भौतिकं प्राकृतं अनित्यं वा । ''नाभ्या आसीदंतरिक्षम्'' इत्यादौ भूतकारणत्वस्य, ''तमसः परस्तात्'' इतिश्रुतौ तमसः परत्वस्य, ''सर्वतःपाणिपादं तत्'' इतिस्मृतौ च ''न सत्तन्नासदुच्यत'' इति पूर्वत्राभौतिकत्वस्य, ''तमसःपरमुच्यत'' इति परत्राप्राकृतत्वस्य चोक्तेः । ''एको नारायण आसीन्न ब्रह्मा न च शंकर'' इत्यादिषु महाप्रलये स्थित्युक्तेश्च । प्रलये विग्रहरहितचेतनमात्रसत्त्वस्य सर्वसाधारण्यात् । विग्रहानित्यत्वे ''नित्यो नित्यानां चेतनश्चेतनानाम्'' इति विशेषोक्त्ययोगात् । ''पुरा कल्पापाये स्वकृतमुदरीकृत्य विकृतम्'' इत्यादौ साक्षान्महाप्रलये स्थित्युक्तेश्च । ''पश्यंत्यदो रूपमदभ्रचक्षुषः सहस्रपादोरुभुजाननाद्भुतम्'' इत्यारभ्य ''एतन्नानावताराणां निधानं बीजमव्ययम्'' इत्यत्र

''सर्वे नित्याः शाश्वताश्च देहास्तस्य महात्मनः ।
परमानंदसंदोहा ज्ञानमात्राश्च सर्वशः ।।''

इत्यादौ च साक्षान्नित्यत्वाद्युक्तेश्च ।

मोक्षसाधनज्ञानविषयत्वान्मुक्तगम्यत्वाच्च रूपस्यारोपितत्वमपि नेत्याह— **सहस्रशीर्षेत्यत्रेत्यादिना मुक्तगम्यत्वाद्युक्तेश्चेत्यंतेनेति । न सदिति ।।** न पृथिव्यादिभूतत्रयमित्यर्थः ।। **नासदिति।।** न वाय्वादिकमित्यर्थः । परत्वेत्यस्य विवरणमप्राकृतत्वस्येति । विग्रहस्य नित्यत्वे प्रमाणमाह— **एक इति ।।**

❖❖❖

**'ಸಹಸ್ರಶೀರ್ಷಾ' ಇತ್ಯತ್ರ 'ತಮೇವಂ ವಿದ್ವಾನಮೃತ ಇಹ ಭವತಿ' ಇತಿ, 'ಯದಾ ಪಶ್ಯಃ' ಇತ್ಯತ್ರ ಚ 'ತದಾ ವಿದ್ವಾನ್ ಪುಣ್ಯಪಾಪೇ ವಿಧೂಯ' ಇತಿ, 'ನ ಸಂದೃಶೇ ತಿಷ್ಠತಿ ರೂಪಮಸ್ಯ' ಇತ್ಯತ್ರ ಚ 'ಯ ಏನಂ ವಿದುರಮೃತಾಸ್ತೇ ಭವಂತಿ' ಇತಿ ತಜ್ಜ್ಞಾನಸ್ಯ ಮೋಚಕತ್ವೋಕ್ತೇಶ್ಚ ।**

'ಸಹಸ್ರಶೀರ್ಷಾಪುರುಷಃ' ಎಂಬ ಪುರುಷಸೂಕ್ತದಲ್ಲಿ 'ಆ ಪರಮಪುರುಷನನ್ನು ಸಹಸ್ರಶೀರ್ಷಾದಿ ಉಳ್ಳವನೆಂದು ತಿಳಿದವನು ಮೋಕ್ಷಹೊಂದುತ್ತಾನೆ ಎಂದಿದೆ. 'ಯದಾ ಪಶ್ಯಃ ಪಶ್ಯತೇ' ಎಂಬ ಆಥರ್ವಣ ಶ್ರುತಿಯಲ್ಲಿಯೂ ಜ್ಞಾನಿಯು ಪುಣ್ಯಪಾಪಗಳನ್ನು ನೀಗಿಸಿಕೊಳ್ಳುತ್ತಾನೆ, ಅಂದರೆ ಮುಕ್ತನಾಗುತ್ತಾನೆ ಎಂದಿದೆ. 'ನ ಸಂದೃಶೇ ತಿಷ್ಠತಿ ರೂಪಮಸ್ಯ' ಎಂಬ ಮಹಾ ನಾರಾಯಣೋಪನಿಷತ್ತಿನಲ್ಲಿಯೂ 'ಹೀಗೆ ಬಿಂಬರೂಪಿ ಪರಮಾತ್ಮನನ್ನು ತಿಳಿದವರು ಮುಕ್ತ ರಾಗುತ್ತಾರೆ' ಎಂದಿದೆ. ಭಗವಂತನ ಆಕಾರವು ಪ್ರಾಕೃತವಾಗಿದ್ದರೆ, ಉಪಾಸನೆಗಾಗಿ ಆರೋಪಿತ ವಾಗಿದ್ದರೆ ಮೋಕ್ಷಜನಕ ಜ್ಞಾನಕ್ಕೆ ಅದು ವಿಷಯವಾಗುತ್ತಿದ್ದಿಲ್ಲ. ಮುಕ್ತಪ್ರಾಪ್ಯವೂ ಆಗುತ್ತಿದ್ದಿಲ್ಲ.

**'ದೇವಾ ಅಪ್ಯಸ್ಯ ರೂಪಸ್ಯ ನಿತ್ಯಂ ದರ್ಶನಕಾಂಕ್ಷಿಣಃ' ಇತ್ಯುಕ್ತ ರೂಪಸ್ಯ 'ಜ್ಞಾತುಂ ದ್ರಷ್ಟುಂ ಚ ತತ್ತ್ವೇನ ಪ್ರವೇಷ್ಟುಂ ಚ ಪರಂತಪ' ಇತಿ ಸ್ಮೃತೌ ಮುಕ್ತಗಮ್ಯತ್ವಾದ್ಯುಕ್ತೇಶ್ಚ ।**

'ಗೀತೆಯ ವಿಶ್ವರೂಪಾಧ್ಯಾಯದಲ್ಲಿ 'ದೇವತೆಗಳು ಕೂಡ ಈ ವಿಶ್ವರೂಪವನ್ನು ನಿತ್ಯ ಕಾಣಲು ಬಯಸುತ್ತಾರೆ' ಎಂದು ಹೇಳಿ, 'ಅನನ್ಯ ಭಕ್ತಿಯಿಂದ ಮಾತ್ರ ಇದನ್ನು ಯಥಾರ್ಥವಾಗಿ ತಿಳಿಯಲು, ಸಾಕ್ಷಾತ್ಕರಿಸಿಕೊಳ್ಳಲು ಮತ್ತು ಮುಕ್ತಿಯಲ್ಲಿ ಪ್ರವೇಶಿಸಲು ಶಕ್ಯ (ಗೀತಾ.11.54) ಎಂದು ಮುಕ್ತಗಮ್ಯತ್ವಾದಿಗಳು ಉಕ್ತವಾಗಿವೆ.

**ಅತ ಏವೇದಂ ರೂಪಂ ನ ಭೌತಿಕಂ ಪ್ರಾಕೃತಂ ಅನಿತ್ಯಂ ವಾ । 'ನಾಭ್ಯಾ ಆಸೀದ್ ಅಂತರಿಕ್ಷಂ' ಇತ್ಯಾದೌ ಭೂತಕಾರಣತ್ವಸ್ಯ, 'ತಮಸಃ ಪರಸ್ತಾತ್' ಇತಿ ಶ್ರುತೌ ತಮಸಃ ಪರತ್ವಸ್ಯ, 'ಸರ್ವತಃ ಪಾಣಿಪಾದಂ ತತ್' ಇತಿ ಸ್ಮೃತೌ ಚ 'ನ ಸತ್ ತನ್ನಾಸದುಚ್ಯತೇ' ಇತಿ ಪೂರ್ವತ್ರ, ಅಭೌತಿಕತ್ವಸ್ಯ, 'ತಮಸಃ ಪರಮುಚ್ಯತೇ' ಇತಿ ಪರತ್ರ, ಅಪ್ರಾಕೃತತ್ವಸ್ಯ ಚ ಉಕ್ತೇಃ ।**

ಭಗವಂತನ ರೂಪವು ಭೌತಿಕ ಪ್ರಾಕೃತ ಅಥವಾ ಅನಿತ್ಯ ಎನ್ನಲಾಗದು. 'ನಾಭಿಯಿಂದ ಅಂತರಿಕ್ಷ ಉತ್ಪನ್ನವಾಯಿತು' ಎಂಬುದರಿಂದ ಭಗವಂತನ ರೂಪವು ಭೂತಗಳಿಂದ ಹುಟ್ಟಿದ್ದಲ್ಲ, ಭೂತಗಳಿಗೆ ಕಾರಣವೆನ್ನುವುದು ಸ್ಪಷ್ಟ. 'ತಮಸ್ಸಿನಿಂದ ಪ್ರಕೃತಿಯಿಂದ ದೂರವಿದೆ' ಎಂಬುದರಿಂದ ಪ್ರಾಕೃತವಲ್ಲ ಎಂದೂ ಹೇಳಿದಂತಾಯಿತು. 'ಸರ್ವತಃ ಪಾಣಿಪಾದಂ' ಎಂಬ ಗೀತಾವಚನವು ಹಿಂದೆ 'ನ ಸತ್ ತನ್ನಾಸದುಚ್ಯತೇ' ಅಂದರೆ 'ನ ಸತ್' ಪೃಥಿವ್ಯಾದಿ ಭೂತತ್ರಯರೂಪವೂ ಅಲ್ಲ, 'ನ ಅಸತ್' ವಾಯ್ವಂತರಿಕ್ಷರೂಪವೂ ಅಲ್ಲ ಎಂದು ಭಗವದ್ರೂಪವನ್ನು ಅಭೌತಿಕ ಎಂದಿದೆ. ಮುಂದೆಯೂ 'ಪ್ರಕೃತಿಯಿಂದಾಚೆ ಇದೆ' ಎಂದು ಅಪ್ರಾಕೃತತ್ವವನ್ನೇ ಹೇಳುತ್ತಿದೆ.

**ಏಕೋ ನಾರಾಯಣ ಆಸೀತ್ ನ ಬ್ರಹ್ಮಾ ನ ಚ ಶಂಕರಃ ಇತ್ಯಾದಿಷು ಮಹಾಪ್ರಲಯೇ ಸ್ಥಿತ್ಯುಕ್ತೇಶ್ಚ ।**

'ಪ್ರಳಯಕಾಲದಲ್ಲಿ ನಾರಾಯಣನೊಬ್ಬನೆ ಇದ್ದ, ಬ್ರಹ್ಮನಿರಲಿಲ್ಲ ಶಿವನೂ ಇರಲಿಲ್ಲ' ಎಂದು ಬ್ರಹ್ಮರುದ್ರರಿಗೂ ಕೂಡ ಶರೀರಲಯ ಉಳ್ಳ ಮಹಾಪ್ರಳಯದಲ್ಲಿ ನಾರಾಯಣನಿಗೆ ಶರೀರ ಲಯವಿರಲಿಲ್ಲವೆಂದು ಶ್ರುತಿಯು ಹೇಳುವುದರಿಂದ ಭಗವಂತನ ಶರೀರ ಅನಿತ್ಯವೂ ಅಲ್ಲ.

**ಪ್ರಲಯೇ ವಿಗ್ರಹರಹಿತ ಚೇತನಮಾತ್ರ ಸತ್ತ್ವಸ್ಯ ಸರ್ವಸಾಧಾರಣ್ಯಾತ್, ವಿಗ್ರಹಾನಿತ್ಯತ್ವೇ 'ನಿತ್ಯೋ ನಿತ್ಯಾನಾಂ ಚೇತನಶ್ಚೇತನಾನಾಂ' ಇತಿ ವಿಶೇಷೋಕ್ತ್ಯ ಯೋಗಾತ್ ।**

ಪ್ರಳಯದಲ್ಲಿ ಶರೀರರಹಿತ ಚೇತನ ಮಾತ್ರವಿರುವುದು ಬ್ರಹ್ಮರುದ್ರಾದಿ ಸರ್ವಚೇತನ ಸಾಧಾರಣವೇ ಆದ್ದರಿಂದ 'ನಾರಾಯಣನೊಬ್ಬನೇ ಶರೀರರಹಿತ ಚೇತನಮಾತ್ರನಾಗಿದ್ದನೆ'ನ್ನಲು ಬರುವುದಿಲ್ಲ. 'ನಾರಾಯಣ ನೊಬ್ಬನೇ ಶರೀರಸಹಿತನಾಗಿದ್ದನೆಂ'ದೇ ಶ್ರುತಿಯ ಅಭಿಪ್ರಾಯ ವೆನ್ನಬೇಕು. ಆದರಿಂದ ಅವನ ಶರೀರ ನಿತ್ಯವೇ ಹೊರತು ಅನಿತ್ಯವಲ್ಲ.

ಇಲ್ಲಿ ಶರೀರವು ಅನಿತ್ಯವೇ ಆಗಿದ್ದು ಚೇತನಸ್ವರೂಪ ಮಾತ್ರ ನಿತ್ಯತ್ವಾಭಿಪ್ರಾಯದಿಂದ ಈ ಶ್ರುತಿಯು ನಾರಾಯಣ ಪ್ರಳಯದಲ್ಲಿದ್ದನೆಂದಿದ್ದರೆ, ಸ್ವರೂಪನಿತ್ಯತ್ವಾಭಿಪ್ರಾಯದಿಂದ 'ನಾರಾಯಣ ನಿತ್ಯ' ಎಂದಿಷ್ಟೇ ಶ್ರುತಿಯಲ್ಲಿ ಹೇಳಬೇಕಿತ್ತು. 'ನಿತ್ಯೋ ನಿತ್ಯಾನಾಂ ಚೇತನಶ್ಚೇತ ನಾನಾಂ'· 'ನಿತ್ಯರಲ್ಲಿ ಹೆಚ್ಚು ನಿತ್ಯ, ಚೇತನರಲ್ಲಿ ಹೆಚ್ಚಿನ ಚೇತನ' ಎಂದು ವಿಶೇಷವಾಗಿ ಶ್ರುತಿಯಲ್ಲಿ ಹೇಳಬೇಕಾಗಿರಲಿಲ್ಲ. ಎಲ್ಲ ಚೇತನರೂ ಸ್ವರೂಪದಿಂದ ನಿತ್ಯರೇ ಆಗಿರುವಾಗ 'ನಿತ್ಯರಲ್ಲಿ ಹೆಚ್ಚು ನಿತ್ಯ ನಾರಾಯಣ' ಹೇಗೆ?

**'ಪುರಾ ಕಲ್ಪಾಪಾಯೇ ಸ್ವಕೃತಮುದರೀಕೃತ್ಯ ವಿಕೃತಂ'**
**ಇತ್ಯಾದೌ ಸಾಕ್ಷಾನ್ಮಹಾಪ್ರಲಯೇ ಸ್ಥಿತ್ಯುಕ್ತೇಶ್ಚ ।**

'ಪ್ರಳಯದಲ್ಲಿಯೂ ನಾರಾಯಣನ ಶರೀರನಾಶವಾಗಿರಲಿಲ್ಲ. ಅವನು ಸಶರೀರನಾಗಿಯೇ ಇದ್ದನೆಂದ ಮಾತ್ರಕ್ಕೆ ಆ ಪ್ರಳಯ ಮಹಾಪ್ರಳಯವೇ ಆಗಿರಬೇಕಿಲ್ಲ. ಅವಾಂತರ ಪ್ರಳಯ ವಾಗಿರಬಹುದು' ಎಂದರೆ, ಭಾಗವತ ಹೇಳುವಂತೆ, ಇದು ಮಹಾಪ್ರಳಯವೆ ಎನ್ನಬೇಕು—

ಪುರಾ ಕಲ್ಪಾಪಾಯೇ ಸ್ವಕೃತಮುದರೀಕೃತ್ಯ ವಿಕೃತಂ
ತ್ವಮೇವಾದ್ಯಸ್ತಸ್ಮಿನ್ ಸಲಿಲ ಉರಗೇಂದ್ರಾಧಿಶಯನೇ
ಪುಮಾನ್ ಶೇಷೇ ಸಿದ್ಧೈರ್ಹೃದಿ ವಿಮೃಶಿತಾಧ್ಯಾತ್ಮ ಪದವಿಃ
ಸ ಏವಾದ್ಯಾಕ್ಣೋರ್ನಃ ಪಥಿ ಚರಸಿ ಭೃತ್ಯಾನವಸಿ ಚ ॥ (ಭಾಗವತ. 4.8.42)

ದೇವತೆಗಳು ನುಡಿದರು—ಮಹಾಪ್ರಳಯದಲ್ಲಿ, ನೀನು ಸ್ವತಃ ಸೃಜಿಸಿದ್ದ ಪ್ರಪಂಚವನ್ನು

ತಿರುಗಿ ತನ್ನ ಉದರದೊಳಗೆ ಸೇರಿಸಿಕೊಂಡು, ಪ್ರಳಯಜಲದಲ್ಲಿ ಶೇಷನ ಮೇಲೆ ಪವಡಿಸುವಿ. ಸಿದ್ಧರು ಹೃದಯದಲ್ಲಿ ಚಿಂತಿಸುವ ಪರಮಾತ್ಮಸ್ವರೂಪ ನಿನ್ನದು. ನೀನೇ ಆದಿಪುರುಷ. ಅಂಥ ನೀನು ಈಗ ನಮ್ಮ ದೃಷ್ಟಿಗೆ ಗೋಚರನಾಗಿರುವಿ. ಸೇವಕರಾದ ನಮ್ಮನ್ನು ಕಾಪಾಡುತ್ತಿರುವಿ' ಇಲ್ಲಿ 'ಸ್ವಕೃತಮುದರೀಕೃತ್ಯ' 'ತಾನು ನಿರ್ಮಿಸಿದ ಪ್ರಪಂಚವನ್ನು ತನ್ನುದರೊಳಗೆ ತುಂಬಿಸಿಕೊಂಡು' ಎಂದು ಇದು ಮಹಾಪ್ರಳಯವೇ ಎಂದಿದೆ. ಮಹಾಪ್ರಳಯದಲ್ಲಿಯೂ ನಾರಾಯಣನ ಉದರ, ಶರೀರ, ನಾಶವಾಗದೆ ಹಾಗೇ ಇತ್ತೆಂದಿದೆ.

> 'ಪಶ್ಯಂತ್ಯದೋ ರೂಪಮದಭ್ರಚಕ್ಷುಷಃ
> ಸಹಸ್ರಪಾದೋರು ಭುಜಾನನಾದ್ಭುತಂ'
> ಇತ್ಯಾರಭ್ಯ
> 'ಏತನ್ನಾನಾವತಾರಾಣಾಂ ನಿಧಾನಂ ಬೀಜಮವ್ಯಯಂ'
> ಇತ್ಯತ್ರ,
> ಸರ್ವೇ ನಿತ್ಯಾಃ ಶಾಶ್ವತಾಶ್ಚ ದೇಹಾಸ್ತಸ್ಯ ಮಹಾತ್ಮನಃ।
> ಪರಮಾನಂದ ಸಂದೋಹಾ ಜ್ಞಾನಮಾತ್ರಾಶ್ಚ ಸರ್ವಶಃ'
> ಇತ್ಯಾದೌ ಚ ಸಾಕ್ಷಾತ್ ನಿತ್ಯತ್ವಾದ್ಯುಕ್ತೇಶ್ಚ।

'ಸಹಸ್ರಾರು ಪಾದ ಊರು ಬಾಹು ಮುಖ ಶಿರಸ್ಸು ಕಿವಿ ಕಣ್ಣು ಮೂಗುಳ್ಳ ಸಹಸ್ರಾರು ಕಿರೀಟ ಕುಂಡಲ ವಸ್ತ್ರಾಭರಣಗಳಿಂದ ಹೊಳೆವ ಆ ವಿರಾಡ್ರೂಪವನ್ನು ಸರ್ವಜ್ಞರಾದ ಬ್ರಹ್ಮಾದಿದೇವತೆಗಳು ಮಾತ್ರ ಕಾಣಬಲ್ಲರು' ಎಂದು ಆರಂಭಿಸಿ 'ಆ ರೂಪದಲ್ಲಿಯೇ ಲಯಕಾಲದಲ್ಲಿ ಅವನ ಅನಂತ ಅವತಾರರೂಪಗಳು ಸೇರಿ ಒಂದಾಗುತ್ತವೆ. ಸೃಷ್ಟಿಕಾಲದಲ್ಲಿ ಅಲ್ಲಿಂದಲೆ ಹೊರಗೆ ಬರುತ್ತವೆ(ಭಾಗವತ 1.3.45) ಎನ್ನುವ ಭಾಗವತದಲ್ಲಿಯೂ, 'ಪರಮಾತ್ಮನ ಎಲ್ಲ ಶರೀರಗಳೂ ನಿತ್ಯ ಶಾಶ್ವತ, ಪರಮಾನಂದ ಸಂದೋಹರೂಪ, ಜ್ಞಾನರೂಪ' ಎಂದು ಮಹಾವಾರಾಹ ಮುಂತಾದವುಗಳಲ್ಲಿಯೂ ನೇರವಾಗಿಯೇ ಪರಮಾತ್ಮನ ಶರೀರಗಳು ನಿತ್ಯ ಶಾಶ್ವತ ಎಂದು ಮುಂತಾಗಿ ಹೇಳಿದ್ದರಿಂದ ಅವು ಅನಿತ್ಯವಲ್ಲ.



**अत एव न जडं। नापि ततो भिन्नम्। ''आनंदरूपममृतं यद्विभाति, आप्रणखात्सर्व एवानंदः, मोदो दक्षिणः पक्षः, यदात्मको भगवांस्तदात्मिका व्यक्तिः किमात्मको भगवान् ज्ञानात्मक ऐश्वर्यात्मक'' इत्यादिश्रुतेः। भेदाभावेऽप्यहिकुंडलाधिकरणन्यायेन**

**विशेषबलाद्विग्रहवत्त्वोपपत्तेश्च । ''आत्मनि चैवं विचित्राश्च हि'' इतिसूत्रे ''विचित्रशक्तिः पुरुषः पुराण'' इत्यादिश्रुतिभिर्विचित्रशक्तेरुक्तत्वेन आनंदस्य नित्यत्ववदपराधीनत्ववच्च विग्रहवत्त्वस्यापि संभवाच्च ।**

विग्रहस्य परमात्माभेदे प्रमाणमाह— **यदात्मक इति** ।। इत्यादिश्रुतेरित्यादिपदात् ''एकमेवाद्वितीयं, नेह नानास्ति'' इत्यादिश्रुतिपरिग्रहः ।। **अहिकुंडलाधिकरणन्यायेनेति** ।। 'उभयव्यपदेशात्त्वहिकुंडलवत्'' (ब्र. सू. ३-२-२८) परमात्मनि भक्तिः कर्तव्या न वेति संशये परमात्मन आनंदस्वरूपतया आनंदित्वाभावान्न भक्तिः कार्येति प्राप्ते सिद्धांतः ''आनंदं ब्रह्मणो विद्वान्'' ''अथैष एव परम आनंदः'' इत्यादिश्रुतौ तस्योभयात्मकत्वव्यपदेशादानंदस्वरूपत्वेऽप्यानंदित्वं युक्तम् । न चैकस्य तद्रूपत्वं तद्वत्त्वं च विरुद्धम्। कुंडलात्मकस्याप्यहेः कुंडलित्ववत्, प्रकाशात्मकस्याप्यादित्यादेः तद्वत्त्ववत्, पूर्वः काल इत्यत्र एकस्यैव कालस्य विशेषणत्ववत् विशेष्यत्ववच्च विशेषबलादेवोपपत्तेरित्यहिकुंडलाधिकरणन्यायेनेत्यर्थः ।



**ಅತ ಏವ ನ ಜಡಂ, ನಾಪಿ ತತೋ ಭಿನ್ನಂ ।**

**'ಆನಂದರೂಪಮಮೃತಂ ಯದ್ ವಿಭಾತಿ' 'ಆಪ್ರಣಖಾತ್ ಸರ್ವ ಏವಾನಂದಃ' 'ಮೋದೋ ದಕ್ಷಿಣಃ ಪಕ್ಷಃ' 'ಯದಾತ್ಮಕೋ ಭಗವಾನ್ ತದಾತ್ಮಿಕಾ ವ್ಯಕ್ತಿಃ' 'ಕಿಮಾತ್ಮಕೋ ಭಗವಾನ್ ಜ್ಞಾನಾತ್ಮಕ ಐಶ್ವರ್ಯಾತ್ಮಕಃ' ಇತ್ಯಾದಿ ಶ್ರುತೇ ।**

ಭಗವಂತನಂತೆ ಅವನ ಶರೀರವೂ ನಿತ್ಯ ಅಪ್ರಾಕೃತ ಶಾಶ್ವತವಾಗಿದ್ದು ಅದು ಅವನಿಗಿಂತ ಅಭಿನ್ನವಾಗಿದೆ. ಅದು ಜಡವಲ್ಲ, ಭಿನ್ನವೂ ಅಲ್ಲ.

'ಅವನ ಶರೀರ ಆನಂದರೂಪ, ಮರಣರಹಿತವಾಗಿ ಪ್ರಕಾಶಿಸುತ್ತದೆ. ಉಗುರಿನಿಂದ ತೊಡಗಿ ಅವನ ಎಲ್ಲ ಅವಯವಗಳೂ ಆನಂದಸ್ವರೂಪ. ಬಲಗೈಯೂ ಆನಂದರೂಪ. ಭಗವಂತನ ಸ್ವರೂಪವೇ ಅವನ ಶರೀರಸ್ವರೂಪ. ಭಗವಂತನ ಸ್ವರೂಪವೇನು? ಅದು ಜ್ಞಾನಸ್ವರೂಪ, ಐಶ್ವರ್ಯಸ್ವರೂಪ' 'ಏಕಮೇವಾದ್ವಿತೀಯಂ' 'ನೇಹನಾನಾಸ್ತಿ' ಇತ್ಯಾದಿ ಶ್ರುತಿಗಳಿಂದ ಇದು ಸಿದ್ಧವಾಗುತ್ತದೆ.

**ಭೇದಾಭಾವೇಽಪಿ ಅಹಿಕುಂಡಲಾಧಿಕರಣನ್ಯಾಯೇನ ವಿಶೇಷಬಲಾತ್ ವಿಗ್ರಹವತ್ತ್ವೋಪಪತ್ತೇಶ್ಚ ।**

ಭಗವಂತನಿಗೂ ಅವನ ಶರೀರಕ್ಕೂ ಭೇದವಿಲ್ಲದಿದ್ದರೂ ಅವನು ಶರೀರಿ ಎನಿಸುವುದು ವಿಶೇಷಬಲದಿಂದ. ಇದು ಬ್ರಹ್ಮಸೂತ್ರದ ಅಹಿಕುಂಡಲಾಧಿಕರಣದಲ್ಲಿ ಸ್ಪಷ್ಟವಿದೆ. 'ಉಭಯ ವ್ಯಪದೇಶಾತ್ತ್ವಹಿಕುಂಡಲವತ್' (3.2.28) ಪರಮಾತ್ಮನಲ್ಲಿ ಭಕ್ತಿ ಮಾಡಬೇಕೆ ಬೇಡವೆ? ಆನಂದಸ್ವರೂಪನಾದ್ದರಿಂದ ಆನಂದಉಳ್ಳವನಲ್ಲ ಎಂದಮೇಲೆ ಭಕ್ತಿ ಮಾಡಬೇಕಿಲ್ಲ ಎಂದು ಪೂರ್ವಪಕ್ಷ. ಸಿದ್ಧಾಂತ—'ಆನಂದಂ ಬ್ರಹ್ಮಣಃ' 'ಆನಂದ ಉಳ್ಳವನು ಬ್ರಹ್ಮ', 'ಅಥೈಷ ಏವ ಪರಮ ಆನಂದಃ' 'ಬ್ರಹ್ಮನು ಪರಮಾನಂದಸ್ವರೂಪನೂ ಆಗಿದ್ದಾನೆ' ಎಂದು ಶ್ರುತಿಗಳಲ್ಲಿ ಆನಂದ ಆನಂದಿ ಉಭಯಾತ್ಮಕನಾಗಿ ಉಕ್ತನಾಗಿರುವುದರಿಂದ ಆನಂದಸ್ವರೂಪನಾದರೂ ಆನಂದಉಳ್ಳವನೂ ಆಗಿರುತ್ತಾನೆ ಭಗವಂತ. ಇದು ವಿರುದ್ಧವಲ್ಲ. ಹಾವು ಸುರುಳಿ ಸುತ್ತಿಕೊಂಡಿದ್ದರೆ ಹಾವಿನ ಸುರುಳಿ ಬೇರೆ ಅಲ್ಲ, ಸುರುಳಿಯಾದ ಹಾವು ಬೇರೆ ಅಲ್ಲ. ಹಾಗೇ ಬ್ರಹ್ಮನ ಆನಂದ ಬೇರೆಯಲ್ಲ, ಆನಂದಉಳ್ಳ ಬ್ರಹ್ಮ ಬೇರೆಯಲ್ಲ.

ಸೂರ್ಯನು ಪ್ರಕಾಶ ಸ್ವರೂಪನಾದರೂ ಪ್ರಕಾಶಉಳ್ಳವನೂ ಆಗಿದ್ದಾನೆ. 'ಪೂರ್ವಃಕಾಲಃ' ಎನ್ನುವಲ್ಲಿ ಪೂರ್ವವೂ ಕಾಲವೇ ಆದರೂ 'ಪೂರ್ವದಲ್ಲಿರುವ ಕಾಲ' ಎನ್ನುತ್ತೇವೆ. 'ಪೂರ್ವ' ಎಂಬ ವಿಶೇಷಣವೂ 'ಕಾಲ' ಎಂಬ ವಿಶೇಷ್ಯವೂ ಬೇರೆ ಅಲ್ಲ, ಒಂದೇ. ಆದರೂ ವಿಶೇಷಣ ವಿಶೇಷ್ಯಭಾವವಿದೆ. ಅಭೇದವಿದ್ದರೂ ಭೇದವ್ಯವಹಾರ ನಿರ್ವಾಹಕವಾದ ವಿಶೇಷದ ಬಲದಿಂದ ಇದು ಕೂಡುತ್ತದೆ. ಹಾಗೇ ಆನಂದಸ್ವರೂಪನಾದ ಬ್ರಹ್ಮನಲ್ಲಿ ಆನಂದವು ವಿಶೇಷಣವಾಗುತ್ತದೆ. ಇದು ಅಹಿಕುಂಡಲನ್ಯಾಯ.

**'ಆತ್ಮನಿ ಚೈವಂ ವಿಚಿತ್ರಾಶ್ಚ ಹಿ' ಇತಿಸೂತ್ರೇ 'ವಿಚಿತ್ರಶಕ್ತಿಃ ಪುರುಷಃ ಪುರಾಣಃ' ಇತ್ಯಾದಿ ಶ್ರುತಿಭಿಃ ವಿಚಿತ್ರಶಕ್ತೇರುಕ್ತತ್ವೇನ ಆನಂದಸ್ಯ ನಿತ್ಯತ್ವವತ್ ಅಪರಾಧೀನತ್ವವಚ್ಚ ವಿಗ್ರಹವತ್ತ್ವಸ್ಯಾಪಿ ಸಂಭವಾಚ್ಚ ।**

'ಪರಮಾತ್ಮನಲ್ಲಿ ಮಾತ್ರ ಯುಕ್ತಿವಿರೋಧಕ್ಕೆ ಎಡೆಯಿಲ್ಲದಂತೆ ವಿಚಿತ್ರಕಾರ್ಯ ಮಾಡುವ ಶಕ್ತಿ ಇದೆ' ಎಂಬ ಬ್ರಹ್ಮಸೂತ್ರ (2.1.29)ದಲ್ಲಿಯೂ 'ಪುರಾಣಪುರುಷನಾದ ಭಗವಂತನಲ್ಲಿ ವಿಚಿತ್ರ ಶಕ್ತಿಗಳಿವೆ. ಜೀವರಲ್ಲಿ ಅಂಥ ಶಕ್ತಿ ಇರುವುದಿಲ್ಲ'(ಶ್ವೇತಾಶ್ವತರಶ್ರುತಿ) ಎಂದು ಅದರ ಭಾಷ್ಯದಲ್ಲಿಯೂ ಭಗವಂತನಲ್ಲಿ ವಿಚಿತ್ರಶಕ್ತಿ ಉಕ್ತವಾಗಿರುವುದರಿಂದ ಆನಂದವು ನಿತ್ಯಸ್ವತಂತ್ರವಾಗಿರುವಂತೆ ಶರೀರಿಯೂ ಆಗಿರಬಹುದು.



''नैषा तर्केण मतिरापनेया'' इत्यादिश्रुतिभिस्तर्कागम्यत्वो-

**क्तेश्च । पिशाचादिवदंतर्धानशक्त्याऽनुपलंभसंभवाच्च । नचापाणिपाद इत्यादिविरोधः । "अदुःखमसुखं समं, न प्रज्ञानघनम्" इति सुखज्ञाननिषेधकवाक्यवत्प्राकृतावयवादिनिषेधपरत्वात् । अन्यथोक्तश्रुतिस्मृतिभिः पश्यति शृणोतीत्यादिवाक्यशेषेण च विरोधात्। "अरूपोऽप्राकृतत्वाच्च" इत्यादिस्मृत्यैवारूपश्रुतिगत्युक्तेश्च । विग्रहवत्त्वेन दुःखं चेत् स्रष्टृत्वादिनापि तत्स्यात् । स्वतंत्रत्वादिना समाधिरपि समः । अप्राकृतानंदमयविग्रहस्य दुःखाभावादिनैव व्याप्तेश्च । सर्वैरपीश्वरे लीलाविग्रहांगीकाराच्च ।**

ब्रह्म न आनंदात्मकशरीरवत् तत्स्वरूपत्वादित्यादि युक्तिविरोधात्कथमुदाहृतश्रुत्यादिभिः विग्रहस्य तदभेदसिद्धिरित्याशंक्याह— **नैषेति** ।। एषा परमात्मविषया मतिः शुष्कतर्केण नानेया, नाप्यपनेयेत्यर्थः । तथाच श्रुत्येकसमधिगम्ये परमात्मनि न युक्तिविरोधः प्रभवतीति भावः । ननु यदि परमात्मनो विग्रहादिमत्त्वं तर्हि रूपवत्त्वात् परममहत्त्वाच्चोपलभ्येतेत्याशंक्याह— **पिशाचादिवदिति** ।। ननु विग्रहवत्त्वबोधकोदाहृतश्रुत्यादीनां "अपाणिपादो जवनो ग्रहीता पश्यत्यचक्षुः स शृणोत्यकर्णः" इत्यादिश्रुतिविरोध इत्याशंक्य निराकरोति— **नचेति** । **सुखज्ञाननिषेधकवाक्यवदिति** ।। सुखज्ञानयोर्निषेधकवाक्यवदित्यर्थः ।। **अरूपश्रुतीति** ।। अशरीरश्रुतीत्यर्थः । विग्रहवत्त्वेन दुःखसाधने स्वव्याहतिश्चेत्याह— ।। **सर्वैरपीति** ।।



**'ನೈಷಾ ತರ್ಕೇಣ ಮತಿರಾಪನೇಯಾ' ಇತ್ಯಾದಿಶ್ರುತಿಭಿಃ ತರ್ಕಾಗಮ್ಯತ್ವೋಕ್ತೇಶ್ಚ। ಪಿಶಾಚಾದಿವತ್ ಅಂತರ್ಧಾನಶಕ್ತ್ಯಾ ಅನುಪಲಂಭ ಸಂಭವಾಚ್ಚ।**

'ಗುಣಿಯಲ್ಲಿರುವ ಶಕ್ತಿ ಗುಣದಲ್ಲಿ ಹೇಗೆ ಬರುತ್ತದೆ? 'ಗುಣಿಗುಣಗಳಿಗೆ ಅಭೇದವಿರುವುದರಿಂದ' ಎಂದರೆ ಘಟಾಭಿನ್ನವಾಗಿರುವ ಆದರ ರೂಪಕ್ಕೆ ಜಲಾಹರಣಶಕ್ತಿ ಉಂಟೆ? ಮತ್ತು ಬ್ರಹ್ಮನು ಆನಂದಾತ್ಮಕ ಶರೀರಉಳ್ಳವನಾಗಲಾರ. ಆನಂದಸ್ವರೂಪನಾದ್ದರಿಂದ ಇತ್ಯಾದಿ ಯುಕ್ತಿವಿರೋಧ ಬರುವುದರಿಂದ ಶ್ರುತಿಗಳಿಂದ ಬ್ರಹ್ಮನ ಶರೀರ ಬ್ರಹ್ಮಸ್ವರೂಪವೆಂದಾಗದು'

ಎಂದರೆ, ಪರಮಾತ್ಮನ ವಿಷಯದಲ್ಲಿ ಯಾವುದೇ ನಿರ್ಣಯವನ್ನು ಶುಷ್ಕತರ್ಕದ ಬಲದಿಂದ ಅಂಗೀಕರಿಸಲೂ ಸಾಧ್ಯವಿಲ್ಲ ನಿರಾಕರಿಸಲೂ ಸಾಧ್ಯವಿಲ್ಲ ಎಂದು (ಕಾಠಕ ಉ.1.2.9) ಉಪನಿಷತ್ತು ಹೇಳುವಂತೆ ವೇದೈಕವೇದ್ಯನಾದ ಭಗವಂತನ ವಿಷಯದಲ್ಲಿ ಯುಕ್ತಿವಿರೋಧಕ್ಕೆ ಅವಕಾಶವಿರುವುದಿಲ್ಲ.

'ಪರಮಾತ್ಮನಿಗೆ ಶರೀರವಿರುವುದಾದರೆ ಅದಕ್ಕೆ ರೂಪವೂ ಪರಮಮಹತ್ ಪರಿಮಾಣವೂ ಇರುವುದರಿಂದ ಅದು ಕಣ್ಣಿಗೆ ಕಾಣಿಸಿಕೊಳ್ಳಲೇಬೇಕು' ಎಂದರೆ, ಅಂತರ್ಧಾನಶಕ್ತಿಯಿಂದ ಕಾಣಿಸಿಕೊಳ್ಳದಿರಬಹುದು. ಇದಕ್ಕೆ ಪಿಶಾಚಿ ದೃಷ್ಟಾಂತ. ಅದಕ್ಕೆ ರೂಪ ಪರಿಮಾಣಗಳಿದ್ದರೂ, ಅಂತರ್ಧಾನಶಕ್ತಿ ಇರುವುದರಿಂದ ಕಣ್ಣಿಗೆ ಕಾಣಿಸಿಕೊಳ್ಳುವುದಿಲ್ಲ.

**ನ ಚಾಪಾಣಿಪಾದ ಇತ್ಯಾದಿ ವಿರೋಧಃ। 'ಅದುಃಖಮಸುಖಂ ಸಮಂ' 'ನ ಪ್ರಜ್ಞಾನಘನಂ' ಇತಿ ಸುಖಜ್ಞಾನನಿಷೇಧಕ ವಾಕ್ಯವತ್ ಪ್ರಾಕೃತಾವಯವಾದಿ ನಿಷೇಧ ಪರತ್ವಾತ್ ।**

'ಅಪಾಣಿಪಾದೋ ಜವನೋ ಗ್ರಹೀತಾ ಪಶ್ಯತ್ಯಚಕ್ಷುಃ ಸ ಶೃಣೋತ್ಯಕರ್ಣಃ' (ಶ್ವೇತಾ.3.19) 'ಕೈಕಾಲುಗಳಿಲ್ಲದವನಾದರೂ ವೇಗದಿಂದ ಬಂದು ಹಿಡಿಯುತ್ತಾನೆ, ಕಣ್ಣಿಲ್ಲದಿದ್ದರೂ ನೋಡುತ್ತಾನೆ, ಕಿವಿ ಇಲ್ಲದಿದ್ದರೂ ಕೇಳುತ್ತಾನೆ' ಎಂದು ಶ್ರುತಿಯೇ ಭಗವಂತನಿಗೆ ಕಣ್ಣು ಕೈಕಾಲುಗಳಿಲ್ಲ ಎನ್ನುತ್ತಿರುವಾಗ ಅದಕ್ಕೆ ವಿರೋಧವಾಗಿ ಶರೀರವಿದೆ ಎಂದು ಹೇಗೆ ಹೇಳಲಾದೀತು?' ಎಂದರೆ, 'ಅದುಃಖಮಸುಖಂ' ಬ್ರಹ್ಮ ಸುಖರಹಿತ ಮತ್ತು ದುಃಖರಹಿತವಾಗಿದೆ. ಸಮವಾಗಿದೆ. 'ನ ಪ್ರಜ್ಞಾನಘನಂ' ಜ್ಞಾನರಹಿತವಾಗಿದೆ ಎಂದು ಶ್ರುತಿಯೇ 'ಬ್ರಹ್ಮನಿಗೆ ಜ್ಞಾನ ಆನಂದಗಳಿಲ್ಲ' ಎನ್ನುತ್ತಿರುವಾಗ ಜ್ಞಾನ ಆನಂದಗಳನ್ನು ಒಪ್ಪುವುದು 'ಅಪ್ರಾಕೃತ ಜ್ಞಾನಾನಂದಾದಿಗಳುಂಟು, ಪ್ರಾಕೃತಜ್ಞಾನಾನಂದಾದಿಗಳಿಲ್ಲ' ಎಂಬ ಅಭಿಪ್ರಾಯದಿಂದ ಹೇಗೋ ಹಾಗೆ, 'ಬ್ರಹ್ಮನಿಗೆ ಕಣ್ಣು ಕೈಕಾಲುಗಳಿಲ್ಲ ಎನ್ನುವುದು ಅಪ್ರಾಕೃತ ಶರೀರವಿದೆ ಪ್ರಾಕೃತ ಶರೀರವಿಲ್ಲ' ಎಂಬ ಅಭಿಪ್ರಾಯದಿಂದ ಎಂದು ಹೇಳಲೇಬೇಕು.

**ಅನ್ಯಥಾ ಉಕ್ತಶ್ರುತಿಸ್ಮೃತಿಭಿಃ, ಪಶ್ಯತಿ ಶೃಣೋತಿ ಇತ್ಯಾದಿ ವಾಕ್ಯಶೇಷೇಣ ಚ ವಿರೋಧಾತ್ ।**

ಹೀಗೆ ಹೇಳದಿದ್ದರೆ ಭಗವಂತನಿಗೆ ಶರೀರ ಉಂಟೆನ್ನುವ ಹಿಂದೆ ಹೇಳಿದ ಶ್ರುತಿಸ್ಮೃತಿಗಳ ವಿರೋಧ ಬರುತ್ತದೆ, ಮತ್ತು ಈ 'ಅಪಾಣಿಪಾದಃ' ಎಂಬ ಶ್ರುತಿಯಲ್ಲಿಯೇ 'ಪಶ್ಯತಿ' 'ಶೃಣೋತಿ' ಎಂದೂ ಹೇಳುವುದರಿಂದ ವಾಕ್ಯಶೇಷವಿರೋಧ ಬರುತ್ತದೆ. ಕಣ್ಣಿಲ್ಲ, ಆದರೆ ನೋಡುತ್ತಾನೆ, ಕಿವಿಯಿಲ್ಲ ಆದರೆ ಕೇಳುತ್ತಾನೆ' ಎನ್ನುವುದು ಸ್ವವ್ಯಾಹತವಾದೀತು. ಅದಕ್ಕೆ ಪ್ರಾಕೃತ ಕಣ್ಣು ಕಿವಿಗಳಿಲ್ಲ, ಅಪ್ರಾಕೃತ ಕಣ್ಣು ಕಿವಿಗಳಿರುವುದರಿಂದ ಅವುಗಳಿಂದ ನೋಡುವುದು ಕೇಳುವುದು ಮುಂತಾದ ಕ್ರಿಯೆಗಳನ್ನು ಮಾಡುತ್ತಾನೆ ಎನ್ನಬೇಕು.

**ಅರೂಪೋಽಪ್ರಾಕೃತತ್ವಾಚ್ಚ ಇತ್ಯಾದಿ ಸ್ಮೃತ್ಯೈವ ಅರೂಪ ಶ್ರುತಿಗತ್ಯುಕ್ತೇಶ್ಚ ।**

'ಪರಮಾತ್ಮನು 'ಅರೂಪ' ಅಂದರೆ ಅಶರೀರ ಎನ್ನುವ ಶ್ರುತಿಗೆ ಗತಿ ಏನೆಂ'ದರೆ, 'ಶರೀರವಿದ್ದರೂ ಪ್ರಾಕೃತಶರೀರವಿಲ್ಲ' ಎಂಬುದು ಶ್ರುತಿಯ ಅರ್ಥ ಎಂದು, 'ಅರೂಪೋಽಪ್ರಾಕೃತತ್ವಾಚ್ಚ' ಪರಮಾತ್ಮನು ಅಶರೀರನೇಕೆ ಎಂದರೆ ಅವನಿಗೆ ಪ್ರಾಕೃತ ಶರೀರವಿಲ್ಲ' ಎನ್ನುವ ಸ್ಮೃತಿಯೇ ಶ್ರುತಿಗೆ ಗತಿಯನ್ನು ಹೇಳಿದೆ. ಆದರಿಂದ ವಿರೋಧವಿಲ್ಲ.

**ವಿಗ್ರಹವತ್ತ್ವೇನ ದುಃಖಂ ಚೇತ್ ಸ್ರಷ್ಟೃತ್ವಾದಿನಾಪಿ ತತ್ ಸ್ಯಾತ್। ಸ್ವತಂತ್ರತ್ವಾದಿನಾ ಸಮಾಧಿರಪಿ ಸಮಃ ।**

'ಶರೀರವಿದ್ದರೆ ದುಃಖ ಬರಬೇಕಾದೀತು' ಎಂದರೆ, 'ಜನ್ಮಾದ್ಯಸ್ಯಯತಃ' ಎಂದು ಬ್ರಹ್ಮಸೂತ್ರದಲ್ಲಿ ಹೇಳಿದಂತೆ ಸೃಷ್ಟ್ಯಾದಿಕರ್ತೃತ್ವವನ್ನು ಒಪ್ಪಿದರೂ ದುಃಖಪ್ರಸಂಗ ಸಮಾನ. ಸ್ವತಂತ್ರನಾದ್ದರಿಂದ, ಸ್ರಷ್ಟೃತ್ವಾದಿ ಪ್ರಯುಕ್ತವಾಗಿ ದುಃಖ ಬರುವುದನ್ನು ತಡೆಯಬಲ್ಲ ಎಂದರೆ ಸ್ವತಂತ್ರನಾದ್ದರಿಂದ, ಶರೀರವಿದ್ದರೂ ತತ್ಪ್ರಯುಕ್ತ ದುಃಖ ಬರುವುದನ್ನು ತಡೆಯಬಲ್ಲ ಎಂದು ಸಮಾಧಾನವೂ ಸಮಾನವೆ.

**ಅಪ್ರಾಕೃತಾನಂದಮಯ ವಿಗ್ರಹಸ್ಯ ದುಃಖಾಭಾವಾದಿನೈವ ವ್ಯಾಪ್ತೇಶ್ಚ। ಸರ್ವೈರಪಿ ಈಶ್ವರೇ ಲೀಲಾವಿಗ್ರಹಾಂಗೀಕಾರಾಚ್ಚ।**

ಪರಮಾತ್ಮನದು ಅಪ್ರಾಕೃತವಾದ ಆನಂದಮಯ ಶರೀರವೆಂದಮೇಲೆ ಅದು ದುಃಖ ರಹಿತವೇ ಆಗಿರಬೇಕೆಂದು ನಿಯಮವಿರುವುದರಿಂದ ದುಃಖಪ್ರಸಕ್ತಿ ಇಲ್ಲ. ಅಪ್ರಾಕೃತ ಶರೀರವೇ ಇದೆ ಎಂದರೆ, ಪ್ರಾಕೃತಶರೀರವಿಲ್ಲವೆಂದರ್ಥ. ಪ್ರಾಕೃತಶರೀರಾಭಾವಕ್ಕೆ ದುಃಖಾಭಾವವು ವ್ಯಾಪಕ. ಹೀಗಾಗಿ ಅಪ್ರಾಕೃತಶರೀರನಾದ ಪರಮಾತ್ಮನಿಗೆ ದುಃಖ ಸರ್ವಥಾ ಬರಲಾರದು.

ಎಲ್ಲ ವೇದಾಂತಿಗಳೂ ಪರಮಾತ್ಮನಿಗೆ ಲೀಲಾವಿಗ್ರಹವನ್ನು ಅಂಗೀಕಾರ ಮಾಡಿ ಆ ಶರೀರದಿಂದ ದುಃಖವಿಲ್ಲ ಎಂದೇ ಒಪ್ಪಿದ್ದಾರೆ. ಅವರು 'ಶರೀರವಿದ್ದರೆ ದುಃಖ ಬಂದೀತೆಂ'ದು ಆಪಾದನೆ ಮಾಡುವುದು ಸ್ವವ್ಯಾಹತ. ಲೀಲಾವಿಗ್ರಹದಿಂದ ದುಃಖವಿಲ್ಲವೆಂದು ಅವರು ಹೇಳುವುದಾದರೆ ನಾವೂ ಅಪ್ರಾಕೃತ ಸ್ವರೂಪ ವಿಗ್ರಹದಿಂದ ದುಃಖವಿಲ್ಲವೆನ್ನುತ್ತೇವೆ. ಏಕೆಂದರೆ ಸ್ವರೂಪಶರೀರ ಆನಂದಮಯ. ಆದರಲ್ಲಿ ದುಃಖಲೇಶವಿಲ್ಲ. ಪ್ರಾಕೃತ ಶರೀರದಲ್ಲಿ ಅದು ತ್ರಿಗುಣಾತ್ಮಕವಾದ್ದರಿಂದ ದುಃಖಾತ್ಮಕ ರಜೋಗುಣಸ್ವರೂಪವಾಗಿದ್ದು ದುಃಖಕಾರಿಯಾಗಿರುತ್ತದೆ.



**नच भगवद्विग्रहस्य महत्त्वविशिष्टरूपवत्त्वसावयवत्वादिनाऽनित्यत्वं शंक्यम् । उक्तश्रुत्यादिविरोधात् । प्राकृतत्वस्योपाधित्वाच्च ।**

**निरवयवविशेषस्येव ज्ञानानंदादिविशेषस्येव च सावयवविशेषस्यापि श्रुत्यादिबलान्नित्यत्वोपपत्तेश्च ।**

**किंचावयवशब्देनोपादानोक्तावसिद्धिः । एकदेशोक्तौ गगनात्मादौ व्यभिचारः ।**

**महत्त्वविशिष्टेति ।।** महत्त्वविशिष्टरूपवत्वात् सावयवत्वाच्चानित्यत्वं न शंक्यमित्यर्थः । किंच यथा प्रमाणबलात् निरवयवस्य घटरूपादेरनित्यत्वेऽपि जलपरमाणुरूपादेर्नित्यत्वं, यथा वास्मदादिज्ञानादेरनित्यत्वेऽपि ईश्वरज्ञानादेर्नित्यत्वं, तथा सावयवघटादेरनित्यत्वेऽपि श्रुतिबलादीश्वरशरीरस्य सावयवस्यापि नित्यत्वमविरुद्धमित्याह— **निरवयवविशेषस्येवेति । गगनात्मादौ व्यभिचार इति ।।** एतच्चाद्वैतिमतमपहाय बोध्यम् ।



**ನಚ ಭಗವದ್‌ವಿಗ್ರಹಸ್ಯ ಮಹತ್ತ್ವ ವಿಶಿಷ್ಟರೂಪವತ್ತ್ವ ಸಾವಯವತ್ವಾದಿನಾ ಅನಿತ್ಯತ್ವಂ ಶಂಕ್ಯಂ। ಉಕ್ತಶ್ರುತ್ಯಾದಿ ವಿರೋಧಾತ್। ಪ್ರಾಕೃತತ್ವಸ್ಯ ಉಪಾಧಿತ್ವಾಚ್ಚ।**

'ಭಗವಂತನ ಶರೀರವು ಮಹತ್‌ಪರಿಮಾಣ ಉಳ್ಳದ್ದಾಗಿದ್ದು ರೂಪವತ್ತೂ ಆಗಿದೆ ಮತ್ತು ಅವಯವ ಯುಕ್ತವೂ ಆಗಿದೆ. ಆದರಿಂದ ಅನಿತ್ಯವಾಗಬೇಕು. ಘಟಾದಿಗಳಲ್ಲಿ ಮಹತ್ವವಿಶಿಷ್ಟ ರೂಪವತ್ತ್ವವೂ ಸಾವಯವತ್ವವೂ ಅನಿತ್ಯತ್ವದಿಂದ ವ್ಯಾಪ್ತವಾಗಿರುವುದು ಕಂಡಿದೆ' ಎಂದು ನಿರಾಕಾರವಾದಿಗಳು ಅನುಮಾನ ಪ್ರಯೋಗ ಮಾಡಿದರೆ ಅದು ಶ್ರುತಿ ಸ್ಮೃತಿಗಳಿಂದ ಬಾಧಿತ ವಾಗಿದೆ. ಮತ್ತು ಅನಿತ್ಯತ್ವಕ್ಕೆ ಮಹತ್ವವಿಶಿಷ್ಟ ರೂಪವಾಗಲಿ ಸಾಯವಯವತ್ವವಾಗಲಿ ಪ್ರಯೋಜಕ ವಲ್ಲ. ಪ್ರಾಕೃತತ್ವವೇ ಪ್ರಯೋಜಕ. ಅನಿತ್ಯವಾದ ಘಟಾದಿಗಳೆಲ್ಲವೂ ಪ್ರಾಕೃತವಾಗಿರುವುದು ಕಂಡಿದೆ. ಸಾಧ್ಯವಾದ ಅನಿತ್ಯತ್ವಕ್ಕೆ ವ್ಯಾಪಕವಾಗಿರುವ ಮತ್ತು ಸಾಧನಉಳ್ಳ ಪಕ್ಷವಾದ ಪರಮಾತ್ಮ ಶರೀರದಲ್ಲಿ ಅವ್ಯಾಪಕವಾಗಿರುವ ಪ್ರಾಕೃತತ್ವವು ಈ ಹೇತುಗಳಿಗೆ ಉಪಾಧಿ. ಅದು ಪಕ್ಷವಾದ ಭಗವಂತನ ಶರೀರದಲ್ಲಿಲ್ಲದ್ದರಿಂದ ಅಲ್ಲಿ ಅದಕ್ಕೆ ವ್ಯಾಪ್ಯವಾದ ಅನಿತ್ಯತ್ವವೂ ಇಲ್ಲವೆಂದು ಸಿದ್ಧವಾಗುತ್ತದೆ.

**ನಿರವಯವ ವಿಶೇಷಸ್ಯೇವ ಜ್ಞಾನಾನಂದಾದಿ ವಿಶೇಷಸ್ಯೇವ ಚ ಸಾವಯವ ವಿಶೇಷಸ್ಯಾಪಿ ಶ್ರುತ್ಯಾದಿ ಬಲಾತ್ ನಿತ್ಯತ್ವೋಪಪತ್ತೇಶ್ಚ ।**

ಘಟರೂಪ ಮುಂತಾದ ನಿರವಯ ಪದಾರ್ಥಗಳು ಅನಿತ್ಯವಾದರೂ ಜಲಪರಮಾಣು

ರೂಪವು ಅಪಾಕಜವಾದ್ದರಿಂದ ನಿತ್ಯವಾಗಿರುವುದು ಕಂಡಿದೆ. ಜೀವರ ಜ್ಞಾನಾದಿಗಳು ಅನಿತ್ಯವಾದರೂ ಈಶ್ವರನ ಜ್ಞಾನಾದಿಗಳು ನಿತ್ಯ. ಪ್ರಮಾಣಬಲದಿಂದ ನಾವು ಹೀಗೆ ಅಂಗೀಕರಿಸುತ್ತಿದ್ದೇವೆ. ಹಾಗೇ ಸಾವಯವವಾದ, ಮತ್ತು ಮಹತ್ವವಿಶಿಷ್ಟರೂಪವತ್ತಾದ ಘಟಾದಿಗಳು ಅನಿತ್ಯವಾದರೂ ಸಾವಯವವಾದ, ಮಹತ್ವವಿಶಿಷ್ಟರೂಪವತ್ತಾದ ಈಶ್ವರಶರೀರವು ನಿತ್ಯವಾಗಿರ ಬಹುದು. ಶ್ರುತ್ಯಾದಿಪ್ರಮಾಣಬಲದಿಂದ ಅದನ್ನು ಹಾಗೆ ಒಪ್ಪುವುದೂ ಆವಶ್ಯಕವೆ.

**ಕಿಂಚ ಅವಯವಶಬ್ದೇನ ಉಪಾದಾನೋಕ್ತೌ ಅಸಿದ್ಧಿಃ ।**

**ಏಕದೇಶೋಕ್ತೌ ಗಗನ-ಆತ್ಮ-ಆದೌ ವ್ಯಭಿಚಾರಃ ।**

ಸಾವಯವತ್ವದಿಂದ ಭಗವಂತನ ಶರೀರಕ್ಕೆ ಅನಿತ್ಯತ್ವವನ್ನು ಸಾಧಿಸುವುದು ಅಶಕ್ಯ. ಏಕೆಂದರೆ ಅವಯವ ಎಂಬ ಶಬ್ದದಿಂದ ಇಲ್ಲಿ ಉಪಾದಾನ ಅಂದರೆ ಆರಂಭಕ ಅವಯವ ಉಕ್ತವಾಗುವುದಾದರೆ ಭಗವಂತನ ಶರೀರಕ್ಕೆ ಉಪಾದಾನರೂಪ ಅವಯವವನ್ನು ನಾವು ಒಪ್ಪಿಲ್ಲದ್ದರಿಂದ ಸಾವಯವತ್ವ ಹೇತುವಿಗೆ ಅಸಿದ್ಧಿದೋಷ. ಅವಯವ ಶಬ್ದದಿಂದ ಏಕದೇಶ ಅಂದರೆ ಅನಾರಂಭಕ ಅವಯವ ವಿವಕ್ಷಿತವಾಗಿರುವುದಾದರೆ ಹೇತುವಿಗೆ ವ್ಯಭಿಚಾರದೋಷ. ಏಕೆಂದರೆ ನಿತ್ಯವಾದ ಆಕಾಶದಲ್ಲಿಯೂ ಆತ್ಮರಲ್ಲಿಯೂ ಇಂಥ ಸಾವಯವತ್ವವಿದೆ. ಪ್ರದೇಶ ಭೇದವಿದೆ. ಯದ್ಯಪಿ ಆಕಾಶದಲ್ಲಿಯೂ ಆತ್ಮನಲ್ಲಿಯೂ ಸ್ವಾಭಾವಿಕ ಪ್ರದೇಶಭೇದವನ್ನು ಅದ್ವೈತಿ ಒಪ್ಪಿಲ್ಲ. ತಾರ್ಕಿಕರು ಮುಂತಾದವರು ಒಪ್ಪಿದ್ದಾರೆ. ಅವರ ಮತಾನುಸಾರ ವ್ಯಭಿಚಾರ ದೋಷವೇ.



नचोपादानातिरिक्त एकदेश एव नास्ति । पटादावुपादानतंत्वन्यस्य हस्तवितस्त्यादिपरिमाणस्यैकदेशस्यानुभवात् । विस्तृतं चैतदन्यत्र ।

नित्यस्य गगनादेरपि संयोगित्वेनैकदेशसाधनाच्च । अन्यथाकाशे पक्षिसंयोगतदत्यंताभावयोः आलोके त्रसरेणुसंयोगतदत्यंताभावयोः आत्मनि च सुखदुःखयोर्देशभेदेन प्रतीतिर्न स्यात् ।

एतेनैकदेशाभावेऽपि संयोगादेः स्वात्यंताभावसामानाधिकरण्यात्तथा धीरिति निरस्तम् । यत्र देशे संयोगस्तत्रैव तदभावप्रतीत्यापत्तेः।

''गौरनाद्यंतवती'' इत्यादिश्रुत्या अनादिनित्याया अपि प्रकृतेः सत्त्वरजस्तमोरूपैकदेशदर्शनाच्च । त्वन्मतेऽप्यनाद्यविद्याया उपादान-

त्वाय अनणुत्वे सति परिच्छिन्नत्वाय त्रिगुणत्वाय जीवन्मुक्तौ लेशानुवृत्त्यर्थं चैकदेशस्य वक्तव्यत्वाच्च ।

जीवानामपि 'द्रोणं बृहस्पतेर्भागं द्रौणिं रुद्रांशसंभवम् । दुर्वासाः शंकरस्यांश' इत्यादिनांशोक्तेश्च ।

''यस्यायुतायुतांशेऽपि विश्वशक्तिरवस्थिता ।
परब्रह्मस्वरूपस्य प्रणमामि तमव्ययम् ।।''
''विष्टभ्याहमिदं कृत्स्नमेकांशेन स्थितो जगत्''

इत्यादावीश्वरस्याप्यंशोक्तेश्च । नचायमौपाधिकोंऽशः । नचेदुपाधीति-न्यायेन स्वाभाविकांशाभावे तदयोगात् ।

एतेन सावयवत्वादिना भगवल्लोकादेरनित्यत्वसाधनमप्यपास्तम् ।

''अतो हि वैष्णवा लोका नित्यास्ते चेतनात्मकाः ।''
''तत्प्रसादात्परां शांतिं स्थानं प्राप्स्यसि शाश्वतम् ।।''

इत्याद्यागमविरोधात् ।

तस्मात्सगुणं साकारं च ब्रह्मेति ।

**उपादानातिरिक्तेति** ।। तथाच हेत्वभावान्नाकाशे व्यभिचार इति भावः ।। **विस्तृतं चैतदिति** ।। द्रव्यारब्धद्रव्यत्वं सावयवत्वं चेत् अकार्यत्ववादिनं प्रत्यसिद्धिः । मध्यमपरिमाणत्वं चेत् कार्यत्वं विनैव मध्यमीभूतपरिमाणाश्रयत्वे-नाप्युपपत्त्या अप्रयोजकत्वम् । प्रकृते असिद्धिश्चेति । अन्यत्र तर्कतांडवादौ एतच्च विस्तृतमित्यर्थः । गगनादिः प्रदेशविशेषवान् संयोगित्वात् घटवदित्यनुमानाच्च प्रदेशविशेषसिद्धिरित्याह— **नित्यस्येति** ।। नन्वत्र सोपादानकत्वमुपाधिरित्या-शंक्यानुकूलतर्कसत्त्वान्नायमुपाधिरित्याह— **अन्यथेति । दर्शनादिति** ।। ''सिता-सिता च रक्ता च सर्वकामदुघा विभोः'' इत्यादिवाक्यशेषे दर्शनादित्यर्थः ।। **उपादानत्वायेति** ।। एकस्यैकावच्छेदेनानेकाकारपरिणामस्य विरुद्धत्वादेकदेश

आवश्यक इति भावः ।। **अनणुत्वे सतीति** ।। परमाणौ परममहत्परिमाणे च व्यभिचारवारणाय विशिष्टोपादानम् ।

**नचेदुपाधीतीति** ।। नचेदुपाधिसंबंधः एकदेशोऽथ सर्वगः । एकदेशेऽनवस्था स्यात् सर्वगश्चेन्न भेदकः ।। इत्युपाधिखंडनोक्तन्यायेनेत्यर्थः ।।



**ನ ಚ ಉಪಾದಾನಾತಿರಿಕ್ತಃ ಏಕದೇಶ ಏವ ನಾಸ್ತಿ। ಪಟಾದೌ ಉಪಾದಾನ ತಂತ್ವನ್ಯಸ್ಯ ಹಸ್ತ ವಿತಸ್ತ್ಯಾದಿ ಪರಿಮಾಣಸ್ಯ ಏಕದೇಶಸ್ಯ ಅನುಭವಾತ್। ವಿಸ್ತೃತಂ ಚೈತದನ್ಯತ್ರ।**

'ಉಪಾದಾನಾತಿರಿಕ್ತವಾದ ಏಕದೇಶವೆಂಬುದೇ ಇಲ್ಲ. ಅದರಿಂದ ಸಾವಯವತ್ವ ಹೇತುವಿಗೆ ಆಕಾಶ–ಆತ್ಮರಲ್ಲಿ ವ್ಯಭಿಚಾರವಿಲ್ಲ' ಎಂದರೆ ಅದು ಸರಿಯಲ್ಲ. ಘಟಾದಿಗಳಲ್ಲಿ ಉಪಾದಾನವಾದ ತಂತ್ವಾದಿಗಳಂತೆ ಉಪಾದಾನವಲ್ಲದ ಮೊಳ ಗೇಣು ಮುಂತಾದ ಪರಿಮಾಣದ ಭಾಗಗಳು ಅನುಭವಸಿದ್ಧವಾಗಿ ಇವೆ. ಇವೂ ಅವಯವಗಳೇ.

ಇದರ ಬಗ್ಗೆ ಹೆಚ್ಚಿನ ವಿವರಣೆಗಳು ತರ್ಕತಾಂಡವಾದಿಗಳಲ್ಲಿ ಇವೆ. ಉದಾ: ದ್ರವ್ಯಾರಬ್ಧದ್ರವ್ಯತ್ವವು ಸಾವಯವತ್ವವೆಂದರೆ ಅದನ್ನು ಈಶ್ವರಶರೀರದಲ್ಲಿ ನಾವು ಒಪ್ಪಿಲ್ಲವಾದ್ದರಿಂದ ಅಸಿದ್ಧಿದೋಷ. ಮಧ್ಯಮ ಪರಿಮಾಣವತ್ವವನ್ನೇ ಅನಿತ್ಯತ್ವಕ್ಕೆ ಹೇತು ಮಾಡುವೆವೆಂದರೆ ಹೇತು ಅಪ್ರಯೋಜಕ. ಜನ್ಯವಾಗದಿದ್ದರೂ ಮಧ್ಯಮಪರಿಮಾಣವತ್ತ್ವವು ಕೂಡಬಹುದು ಮತ್ತು ಈಶ್ವರಶರೀರ ಪರಮಮಹತ್ ಪರಿಮಾಣಯುಕ್ತವಾದ್ದರಿಂದ ಮಧ್ಯಮಪರಿಮಾಣವತ್ತ್ವ ಹೇತುವಿಗೆ ಅಸಿದ್ಧಿದೋಷವೂ ಇದೆ.

**ನಿತ್ಯಸ್ಯ ಗಗನಾದೇರಪಿ ಸಂಯೋಗಿತ್ವೇನ ಏಕದೇಶಸಾಧನಾಚ್ಚ।**

ನಿತ್ಯವಾದ ಆಕಾಶಾದಿಗಳಲ್ಲಿಯೂ ಕೂಡ ಏಕದೇಶವಿದೆ. ಈ ಅರ್ಥದಲ್ಲಿ ಅವೂ ಸಾವಯವವೆ. ಆದ್ದರಿಂದ ಸಾವಯವತ್ವ ಹೇತುವಿಗೆ ಅಲ್ಲಿ ವ್ಯಭಿಚಾರವಿದೆ. ಆಕಾಶಾದಿಗಳಲ್ಲಿ ಏಕದೇಶವನ್ನು ಅದ್ವೈತಿ ಒಪ್ಪದಿದ್ದರೆ ಅವನಿಗೆ ಸಂಯೋಗಿತ್ವ ಹೇತುವಿನಿಂದ ಅದನ್ನು ಸಾಧನೆ ಮಾಡಿಕೊಡುತ್ತೇವೆ.

ಘಟಾದಿಗಳ ಸಂಯೋಗ ಆಕಾಶಾದಿಗಳಲ್ಲಿ ಆಗುತ್ತದೆ. ಆಗ ಆ ಸಂಯೋಗವು ಆಕಾಶಾದಿಗಳಲ್ಲಿ ಎಲ್ಲೆಡೆ ಪೂರ್ತಿ ವ್ಯಾಪಿಸಿರುವುದಿಲ್ಲ ಎಂಬುದು ಅನುಭವಸಿದ್ಧವಾಗಿದೆ. ಅಂದರೆ, ಆಕಾಶದಲ್ಲಿ ಘಟಾದಿಪರಿಮಾಣದಷ್ಟೇ ಇರುವ ಭಾಗಗಳಿವೆ. ಆ ಭಾಗಗಳಲ್ಲಿ ಮಾತ್ರ ಘಟಾದಿ ಸಂಯೋಗಗಳು ವ್ಯಾಪಿಸಿರುತ್ತವೆ.

ಘಟಾದಿಗಳಲ್ಲಿ ಬೇರೆ ವಸ್ತುಗಳ ಸಂಯೋಗ ಘಟವನ್ನು ಪೂರ್ತಿವ್ಯಾಪಿಸಿರುವುದಿಲ್ಲ. ಅವುಗಳ ಭಾಗಗಳಲ್ಲಿ ಮಾತ್ರ ವ್ಯಾಪಿಸಿರುತ್ತವೆ. ಹಾಗೇ ಆಕಾಶಾದಿಗಳಲ್ಲಿಯೂ ಭಾಗಗಳಿವೆ. ಅವುಗಳಲ್ಲಿ ಮಾತ್ರ ಘಟಾದಿಸಂಯೋಗಗಳು ವ್ಯಾಪಿಸಿರುತ್ತವೆ.

ವೃಕ್ಷದಲ್ಲಿ ಕಪಿಸಂಯೋಗವೂ ಕೂಡ ಹಾಗೇ ಶಾಖಾರೂಪಭಾಗಗಳಲ್ಲಿರುತ್ತದೆ. ವೃಕ್ಷದಲ್ಲಿ ಶಾಖಾದಿಗಳು ಕಪಿಸಂಯೋಗಕ್ಕೆ ಅವಚ್ಛೇದಕ ಎನ್ನುತ್ತೇವೆ. ಹಾಗೇ ಆಕಾಶಾದಿಗಳಲ್ಲಿ ಘಟಸಂಯೋಗಗಳಿಗೂ ಆಯಾ ಭಾಗಗಳು ಅವಚ್ಛೇದಕವೆನ್ನಬೇಕು. ಹೀಗೆ ಸಂಯೋಗಿತ್ವ ಹೇತುವಿನಿಂದ ಸಂಯೋಗಾವಚ್ಛೇದಕತ್ವೇನ ಆಕಾಶಾದಿಗಳಲ್ಲಿ ಏಕದೇಶಗಳು ಸಿದ್ಧವಾಗುತ್ತವೆ.

**ಅನ್ಯಥಾ ಆಕಾಶೇ ಪಕ್ಷಿಸಂಯೋಗ ತದತ್ಯಂತಾಭಾವಯೋಃ ದೇಶಭೇದೇನ ಪ್ರತೀತಿಃ ನ ಸ್ಯಾತ್ ।**

'ಆಕಾಶದಲ್ಲಿ ಸಂಯೋಗಿತ್ವಹೇತುವಿನಿಂದ ಏಕದೇಶವನ್ನು ಸಾಧನೆ ಮಾಡುವುದು ಶಕ್ಯವಿಲ್ಲ. ಏಕೆಂದರೆ ಹೇತುವಿಗೆ ಸೋಪಾದಾನಕತ್ವವೆಂಬ ಉಪಾಧಿ ಇದೆ. ಅದು ಘಟಾದಿಗಳಲ್ಲಿ ಏಕದೇಶಗಳಿಗೆ ವ್ಯಾಪಕವಾಗಿ ಕಂಡಿದೆ. ಏಕದೇಶವಿರುವಲ್ಲೆಲ್ಲ ಘಟಾದಿಗಳಲ್ಲಿ ಸೋಪಾದಾನಕತ್ವ ಕಂಡಿದೆ. ಪಕ್ಷವಾದ ಆಕಾಶದಲ್ಲಿ ವ್ಯಾಪಕವಾದ ಸೋಪಾದಾನಕತ್ವವಿಲ್ಲ. ಅದರಿಂದ ವ್ಯಾಪ್ಯವಾದ ಏಕದೇಶವೂ ಇಲ್ಲ' ಎಂದು ಅದ್ವೈತಿ ಹೇಳಿದರೆ ಸಂಯೋಗಿತ್ವ ಹೇತುವಿಗೆ ಅನುಕೂಲತರ್ಕವಿರುವುದರಿಂದ ಪಕ್ಷವಾದ ಆಕಾಶದಲ್ಲಿ ಏಕದೇಶ ಸಿದ್ಧವಾಗುತ್ತದೆ. ಅದರಿಂದ ಪಕ್ಷದಲ್ಲಿಯೆ ಉಪಾಧಿಯಾದ ಸೋಪಾದಾನಕತ್ವಕ್ಕೆ ಸಾಧ್ಯವಾದ ಏಕದೇಶವ್ಯಾಪಕತ್ವಭಂಗ. 'ಪಕ್ಷವಾದ ಆಕಾಶದಲ್ಲಿ ಸಂಯೋಗಿತ್ವ ಹೇತುವಿನಿಂದ ಏಕದೇಶ ಸಿದ್ಧವಾಗಿದೆ. ಅಲ್ಲಿ ಸೋಪಾದಾನಕತ್ವವಿಲ್ಲ' ಎಂದು.

ಅನುಕೂಲತರ್ಕ ಹೇಗೆ ಎಂದರೆ, ಆಕಾಶದಲ್ಲಿ ಪಕ್ಷಿಸಂಯೋಗವು ಮತ್ತು ಅದರ ಅಂತ್ಯಂತಾಭಾವವು ಬೇರೆ ಬೇರೆ ಪ್ರದೇಶಗಳಲ್ಲಿ ಪ್ರತೀತವಾಗುತ್ತಿದೆ. ಆಕಾಶದಲ್ಲಿ ದೇಶಭೇದವಿಲ್ಲ ಎಂದರೆ ಈ ಪ್ರತೀತಿ ಬರಲಾರದು. ವೃಕ್ಷದಲ್ಲಿ ಕಪಿ ಸಂಯೋಗ-ಕಪಿಸಂಯೋಗಾಭಾವಗಳಿಗೆ ಅವಚ್ಛೇದಕವಾಗಿ ಅಗ್ರ-ಮೂಲಗಳೆಂಬ ಬೇರೆಬೇರೆ ಅವಯವಗಳಿವೆ. ಆಕಾಶದಲ್ಲಿ ಘಟಾದಿ ಸಂಯೋಗ ತದಭಾವಗಳಿಗೆ ಅವಚ್ಛೇದಕವಾಗಿ ಅವಯವಗಳಿಲ್ಲದ್ದರಿಂದ, ಅವಯವವ್ಯತಿರಿಕ್ತವಾದ ಏಕದೇಶಗಳೇ, ಪ್ರದೇಶಭೇದಗಳೇ, ಅವಚ್ಛೇದಕವಾಗಿವೆ ಎನ್ನಬೇಕಾಗುತ್ತದೆ. ಹೀಗೆ ಏಕದೇಶಗಳು ಸಿದ್ಧವಾಗುತ್ತವೆ. ಇದು ಅನುಕೂಲತರ್ಕ.

**ಆಲೋಕೇ ತ್ರಸರೇಣು ಸಂಯೋಗ ತದತ್ಯಂತಾಭಾವಯೋಃ ದೇಶಭೇದೇನ ಪ್ರತೀತಿರ್ನ ಸ್ಯಾತ್ ।**

ಆಕಾಶದಲ್ಲಿ ಪ್ರದೇಶ ಭೇದವನ್ನೇ ಒಪ್ಪದಿರುವ ಅದ್ವೈತಿಯು 'ಪ್ರದೇಶಭೇದೇನ ಪಕ್ಷಿಸಂಯೋಗ ತದಭಾವಪ್ರತೀತಿಗಳನ್ನೂ ನಾನು ಒಪ್ಪುವುದಿಲ್ಲ' ಎನ್ನಬಹುದು.

ಹಾಗಾದರೆ ಸಂಯೋಗಕ್ಕೆ ಅವ್ಯಾಪ್ಯವೃತ್ತಿತ್ವವನ್ನು ಅಂದರೆ ದೇಶಭೇದಾವಚ್ಛಿನ್ನತ್ವವನ್ನು ಹೇಗೆ ಕೂಡಿಸುವಿ? ಎಂದರೆ, ಅವನು ಹೇಳಬಹುದು—'ಆಕಾಶದಲ್ಲಿ ದೇಶಭೇದವಿಲ್ಲದಿದ್ದರೂ ಪಕ್ಷಿಯ ಶರೀರದಲ್ಲಿ ಅವಯವಭೇದವಿರುವುದರಿಂದ ಸಂಯೋಗವು ಪಕ್ಷಿಶರೀರಾವಯವಾವಚ್ಛೇದೇನ ಇದೆ ಎಂದು ಅವ್ಯಾಪ್ಯವೃತ್ತಿತ್ವವನ್ನು ಕೂಡಿಸುತ್ತೇನೆ' ಎಂದು. ಅದಕ್ಕೆ 'ಆಲೋಕೇ ತ್ರಸರೇಣುಸಂಯೋಗ ಮತ್ತು ತದತ್ಯಂತಾಭಾವಗಳಿಗೆ ಅವ್ಯಾಪ್ಯವೃತ್ತಿತ್ವವನ್ನು ಕೂಡಿಸು' ಎನ್ನಬೇಕು.

ಬಿಸಿಲುಗೋಲಿನಲ್ಲಿ ಕಾಣುವ ಅತಿಸೂಕ್ಷ್ಮ ವಸ್ತು ತ್ರಸರೇಣು, ತ್ರ್ಯಣುಕ. ಅದರಲ್ಲಿ ಕಾಣುವ ಆಲೋಕಸಂಯೋಗಕ್ಕೆ ತ್ರಸರೇಣುವಿನ ಅವಯವವಾದ ದ್ವ್ಯಣುಕವು ಅವಚ್ಛೇದಕವೆನ್ನಲಾಗದು. ದ್ವ್ಯಣುಕ ಕಣ್ಣಿಗೆ ಗೋಚರವಾಗುವುದಿಲ್ಲ, ತ್ರ್ಯಣುಕ ಮಾತ್ರ ಕಾಣುತ್ತದೆ. ಹೀಗಾಗಿ ಆಲೋಕದಲ್ಲಿ ಕಣ್ಣಿಗೆ ಕಾಣುವ ತ್ರ್ಯಣುಕಸಂಯೋಗಕ್ಕೆ ಕಣ್ಣಿಗೆ ಕಾಣುವ ಅವಚ್ಛೇದಕ ಬೇಕು. ಅದು ಅತೀಂದ್ರಿಯವಾದ ದ್ವ್ಯಣುಕಸಾಧ್ಯವಲ್ಲದ್ದರಿಂದ ಆಲೋಕದಲ್ಲಿಯೇ ಕಣ್ಣಿಗೆ ಕಾಣುವ ದೇಶಭೇದವನ್ನು ಅವಚ್ಛೇದಕವೆನ್ನಬೇಕು. ಹೀಗೆ ಆಲೋಕದಲ್ಲಿ ಪ್ರದೇಶಭೇದಸಿದ್ಧಿ. ಅತೀಂದ್ರಿಯ ದ್ವ್ಯಣುಕವನ್ನೇ ಅವಚ್ಛೇದಕ ಎಂದರೆ, ಅದರಿಂದ ಅವಚ್ಛಿನ್ನವಾದ ತ್ರ್ಯಣುಕಸಂಯೋಗವೂ ಆಲೋಕದಲ್ಲಿ ಕಾಣಿಸದೇ ಹೋದೀತು.

**ಆತ್ಮನಿ ಚ ಸುಖದುಃಖಯೋಃ ದೇಶಭೇದೇನ ಪ್ರತೀತಿರ್ನ ಸ್ಯಾತ್ ।**

'ಆಕಾಶ ಆಲೋಕಗಳಲ್ಲಿ ಸಾವಯವತ್ವ ಅನಿತ್ಯತ್ವಗಳನ್ನು ಒಪ್ಪಿದ್ದೇನೆ, ಸಂಯೋಗಿತ್ವ ಹೇತುವಿನಿಂದ ನೀವು ಸಾಧನೆ ಮಾಡಿದರೆ ಇಷ್ಟಾಪತ್ತಿ' ಎಂದು ಸಿದ್ಧಿಕಾರ ಹೇಳುತ್ತಾನೆ. ಅದಕ್ಕೆ, 'ಆತ್ಮನಲ್ಲಿ ಸುಖದುಃಖಗಳು ದೇಶಭೇದೇನ ಅನುಭವದಲ್ಲಿ ಕಾಣುತ್ತವೆ, ಅದರಿಂದ ದೇಶಭೇದವನ್ನು ಒಪ್ಪಲೇಬೇಕು, ಆಗ ಅಲ್ಲಿ ಅನಿತ್ಯತ್ವವಿಲ್ಲದಿದ್ದರಿಂದ ಸಾವಯವತ್ವ ಹೇತುವಿಗೆ ವ್ಯಭಿಚಾರ' ಎಂದು ಹೇಳಬೇಕು.

**ಏತೇನ ಏಕದೇಶಾಭಾವೇಽಪಿ ಸಂಯೋಗಾದೇಃ ಸ್ವಾತ್ಯಂತಾಭಾವಸಾಮಾನಾಧಿಕರಣ್ಯಾತ್ ತಥಾ ಧೀರಿತಿ ನಿರಸ್ತಂ। ಯತ್ರ ದೇಶೇ ಸಂಯೋಗಃ ತತ್ರೈವ ತದಭಾವ ಪ್ರತೀತ್ಯಾಪತ್ತೇಃ ।**

'ಆಕಾಶದಲ್ಲಿ ಏಕದೇಶವಿಲ್ಲದಿದ್ದರೂ ಸಂಯೋಗವು ಅವ್ಯಾಪ್ಯವೃತ್ತಿಯಾದ್ದರಿಂದ, ತನ್ನ ಅಭಾವದೊಂದಿಗೆ ತಾನಿರುತ್ತದೆಯಾದ್ದರಿಂದ 'ಇಲ್ಲಿ ಸಂಯೋಗವಿದೆ, ಇಲ್ಲಿ ಇಲ್ಲ' ಎಂಬ ಪ್ರತೀತಿ ಕೊಡುತ್ತದೆ. ಅದಕ್ಕೆ ಆಕಾಶದಲ್ಲಿ ದೇಶಭೇದವನ್ನು ಒಪ್ಪಬೇಕಾಗಿಲ್ಲ. ಸಾವಯವತ್ವವಿಲ್ಲದ್ದರಿಂದ ಆಕಾಶದಲ್ಲಿ ಅದಕ್ಕೆ ಅನಿತ್ಯತ್ವದಿಂದ ವ್ಯಭಿಚಾರವಿಲ್ಲ' ಎಂದು ಅದ್ವೈತಿ ಹೇಳಿದರೆ, ಅತಿಪ್ರಸಕ್ತಿಯನ್ನು ಹೀಗೆ ಹೇಳಬೇಕು—

'ಎಲ್ಲಿ ಸಂಯೋಗ ಪ್ರತೀತಿ ಇರುವುದೋ ಅಲ್ಲಿಯೇ ಸಂಯೋಗಾಭಾವ ಪ್ರತೀತಿಯೂ

ಬಂದೀತು' ಎಂದು. ಭಾವಾಭಾವಗಳಿಗೆ ವಿರೋಧವಿರುವುದರಿಂದ ಅವು ಒಂದು ವಸ್ತುವಿನಲ್ಲಿರ ಬೇಕಾದರೆ ಪ್ರದೇಶಭೇದವನ್ನು ಅದರಲ್ಲಿ ಒಪ್ಪಲೇಬೇಕು. ಇಲ್ಲದಿದ್ದರೆ ಇಂಥ ಪ್ರತೀತಿಯನ್ನು ಸಂಯೋಗಕ್ಕೆ ಅವ್ಯಾಪ್ಯವೃತ್ತಿತ್ವವನ್ನು ಒಪ್ಪುವ ತಾರ್ಕಿಕರೂ ಒಪ್ಪಿಲ್ಲ. ವೃಕ್ಷದಲ್ಲಿ ಅಗ್ರಭಾಗದಲ್ಲಿ ಕಪಿಸಂಯೋಗವಿದೆ, 'ಅದೇ ಅಗ್ರಭಾಗಪ್ರದೇಶದಲ್ಲಿ ಕಪಿಸಂಯೋಗಾಭಾವವೂ ಇದೆ' ಎಂದು ಪ್ರತೀತಿಯನ್ನು ಅವರು ಒಪ್ಪುವುದಿಲ್ಲ.

**ಗೌರನಾದ್ಯಂತವತೀ ಇತ್ಯಾದಿ ಶ್ರುತ್ಯಾ ಅನಾದಿನಿತ್ಯಾಯಾ ಅಪಿ ಪ್ರಕೃತೇಃ ಸತ್ತ್ವ ರಜಸ್ತಮೋರೂಪ-ಏಕದೇಶ ದರ್ಶನಾಚ್ಚ ।**

ಗೌರನಾದ್ಯಂತವತೀ ಸಾ ಜನಿತ್ರೀ ಭೂತ ಭಾವಿನೀ ।

ಸಿತಾಽಸಿತಾ ಚ ರಕ್ತಾ ಚ ಸರ್ವಕಾಮದುಘಾ ವಿಭೋಃ ॥ (ಮಂತ್ರಿಕೋಪನಿಷತ್)

'ಪ್ರಕೃತಿಯು ಆದ್ಯಂತರಹಿತ. ಎಲ್ಲಕ್ಕೂ ಮೂಲವಾದ ಉಪಾದಾನ. ಬಿಳಿ ಕಪ್ಪು ಕೆಂಪು ಬಣ್ಣಗಳುಳ್ಳದ್ದು' ಎಂದು ಶ್ರುತಿ ಇರುವುದರಿಂದ, ಅನಾದಿ ನಿತ್ಯವಾದ ಪ್ರಕೃತಿಯಲ್ಲಿಯೂ ಕೂಡ ಬಿಳಿ-ಕಪ್ಪು-ಕೆಂಪು ಬಣ್ಣದ ಸತ್ತ್ವ-ತಮಸ್-ರಜಸ್‌ಗಳೆಂಬ ಮೂರು ಭಾಗಗಳಿವೆ ಎನ್ನುವುದು ಸಿದ್ಧವಾಗಿದೆ.

**ತ್ವನ್ಮತೇಽಪಿ ಅನಾದ್ಯವಿದ್ಯಾಯಾ ಉಪಾದಾನತ್ವಾಯ, ಅನಣುತ್ವೇ ಸತಿ ಪರಿಚ್ಛಿನ್ನತ್ವಾಯ, ತ್ರಿಗುಣತ್ವಾಯ, ಜೀವನ್ಮುಕ್ತೌ ಲೇಶಾನುವೃತ್ತ್ಯರ್ಥಂ ಚ ಏಕದೇಶಸ್ಯ ವಕ್ತವ್ಯತ್ವಾಚ್ಚ ।**

ಅದ್ವೈತಮತದಲ್ಲಿಯೂ ಅನಾದಿಯಾದ ಒಂದು ಅವಿದ್ಯೆಯಲ್ಲಿ ಅದು ಅನೇಕ ವಸ್ತುಗಳಿಗೆ ಉಪಾದಾನವೆನಿಸಲು ಅನೇಕ ಭಾಗಗಳು ಅವಶ್ಯಬೇಕು. ಇಲ್ಲದಿದ್ದರೆ ಒಂದು ಮೂಲವಸ್ತುವಿನಲ್ಲಿ ಒಂದೇಕಡೆ ಅನೇಕಾಕಾರವಾದ ಪರಿಣಾಮ ಉಂಟಾಗಲಾರದು. ಬೇರೆಬೇರೆ ಭಾಗಗಳಲ್ಲಿ ಬೇರೆಬೇರೆ ಪರಿಣಾಮಗಳಾಗಬೇಕು.

ಮತ್ತು ಪರಮಾಣು ಮತ್ತು ಪರಮಮಹತ್ತುಗಳು ನಿರಂಶ. ಇವುಗಳಿಂದ ವ್ಯತಿರಿಕ್ತವಾದ ಮಧ್ಯಮ ಪರಿಮಾಣದ ವಸ್ತು ಅಂಶವಿಭಾಗಉಳ್ಳದ್ದೆಂದು ನಿಯಮ. ಅವಿದ್ಯೆಯೂ ಹಾಗೇ ಅನಣು ಮತ್ತು ದೇಶತಃ ಪರಿಚ್ಛಿನ್ನವಾದ ಪರಿಮಾಣದ್ದು ಎಂದಮೇಲೆ ಅದರಲ್ಲಿಯೂ ಅಂಶಭೇದ ವಿರಲೇಬೇಕು.

ಪ್ರಕೃತಿಯಲ್ಲಿ ಹೇಗೆ ಮೂರು ಗುಣಗಳುಳ್ಳ ಭಾಗಗಳು ಬೇರೆಬೇರೆ ಇರುತ್ತವೋ ಹಾಗೇ ಅವಿದ್ಯೆಯಲ್ಲಿಯೂ ಮೂರು ಗುಣಗಳು ಮೂರು ಬೇರೆಬೇರೆ ಭಾಗಗಳಲ್ಲಿ ಇರಬೇಕು.

ಜೀವನ್ಮುಕ್ತ್ಯವಸ್ಥೆಯಲ್ಲಿ ಅವಿದ್ಯೆಯು ಪೂರ್ತಿಯಾಗಿ ಇರುವುದಿಲ್ಲ. ಪೂರ್ತಿ ಇದ್ದರೆ ಅದು

ಜೀವನ್ಮುಕ್ತಿಯಲ್ಲ, ಸಂಸಾರವೇ ಆಗಿರುತ್ತದೆ. ಅದಕ್ಕೆ ಲೇಶ, ಅಂದರೆ ಒಂದು ಸಣ್ಣಭಾಗ ಮಾತ್ರ ಜೀವನ್ಮುಕ್ತನಲ್ಲಿ ಮುಕ್ತಿಪರ್ಯಂತ ಅಂಟಿಕೊಂಡಿರುತ್ತದೆ ಎಂದು ಅದ್ವೈತಮತ.

ಹೀಗಾಗಿ ಅನಾದಿ ಅವಿದ್ಯೆಯಲ್ಲಿ ಭಾಗಗಳನ್ನು ಒಪ್ಪಿದ್ದಾರೆ. ಅನಾದಿಪದಾರ್ಥವಾದ ಭಗವಂತನ ಶರೀರದಲ್ಲಿ ಉಪಾದಾನಾತಿರಿಕ್ತ ಅವಯವವನ್ನು ನಾವು ಒಪ್ಪಿದ್ದು ಅನುಚಿತವಲ್ಲ.

**ಜೀವಾನಾಮಪಿ—**

**'ದ್ರೋಣಂ ಬೃಹಸ್ಪತೇರ್ಭಾಗಂ ದ್ರೌಣಿಂ ರುದ್ರಾಂಶ ಸಂಭವಂ।'**

**'ದುರ್ವಾಸಾಃ ಶಂಕರಸ್ಯಾಂಶಃ'**

**ಇತ್ಯಾದಿನಾ ಅಂಶೋಕ್ತೇಶ್ಚ।**

**ಯಸ್ಯಾಯುತಾಯುತಾಂಶೇಽಪಿ ವಿಶ್ವಶಕ್ತಿರವಸ್ಥಿತಾ ।**
**ಪರಬ್ರಹ್ಮಸ್ವರೂಪಸ್ಯ ಪ್ರಣಮಾಮಿ ತಮವ್ಯಯಂ ॥**

**'ವಿಷ್ಟಭ್ಯಾಹಮಿದಂ ಕೃತ್ಸ್ನಂ ಏಕಾಂಶೇನ ಸ್ಥಿತೋ ಜಗತ್'**
**ಇತ್ಯಾದೌ ಈಶ್ವರಸ್ಯಾಪಿ ಅಂಶೋಕ್ತೇಶ್ಚ ।**

ಜೀವರಲ್ಲಿಯೂ ಕೂಡ ಅಂಶಭೇದ ಉಕ್ತವಾಗಿದೆ—'ದ್ರೋಣನು ಬೃಹಸ್ಪತಿಯ ಅಂಶ.' 'ಅಶ್ವತ್ಥಾಮನು ರುದ್ರಾಂಶದಿಂದ ಜನಿಸಿದವ.' 'ದುರ್ವಾಸನೂ ಶಂಕರನ ಅಂಶ' ಎಂದು ಮುಂತಾಗಿ ಹೇಳಿದೆ. ಪರಮಾತ್ಮನಲ್ಲಿಯೂ ಅಂಶಭೇದ ಉಕ್ತವಾಗಿದೆ—ಯಾರ ಹತ್ತುಸಾವಿರದ ಹತ್ತುಸಾವಿರದೊಂದನೇ ಅಂಶದಲ್ಲಿಯೂ ಕೂಡ ಅನಂತಶಕ್ತಿ ಇರುವುದೋ ಅಂಥ ಪರಬ್ರಹ್ಮಸ್ವರೂಪನಾದ ನಾಶರಹಿತನಾದ ಪರಮಾತ್ಮನನ್ನು ನಮಿಸುವೆನು'. 'ಇಡೀ ಪ್ರಪಂಚವನ್ನು ನಾನು ನನ್ನ ಒಂದು ಅಂಶದಿಂದ ವ್ಯಾಪಿಸಿದ್ದೇನೆ' ಎಂದು ಗೀತೆಯಲ್ಲಿ ಶ್ರೀಕೃಷ್ಣನು ಹೇಳುತ್ತಾನೆ.

**ನಾಯಮೌಪಾಧಿಕೋಽಂಶಃ। ನ ಚೇದುಪಾಧೀತಿ ನ್ಯಾಯೇನ ಸ್ವಾಭಾವಿಕಾಂಶಾಭಾವೇ ತದಯೋಗಾತ್।**

ಪರಮಾತ್ಮನ ಶರೀರದಲ್ಲಿ ಅಂಶಗಳು ಔಪಾಧಿಕವಲ್ಲ.

ನ ಚೇದುಪಾಧಿಸಂಬಂಧ ಏಕದೇಶೇಽಥ ಸರ್ವಗಃ
ಏಕದೇಶೇಽನವಸ್ಥಾ ಸ್ಯಾತ್ ಸರ್ವಗಶ್ಚೇನ್ನ ಭೇದಕಃ

ಎಂದು ಉಪಾಧಿಖಂಡನೋಕ್ತ ನ್ಯಾಯದಿಂದ, ಸ್ವಾಭಾವಿಕ ಅಂಶಭೇದವಿಲ್ಲದಿದ್ದರೆ ಉಪಾಧಿ ಸಂಬಂಧದಿಂದಲೂ ಅಂಶಭೇದ ಉಂಟಾಗಲಾರದು.

ಮೊದಲಿಗೇ ಸ್ವಾಭಾವಿಕವಾಗಿ ಅಂಶಭೇದವಿಲ್ಲದಿದ್ದಲ್ಲಿ ಉಪಾಧಿಯು, ಔಪಾಧಿಕವಾಗಿ ಬೇರ್ಪಟ್ಟ ಒಂದು ಅಂಶದಲ್ಲಿಯೇ ಸಂಬಂಧಿಸಬೇಕು. ಆ ಔಪಾಧಿಕಭೇದವೂ ಕೂಡ ಉಪಾಧಿ

ಯಿಂದಾಗಿರುವುದರಿಂದ ಅದರ ಸಂಬಂಧಕ್ಕೂ ಔಪಾಧಿಕ ಅಂಶಭೇದ ಬೇಕು. ಹೀಗೆ ಅನವಸ್ಥೆ. ಉಪಾಧಿಯು ಅಂಶಭೇದವಿಲ್ಲದೆ ಇಡೀ ವಸ್ತುವಿಗೇ ಸಂಬಂಧಿಸಿದರೆ ಇಡೀ ವಸ್ತುವೇ ಔಪಾಧಿಕವಾಗಬೇಕಾದೀತು; ಹೀಗಾಗಿ ಔಪಾಧಿಕ ಅಂಶಭೇದ ಉಂಟಾಗಲಾರದು.

**ಏತೇನ ಸಾವಯವತ್ವಾದಿನಾ ಭಗವಲ್ಲೋಕಾದೇಃ ಅನಿತ್ಯತ್ವ ಸಾಧನಮಪ್ಯಪಾಸ್ತಂ ।**
**'ಅತೋ ಹಿ ವೈಷ್ಣವಾ ಲೋಕಾ ನಿತ್ಯಾಸ್ತೇ ಚೇತನಾತ್ಮಕಾಃ ।'**
**'ತತ್ಪ್ರಸಾದಾತ್ ಪರಾಂ ಶಾಂತಿಂ ಸ್ಥಾನಂ ಪ್ರಾಪ್ಸ್ಯಸಿ ಶಾಶ್ವತಂ'**
**ಇತ್ಯಾದ್ಯಾಗಮ ವಿರೋಧಾತ್ ।**
**ತಸ್ಮಾತ್ ಸಗುಣಂ ಸಾಕಾರಂ ಚ ಬ್ರಹ್ಮೇತಿ ।**

ಹೀಗೆಯೇ ಸಾವಯವತ್ವಾದಿ ಹೇತುಗಳಿಂದ ವಿಷ್ಣುಲೋಕಾದಿಗಳಿಗೆ ಅನಿತ್ಯತ್ವಸಾಧನೆಯನ್ನೂ ನಿರಾಕರಿಸಬೇಕು. ಏಕೆಂದರೆ,

'ಶ್ರೀರೇವ ಲೋಕರೂಪೇಣ ವಿಷ್ಣೋಸ್ತಿಷ್ಠತಿ ಸರ್ವದಾ ।
ಅತೋ ಹಿ ವೈಷ್ಣವಾ ಲೋಕಾ ನಿತ್ಯಾಸ್ತೇ ಚೇತನಾತ್ಮಕಾಃ ॥'

'ಲಕ್ಷ್ಮೀದೇವಿ ತಾನೇ ಪರಮಾತ್ಮನಿಗೆ ಲೋಕಗಳ ರೂಪದಿಂದ ಇರುತ್ತಾಳೆ. ಆದರಿಂದ ವಿಷ್ಣುಲೋಕಗಳು ನಿತ್ಯ, ಚೇತನ ರೂಪವಾದವುಗಳು' ಎಂದು ಆಗ್ನೇಯ ಪುರಾಣವಚನವಿದೆ. (ಗೀತಾ ತಾತ್ಪರ್ಯ 18.62)

'ತಮೇವ ಶರಣಂ ಗಚ್ಛ ಸರ್ವಭಾವೇನ ಭಾರತ ।
ತತ್ಪ್ರಸಾದಾತ್ ಪರಾಂ ಶಾಂತಿಂ ಸ್ಥಾನಂ ಪ್ರಾಪ್ಸ್ಯಸಿ ಶಾಶ್ವತಂ' (ಗೀತಾ.18.62)

'ಅರ್ಜುನ, ಆ ಭಗವಂತನನ್ನೇ ಎಲ್ಲ ಪ್ರಕಾರಗಳಿಂದಲೂ ಶರಣುಹೊಂದು. ಅವನ ಅನುಗ್ರಹದಿಂದ ನೀನು ಉತ್ತಮವಾದ ಭಗವನ್ನಿಷ್ಠೆಯನ್ನೂ ಶಾಶ್ವತವಾದ ವೈಕುಂಠಾದಿ ಲೋಕವನ್ನೂ ಹೊಂದುವಿ' ಎಂದು ಗೀತಾವಚನವಿದೆ.

ಇತ್ಯಾದಿ ಆಗಮ ವಿರೋಧವಿರುವುದರಿಂದ ವಿಷ್ಣುಲೋಕಾದಿಗಳಿಗೆ ಅನಿತ್ಯತ್ವವನ್ನು ಹೇಳಬಾರದು.

ಆದರಿಂದ ಬ್ರಹ್ಮವು ಸಗುಣವೂ ಸಾಕಾರವೂ ಆಗಿದೆ.

**ಇಲ್ಲಿಗೆ ನಿರಾಕಾರಬ್ರಹ್ಮನಿರಾಸ ಮುಗಿಯಿತು.**

## ಪರಮತೇ ಬ್ರಹ್ಮಣೋ ಜ್ಞಾನತ್ವ-ಆನಂದತ್ವ-ಅದ್ವಿತೀಯತ್ವ-ನಿತ್ಯತ್ವ-ಸಾಕ್ಷಿತ್ವ ಭಂಗಃ

यच्चेदमुच्यते ब्रह्म ज्ञानानंदात्मकमद्वितीयं नित्यं साक्षिरूपं च, नतु ज्ञानादिगुणकमिति, तत्र परमते ज्ञानत्वं किं जातिविशेषः साक्षाव्द्यवहारजनकत्वं वा जडविरोधित्वं वा जडव्यावृत्तत्वं वा अज्ञानविरोधित्वं वा अर्थप्रकाशात्मकत्वं बा परांगीकृतं वा ।

नाद्यः । वृत्तिप्रतिबिंबितज्ञानाभासेषु तत्संभवेऽप्यखंडे स्वरूपज्ञाने तदयोगात् ।

न द्वितीयः । फलोपधानस्य सुषुप्त्यादावभावात् । शक्त्यादिरूपस्वरूपयोग्यताया अपि मुक्तावभावात् ।

न तृतीयः । स्वरूपज्ञानस्य नित्यत्वेन तद्विरुद्धस्य जडस्य नित्यनिवृत्त्यापातात् ।

न चतुर्थः । ''सत्यं ज्ञानम्'' इत्यत्र जडव्यावृत्तेरार्थिकत्वोक्त्ययोगात् । किंच जडत्वस्याज्ञातृत्वादिरूपत्वेऽसंभवः। अज्ञानत्वरूपत्वे त्वन्योन्याश्रयः ।

न पंचमः । अज्ञानत्य नित्यनिवृत्त्यापातात् । द्वितीयादिषु ज्ञानत्वस्य कारणत्वादिवत् व्यवहाराद्यन्यतमोपाधिकत्वेन ब्रह्मणो ज्ञानस्वभावत्वायोगाच्च ।

न षष्ठः । मोक्षे अन्यार्थोल्लेखाभावात् । स्वरूपोल्लेखे च स्वविषयत्वापातात् ।

न सप्तमः । परांगीकृताया जातेर्व्यवहारहेतुत्वादेर्वा त्वन्मतेऽसंभवात् । एवं च

**अर्थप्रकाशरूपत्वं ज्ञानत्वं ब्रह्मणः कथम् ।**
**अन्यार्थाभावतो मोक्षे स्वेन स्वस्याप्यवेदनात् ।।**

प्रसंगाद्ब्रह्मणः पराभिमतज्ञानत्वादिदूषणाय परोक्तमनुवदति— **यच्चेदमिति । तदयोगादिति ।।** अखंडस्वरूपस्यैकत्वेन जात्ययोगदित्यर्थः ।। **शक्त्यादिरूपेति ।।** कारणतावच्छेदकावच्छिन्नत्वमेव हि स्वरूपयोग्यत्वं । मुक्तावविद्याभावेन आविद्यकशक्तिरूपावच्छेदकाभावेन स्वरूपयोग्यताभावान्मुक्तौ ज्ञानत्वं न स्यादित्यर्थः । वस्तुदोषमप्याह— **किंचेति ।।** ब्रह्मणोऽप्यज्ञातृतया तदन्यत्वरूपजडान्यत्वस्यासंभव इत्यर्थः ।। **अज्ञानत्वरूपत्व इति ।।** ज्ञानभिन्नत्वरूपत्व इत्यर्थः । भावरूपाज्ञानरूपत्वे तु घटादावतिव्याप्तिरिति ध्येयम् ।। **नित्यनिवृत्त्यापातादिति ।।** प्रतिबद्धत्वात्तदनिवृत्तिरित्येतत्तु प्रागेव निरस्तमिति भावः ।। **द्वितीयादिष्विति ।।** द्वितीयादिपक्षेष्वित्यर्थः । अर्थप्रकाशात्मकत्वपक्षोक्तं दूषणं संगृह्णाति— **एवंचेति ।।**



**ಬ್ರಹ್ಮನಿಗೆ ಜ್ಞಾನತ್ವವು ಕೂಡುವುದಿಲ್ಲ**

**ಯಚ್ಚೇದಮುಚ್ಯತೇ, ಬ್ರಹ್ಮ ಜ್ಞಾನಾನಂದಾತ್ಮಕಂ, ಅದ್ವಿತೀಯಂ, ನಿತ್ಯಂ, ಸಾಕ್ಷಿ ರೂಪಂ ಚ, ನ ತು ಜ್ಞಾನಾದಿ ಗುಣಕಮಿತಿ, ತತ್ರ ಪರಮತೇ ಜ್ಞಾನತ್ವಂ ಕಿಂ ಜಾತಿ ವಿಶೇಷಃ? ಸಾಕ್ಷಾದ್ ವ್ಯವಹಾರಜನಕತ್ವಂ ವಾ? ಜಡವಿರೋಧಿತ್ವಂ ವಾ? ಜಡವ್ಯಾವೃತ್ತತ್ವಂ ವಾ? ಅಜ್ಞಾನ ವಿರೋಧಿತ್ವಂ ವಾ? ಅರ್ಥಪ್ರಕಾಶಾತ್ಮಕತ್ವಂ ವಾ? ಪರಾಂಗೀಕೃತಂ ವಾ?**

**ನಾದ್ಯಃ। ವೃತ್ತಿಪ್ರತಿಬಿಂಬಿತ ಜ್ಞಾನಾಭಾಸೇಷು ತತ್ಸಂಭವೇऽಪಿ ಅಖಂಡೇ ಸ್ವರೂಪಜ್ಞಾನೇ ತದಯೋಗಾತ್।**

ಅದ್ವೈತಮತದಲ್ಲಿ ಬ್ರಹ್ಮನ ಸ್ವರೂಪದ ಬಗ್ಗೆ ಹೀಗೆ ಹೇಳುತ್ತಾರೆ, 'ಬ್ರಹ್ಮವು ಜ್ಞಾನಾನಂದಾತ್ಮಕ, ಅದ್ವಿತೀಯ, ನಿತ್ಯ ಮತ್ತು ಸಾಕ್ಷಿರೂಪವಾಗಿದೆ ಹೊರತು ಜ್ಞಾನಾನಂದಾದಿ ಗುಣಗಳುಳ್ಳದ್ದಲ್ಲ ಎಂದು. ಇದನ್ನು ಪ್ರಾಸಂಗಿಕವಾಗಿ ಇಲ್ಲಿ ನಿರಾಸಮಾಡುವುದಕ್ಕಾಗಿ ಅನುವಾದ ಮಾಡುತ್ತಿದ್ದಾರೆ.

ಅದ್ವೈತಮತದಲ್ಲಿ ಜ್ಞಾನತ್ವವೆಂದರೇನು? ಅದು ಜಾತಿವಿಶೇಷವೆ? ಸಾಕ್ಷಾತ್ ವ್ಯವಹಾರ ಜನಕತ್ವವೆ? ಜಡವಿರೋಧವೆ? ಜಡವ್ಯಾವೃತ್ತತ್ವವೆ? ಅಜ್ಞಾನ ವಿರೋಧಿತ್ವವೆ? ಅರ್ಥಪ್ರಕಾಶಾತ್ಮಕತ್ವವೆ? ದ್ವೈತಿಯು ಅಂಗೀಕರಿಸಿದ್ದೆ?

(1) ಈ ಏಳು ಪಕ್ಷಗಳಲ್ಲಿ ಮೊದಲನೆಯದಾದ 'ಜ್ಞಾನತ್ವವು ಒಂದು ಜಾತಿ' ಎನ್ನುವ ಪಕ್ಷ ಸರಿಯಲ್ಲ. ಅಂತಃಕರಣವೃತ್ತಿಯಲ್ಲಿ ಬೀಳುವ ಜ್ಞಾನಪ್ರತಿಬಿಂಬಗಳು ಅನೇಕ ಇರುವುದರಿಂದ ಅವುಗಳಲ್ಲಿ ಜ್ಞಾನತ್ವರೂಪ ಜಾತಿ ಇರಬಹುದಾದರೂ, ಅಖಂಡವಾದ ನಿರ್ಧರ್ಮಕವಾದ ಚೈತನ್ಯ ಸ್ವರೂಪ ಜ್ಞಾನದಲ್ಲಿ ಯಾವುದೇ ಜಾತಿ ಇರಲಾರದು ಮತ್ತು ಅಖಂಡ ಬ್ರಹ್ಮಾತ್ಮಕಜ್ಞಾನರೂಪವ್ಯಕ್ತಿ ಒಂದೇ ಇರುವಾಗ ಜಾತಿಯೇ ಅಸಂಭವ. ಆದರಿಂದ ಅದು ಬ್ರಹ್ಮನ ಸ್ವರೂಪಲಕ್ಷಣವೆನಿಸದು.

'ಜ್ಞಾನಾನಂದಾದಿಗಳು ಬ್ರಹ್ಮಸ್ವರೂಪವೇ ಹೊರತು ಬ್ರಹ್ಮನ ಗುಣಗಳಲ್ಲ' ಎಂದು ಅದ್ವೈತಿ ಹೇಳುತ್ತಾನೆ. ಏಕೆಂದರೆ, 'ಅಹಿಕುಂಡಲ ನ್ಯಾಯದಿಂದ ಅವು ಬ್ರಹ್ಮನ ಸ್ವರೂಪವೂ ಹೌದು, ಗುಣವೂ ಹೌದು' ಎಂದರೆ ಅದು ಔಪಚಾರಿಕವಾಗುತ್ತದೆ. ವಾಸ್ತವವಾಗಿ ಅವು ಗುಣಗಳೇ ಅಲ್ಲ. ಆದರಿಂದ ಬ್ರಹ್ಮನಲ್ಲಿ ಗುಣವಿಲ್ಲವೆಂದೇ ಹೇಳಿದಂತಾಗುವುದು' ಎನ್ನುತ್ತಾನೆ.

ಮತ್ತು, 'ಆತ್ಮನಿ ಚೈವಂ ವಿಚಿತ್ರಾಶ್ಚ ಹಿ' ಎಂದು ಬ್ರಹ್ಮಸೂತ್ರವು ಹೇಳುವಂತೆ ವಿಚಿತ್ರಶಕ್ತಿಯಿಂದ ಬ್ರಹ್ಮಸ್ವರೂಪಭೂತಜ್ಞಾನವೇ ಬ್ರಹ್ಮನಲ್ಲಿ ಗುಣವೂ ಆಗುತ್ತದೆ ಎಂದರೆ ಅದು ಸರಿಯಲ್ಲ. ಶಕ್ತಿಯೂ ಬ್ರಹ್ಮಸ್ವರೂಪವೇ ಎಂದಮೇಲೆ ಬ್ರಹ್ಮನಲ್ಲಿ ಶಕ್ತಿ ಇಲ್ಲ.

ವಿಶೇಷಬಲದಿಂದ ಬ್ರಹ್ಮಸ್ವರೂಪಭೂತಜ್ಞಾನವು ಬ್ರಹ್ಮನಲ್ಲಿ ಗುಣವಾಗಿ ಇರಬಲ್ಲುದು ಎಂದರೂ ವಿಶೇಷವೂ ಕೂಡ ಬ್ರಹ್ಮಸ್ವರೂಪವಾಗಿರುವುದರಿಂದ ಅದು ಬ್ರಹ್ಮನಲ್ಲಿಲ್ಲ.

'ವಿಶೇಷವು ಸ್ವನಿರ್ವಾಹಕ', ತಾನೇ ಧರ್ಮಿಯೂ ಧರ್ಮವೂ ಆಗಬಲ್ಲುದು ಎಂದರೆ ಇಂಥ ಸ್ವನಿರ್ವಾಹಕತ್ವವನ್ನು ನಾನು ಒಪ್ಪುವುದಿಲ್ಲ' ಎನ್ನುತ್ತಾನೆ ಅದ್ವೈತಿ.

ಅದಕ್ಕೆ ನಾವು ಹೀಗೆ ಹೇಳಬೇಕು— ನೀನೂ ಕೂಡ ಜ್ಞಾನಾನಂದಾದಿಗಳಿಗೆ ಸ್ವನಿರ್ವಾಹಕತ್ವವನ್ನು ಹೇಳಲೇಬೇಕು. ಇಲ್ಲದಿದ್ದರೆ ಸ್ವರೂಪಭೂತ ಜ್ಞಾನವು ಅಖಂಡವಾಗಿದ್ದು ಸ್ವನಿರ್ವಾಹಕವಲ್ಲವಾದ್ದರಿಂದ ಅದರಲ್ಲಿ ಜ್ಞಾನವಿಲ್ಲ. ಹೀಗಾಗಿ ಅಖಂಡ ಜ್ಞಾನವ್ಯಕ್ತಿ ಒಂದೇ ಆದ್ದರಿಂದ ಜ್ಞಾನತ್ವ ಜಾತಿ ಎಂಬುದೇ ಇಲ್ಲ ಎಂದಾಗುತ್ತದೆ.

ವೃತ್ತಿಯಲ್ಲಿ ಪ್ರತಿಫಲಿಸುವ ಜ್ಞಾನಪ್ರತಿಬಿಂಬಗಳಲ್ಲಿಯೂ ಸ್ವರೂಪಜ್ಞಾನದಲ್ಲಿಯೂ ಸಾಧಾರಣವಾಗಿ ಒಂದು ಜ್ಞಾನತ್ವಜಾತಿಯನ್ನು ಒಪ್ಪುತ್ತೇನೆ ಎಂದರೆ ಜ್ಞಾನತ್ವವು ಶುದ್ಧಬ್ರಹ್ಮನ ಲಕ್ಷಣವಲ್ಲವೆಂದಾದೀತು. ಅದು ಜಡವಾದ ಜ್ಞಾನಪ್ರತಿಬಿಂಬಗಳಲ್ಲಿಯೂ ಇರುವುದರಿಂದ ಅತಿವ್ಯಾಪ್ತವಾಗಿದೆ.

ಮತ್ತು ಈ ಜ್ಞಾನತ್ವವು ಜಡವಾದ ವೃತ್ತಿಪ್ರತಿಫಲಿತ ಜ್ಞಾನಪ್ರತಿಬಿಂಬದಲ್ಲಿಯೂ ಇರುವುದರಿಂದ ಅಂಥ ಜ್ಞಾನತ್ವವು ಬ್ರಹ್ಮನಲ್ಲಿ ಜಡವ್ಯಾವೃತ್ತಿಯನ್ನು ತಿಳಿಸಲಾರದು.

**ನ ದ್ವಿತೀಯಃ। ಫಲೋಪಧಾನಸ್ಯ ಸುಷುಪ್ತ್ಯಾದಾವಭಾವಾತ್। ಶಕ್ತ್ಯಾದಿರೂಪ ಸ್ವರೂಪಯೋಗ್ಯತಾಯಾ ಅಪಿ ಮುಕ್ತೌ ಅಭಾವಾತ್।**

(2) 'ಸಾಕ್ಷಾದ್ ವ್ಯವಹಾರಜನಕತ್ವವೇ ಜ್ಞಾನತ್ವ' ಎನ್ನುವ ಎರಡನೇ ಪಕ್ಷವೂ ಸರಿಯಲ್ಲ. ಫಲೋಪಧಾನ ರೂಪ ವ್ಯವಹಾರ ಜನಕತ್ವವು ಸುಷುಪ್ತ್ಯಾದಿಗಳಲ್ಲಿಲ್ಲ. ಸುಷುಪ್ತಿಯಲ್ಲಿ ವ್ಯವಹಾರ ವಿರುವುದಿಲ್ಲ. ಅದರಿಂದ ಅದು ಸ್ವರೂಪಲಕ್ಷಣವಾಗಲಾರದು. ಸಾಕ್ಷಾದ್ ವ್ಯವಹಾರ ಜನನಾನುಕೂಲ ಶಕ್ತಿಮತ್ತ್ವ ರೂಪವಾಗಲಿ ಜನಕತಾವಚ್ಛೇದಕ ಧರ್ಮಾವಚ್ಛಿನ್ನತ್ವರೂಪ ಸ್ವರೂಪಯೋಗ್ಯತೆಯಾಗಲಿ ನಿರ್ಧರ್ಮಕಸ್ವರೂಪ ಮಾತ್ರವಾಗಿರುವ ಮುಕ್ತಿಯಲ್ಲಿಲ್ಲದ್ದರಿಂದ ಅದು ಸ್ವರೂಪಲಕ್ಷಣವಾಗಲಾರದು, ಭಿನ್ನವಾಗಿದ್ದು ಆಗಂತುಕವೆಂದಾದೀತು. ಮುಕ್ತಿಯಲ್ಲಿ ಅವಿದ್ಯೆ ಇಲ್ಲದ್ದರಿಂದ ಆವಿದ್ಯಕ ಶಕ್ತಿರೂಪ ಅವಚ್ಛೇದಕಧರ್ಮವಿಲ್ಲ, ತದವಚ್ಛಿನ್ನತ್ವರೂಪ ಸ್ವರೂಪ ಯೋಗ್ಯತೆಯೂ ಇಲ್ಲ. ಶಕ್ತ್ಯಾದಿ ಧರ್ಮರಹಿತ ಅಖಂಡ ಚೈತನ್ಯ ಸ್ವರೂಪ ಮಾತ್ರವಿರುವುದೇ ಅದ್ವೈತಿಯ ಮುಕ್ತಿ.

**ನ ತೃತೀಯಃ। ಸ್ವರೂಪಜ್ಞಾನಸ್ಯ ನಿತ್ಯತ್ವೇನ ತದ್ವಿರುದ್ಧಸ್ಯ ಜಡಸ್ಯ ನಿತ್ಯ ನಿವೃತ್ತ್ಯಾಪಾತಾತ್ ।**

(3) ಜಡವಿರೋಧಿತ್ವವೇ ಜ್ಞಾನತ್ವವೆನ್ನುವ ಮೂರನೇ ಪಕ್ಷವೂ ಸರಿಯಲ್ಲ. ಅದನ್ನು ಒಪ್ಪಿದರೆ, ಸ್ವರೂಪಲಕ್ಷಣವಾಗಿರುವ ಜ್ಞಾನತ್ವವು ಜಡವಿರೋಧಿತ್ವ ರೂಪವೆಂದಾದರೆ ಅದು ನಿತ್ಯವೂ ಜಡವಿರೋಧಿಯಾಗುವುದರಿಂದ ಜಡವಾದ ಅಜ್ಞಾನವು ನಿತ್ಯನಿವೃತ್ತವಾಗಬೇಕಾದೀತು.

'ಅಂತಃಕರಣವೃತ್ತಿ ಇರುವಾಗ ಅದರಲ್ಲಿ ಪ್ರತಿಫಲಿತವಾಗಿ ಸ್ವರೂಪವು ಜಡವಿರೋಧಿ ಯಾಗುವುದು. ಹೀಗಾಗಿ ಜಡವು ನಿತ್ಯನಿವೃತ್ತವಾಗುವ ಪ್ರಸಂಗವಿಲ್ಲ' ಎಂದರೆ ಮುಕ್ತಿಯಲ್ಲಿ ವೃತ್ತಿ ಇಲ್ಲದ್ದರಿಂದ ಸ್ವರೂಪವು ಜಡವಿರೋಧಿ ಎನಿಸಲಾರದು. ಜಡಾತ್ಮಕವಾದೀತು.

'ವೃತ್ತಿಯು ಉಪಲಕ್ಷಣ. ವೃತ್ತ್ಯುಪಲಕ್ಷಿತ ಸ್ವರೂಪವು ಜಡವಿರೋಧಿ. ಮುಕ್ತಿಯಲ್ಲಿ ಅದು ಇರುವುದರಿಂದ ಜಡಾತ್ಮಕತ್ವ ಬರುವ ಪ್ರಸಕ್ತಿ ಇಲ್ಲ' ಎಂದರೆ ವೃತ್ತ್ಯುಪಲಕ್ಷಿತ ಸ್ವರೂಪವು ವೃತ್ತಿಗಿಂತ ಪೂರ್ವದಲ್ಲಿಯೂ ಸಂಸಾರಕಾಲದಲ್ಲಿ ಇರುವುದರಿಂದ ಜಡವಿರೋಧಿಯಾಗಬೇಕಾದೀತು, ಸಂಸಾರಕಾಲದಲ್ಲಿಯೂ ಜಡವಾದ ಅಜ್ಞಾನದ ಸಂಬಂಧ ಇರದಿದ್ದೀತು.

**ನ ಚತುರ್ಥಃ। 'ಸತ್ಯಂ ಜ್ಞಾನಂ' ಇತ್ಯತ್ರ ಜಡವ್ಯಾವೃತ್ತೇಃ ಆರ್ಥಿಕತ್ವೋಕ್ತ್ಯ-ಯೋಗಾತ್ ।**

(4) 'ಜಡವ್ಯಾವೃತ್ತತ್ವವೇ ಜ್ಞಾನತ್ವ' ಎಂದೆನ್ನುವ ನಾಲ್ಕನೇ ಪಕ್ಷವೂ ಯುಕ್ತವಲ್ಲ. ಈ ಪಕ್ಷದಲ್ಲಿ ಜ್ಞಾನತ್ವವೂ ಜಡವ್ಯಾವೃತ್ತತ್ವವೂ ಒಂದೇ. ಹೀಗಾಗಿ, 'ಸತ್ಯಂ ಜ್ಞಾನಂ' ಎಂಬ ಶ್ರುತಿಯಲ್ಲಿ ಜ್ಞಾನ ಶಬ್ದದಿಂದ ಬ್ರಹ್ಮವನ್ನು ನೇರವಾಗಿ ಜಡವ್ಯಾವೃತ್ತವೆಂದೇ ಹೇಳಿದಂತಾಗುವುದರಿಂದ, 'ಜ್ಞಾನಶಬ್ದವು ಶ್ರುತಿಯಲ್ಲಿ ಮೊದಲಿಗೆ ನೇರವಾಗಿ ಜ್ಞಾನತ್ವವನ್ನು ಹೇಳಿ, ಅರ್ಥಾತ್ ಜಡವ್ಯಾವೃತ್ತಿಯನ್ನು ಹೇಳುತ್ತದೆ' ಎನ್ನುವ ಅದ್ವೈತ ಸಿದ್ಧಾಂತವು ಬಾಧಿತವಾಗುತ್ತದೆ.

**ಕಿಂಚ ಜಡತ್ವಸ್ಯ ಅಜ್ಞಾತೃತ್ವಾದಿರೂಪತ್ವೇ ಅಸಂಭವಃ। ಅಜ್ಞಾನತ್ವ ರೂಪತ್ವೇ ತು ಅನ್ಯೋನ್ಯಾಶ್ರಯಃ।**

ಜಡವ್ಯಾವೃತ್ತಿಗೆ ಆರ್ಥಿಕತ್ವವಿಲ್ಲವೆಂದಾಗುವುದು ಕೇವಲ ವಚನದೋಷವಾಯಿತೆಂದರೆ, ಹೇಳುತ್ತಾರೆ—ವಸ್ತುದೋಷವೂ ಇದೆ— ಜಡವ್ಯಾವೃತ್ತತ್ವವೆಂದರೆ ಜಡೇತರತ್ವ. ಇಲ್ಲಿ ಜಡ ಎಂದರೆ ಅಜ್ಞಾತೃ ಎಂದರ್ಥ ವಿವಕ್ಷಿತವಾಗಿದ್ದರೆ ಬ್ರಹ್ಮವು ಅದ್ವೈತಮತದಲ್ಲಿ ಅಜ್ಞಾತೃ, ಅಂತಃಕರಣವೇ ಜ್ಞಾತೃ, ಆಗಿರುವುದರಿಂದ ಬ್ರಹ್ಮ ಜಡವೆ ಎಂದಮೇಲೆ ಜಡೇತರತ್ವರೂಪ ಬ್ರಹ್ಮಲಕ್ಷಣವು ಬ್ರಹ್ಮನಲ್ಲಿ ಬರುವುದಿಲ್ಲ. ಅಸಂಭವದೋಷ ಲಕ್ಷಣಕ್ಕೆ ಬರುತ್ತದೆ.

'ಜಡತ್ವ'ವೆಂದರೆ ಅಜ್ಞಾನತ್ವ, ಜ್ಞಾನಭಿನ್ನತ್ವ ಎನ್ನುವುದಾದರೆ, 'ಜ್ಞಾನ'ವೆಂದರೆ 'ಅಜ್ಞಾನಭಿನ್ನ' ವಾಗಿರುವುದರಿಂದ ಅನ್ಯೋನ್ಯಾಶ್ರಯದೋಷ—'ಅಜ್ಞಾನಭಿನ್ನರೂಪವಾದ ಜ್ಞಾನವನ್ನು ತಿಳಿಯಲು ಪ್ರತಿಯೋಗಿಯಾದ ಅಜ್ಞಾನವನ್ನು ತಿಳಿಯಬೇಕು. ಜ್ಞಾನಭಿನ್ನ ಅಜ್ಞಾನವನ್ನು ತಿಳಿಯಬೇಕಾದರೂ ಅದಕ್ಕೆ ಪ್ರತಿಯೋಗಿಯಾದ ಜ್ಞಾನವನ್ನು ತಿಳಿಯಬೇಕು' ಎಂದು.

ಅನಾದಿಭಾವರೂಪ ಅಜ್ಞಾನತ್ವವೇ ಜಡತ್ವ ಎನ್ನುವುದಾದರೆ ಅನಾದಿಭಾವರೂಪವಾಗಿದ್ದು ಜ್ಞಾನನಿವರ್ತ್ಯವೆನಿಸುವುದೇ ಅಜ್ಞಾನ ಲಕ್ಷಣ. ಇದು ಜ್ಞಾನಘಟಿತಲಕ್ಷಣವಾದ್ದರಿಂದ ಜ್ಞಾನವನ್ನು ತಿಳಿಯಬೇಕು. ಜ್ಞಾನವನ್ನು ತಿಳಿಯಲು ಅದು ಅಜ್ಞಾನಭಿನ್ನವಾದ್ದರಿಂದ ಅಜ್ಞಾನವನ್ನು ತಿಳಿಯ ಬೇಕೆಂದು ಅನ್ಯೋನ್ಯಾಶ್ರಯದೋಷ ಮತ್ತು ಘಟವು ಭಾವರೂಪಾಜ್ಞಾನಕ್ಕಿಂತ ಭಿನ್ನವಾದ್ದರಿಂದ ಜಡವ್ಯಾವೃತ್ತತ್ವರೂಪ ಜ್ಞಾನಲಕ್ಷಣಕ್ಕೆ ಘಟದಲ್ಲಿ ಅತಿವ್ಯಾಪ್ತಿದೋಷವೂ ಇದೆ.

**ನ ಪಂಚಮಃ। ಅಜ್ಞಾನಸ್ಯ ನಿತ್ಯನಿವೃತ್ತ್ಯಾಪಾತಾತ್। ದ್ವಿತೀಯಾದಿಷು ಜ್ಞಾನತ್ವಸ್ಯ ಕಾರಣತ್ವಾದಿವತ್ ವ್ಯವಹಾರಾದ್ಯನ್ಯತಮ-ಉಪಾಧಿಕತ್ವೇನ ಬ್ರಹ್ಮಣೋ ಜ್ಞಾನಸ್ವಭಾವತ್ವಾ ಯೋಗಾಚ್ಚ।**

(5) ಅಜ್ಞಾನ ವಿರೋಧಿತ್ವವೇ ಜ್ಞಾನತ್ವ ಎಂದೆನ್ನುವ ಐದನೇ ಪಕ್ಷದಲ್ಲಿ ಜ್ಞಾನರೂಪವಾದ ಬ್ರಹ್ಮ ಅಜ್ಞಾನವಿರೋಧಿಯೆನಿಸುವುದರಿಂದ ಅದಕ್ಕೆ ಎಂದೂ ಅಜ್ಞಾನಾವರಣವಿಲ್ಲವೆಂದಾದೀತು. ಅಜ್ಞಾನವು ನಿತ್ಯನಿವೃತ್ತವಾಗಬೇಕಾದೀತು.

ಎರಡನೇ ಪಕ್ಷದಿಂದ ತೊಡಗಿ ಐದನೇ ಪಕ್ಷದವರೆಗೂ ಈ ಎಲ್ಲ ಪಕ್ಷಗಳಲ್ಲಿ ಸಾಧಾರಣವಾದ ದೋಷವಿದು—

ವ್ಯವಹಾರಜನಕತ್ವವು ಜ್ಞಾನತ್ವವೆಂಬ ಪಕ್ಷದಲ್ಲಿ ಜ್ಞಾನತ್ವವು ವ್ಯವಹಾರೌಪಾಧಿಕವಾಗಿದೆ.

ಜಡವಿರೋಧಿತ್ವವು ಜ್ಞಾನತ್ವವೆಂಬ ಪಕ್ಷದಲ್ಲಿ ಅದೂ ಔಪಾಧಿಕ, ಅದರಲ್ಲಿ ಉಪಾಧಿಯು ಜಡ.

ಜಡವ್ಯಾವೃತ್ತತ್ವವು ಜ್ಞಾನತ್ವವೆಂಬ ಪಕ್ಷದಲ್ಲಿಯೂ ಅದರಲ್ಲಿ ಉಪಾಧಿಯು ಜಡ.

ಅಜ್ಞಾನ ವಿರೋಧಿತ್ವವು ಜ್ಞಾನತ್ವವೆಂಬ ಪಕ್ಷದಲ್ಲಿಯೂ ಅದರಲ್ಲಿ ಉಪಾಧಿಯು ಅಜ್ಞಾನ.

ಹೀಗೆ ಉಪಾಧಿಗಳು ಜ್ಞಾನತ್ವ ಶರೀರದಲ್ಲಿ ಅಂತರ್ಗತವಾಗಿವೆ. ಅದರಿಂದ ಜ್ಞಾನತ್ವವು ಔಪಾಧಿಕವಾಯಿತು, ಸಖಂಡವಾಯಿತು ಎಂದಮೇಲೆ ಅದು ಅಖಂಡ ಬ್ರಹ್ಮಸ್ವರೂಪವಾಗಲಾರದು. ಬ್ರಹ್ಮವು ಸ್ವಭಾವತಃ ಜ್ಞಾನಸ್ವರೂಪವೆನಿಸಲಾರದು.

ಕಾರಣತ್ವವು ಕಾರ್ಯನಿಯತ-ಪೂರ್ವಕಾಲ ವೃತ್ತಿತ್ವ ರೂಪವಾದ್ದರಿಂದ ಕಾರ್ಯಾದಿ ಉಪಾಧಿಘಟಿತವಾಗಿದ್ದು ಸಖಂಡವಾದ್ದರಿಂದ ಜನ್ಮಾದಿಕಾರಣತ್ವವು ಬ್ರಹ್ಮನ ಸ್ವರೂಪಲಕ್ಷಣವಲ್ಲ, ತಟಸ್ಥಲಕ್ಷಣ, ಲಕ್ಷ್ಯದಲ್ಲಿಲ್ಲದ ಲಕ್ಷಣ ಎನಿಸುವಂತೆ ಈ ಜ್ಞಾನತ್ವವೂ ಸಖಂಡವಾಗಿದ್ದು ಅಖಂಡಬ್ರಹ್ಮನ ತಟಸ್ಥ ಲಕ್ಷಣವಾದೀತು. ಅಂದರೆ ಲಕ್ಷ್ಯವಾದ ಬ್ರಹ್ಮನಲ್ಲಿಲ್ಲದ ಲಕ್ಷಣವಾಗುವುದರಿಂದ ಅಸಂಭವ ದೋಷ ಬಂದೀತು.

**ನ ಷಷ್ಠಃ। ಮೋಕ್ಷೇ ಅನ್ಯಾರ್ಥೋಲ್ಲೇಖಾಭಾವಾತ್। ಸ್ವರೂಪೋಲ್ಲೇಖೇ ಚ ಸ್ವವಿಷಯತ್ವಾಪಾತಾತ್।**

**ನ ಸಪ್ತಮಃ। ಪರಾಂಗೀಕೃತಾಯಾಃ ಜಾತೇಃ ವ್ಯವಹಾರ ಹೇತುತ್ವಾದೇರ್ವಾ ತ್ವನ್ಮತೇ ಅಸಂಭವಾತ್। ಏವಂ ಚ–**

**ಅರ್ಥಪ್ರಕಾಶರೂಪತ್ವಂ ಜ್ಞಾನತ್ವಂ ಬ್ರಹ್ಮಣಃ ಕಥಂ।**
**ಅನ್ಯಾರ್ಥಾಭಾವತೋ ಮೋಕ್ಷೇ ಸ್ವೇನ ಸ್ವಸ್ಯಾಪ್ಯವೇದನಾತ್ ॥**

(6) ಅರ್ಥಪ್ರಕಾಶಾತ್ಮಕತ್ವವು ಜ್ಞಾನತ್ವವೆಂಬ ಆರನೇ ಪಕ್ಷವೂ ಸರಿಯಲ್ಲ. ಮೋಕ್ಷದಲ್ಲಿ ಬ್ರಹ್ಮಸ್ವರೂಪವಾದ ಜ್ಞಾನವು ಯಾವುದೇ ಅರ್ಥವನ್ನು ಅಂದರೆ ವಿಷಯವನ್ನು ಪ್ರಕಾಶಗೊಳಿಸುವುದಿಲ್ಲ. ವಿಷಯೀಕರಿಸುವುದಿಲ್ಲ. ಏಕೆಂದರೆ ವಿಷಯವೆಲ್ಲವೂ ಅವಿದ್ಯೆ ಅಥವಾ ಅವಿದ್ಯೆಯ ಪರಿಣಾಮರೂಪವಾಗಿರುತ್ತದೆ. ಅವಿದ್ಯಾನಿವೃತ್ತಿರೂಪವಾದ ಮೋಕ್ಷದಲ್ಲಿ ಈ ಯಾವ ವಿಷಯವೂ ಇರುವುದಿಲ್ಲ.

ಕದಾಚಿತ್‌ಅರ್ಥಪ್ರಕಾಶಕತ್ವವನ್ನೇ ಲಕ್ಷಣವೆನ್ನುತ್ತೇವೆ, ಅದರಿಂದ ಮೋಕ್ಷದಲ್ಲಿಯೂ ಈ ಲಕ್ಷಣ ಇರುತ್ತದೆ ಎಂದರೆ, ಕದಾಚಿದಾವೃತ್ತತ್ವವಿದ್ದ ಮಾತ್ರಕ್ಕೆ ಮೋಕ್ಷದಲ್ಲಿಯೂ ಆವೃತತ್ವವಿರುತ್ತದೆ ಎಂದಾದೀತು.

ಮೋಕ್ಷದಲ್ಲಿ ಬೇರೆ ವಿಷಯವಿಲ್ಲದಿದ್ದರೂ ತನ್ನನ್ನೇ ತಾನು ವಿಷಯೀಕರಿಸುವುದರಿಂದ ಅರ್ಥಪ್ರಕಾಶಾತ್ಮತ್ವವು ಮೋಕ್ಷದಲ್ಲಿಯೂ ಇದೆ ಎನ್ನುವುದಾದರೆ ಅದು ಅದ್ವೈತಿಯ ಸಿದ್ಧಾಂತಕ್ಕೆ ವಿರುದ್ಧವಾಗುವುದು. ಬ್ರಹ್ಮನು ತನ್ನನ್ನು ತಾನು ತಿಳಿಯುವುದನ್ನು, ಇಂಥ ಸ್ವಪ್ರಕಾಶತ್ವವನ್ನು ಅದ್ವೈತಿ ಒಪ್ಪುವುದಿಲ್ಲ. ಆತ್ಮಾಶ್ರಯದೋಷ ಎನ್ನುತ್ತಾನೆ.

ಬ್ರಹ್ಮಸ್ವರೂಪವಾದ ಜ್ಞಾನವು ಮೋಕ್ಷದಲ್ಲಿ ಯಾವ ವಿಷಯವನ್ನೂ ವಿಷಯೀಕರಿಸುವುದಿಲ್ಲ ಎಂದರೆ, ಅಂಥ ಜ್ಞಾನಸ್ವಭಾವವೇ ಇಲ್ಲದ ಜ್ಞಾನವು ಘಟದಂತೆಯೇ ಜ್ಞಾನವೆನಿಸದು.

(7) ಪರಾಂಗೀಕೃತವಾದ ಜ್ಞಾನತ್ವವೇ ತನಗೂ ವಿವಕ್ಷಿತ ಎನ್ನುವ ಏಳನೇ ಪಕ್ಷವೂ ಸರಿಯಲ್ಲ. 'ಪರ' ಎಂದರೆ ಇಲ್ಲಿ ಅದ್ವೈತಿಗೆ ದ್ವೈತಿ. ದ್ವೈತಿ ಅಂಗೀಕರಿಸಿರುವ ಜ್ಞಾನತ್ವವನ್ನು ಅದ್ವೈತಿ ಒಪ್ಪುವುದಿಲ್ಲ. ದ್ವೈತಿ ಒಪ್ಪಿರುವ ಜ್ಞಾನತ್ವಜಾತಿ ವ್ಯವಹಾರಹೇತುತ್ವ ಮುಂತಾದ ಯಾವುದೇ ಜ್ಞಾನತ್ವವನ್ನು ಬ್ರಹ್ಮಲಕ್ಷಣವೆಂದು ಹೇಳಿದರೆ ಅದ್ವೈತಮತದಲ್ಲಿ ಅಸಂಭವ. ಅಸಂಭವರೂಪ ಲಕ್ಷಣದೋಷ.

ಏವಂ ಚ ಅರ್ಥಪ್ರಕಾಶಾತ್ಮತ್ವರೂಪವಾದ ಜ್ಞಾನತ್ವವನ್ನು ಬ್ರಹ್ಮನ ಸ್ವರೂಪಲಕ್ಷಣವೆಂದು ಒಪ್ಪಿದರೆ ಅದು ಬ್ರಹ್ಮನಲ್ಲಿ ಹೇಗೆ ಕೂಡುತ್ತದೆ? ಮೋಕ್ಷದಲ್ಲಿ ಬೇರೆ ವಿಷಯವಿಲ್ಲ. ತನ್ನನ್ನು ಕೂಡ ತಾನು ವಿಷಯೀಕರಿಸುವುದಿಲ್ಲ ತಾನೆ?



किंचेदमानन्दत्वम्? जातिविशेषो वा अनुकूलतया वेदनीयत्वं वा अनुकूलवेदनरूपत्वं वा अनुकूलत्वमात्रं वा विज्ञानात्मकत्वमेव वा दुःखविरोधिस्वरूपत्वं वा दुःखाभावोपलक्षितस्वरूपत्वं वा परांगीकृतं वा ।

नाद्यः । अखंडस्वरूपानंदे तदयोगात् ।

न द्वितीयः । मोक्षे वेदितुरभावात् । आत्मनोऽवेद्यत्वाच्च । किंचानुकूल्यं किंचित्सापेक्षम्, नचान्यं प्रति तद्युक्तमिति स्वं प्रत्येव वक्तव्यत्वेन सविशेषत्वापातः ।

अत एव न तृतीयः । अपिच वेदनस्वभावादधिकस्यानुकूल्यस्य स्वाभाविकत्वे सखंडार्थत्वापातः । औपाधिकत्वे कदाचिदानंद-निवृत्त्यापातः ।

न चतुर्थः । उक्तरीत्यानुकूल्यासंभवात् । एतेन निरुपाधि-केष्टत्वमानंदत्वमिति निरस्तम् ।

न पंचमः । दुःखादिज्ञानस्याप्यानंदत्वापातात् । विषयानुल्ले-

खिज्ञानं तथेति चेन्न। विरोधात् । ''विज्ञानमानदं ब्रह्म'' इत्यादौ विज्ञानपदेनैव दुःखव्यावृत्तिसिद्ध्याऽऽनंदपदवैयर्थ्याच्च ।

न षष्ठः । विरोधस्य निवर्तकत्वादिरूपत्वे दुःखस्य नित्य-निवृत्त्यापत्तेः । तादात्म्यायोग्यत्वरूपत्वे घटादेरप्यानंदत्वापातात् । ''विज्ञानमानंदं ब्रह्म'' इत्यादौ दुःखव्यावृत्तेरार्थिकत्वोक्त्ययोगाच्च ।

न सप्तमः । वैशेषिकमोक्षवत् त्वदुक्तस्य दुःखस्याभावे सत्यपि आनंदाभावेनापुमर्थत्वस्य त्वन्मोक्षेऽप्यापातात् ।

नाष्टमः । परांगीकृतस्य निरुपाध्यनुकूलतया वेदनीयत्वादेस्त्व-न्मतेऽसंभवात् ।

यदि चानंदत्वादेर्दुर्निरूपत्वेऽपि तदधिकरणं ब्रह्माबाध्य-मानंदाद्यात्मकं च तर्हि सत्यत्वादेर्दुर्निरूपत्वेऽपि तदधिकरणं जगदप्यबाध्यं सदात्मकं च स्यात् ।

एवंच निरुपाध्यनुकूलत्ववेदनीयं सुखं मतम् ।
निर्विशेषमवेद्यं च कथं ब्रह्म सुखात्मकम् ।।

**किञ्चेदमिति ।।** त्वदभिमतमानंदत्वं च किमित्यर्थः ।। **किंचित्सापे-क्षमिति।।** निरूपकसापेक्षमित्यर्थः ।। **नचान्यं प्रति तद्युक्तमिति ।।** अनुकूलतया वेदनीये वैरिदुःखेऽतिव्यापकत्वादिति भावः ।। **अत एवेति ।।** सविशेषत्वापाता-देवेत्यर्थः ।। **एतेनेति** ।। इष्टत्वस्यापि स्वं प्रत्येव वक्तव्यतया सखंडत्वापातादिनैवेत्यर्थः ।। **तथेति ।।** आनंद इत्यर्थः ।। **विरोधादिति ।।** ज्ञानत्वविरोधात् सविषयत्वस्वभावादित्यर्थः। त्वदुक्तस्यापुमर्थत्वस्येति संबंधः ।। **अनुकूलत्ववेदनीयमिति ।।** अनुकूलत्वेन वेदनीयमित्यर्थः ।



**ಬ್ರಹ್ಮನಿಗೆ ಆನಂದತ್ವವು ಕೂಡುವುದಿಲ್ಲ**

ಕಿಂಚೇದಮಾನಂದತ್ವಂ ಜಾತಿವಿಶೇಷೋ ವಾ? ಅನುಕೂಲತಯಾ ವೇದನೀಯತ್ವಂ

**ವಾ? ಅನುಕೂಲ ವೇದನರೂಪತ್ವಂ ವಾ? ಅನುಕೂಲತ್ವ ಮಾತ್ರಂ ವಾ? ವಿಜ್ಞಾನಾತ್ಮಕತ್ವಮೇವ ವಾ? ದುಃಖವಿರೋಧಿಸ್ವರೂಪತ್ವಂ ವಾ? ದುಃಖಾಭಾವೋಪಲಕ್ಷಿತ ಸ್ವರೂಪತ್ವಂ ವಾ? ಪರಾಂಗೀಕೃತಂ ವಾ?**

**ನಾದ್ಯಃ। ಅಖಂಡ ಸ್ವರೂಪಾನಂದೇ ತದಯೋಗಾತ್।**

ಬ್ರಹ್ಮಸ್ವರೂಪಲಕ್ಷಣವೆನಿಸಿದ ಆನಂದತ್ವವೆಂದರೇನು? ಜಾತಿವಿಶೇಷವೆ? ಅನುಕೂಲ ವೇದನೀಯತ್ವವೆ? ಅನುಕೂಲವೆಂದು ವಿಷಯೀಕರಿಸುವ ಜ್ಞಾನರೂಪತ್ವವೆ? ಅನುಕೂಲತ್ವ ಮಾತ್ರವೆ? ಜ್ಞಾನಾತ್ಮಕತ್ವವೆ? ದುಃಖವಿರೋಧಿ ಸ್ವರೂಪತ್ವವೆ? ದುಃಖಾಭಾವೋಪಲಕ್ಷಿತ ಸ್ವರೂಪತ್ವವೆ? ಪರಾಂಗೀಕೃತ ಆನಂದತ್ವವೆ?

(1) ಜಾತಿವಿಶೇಷವೇ ಆನಂದತ್ವವೆಂಬ ಮೊದಲನೆ ಪಕ್ಷ ಸರಿಯಲ್ಲ. ಅಖಂಡ ಏಕಮಾತ್ರ ಸ್ವರೂಪಾನಂದದಲ್ಲಿ ಆನಂದತ್ವವೆಂಬ ಜಾತಿ ಅಸಂಭವ. ಅದರಿಂದ ಲಕ್ಷಣಕ್ಕೆ ಅಸಂಭವದೋಷ.

**ನ ದ್ವಿತೀಯಃ। ಮೋಕ್ಷೇ ವೇದಿತುರಭಾವಾತ್। ಆತ್ಮನಃ ಅವೇದ್ಯತ್ವಾಚ್ಚ। ಕಿಂಚ ಆನುಕೂಲ್ಯಂ ಕಿಂಚಿತ್‌ಸಾಪೇಕ್ಷಂ। ನ ಚಾನ್ಯಂ ಪ್ರತಿ ತದ್‌ಯುಕ್ತಮಿತಿ ಸ್ವಂ ಪ್ರತ್ಯೇವ ವಕ್ತವ್ಯತ್ವೇನ ಸವಿಶೇಷತ್ವಾಪಾತಃ।**

(2) ಅನುಕೂಲವೆಂದು ವಿಷಯೀಕರಿಸುವ ಜ್ಞಾನವಿಶೇಷದ ಕರ್ಮವೇ ಆನಂದ ಎನ್ನುವ ಎರಡನೆ ಪಕ್ಷದಲ್ಲಿ 'ಇದು ನನಗೆ ಅನುಕೂಲ' ಎಂದು ಗ್ರಹಿಸುವ ಜ್ಞಾನವಿಶೇಷಕ್ಕೆ ಹಾಗೆ ಗ್ರಹಿಸಲು ಯೋಗ್ಯವು, ಅಂದರೆ ಗ್ರಹಣಕರ್ಮವು ಸುಖವೆ. ಇಂಥ ಸುಖವು ಯದ್ಯಪಿ ಮೋಕ್ಷದಲ್ಲಿ ಇದೆ. ಆದರೆ ಗ್ರಹಣಕರ್ತನು ಮೋಕ್ಷದಲ್ಲಿಲ್ಲ. ಆತ್ಮನು ಕರ್ತನಲ್ಲ, ಭೋಕ್ತನಲ್ಲ, ಎಲ್ಲವೂ ಅಂತಃಕರಣವೆ. ಅದು ಮೋಕ್ಷದಲ್ಲಿಲ್ಲವೆಂದರೆ ಆನಂದದಲ್ಲಿ ಗ್ರಹಣಕರ್ತನಿಲ್ಲದ್ದರಿಂದ ಗ್ರಹಣಕರ್ಮತ್ವ ಅಸಂಭವ.

ಮತ್ತು ಆತ್ಮನು ಅವೇದ್ಯನಾದ್ದರಿಂದ ಆತ್ಮಸ್ವರೂಪಭೂತ ಆನಂದವೂ ಅವೇದ್ಯ. ಅದು ಗ್ರಹಣಕರ್ಮವಾಗುವುದಿಲ್ಲ. ಅನುಕೂಲತ್ವೇನ ಗ್ರಹಣಕರ್ಮತ್ವರೂಪವಾದ ಆನಂದತ್ವವು ಆನಂದದಲ್ಲಿ ಬರುವುದಿಲ್ಲ. ಆದರಿಂದ ಅಸಂಭವ ದೋಷ.

ಆನಂದವು ಅನುಕೂಲವೆಂದರೆ ಯಾರಿಗೆ ಅನುಕೂಲ? ಎನ್ನುವುದನ್ನು ಹೇಳಬೇಕಾಗುತ್ತದೆ. ಆನುಕೂಲ್ಯವೆಂಬುದು ಕಿಂಚಿತ್‌ಸಾಪೇಕ್ಷವಾಗಿರುತ್ತದೆ. ಅದಕ್ಕೆ ನಿರೂಪಕವು ಬೇಕು. ಸುಖವು ಅನ್ಯರಿಗೆ ಅನುಕೂಲ ಎನ್ನುವಂತಿಲ್ಲ. ಮೋಕ್ಷದಲ್ಲಿ ನಿರೂಪಕರಾದ ಅನ್ಯರೇ ಇಲ್ಲ. ಸಂಸಾರದಲ್ಲಿ ಅನ್ಯನಿದ್ದರೂ ಶತ್ರುವಿನ ದುಃಖವು ಅನ್ಯನಿಗೆ ಅನುಕೂಲವಾದ್ದರಿಂದ ದುಃಖದಲ್ಲಿ ಅತಿವ್ಯಾಪ್ತಿ. ಆದರಿಂದ ತನಗೇ ಅನೂಕೂಲ ಎನ್ನಬೇಕು. ಆಗಲೂ ಆನಂದದಲ್ಲಿ ತನಗೇ ಅನುಕೂಲತ್ವವೆಂಬ ವ್ಯಾವರ್ತಕಧರ್ಮ ಬಂದಿತು. ಆನಂದ ಅಖಂಡವಲ್ಲ, ಸವಿಶೇಷವೆಂದಾಯಿತು.

**ಅತ ಏವ ನ ತೃತೀಯಃ। ಅಪಿ ಚ ವೇದನಸ್ವಭಾವಾತ್ ಅಧಿಕಸ್ಯ ಆನುಕೂಲ್ಯಸ್ಯ**

**ಸ್ವಾಭಾವಿಕತ್ವೇಽಖಂಡಾರ್ಥತ್ವಾಭಾವಾಪಾತಃ। ಔಪಾಧಿಕತ್ವೇ ಕದಾಚಿತ್ ಆನಂದ-ನಿವೃತ್ತ್ಯಾಪಾತಃ।**

(3) ಅನುಕೂಲ ವೇದನ ರೂಪತ್ವವೇ ಆನಂದತ್ವ. ಅನುಕೂಲವೆಂದು ಗ್ರಹಿಸುವ ಜ್ಞಾನವೆ ಆನಂದ ಎನ್ನುವ ಮೂರನೇ ಪಕ್ಷಕ್ಕೂ ಇದೇ ದೋಷ ಬರುತ್ತದೆ.

ಮತ್ತು 'ಅನುಕೂಲ'ವೆಂದು ಗ್ರಹಿಸುವ ಜ್ಞಾನದಲ್ಲಿ ಅನುಕೂಲತ್ವವು ಪ್ರಕಾರ. ಅದು ವೇದನ ಸ್ವಭಾವಕ್ಕಿಂತ ಬೇರೆಯಾಗಿದ್ದು ಸ್ವಾಭಾವಿಕವೇ ಆಗಿದೆ ಎಂದರೆ ಜ್ಞಾನವು ಸಖಂಡಾರ್ಥವಾಯಿತು. ಆಗ ಅಖಂಡಾರ್ಥತ್ವಕ್ಕೆ ಭಂಗ ಬರುವುದು. ಔಪಾಧಿಕವಾಗಿದೆ ಎಂದರೆ ಉಪಾಧಿನಾಶವಾದಾಗ ಕೆಲವೊಮ್ಮೆ ಔಪಾಧಿಕವಾದ ಅನುಕೂಲತ್ವವೂ ನಷ್ಟವಾಗುವುದು, ಆನಂದವಿಲ್ಲವೆಂದಾಗುವುದು ಮತ್ತು ಬ್ರಹ್ಮನಲ್ಲಿ ಆನಂದವೆಂಬ ಲಕ್ಷಣ ಬರುವುದಿಲ್ಲ, ಸ್ವರೂಪಲಕ್ಷಣತ್ವಕ್ಕೆ ಭಂಗ ಬರುವುದು.

**ನ ಚತುರ್ಥಃ। ಉಕ್ತರೀತ್ಯಾ ಆನುಕೂಲ್ಯಾಸಂಭವಾತ್।**

**ಏತೇನ ನಿರುಪಾಧಿಕೇಷ್ಟತ್ವಂ ಆನಂದತ್ವಮಿತಿ ನಿರಸ್ತಂ।**

(4) ಅನುಕೂಲತ್ವಮಾತ್ರವೇ ಆನಂದತ್ವ ಎಂಬ ನಾಲ್ಕನೇ ಪಕ್ಷವೂ ಸರಿಯಲ್ಲ. ಅನುಕೂಲತ್ವವೆಂಬ ಧರ್ಮವು ಸ್ವಾಭಾವಿಕವೆಂದರೆ ಸಧರ್ಮಕತ್ವ ಬರುವುದರಿಂದ ಆನಂದಕ್ಕೆ ಅಖಂಡತ್ವ ಭಂಗ. ಔಪಾಧಿಕವೆಂದರೆ ಅದು ಅನಿತ್ಯವಾದ್ದರಿಂದ ಅದು ನಾಶವಾದಾಗ ತತ್ಸ್ವರೂಪವಾದ ಆನಂದದ ನಾಶವಾದೀತು. ಆನಂದವು ಬ್ರಹ್ಮನ ಸ್ವರೂಪಲಕ್ಷಣವಾಗದೆ ಹೋದೀತು ಎಂದು ಹಿಂದೆ ಹೇಳಿದಂತೆಯೇ ದೋಷ ಬಂದೀತು.

ಹೀಗೆ ಈ ಲಕ್ಷಣವನ್ನು ನಿರಾಕರಣಮಾಡಿದ್ದರಿಂದ 'ನಿರುಪಾಧಿಕ ಇಷ್ಟತ್ವವೇ ಆನಂದತ್ವ' ಎಂದು ಇನ್ನೊಂದು ಲಕ್ಷಣವೂ ನಿರಾಕೃತವಾಯಿತು. ಅನುಕೂಲತ್ವವೇ ಕೂಡದಿರುವುದರಿಂದ ಇಚ್ಛೆ ಕೂಡುವುದಿಲ್ಲ. ಮತ್ತು ಮೋಕ್ಷದಲ್ಲಿ ಇಚ್ಛೆ ಇರುವುದೂ ಇಲ್ಲವಾಗಿ ಇಷ್ಟತ್ವವೂ ಇಲ್ಲ. ಮತ್ತು ಅನುಕೂಲತ್ವದಂತೆಯೇ ನಿರುಪಾಧಿಕೇಷ್ಟತ್ವ ಧರ್ಮವೂ ಕೂಡ ಸ್ವರೂಪಕ್ಕಿಂತ ಬೇರೆಯಾಗಿ ಸ್ವಾಭಾವಿಕವೆಂದರೆ ಅಖಂಡತ್ವಭಂಗ, ಔಪಾಧಿಕ ವೆಂದರೆ ನಾಶಪ್ರಸಕ್ತಿ ಇದೆ ಎಂದು.

ಅನುಕೂಲತ್ವವು ಆನಂದದಲ್ಲಿ ಇರುವಂತೆ ದುಃಖಾಭಾವದಲ್ಲಿಯೂ ಇರುವುದರಿಂದ ಲಕ್ಷಣಕ್ಕೆ ದುಃಖಾಭಾವದಲ್ಲಿ ಅತಿವ್ಯಾಪ್ತಿ.

'ದುಃಖಾಭಾವವೂ ಒಂದು ಬಗೆಯ ಸುಖವೆ. ದುಃಖದ ಅಭಾವವೆಂದರೆ ದುಃಖಕ್ಕೆ ವಿರೋಧಿಯಾದ ಭಾವಾಂತರವೆ, ಸುಖವೆ ಎಂದು ಅಂಗೀಕರಿಸುತ್ತೇನೆ' ಎನ್ನುತ್ತಾನೆ ಸಿದ್ಧಿಕಾರ. ಇದು ಅದ್ವೈತಸಿದ್ಧಾಂತದಲ್ಲಿಲ್ಲ, ಅಪಸಿದ್ಧಾಂತ.

ಮತ್ತು ಅಭಾವವನ್ನು ವಿರೋಧಿಭಾವಾಂತರವೆ ಎಂದರೆ, ಪಾಷಾಣದಲ್ಲಿ ಸುಖವಿಲ್ಲ, ಅದಕ್ಕೆ ವಿರೋಧಿಭಾವಾಂತರವಾದ ದುಃಖವೂ ಇಲ್ಲ, ಹಾಗೇ ಆತ್ಮನಲ್ಲಿ ಸುಖವೂ ಇಲ್ಲ ಸುಖಾಭಾವವೂ ಇಲ್ಲ ಎಂದಾದೀತು.

ಇಷ್ಟತ್ವವೆಂದರೆ ಇಚ್ಛಾವಿಷಯತ್ವ. ಅದು ಇಚ್ಛೋಪಾಧಿಕ. ಆದ್ದರಿಂದ ಮೋಕ್ಷದಲ್ಲಿ ಉಪಾಧಿಯಾದ ಇಚ್ಛೆ ಇಲ್ಲದಿರುವುರಿಂದ ಇಷ್ಟತ್ವಲಕ್ಷಣವು ಆನಂದದಲ್ಲಿ ಬರುವುದಿಲ್ಲ. 'ಇಷ್ಟತ್ವೋಪಲಕ್ಷಿತ ಸ್ವರೂಪವೇ ಆನಂದ. ಅದು ಮೋಕ್ಷದಲ್ಲಿ ಇದೆ' ಎಂದರೆ ಇಷ್ಟತ್ವೋಪಲಕ್ಷಿತತ್ವರೂಪ ಧರ್ಮವು ಮೋಕ್ಷಾನಂದದಲ್ಲಿರುವುದರಿಂದ ಅಖಂಡತ್ವಹಾನಿ.

**ನ ಪಂಚಮಃ । ದುಃಖಾದಿ ಜ್ಞಾನಸ್ಯಾಪಿ ಆನಂದತ್ವಾಪಾತಾತ್ । ವಿಷಯಾನುಲ್ಲೇಖಿ ಜ್ಞಾನಂ ತಥೇತಿ ಚೇನ್ನ । ವಿರೋಧಾತ್ । ವಿಜ್ಞಾನಮಾನಂದಂ ಬ್ರಹ್ಮೇತ್ಯಾದೌ ವಿಜ್ಞಾನ ಪದೇನೈವ ದುಃಖವ್ಯಾವೃತ್ತಿ ಸಿದ್ಧ್ಯಾ ಆನಂದಪದವೈಯರ್ಥ್ಯಾಚ್ಚ ।**

(5) ವಿಜ್ಞಾನಾತ್ಮಕತ್ವವೇ ಆನಂದತ್ವ ಎಂಬ ಐದನೇ ಪಕ್ಷವೂ ಸರಿಯಲ್ಲ. 'ಜ್ಞಾನವೇ ಆನಂದ' ಎಂದರೆ ದುಃಖಜ್ಞಾನವೂ ಆನಂದ ಎಂದಾದೀತು. ಜ್ಞಾನದಲ್ಲಿ ದುಃಖ ಮುಂತಾದ ಯಾವ ವಿಷಯವೂ ಗೋಚರವಾಗಬಾರದು. ಅಂಥ ಜ್ಞಾನವು ಆನಂದ ಎನ್ನುತ್ತೇನೆ ಎಂದರೆ, ಅದು ಅಸಂಗತ. ಏನನ್ನೂ ವಿಷಯೀಕರಿಸದ ಜ್ಞಾನವೆಂದರೆ ಅದು ಜ್ಞಾನವೇ ಅಲ್ಲ. 'ವಿಷಯರಹಿತವಾದ ಜ್ಞಾನ'ವೆಂದರೆ ಬಂಜೆಯ ಮಗ ಎನ್ನುವಂತೆ ಸ್ವವ್ಯಾಹತವಾಗುವುದು.

'ವಿಜ್ಞಾನಮಾನಂದಂ ಬ್ರಹ್ಮ' ಇತ್ಯಾದಿ ಶ್ರುತಿಯಲ್ಲಿ 'ವಿಜ್ಞಾನ' ಪದದಿಂದಲೇ ವಿಜ್ಞಾನರೂಪವಾದ ಆನಂದವನ್ನು ಹೇಳಿ ಬ್ರಹ್ಮನಲ್ಲಿ ದುಃಖವ್ಯಾವೃತ್ತಿಯನ್ನು ಬೋಧಿಸಿದ ಬಳಿಕ ಪುನಃ 'ಆನಂದ' ಶಬ್ದದಿಂದ ಆನಂದವನ್ನು ಹೇಳಿ ದುಃಖವ್ಯಾವೃತ್ತಿಯನ್ನು ಬೋಧಿಸುವುದು ವ್ಯರ್ಥವಾಗುವುದು.

ಮತ್ತು ಮೋಕ್ಷದಲ್ಲಿ ಜ್ಞಾನವಿದ್ದರೆ ಜ್ಞಾನರೂಪವಾದ ಆನಂದ ಇರುವುದರಿಂದ ಬೇರೆ ಆನಂದವೆಂಬುದು ಇಲ್ಲವೆಂದಾದೀತು. ಜ್ಞಾನ ಅಥವಾ ಆನಂದ ಎಂದು ಯಾವುದಾದರೊಂದು ಪದಾರ್ಥ ಮೋಕ್ಷದಲ್ಲಿರುತ್ತದೆ ಹೊರತು 'ಆನಂದದ ಅನುಭವ'ವೆಂಬುದಿಲ್ಲ ಎಂದೂ, ಮೋಕ್ಷವು ಅಪುರುಷಾರ್ಥವಾದೀತೆಂದೂ ಅನಿಷ್ಟಾಪತ್ತಿಯೂ ಇದೆ.

'ವಿಜ್ಞಾನ ಆನಂದ ಪದಗಳು ಏಕಾರ್ಥಕವಾದರೂ ಪ್ರವೃತ್ತಿನಿಮಿತ್ತ ಬೇರೆ ಇರುವುದರಿಂದ ಅವು ವ್ಯರ್ಥವಲ್ಲ. ಬ್ರಹ್ಮನಲ್ಲಿ ಕಲ್ಪಿತವಾದ ಜ್ಞಾನತ್ವಜಾತಿ ಆನಂದತ್ವ ಜಾತಿಗಳನ್ನು ಹೇಳಿ ವಿಜ್ಞಾನೇತರ ವ್ಯಾವೃತ್ತಿ ಆನಂದೇತರವ್ಯಾವೃತ್ತಿ ರೂಪವಾದ ಎರಡು ಬೇರೆಬೇರೆ ವ್ಯಾವೃತ್ತಿಗಳನ್ನು ತಿಳಿಸುವುದರಿಂದ ವಿಜ್ಞಾನ ಆನಂದ ಪದಗಳು ಎರಡೂ ಸಾರ್ಥಕವೆ' ಎನ್ನುತ್ತಾನೆ ಸಿದ್ಧಿಕಾರ.

ಇದು ಅಸಂಗತ. ನಾವು ವಿಜ್ಞಾನ-ಆನಂದಪದಗಳಿಗೆ ಒಂದೇ ಪ್ರವೃತ್ತಿ ನಿಮಿತ್ತವೆನ್ನುತ್ತ ವೈಯರ್ಥ್ಯವನ್ನು ಹೇಳುತ್ತಿಲ್ಲ. ಜ್ಞಾನ ಆನಂದಗಳಲ್ಲಿ ಯಾವುದಾದರೊಂದೇ ಇದ್ದೀತು. ಮೋಕ್ಷದಲ್ಲಿ 'ಆನಂದದ ಅನುಭವ'ವೆಂಬುದು ಇಲ್ಲವೆಂದಾದೀತೆಂದು ಆಪಾದಿಸುತ್ತಿದ್ದೇವೆ. ಆನಂದಪದದ

**ಸ್ವಾಭಾವಿಕತ್ವೇಽಖಂಡಾರ್ಥತ್ವಾಭಾವಾಪಾತಃ । ಔಪಾಧಿಕತ್ವೇ ಕದಾಚಿತ್ ಆನಂದ-ನಿವೃತ್ತ್ಯಾಪಾತಃ ।**

(3) ಅನುಕೂಲ ವೇದನ ರೂಪತ್ವವೇ ಆನಂದತ್ವ. ಅನುಕೂಲವೆಂದು ಗ್ರಹಿಸುವ ಜ್ಞಾನವೆ ಆನಂದ ಎನ್ನುವ ಮೂರನೇ ಪಕ್ಷಕ್ಕೂ ಇದೇ ದೋಷ ಬರುತ್ತದೆ.

ಮತ್ತು 'ಅನುಕೂಲ'ವೆಂದು ಗ್ರಹಿಸುವ ಜ್ಞಾನದಲ್ಲಿ ಅನುಕೂಲತ್ವವು ಪ್ರಕಾರ. ಅದು ವೇದನ ಸ್ವಭಾವಕ್ಕಿಂತ ಬೇರೆಯಾಗಿದ್ದು ಸ್ವಾಭಾವಿಕವೇ ಆಗಿದೆ ಎಂದರೆ ಜ್ಞಾನವು ಸಖಂಡಾರ್ಥವಾಯಿತು. ಆಗ ಅಖಂಡಾರ್ಥತ್ವಕ್ಕೆ ಭಂಗ ಬರುವುದು. ಔಪಾಧಿಕವಾಗಿದೆ ಎಂದರೆ ಉಪಾಧಿನಾಶವಾದಾಗ ಕೆಲವೊಮ್ಮೆ ಔಪಾಧಿಕವಾದ ಅನುಕೂಲತ್ವವೂ ನಷ್ಟವಾಗುವುದು, ಆನಂದವಿಲ್ಲವೆಂದಾಗುವುದು ಮತ್ತು ಬ್ರಹ್ಮನಲ್ಲಿ ಆನಂದವೆಂಬ ಲಕ್ಷಣ ಬರುವುದಿಲ್ಲ, ಸ್ವರೂಪಲಕ್ಷಣತ್ವಕ್ಕೆ ಭಂಗ ಬರುವುದು.

**ನ ಚತುರ್ಥಃ । ಉಕ್ತರೀತ್ಯಾ ಆನುಕೂಲ್ಯಾಸಂಭವಾತ್ ।**
**ಏತೇನ ನಿರುಪಾಧಿಕೇಷ್ಟತ್ವಂ ಆನಂದತ್ವಮಿತಿ ನಿರಸ್ತಂ ।**

(4) ಅನುಕೂಲತ್ವಮಾತ್ರವೇ ಆನಂದತ್ವ ಎಂಬ ನಾಲ್ಕನೇ ಪಕ್ಷವೂ ಸರಿಯಲ್ಲ. ಅನುಕೂಲತ್ವವೆಂಬ ಧರ್ಮವು ಸ್ವಾಭಾವಿಕವೆಂದರೆ ಸಧರ್ಮಕತ್ವ ಬರುವುದರಿಂದ ಆನಂದಕ್ಕೆ ಅಖಂಡತ್ವ ಭಂಗ. ಔಪಾಧಿಕವೆಂದರೆ ಅದು ಅನಿತ್ಯವಾದ್ದರಿಂದ ಅದು ನಾಶವಾದಾಗ ತತ್ಸ್ವರೂಪವಾದ ಆನಂದದ ನಾಶವಾದೀತು. ಆನಂದವು ಬ್ರಹ್ಮನ ಸ್ವರೂಪಲಕ್ಷಣವಾಗದೆ ಹೋದೀತು ಎಂದು ಹಿಂದೆ ಹೇಳಿದಂತೆಯೇ ದೋಷ ಬಂದೀತು.

ಹೀಗೆ ಈ ಲಕ್ಷಣವನ್ನು ನಿರಾಕರಣಮಾಡಿದ್ದರಿಂದ 'ನಿರುಪಾಧಿಕ ಇಷ್ಟತ್ವವೇ ಆನಂದತ್ವ' ಎಂದು ಇನ್ನೊಂದು ಲಕ್ಷಣವೂ ನಿರಾಕೃತವಾಯಿತು. ಅನುಕೂಲತ್ವವೇ ಕೂಡದಿರುವುದರಿಂದ ಇಚ್ಛೆ ಕೂಡುವುದಿಲ್ಲ. ಮತ್ತು ಮೋಕ್ಷದಲ್ಲಿ ಇಚ್ಛೆ ಇರುವುದೂ ಇಲ್ಲವಾಗಿ ಇಷ್ಟತ್ವವೂ ಇಲ್ಲ. ಮತ್ತು ಅನುಕೂಲತ್ವದಂತೆಯೇ ನಿರುಪಾಧಿಕೇಷ್ಟತ್ವ ಧರ್ಮವೂ ಕೂಡ ಸ್ವರೂಪಕ್ಕಿಂತ ಬೇರೆಯಾಗಿ ಸ್ವಾಭಾವಿಕವೆಂದರೆ ಅಖಂಡತ್ವಭಂಗ, ಔಪಾಧಿಕ ವೆಂದರೆ ನಾಶಪ್ರಸಕ್ತಿ ಇದೆ ಎಂದು.

ಅನುಕೂಲತ್ವವು ಆನಂದದಲ್ಲಿ ಇರುವಂತೆ ದುಃಖಾಭಾವದಲ್ಲಿಯೂ ಇರುವುದರಿಂದ ಲಕ್ಷಣಕ್ಕೆ ದುಃಖಾಭಾವದಲ್ಲಿ ಅತಿವ್ಯಾಪ್ತಿ.

'ದುಃಖಾಭಾವವೂ ಒಂದು ಬಗೆಯ ಸುಖವೆ. ದುಃಖದ ಅಭಾವವೆಂದರೆ ದುಃಖಕ್ಕೆ ವಿರೋಧಿಯಾದ ಭಾವಾಂತರವೆ, ಸುಖವೆ ಎಂದು ಅಂಗೀಕರಿಸುತ್ತೇನೆ' ಎನ್ನುತ್ತಾನೆ ಸಿದ್ಧಿಕಾರ. ಇದು ಅದ್ವೈತಸಿದ್ಧಾಂತದಲ್ಲಿಲ್ಲ, ಅಪಸಿದ್ಧಾಂತ.

ಮತ್ತು ಅಭಾವವನ್ನು ವಿರೋಧಿಭಾವಾಂತರವೆ ಎಂದರೆ, ಪಾಷಾಣದಲ್ಲಿ ಸುಖವಿಲ್ಲ, ಅದಕ್ಕೆ ವಿರೋಧಿಭಾವಾಂತರವಾದ ದುಃಖವೂ ಇಲ್ಲ, ಹಾಗೇ ಆತ್ಮನಲ್ಲಿ ಸುಖವೂ ಇಲ್ಲ ಸುಖಾಭಾವವೂ ಇಲ್ಲ ಎಂದಾದೀತು.

ಇಷ್ಟತ್ವವೆಂದರೆ ಇಚ್ಛಾವಿಷಯತ್ವ. ಅದು ಇಚ್ಛೋಪಾಧಿಕ. ಆದ್ದರಿಂದ ಮೋಕ್ಷದಲ್ಲಿ ಉಪಾಧಿಯಾದ ಇಚ್ಛೆ ಇಲ್ಲದಿರುವುರಿಂದ ಇಷ್ಟತ್ವಲಕ್ಷಣವು ಆನಂದದಲ್ಲಿ ಬರುವುದಿಲ್ಲ. 'ಇಷ್ಟತ್ವೋಪಲಕ್ಷಿತ ಸ್ವರೂಪವೇ ಆನಂದ. ಅದು ಮೋಕ್ಷದಲ್ಲಿ ಇದೆ' ಎಂದರೆ ಇಷ್ಟತ್ವೋಪಲಕ್ಷಿತತ್ವರೂಪ ಧರ್ಮವು ಮೋಕ್ಷಾನಂದದಲ್ಲಿರುವುದರಿಂದ ಅಖಂಡತ್ವಹಾನಿ.

**ನ ಪಂಚಮಃ । ದುಃಖಾದಿ ಜ್ಞಾನಸ್ಯಾಪಿ ಆನಂದತ್ವಾಪಾತಾತ್ । ವಿಷಯಾನುಲ್ಲೇಖಿ ಜ್ಞಾನಂ ತಥೇತಿ ಚೇನ್ನ । ವಿರೋಧಾತ್ । ವಿಜ್ಞಾನಮಾನಂದಂ ಬ್ರಹ್ಮೇತ್ಯಾದೌ ವಿಜ್ಞಾನ ಪದೇನೈವ ದುಃಖವ್ಯಾವೃತ್ತಿ ಸಿದ್ಧ್ಯಾ ಆನಂದಪದವೈಯರ್ಥ್ಯಾಚ್ಚ ।**

(5) ವಿಜ್ಞಾನಾತ್ಮಕತ್ವವೇ ಆನಂದತ್ವ ಎಂಬ ಐದನೇ ಪಕ್ಷವೂ ಸರಿಯಲ್ಲ. 'ಜ್ಞಾನವೇ ಆನಂದ' ಎಂದರೆ ದುಃಖಜ್ಞಾನವೂ ಆನಂದ ಎಂದಾದೀತು. ಜ್ಞಾನದಲ್ಲಿ ದುಃಖ ಮುಂತಾದ ಯಾವ ವಿಷಯವೂ ಗೋಚರವಾಗಬಾರದು. ಅಂಥ ಜ್ಞಾನವು ಆನಂದ ಎನ್ನುತ್ತೇನೆ ಎಂದರೆ, ಅದು ಅಸಂಗತ. ಏನನ್ನೂ ವಿಷಯೀಕರಿಸದ ಜ್ಞಾನವೆಂದರೆ ಅದು ಜ್ಞಾನವೇ ಅಲ್ಲ. 'ವಿಷಯರಹಿತವಾದ ಜ್ಞಾನ'ವೆಂದರೆ ಬಂಜೆಯ ಮಗ ಎನ್ನುವಂತೆ ಸ್ವವ್ಯಾಹತವಾಗುವುದು.

'ವಿಜ್ಞಾನಮಾನಂದಂ ಬ್ರಹ್ಮ' ಇತ್ಯಾದಿ ಶ್ರುತಿಯಲ್ಲಿ 'ವಿಜ್ಞಾನ' ಪದದಿಂದಲೇ ವಿಜ್ಞಾನರೂಪವಾದ ಆನಂದವನ್ನು ಹೇಳಿ ಬ್ರಹ್ಮನಲ್ಲಿ ದುಃಖವ್ಯಾವೃತ್ತಿಯನ್ನು ಬೋಧಿಸಿದ ಬಳಿಕ ಪುನಃ 'ಆನಂದ' ಶಬ್ದದಿಂದ ಆನಂದವನ್ನು ಹೇಳಿ ದುಃಖವ್ಯಾವೃತ್ತಿಯನ್ನು ಬೋಧಿಸುವುದು ವ್ಯರ್ಥವಾಗುವುದು.

ಮತ್ತು ಮೋಕ್ಷದಲ್ಲಿ ಜ್ಞಾನವಿದ್ದರೆ ಜ್ಞಾನರೂಪವಾದ ಆನಂದ ಇರುವುದರಿಂದ ಬೇರೆ ಆನಂದವೆಂಬುದು ಇಲ್ಲವೆಂದಾದೀತು. ಜ್ಞಾನ ಅಥವಾ ಆನಂದ ಎಂಬ ಯಾವುದಾದರೊಂದು ಪದಾರ್ಥ ಮೋಕ್ಷದಲ್ಲಿರುತ್ತದೆ ಹೊರತು 'ಆನಂದದ ಅನುಭವ'ವೆಂಬುದಿಲ್ಲ ಎಂದೂ, ಮೋಕ್ಷವು ಅಪುರುಷಾರ್ಥವಾದೀತೆಂದೂ ಅನಿಷ್ಟಾಪತ್ತಿಯೂ ಇದೆ.

'ವಿಜ್ಞಾನ ಆನಂದ ಪದಗಳು ಏಕಾರ್ಥಕವಾದರೂ ಪ್ರವೃತ್ತಿನಿಮಿತ್ತ ಬೇರೆ ಇರುವುದರಿಂದ ಅವು ವ್ಯರ್ಥವಲ್ಲ. ಬ್ರಹ್ಮನಲ್ಲಿ ಕಲ್ಪಿತವಾದ ಜ್ಞಾನತ್ವಜಾತಿ ಆನಂದತ್ವ ಜಾತಿಗಳನ್ನು ಹೇಳಿ ವಿಜ್ಞಾನೇತರ ವ್ಯಾವೃತ್ತಿ ಆನಂದೇತರವ್ಯಾವೃತ್ತಿ ರೂಪವಾದ ಎರಡು ಬೇರೆಬೇರೆ ವ್ಯಾವೃತ್ತಿಗಳನ್ನು ತಿಳಿಸುವುದರಿಂದ ವಿಜ್ಞಾನ ಆನಂದ ಪದಗಳು ಎರಡೂ ಸಾರ್ಥಕವೆ' ಎನ್ನುತ್ತಾನೆ ಸಿದ್ಧಿಕಾರ.

ಇದು ಅಸಂಗತ. ನಾವು ವಿಜ್ಞಾನ-ಆನಂದಪದಗಳಿಗೆ ಒಂದೇ ಪ್ರವೃತ್ತಿ ನಿಮಿತ್ತವೆನ್ನುತ್ತ ವೈಯರ್ಥ್ಯವನ್ನು ಹೇಳುತ್ತಿಲ್ಲ. ಜ್ಞಾನ ಆನಂದಗಳಲ್ಲಿ ಯಾವುದಾದರೊಂದೇ ಇದ್ದೀತು. ಮೋಕ್ಷದಲ್ಲಿ 'ಆನಂದದ ಅನುಭವ'ವೆಂಬುದು ಇಲ್ಲವೆಂದಾದೀತೆಂದು ಆಪಾದಿಸುತ್ತಿದ್ದೇವೆ. ಆನಂದಪದದ

ಕಾರ್ಯವಾದ ದುಃಖವ್ಯಾವೃತ್ತಿಯನ್ನು ವಿಜ್ಞಾನಪದವೇ ಮಾಡಿರುವುದರಿಂದ ಆನಂದಪದ ಇನ್ನೇನೂ ಅಧಿಕಅರ್ಥವನ್ನು ಹೇಳದಿರುವುದರಿಂದ ಆನಂದಪದ ವೈಯರ್ಥ್ಯವನ್ನು ಹೇಳುತ್ತಿದ್ದೇವೆ.

**ನ ಷಷ್ಠಃ। ವಿರೋಧಸ್ಯ ನಿವರ್ತಕತ್ವಾದಿರೂಪತ್ವೇ ದುಃಖಸ್ಯ ನಿತ್ಯ ನಿವೃತ್ತ್ಯಾಪತ್ತೇಃ। ತಾದಾತ್ಮ್ಯಾಯೋಗ್ಯತ್ವರೂಪತ್ವೇ ಘಟಾದೇರಪಿ ಆನಂದತ್ವಾಪಾತಾತ್। ವಿಜ್ಞಾನಮಾನಂದಂ ಬ್ರಹ್ಮ ಇತ್ಯಾದೌ ದುಃಖವ್ಯಾವೃತ್ತೇಃ ಆರ್ಥಿಕತ್ವೋಕ್ತ್ಯಯೋಗಾಚ್ಚ।**

(6) ದುಃಖವಿರೋಧಿ ಸ್ವರೂಪತ್ವವೇ ಆನಂದತ್ವ ಎಂಬ ಆರನೇ ಪಕ್ಷವೂ ಯುಕ್ತವಲ್ಲ. ದುಃಖ ವಿರೋಧವು ದುಃಖನಿವರ್ತಕತ್ವಾದಿ ರೂಪವೆನ್ನುವುದಾದರೆ, ದುಃಖವಿರೋಧಿಸ್ವರೂಪತ್ವವು ಆತ್ಮನಲ್ಲಿರುವುದರಿಂದ ಆತ್ಮನಲ್ಲಿ ದುಃಖವು ನಿತ್ಯನಿವೃತ್ತವಾಗಿರಬೇಕಾದೀತು. ವಿರೋಧವೆಂದರೆ ತಾದಾತ್ಮ್ಯಾಯೋಗ್ಯತ್ವ ಅಂದರೆ ಅತ್ಯಂತಭೇದ ಎನ್ನುವುದಾದರೆ, ಇಂಥ ದುಃಖವಿರೋಧಿ ಸ್ವರೂಪತ್ವವು ಘಟಾದಿಗಳಿಗೂ ಇರುವುದರಿಂದ ಅತಿವ್ಯಾಪ್ತಿ.

ವಿಜ್ಞಾನಮಾನಂದಂ ಬ್ರಹ್ಮ ಎಂಬಲ್ಲಿ ಆನಂದಪದದಿಂದ ದುಃಖವ್ಯಾವೃತ್ತಿ ಅಂದರೆ ದುಃಖಾತ್ಯಂತಭೇದರೂಪವಾದ ಆನಂದತ್ವವೇ ನೇರವಾಗಿ ಉಕ್ತವಾಗುವುದರಿಂದ 'ದುಃಖವ್ಯಾವೃತ್ತಿ ಆರ್ಥಿಕ, ಅರ್ಥಾತ್‌ಸಿದ್ಧವಾಗುತ್ತದೆ' ಎನ್ನುವುದೂ ಕೂಡಲಾರದು.

**ನ ಸಪ್ತಮಃ। ವೈಶೇಷಿಕಮೋಕ್ಷವತ್ ತ್ವದುಕ್ತಸ್ಯ ದುಃಖಸ್ಯ ಅಭಾವೇ ಸತ್ಯಪಿ ಆನಂದಾಭಾವೇನ ಅಪುಮರ್ಥತ್ವಸ್ಯ ತ್ವನ್ಮೋಕ್ಷೇಽಪ್ಯಾಪಾತಾತ್।**

(7) ದುಃಖಾಭಾವೋಪಲಕ್ಷಿತ ಸ್ವರೂಪತ್ವವನ್ನೇ ಆನಂದತ್ವವೆನ್ನುವ ಏಳನೇ ಪಕ್ಷವೂ ಸರಿಯಲ್ಲ, ಏಕೆಂದರೆ, ದುಃಖಾಭಾವವಿದ್ದರೂ ಜೊತೆಗೆ ಆನಂದವಿಲ್ಲದಿದ್ದರೆ ಅಂಥ ಮೋಕ್ಷವು ಅಪುರುಷಾರ್ಥವೆನಿಸುತ್ತದೆ ಎಂದು ವೈಶೇಷಿಕರಿಗೆ ಅದ್ವೈತಿಯು ಹೇಳುತ್ತಾನೆ. ಈಗ ಅದ್ವೈತಿಯೂ ಹಾಗೇ ದುಃಖಾಭಾವೋಪಲಕ್ಷಿತ ಸ್ವರೂಪತ್ವವನ್ನೇ ಆನಂದತ್ವವೆನ್ನುತ್ತ ಮೋಕ್ಷದಲ್ಲಿ ಅದನ್ನು ಒಪ್ಪಿ ಜೊತೆಗೆ ಆನಂದವನ್ನು ಒಪ್ಪದಿದ್ದರೆ ಅವನ ಮೋಕ್ಷವೂ ವೈಶೇಷಿಕರ ಮೋಕ್ಷದಂತೆಯೇ ಅಪುರುಷಾರ್ಥವೆನಿಸೀತು.

**ನಾಷ್ಟಮಃ। ಪರಾಂಗೀಕೃತಸ್ಯ ನಿರುಪಾಧ್ಯನುಕೂಲತಯಾ ವೇದನೀಯತ್ವಾದೇಃ ತ್ವನ್ಮತೇ ಅಸಂಭವಾತ್।**

(8) ಪರನು ಎಂದರೆ ದ್ವೈತಿಯು ಅಂಗೀಕರಿಸಿದ ಆನಂದತ್ವವೇ ಅದ್ವೈತಿಗೂ ಅಭಿಮತ ಎನ್ನುವ ಎಂಟನೇ ಪಕ್ಷವೂ ಸರಿಯಲ್ಲ. ದ್ವೈತಿಯು ಸಗುಣಬ್ರಹ್ಮನಲ್ಲಿ ಒಪ್ಪಿರುವ ಸುಖತ್ವವು ನಿರುಪಾಧಿಕಅನುಕೂಲತಯಾ ವೇದನೀಯತ್ವಂ ಮುಂತಾದ ರೂಪವಾದುದು. ಇದು 'ಬ್ರಹ್ಮವು ನಿರ್ವಿಶೇಷ ಅವೇದ್ಯ' ಎನ್ನುವ ಅದ್ವೈತಮತದಲ್ಲಿ ಸರ್ವಥಾ ಅಸಂಭವಿ ಎನ್ನುವುದು ದ್ವಿತೀಯಪಕ್ಷ ನಿರಾಕರಣೆಯಿಂದಲೇ ಸ್ಪಷ್ಟವಾಗುತ್ತದೆ.

ಯದಿ ಚ ಆನಂದತ್ವಾದೇಃ ದುರ್ನಿರೂಪತ್ವೇಽಪಿ ತದಧಿಕರಣಂ ಬ್ರಹ್ಮ ಅಬಾಧ್ಯಂ ಆನಂದಾದ್ಯಾತ್ಮಕಂ ಚ ತರ್ಹಿ ಸತ್ಯತ್ವಾದೇಃ ದುರ್ನಿರೂಪತ್ವೇಽಪಿ ತದಧಿಕರಣಂ ಜಗದಪಿ ಅಬಾಧ್ಯಂ ಸದಾತ್ಮಕಂ ಚ ಸ್ಯಾತ್ ।

ಏವಂಚ- ನಿರುಪಾಧ್ಯನುಕೂಲತ್ವ ವೇದನೀಯಂ ಸುಖಂ ಮತಂ ।
ನಿರ್ವಿಶೇಷಮವೇದ್ಯಂ ಚ ಕಥಂ ಬ್ರಹ್ಮ ಸುಖಾತ್ಮಕಂ ।

'ಎಂಟು ವಿಕಲ್ಪಗಳಲ್ಲಿಯೂ ಆತ್ಮನ ಆನಂದತ್ವಾದಿಗಳನ್ನು ನಮಗೆ ನಿರೂಪಿಸಲಾಗದಿದ್ದರೂ ಚಿಂತೆಯಿಲ್ಲ. ಅವುಗಳಿಗೆ ಅಧಿಕರಣವಾದ ಆತ್ಮನು ಅಬಾಧ್ಯ ಆನಂದಾದ್ಯಾತ್ಮಕನೆಂದು ಶ್ರುತಿಸಿದ್ಧವಾಗಿದೆ. ಅದರಿಂದ ಅದ್ವೈತಕ್ಕೆ ಏನೂ ಹಾನಿ ಇಲ್ಲ' ಎಂದು ಅದ್ವೈತಿ ಹೇಳಿದರೆ ನಾವು ಅತಿಪ್ರಸಕ್ತಿಯನ್ನು ಹೇಳುತ್ತೇವೆ, 'ಅದೇರೀತಿ ಜಗತ್ತಿನ ಸತ್ಯತ್ವಾದಿಗಳನ್ನು ನಮಗೆ ನಿರೂಪಿಸಲಾಗದಿದ್ದರೂ ಜಗತ್ತು ಅಬಾಧ್ಯ ಸತ್ಯ ಎಂದೇ ಶ್ರುತ್ಯಾದಿಸಿದ್ಧವಾಗಿದೆ. ದ್ವೈತಕ್ಕೆ ಏನೂ ಹಾನಿ ಬರುವುದಿಲ್ಲ' ಎಂದು.

ಏವಂಚ ನಿರುಪಾಧಿಕವಾಗಿ ಅನುಕೂಲತ್ವೇನ ವೇದನೀಯವೇ ಸುಖವೆನಿಸುತ್ತದೆ. ನಿರ್ವಿಶೇಷವಾದ ಅದ್ವೈತಿಯ ಬ್ರಹ್ಮನಲ್ಲಿ ನಿರುಪಾಧಿಕ ಅನುಕೂಲತ್ವ ಅಂದರೆ, ಅನ್ಯವಿಷಯಕ ಇಚ್ಛಾ ಅನಧೀನ ಇಚ್ಛಾ ವಿಷಯತ್ವರೂಪಧರ್ಮವೂ ಇಲ್ಲ ಮತ್ತು ಅವೇದ್ಯವೆಂದು ಅಂಗೀಕೃತವಾದ ಆ ಬ್ರಹ್ಮನಲ್ಲಿ ವೇದನೀಯತ್ವವೂ ಇಲ್ಲವೆಂದಮೇಲೆ ಅದ್ವೈತಿಯ ಬ್ರಹ್ಮವನ್ನು ಸುಖಾತ್ಮಕವೆಂದು ಹೇಳಲು ಹೇಗೆ ಸಾಧ್ಯ?



किंचेदमद्वितीयत्वं? द्वितीयाभावविशिष्टत्वं वा तदुपलक्षितत्वं वा । नाद्यः । द्वितीयाभावस्य प्रामाणिकत्वे तेनैव, अप्रामाणिकत्वे द्वितीयेनैव सद्वितीयत्वापातात् । न चाभावस्य प्रामाणिकत्वेऽपि प्राभाकरमत इवाधिकरणमात्रत्वाददोषः । "अनुपलब्धिगम्योऽभाव" इत्यादित्वन्मतभंगात् । अनृतव्यावृत्तेरपि ब्रह्ममात्रत्वेन भेदसत्यत्वापाताच्च ।

प्राभाकरमतेऽपि प्रतियोगिमदधिकरणव्यावृत्त्यर्थं कैवल्यादिविशेषितस्यैवाधिकरणस्याभावत्वाच्च । नचेत्तन्मतेऽप्यनुपपत्तिरेव । अन्यथा गुणगुण्यभेदमते शौक्ल्यादेरिव शक्त्यादिभावधर्माणामपि ब्रह्ममात्रत्वं स्यात् ।

**नच भावरूपद्वितीयाभावविशिष्टत्वमद्वितीयत्वम्, तथाचाभावस्य द्वितीयस्य प्रामाणिकत्वेऽप्यदोषइति वाच्यम् । दृश्यस्याप्यभावस्येव श्रुत्यादिसिद्धस्य धर्माधर्मादिरूपभावस्यापि मिथ्यात्वायोगादित्युक्तत्वात् ।**

**अत एव नांत्यः । उपलक्षणस्याप्यभावस्याप्रामाणिकत्वे तत्प्रतियोगिनो द्वितीयस्य प्रामाणिकत्वावश्यंभावात् ।**

**किंचाभावस्य प्रागभावादित्वे द्वितीयस्यानित्यत्वमात्रं स्यान्न तु मिथ्यात्वम् । अत्यंताभावत्वे उपलक्षणत्वमयावद्द्रव्यभावित्वेन चेदत्यंताभावत्वहानिः । वेदांततात्पर्यविषयत्वादिकार्यानन्वयित्वेन चेदत्यंताभावासिद्धिः ।**

**किंचाप्रामाणिकेन द्वितीयाभावेनेव द्वितीयेनाप्युपलक्षितत्वसंभवात् तेन सद्वितीयं किं न स्यात् ।**

**एवंच द्वैताभावस्तात्त्विकश्चेत्तेन स्यात्सद्वितीयता ।**
**अतात्त्विकश्चेत् द्वैतेन सद्वितीयत्वमापतेत् ।।**

।। **द्वितीयेनैवेति** ।। अभाव प्रतीयोगिनैवेत्यर्थः ।। **अनुपलब्धिगम्य इति**।। यद्यप्यद्वैतिभिरधिष्ठानातिरिक्तस्थले अधिकरणातिरिक्तस्याप्यभावस्यांगीकारान्न तन्मतभंगः, तथाप्यधिकरणभेदेनाभावभेदे प्रमाणाभावात् क्वचिदधिकरणात्मत्वे सर्वत्र तथैवेति तन्मतभंग इत्यत्र तात्पर्यम् । यद्वा एतदस्वरसादेवाह— **अनृतव्यावृत्तेरपीति** ।। ननु तथापि ब्रह्मत्वेनैव सत्यता नतु भेदत्वेनेत्यतो दोषांतरमाह– **प्राभाकरमतेऽपीति** ।। तथाच त्वयापि ब्रह्ममात्रस्य नाभावस्वरूपत्वम् । इदानीमपि तस्य सत्त्वेन प्रतियोगिनोऽसत्त्वप्रसंगात् । किंतु प्रतियोगिनः सत्त्वदशाव्यावृत्तकिंचिद्विशेषितस्यैवेति वक्तव्यतया दुर्वारा सद्वितीयत्वापत्तिरिति भावः ।। **अत्यंताभावत्वहानिरिति** ।। तस्य नित्यत्वादितिभावः ।। **अत्यंताभावासिद्धिरिति** ।।

अतात्पर्येऽपि मानांतराविरोधादर्थसिद्धिरिति तु न वाच्यम्, निरस्तत्वात् सप्रपंचवाक्यविरोधाच्चेति ।



**ಬ್ರಹ್ಮನಿಗೆ ಅದ್ವಿತೀಯತ್ವ ಕೂಡುವುದಿಲ್ಲ**

**ಕಿಂ ಚೇದಮದ್ವಿತೀಯತ್ವಂ ದ್ವಿತೀಯಾಭಾವವಿಶಿಷ್ಟತ್ವಂ ವಾ? ತದುಪಲಕ್ಷಿತತ್ವಂ ವಾ? ನಾದ್ಯಃ। ದ್ವಿತೀಯಾಭಾವಸ್ಯ ಪ್ರಾಮಾಣಿಕತ್ವೇ ತೇನೈವ, ಅಪ್ರಾಮಾಣಿಕತ್ವೇ ದ್ವಿತೀಯೇನೈವ ಸದ್ವಿತೀಯತ್ವಾಪಾತಾತ್ ॥**

ಅದ್ವೈತಿಯು ಹೇಳುವ ಅದ್ವಿತೀಯತ್ವವೆಂದರೆ ದ್ವಿತೀಯಾಭಾವವಿಶಿಷ್ಟತ್ವವೆ? ಅಥವಾ ದ್ವಿತೀಯಾಭಾವೋಪಲಕ್ಷಿತತ್ವವೆ?

ದ್ವಿತೀಯಾಭಾವ ವಿಶಿಷ್ಟತ್ವವೇ ಅದ್ವಿತೀಯತ್ವ ಎನ್ನುವ ಮೊದಲನೆ ಪಕ್ಷ ಸರಿಯಲ್ಲ. ಏಕೆಂದರೆ, ದ್ವಿತೀಯಾಭಾವವು ಪ್ರಮಾಣಸಿದ್ಧವಾಗಿದ್ದರೆ ದ್ವಿತೀಯಾಭಾವವೆಂಬ ದ್ವಿತೀಯದಿಂದ ಯುಕ್ತನಾದ್ದರಿಂದಲೆ ಬ್ರಹ್ಮನು ಸದ್ವಿತೀಯನೆನಿಸುತ್ತಾನೆ, ಅದ್ವಿತೀಯನೆನಿಸುವುದಿಲ್ಲ. ದ್ವಿತೀಯಾಭಾವವು ಪ್ರಮಾಣಸಿದ್ಧವಲ್ಲವೆಂದರೆ ಅದಕ್ಕೆ ವಿರೋಧಿಯಾದ ಪ್ರತಿಯೋಗಿಯಾದ ದ್ವಿತೀಯವೇ ಪ್ರಮಾಣಸಿದ್ಧವಾದ್ದರಿಂದ ಬ್ರಹ್ಮನು ಅದರಿಂದ ಯುಕ್ತನಾಗಿ ಸದ್ವಿತೀಯನೆನಿಸುತ್ತಾನೆ, ಅದ್ವಿತೀಯನೆನಿಸುವುದಿಲ್ಲ.

**ನಚ ಅಭಾವಸ್ಯ ಪ್ರಾಮಾಣಿಕತ್ವೇಽಪಿ ಪ್ರಾಭಾಕರಮತ ಇವ ಅಧಿಕರಣ ಮಾತ್ರತ್ವಾದ್ ಅದೋಷಃ। ಅನುಪಲಬ್ಧಿಗಮ್ಯೋಽಭಾವ ಇತ್ಯಾದಿ ತ್ವನ್ಮತ ಭಂಗಾತ್ ।**

'ಅಭಾವವು ಪ್ರಮಾಣಸಿದ್ಧವಾದರೂ ಪ್ರಾಭಾಕರಮತದಂತೆ ಅಧಿಕರಣಸ್ವರೂಪವಾಗಿರುವುದರಿಂದ ದ್ವಿತೀಯಾಭಾವವು ಅಧಿಕರಣಬ್ರಹ್ಮಸ್ವರೂಪವೇ ಆಗಿದೆ, ದ್ವಿತೀಯವಾಗಿಲ್ಲ. ಹೀಗಾಗಿ ಬ್ರಹ್ಮ ಸದ್ವಿತೀಯ ಎನಿಸಲಾರದು' ಎಂದು ಅದ್ವೈತಿ ಹೇಳಿದರೆ ಅದು ಅವನ ಮತಕ್ಕೇ ವಿರುದ್ಧವಾಗುವುದು. ಅಭಾವವು ಯೋಗ್ಯಾನುಪಲಬ್ಧಿಗಮ್ಯವೆಂದು ಅವನ ಮತ. ಅಭಾವವನ್ನು ಅಧಿಕರಣಸ್ವರೂಪವೆಂದು ಹೇಳಿದರೆ ಅಧಿಕರಣವು ಪ್ರತ್ಯಕ್ಷಾದಿ ಪ್ರಮಾಣಸಿದ್ಧವಾಗುವುದರಿಂದ ಅಭಾವವೂ ಪ್ರತ್ಯಕ್ಷಾದಿ ಪ್ರಮಾಣಸಿದ್ಧವಾಗಬೇಕಾದೀತು.

ಮತ್ತು ಬ್ರಹ್ಮ ಉಪನಿಷದೇಕಗಮ್ಯ ಎಂದು ಅದ್ವೈತಿ ಹೇಳುತ್ತಾನೆ. ದ್ವಿತೀಯಾಭಾವವು ಅಧಿಕರಣ ಬ್ರಹ್ಮಸ್ವರೂಪವಾದರೆ ಅದೂ ಕೂಡ ಉಪನಿಷದೇಕ ಗಮ್ಯವಾದೀತು. ಅಭಾವವು ಅನುಪಲಬ್ಧಿ ಗಮ್ಯ ಎನ್ನುವ ಅವನ ಮತಕ್ಕೆ ಭಂಗ ಬಂದೀತು. ಸೋಪಾಧಿಕವಾದ ದ್ವಿತೀಯಾಭಾವವು ನಿರುಪಾಧಿಕ ಬ್ರಹ್ಮಸ್ವರೂಪವಾಗುವುದೂ ಅಸಂಭವ.

ಯದ್ಯಪಿ ಆರೋಪಾಧಿಷ್ಠಾನರೂಪವಾದ ಅಧಿಕರಣದಲ್ಲಿ ಅಭಾವವು ಅಧಿಕರಣ ಸ್ವರೂಪವಾದರೂ ಅಧಿಷ್ಠಾನಾತಿರಿಕ್ತವಾದ ಅಧಿಕರಣದಲ್ಲಿ ಅಭಾವವು ಅಧಿಕರಣಾತಿರಿಕ್ತವೆ, ಅನುಪಲಬ್ಧಿ ಗಮ್ಯವೆ ಎಂದು ಅದ್ವೈತಿ ಹೇಳುವುದರಿಂದ ಅನುಪಪತ್ತಿ ಏನಿಲ್ಲ. ಆದರೆ ಅಧಿಕರಣ ಭೇದೇನ ಅಭಾವಭೇದ ವಿಷಯದಲ್ಲಿ ಪ್ರಮಾಣವಿಲ್ಲದ್ದರಿಂದ ಅಭಾವವು ಅಧಿಷ್ಠಾನರೂಪವಾದ ಅಧಿಕರಣದಲ್ಲಿ ಅಧಿಕರಣಸ್ವರೂಪವಾದರೆ ಅತಿರಿಕ್ತವಾದ ಅಧಿಕರಣದಲ್ಲಿಯೂ ಅದನ್ನು ಅಧಿಕರಣಸ್ವರೂಪವೆಂದೇ ಹೇಳಬೇಕಾಗುತ್ತದೆ. ಆಗ ಹಿಂದೆ ಹೇಳಿದ ಅನುಪಪತ್ತಿ ಅಪರಿಹಾರ್ಯ.

**ಅನೃತ ವ್ಯಾವೃತ್ತೇರಪಿ ಬ್ರಹ್ಮ ಮಾತ್ರತ್ವೇನ ಭೇದ ಸತ್ಯತ್ವಾಪಾತಾಚ್ಚ ।**

ಅಧಿಕರಣ ಭೇದೇನ ಅಭಾವ ಭೇದದಲ್ಲಿ ಪ್ರಮಾಣವಿದೆ ಎಂದು ಆಗ್ರಹ ಮಾಡಿದರೆ ಬೇರೆಯ ದೋಷವನ್ನು ಹೇಳೋಣ— ಬ್ರಹ್ಮನಲ್ಲಿರುವ ಅನೃತವ್ಯಾವೃತ್ತಿಯು ಅನೃತ ಭೇದರೂಪವಾದ ಅಭಾವ. ಅದರಿಂದ ಅದು ಅಧಿಕರಣ ಬ್ರಹ್ಮಸ್ವರೂಪವಾಗಬೇಕು. ಆಗ ಬ್ರಹ್ಮದಂತೆ ಭೇದವೂ ಸತ್ಯವಾಗಬೇಕು ಎಂದು.

**ಪ್ರಾಭಾಕರಮತೇಽಪಿ ಪ್ರತಿಯೋಗಿಮದಧಿಕರಣ ವ್ಯಾವೃತ್ತ್ಯರ್ಥಂ ಕೈವಲ್ಯಾದಿ ವಿಶೇಷಿತಸ್ಯೈವ ಅಧಿಕರಣಸ್ಯಾಭಾವತ್ವಾಚ್ಚ । ನಚೇತ್ ತನ್ಮತೇಽಪಿ ಅನುಪಪತ್ತಿರೇವ ।**

'ಬ್ರಹ್ಮನಲ್ಲಿರುವ ಭೇದವು ಸತ್ಯವಾದರೂ ಬ್ರಹ್ಮಾಭಿನ್ನವೆಂದು ಒಪ್ಪುವುದರಿಂದ ಬ್ರಹ್ಮತ್ವೇನ ಸತ್ಯವೇ ಹೊರತು ಭೇದತ್ವೇನ ಸತ್ಯವಲ್ಲ ಎನ್ನುತ್ತೇನೆ. ಅದರಿಂದ ಅದ್ವೈತಕ್ಕೆ ಹಾನಿ ಇಲ್ಲ' ಎಂದು ಅದ್ವೈತಿ ಹೇಳಿದರೆ ಅವನಿಗೆ ಈ ಬೇರೆ ದೋಷವನ್ನು ಹೇಳಬೇಕು—ಪ್ರಾಭಾಕರಮತದಲ್ಲಿಯೂ ಅಭಾವವು ಅಧಿಕರಣದಲ್ಲಿ ಪ್ರತಿಯೋಗಿ ಇರುವ ಕಾಲದಲ್ಲಿ ಅಧಿಕರಣಸ್ವರೂಪವಾಗಿ ಇರುವುದಿಲ್ಲ. ಗೋವಿನಲ್ಲಿ ಅಶ್ವತ್ವದಂತೆ ಯಾವ ಅಭಾವಾಧಿಕರಣದಲ್ಲಿ ಪ್ರತಿಯೋಗಿ ಎಂದೂ ಇರುವುದಿಲ್ಲವೋ ಅಂಥ ಅಭಾವಕ್ಕೆ ಮಾತ್ರ 'ಕೈವಲ್ಯ ವಿಶೇಷಣ ವಿಶೇಷಿತ'ವಾದ ಅಂದರೆ ಕೇವಲ ಅಧಿಕರಣ ಸ್ವರೂಪತ್ವವು ಯುಕ್ತ. ಅಲ್ಲಿ ಅಧಿಕರಣಕ್ಕೆ ಬೇರೆ ಯಾವ ವಿಶೇಷಣವೂ ಬೇಡ. ಪ್ರತಿಯೋಗಿ ಎಂದಾದರೂ ಅಧಿಕರಣದಲ್ಲಿರುವುದಾದರೆ ಅಂಥ ಅಭಾವಕ್ಕೆ ಕೇವಲ ಅಧಿಕರಣ ಸ್ವರೂಪತ್ವವನ್ನು ಹೇಳಬಾರದು. 'ಪ್ರತಿಯೋಗಿಮತ್ತಾಕಾಲಭಿನ್ನ ಕಾಲೀನತ್ವ' ವಿಶೇಷಣವನ್ನು ಅಧಿಕರಣಕ್ಕೆ ಕೊಡಬೇಕು. ಅಭಾವವು ಅಂಥ ವಿಶೇಷಣವಿಲ್ಲದ ಕೇವಲ ಅಧಿಕರಣಸ್ವರೂಪವೇ ಆಗಿದ್ದಲ್ಲಿ ಪ್ರತಿಯೋಗಿ ಎಂದೂ ಆ ಅಧಿಕರಣದಲ್ಲಿಲ್ಲ, ಅಸತ್ ಎಂದಾಗುತ್ತದೆ. ದ್ವಿತೀಯಾಭಾವದ ಪ್ರತಿಯೋಗಿಯಾದ ದ್ವಿತೀಯವು ಅದ್ವೈತಮತದಲ್ಲಿ ಬ್ರಹ್ಮರೂಪ ಅಧಿಕರಣದಲ್ಲಿ ಎಂದೂ ಇಲ್ಲದ್ದಲ್ಲ. ಸಂಸಾರಾವಸ್ಥೆಯಲ್ಲಿ ಇರುತ್ತದೆ. ಅದರಿಂದ ದ್ವಿತೀಯಾಭಾವವು ಕೇವಲ ಅಧಿಕರಣಸ್ವರೂಪವೆನ್ನಲಾಗದು. ಅದರಿಂದ ಅದು ಅತಿರಿಕ್ತವೆಂದೇ ಹೇಳಬೇಕು.

ದ್ವಿತೀಯಾಭಾವವು ಕೇವಲ ಅಧಿಕರಣ ಸ್ವರೂಪವೆಂದೆ ಹೇಳುವುದಾದರೆ ಕೇವಲ ಬ್ರಹ್ಮ

ಈಗಲೂ ಇರುವುದರಿಂದ ತತ್‌ಸ್ವರೂಪವಾದ ದ್ವಿತೀಯಾಭಾವವು ಈಗಲೂ ಇರಬೇಕಾದೀತು. ಈಗ ಇಲ್ಲ, ಜ್ಞಾನೋತ್ತರದಲ್ಲಿ ಮಾತ್ರ ಇರುತ್ತದೆ ಎಂದಮೇಲೆ ದ್ವಿತೀಯಾಭಾವವು ಕೇವಲ ಬ್ರಹ್ಮಸ್ವರೂಪವಲ್ಲ, ಅತಿರಿಕ್ತವೆ.

ಹೀಗಾಗಿ ದ್ವಿತೀಯಾಭಾವರೂಪ ದ್ವಿತೀಯವು ಬ್ರಹ್ಮನಿಗಿಂತ ಅತಿರಿಕ್ತವಾಗಿಯೇ ಇರುವುದರಿಂದ ದ್ವಿತೀಯಾಭಾವರೂಪ ದ್ವಿತೀಯಯುಕ್ತವಾಗಿ ಬ್ರಹ್ಮವು ಸದ್ವಿತೀಯವಾಗಿದೆ ಎಂದೇ ಹೇಳಬೇಕಾದೀತು, ಎಂಬ ಆಪತ್ತಿ ಪರಿಹಾರವಾಗುವುದಿಲ್ಲ.

ಅಭಾವವು ಅಧಿಕರಣಸ್ವರೂಪವಾಗಬೇಕಾದರೆ ಅಧಿಕರಣದಲ್ಲಿ ಪ್ರಾಭಾಕರನು ಕೈವಲ್ಯ ವಿಶೇಷಣವನ್ನು ಹಾಕದಿದ್ದರೆ ಅವನ ಮತದಲ್ಲಿಯೂ ಅನುಪಪತ್ತಿ ಪರಿಹಾರವಾಗುವುದಿಲ್ಲ. ಪ್ರತಿಯೋಗಿಯು ಅಧಿಕರಣದಲ್ಲಿ ಇರುವ ಕಾಲದಲ್ಲಿಯೂ ಕೂಡ ಅದರ ಅಭಾವವು ಅಧಿಕರಣ ಸ್ವರೂಪವಾಗಿ ಅಧಿಕರಣದಲ್ಲಿ ಇರಬೇಕಾದೀತು ಕಾಣಿಸಿಕೊಳ್ಳಬೇಕಾದೀತು. ಆಗ ಪ್ರತಿಯೋಗಿಯು 'ಯಾವಕಾಲದಲ್ಲಿಯೂ ಅಸ್ತಿತ್ವದಲ್ಲಿಲ್ಲದ್ದು, ಶಶವಿಷಾಣದಂತೇ ಅಸತ್' ಎಂದಾದೀತು—'ನ ಚೇತ್ ತನ್ಮತೇಽಪಿ ಅನುಪಪತ್ತಿರೇವ'

**ಅನ್ಯಥಾ ಗುಣಗುಣ್ಯಭೇದ ಮತೇ ಶೌಕ್ಲ್ಯಾದೇರಿವ**
**ಶಕ್ತ್ಯಾದಿಭಾವ ಧರ್ಮಾಣಾಮಪಿ ಬ್ರಹ್ಮಾತ್ಮತ್ವಂ ಸ್ಯಾತ್ ।**

ಅಭಾವಾಧಿಕರಣವು ಕೈವಲ್ಯಾದಿ ವಿಶೇಷಣವಿಶಿಷ್ಟವಿರಲಿ ಬಿಡಲಿ, ಪ್ರಾಭಾಕರಮತ ಪ್ರವೇಶ ಮಾಡಿ ನಿನ್ನ ದ್ವಿತೀಯಾಭಾವವನ್ನು ಅಧಿಕರಣ ಬ್ರಹ್ಮಸ್ವರೂಪವನ್ನಾಗಿ ಮಾಡಿಕೊಂಡು ಬ್ರಹ್ಮನಿಗೆ ಸದ್ವಿತೀಯತ್ವ ಪರಿಹಾರಮಾಡಿಕೊಳ್ಳುವುದಾದರೆ, ಶುಕ್ಲತ್ವಾದಿಗುಣಗಳು ಅಧಿಕರಣವಾದ ಗುಣಿಗಳಿಂದ ಅಭಿನ್ನ ಎನ್ನುವ ಮತದಲ್ಲಿ ಪ್ರವೇಶಮಾಡಿ 'ಪರಾಸ್ಯ ಶಕ್ತಿರ್ವಿವಿಧೈವ ಶ್ರೂಯತೇ' ಎಂದು ಶ್ರುತ್ಯುಕ್ತವಾದ ಶಕ್ತ್ಯಾದಿ ಭಾವಧರ್ಮಗಳನ್ನೂ ಕೂಡ ಶುಕ್ಲತ್ವಾದಿಗುಣಗಳಂತೆ ಅಧಿಕರಣ ಬ್ರಹ್ಮಸ್ವರೂಪವೆಂದು ಹೇಳಿ ಸುಲಭವಾಗಿ ದ್ವೈತವನ್ನು ನೀನೇಕೆ ಪರಿಹರಿಸಿಕೊಳ್ಳಬಾರದು? ದ್ವೈತ ಮಿಥ್ಯಾತ್ವವನ್ನು ಕ್ಲೇಶದಿಂದ ಏಕೆ ಸಾಧನೆ ಮಾಡಬೇಕು?

**ನಚ ಭಾವರೂಪ ದ್ವಿತೀಯಾಭಾವವಿಶಿಷ್ಟತ್ವಂ ಅದ್ವಿತೀಯತ್ವಂ । ತಥಾಚ ಅಭಾವಸ್ಯ ದ್ವಿತೀಯಸ್ಯ ಪ್ರಾಮಾಣಿಕತ್ವೇಽಪಿ ಅದೋಷ ಇತಿ ವಾಚ್ಯಂ । ದೃಶ್ಯಸ್ಯಾಪಿ ಅಭಾವಸ್ಯೇವ ಶ್ರುತ್ಯಾದಿಸಿದ್ಧಸ್ಯ ಧರ್ಮಾಧರ್ಮಾದಿರೂಪ ಭಾವಸ್ಯಾಪಿ ಮಿಥ್ಯಾತ್ವಾಯೋಗಾತ್ ಇತ್ಯುಕ್ತತ್ವಾತ್ ।**

'ಅದ್ವಿತೀಯತ್ವವೆಂದರೆ ಭಾವರೂಪದ್ವಿತೀಯದ ಅಭಾವವೇ ಹೊರತು, ಅಭಾವರೂಪ ದ್ವಿತೀಯವನ್ನೂ ಕೂಡ 'ದ್ವಿತೀಯ' ಶಬ್ದದಿಂದ ನಾನು ಇಟ್ಟುಕೊಳ್ಳುವುದಿಲ್ಲ. ಹೀಗಾಗಿ ಅಭಾವರೂಪ ದ್ವಿತೀಯವು ಬ್ರಹ್ಮವ್ಯತಿರಿಕ್ತವಾಗಿ ಪ್ರಾಮಾಣಿಕವಾದರೂ ಕೂಡ ಅದ್ವೈತಕ್ಕೆ ಹಾನಿ ಇಲ್ಲ' ಎಂದು

ಅದ್ವೈತಿ ಹೇಳಿದರೆ ಅಭಾವವು ದೃಶ್ಯವಾದರೂ ಶ್ರುತ್ಯಾದಿ ಸಿದ್ಧವಾದ್ದರಿಂದ ಅದನ್ನು ಮಿಥ್ಯಾ ಎನ್ನಲಾಗದು ಹೇಗೋ ಹಾಗೇ ಧರ್ಮಾಧರ್ಮಾದಿರೂಪ ಭಾವಪದಾರ್ಥವು ಕೂಡ ಶ್ರುತ್ಯಾದಿ ಸಿದ್ಧವಾದ್ದರಿಂದ ದೃಶ್ಯವಾದರೂ ಕೂಡ ಮಿಥ್ಯಾ ಆಗಲಾರದು ಎಂದು ಹಿಂದೆ ಹೇಳಿದ್ದೇವೆ.

ಇದು ಉಪಲಕ್ಷಣ. 'ಏಕಮೇವ ಅದ್ವಿತೀಯಂ' ಎಂಬಲ್ಲಿ ದ್ವಿತೀಯ ಸಾಮಾನ್ಯವನ್ನು ನಿಷೇಧಿಸಿರುವಾಗ ಭಾವರೂಪದ್ವಿತೀಯ ಮಾತ್ರ ನಿಷೇಧದಲ್ಲಿ ಸಂಕೋಚಮಾಡುವುದಾದರೆ ಅಭಾವರೂಪ ದ್ವಿತೀಯ ನಿಷೇಧದಲ್ಲಿಯೇ ಸಂಕೋಚ ಮಾಡಿ ಅಭಾವರೂಪ ದ್ವಿತೀಯವೇ ಮಿಥ್ಯಾ, ಭಾವರೂಪ ದ್ವಿತೀಯವು ಮಿಥ್ಯಾ ಅಲ್ಲ ಎಂದೇಕೆ ಹೇಳಬಾರದು? ಸ್ವವ್ಯಾಹತಿ ಪ್ರಮಾಣವಿರೋಧ ಅತಿಪ್ರಸಕ್ತಿ ದೋಷಗಳು ಭಾವಮಿಥ್ಯಾತ್ವ-ಅಭಾವಮಿಥ್ಯಾತ್ವ ಎಂಬ ಎರಡು ಪಕ್ಷಗಳಲ್ಲಿ ಸಮಾನ.

**ಅತ ಏವ ನಾಂತ್ಯಃ। ಉಪಲಕ್ಷಣಸ್ಯಾಪಿ ಅಭಾವಸ್ಯ ಅಪ್ರಾಮಾಣಿಕತ್ವೇ ತತ್ ಪ್ರತಿಯೋಗಿನೋ ದ್ವಿತೀಯಸ್ಯ ಪ್ರಾಮಾಣಿಕತ್ವಾವಶ್ಯಂಭಾವಾತ್।**

ಅದ್ವಿತೀಯತ್ವವೆಂದರೆ ದ್ವಿತೀಯಾಭಾವೋಪಲಕ್ಷಿತ ಎನ್ನುವ ಎರಡನೇಪಕ್ಷವೂ ಸರಿಯಲ್ಲ. ದ್ವಿತೀಯಾಭಾವವು ಉಪಲಕ್ಷಣವಾದರೂ ಅದು ಅಪ್ರಾಮಾಣಿಕವಾಗಿರುವಾಗ ಅದಕ್ಕೆ ಪ್ರತಿಯೋಗಿಯಾದ ದ್ವಿತೀಯವು ಪ್ರಾಮಾಣಿಕವೇ ಆಗಿರಬೇಕು.

'ಸ್ವಪ್ನದಲ್ಲಿ ಉಂಡು ವಾಂತಿ ಮಾಡಿಕೊಂಡರೆ ಉಂಡಿದ್ದೂ ಮಿಥ್ಯಾ ವಾಂತಿಮಾಡಿಕೊಂಡಿದ್ದೂ ಮಿಥ್ಯಾ, ಹಾಗೇ ದ್ವಿತೀಯಾಭಾವವೂ ಮಿಥ್ಯಾ ದ್ವಿತೀಯವೂ ಮಿಥ್ಯಾ' ಎನ್ನುತ್ತಾನೆ ಸಿದ್ಧಿಕಾರ. ಆದರೆ ಸ್ವಪ್ನದಲ್ಲಿ ಕಂಡ ಘಟವೂ ಮಿಥ್ಯಾ ಪಟವೂ ಮಿಥ್ಯಾ ಎಂದರೆ ಒಪ್ಪಬಹುದು. ಆದರೆ ಘಟವೂ ಮಿಥ್ಯಾ, ಘಟಾಭಾವವೂ ಮಿಥ್ಯಾ ಎನ್ನಲಾಗದು. ಸತ್ಯವಾದ ಧರ್ಮಿಯಲ್ಲಿ ಪರಸ್ಪರ ಭಾವಾಭಾವರೂಪ ವಿರೋಧವುಳ್ಳ ಎರಡು ಪದಾರ್ಥಗಳಲ್ಲಿ ಒಂದು ಮಿಥ್ಯಾ ಆದರೆ ಇನ್ನೊಂದು ಸತ್ಯವೇ ಆಗಬೇಕು. ಅದರಿಂದ ದ್ವಿತೀಯಾಭಾವವೂ ಮಿಥ್ಯಾ ದ್ವಿತೀಯವೂ ಮಿಥ್ಯಾ ಎನ್ನಲಾಗದು. ದ್ವಿತೀಯಾಭಾವ ಮಿಥ್ಯಾ ಆದರೆ ದ್ವಿತೀಯ ಸತ್ಯವಾಗಲೇಬೇಕು.

**ಕಿಂಚ ಅಭಾವಸ್ಯ ಪ್ರಾಗಭಾವಾದಿತ್ವೇ ದ್ವಿತೀಯಸ್ಯ ಅನಿತ್ಯತ್ವಮಾತ್ರಂ ಸ್ಯಾತ್। ನ ತು ಮಿಥ್ಯಾತ್ವಂ।**

'ದ್ವಿತೀಯಾಭಾವ' ಎಂಬಲ್ಲಿ 'ಅಭಾವ'ವೆಂದು ಪ್ರಾಗಭಾವ ಧ್ವಂಸಗಳು ವಿವಕ್ಷಿತವಾಗಿದ್ದರೆ ಪ್ರಾಗಭಾವಪ್ರತಿಯೋಗಿ ಧ್ವಂಸಪ್ರತಿಯೋಗಿಗಳು ಮಿಥ್ಯಾ ಎಂದಾಗುವುದಿಲ್ಲ ಅನಿತ್ಯ ಎಂದು ಮಾತ್ರ ಹೇಳಿದಂತಾಗುವುದು. 'ವಿಶ್ವಂ ಮಿಥ್ಯಾ' ಎಂಬ ಅನುಮಾನದಲ್ಲಿ ಅನಿತ್ಯ ಘಟಾದ್ಯಂಶದಲ್ಲಿ ಸಿದ್ಧಸಾಧನತ್ವದೋಷವೂ ಬರುವುದು.

**ಅತ್ಯಂತಾಭಾವತ್ವೇ ಉಪಲಕ್ಷಣತ್ವಂ ಅಯಾವದ್ದ್ರವ್ಯಭಾವಿತ್ವೇನ ಚೇತ್ ಅತ್ಯಂತಾಭಾವತ್ವಹಾನಿಃ। ವೇದಾಂತತಾತ್ಪರ್ಯವಿಷಯತ್ವಾದಿ ಕಾರ್ಯಾನನ್ವಯಿತ್ವೇನ ಚೇತ್ ಅತ್ಯಂತಾಭಾವಾಸಿದ್ಧಿಃ।**

'ದ್ವಿತೀಯಾಭಾವ' ಎಂಬಲ್ಲಿ ಅಭಾವವೆಂದರೆ ಅತ್ಯಂತಾಭಾವವೆಂದೇ ವಿವಕ್ಷಿತ ಎಂದರೆ, ಅದು ಬ್ರಹ್ಮನಲ್ಲಿ ಉಪಲಕ್ಷಣವಾಗುವುದು ಅಯಾವದ್ ದ್ರವ್ಯಭಾವಿಯಾದ್ದರಿಂದ ಎನ್ನುವ ಪಕ್ಷದಲ್ಲಿ ಅತ್ಯಂತಾಭಾವವೇ ಅಲ್ಲ ಎಂದಾದೀತು. 'ಕಾಕೋಪಲಕ್ಷಿತಂ ದೇವದತ್ತಗೃಹಂ' ಎಂಬಲ್ಲಿ ಕಾಕವು ಗೃಹದಲ್ಲಿ ಯಾವದಾಶ್ರಯ ಭಾವಿಯಾಗಿರುವುದಿಲ್ಲ ಕದಾಚಿದ್ ಭಾವಿ ಧರ್ಮ. ಅದರಿಂದ ಉಪಲಕ್ಷಣವೆನಿಸಿದೆ. ಹೀಗೇ ದ್ವಿತೀಯಾಭಾವವೂ ಕೂಡ ಬ್ರಹ್ಮನಲ್ಲಿ ಕದಾಚಿದ್‌ಭಾವಿಯಾದ್ದರಿಂದ ಉಪಲಕ್ಷಣ ಎನ್ನುವುದಾದರೆ ಅದು ಅತ್ಯಂತಾಭಾವವೆನಿಸುವುದೇ ಇಲ್ಲ. ಸದಾ ವಿದ್ಯಮಾನವಾದ ಅಭಾವವೇ ಅತ್ಯಂತಾಭಾವ. ಕದಾಚಿದ್ ಇರುವ ಅಭಾವವು ಧ್ವಂಸ ಅಥವಾ ಪ್ರಾಗಭಾವ ವಾಗಿರುತ್ತದೆ. ಆದರಿಂದ ದ್ವಿತೀಯಾಭಾವವನ್ನು ಅದ್ವೈತಿಯು 'ಅತ್ಯಂತಾಭಾವರೂಪವಾಗಿದೆ. ಉಪಲಕ್ಷಣವೂ ಆಗಿದೆ' ಎನ್ನಬಾರದು, ಇದು ಸ್ವವ್ಯಾಹತವಾಗುವುದು.

'ಉಪಲಕ್ಷಣವೆಂದರೆ ವಿಶೇಷ್ಯಾನ್ವಯ್ಯನನ್ವಯಿ. 'ಅದ್ವಿತೀಯ ಬ್ರಹ್ಮವು ವೇದಾಂತ ತಾತ್ಪರ್ಯ ವಿಷಯ' ಎನ್ನುವಲ್ಲಿ ವೇದಾಂತ ತಾತ್ಪರ್ಯವಿಷಯತ್ವರೂಪ ವಿಧೇಯದಲ್ಲಿ ದ್ವಿತೀಯಾಭಾವಕ್ಕೆ ವಿಶೇಷ್ಯವಾದ ಬ್ರಹ್ಮ ಮಾತ್ರ ಅನ್ವಿತವಾಗುತ್ತದೆ. ಆದರೆ ವಿಶೇಷ್ಯಾನ್ವಯಿಯಾದ ಆ ವೇದಾಂತತಾತ್ಪರ್ಯವಿಷಯತ್ವದಲ್ಲಿ ದ್ವಿತೀಯಾಭಾವವು ಅನ್ವಯ ಹೊಂದುವುದಿಲ್ಲ. ಹೀಗೆ ದ್ವಿತೀಯಾಭಾವವು ಬ್ರಹ್ಮನಲ್ಲಿ ಉಪಲಕ್ಷಣ ಎನ್ನುವುದಾದರೆ, ದ್ವಿತೀಯಾತ್ಯಂತಾಭಾವವು ವೇದಾಂತ ತಾತ್ಪರ್ಯವಿಷಯವಲ್ಲ, ಪ್ರಮಾಣಸಿದ್ಧವಲ್ಲ, ಅಪ್ರಾಮಾಣಿಕ ಎಂದಾಗುವುದು.

ಅತ್ಯಂತಾಭಾವ ಸಿದ್ಧಿಗೆ ವೇದಾಂತ ಬೇಕಿಲ್ಲ, ಪ್ರತ್ಯಕ್ಷಾದಿ ಪ್ರಮಾಣಗಳೇ ಸಾಕು ಎಂದರೆ, ಪ್ರತ್ಯಕ್ಷಾದಿಗಳಿಂದ ದ್ವಿತೀಯಾಭಾವ ಸಿದ್ಧವಾಗುವುದಿಲ್ಲ, 'ದ್ವಿತೀಯವೇ ಸಿದ್ಧವಾಗುತ್ತದೆ. ಅದನ್ನು ಶ್ರುತಿಯು ನಿಷೇಧ ಮಾಡುತ್ತಿದೆ' ಎಂದು ಅದ್ವೈತಮತ. ಹೀಗೆ ದ್ವಿತೀಯಾಭಾವ ವಿಷಯದಲ್ಲಿ ಪ್ರತ್ಯಕ್ಷಾದಿಪ್ರಮಾಣಗಳಿಲ್ಲ, ವೇದಾಂತಕ್ಕೂ ಅದರಲ್ಲಿ ತಾತ್ಪರ್ಯವಿಲ್ಲವೆಂದರೆ ಮಾನಾಂತರದ ಅವಿರೋಧ ಮಾತ್ರದಿಂದ ಪ್ರಾಮಾಣಿಕವಾಗದು. ಅದು ಅಪ್ರಾಮಾಣಿಕವೇ ಎಂದಾಗುತ್ತದೆ. ತಾತ್ಪರ್ಯವನ್ನು ಒಪ್ಪಿದರೆ ವಿಶೇಷ್ಯಾನ್ವಯ್ಯನ್ವಯಿತ್ವವೇ ಬರುವುದರಿಂದ ಅನನ್ವಯಿತ್ವರೂಪ ಉಪಲಕ್ಷಣತ್ವ ಕೂಡುವುದಿಲ್ಲ.

**ಕಿಂಚ ಅಪ್ರಾಮಾಣಿಕೇನ ದ್ವಿತೀಯಾಭಾವೇನೇವ ದ್ವಿತೀಯೇನಾಪ್ಯುಪಲಕ್ಷಿತತ್ವ ಸಂಭವಾತ್ ತೇನ ಸದ್ವಿತೀಯಂ ಕಿಂ ನ ಸ್ಯಾತ್? ಏವಂಚ—**

**ದ್ವೈತಾಭಾವಸ್ತಾತ್ವಿಕಶ್ಚೇತ್ ತೇನ ಸ್ಯಾತ್ ಸದ್ವಿತೀಯತಾ ।**
**ಅತಾತ್ವಿಕಶ್ಚೇತ್ ದ್ವೈತೇನ ಸದ್ವಿತೀಯತ್ವಮಾಪತೇತ್ ॥**

ಅಪ್ರಾಮಾಣಿಕವಾದ ದ್ವಿತೀಯಾಭಾವವು ಬ್ರಹ್ಮನಿಗೆ ಉಪಲಕ್ಷಣವಾಗುವುದಾದರೆ, ಅಪ್ರಾಮಾಣಿಕವೆಂದು ನೀನು ಹೇಳುವ ದ್ವಿತೀಯವೂ ಕೂಡ ಏಕೆ ಉಪಲಕ್ಷಣವಾಗಬಾರದು? ಉಪಲಕ್ಷಣವಾದ ದ್ವಿತೀಯದಿಂದ ಬ್ರಹ್ಮ ಸದ್ವಿತೀಯವೇಕಾಗಬಾರದು?

ಏವಂಚ– ದ್ವಿತೀಯಾಭಾವವು ಪ್ರಾಮಾಣಿಕವಾದರೆ ಬ್ರಹ್ಮವು ದ್ವಿತೀಯಾಭಾವರೂಪ ದ್ವಿತೀಯದಿಂದಲೆ ಸದ್ವಿತೀಯವೆನಿಸೀತು. ಅಪ್ರಾಮಾಣಿಕವಾದರೆ ಆ ದ್ವಿತೀಯಭಾವದ ಪ್ರತಿಯೋಗಿಯಾದ ದ್ವಿತೀಯದಿಂದಲೇ ಬ್ರಹ್ಮವು ಸದ್ವಿತೀಯವೆನಿಸೀತು.



**किंचेदं नित्यत्वं यद्ब्रह्मण एवाभिमतं ? सर्वकालसंबंधित्वं वा कालावच्छेदराहित्यं वा ध्वंसाप्रतियोगित्वं वा उभयावधिराहित्यं वा ।**

**नाद्यौ, अविद्यायां काले चातिव्याप्तेः । सापि हि सर्वकालोपादानत्वात्तत्संबंधिनी । इदानीमेव नान्यदेत्येवंरूपतदवच्छेदरहिता च । न तृतीयः । ध्वंसेऽतिव्याप्तेः । ननु ध्वंसोऽपि ध्वंसप्रतियोगी । प्रतियोग्यनुन्मज्जनं तु प्रागभावनिवृत्तिरूपस्य घटस्य निवृत्तावपि प्रागभावानुन्मज्जनवत् युक्तमिति चेन्न । एवं सति मोक्षेऽप्यात्मान्यस्य कस्यचिद् ध्वंसस्य वक्तव्यतया लाघवार्थम् आद्यध्वंसनित्यताया एव युक्तत्वात् । नच ध्वंसस्य नित्यत्वेऽपि भावेषु ब्रह्मैव नित्यमित्यस्याहानिरिति वाच्यम् । निष्प्रतियोगिकत्वेन भावस्य ध्वंसत्वादेर्नित्यत्वावश्यंभावात् । न चतुर्थः । एवं परिभाषायामपि ब्रह्मण एव नित्यत्वमित्येतत्फलस्य मुक्तावन्याभावस्यासिद्धेः ।**

**एवंच काले कालापरिच्छिन्ने ध्वंसे चाध्वंसयोगिनि ।**
**नित्ये सति कथं नित्यं ब्रह्मैवेति मतं तव ।।**

अविद्यायामतिव्याप्तिमुपपादयति **सापिहीति** । **सर्वकालोपादानत्वादिति** ।। एतच्च सखंडकालाभिप्रायेण । मायात्मसंबंधरूपत्वे तु तस्यानादित्वादिति ध्येयम् । प्रागभावप्रध्वंसान्यकालस्य प्रतियोगिकालत्वनियमात् प्रतियोग्युन्मज्जनमित्याशंक्याह – **प्रतियोग्यनुन्मज्जनं त्विति** ।। तथाच ध्वंसस्येव तन्निवृत्तेरपि प्रतियोगिविरोधित्वात् विरोध्यनवच्छिन्नकालस्यैव प्रतियोगिकालत्वमितिनियमः । प्रागभावकाले क्लृप्तत्वादिति भावः ।। **निष्प्रतियोगिकत्वेनेति** ।। तथाच

ध्वंसत्वेऽतिव्याप्तिरितिभावः । ध्वंसत्वादेराश्रयरूपतयाऽ भावत्वे तु चतुर्थपक्षे वक्ष्यमाणमेवात्रापीति ध्येयम् ॥



**ಬ್ರಹ್ಮನಿಗೆ ನಿತ್ಯತ್ವ ಕೂಡುವುದಿಲ್ಲ**

**ಕಿಂಚೇದಂ ನಿತ್ಯತ್ವಂ ಯದ್ ಬ್ರಹ್ಮಣ ಏವ ಅಭಿಮತಂ? ಸರ್ವಕಾಲ ಸಂಬಂಧಿತ್ವಂ ವಾ ? ಕಾಲಾವಚ್ಛೇದರಾಹಿತ್ಯಂ ವಾ ? ಧ್ವಂಸಾಪ್ರತಿಯೋಗಿತ್ವಂ ವಾ ? ಉಭಯಾವಧಿ ರಾಹಿತ್ಯಂ ವಾ ? ನಾದ್ಯೌ । ಅವಿದ್ಯಾಯಾಂ ಕಾಲೇ ಚ ಅತಿವ್ಯಾಪ್ತೇಃ । ಸಾಪಿ ಹಿ ಸರ್ವ ಕಾಲೋಪಾದಾನತ್ವಾತ್ ತತ್ ಸಂಬಂಧಿನೀ । 'ಇದಾನೀಮೇವ, ನಾನ್ಯದಾ' ಇತ್ಯೇವಂ ರೂಪ ತದವಚ್ಛೇದ ರಹಿತಾ ಚ ।**

ಅದ್ವೈತಸಿದ್ಧಾಂತದಲ್ಲಿ ಬ್ರಹ್ಮಮಾತ್ರವೃತ್ತಿಯಾದ 'ನಿತ್ಯತ್ವ'ವೆಂದರೇನು? ಸರ್ವಕಾಲ ಸಂಬಂಧಿತ್ವವೆ? ಕಾಲಾವಚ್ಛೇದ ರಹಿತತ್ವವೆ? ಧ್ವಂಸಾಪ್ರತಿಯೋಗಿತ್ವವೆ? ಉಭಯಾವಧಿರಹಿತತ್ವವೆ?

ಮೊದಲ ಎರಡೂ ಪಕ್ಷಗಳು ಅಯುಕ್ತ. ಸರ್ವಕಾಲ ಸಂಬಂಧರೂಪವಾದ ಈ ನಿತ್ಯತ್ವರೂಪ ಬ್ರಹ್ಮಲಕ್ಷಣಕ್ಕೆ ಅವಿದ್ಯೆಯಲ್ಲಿಯೂ ಕಾಲದಲ್ಲಿಯೂ ಅತಿವ್ಯಾಪ್ತಿ ಇದೆ. ಅವಿದ್ಯೆಯು ಸಖಂಡವಾದ ಸರ್ವಕಾಲಗಳಿಗೂ ಉಪಾದಾನವಾದ್ದರಿಂದ ಸರ್ವಕಾಲ ಸಂಬಂಧಿಯಾಗಿರಲೇಬೇಕು. ಮಾಯಾ-ಆತ್ಮ ಸಂಬಂಧರೂಪವಾದ ಅಖಂಡ ಕಾಲವೂ ಅನಾದಿಯಾದ್ದರಿಂದ ಸರ್ವಕಾಲ ಸಂಬಂಧಿಯೆ. ಅವಿದ್ಯೆಕಾಲಗಳೆರಡೂ 'ಈಗ ಮಾತ್ರ ಇವೆ, ಬೇರೆ ಕಾಲದಲ್ಲಿಲ್ಲ' ಎನ್ನುವ 'ಕಾಲಪರಿಚ್ಛೇದ' ಕಾಲಪರಿಮಿತಿ ಇಲ್ಲದವುಗಳಾದ್ದರಿಂದ ಎರಡನೇ ಲಕ್ಷಣಕ್ಕೂ ಎರಡೂ ಕಡೆ ಅತಿವ್ಯಾಪ್ತಿ.

ಸರ್ವಮುಕ್ತಿಕಾಲದಲ್ಲಿಯೂ ಕಾಲವಿದೆ. 'ಆಗ ಕಾಲವಿಲ್ಲ' ಎಂದರೆ 'ಆಗ' ಎಂದು ಕಾಲವನ್ನು ಹೇಳಿ 'ಕಾಲವಿಲ್ಲ' ಎಂದು ಹೇಳುವುದು ಸ್ವವ್ಯಾಹತವಾಗುವುದರಿಂದ ಕಾಲವು ಸರ್ವಮುಕ್ತಿಯಲ್ಲಿ ಇದೆ. ಅದಕ್ಕೆ ಉಪಾದಾನವಾಗಿ ಅವಿದ್ಯೆಯೂ ಇದೆ ಎಂದು ಒಪ್ಪಬೇಕು. ಹೀಗಾಗಿ ಕಾಲ ಅವಿದ್ಯಾಗಳಿಗೆ ಕಾಲ ಪರಿಚ್ಛೇದವಿಲ್ಲದ್ದರಿಂದ ಅತಿವ್ಯಾಪ್ತಿ.

**ನ ತೃತೀಯಃ । ಧ್ವಂಸೇ ಅತಿವ್ಯಾಪ್ತೇಃ । ನನು ಧ್ವಂಸೋಽಪಿ ಧ್ವಂಸಪ್ರತಿಯೋಗೀ । ಪ್ರತಿಯೋಗ್ಯನುನ್ಮಜ್ಜನಂ ತು ಪ್ರಾಗಭಾವ ನಿವೃತ್ತಿರೂಪಸ್ಯ ಘಟಸ್ಯ ನಿವೃತ್ತಾವಪಿ ಪ್ರಾಗಭಾವಾನುನ್ಮಜ್ಜನವತ್ ಯುಕ್ತಮಿತಿ ಚೇನ್ನ । ಏವಂ ಸತಿ ಮೋಕ್ಷೇಽಪಿ ಆತ್ಮಾನ್ಯಸ್ಯ ಕಸ್ಯಚಿತ್ ಧ್ವಂಸಸ್ಯ ವಕ್ತವ್ಯತಯಾ ಲಾಘವಾರ್ಥಂ ಆದ್ಯಧ್ವಂಸ ನಿತ್ಯತಾಯಾ ಏವ ಯುಕ್ತತ್ವಾತ್ ।**

ಧ್ವಂಸಾಪ್ರತಿಯೋಗಿತ್ವರೂಪ ನಿತ್ಯತ್ವವನ್ನು ಒಪ್ಪುವ ಮೂರನೇ ಪಕ್ಷವೂ ಸರಿಯಲ್ಲ. ಧ್ವಂಸದಲ್ಲಿ ಬ್ರಹ್ಮನ ನಿತ್ಯತ್ವಲಕ್ಷಣಕ್ಕೆ ಅತಿವ್ಯಾಪ್ತಿ ಇದೆ. ಧ್ವಂಸಕ್ಕೆ ಧ್ವಂಸವೆಂಬುದಿಲ್ಲ. ಅದು ಧ್ವಂಸಕ್ಕೆ ಪ್ರತಿಯೋಗಿಯಾಗುವುದಿಲ್ಲ ಎಂದು.

ಇಲ್ಲಿ 'ಧ್ವಂಸಕ್ಕೂ ಧ್ವಂಸವಿದೆ, ಅದೂ ಧ್ವಂಸಪ್ರತಿಯೋಗಿಯೆ ಆದರಿಂದ ಲಕ್ಷಣಕ್ಕೆ ಅತಿವ್ಯಾಪ್ತಿಇಲ್ಲ' ಎಂದು ಅದ್ವೈತಿಯ ಆಕ್ಷೇಪವಿದೆ.

'ಪ್ರಾಗಭಾವದ ಕಾಲ ಮತ್ತು ಧ್ವಂಸದ ಕಾಲಗಳಿಗಿಂತ ಅನ್ಯಕಾಲವೇ ಪ್ರತಿಯೋಗಿಯ ಕಾಲವೆಂಬ ನಿಯಮವಿರುವುದರಿಂದ ಘಟಧ್ವಂಸಕ್ಕೆ ಧ್ವಂಸವನ್ನು ಒಪ್ಪಿದರೆ ಆ ಧ್ವಂಸದ ಕಾಲವು ಘಟಧ್ವಂಸಾನ್ಯಕಾಲವಾಗುವುದರಿಂದ ಘಟರೂಪಪ್ರತಿಯೋಗಿಯ ಕಾಲವೇ ಆಗಬೇಕು. ಅಂದರೆ ಪ್ರತಿಯೋಗ್ಯುನ್ಮಜ್ಜನವಾಗಬೇಕು, ಧ್ವಸ್ತವಾದ ಪ್ರತಿಯೋಗಿ ಘಟವೇ ಪುನಃ ಹುಟ್ಟಬೇಕು' ಎಂಬ ಅನುಪಪತ್ತಿ ಬಂದರೆ ಅದ್ವೈತಿ ಹೇಳುತ್ತಾನೆ—

'ಅನುಪಪತ್ತಿ ಇಲ್ಲ, ಏಕೆಂದರೆ, ಘಟವು ಘಟಪ್ರಾಗಭಾವಧ್ವಂಸರೂಪವೂ ಆಗಿದೆ. ಘಟಧ್ವಂಸಪ್ರಾಗಭಾವರೂಪವೂ ಆಗಿದೆ ಎಂದು ತಾರ್ಕಿಕರು ಅಂಗೀಕರಿಸಿದ್ದಾರೆ. ಹೀಗಾಗಿ ಘಟದಂತೆ ಘಟಧ್ವಂಸವೂ ಘಟಪ್ರಾಗಭಾವಕ್ಕೆ ವಿರೋಧಿಯಾದ್ದರಿಂದ ಘಟಧ್ವಂಸಕಾಲದಲ್ಲಿ ಘಟಪ್ರಾಗಭಾವೋನ್ಮಜ್ಜನ ಹೇಗೆ ಇಲ್ಲವೋ ಹಾಗೇ ಘಟಧ್ವಂಸದಂತೆ ಘಟಧ್ವಂಸಧ್ವಂಸವೂ ಘಟಕ್ಕೆವಿರೋಧಿಯಾದ್ದರಿಂದ ಘಟಧ್ವಂಸ ಧ್ವಂಸವಾದಾಗ ಘಟವು ಪುನಃ ಹುಟ್ಟಿಕೊಳ್ಳುವ ಪ್ರಸಂಗವಿಲ್ಲ' ಎಂದು.

ಇದಕ್ಕೆ ನಾವು ಹೇಳಬೇಕು—ಧ್ವಂಸಕ್ಕೆ ಧ್ವಂಸವೆನ್ನುವುದೇ ಅಪ್ರಾಮಾಣಿಕ. ಅದನ್ನು ಒಪ್ಪಿದರೆ ಆ ಧ್ವಂಸಕ್ಕೂ ಧ್ವಂಸ, ಆ ಧ್ವಂಸಕ್ಕೂ ಧ್ವಂಸವೆಂದು ಅನಂತ ಅಪ್ರಾಮಾಣಿಕ ಧ್ವಂಸ ಪರಂಪರೆಯನ್ನು ಒಪ್ಪಬೇಕಾಗುವುದು. ಮೋಕ್ಷದಲ್ಲಿಯೂ ಆತ್ಮಾತಿರಿಕ್ತವಾದ ಯಾವುದಾದರೊಂದು ಧ್ವಂಸವನ್ನು ಒಪ್ಪಬೇಕಾಗುವುದು. ಅದರಿಂದ ಲಾಘವಕ್ಕಾಗಿ ಆದ್ಯಧ್ವಂಸವನ್ನೇ ನಿತ್ಯವೆಂದು ಒಪ್ಪಿಕೊಳ್ಳು. ಆಗ ಲಕ್ಷಣಕ್ಕೆ ಧ್ವಂಸದಲ್ಲಿ ಅತಿವ್ಯಾಪ್ತಿ ಅಪರಿಹಾರ್ಯ.

ಘಟ-ಘಟಪ್ರಾಗಭಾವೋನ್ಮಜ್ಜನವಾಗಬಾರದೆಂದು ನಾನು ಘಟಧ್ವಂಸಕ್ಕೆ ಸ್ಥಾಯಿತ್ವವನ್ನು ಹೇಗೆ ಒಪ್ಪುವೆನೋ ಹಾಗೇ ಘಟಧ್ವಂಸಧ್ವಂಸಾದಿಗಳಿಗೆ ಉನ್ಮಜ್ಜನವಾಗಬಾರದೆಂದು ಅಂತತಃ ಒಂದು ಧ್ವಂಸವನ್ನು ಸ್ಥಾಯಿ ಎಂದು ನೀನು ಸ್ವೀಕರಿಸಲೇಬೇಕಾಗಿದೆ. ಮುಂದೆ ಮುಂದೆ ಬಲು ದೂರಕ್ಕೆ ಹೋಗಿ ಅಲ್ಲಿ ಧ್ವಂಸಕ್ಕೆ ಅಪ್ರಾಮಾಣಿಕವಾದ ಸ್ಥಾಯಿತ್ವವನ್ನು ಒಪ್ಪುವುದಕ್ಕಿಂತ ಲಾಘವಕ್ಕಾಗಿ ಆದಿಯಲ್ಲಿಯೇ ಧ್ವಂಸಕ್ಕೆ ಪ್ರಾಮಾಣಿಕವಾದ ಸ್ಥಾಯಿತ್ವವನ್ನು ಒಪ್ಪಿಕೊಳ್ಳುವುದೇ ಯುಕ್ತವೆಂದು ಅಭಿಪ್ರಾಯ.

**ನಚ ಧ್ವಂಸಸ್ಯ ನಿತ್ಯತ್ವೇಽಪಿ 'ಭಾವೇಷು ಬ್ರಹ್ಮೈವ ನಿತ್ಯಂ' ಇತ್ಯಸ್ಯ ಅಹಾನಿಃ ಇತಿ ವಾಚ್ಯಂ। ನಿಷ್ಪ್ರತಿಯೋಗಿಕತ್ವೇನ ಭಾವಸ್ಯ ಧ್ವಂಸತ್ವಾದೇಃ ನಿತ್ಯತ್ವಾವಶ್ಯಂಭಾವಾತ್।**

'ಧ್ವಂಸವನ್ನು ನಿತ್ಯವೆಂದು ಅಂಗೀಕರಿಸಿದ ಮಾತ್ರಕ್ಕೆ ಅದ್ವೈತಕ್ಕೆ ಏನೂ ಹಾನಿ ಇಲ್ಲ'. 'ಭಾವಪದಾರ್ಥಗಳಲ್ಲಿ ಬ್ರಹ್ಮ ಒಂದೇ ನಿತ್ಯ' ಎಂಬುದು ನನ್ನ ಸಿದ್ಧಾಂತ. ಧ್ವಂಸವು ನಿತ್ಯವಾದರೂ ಅದು ಅಭಾವ ಪದಾರ್ಥವಾದ್ದರಿಂದ ಅದ್ವೈತಕ್ಕೆ ಹಾನಿಯಾವುಗುವುದಿಲ್ಲ' ಎನ್ನಕೂಡದು. ಧ್ವಂಸ ನಿತ್ಯವಾದರೆ ಅದರಲ್ಲಿರುವ ಧ್ವಂಸತ್ವ ಅಭಾವತ್ವಾದಿಭಾವಪದಾರ್ಥಗಳೂ ನಿತ್ಯವೇ ಆಗಬೇಕಾಗುವುದು. 'ಧ್ವಂಸತ್ವ ಅನಿತ್ಯ. ಧ್ವಂಸ ನಿತ್ಯ' ಎನ್ನುವುದು ವ್ಯಾಹತವಾಗುವುದು. ಈ ಧ್ವಂಸತ್ವಾದಿಗಳು ಅಭಾವಪದಾರ್ಥಗಳಲ್ಲ. ಏಕೆಂದರೆ ಅವು ನಿಷ್ಪ್ರತಿಯೋಗಿಕ. ಅಭಾವವು ಸಪ್ರತಿಯೋಗಿಕ.

'ಧ್ವಂಸತ್ವವೂ ಅದರ ಆಶ್ರಯರೂಪವಾದ ಧ್ವಂಸದಿಂದ ಅಭಿನ್ನವಾಗಿದ್ದು ಅಭಾವಪದಾರ್ಥವೇ ಆಗಿರುತ್ತದೆ' ಎಂದರೆ, ನಾಲ್ಕನೇಪಕ್ಷದಲ್ಲಿ 'ಉಭಯಾವಧಿರಹಿತವಾದ ಅಭಾವವು ಮುಕ್ತಿಯಲ್ಲಿಯೂ ಇರುವುದರಿಂದ, 'ಬ್ರಹ್ಮಾತಿರಿಕ್ತವಾದ ಯಾವ ಪದಾರ್ಥವೂ ಮುಕ್ತಿಯಲ್ಲಿಲ್ಲ'ವೆನ್ನುವ ಅದ್ವೈತ ಪ್ರಮೇಯಕ್ಕೆ ಹಾನಿ' ಎಂದು ಮುಂದೆ ದೋಷವನ್ನು ಹೇಳುತ್ತೇವೆ. ವಸ್ತುತಃ ಧ್ವಂಸತ್ವಾದಿಗಳು ಅಖಂಡೋಪಾಧಿಗಳು ಹೊರತು ಅಭಾವದಿಂದ ಅಭಿನ್ನವಲ್ಲ.

**ನ ಚತುರ್ಥಃ। ಏವಂ ಪರಿಭಾಷಾಯಾಮಪಿ 'ಬ್ರಹ್ಮಣ ಏವ ನಿತ್ಯತ್ವಂ' ಇತ್ಯೇತತ್-ಫಲಸ್ಯ ಮುಕ್ತಾವನ್ಯಾಭಾವಸ್ಯ ಅಸಿದ್ಧೇಃ । ಏವಂಚ—**

**ಕಾಲೇ ಕಾಲಾಪರಿಚ್ಛಿನ್ನೇ ಧ್ವಂಸೇ ಚಾಧ್ವಂಸಯೋಗಿನಿ ।**
**ನಿತ್ಯೇ ಸತಿ ಕಥಂ ನಿತ್ಯಂ ಬ್ರಹ್ಮೈವೇತಿ ಮತಂ ತವ ॥**

ನಿತ್ಯತ್ವವೆಂದರೆ ಉಭಯಾವಧಿರಾಹಿತ್ಯವೆನ್ನುವ ನಾಲ್ಕನೇಪಕ್ಷವೂ ಅಯುಕ್ತ. ಇದೊಂದು ಪರಿಭಾಷೆಯಾಯಿತು. ವಾಸ್ತವದಲ್ಲಿ ನಿತ್ಯತ್ವವೆಂದರೆ ಅದ್ವೈತದಲ್ಲಿ ಜ್ಞಾನನಿವರ್ತ್ಯತ್ವಾಭಾವ. ಬ್ರಹ್ಮೇತರವೆಲ್ಲವೂ ಮಿಥ್ಯಾ, ಜ್ಞಾನ ನಿವರ್ತ್ಯ. ಎಲ್ಲವೂ ಅವಿದ್ಯಾಕಾರ್ಯ. ಅವಿದ್ಯಾಸ್ತಮಯರೂಪ ಮೋಕ್ಷದಲ್ಲಿ ಅವಿದ್ಯೆಯಾಗಲಿ ಅವಿದ್ಯಾಕಾರ್ಯವಾಗಲಿ ಯಾವುದೂ ಇಲ್ಲ. ಬ್ರಹ್ಮ ಒಂದೇ ಇರುತ್ತದೆ, ಎನ್ನುವುದು 'ಬ್ರಹ್ಮೈವ ನಿತ್ಯಂ' ಎನ್ನುವುದರ ಫಲ. ಉಭಯಾವಧಿರಾಹಿತ್ಯವು ನಿತ್ಯತ್ವವೆನ್ನುವ ಪರಿಭಾಷೆಯಲ್ಲಿ ಪೂರ್ವೋತ್ತರ ಉಭಯ ಅವಧಿರಹಿತವಾದ ಕಾಲಾದಿಗಳು ನಿತ್ಯವಾದ್ದರಿಂದ ಮೋಕ್ಷದಲ್ಲಿಯೂ ಇರಬಹುದು. ಮುಕ್ತಿಯಲ್ಲಿ ಬ್ರಹ್ಮೇತರ ವಸ್ತು ಏನೂ ಇರುವುದಿಲ್ಲ ಎನ್ನುವ ಪ್ರಮೇಯ ಸಿದ್ಧಿ ಶಕ್ಯವಾಗುವುದಿಲ್ಲ.

ಏವಂಚ– ಕಾಲವು ಕಾಲ ಪರಿಮಿತಿ ಇಲ್ಲದ್ದು. ಧ್ವಂಸವು ಧ್ವಂಸಕ್ಕೆ ಅಪ್ರತಿಯೋಗಿ. ಹೀಗಾಗಿ ಅವು ಉಭಯಾವಧಿರಾಹಿತ್ಯರೂಪ ಪಾರಿಭಾಷಿಕ ನಿತ್ಯತ್ವ ಉಳ್ಳವುಗಳಾಗಿರುವುದರಿಂದ ಬ್ರಹ್ಮ ಒಂದೇ ನಿತ್ಯ ಎನ್ನುವ ನಿನ್ನ ಮತ ಹೇಗೆ ಕೂಡುತ್ತದೆ?



कथंच दृग्रूपस्यात्मनः साक्षात् द्रष्टृत्वरूपं साक्षित्वम् ? ''साक्षाद् द्रष्टरि संज्ञायाम्'' इति हि सूत्रम् । बुद्ध्युपाधिकस्यापि द्रष्टृत्वस्य सुषुप्त्यादावभावात् । बुद्धेः साक्ष्यधीनसिद्धिकप्रातीतिका-विद्याकार्यत्वेन चक्रकाश्रयत्वाच्च ।

किंच साक्षी किं जीवकोटिर्ब्रह्मकोटिर्वा, उभयानुगतं चिन्मात्रं वा । नाद्यः । जीवो ''बुद्ध्युपाधिकोऽणु''रिति पक्षे इदमंशावच्छिन्नचिद्वेद्यस्य शुक्तिरूप्यादेः साक्षिवेद्यत्वायोगात् । चक्रकाश्रयाच्च । ''अज्ञानोपाधिकः सर्वगत'' इति पक्षेऽपि अज्ञानस्य साक्ष्यधीनसिद्धिकत्वेनान्योन्याश्रयात् ।

न द्वितीयः । तेन ब्रह्मण एव साक्षिवेद्यसुखदुःखादिधीः नतु जीवस्येति वैपरीत्यापातात् । अन्यथाऽनवच्छिन्नानंदधीरपि जीवस्य स्यात् ।

नच ब्रह्मचैतन्यं घटादिप्रकाशकमिति मतेऽज्ञानाभिभवद्वारा तस्य जीवचैतन्याभेदाभिव्यंजकांतःकरणवृत्तिरिवेह तादृशी वृत्तिरस्ति।

न तृतीयः । ईश्वरेणेव चिन्मात्रेणापि सांसारिकदुःखस्य तद्गतत्वेनाग्रहणेऽपि यद्भावो मुक्तिस्तस्य चिन्मात्रस्य दुःखाद्युल्लेख-रूपोपप्लवापातात् । सुप्तमैत्रं प्रति मैत्रीयाज्ञानादेर्मैत्रीयतयेव जाग्रच्चैत्रीयदुःखादेरपि चैत्रीयतया सुप्तमैत्रं प्रति प्रतीतिप्रसंगेन मैत्रस्यैतावंतं कालं दुःखं नावेदिषमिति परामर्शायोगाच्च ।

नापि साक्षात्कर्तव्याकाराविद्यावृत्तिप्रतिफलितं चैतन्यं साक्षी, सुषुप्तौ चाज्ञानाद्याकाराविद्यावृत्तिरस्तीति वाच्यम् । दुःखादेः स्वानंतरभाव्यविद्यावृत्तिप्रतिफलितचिद्वेद्यत्वे ज्ञातैकसत्त्वायोगात् । अविद्यावृत्तेरपि साक्ष्यधीनसिद्धिकत्वेनान्योन्याश्रयाच्च । विस्तृतं चैतदसतः साधकत्वभंगे ।

पराभिमतं ब्रह्मणः साक्षित्वमपि किं दृग्रूपत्वं उत द्रष्टृत्वमिति विकल्प्य नाद्य इत्याह— **कथंच दृग्रूपस्येति** ।। तथा सति पाणिनिसूत्रविरोध इति भावः । अंत्येऽपि स्वाभाविकमौपाधिकं वा । नाद्यः । अनंगीकारादित्याद्यं बहिरेव निरस्य द्वितीयं निराचष्टे— **बुध्युपाधिकस्यापीति** ।। **चक्रकाश्रयत्वाच्चेति** ।। साक्षित्वं स्वात्मलाभायांतःकरणमपेक्षते, तच्चाविद्यां, सा च साक्षिणमिति चक्रकाश्रयाच्चेत्यर्थः । अज्ञानस्यान्यतोऽपि सिद्धिसंभवान्न चक्रकाश्रय इत्यशंकावारणाय प्रातीतिकेत्य- विद्याविशेषणम् । बुद्धेर्मध्यमपरिमाणत्वपक्षेऽपि प्रतिकर्मव्यवस्थाभंगोक्तरीत्या तस्या बहिर्निस्सरणायोगात् साक्षिवेद्यत्वायोग इति ध्येयम् ।। **चक्रकाश्रयाच्चेति** ।। पूर्वोक्तचक्रकाश्रयाच्चेत्यर्थः । सुषुप्तौ वृत्त्यभावादज्ञानप्रतीतिर्न स्यादित्याशंक्याह— **सुषुप्तौ चेति** ।।



**ಬ್ರಹ್ಮನಿಗೆ ಸಾಕ್ಷಿತ್ವ ಕೂಡುವುದಿಲ್ಲ**

**ಕಥಂ ಚ ದೃಗ್‌ರೂಪಸ್ಯ ಆತ್ಮನಃ ಸಾಕ್ಷಾತ್ ದ್ರಷ್ಟೃತ್ವರೂಪಂ ಸಾಕ್ಷಿತ್ವಂ? 'ಸಾಕ್ಷಾದ್ ದ್ರಷ್ಟರಿ ಸಂಜ್ಞಾಯಾಂ' ಇತಿ ಹಿ ಸೂತ್ರಂ।**

ದೃಗ್‌ರೂಪನಾದ ಆತ್ಮನಿಗೆ ಸಾಕ್ಷಾದ್ ದ್ರಷ್ಟೃತ್ವರೂಪ ಸಾಕ್ಷಿತ್ವವು ಹೇಗೆ ಲಕ್ಷಣವಾದೀತು? 'ಸಾಕ್ಷಾದ್ ದ್ರಷ್ಟರಿ ಸಂಜ್ಞಾಯಾಂ' ಎಂಬ ಪಾಣಿನಿಸೂತ್ರದಲ್ಲಿ ಹೇಳಿದೆ— 'ಸಾಕ್ಷಾತ್' ಎಂಬ ಅವ್ಯಯದ ಪರದಲ್ಲಿ ದ್ರಷ್ಟೃ ಎಂಬ ಅರ್ಥದಲ್ಲಿ ಇನಿ ಪ್ರತ್ಯಯ ಬರುತ್ತದೆ, ಟಿಲೋಪವಾದಾಗ 'ಸಾಕ್ಷಿನ್' ಶಬ್ದ ನಿಷ್ಪತ್ತಿಯಾಗುತ್ತದೆ. 'ಸಾಕ್ಷಾತ್ ನೋಡುವವನು' ಎಂದರ್ಥ. ಬ್ರಹ್ಮನು ಸಾಕ್ಷಾತ್ ನೋಡುವವನಲ್ಲ, ಅದ್ವೈತದಲ್ಲಿ ನೋಟಕ್ಕೆ, ನೋಡುವ ಕ್ರಿಯೆಗೆ, ಕರ್ತೃ ಅಂತಃಕರಣ, ಬುದ್ಧಿ. ಬ್ರಹ್ಮನು ಕೇವಲ 'ದೃಕ್' ನೋಟ, ದರ್ಶನಕ್ರಿಯೆ ಹೊರತು ಅದಕ್ಕೆ ಕರ್ತನಲ್ಲ. ಅವನಿಗೆ ಸಾಕ್ಷಿತ್ವವನ್ನು ಸ್ವಾಭಾವಿಕ ಸ್ವರೂಪಲಕ್ಷಣವೆಂದು ಹೇಳಿದರೆ ಅಸಂಭವದೋಷ.

**ಬುದ್ಧ್ಯುಪಾಧಿಕಸ್ಯಾಪಿ ದ್ರಷ್ಟೃತ್ವಸ್ಯ ಸುಷುಪ್ತ್ಯಾದೌ ಅಭಾವಾತ್। ಬುದ್ಧೇಃ ಸಾಕ್ಷ್ಯಧೀನಸಿದ್ಧಿಕ ಪ್ರಾತೀತಿಕ ಅವಿದ್ಯಾಕಾರ್ಯತ್ವೇನ ಚಕ್ರಕಾಶ್ರಯತ್ವಾಚ್ಚ।**

'ಬ್ರಹ್ಮವು ಸ್ವತಃ 'ದೃಕ್' ಜ್ಞಾನಸ್ವರೂಪವಾದರೂ ಬುದ್ಧಿ ಎಂಬ ಉಪಾಧಿವಿಶಿಷ್ಟವಾಗಿ ದ್ರಷ್ಟೃವೂ ಆಗುತ್ತದೆ. ಆದರಿಂದ ಲಕ್ಷಣಕ್ಕೆ ಅಸಂಭವ ದೋಷವಿಲ್ಲ' ಎಂದರೆ ಬುದ್ಧ್ಯುಪಾಧಿಕವಾದ ದ್ರಷ್ಟೃತ್ವವೂ ಕೂಡ ಬ್ರಹ್ಮನಲ್ಲಿ ಸದಾ ಇಲ್ಲ. ಸುಷುಪ್ತ್ಯಾದಿಗಳಲ್ಲಿ ಬುದ್ಧಿಯು ಲಯ ಹೊಂದಿದಾಗ

ಬುದ್ಧ್ಯುಪಾಧಿಕವಾದ ದ್ರಷ್ಟೃತ್ವವಿರಲಾರದು. ಆದರಿಂದ ಅದು ಬ್ರಹ್ಮನ ಲಕ್ಷಣವಾಗದು. ಮತ್ತು ದ್ರಷ್ಟೃತ್ವವನ್ನು ಬುದ್ಧ್ಯುಪಾಧಿಕವೆಂದು ಹೇಳುವುದೇ ಸರಿಯಲ್ಲ. ಸಾಕ್ಷಿಸ್ವರೂಪವು ಸಿದ್ಧವಾದರೆ ಸಾಕ್ಷ್ಯಧೀನ ಪ್ರತೀತಿ ಮಾತ್ರ ಸ್ವರೂಪವಾದ ಅವಿದ್ಯೆ ಸಿದ್ಧವಾಗುವುದು. ಪ್ರಾತೀತಿಕವಾದ್ದರಿಂದ ಅದು ಬೇರಾವುದರಿಂದ ಸಿದ್ಧವಾಗದು. ಅವಿದ್ಯಾಸಿದ್ಧಿಯಿಂದ ಅವಿದ್ಯಾಕಾರ್ಯವಾದ ಅಂತಃಕಣಸಿದ್ಧಿ. ಅಂತಃಕರಣ, ಬುದ್ಧಿ ಸಿದ್ಧವಾದರೆ ತದುಪಾಧಿಕ ಜೀವರೂಪ ಸಾಕ್ಷಿಸಿದ್ಧಿ ದ್ರಷ್ಟೃತ್ವರೂಪ ಸಾಕ್ಷಿತ್ವಸಿದ್ಧಿ. ಇದು ಚಕ್ರಕಾಶ್ರಯ ದೋಷ.

'ಅವಿದ್ಯೆಯೂ ದ್ರಷ್ಟೃತ್ವವೂ ಅನಾದಿಯಾದ್ದರಿಂದ ಈ ಚಕ್ರಕಾಶ್ರಯವು ಉತ್ಪತ್ತಿಗಾಗಲಿ ಜ್ಞಪ್ತಿಗಾಗಲಿ ಪ್ರತಿಬಂಧಕವಾಗುವುದಿಲ್ಲ. ಆದರಿಂದ ದೋಷವಲ್ಲ' ಎನ್ನುವುದು ಸರಿಯಲ್ಲ. ಉತ್ಪತ್ತಿ ಜ್ಞಪ್ತಿಗಳಲ್ಲಿ ಪರಸ್ಪರಾಶ್ರಯವಿಲ್ಲದಿದ್ದರೂ ಸ್ವರೂಪದಲ್ಲಿ ಪರಸ್ಪರಾಶ್ರಯವಿದ್ದೇ ಇದೆ. ದ್ರವ್ಯತ್ವ ಗುಣವತ್ವಗಳಿಗೆ ಸ್ವರೂಪದಲ್ಲಿ ಅನ್ಯೋನ್ಯಾಶ್ರಯವಿದೆ ಎನ್ನುತ್ತಾರೆ.

**ಕಿಂಚ ಸಾಕ್ಷೀ ಕಿಂ ಜೀವಕೋಟಿಃ ಬ್ರಹ್ಮಕೋಟಿರ್ವಾ? ಉಭಯಾನುಗತಂ ಚಿನ್ಮಾತ್ರಂ ವಾ? ನಾದ್ಯಃ। ಜೀವೋ ಬುದ್ಧ್ಯುಪಾಧಿಕೋಽಣುರಿತಿ ಪಕ್ಷೇ ಇದಮಂಶಾವಚ್ಛಿನ್ನಚಿದ್ ವೇದ್ಯಸ್ಯ ಶುಕ್ತಿರೂಪ್ಯಾದೇಃ ಸಾಕ್ಷಿವೇದ್ಯತ್ವಾಯೋಗಾತ್। ಚಕ್ರಕಾಶ್ರಯಾಚ್ಚ।**

ಸಾಕ್ಷಿಯು ಜೀವಕೋಟಿಯಲ್ಲಿ ಸೇರುವುದೆ? ಬ್ರಹ್ಮಕೋಟಿಯೆ? ಅಥವಾ ಉಭಯಾನುಗತ ಚಿನ್ಮಾತ್ರವೆ? ಜೀವಕೋಟಿ ಎನ್ನುವ ಮೊದಲನೆ ಪಕ್ಷ ಯುಕ್ತವಲ್ಲ. ಏಕೆಂದರೆ ಅಂತಃಕರಣಾವಚ್ಛಿನ್ನ ಅಥವಾ ಅವಿದ್ಯಾವಚ್ಛಿನ್ನವೆಂಬ ಯಾವುದಾದರೊಂದು ಬಗೆಯ ಜೀವವೇ ಸಾಕ್ಷಿ ಎಂದಿಟ್ಟುಕೊಂಡರೆ ಅಂತಃಕರಣಾವಚ್ಛಿನ್ನ ಚೈತನ್ಯವು ಜೀವ ಎನ್ನುವ ಪಕ್ಷದಲ್ಲಿ ಜೀವನು ಅಣುವಾದ್ದರಿಂದ ಸರ್ವಗತವಲ್ಲ. ಹೊರಗಿನ ವಿಷಯಗಳನ್ನು ಅದು ಪ್ರಕಾಶಗೊಳಿಸುವುದಿಲ್ಲ. ಸರ್ವಗತವಾದ ಬ್ರಹ್ಮಚೈತನ್ಯವೇ ವಿಷಯಪ್ರಕಾಶಕ. ಆದರಿಂದ ಇದಮಂಶಾವಚ್ಛಿನ್ನ ಬ್ರಹ್ಮಚೈತನ್ಯವೇದ್ಯವಾದ ಶುಕ್ತಿರೂಪ್ಯಾದಿಗಳು ಅಂತಃಕರಣಾವಚ್ಛಿನ್ನ ಜೀವಚೈತನ್ಯರೂಪ ಸಾಕ್ಷಿವೇದ್ಯವಾಗಲಾರದು. ಏಕೆಂದರೆ ಉಪಾಧಿಭೇದದಿಂದ ಅಂತಃಕರಣಾವಚ್ಛಿನ್ನ ಮತ್ತು ಇದಮಂಶಾವಚ್ಛಿನ್ನ ಚೈತನ್ಯಗಳು ಎರಡು ಪರಸ್ಪರ ಭಿನ್ನ. ಮತ್ತು ಅಂತಃಕರಣಾವಚ್ಛಿನ್ನ ಜೀವಚೈತನ್ಯವನ್ನು ಸಾಕ್ಷಿ ಎಂದಿಟ್ಟುಕೊಂಡರೆ ಹಿಂದಿನಂತೆಯೆ ಚಕ್ರಕಾಶ್ರಯದೋಷವೂ ಬರುತ್ತದೆ.

**ಅಜ್ಞಾನೋಪಾಧಿಕಃ ಸರ್ವಗತಃ ಇತಿ ಪಕ್ಷೇಽಪಿ ಅಜ್ಞಾನಸ್ಯ ಸಾಕ್ಷ್ಯಧೀನ ಸಿದ್ಧಿಕತ್ವೇನ ಅನ್ಯೋನ್ಯಾಶ್ರಯಾತ್।**

ಜೀವಕೋಟಿಯಲ್ಲಿ ಇನ್ನೊಂದು ಬಗೆಯ ಜೀವ ಅವಿದ್ಯೋಪಾಧಿಕ, ಸರ್ವಗತ, ತತ್‌ಸ್ವರೂಪವೇ ಸಾಕ್ಷಿ ಎನ್ನುವ ಪಕ್ಷದಲ್ಲಿ ಅನ್ಯೋನ್ಯಾಶ್ರಯದೋಷ. ಪ್ರಾತೀತಿಕ ಅವಿದ್ಯಾಸಿದ್ಧಿ ಸಾಕ್ಷ್ಯಧೀನ. ಅವಿದ್ಯಾವಚ್ಛಿನ್ನಸಾಕ್ಷಿ ಸಿದ್ಧಿಯು ಅವಚ್ಛೇದಕವಾದ ಆ ಅವಿದ್ಯಾಸಿದ್ಧಿಯ ಅಧೀನ ಎಂದು.

**ನ ದ್ವಿತೀಯಃ। ತೇನ ಬ್ರಹ್ಮಣ ಏವ ಸಾಕ್ಷಿವೇದ್ಯಸುಖದುಃಖಾದಿಧೀಃ, ನತು ಜೀವಸ್ಯ ಇತಿ ವೈಪರೀತ್ಯಾಪಾತಾತ್। ಅನ್ಯಥಾ ಅನವಚ್ಛಿನ್ನ ಆನಂದಧೀರಪಿ ಜೀವಸ್ಯ ಸ್ಯಾತ್।**

ಬ್ರಹ್ಮಚೈತನ್ಯವು ಸಾಕ್ಷಿ ಎನ್ನುವ ಎರಡನೇಪಕ್ಷದಲ್ಲಿ ಸಾಕ್ಷಿವೇದ್ಯವಾದ ಜೀವನ ಸುಖದುಃಖಾದಿಗಳ ಅನುಭವ ಬ್ರಹ್ಮನಿಗೇ ಬರಬೇಕಾಯಿತು. ಜೀವನಿಗೆ ಬರಲಾರದು–ಇದು ವೈಪರೀತ್ಯ. ವೈಪರೀತ್ಯ ಬರಲಿ ಎಂದರೆ ಬ್ರಹ್ಮನ ಅನವಚ್ಛಿನ್ನವಾದ ಪೂರ್ಣಆನಂದದ ಅನುಭವ ಜೀವನಿಗೇ ಬರಬೇಕಾಯಿತು. ಇದು ಅನುಭವ ವಿರುದ್ಧ.

**ನಚ ಬ್ರಹ್ಮಚೈತನ್ಯಂ ಘಟಾದಿ ಪ್ರಕಾಶಕಮಿತಿ ಮತೇ ಅಜ್ಞಾನಾಭಿಭವ ದ್ವಾರಾ ತಸ್ಯ ಜೀವಚೈತನ್ಯಾಭೇದ–ಅಭಿವ್ಯಂಜಕ–ಅಂತಃಕರಣವೃತ್ತಿರಿವ ಇಹ ತಾದೃಶೀ ವೃತ್ತಿರಸ್ತಿ।**

ಬ್ರಹ್ಮಚೈತನ್ಯವು ಘಟಾದಿ ವಿಷಯಪ್ರಕಾಶಕ ಎನ್ನುವ ಪಕ್ಷದಲ್ಲಿ ಜೀವನ ಅಂತಃಕರಣ ವೃತ್ತಿಯು ನೇತ್ರಾದಿ ಮಾರ್ಗದಿಂದ ಹೊರಗೆ ಬಂದು ವಿಷಯಾಕಾರವಾಗಿ ಪರಿಣಮಿಸಿ ವಿಷಯಾವಚ್ಛಿನ್ನ ಬ್ರಹ್ಮಚೈತನ್ಯಾವರಕ ಅಜ್ಞಾನವನ್ನು ನಾಶಪಡಿಸಿದಾಗ ಅಂತಃಕರಣ–ಅಜ್ಞಾನಗಳೆಂಬ ಉಪಾಧಿ ಭೇದ ಇಲ್ಲವಾಗುವುದರಿಂದ ಅಭೇದ ವ್ಯಕ್ತವಾಗುತ್ತದೆ. ಆಗ ಬ್ರಹ್ಮಚೈತನ್ಯವೇದ್ಯ ಘಟಾದಿ ವಿಷಯಗಳ ಅನುಭವ ಜೀವಚೈತನ್ಯಕ್ಕೆ ಬರುತ್ತದೆ ಎಂದು ಅದ್ವೈತಿ ಒಪ್ಪಿದ್ದಾನೆ. ಆದರೆ ಬ್ರಹ್ಮಚೈತನ್ಯವು ಸಾಕ್ಷಿ ಎನ್ನುವ ಪಕ್ಷದಲ್ಲಿ ಸಾಕ್ಷಿವೇದ್ಯ ಸುಖದುಃಖಾದಿಗಳ ವಿಷಯದಲ್ಲಿ ಹಾಗೆ ಜೀವ–ಬ್ರಹ್ಮಚೈತನ್ಯಗಳಿಗೆ ಅಭೇದವನ್ನು ವ್ಯಕ್ತಪಡಿಸಬಲ್ಲ ವೃತ್ತಿ ಇರುವುದಿಲ್ಲ. ಆದರಿಂದ ಜೀವನ ಸುಖದುಃಖಾದಿಗಳ ಅನುಭವ ಜೀವನಿಗೆ ಇಲ್ಲ, ಬ್ರಹ್ಮನಿಗೇ ಇರುತ್ತದೆ ಎನ್ನುವ ವೈಪರೀತ್ಯವಿದೆ. ಜೀವನು ಪ್ರತಿಬಿಂಬನಾದ್ದರಿಂದ ಜೀವನಿಗೇ ಇರುತ್ತದೆ ಎಂದರೆ ಬ್ರಹ್ಮನ ಅಪರಿಚ್ಛಿನ್ನ ಆನಂದದ ಅನುಭವ ಜೀವನಿಗೆ ಹೊರತು ಬ್ರಹ್ಮನಿಗೆ ಇಲ್ಲ ಎನ್ನುವ ವೈಪರೀತ್ಯ ಉಂಟಾದೀತು. ಬ್ರಹ್ಮ ಪ್ರತಿಬಿಂಬನಲ್ಲ ತಾನೆ?

**ನ ತೃತೀಯಃ। ಈಶ್ವರೇಣೇವ ಚಿನ್ಮಾತ್ರೇಣಾಪಿ ಸಾಂಸಾರಿಕ ದುಃಖಸ್ಯ ತದ್ಗತತ್ವೇನ ಅಗ್ರಹಣೇऽಪಿ ಯದ್‌ಭಾವೋ ಮುಕ್ತಿಃ ತಸ್ಯ ಚಿನ್ಮಾತ್ರಸ್ಯ ದುಃಖಾದ್ಯುಲ್ಲೇಖ ರೂಪೋಪಪ್ಲವಾಪಾತಾತ್।**

ಜೀವಕೋಟಿ–ಬ್ರಹ್ಮಕೋಟಿ ಉಭಯಾನುಗತ ಚಿನ್ಮಾತ್ರವು ಸಾಕ್ಷಿ ಎನ್ನುವ ಮೂರನೆಪಕ್ಷದಲ್ಲಿ ಜೀವನ ಸಾಂಸಾರಿಕ ದುಃಖವನ್ನು ಚಿನ್ಮಾತ್ರವೇ ಗ್ರಹಿಸಬೇಕಾದೀತು. ಯದ್ಯಪಿ 'ಈಶ್ವರನು ಜೀವನ ಸಾಂಸಾರಿಕ ದುಃಖವನ್ನು ತಿಳಿಯುತ್ತಾನೆ, ಹಾಗೆಯೇ ಚಿನ್ಮಾತ್ರವು ಜೀವನ ಸಾಂಸಾರಿಕ ದುಃಖವನ್ನು ತಿಳಿದರೆ ಅನಿಷ್ಟವಿಲ್ಲ' ಎಂದು ಅದ್ವೈತಿ ಹೇಳಬಹುದು. ಆದರೆ ಈಶ್ವರನು ಸಾಂಸಾರಿಕ ದುಃಖವನ್ನು ಜೀವನಲ್ಲಿರುವುದಾಗಿ ತಿಳಿಯುತ್ತಾನೆ. ತನ್ನಲ್ಲಿರುವುದಾಗಿ ಅಲ್ಲ ಎಂದು ಸಮಾಧಾನ ಶಕ್ಯವಿದೆ.

ಚಿನ್ಮಾತ್ರವು ಜೀವನಲ್ಲಿರುವುದಾಗಿಯೇ ದುಃಖವನ್ನು ತಿಳಿದರೂ, ಆ ದುಃಖವು ವಸ್ತುತಃ ಜೀವಾಭಿನ್ನವಾದ ತನ್ನಲ್ಲಿಯೇ ಇರುವಂಥದ್ದು. ಅದರ ಅನುಭವ ತನಗೇ ಆಗುತ್ತದೆ ಎಂದರೆ ಇದು ಅನಿಷ್ಟ. ಚಿನ್ಮಾತ್ರದ ಭಾಗವೇ ಆದ ಮುಮುಕ್ಷುವು ಇಂಥ ಚಿನ್ಮಾತ್ರಾವಸ್ಥೆಯನ್ನು ತನಗೆ ಬಯಸಲಾರ. ಇದನ್ನು ಅದ್ವೈತಿ ಮುಕ್ತಿ ಎಂದು ಅಂಗೀಕರಿಸುವುದಿಲ್ಲ.

**ಸುಪ್ತಮೈತ್ರಂ ಪ್ರತಿ ಮೈತ್ರೀಯಾಜ್ಞಾನಾದೇಃ ಮೈತ್ರೀಯತಯೇವ ಜಾಗ್ರಚ್ಚೈತ್ರೀಯ ದುಃಖಾದೇರಪಿ ಚೈತ್ರೀಯತಯಾ ಸುಪ್ತಮೈತ್ರಂ ಪ್ರತಿ ಪ್ರತೀತಿ ಪ್ರಸಂಗೇನ ಮೈತ್ರಸ್ಯ 'ಏತಾವಂತಂ ಕಾಲಂ ದುಃಖಂ ನಾವೇದಿಷಂ' ಇತಿ ಪರಾಮರ್ಶಾಯೋಗಾಚ್ಚ ।**

ಚಿನ್ಮಾತ್ರವು ಸಾಕ್ಷಿ ಎನ್ನುವ ಪಕ್ಷದಲ್ಲಿ ಸುಪ್ತಮೈತ್ರನಿಗೆ ಮೈತ್ರನ ಅಜ್ಞಾನಾದಿಗಳು ಸಾಕ್ಷಿಯಿಂದ ಮೈತ್ರನವೆಂದೇ ಕಾಣುವಂತೆ ಜಾಗೃತ ಚೈತ್ರನ ದುಃಖಾದಿಗಳೂ ಚೈತ್ರನಲ್ಲಿವೆ ಎಂದು ಸುಪ್ತಮೈತ್ರನಿಗೆ ಪ್ರತೀತಿ ಬರುವ ಪ್ರಸಂಗವಿದೆ. ಏಕೆಂದರೆ ಚಿನ್ಮಾತ್ರರೂಪ ಸಾಕ್ಷಿಯು ಸರ್ವಜೀವರಿಗೆ ಸಾಧಾರಣವಾದ್ದರಿಂದ ಸರ್ವಜೀವರಿಗೂ ದುಃಖಾದಿಗಳ ಅನುಭವ ಉಂಟು ಮಾಡಬೇಕಾಗುತ್ತದೆ. ಹೀಗೆ ಜಾಗೃತ ಚೈತ್ರನ ದುಃಖಾದಿಗಳು ಸುಪ್ತಮೈತ್ರನಿಗೂ ಅನುಭವಕ್ಕೆ ಬರುವುದರಿಂದ ಮೈತ್ರನಿಗೆ ಎಚ್ಚರ ಬಂದಾಗ 'ನಾನು ಇಷ್ಟುಕಾಲ ದುಃಖವನ್ನು ಕಂಡೇ ಇಲ್ಲ' ಎಂಬ ಸ್ಮರಣೆ ಬರಲಾರದು.

**ನಾಪಿ 'ಸಾಕ್ಷಾತ್‌ಕರ್ತವ್ಯಾಕಾರಾವಿದ್ಯಾವೃತ್ತಿಪ್ರತಿಫಲಿತಂ ಚೈತನ್ಯಂ ಸಾಕ್ಷೀ । ಸುಷುಪ್ತೌ ಚ ಅಜ್ಞಾನಾದ್ಯಾಕಾರ ಅವಿದ್ಯಾವೃತ್ತಿರಸ್ತಿ' ಇತಿ ವಾಚ್ಯಂ । ದುಃಖಾದೇಃ ಸ್ವಾನಂತರಭಾವ್ಯವಿದ್ಯಾ ವೃತ್ತಿ ಪ್ರತಿಫಲಿತ ಚಿದ್‌ವೇದ್ಯತ್ವೇ ಜ್ಞಾತೈಕಸತ್ವಾಯೋಗಾತ್ । ಅವಿದ್ಯಾವೃತ್ತೇರಪಿ ಸಾಕ್ಷ್ಯಧೀನ ಸಿದ್ಧಿಕತ್ವೇನ ಅನ್ಯೋನ್ಯಾಶ್ರಯಾಚ್ಚ । ವಿಸ್ಮೃತಂ ಚೈತತ್ ಅಸತಃ ಸಾಧಕತ್ವಭಂಗೇ ।**

ಸಾಕ್ಷಾತ್ಕರ್ತವ್ಯವಾದ ಅಜ್ಞಾನಾದಿಗಳ ಆಕಾರದಲ್ಲಿ ಪರಿಣತವಾದ ಅವಿದ್ಯಾವೃತ್ತಿಯಲ್ಲಿ ಚೈತನ್ಯವು ಪ್ರತಿಫಲಿಸಿದಾಗ ಅದು ಸಾಕ್ಷಿ ಎನಿಸುತ್ತದೆ. ಸುಷುಪ್ತಿಯಲ್ಲಿಯೂ ಅಜ್ಞಾನಾದಿ ಆಕಾರದ ಅವಿದ್ಯಾವೃತ್ತಿ ಇದೆ. ಆದರಿಂದ 'ಸುಷುಪ್ತಿಯಲ್ಲಿ ಸಾಕ್ಷಾತ್ಕರ್ತವ್ಯವಾದ ಅವಿದ್ಯಾಕಾರವಾದ ಅವಿದ್ಯಾವೃತ್ತಿ ಇಲ್ಲದ್ದರಿಂದ ಎಚ್ಚರದಲ್ಲಿ 'ಏತಾವಂತಂ ಕಾಲಂ ನಾಹಂ ಕಿಂಚಿದವೇದಿಷಂ' ಎಂದು ಅಜ್ಞಾನಾನುಭವಸ್ಮರಣೆ ಕೂಡಲಾರದು' ಎನ್ನುವ ಅನುಪಪತ್ತಿಗೆ ಅವಕಾಶವಿಲ್ಲ—ಎಂದು ಅದ್ವೈತಿ ಹೇಳುತ್ತಾನೆ.

**ವಿಶೇಷವಿಚಾರ–** ನ್ಯಾಯಾಮೃತದಲ್ಲಿ 'ಸುಷುಪ್ತೌ ಚಾಜ್ಞಾನಾದ್ಯಾಕಾರಾವಿದ್ಯಾವೃತ್ತಿರ್ನಾಸ್ತಿ' ಎಂದು ಪಾಠ ಸರಿಯಲ್ಲ. 'ಸುಷುಪ್ತಾವಪಿ ಅವಿದ್ಯಾವೃತ್ತಿ ಸ್ವೀಕಾರಸ್ಯ ಪ್ರಾಗುಕ್ತೇಃ' ಎಂದು ಅದ್ವೈತ ಸಿದ್ಧಿ ಇದೆ.

'ಅವಿದ್ಯಾವೃತ್ತಿಪ್ರತಿಫಲಿತ ಚೈತನ್ಯವು ಸಾಕ್ಷಿ' ಎಂದು ಅದ್ವೈತಿ ಹೇಳುವುದೂ ಕೂಡ ಸರಿಯಲ್ಲ. 'ದುಃಖಾದಿಗಳಿದ್ದರೂ ತದಾಕಾರ ಅವಿದ್ಯಾವೃತ್ತಿ ಇದ್ದರೇ ತದನುಭವ, ಇಲ್ಲದಿದ್ದರೆ ತದದನುಭವವಿಲ್ಲ'ವೆಂದರೆ ದುಃಖಾದಿಗಳು ಜ್ಞಾತೈಕಸತ್ ಅಲ್ಲ ಎಂದಾದೀತು. ದುಃಖಾದಿ ಆಂತರಪದಾರ್ಥವನ್ನು ಪ್ರಾತಿಭಾಸಿಕವೆಂದೇ ಅದ್ವೈತಿಯು ಹೇಳುತ್ತಿರುವುದರಿಂದ ಅದು ಜ್ಞಾತೈಕಸತ್ತೇ ಎನ್ನಬೇಕು.

'ದುಃಖಾದಿಗಳು ಹುಟ್ಟುತ್ತಿದ್ದಂತೆಯೇ ಜೊತೆಗೆ ತದಾಕಾರ ಅವಿದ್ಯಾವೃತ್ತಿಯೂ ನಿಯಮೇನ ಹುಟ್ಟುತ್ತದೆ. ಆದರಿಂದ ದುಃಖಾದಿಗಳು ಜ್ಞಾತೈಕಸತ್ತಾಗಬಹುದು'. ಎಂದರೆ ಹೇಳುತ್ತೇವೆ— ದುಃಖಾದಿಯು ಅವಿದ್ಯಾವೃತ್ತಿಪ್ರತಿಫಲಿತ ಚೈತನ್ಯರೂಪ ಸಾಕ್ಷಿ ವೇದ್ಯವೆಂದರೆ ಇನ್ನೊಂದು ದೋಷ ಅನ್ಯೋನ್ಯಾಶ್ರಯ. 'ಅವಿದ್ಯಾವೃತ್ತಿಯು ಪ್ರಾತೀತಿಕವಾದ್ದರಿಂದ ಸಾಕ್ಷಿಯಿಂದ ಅದರ ಪ್ರತೀತಿ ಸಿದ್ಧಿಯಾದರೆ ಆಗ ಅದರಲ್ಲಿ ಪ್ರತಿಫಲಿತ ಚೈತನ್ಯರೂಪ ಸಾಕ್ಷಿಸಿದ್ಧಿ' ಎಂದು. ಇದರ ಬಗ್ಗೆ ಹೆಚ್ಚಿನ ವಿವರಣೆ ಅಸತ್ತಿಗೆ ಸಾಧಕತ್ವಭಂಗ ಪ್ರಕರಣದಲ್ಲಿದೆ.

**ಇಲ್ಲಿಗೆ ಅದ್ವೈತಮತದಲ್ಲಿ ಬ್ರಹ್ಮನಿಗೆ ಜ್ಞಾನತ್ವ-ಆನಂದತ್ವ-**
**ಅದ್ವಿತೀಯತ್ವ-ನಿತ್ಯತ್ವ-ಸಾಕ್ಷಿತ್ವ ನಿರಾಸ ಮುಗಿಯಿತು.**

## ಬ್ರಹ್ಮಣಃ ಉಪಾದಾನತ್ವಭಂಗಃ

यच्चेदमुच्यते ब्रह्म जगत उपादानत्वे सति कर्त्रित्यभिन्न निमित्तोपादानं जगदिति । तन्न । यतः

''विकारवत्कारणत्वमुपादानत्वमुच्यते ।
निर्विकारतया वेदसिद्धे ब्रह्मणि तत्कथम् ।।''

परिणामापरपर्यायविकारवत्त्वं ह्युपादानत्वम् । तच्च ब्रह्मणि ''निर्विकारोऽक्षरःशुद्धः'' इत्यादिश्रुतिविरुद्धम् ।

ननु विवरणे रज्ज्वाः सूत्रद्वयवन्मायाविशिष्टं ब्रह्म जगत्कारणमिति वा मायाशक्तिमद्ब्रह्म कारणमिति वा जगदुपादानमायाश्रयतया ब्रह्म कारणमिति वेति मतत्रयमुक्तम् । तत्राद्ये रज्ज्वाः सूत्रे इव मायाब्रह्मणी उपादाने, निर्विकारश्रुतिस्तु केवलब्रह्मपरेति विवक्षितम् । द्वितीये मायोपरागाद् ब्रह्म विकारि, निर्विकारश्रुतिस्तु तदनुपरक्ताभिप्रायेति विवक्षितम् । तृतीये तंतुद्वारांऽशुः पटस्येव मायाद्वारा ब्रह्मोपादानम् । श्रुतिस्तु अद्वारकविकारनिषेधिकेति विवक्षितमिति चेन्न ।

आद्ये मायावत्तन्तुवच्च ब्रह्मापि विकारीति विशिष्य ब्रह्मणो निर्विकारत्वोक्त्ययोगात् ।



**ಬ್ರಹ್ಮನು ಜಗತ್ತಿಗೆ ಉಪಾದಾನ ಕಾರಣನಲ್ಲ**

ಅದ್ವೈತಿಗಳು ಹೇಳುತ್ತಾರೆ 'ಬ್ರಹ್ಮನು ಜಗತ್ತಿಗೆ ಉಪಾದಾನಕಾರಣನಾಗಿದ್ದು ಕರ್ತನೂ ಆಗಿರುವುದರಿಂದ ಜಗತ್ತಿಗೆ ನಿಮಿತ್ತ ಮತ್ತು ಉಪಾದಾನಗಳು ಒಂದೇ' ಎಂದು. ಇದು ಸರಿಯಲ್ಲ—

ಯಚ್ಚೇದಮುಚ್ಯತೇ ಬ್ರಹ್ಮ ಜಗತಃ ಉಪಾದಾನತ್ವೇ ಸತಿ ಕರ್ತೃ ಇತಿ, ಅಭಿನ್ನ ನಿಮಿತ್ತೋಪಾದಾನಂ ಜಗತ್ ಇತಿ; ತನ್ನ ಯತಃ...

ಇದು ಸರಿಯಲ್ಲ ಏಕೆಂದರೆ—

**ವಿಕಾರವತ್ ಕಾರಣತ್ವಂ ಉಪಾದಾನತ್ವಮುಚ್ಯತೇ ।**
**ನಿರ್ವಿಕಾರತಯಾ ವೇದಸಿದ್ಧೇ ಬ್ರಹ್ಮಣಿ ತತ್ ಕಥಂ ?**

ಕಾರ್ಯರೂಪವಾಗಿ ಪರಿಣಮಿಸುವ ಕಾರಣವೇ ಉಪಾದಾನವೆನಿಸುತ್ತದೆ. 'ನಿರ್ವಿಕಾರ' ಅಂದರೆ ಪರಿಣಾಮ ಹೊಂದಿರುವವನೆಂದು ವೇದದಲ್ಲಿ ಸಿದ್ಧನಾದ ಬ್ರಹ್ಮನಲ್ಲಿ ಇಂಥ ಉಪಾದಾನಕಾರಣತ್ವ ಹೇಗೆ ಇದ್ದೀತು?

**ಪರಿಣಾಮಾಪರ ಪರ್ಯಾಯ ವಿಕಾರವತ್ತ್ವಂ ಹಿ ಉಪಾದಾನತ್ವಂ ।**
**ತಚ್ಚ ಬ್ರಹ್ಮಣಿ 'ನಿರ್ವಿಕಾರೋಽಕ್ಷರಃ ಶುದ್ಧಃ' ಇತ್ಯಾದಿ ಶ್ರುತಿ ವಿರುದ್ಧಂ ।**

ವಿಕಾರಕ್ಕೇ ಇನ್ನೊಂದು ಪರ್ಯಾಯಶಬ್ದ 'ಪರಿಣಾಮ' ಎಂದು, ಅಂಥ ವಿಕಾರವತ್ತ್ವವೇ ಉಪಾದಾನತ್ವ. ಅದನ್ನು ಬ್ರಹ್ಮನಿಗೆ ಒಪ್ಪುವುದು.

'ನಿರ್ವಿಕಾರೋಽಕ್ಷರಃ ಶುದ್ಧೋ ನಿರಾತಂಕೋಽಜರೋಽಮರಃ
ಅವಿಷ್ವೋ ವಿಶ್ವಕರ್ತಾಜೋ ಯಃ ಪರಃಸೋಽಭಿಧೀಯತೇ'

ಎಂಬ ಶ್ರುತಿಗೆ ವಿರುದ್ಧವಾಗುವುದು.

**ನನು ವಿವರಣೇ ರಜ್ಜ್ವೋಃ ಸೂತ್ರದ್ವಯವತ್ ಮಾಯಾವಿಶಿಷ್ಟಂ ಬ್ರಹ್ಮ ಜಗತ್–ಕಾರಣಮಿತಿ ವಾ, ಮಾಯಾಶಕ್ತಿಮದ್ ಬ್ರಹ್ಮ ಕಾರಣಮಿತಿ ವಾ, ಜಗದುಪಾದಾನ ಮಾಯಾಶ್ರಯತಯಾ ಬ್ರಹ್ಮ ಕಾರಣಮಿತಿ ವಾ ಇತಿ ಮತತ್ರಯಮುಕ್ತಂ ।**

ವಿವರಣದಲ್ಲಿ 'ಹಗ್ಗಕ್ಕೆ ಎರಡು ಎಳೆಗಳಂತೆ ಮಾಯೆ ಮತ್ತು ಬ್ರಹ್ಮ ಎರಡೂ ಜಗತ್ತಿಗೆ ಕಾರಣವೆಂದು, ಅಥವಾ ಮಾಯಾಶಕ್ತಿ ಉಳ್ಳ ಬ್ರಹ್ಮ ಕಾರಣವೆಂದು, ಅಥವಾ ಉಪಾದಾನವು ಮಾಯೆಯೆ ಆದರೂ ಮಾಯೆಗೆ ಆಶ್ರಯನಾಗಿ ಬ್ರಹ್ಮನೂ 'ಉಪಾದಾನಕಾರಣ' ಎಂದೂ ಮೂರು ಮತಗಳಿವೆ ಎಂದಿದ್ದಾರೆ.

**ತತ್ರಾದ್ಯೇ ರಜ್ಜ್ವೋಃ ಸೂತ್ರೇ ಇವ ಮಾಯಾಬ್ರಹ್ಮಣೀ ಉಪಾದಾನೇ । ನಿರ್ವಿಕಾರ ಶ್ರುತಿಸ್ತು ಕೇವಲ ಬ್ರಹ್ಮಪರಾ ಇತಿ ವಿವಕ್ಷಿತಂ ।**

ಈ ಮೂರು ಮತಗಳಲ್ಲಿ ಮೊದಲನೆ ಮತದಲ್ಲಿ ಹಗ್ಗಕ್ಕೆ ಎರಡು ಎಳೆಗಳಂತೆ ಜಗತ್ತಿಗೆ ಮಾಯೆ–ಬ್ರಹ್ಮಗಳೆರಡೂ ಉಪಾದಾನಗಳು. 'ನಿರ್ವಿಕಾರೋಽಕ್ಷರಃಶುದ್ಧಃ' ಎಂಬ ಶ್ರುತಿಯಲ್ಲಿ ಬ್ರಹ್ಮನನ್ನು 'ನಿರ್ವಿಕಾರ' ಎಂದುದು 'ಕೇವಲ ಬ್ರಹ್ಮವೇ ಜಗತ್ತಾಗಿ ವಿಕಾರ ಹೊಂದುವುದಿಲ್ಲ' ಎಂಬ ಅಭಿಪ್ರಾಯದಿಂದ ಎಂದು ವಿವಕ್ಷಿತವಾಗಿದೆ.

**ದ್ವಿತೀಯೇ ಮಾಯೋಪರಾಗಾದ್ ಬ್ರಹ್ಮ ವಿಕಾರಿ, ನಿರ್ವಿಕಾರಶ್ರುತಿಸ್ತು ತದನುಪರಕ್ತಾಭಿಪ್ರಾಯೇತಿ ವಿವಕ್ಷಿತಂ ।**

ಎರಡನೆ ಮತದಲ್ಲಿ ಮಾಯೆಯ ಸಂಬಂಧದಿಂದ ಬ್ರಹ್ಮವು ಜಗತ್ತಾಗಿ ಪರಿಣಮಿಸುತ್ತದೆ. 'ಮಾಯೆಯ ಸಂಬಂಧವಿಲ್ಲದೆ ಶುದ್ಧವಾದ ಬ್ರಹ್ಮ ವಿಕಾರಹೊಂದುವುದಿಲ್ಲ' ಎಂದು 'ನಿರ್ವಿಕಾರ' ಶ್ರುತಿಯ ಅಭಿಪ್ರಾಯ.

**ತೃತೀಯೇ ತಂತುದ್ವಾರಾ ಅಂಶುಃ ಪಟಸ್ಯೇವ, ಮಾಯಾದ್ವಾರಾ ಬ್ರಹ್ಮ ಉಪಾದಾನಂ, ಶ್ರುತಿಸ್ತು ಅದ್ವಾರಕವಿಕಾರನಿಷೇಧಿಕಾ ಇತಿ ವಿವಕ್ಷಿತಂ ॥**

ಮೂರನೆ ಮತದಲ್ಲಿ ನಾರು ಎಳೆಯ ಮೂಲಕವೆ ಬಟ್ಟೆಗೆ ಉಪಾದಾನವಾಗುವಂತೆ ಬ್ರಹ್ಮವೂ ಮಾಯೆಯ ಮೂಲಕವೇ ಜಗತ್ತಿಗೆ ಉಪಾದಾನವಾಗುವುದು. 'ನೇರವಾಗಿ ಜಗತ್ತಿಗೆ ಉಪಾದಾನವಾಗುವುದಿಲ್ಲ' ಎಂದು ಶ್ರುತಿಗೆ ಅಭಿಪ್ರಾಯವಿದೆ ಎಂಬುದು ವಿವಕ್ಷಿತ.

**ಇತಿ ಚೇನ್ನ । ಆದ್ಯೇ ಮಾಯಾವತ್ ತಂತುವಚ್ಚ ಬ್ರಹ್ಮಾಪಿ ವಿಕಾರೀತಿ ವಿಶಿಷ್ಯ ಬ್ರಹ್ಮಣೋ ನಿರ್ವಿಕಾರತ್ವೋಕ್ತ್ಯಯೋಗಾತ್ ।**

ಈ ಮೂರೂ ಮತಗಳು ಸರಿಯಲ್ಲ. ಮೊದಲಿಗೆ, ಮೊದಲನೆ ಮತದಲ್ಲಿ ಹೇಳಿದಂತೆ ಮಾಯೆ ಬ್ರಹ್ಮಗಳೆರಡೂ ಜಗತ್ತಿಗೆ ಉಪಾದಾನಗಳೆ. ಎಳೆಗಳಲ್ಲಿ ಒಂದು ಇನ್ನೊಂದರ ಸಂಬಂಧದಿಂದಲೆ ಬಟ್ಟೆಗೆ ಉಪಾದಾನವಾಗುತ್ತದೆ. ಹಾಗೇ ಮಾಯೆಯೂ ಬ್ರಹ್ಮನ ಸಂಬಂಧದಿಂದಲೇ ಜಗತ್ತಿಗೆ ಉಪಾದಾನವಾಗುತ್ತದೆ. ಬ್ರಹ್ಮಸಂಬಂಧವಿಲ್ಲದೆ ಮಾಯೆಯು ಉಪಾದಾನವಾಗುವುದಿಲ್ಲ. ಹಾಗೇ ಬ್ರಹ್ಮವೂ ಮಾಯೆಯ ಸಂಬಂಧದಿಂದಲೇ ಉಪಾದಾನವಾಗುತ್ತದೆ. ಮಾಯೆಯ ಸಂಬಂಧವಿಲ್ಲದೆ ಬ್ರಹ್ಮವೂ ಉಪಾದಾನವಾಗುವುದಿಲ್ಲ. ಮಾಯೆಯಂತೆಯೇ ಬ್ರಹ್ಮವೂ ವಿಕಾರಿ ಎಂದಮೇಲೆ ಶ್ರುತಿಯು ಬ್ರಹ್ಮವನ್ನು ಮಾತ್ರ 'ನಿರ್ವಿಕಾರ' ಎನ್ನಲು ಕಾರಣವಿಲ್ಲ. ಮಾಯಾಸಂಬಂಧವಿಲ್ಲದೆ ಬ್ರಹ್ಮ ವಿಕಾರಿಯಾಗುವುದಿಲ್ಲ. ಎಂದರೆ, ಬ್ರಹ್ಮಸಂಬಂಧವಿಲ್ಲದೆ ಮಾಯೆಯೂ ವಿಕಾರಿಯಾಗುವುದಿಲ್ಲ. ಮಾಯೆಯನ್ನೇಕೆ 'ನಿರ್ವಿಕಾರ' ಎಂದು ಶ್ರುತಿಯು ಹೇಳುತ್ತಿಲ್ಲ? ಆದರಿಂದ ಮಾಯೆಯಂತೆ ಬ್ರಹ್ಮವು ವಿಕಾರಿಯಾಗುವುದು ಶ್ರುತಿಸಮ್ಮತವಲ್ಲ. ನಿರ್ವಿಕಾರ ಶ್ರುತಿವಿರೋಧ ಪರಿಹಾರವಾಗುವುದಿಲ್ಲ.



**किंच परमार्थसज्ज्ञानानंदस्वभावस्य ब्रह्मणोऽप्युपादानत्वे कार्यमपि तथा स्यात् । अविद्योपादानत्वेऽपि सितासितसूत्रकार्ये पटे सितत्ववज्जगति परमार्थसत्त्वादेरपि दुर्वारत्वात् । नह्युपादानस्वभावस्योपादेये धीमात्रम् । अविद्यास्वभावस्यानिर्वाच्यत्वस्यापि प्रपंचे धीमात्रत्वापातात् । सन्मात्रोपादानकत्वं सत्त्वे तंत्रं चेत्**

अनिर्वाच्यत्वमपि न स्यात् । तन्मात्रोपादानकत्वाभावात् ।

द्वितीये मायाख्यहेतूपरागभावाभावाभ्यां विकारभावाभावविवक्षा चेत् मृदादिसाधारण्यम् । मायाविशिष्टं ब्रह्म विकारि । निर्विकारश्रुतिस्तु विशेष्याभिप्रायेति विवक्षायां तु विशिष्टस्य ब्रह्मत्वे निर्विकार-श्रुतिविरोधः । अब्रह्मत्वे न नो हानिः । एतेन प्रकृतिविशिष्टं ब्रह्मोपादानमिति निरस्तम् । विस्तृतं चैतदन्यत्र ।

नन्वविद्याया अप्युपादानत्वात् न कार्यस्य ज्ञानानंदाद्यात्मकत्वमित्याशंक्याह —**अविद्योपादानत्वेऽपीति** ।। ननूपादानस्वभावस्योपादेयगतत्वमिति न नियमः । किंतु तत्र तत्स्वभाव प्रतीतिमात्रम्, उपादातस्वभावसत्त्वप्रतीतिस्तु प्रपंचेऽप्यस्तीति नोक्तदोष इत्याशंक्याह– **नहीति । अनिर्वाच्यत्वमपीति** ।। विनिगमनाविरहेणा-निर्वाच्यमात्रोपादानकत्वाभावात् प्रपंचे अनिर्वाच्यत्वमपि न स्यादित्यर्थः ।। **एतेनेति** ।। ब्रह्मत्वाब्रह्मत्वविकल्पेनेत्यर्थः ।। **विस्तृतं चैतदिति** ।।



**ಕಿಂಚ ಪರಮಾರ್ಥ ಸಜ್ಜ್ಞಾನಾನಂದ ಸ್ವಭಾವಸ್ಯ ಬ್ರಹ್ಮಣೋಽಪ್ಯುಪಾದಾನತ್ವೇ ಕಾರ್ಯಮಪಿ ತಥಾ ಸ್ಯಾತ್। ಅವಿದ್ಯೋಪಾದಾನತ್ವೇಽಪಿ ಸಿತಾಸಿತ ಸೂತ್ರಕಾರ್ಯೇ ಪಟೇ ಸಿತತ್ವವತ್ ಜಗತಿ ಪರಮಾರ್ಥಸತ್ವಾದೇರಪಿ ದುರ್ವಾರತ್ವಾತ್।**

ಪಾರಮಾರ್ಥಿಕಸತ್ಯ ಜ್ಞಾನಾನಂದ ಸ್ವಭಾವವಾದ ಬ್ರಹ್ಮನೂ ಕೂಡ ಜಗತ್ತಿಗೆ ಉಪಾದಾನವೆಂದರೆ, ಉಪಾದಾನವಾದ ಮಣ್ಣಿನ ಗುಣ ಅದರ ಕಾರ್ಯವಾದ ಮಡಿಕೆಯಲ್ಲಿ ಬರುವಂತೆ ಉಪಾದಾನವಾದ ಬ್ರಹ್ಮನ ಜ್ಞಾನಾನಂದಾದಿ ಗುಣಗಳೂ ಮತ್ತು ಪಾರಮಾರ್ಥಿಕ ಸತ್ಯತ್ವವೂ ಬ್ರಹ್ಮನ ಕಾರ್ಯವಾದ ಜಗತ್ತಿನಲ್ಲಿ ಬರಬೇಕಾದೀತು.

'ಜಗತ್ತಿಗೆ ಕೇವಲ ಬ್ರಹ್ಮ ಉಪಾದಾನವಾಗಿದ್ದರೆ ಹೀಗೆ ಆಪಾದನೆಗೆ ಎಡೆ ಇದೆ. ಆದರೆ ಬ್ರಹ್ಮನೊಂದಿಗೆ ಅವಿದ್ಯೆಯೂ ಕೂಡ ಜಗತ್ತಿಗೆ ಉಪಾದಾನವಾಗಿರುವುದರಿಂದ ಕೇವಲ ಬ್ರಹ್ಮನ ಗುಣಧರ್ಮಗಳು ಜಗತ್ತಿನಲ್ಲಿ ಬರಲಾರವು' ಎಂದು ಅದ್ವೈತಿ ಹೇಳಬಹುದು. ಆದರೆ ಕಪ್ಪು ಬಿಳಿ ಬಣ್ಣದ ಎಳೆಗಳಿಂದಾದ ಬಟ್ಟೆಯಲ್ಲಿ ಕೂಡ ಕಪ್ಪು ಎಳೆಗಳ ಬಣ್ಣ ಬರುವುದು ಕಂಡಿದೆ. ಕೇವಲ ಕಪ್ಪು ಎಳೆಗಳಿಂದಾದರೆ ಮಾತ್ರ ಬಟ್ಟೆ ಕಪ್ಪಾಗುತ್ತದೆ ಎನ್ನುವಂತಿಲ್ಲ. ಆದರಿಂದ ಪರಮಾರ್ಥಸತ್ತಾದ ಬ್ರಹ್ಮನ ಕಾರ್ಯವಾದ ಜಗತ್ತಿನಲ್ಲಿ ಪಾರಮಾರ್ಥಿಕ ಸತ್ವ ಬರುವುದು ಅಪರಿಹಾರ್ಯ.

**ನಹ್ಯುಪಾದಾನ ಸ್ವಭಾವಸ್ಯೋಪಾದೇಯೇ ಧೀಮಾತ್ರಂ। ಅವಿದ್ಯಾಸ್ವಭಾವಸ್ಯ ಅನಿರ್ವಾಚ್ಯತ್ವಸ್ಯಾಪಿ ಪ್ರಪಂಚೇ ಧೀಮಾತ್ರತ್ವಾಪಾತಾತ್।**

'ಉಪಾದಾನ ಸ್ವಭಾವವು ಅದರ ಕಾರ್ಯದಲ್ಲಿ ಬರುವ ನಿಯಮವಿಲ್ಲ. ತೋರುವ ನಿಯಮಮಾತ್ರವಿದೆ. ಅದರಿಂದ ಉಪಾದಾನವಾದ ಬ್ರಹ್ಮನ ಪಾರಮಾರ್ಥಿಕಸತ್ಯತ್ವವು 'ಘಟಃ ಸನ್' ಎಂದು ಮುಂತಾಗಿ ಪ್ರಪಂಚದಲ್ಲಿ ತೋರುತ್ತದೆ. ಪಾರಮಾರ್ಥಿಕ ಸತ್ಯತ್ವವು ಪ್ರಪಂಚದಲ್ಲಿ ಬಂದಿರುವುದಿಲ್ಲ' ಎಂದು ಅದ್ವೈತಿ ಹೇಳುತ್ತಾನೆ. ಹಾಗಾದರೆ 'ಬ್ರಹ್ಮನಂತೆ ಅವಿದ್ಯೆಯೂ ಪ್ರಪಂಚಕ್ಕೆ ಉಪಾದಾನವೆಂದ ಮೇಲೆ ಅವಿದ್ಯೆಯ ಅನಿರ್ವಚನೀಯ ಸ್ವಭಾವವೂ ಕೂಡ ಪ್ರಪಂಚದಲ್ಲಿ ಕೇವಲ ತೋರಬೇಕು ಹೊರತು ಅದು ಪ್ರಪಂಚದಲ್ಲಿ ಬರಬೇಕಿಲ್ಲ. ಪ್ರಪಂಚವು ಮಿಥ್ಯಾ ಆಗಬೇಕಿಲ್ಲ' ಎಂದು ನಾವು ಹೇಳಬೇಕು.

**ಸನ್ಮಾತ್ರೋಪಾದಾನಕತ್ವಂ ಸತ್ವೇ ತಂತ್ರಂ ಚೇತ್ ಅನಿರ್ವಾಚ್ಯತ್ವಮಪಿ ನ ಸ್ಯಾತ್। ತನ್ಮಾತ್ರೋಪಾದಾನಕತ್ವಾಭಾವಾತ್।**

'ಪ್ರಪಂಚದಲ್ಲಿ ಪಾರಮಾರ್ಥಿಕ ಸತ್ಯತ್ವ ಬರಬೇಕೆಂದರೆ ಅದಕ್ಕೆ ಪರಮಾರ್ಥಸತ್ತಾದ ಬ್ರಹ್ಮ ಒಂದೇ ಉಪಾದಾನವಾಗಿರಬೇಕು. ಆದರೆ ಪ್ರಕೃತ ಅನಿರ್ವಚನೀಯವಾದ ಅವಿದ್ಯೆಯೂ ಜೊತೆಗೆ ಉಪಾದಾನವಾಗಿರುವುದರಿಂದ ಪ್ರಪಂಚದಲ್ಲಿ ಪಾರಮಾರ್ಥಿಕಸತ್ಯತ್ವ ಬಂದಿಲ್ಲ' ಎಂದು ಅದ್ವೈತಿ ಹೇಳಿದರೆ ಅದೂ ಸರಿಯಲ್ಲ. ಪ್ರಪಂಚದಲ್ಲಿ ಸತ್ಯತ್ವ ಬರಬೇಕೆಂದರೆ ಸತ್ಯವಾದ ಉಪಾದಾನ ಮಾತ್ರವಿರಬೇಕಾಗುತ್ತದೆ, ಎಂದರೆ, ಪ್ರಪಂಚದಲ್ಲಿ ಅನಿರ್ವಚನೀಯತ್ವ ಬರಬೇಕೆಂದರೂ ಅನಿರ್ವಚನೀಯ ಮಾತ್ರವೇ ಉಪಾದಾನವಾಗಿರಬೇಕಾಗುತ್ತದೆ ಎಂದೇಕೆ ಹೇಳಬಾರದು? ಇದಕ್ಕೆ ವಿನಿಗಮಕವೇನು? ಪ್ರಪಂಚಕ್ಕೆ ಅನಿರ್ವಚನೀಯವಾದ ಅವಿದ್ಯೆ ಮಾತ್ರವೇ ಉಪಾದಾನವಾಗಿಲ್ಲ, ಸತ್ಯವಾದ ಬ್ರಹ್ಮವೂ ಕೂಡ ಜೊತೆಗೆ ಉಪಾದಾನವಾಗಿದೆ. ಹೀಗಾಗಿ ಪ್ರಪಂಚದಲ್ಲಿ ಅನಿರ್ವಚನೀಯತ್ವ ಬರಲು ಅವಕಾಶವಿಲ್ಲ ಎಂದು ನಾವು ಹೇಳುತ್ತೇವೆ. ಹೀಗೆ ಪ್ರಪಂಚವು ಅನಿರ್ವಚನೀಯ, ಮಿಥ್ಯಾ ಎನ್ನುವುದು ಅದ್ವೈತಿಗಳು ಒಪ್ಪಿರುವ ಯುಕ್ತಿಗೇ ವಿರುದ್ಧವಾಗಿದೆ.

**ದ್ವಿತೀಯೇ ಮಾಯಾಖ್ಯ ಹೇತೂಪರಾಗ ಭಾವಾಭಾವಾಭ್ಯಾಂ ವಿಕಾರಭಾವಾಭಾವ ವಿವಕ್ಷಾ ಚೇತ್ ಮೃದಾದಿ ಸಾಧಾರಣ್ಯಂ।**

ಎರಡನೇ ಮತದಲ್ಲಿ ಮಾಯಾಶಕ್ತಿ ಎಂಬ ಹೇತುವಿನ ಸನ್ನಿಧಾನವಿರುವಾಗಲೇ ಬ್ರಹ್ಮವು ಪ್ರಪಂಚರೂಪವಾಗಿ ಪರಿಣಾಮಹೊಂದುತ್ತದೆ. 'ಮಾಯಾಶಕ್ತಿಯ ಉಪರಾಗ ಅಂದರೆ ಸನ್ನಿಧಾನವಿಲ್ಲದಿದ್ದರೆ ಬ್ರಹ್ಮ ಪ್ರಪಂಚವಾಗಿ ವಿಕಾರ ಹೊಂದುವುದಿಲ್ಲ' ಎಂದು ನಿರ್ವಿಕಾರ ಶ್ರುತಿಯ ಅಭಿಪ್ರಾಯ ಎನ್ನುತ್ತಾರೆ. ಆದರೆ ಇಂಥ ನಿರ್ವಿಕಾರತ್ವವು ಮಣ್ಣಿಗೂ ಸಮಾನ. ಕುಂಬಾರನ ಶಕ್ತಿಯ ಸನ್ನಿಧಾನವಿದ್ದಾಗಲೆ ಮಣ್ಣು ಮಡಿಕೆಯಾಗಿ ಪರಿಣಮಿಸುತ್ತದೆ. ವಿಕಾರ ಹೊಂದುತ್ತದೆ. ಇಲ್ಲದಿದ್ದರೆ

ಮಣ್ಣು ನಿರ್ವಿಕಾರವೆ. ವಿಶೇಷವಾಗಿ ಬ್ರಹ್ಮನನ್ನು ಮಾತ್ರ ಶ್ರುತಿಯು ನಿರ್ವಿಕಾರ ಎಂದು ಏಕೆ ಹೊಗಳುತ್ತದೆ?

**'ಮಾಯಾವಿಶಿಷ್ಟಂ ಬ್ರಹ್ಮ ವಿಕಾರಿ । ನಿರ್ವಿಕಾರಶ್ರುತಿಸ್ತು ವಿಶೇಷ್ಯಾಭಿಪ್ರಾಯಾ' ಇತಿ ವಿವಕ್ಷಾಯಾಂ ತು ವಿಶಿಷ್ಟಸ್ಯ ಬ್ರಹ್ಮತ್ವೇ ನಿರ್ವಿಕಾರಶ್ರುತಿ ವಿರೋಧಃ, ಅಬ್ರಹ್ಮತ್ವೇ ನ ನೋ ಹಾನಿಃ ।**

ಎರಡನೆ ಮತದಲ್ಲಿ ಹೀಗೂ ಹೇಳುತ್ತಾರೆ—'ಮಾಯಾವಿಶಿಷ್ಟ ಬ್ರಹ್ಮವು ವಿಕಾರಿ. ವಿಶೇಷ್ಯಾಂಶವಾದ ಶುದ್ಧ ಬ್ರಹ್ಮ ಮಾತ್ರ ನಿರ್ವಿಕಾರವೆಂದು ಶ್ರುತಿಯ ಅಭಿಪ್ರಾಯ' ಎಂದು. ಇವರು ಹೇಳಬೇಕು, 'ವಿಶಿಷ್ಟಬ್ರಹ್ಮವು ಬ್ರಹ್ಮವಾಗಿದೆಯೆ? ಇಲ್ಲವೆ? ಬ್ರಹ್ಮವೇ ಆಗಿದೆ ಎಂದರೆ 'ಬ್ರಹ್ಮವು ನಿರ್ವಿಕಾರ' ಎನ್ನುವ ಶ್ರುತಿಯ ವಿರೋಧ ಪರಿಹಾರವಾಗಿಲ್ಲ. ಬ್ರಹ್ಮವೇ ಆಗಿರುವ ವಿಶಿಷ್ಟವು ವಿಕಾರಿ ಎನ್ನುತ್ತಿದ್ದೀರಿ ತಾನೆ? ವಿಶಿಷ್ಟವು ಬ್ರಹ್ಮವಲ್ಲ ಎನ್ನುವುದಾದರೆ ಅದನ್ನು ವಿಕಾರಿ ಎಂದು ನೀವು ಹೇಳಿದರೆ ನಮಗೆ ಏನೂ ಅನಿಷ್ಟವಿಲ್ಲ. 'ಬ್ರಹ್ಮವು ನಿರ್ವಿಕಾರ' ಎಂದು ಶ್ರುತಿ ಹೇಳುತ್ತಿದೆ, ಅದೇ ನಮ್ಮ ಮತ.

**ಏತೇನ 'ಪ್ರಕೃತಿವಿಶಿಷ್ಟಂ ಬ್ರಹ್ಮ ಉಪಾದಾನಂ' ಇತಿ ನಿರಸ್ತಂ। ವಿಸ್ತೃತಂ ಚೈತದನ್ಯತ್ರ ।**

ಎರಡನೆ ಮತದವರು 'ಪ್ರಕೃತಿವಿಶಿಷ್ಟ ಬ್ರಹ್ಮವು ವಿಕಾರಿ, ವಿಶೇಷ್ಯವಾದ ಬ್ರಹ್ಮ ನಿರ್ವಿಕಾರವೆ ಎನ್ನುವುದು ಶ್ರುತಿಯ ಅಭಿಪ್ರಾಯ' ಎಂದು ಹೇಳಿದರೆ ಹಿಂದಿನಂತೆಯೇ 'ಪ್ರಕೃತಿವಿಶಿಷ್ಟಬ್ರಹ್ಮವು ಬ್ರಹ್ಮ ಹೌದೆ ಅಲ್ಲವೆ?' ಎಂದು ಕೇಳುತ್ತೇವೆ. ಬ್ರಹ್ಮ ಹೌದೆಂದರೆ 'ಬ್ರಹ್ಮವು ನಿರ್ವಿಕಾರ' ಎನ್ನುವ ಶ್ರುತಿಯ ವಿರೋಧ ಪರಿಹಾರವಾಗಿಲ್ಲ. ಬ್ರಹ್ಮವೆ ಆಗಿರುವ ಪ್ರಕೃತಿವಿಶಿಷ್ಟವನ್ನು ವಿಕಾರಿ ಎನ್ನುತ್ತಿದ್ದೀರಿ ತಾನೆ? ವಿಶಿಷ್ಟವು ಬ್ರಹ್ಮವಲ್ಲ ಎಂದರೆ ಅದು ವಿಕಾರಿಯಾಗಬಹುದು. ವಿಕಾರಿ ಎಂದರೆ ನಮಗೆ ಏನೂ ಅನಿಷ್ಟವಿಲ್ಲ. 'ಬ್ರಹ್ಮವು ನಿರ್ವಿಕಾರ' ಎಂದು ಶ್ರುತಿ ಹೇಳುತ್ತಿದೆ, ಅದೇ ನಮ್ಮ ಮತ.

'ಏತೇನ' ಮಾಯಾವಿಶಿಷ್ಟವು ಬ್ರಹ್ಮ ಹೌದೆ ಅಲ್ಲವೆ ಎಂದು ವಿಕಲ್ಪಪೂರ್ವಕವಾಗಿ ನಿರಾಸಮಾಡಿದ್ದರಿಂದಲೆ 'ಪ್ರಕೃತಿವಿಶಿಷ್ಟಬ್ರಹ್ಮವು ಉಪಾದಾನಕಾರಣ' ಎನ್ನುವ ಮತವೂ ನಿರಸ್ತವಾಯಿತು. ಎರಡರಲ್ಲಿಯೂ ನಾವು ಹೇಳುವ ದೋಷಗಳು ಸಮಾನ.

ಇದರ ಬಗ್ಗೆ ಹೆಚ್ಚಿನ ವಿವರಣೆಯನ್ನು 'ಅನ್ಯತ್ರ' ಬೇರೆಕಡೆ ಪ್ರಕೃತ್ಯಧಿಕರಣ ಚಂದ್ರಿಕಾದಲ್ಲಿ ನೋಡಬಹುದು—'ಮಾಯಾವಿಶಿಷ್ಟವು ಅಥವಾ ಪ್ರಕೃತಿವಿಶಿಷ್ಟವು ಬ್ರಹ್ಮವಲ್ಲದಿದ್ದರೂ ವಿಶಿಷ್ಟವು ಉಪಾದಾನವಾಗುವಾಗ ವಿಶಿಷ್ಟಾಂತರ್ಗತವಾದ ಬ್ರಹ್ಮವೂ ಯಥಾಕಥಂಚಿತ್ ಉಪಾದಾನದಲ್ಲಿ ಪ್ರವಿಷ್ಟವಾಗಿ ಉಪಾದಾನವೆನಿಸುವುದರಿಂದ ಬ್ರಹ್ಮನ ಜಗದುಪಾದಾನತ್ವಕ್ಕೆ ಹಾನಿ ಇಲ್ಲ. 'ಬ್ರಹ್ಮವು ಜಗದುಪಾದಾನ' ಎನ್ನುವ ನಮ್ಮ ಮತಕ್ಕೆ ಇದೇ ಅಭಿಪ್ರಾಯ ಹೊರತು ಕೇವಲ ಬ್ರಹ್ಮವು ಉಪಾದಾನವಾಗುವುದೆಂದಲ್ಲ. ಆದರಿಂದ ನಿರ್ವಿಕಾರಶ್ರುತಿ ವಿರೋಧ ಬರುವುದಿಲ್ಲ' ಎಂದು

ಅದ್ವೈತಿಯು ಹೇಳುತ್ತಾನೆ. ಆದರೆ ಬ್ರಹ್ಮನಿಗೆ ಯಥಾಕಥಂಚಿತ್ ಉಪಾದಾನತ್ವವನ್ನು ಸಮರ್ಥಿಸುವ ಅಭಿಪ್ರಾಯವು ಕೂಡ ಪ್ರಕೃತ್ಯಧಿಕರಣಕ್ಕೆ ಇಲ್ಲ. ಸಮನ್ವಯಾಧ್ಯಾಯದಲ್ಲಿ ಈ ಅಧಿಕರಣ ಬರುವುದರಿಂದ 'ಪ್ರಕೃತಿಶ್ಚ ಪ್ರತಿಜ್ಞಾದೃಷ್ಟಾಂತಾನುಪರೋಧಾತ್' ಎಂದು 'ಪ್ರಕೃತಿ' ಶಬ್ದವನ್ನು ಬ್ರಹ್ಮನಲ್ಲಿ ಸಮನ್ವಯಮಾಡಲು ಈ ಸೂತ್ರ ಹೊರಟಿದೆ ಎನ್ನಬೇಕು. ಪ್ರಕೃತಿತ್ವವನ್ನು, ಅಂದರೆ ಉಪಾದಾನತ್ವವನ್ನು ಸಮನ್ವಯ ಮಾಡಲು ಹೊರಟಿದೆ ಎನ್ನಬಾರದು. 'ಪ್ರಕೃತಿ'ಶಬ್ದ ಸಮನ್ವಯಮಾಡುವುದನ್ನು ಬಿಟ್ಟು ಪ್ರಕೃತಿತ್ವ ಸಮನ್ವಯಕ್ಕೇ ಈ ಸೂತ್ರ ಹೊರಟಿದೆ ಎಂದರೆ 'ಆಕಾಶಸ್ತಲ್ಲಿಂಗಾತ್' ಇತ್ಯಾದಿ ಅಧಿಕರಣಗಳಲ್ಲಿಯೂ ಆಕಾಶಾದಿ ಶಬ್ದಸಮನ್ವಯ ಮಾಡುವುದನ್ನು ಬಿಟ್ಟು ಆಕಾಶತ್ವಾದಿಗಳನ್ನೇ ಸಮನ್ವಯ ಮಾಡಬೇಕಾದೀತು.

'ಪ್ರತಿಜ್ಞಾದೃಷ್ಟಾಂತಾನುಪರೋಧಾತ್' ಎಂದು ಸೂತ್ರೋಕ್ತವಾಗಿರುವ ಏಕವಿಜ್ಞಾನೇನ ಸರ್ವವಿಜ್ಞಾನವನ್ನು ಕೂಡಿಸಬೇಕಾದರೆ ಅನಾದಿಯಾದ ಅವಿದ್ಯಾದಿಗಳಿಗೂ ಬ್ರಹ್ಮನನ್ನು ಉಪಾದಾನವೆಂದು ಸಮರ್ಥಿಸಬೇಕಾಗುತ್ತದೆ. ಅದು ಶಕ್ಯವಿಲ್ಲ.

ಅನಾದಿ ಅವಿದ್ಯಾದಿಗಳೂ ಕಲ್ಪಿತವಾದ್ದರಿಂದ ಅಧಿಷ್ಠಾನತ್ವರೂಪವಾದ ಉಪಾದಾನತ್ವವನ್ನು ಸಮರ್ಥಿಸುವುದು ಶಕ್ಯವಿದೆ, ಎಂದರೆ, ಕರ್ತೃವೂ ಕೂಡ ಕಲ್ಪಿತವಾದ್ದರಿಂದ, ಕಾರ್ಯಾಂತರ್ಗತವೇ ಹೊರತು ಕರ್ತೃಅಲ್ಲ ಎಂದೇ ಆಗುವುದರಿಂದ ಪ್ರಪಂಚವು ಅಕರ್ತೃಕವೇ ಆದೀತು. ಆಗ ಪ್ರಪಂಚರೂಪ ಕಾರ್ಯವು ಉಪಾದಾನಾಭಿನ್ನಕರ್ತೃಕವಾಗಿರುತ್ತದೆ ಎನ್ನುವ ಅದ್ವೈತಸಿದ್ಧಾಂತಕ್ಕೆ ಹಾನಿ.

ಕರ್ತೃವೂ ತನಗೆ ತಾನೇ ಕಾರ್ಯವೂ ಆಗಬಹುದು. 'ತದಾತ್ಮಾನಂ ಸ್ವಯಮಕುರುತ' ಎಂದು ಶ್ರುತಿ ಇದೆ' ಎನ್ನುವುದೂ ಅಸಂಗತ. ವಿವರ್ತಮತದಲ್ಲಿ ಹಗ್ಗ ಹಾವಾಗಿ ಕಾಣುತ್ತದೆ ಹೊರತು 'ಹಗ್ಗ ಹಾವನ್ನು 'ಅಕುರುತ' ನಿರ್ಮಿಸುತ್ತದೆ ಎನ್ನುವುದಿಲ್ಲ. 'ಹಾವೂ ತನ್ನ ತಾನೇ ನಿರ್ಮಿಸುತ್ತದೆ' ಎನ್ನುವುದೂ ಇಲ್ಲ.

ಹೀಗಾಗಿ ಅನಾದಿ ಅವಿದ್ಯಾದಿಗಳಿಗೆ ಬ್ರಹ್ಮನಲ್ಲಿ ಅಧಿಷ್ಠಾನತ್ವರೂಪವಾದ ಉಪಾದಾನತ್ವವನ್ನು ನೇರವಾಗಿಯೂ ಹೇಳಲು ಬರುವುದಿಲ್ಲ. ಪರಿಣಾಮಿ ಉಪಾದಾನಭೂತ ವಿಶಿಷ್ಟಾಂತರ್ಗತವಾಗಿ ಯಥಾಕಥಂಚಿತ್ ಉಪಾದಾನತ್ವವನ್ನು ಹೇಳಲೂ ಬರುವುದಿಲ್ಲ. ಇತ್ಯಾದಿ ವಿವರಗಳು ಪ್ರಕೃತ್ಯಧಿಕರಣ ಚಂದ್ರಿಕಾದಲ್ಲಿ ನಿರೂಪಿತವಾಗಿವೆ.



**किंच विशिष्टस्य मृदादिवद्धर्मिसमसत्ताकरूपांतरापत्तिरूप-परिणामाद्विवर्तमतहानिः स्यात् । विशिष्टस्य परिणामः शुद्धस्य तु**

विवर्त इति चेत् तर्हि शुद्धेऽपि विवर्तार्थं आरोपितविकारस्यावश्यकत्वान्निर्विकारश्रुतेस्तत्परत्वं न स्यात्। श्रुतिर्विशेष्यस्यैव तात्विकविकाराभावपरा चेत् विशिष्टं विकारोक्तिरयुक्ता स्यात्। तत्वतो निर्विकारे आरोपितविकाराविरोधात्।

तृतीयोऽप्ययुक्तः, अंशोस्तंतुं प्रतीव ब्रह्मणः अनादिमायां प्रति उपादानत्वाभावात्। भ्रमाधिष्ठानत्वमुपादानत्वमितिचेत् न। उपादाने मृदादौ भ्रमाधिष्ठानत्वस्य भ्रमाधिष्ठाने च शुक्त्यादौ उपादानत्वस्य चाव्यवहारात्। पारिभाषिकोपादानत्वस्य चानुपादानत्वे पर्यवसानात्।

एतेनासत्यरूपांतरापत्तिर्विवर्तः, सत्यरूपांतरापत्तिस्तु परिणामः, रूपांतरापत्तिमात्रं उपादानत्वम्। तच्च ब्रह्मणो विवर्तरूपविशेषेणाप्युपपन्नम्। निर्विकारश्रुतिस्तु तात्विकविकाराभावाभिप्राया। ब्रह्म चाज्ञातं प्रपंचरूपेण विवर्तत इति अज्ञानमपि परिणामितयोपादानांतर्गतम्। रूप्यमपि शुक्तिविवर्तत्वादज्ञानपरिणामत्वाच्चोभयोपादानकमिति निरस्तम्।

त्वयापि मिथ्याभूतस्य मिथ्याभूतमेवोपादानमन्वेषणीयम्। सत्यत्वे कार्यस्यापि कारणस्वभावतया सत्यत्वप्रसंग इति वदता सत्यस्यासत्यरूपापत्तेर्निषेधात्। सत्यारोपितधूमानुगतधूमत्व सामान्यस्येव सत्यासत्यरूपांतरापत्त्यनुगतोपादानत्वसामान्यस्याप्यभावाच्च। शुक्तिब्रह्मणोरेव रूप्याकाशाद्युपादानत्वसंभवे अविद्यान्वय व्यतिरेकयो र्निमित्तत्वेनाप्युपपत्तेरविद्योपादानत्वकल्पनायोगाच्च। नच परिणामित्वेनाविद्याकल्पनम्। असत्यस्य रूप्यादेः सत्यरूपापत्तिमत्परिणाम्यपेक्षाभावात्। विकारित्वेनाविद्याकल्पनं तु तत्वतो निर्विकारे ब्रह्मणि अतात्विकविकारांगीकारात्

**परेणैव निरस्तम् । नच कार्यापेक्षितस्वसमानसत्ताकोपादानत्वे-नाविद्याकल्पनम् । अविद्यार्थापत्तिभंगे निरस्तत्वात् ।**

ननु नेदं मृदादिसाधारणमुपादानत्वम् । किंतु ब्रह्ममात्रगतमेवोच्यत इत्याशंक्याह— **पारिभाषिकोपादानत्वस्य चेति ।।** यदुक्तमुभयानुगतरूपांतरापत्तिमात्रमुपादानत्वमिति तदपि नेत्याह— **सत्यारोपितेति । निरस्तत्वादिति ।।** विवर्ताधिष्ठानरूपोपादानेन निवृत्तोपादानाकांक्षस्यापि घटादिदृष्टांतेनोपादानकल्पने घटादेः कार्यस्य स्वसमानसत्ताकोपादानापेक्षत्वेनासमानसत्ताकस्य ब्रह्मणो वियदाद्युपादानत्वं न स्यादित्यादिना निरस्तत्वादित्यर्थः ।



**ಕಿಂಚ ವಿಶಿಷ್ಟಸ್ಯ ಮೃದಾದಿವತ್ ಧರ್ಮಿಸಮ ಸತ್ತಾಕ ರೂಪಾಂತರಾಪತ್ತಿರೂಪ ಪರಿಣಾಮಾತ್ ವಿವರ್ತಮತ ಹಾನಿಃ ಸ್ಯಾತ್ ।**

ವಿಶಿಷ್ಟವು ಪ್ರಪಂಚಕ್ಕೆ, ಘಟಕ್ಕೆ ಮಣ್ಣಿನಂತೆ, ಪರಿಣಾಮಿ ಉಪಾದಾನವಾಗುತ್ತದೆ. ಅಂದರೆ, ಮಿಥ್ಯಾವಾದ ಮಣ್ಣಿನಲ್ಲಿ ಧರ್ಮಿಸಮಸತ್ತಾಕವಾದ ಮಿಥ್ಯಾವಾದ ಘಟರೂಪವಾದ ರೂಪಾಂತರ ಪ್ರಾಪ್ತಿ ಇರುತ್ತದೆ. ಹಾಗೇ ಮಾಯಾವಿಶಿಷ್ಟವಾದ ಬ್ರಹ್ಮವು ಮಿಥ್ಯಾವಾದ್ದರಿಂದ, ಅದರಲ್ಲಿ ಧರ್ಮಿಸಮಸತ್ತಾಕವಾದ ಮಿಥ್ಯಾವಾದ ಪ್ರಪಂಚರೂಪ ರೂಪಾಂತರ ಪ್ರಾಪ್ತಿ ಇದೆ. ಮಿಥ್ಯಾವಿಶಿಷ್ಟವು ಮಿಥ್ಯಾಪ್ರಪಂಚವಾಗಿ ಪರಿಣಮಿಸುತ್ತದೆ. ಇದು ವಿವರ್ತಮತವಾಗುವುದಿಲ್ಲ. ವಿಮರ್ತಮತದಲ್ಲಿ ಸತ್ಯವಾದ ಶುದ್ಧ ಬ್ರಹ್ಮವು ಮಿಥ್ಯಾಪ್ರಪಂಚವಾಗಿ ಪರಿಣಮಿಸುವುದಿಲ್ಲ. ಮಿಥ್ಯಾಪ್ರಪಂಚವಾಗಿ ಕಾಣಿಸಿಕೊಳ್ಳುತ್ತದೆ ಎನ್ನಬೇಕು. ಮತ್ತು ಅತದಾಕಾರಪರಿಣಾಮವೇ ವಿವರ್ತ. ಮಿಥ್ಯಾವಿಶಿಷ್ಟದ ಮಿಥ್ಯಾಪರಿಣಾಮವು ವಿವರ್ತವೆನಿಸಲಾರದು. ಆದರಿಂದ ಮಿಥ್ಯಾವಿಶಿಷ್ಟಬ್ರಹ್ಮವನ್ನು ಮಿಥ್ಯಾಜಗದುಪಾದಾನವೆಂದು ಹೇಳುವುದು ವಿವರ್ತಮತಕ್ಕೆ ವಿರುದ್ಧವಾಗುವುದು.

**ವಿಶಿಷ್ಟಸ್ಯ ಪರಿಣಾಮಃ ಶುದ್ಧಸ್ಯ ತು ವಿವರ್ತಃ ಇತಿ ಚೇತ್ ತರ್ಹಿ ಶುದ್ಧೇಽಪಿ ವಿವರ್ತಾರ್ಥಂ ಆರೋಪಿತ ವಿಕಾರಸ್ಯಾವಶ್ಯಕತ್ವಾತ್ ನಿರ್ವಿಕಾರಶ್ರುತೇಃ ತತ್‌ಪರತ್ವಂ ನ ಸ್ಯಾತ್ ।**

'ವಿವರ್ತಮತದಲ್ಲಿ ಮಿಥ್ಯಾಪ್ರಪಂಚವನ್ನು ವಿಶಿಷ್ಟಬ್ರಹ್ಮನ ಪರಿಣಾಮವೆಂದೂ ಶುದ್ಧಬ್ರಹ್ಮನ ವಿವರ್ತ, ಆರೋಪಿತ ಆಕಾರ ಎಂದೂ ಅಂಗೀಕರಿಸುತ್ತೇವೆ. ವಿಶಿಷ್ಟವು ಪರಿಣಾಮಿ ಉಪಾದಾನ, ಶುದ್ಧವು ವಿವರ್ತೋಪಾದಾನ. ಇವುಗಳಿಗೆ ವಿರೋಧವಿಲ್ಲ. ಆದರಿಂದ ವಿಶಿಷ್ಟವನ್ನು ಉಪಾದಾನವೆನ್ನುವುದು ವಿವರ್ತಮತಕ್ಕೆ ವಿರುದ್ಧವಾಗುವುದಿಲ್ಲ' ಎಂದು ಅದ್ವೈತಿ ಹೇಳುತ್ತಾನೆ.

ಆದರೆ ಶುದ್ಧವು ವಿವರ್ತೋಪಾದಾನವೆನಿಸಲು ಅದು ಆರೋಪಿತವಿಕಾರರೂಪದಿಂದ ಕಾಣಿಸಿಕೊಳ್ಳಬೇಕು, ಹಗ್ಗವು ಹಾವಾಗಿ ಕಾಣಿಸಿಕೊಳ್ಳುವಂತೆ. ಹೀಗೆ ಶುದ್ಧದಲ್ಲಿಯೂ ಕೂಡ 'ಆರೋಪಿತ ವಿಕಾರ'ವನ್ನು ಒಪ್ಪಿದ್ದರಿಂದ 'ನಿರ್ವಿಕಾರ' ಶ್ರುತಿಯ ವಿರೋಧ ಪರಿಹಾರವಾಗುವುದಿಲ್ಲ. ಆ ಶ್ರುತಿಯು 'ಶುದ್ಧದಲ್ಲಿ ವಿಕಾರವಿಲ್ಲ' ಎಂದು ಹೇಳಲಾರದು, ಶುದ್ಧಪರವಾಗಲಾರದು.

**ಶ್ರುತಿಃ ವಿಶೇಷ್ಯಸ್ಯೈವ ತಾತ್ವಿಕವಿಕಾರಾಭಾವಪರಾ ಚೇತ್ ವಿಶಿಷ್ಟೇ ವಿಕಾರೋಕ್ತಿಃ ಅಯುಕ್ತಾ ಸ್ಯಾತ್ ।**

'ವಿಶಿಷ್ಟವು ಪರಿಣಾಮಿ, ಆದರೆ, ತದಂತರ್ಗತ ವಿಶೇಷ್ಯವು ತಾತ್ವಿಕ ಪರಿಣಾಮರಹಿತವೆ ಎಂದು 'ನಿರ್ವಿಕಾರಶ್ರುತಿಯು ಹೇಳುತ್ತಿದೆ. ಅದರಿಂದ ಶ್ರುತಿವಿರೋಧವಿಲ್ಲ' ಎಂದು ಅದ್ವೈತಿ ಹೇಳುತ್ತಾನೆ. ಇದೂ ಸರಿಯಲ್ಲ. ವಿಶಿಷ್ಟವೂ ಕೂಡ ತಾತ್ವಿಕ ಪರಿಣಾಮರಹಿತವಾಗಿದ್ದು, ಈ ವಿಷಯದಲ್ಲಿ ವಿಶೇಷ್ಯಕ್ಕೆ ತುಲ್ಯವೇ ಆಗಿರುವಾಗ, ವಿಶಿಷ್ಟವನ್ನು ಮಾತ್ರ 'ವಿಕಾರಿ' ಎಂದು ಶ್ರುತಿ ಹೇಳುವುದು ಯುಕ್ತವಾಗಲಾರದು. ವಿಶೇಷ್ಯವು ತಾತ್ವಿಕವಿಕಾರರಹಿತವಾದರೂ ಆರೋಪಿತವಿಕಾರ ಅದರಲ್ಲಿ ಇರುವುದಕ್ಕೆ ಅಡ್ಡಿ ಇಲ್ಲದ್ದರಿಂದ, ವಿಶೇಷ್ಯವನ್ನು 'ನಿರ್ವಿಕಾರ' ಎಂದೂ ಶ್ರುತಿಯು ಹೇಳಬಾರದು. ಹೇಳುತ್ತಿದೆ, ಅದರಿಂದ ಅದರ ವಿರೋಧ ಪರಿಹಾರವಾಗುತ್ತಿಲ್ಲ.

**ತೃತೀಯೋऽಪ್ಯಯುಕ್ತಃ । ಅಂಶೋಃ ತಂತುಂ ಪ್ರತೀವ ಬ್ರಹ್ಮಣಃ ಅನಾದಿಮಾಯಾಂ ಪ್ರತಿ ಉಪಾದಾನತ್ವಾಭಾವಾತ್ ।**

ಮೂರನೆ ಮತವೂ ಸರಿ ಇಲ್ಲ. ನಾರು ಎಳೆಯಾಗುತ್ತದೆ, ಎಳೆ ಹಗ್ಗವಾಗುತ್ತದೆ. ಹೀಗೆ ನಾರು ಎಳೆಗಳ ಮೂಲಕ ಹಗ್ಗಕ್ಕೆ ಉಪಾದಾನವಾಗುವಂತೆ ಬ್ರಹ್ಮನು ಮಾಯೆಗೆ ಉಪಾದಾನ. ಮಾಯೆ ಪ್ರಪಂಚಕ್ಕೆ ಉಪಾದಾನ. ಬ್ರಹ್ಮ ಮಾಯೆಯ ಮೂಲಕವೇ ಪ್ರಪಂಚೋಪಾದಾನ ಹೊರತು ನೇರವಾಗಿ ಅಲ್ಲ ಎಂಬ ಅಭಿಪ್ರಾಯದಿಂದ ನಿರ್ವಿಕಾರ ಶ್ರುತಿ ಹೊರಟಿದೆ ಎನ್ನುವುದು ಮೂರನೆಮತ. ಆದರೆ, ಮಾಯೆ ಅಂದರೆ ಅವಿದ್ಯೆ ಅನಾದಿ. 'ಷಡಸ್ಮಾಕಮನಾದಯಃ' ಎಂದು ಅದ್ವೈತಮತದಲ್ಲಿ ಹೇಳುತ್ತಾರೆ. ಅನಾದಿಯಾದ ಮಾಯೆಗೆ ಉಪಾದಾನವಿದೆ ಎನ್ನುವುದೇ ವ್ಯಾಹತ. ಬ್ರಹ್ಮನನ್ನು ಮಾಯೆಗೆ ಉಪಾದಾನವೆಂದು ಹೇಳಿ, ಮಾಯೆಯ ಮೂಲಕ ಬ್ರಹ್ಮವು ಜಗತ್ತಿಗೆ ಉಪಾದಾನವಾಗುವುದೆಂದು ಹೇಳುವುದೂ ಅಸಂಗತ.

**ಭ್ರಮಾಧಿಷ್ಠಾನತ್ವಂ ಉಪಾದಾನತ್ವಂ ಇತಿ ಚೇತ್ ನ । ಉಪಾದಾನೇ ಮೃದಾದೌ ಭ್ರಮಾಧಿಷ್ಠಾನತ್ವಸ್ಯ ಭ್ರಮಾಧಿಷ್ಠಾನೇ ಚ ಶುಕ್ತ್ಯಾದೌ ಉಪಾದಾನತ್ವಸ್ಯ ಚ ಅವ್ಯವಹಾರಾತ್ । ಪಾರಿಭಾಷಿಕ–ಉಪಾದಾನತ್ವಸ್ಯ ಚ ಅನುಪಾದಾನತ್ವೇ ಪರ್ಯವಸಾನಾತ್ ॥**

'ಇಲ್ಲಿ ಬ್ರಹ್ಮ ಮಾಯೆಗೆ ಉಪಾದಾನವೆಂದರೆ ಮಾಯಾರೋಪಕ್ಕೆ ಅಧಿಷ್ಠಾನವೆಂದು

ವಿವಕ್ಷಿತವಾಗಿದೆ. ಹೀಗಾಗಿ ಬ್ರಹ್ಮವು ಮಾಯೆಯ ಮೂಲಕ ಜಗತ್ತಿಗೆ ಉಪಾದಾನವೆನ್ನುವುದು ಅಸಂಗತವಾಗುವುದಿಲ್ಲ' ಎಂದು ಅದ್ವೈತಿ ಹೇಳುತ್ತಾನೆ. ಆದರೆ ಅನಾದಿಯಾದ ಮಾಯೆ ಭ್ರಮದಲ್ಲಿ ಆರೋಪಿತವಾದುದೆಂದರೆ ವ್ಯಾಹತಿಯೆ.

ವಸ್ತುತಃ ಮಾಯೆ ಆರೋಪಿತವೆಂದು ಒಪ್ಪಿದರೂ ಆ ಆರೋಪಾಧಿಷ್ಠಾನ ಬ್ರಹ್ಮ ಮಾಯೆಗೆ ಉಪಾದಾನವೆನಿಸಲು ಶಕ್ಯವಿಲ್ಲ. ಉಪಾದಾನವೆಂದರೂ ಅಧಿಷ್ಠಾನವೆಂದರೂ ಒಂದೇ ಅಲ್ಲ. ಉಪಾದಾನವಾದ ಮಣ್ಣು ಮಡಿಕೆಗೆ ಅಧಿಷ್ಠಾನವಲ್ಲ. ಅಧಿಷ್ಠಾನವಾದ ಶುಕ್ತಿಯು ರಜತಕ್ಕೆ ಉಪಾದಾನವೂ ಅಲ್ಲ. ಹಾಗೆ ಲೋಕದಲ್ಲಿ ವ್ಯವಹಾರವಿಲ್ಲ.

''ವ್ಯವಹಾರವಿಲ್ಲದಿದ್ದರೂ ಅದ್ವೈತ ವೇದಾಂತದ ಒಂದು ಪರಿಭಾಷೆ ಇದು. ಅಧಿಷ್ಠಾನತ್ವರೂಪವಾದ ಈ ಉಪಾದಾನತ್ವ ಬ್ರಹ್ಮನಲ್ಲಿ ಮಾತ್ರವಿದೆ. ಎಂದರೆ, 'ಬ್ರಹ್ಮವು ಅಧಿಷ್ಠಾನ ರೂಪವಾದ ಉಪಾದಾನವೆಂಬ ಮಾತಿನಿಂದಲೇ ಭಂಗ್ಯಂತರದಿಂದ 'ಬ್ರಹ್ಮವು ಮಾಯೆಗೆ ಉಪಾದಾನವಲ್ಲ' ಎಂದೇ ಹೇಳಿದಂತಾಯಿತು. ಹೀಗಾಗಿ ಬ್ರಹ್ಮವು ಮಾಯೆಯ ಮೂಲಕ ಜಗತ್ತಿಗೆ ಉಪಾದಾನವಲ್ಲ, ನೇರವಾಗಿಯೇ ಉಪಾದಾನ. ನಿರ್ವಿಕಾರ ಶ್ರುತಿಯು ಬ್ರಹ್ಮವು ಉಪಾದಾನವಲ್ಲ ಎನ್ನುತ್ತಿದೆ. ಈಗ ಮೂರನೆ ಮತದ ಪ್ರಕಾರ 'ಬ್ರಹ್ಮವು ಮಾಯೆಯ ಮೂಲಕ ಜಗತ್ತಿಗೆ ಉಪಾದಾನವಲ್ಲ, ನೇರವಾಗಿ ಉಪಾದಾನವಾದ್ದರಿಂದ ಶ್ರುತಿವಿರೋಧ ಅಪರಿಹಾರ್ಯವಾಯಿತು.

**ಏತೇನ ಅಸತ್ಯರೂಪಾಂತರಾಪತ್ತಿಃ ವಿವರ್ತಃ। ಸತ್ಯರೂಪಾಂತರಾಪತ್ತಿಸ್ತು ಪರಿಣಾಮಃ ರೂಪಾಂತರಾಪತ್ತಿಮಾತ್ರಂ ಉಪಾದಾನತ್ವಂ। ತಚ್ಚ ಬ್ರಹ್ಮಣೋ ವಿವರ್ತರೂಪ ವಿಶೇಷೇಣಾಪಿ ಉಪಪನ್ನಂ। ನಿರ್ವಿಕಾರ ಶ್ರುತಿಸ್ತು ತಾತ್ತ್ವಿಕವಿಕಾರಾ ಭಾವಾಭಿಪ್ರಾಯಾ। ಬ್ರಹ್ಮ ಚ ಅಜ್ಞಾತಂ ಬ್ರಹ್ಮರೂಪೇಣ ವಿವರ್ತತೇ ಇತಿ ಅಜ್ಞಾನಮಪಿ ಪರಿಣಾಮಿತಯಾ ಉಪಾದಾನಾಂತರ್ಗತಂ। ರೂಪ್ಯಮಪಿ ಶುಕ್ತಿವಿವರ್ತತ್ವಾತ್ ಅಜ್ಞಾನಪರಿಣಾಮತ್ವಾಚ್ಚ ಉಭಯೋಪಾದಾನಕಂ ಇತಿ ನಿರಸ್ತಂ।**

ಶುಕ್ತಿಗೆ ರಜತದಂತೆ ಅಸತ್ಯವಾದ ರೂಪಾಂತರ ಪ್ರಾಪ್ತಿಯು ವಿವರ್ತ. ಮಣ್ಣಿಗೆ ಮಡಿಕೆಯಂತೆ ಸತ್ಯ ರೂಪಾಂತರ ಬರುವುದು ಪರಿಣಾಮ. ಸತ್ಯ-ಅಸತ್ಯ ಎಂಬ ವಿಶೇಷಗಳನ್ನು ಬಿಟ್ಟು ಕೇವಲ ರೂಪಾಂತರ ಬರುವುದನ್ನು ವಿವಕ್ಷೆ ಮಾಡಿದರೆ ಉಪಾದಾನವೆನ್ನುತ್ತೇವೆ. ಹೀಗಾಗಿ ಬ್ರಹ್ಮನನ್ನು ಸಾಮಾನ್ಯವಾಗಿ 'ಉಪಾದಾನ' ಎಂದರೆ ಅದು ವಿವರ್ತರೂಪ ವಿಶೇಷದಲ್ಲಿ ಪರ್ಯವಸಾನ ಹೊಂದುವುದರಿಂದ ಅದು ಯುಕ್ತವೆ. ನಿರ್ವಿಕಾರಶ್ರುತಿಯು ಸತ್ಯರೂಪಾಂತರಾಪತ್ತಿರೂಪ ಪರಿಣಾಮವೆಂಬ ವಿಶೇಷ ಉಪಾದಾನತ್ವವು ಬ್ರಹ್ಮನಲ್ಲಿಲ್ಲ ಎಂಬ ಅಭಿಪ್ರಾಯದಿಂದ ಹೊರಟಿದೆ. ಬ್ರಹ್ಮವು ಅಜ್ಞಾನಾವೃತವಾಗಿರುವಾಗ ಪ್ರಪಂಚರೂಪವಾಗಿ ಅಸತ್ಯರೂಪಾಂತರವನ್ನು ಹೊಂದುತ್ತದೆ. ಇಲ್ಲಿ ಅಜ್ಞಾನವೂ ಪರಿಣಾಮಿಯಾಗಿ ಉಪಾದಾನದಲ್ಲಿ ಅಂತರ್ಗತವಾಗುತ್ತದೆ. ಶುಕ್ತಿರಜತ

ಸ್ಥಳದಲ್ಲಿಯೂ ರಜತವು ಶುಕ್ತಿಯ ವಿವರ್ತವಾಗಿರುತ್ತದೆ ಮತ್ತು ಅಜ್ಞಾನದ ಪರಿಣಾಮವಾಗಿರುತ್ತದೆ. ಹೀಗೆ ಎರಡು ಉಪಾದಾನಗಳಿವೆ'—ಹೀಗೆ ಅದ್ವೈತಿಯು ಹೇಳುವುದು ಸರಿಯಲ್ಲ.

**ತ್ವಯಾಪಿ ಮಿಥ್ಯಾಭೂತಸ್ಯ ಮಿಥ್ಯಾಭೂತಮೇವ ಉಪಾದಾನಂ ಅನ್ವೇಷಣೀಯಂ। 'ಸತ್ಯತ್ವೇ ಕಾರ್ಯಸ್ಯಾಪಿ ಕಾರಣಸ್ವಭಾವತಯಾ ಸತ್ಯತ್ವಪ್ರಸಂಗಃ' ಇತಿ ವದತಾ ಸತ್ಯಸ್ಯ ಅಸತ್ಯರೂಪಾಪತ್ತೇಃ ನಿಷೇಧಾತ್ ।**

'ಏತೇನ ನಿರಸ್ತಂ' ಹಿಂದೆ ಹೇಳಿದ ದೋಷದಿಂದಲೇ ಇದೂ ನಿರಸ್ತವಾಯಿತು. ಉಪಾದಾನವೆಂದರೂ ಅಧಿಷ್ಠಾನವೆಂದರೂ ಒಂದೇ ಅಲ್ಲ. ಉಪಾದಾನವು ಅಧಿಷ್ಠಾನವೆನಿಸದು, ಅಧಿಷ್ಠಾನವು ಉಪಾದಾನವೆನಿಸದು. ಹಾಗೆ ಲೋಕವ್ಯವಹಾರವಿಲ್ಲ' ಎಂದು ಹಿಂದೆ ಹೇಳಿದ ದೋಷದಿಂದಲೇ 'ಉಪಾದಾನತ್ವವು ವಿವರ್ತ-ಪರಿಣಾಮಗಳಲ್ಲಿ ಸಾಧಾರಣವಾಗಿರುತ್ತದೆ' ಎನ್ನುವ ಈ ಪರಿಭಾಷೆಯೂ ನಿರಸ್ತವಾಯಿತು.

ಇನ್ನೂ ಬೇರೆ ದೋಷಗಳನ್ನು ಹೇಳಬೇಕೆಂದರೆ, ಮಿಥ್ಯಾಭೂತ ಪ್ರಪಂಚಕ್ಕೆ ಸತ್ಯಬ್ರಹ್ಮನನ್ನು ಉಪಾದಾನವೆಂದು ಏಕೆ ಕಲ್ಪಿಸಬೇಕು? ಎಂದು ಕೇಳುತ್ತೇವೆ. ಏಕೆಂದರೆ, ಅದ್ವೈತಿಯು ಮಿಥ್ಯಾಭೂತಪ್ರಪಂಚಕ್ಕೆ ಮಿಥ್ಯಾಭೂತವಾದ ಅಜ್ಞಾನರೂಪ ಉಪಾದಾನವನ್ನೇ ಕಲ್ಪಿಸಬೇಕು. ಉಪಾದಾನ ಸತ್ಯವಾದರೆ ಅದರ ಪರಿಣಾಮರೂಪವಾದ ಕಾರ್ಯಪ್ರಪಂಚವೂ ಕಾರಣಸ್ವಭಾವಾನುಗುಣವಾಗಿ ಸತ್ಯವೇ ಆಗುವ ಪ್ರಸಂಗವಿದೆ! ಎನ್ನುತ್ತಾನೆ. ಸತ್ಯರೂಪವಾದ ಬ್ರಹ್ಮನಿಗೆ ಅಸತ್ಯಪ್ರಪಂಚರೂಪ ಬರುವುದನ್ನು ಅವನೇ ನಿಷೇಧಿಸುತ್ತಾನೆ!

**ಸತ್ಯ-ಆರೋಪಿತ ಧೂಮಾನುಗತ ಧೂಮತ್ವ ಸಾಮಾನ್ಯಸ್ಯೇವ ಸತ್ಯ-ಅಸತ್ಯ ರೂಪಾಂತರಾಪತ್ತ್ಯನುಗತ-ಉಪಾದಾನತ್ವ ಸಾಮಾನ್ಯಸ್ಯಾಪಿ ಅಭಾವಾಚ್ಚ ।**

ಸತ್ಯಧೂಮ ಮತ್ತು ಅಸತ್ಯ ಬಾಷ್ಪಾರೋಪಿತ ಧೂಮಗಳಲ್ಲಿ ಅನುಗತವಾಗಿ ಧೂಮತ್ವ ಸಾಮಾನ್ಯ ಒಂದಿದೆ ಎಂದು ಲೋಕದಲ್ಲಿ ಯಾರೂ ಒಪ್ಪುವುದಿಲ್ಲ. ಒಪ್ಪಿದರೆ ಸತ್ಯಧೂಮದಿಂದ ವಹ್ನಿ ಸಿದ್ಧಿಸುವಂತೆ ಆರೋಪಿತಧೂಮದಿಂದಲೂ ವಹ್ನಿ ಸಿದ್ಧಿಸಬೇಕಾದೀತು. ಹಾಗೇ ಸತ್ಯ ಅಸತ್ಯ ರೂಪಾಂತರವತ್ವಗಳಲ್ಲಿ ಅನುಗತವಾದ ಉಪಾದಾನತ್ವ ಸಾಮಾನ್ಯವನ್ನು ಒಪ್ಪುವುದು ಕೂಡ ಸರಿಯಲ್ಲ.

ಯದ್ಯಪಿ ಸತ್ಯ-ಅಸತ್ಯಗಳಲ್ಲಿ ಸಾಧಾರಣವಾಗಿ ಜ್ಞೇಯತ್ವ ಅಂಗೀಕೃತವಾಗಿದೆ. ಆದರೆ ಹಾಗೆ ಅಂಗೀಕರಿಸುವಲ್ಲಿ ಬಾಧಕವೇನಿಲ್ಲ. ಧೂಮತ್ವಸಾಮಾನ್ಯವನ್ನು ಅಂಗೀಕರಿಸಿದರೆ ಬಾಧಕವಿದೆ. ಆದರಿಂದ ಉಪಾದಾನತ್ವಸಾಮಾನ್ಯವೆಂಬುದು ಅಪ್ರಾಮಾಣಿಕ.

**ಶುಕ್ತಿ ಬ್ರಹ್ಮಣೋರೇವ ರೂಪ್ಯ-ಆಕಾಶಾದ್ಯುಪಾದಾನತ್ವಸಂಭವೇ ಅವಿದ್ಯಾನ್ವಯ ವ್ಯತಿರೇಕಯೋಃ ನಿಮಿತ್ತತ್ವೇನಾಪಿ ಉಪಪತ್ತೇಃ ಅವಿದ್ಯೋಪಾದಾನಕತ್ವ ಕಲ್ಪನಾಽಯೋಗಾಚ್ಚ ।**

ಶುಕ್ತಿರಜತಕ್ಕೆ ಶುಕ್ತಿಯು ಉಪಾದಾನವಾಗಿದೆ. ಅದೊಂದೇ ಸಾಕು, ಅವಿದ್ಯೆ ಬೇರೆ ಉಪಾದಾನವಾಗಿರಬೇಕಿಲ್ಲ. ಆಕಾಶಾದಿ ಪ್ರಪಂಚಕ್ಕೂ ಬ್ರಹ್ಮ ಒಂದೇ ಉಪಾದಾನವಾಗಲಿ, ಅವಿದ್ಯೆ ಬೇರೆ ಉಪಾದಾನವಾಗಿ ಬೇಕಾಗಿಲ್ಲ. ಉಪಾದಾನವಿಲ್ಲದೆ ಕಾರ್ಯ ಹೇಗೆ ಉತ್ಪನ್ನವಾಯಿತೆಂಬ ಪ್ರಶ್ನೆ ಬರುವುದಿಲ್ಲ. ಶುಕ್ತಿಯೂ ಬ್ರಹ್ಮವೂ ಉಪಾದಾನವಾಗಿ ಇವೆ ಎನ್ನಲು ಬರುತ್ತದೆ. ಅವಿದ್ಯೆಯನ್ನೂ ಜೊತೆಗೆ ಉಪಾದಾನವೆಂದು ಕಲ್ಪಿಸುವ ಆವಶ್ಯಕತೆ ಏನಿದೆ? 'ಅವಿದ್ಯೆ ಇದ್ದರೇ ರಜತವಾಗಲಿ ಆಕಾಶವಾಗಲಿ ಕಾಣುತ್ತದೆ. ಅವಿದ್ಯೆ ಇಲ್ಲದಿದ್ದರೆ ಅವು ಕಾಣುವುದಿಲ್ಲ' ಎಂದು ಅನ್ವಯ ವ್ಯತಿರೇಕವೇನೋ ಇದೆ, ಆದರೆ ಅಷ್ಟರಿಂದಲೇ ಅವಿದ್ಯೆ ಉಪಾದಾನ ಕಾರಣವೆನ್ನಬೇಕಾಗಿಲ್ಲ. ಅದು ನಿಮಿತ್ತವಾದರೂ ಅನ್ವಯವ್ಯತಿರೇಕ ಕೂಡುತ್ತದೆ.

**ನ ಚ ಪರಿಣಾಮಿತ್ವೇನ ಅವಿದ್ಯಾಕಲ್ಪನಂ। ಅಸತ್ಯಸ್ಯ ರೂಪ್ಯಾದೇಃ ಸತ್ಯರೂಪಾಪತ್ತಿಮತ್ ಪರಿಣಾಮಿ-ಅಪೇಕ್ಷಾಭಾವಾತ್ ।**

ಆಕಾಶಾದಿಗಳು ಬ್ರಹ್ಮನ ವಿವರ್ತ ಮತ್ತು ಅವಿದ್ಯೆಯ ಪರಿಣಾಮಗಳಾಗಿವೆ. ಅವು ವಿವರ್ತವಾಗಲು ಬ್ರಹ್ಮ ಹೇಗೆ ಬೇಕೋ ಹಾಗೇ ಪರಿಣಾಮವಾಗಲು ಪರಿಣಾಮಿಯಾದ ಅವಿದ್ಯೆಬೇಕು. ಅದಕ್ಕಾಗಿ ಅವಿದ್ಯೆಯ ಕಲ್ಪನೆ ಯುಕ್ತವೆ ಎಂದು ಅದ್ವೈತಿ ಹೇಳುತ್ತಾನೆ. ಆದರೆ ಆಕಾಶವು ಬ್ರಹ್ಮವಿವರ್ತ, ಶುಕ್ತಿರಜತವು ಶುಕ್ತಿವಿವರ್ತವೆಂದು ಅದ್ವೈತಿ ಒಪ್ಪಿದ್ದಾನೆ. ವಿವರ್ತವು ಸತ್ಯರೂಪಾಂತರಾಪತ್ತಿರೂಪ ಪರಿಣಾಮವೇ ಅಲ್ಲವೆಂದಮೇಲೆ ಅದಕ್ಕೆ ಸತ್ಯ ಪರಿಣಾಮಿ ಉಪಾದಾನದ ಅಪೇಕ್ಷೆ ಇರುವುದಿಲ್ಲ. ಹೀಗಾಗಿ ಆಕಾಶಾದಿಗಳಿಗೆ ಅವು ಅಸತ್ಯ ಪ್ರಪಂಚವಾಗಿ ಪರಿಣಮಿಸಲು ಪರಿಣಾಮಿ ಕಾರಣದ ಅಪೇಕ್ಷೆ ಇದೆ ಎನ್ನಲಾಗದು. ಆದರಿಂದ ಪರಿಣಾಮವಾಗುವುದಕ್ಕಾಗಿ ಅವಿದ್ಯಾಕಲ್ಪನೆ ಮಾಡುವುದು ಅಯುಕ್ತವೆ.

**ವಿಕಾರಿತ್ವೇನಾವಿದ್ಯಾಕಲ್ಪನಂ ತು ತತ್ವತೋ ನಿರ್ವಿಕಾರೇ ಬ್ರಹ್ಮಣಿ ಅತಾತ್ವಿಕ ವಿಕಾರಾಂಗೀಕಾರಾತ್ ಪರೇಣೈವ ನಿರಸ್ತಂ ।**

ವಿಕಾರರೂಪವಾದ ಪ್ರಪಂಚದ ಉತ್ಪತ್ತಿಗೆ ವಿಕಾರವುಳ್ಳ ಅವಿದ್ಯೆಯ ಅಪೇಕ್ಷೆ ಇದೆ ಎನ್ನುವುದನ್ನು ಅದ್ವೈತಿ ತಾನೇ ನಿರಾಸಮಾಡಿದ್ದಾನೆ, ತತ್ವತೋ ನಿರ್ವಿಕಾರವಾದ ಬ್ರಹ್ಮನಲ್ಲಿಯೇ ಅತಾತ್ವಿಕ ವಿಕಾರವನ್ನು ಅಂಗೀಕರಿಸಿರುವುದರಿಂದ ವಿಕಾರಿಯಾದ ಬ್ರಹ್ಮನಿಂದಲೇ ವಿಕಾರರೂಪವಾದ ಪ್ರಪಂಚದ ಉತ್ಪತ್ತಿ ಕೂಡುವಾಗ ಬೇರೆ ವಿಕಾರಿಯಾದ ಅವಿದ್ಯೆಯ ಅಪೇಕ್ಷೆ ಇರುವುದಿಲ್ಲ ಎಂದಿದ್ದಾನೆ.

**ನ ಚ ಕಾರ್ಯಾಪೇಕ್ಷಿತ ಸ್ವಸಮಾನ ಸತ್ತಾಕ-ಉಪಾದಾನತ್ವೇನ ಅವಿದ್ಯಾ ಕಲ್ಪನಂ। ಅವಿದ್ಯಾರ್ಥಾಪತ್ತಿಭಂಗೇ ನಿರಸ್ತತ್ವಾತ್ ।**

'ಪ್ರಪಂಚವು ಕಾರ್ಯವೆಂದಮೇಲೆ ಕಾರ್ಯಕ್ಕೆ ಸ್ವಸಮಾನ ಸತ್ತಾಕವಾದ ಉಪಾದಾನದ

ಅಪೇಕ್ಷೆ ಇದೆ. ಪ್ರಪಂಚ ಮಿಥ್ಯಾ ಆದ್ದರಿಂದ ಮಿಥ್ಯಾಭೂತವಾದ ಅವಿದ್ಯೆಯೇ ಅದಕ್ಕೆ ಸ್ವಸಮಾನ ಸತ್ತಾಕವಾದ ಉಪಾದಾನವಾಗುವುದು' ಎಂದು ಅದ್ವೈತಿ ಹೇಳುವುದು ಸರಿಯಲ್ಲ. ಇದರಲ್ಲಿ ಅನುಪಪತ್ತಿಯನ್ನು ಹಿಂದೆಯೇ ಅವಿದ್ಯಾರ್ಥಾಪತ್ತಿ ಭಂಗಪ್ರಕರಣದಲ್ಲಿ ಹೇಳಿದ್ದೇವೆ—'ಪ್ರಪಂಚ ರೂಪ ಕಾರ್ಯಕ್ಕೆ ವಿವರ್ತಾಧಿಷ್ಠಾನವಾದ ಬ್ರಹ್ಮರೂಪ ಉಪಾದಾನವಿರುವುದರಿಂದಲೇ ಉಪಾದಾನಾಕಾಂಕ್ಷಾ ನಿವೃತ್ತಿಯಾಗಿದೆ. ಆದರೂ ಘಟಾದಿದೃಷ್ಟಾಂತದಿಂದ, ಘಟಕ್ಕೆ ಸ್ವಸಮಾನಸತ್ತಾಕ ಮೃತ್ತು ಉಪಾದಾನವಾಗಿ ಕಂಡಿದ್ದರಿಂದ, ಪ್ರಪಂಚಕ್ಕೂ ಸ್ವಸಮಾನಸತ್ತಾಕ ಪರಿಣಾಮ್ಯುಪಾದಾನದ ಆಕಾಂಕ್ಷೆಯೇ ಇದೆ ಎಂದರೆ, ಅಸಮಾನಸತ್ತಾಕ ಉಪಾದಾನ ಬೇರೆ ಏಕೆ? ಅಸಮಾನಸತ್ತಾಕವಾದ ಬ್ರಹ್ಮನಿಗೆ ಪ್ರಪಂಚೋಪಾದಾನತ್ವ ಬೇಡವೆಂದಾದೀತು' ಎಂದು ಮುಂತಾಗಿ ಹೇಳಿದ್ದೇವೆ.



किंच रूप्येऽपि रूप्यमिदमिति प्रतीतेः अविद्याविकारभूतं रूप्यं इदंरूप्यतादात्म्यं वाऽस्तु । इदमो रूप्यरूपापत्तिरूपो विकारस्तु कथम् । नहीदं रूप्यरूपमापन्नमिति धीरस्ति । नचारोपितमप्यारोपं विना युक्तम् ।

एतेन रूपांतरापत्तिप्रतीतिविषयत्वमुपादानत्वम्, प्रतीतेः प्रमात्वाप्रमात्वाभ्यां परिणामविवर्ताविति निरस्तम् । शुक्तिर्वा ब्रह्म वा रूप्यत्वं वा आकाशत्वं बा आपन्नमित्यप्रतीतेः । सच्च त्यच्चाभवदित्यादिश्रुतेश्चात्माश्रयप्रसंगेन स्वजन्यरूपांतरापत्तिधीविषयत्वप्रत्यायकत्वायोगात् ।

एतेन रूपांतराभेदधीविषयत्वं वा कार्याभेदधीविषयत्वं वोपादानत्वम् । प्रतीतेः प्रमात्वाप्रमात्वाभ्यां परिणामविवर्ताविति निरस्तम् । आद्ये तत्त्वंपदार्थयोः क्षीरनीरयोः खंडगोत्वयोश्चोपादानोपादेयत्वापातात् । द्वितीये सदृशे संनिहिते निमित्तेऽपि कार्याभेदभ्रमसंभवेनातिव्याप्तेः । तस्मादकारणस्यातीतादेरत्यंतासतश्च भ्रमाधिष्ठानत्वदर्शनात् भ्रमाधिष्ठाने च शुक्त्यादौ कारणत्वोपादानत्वयोरव्यवहारात् न परपक्षे भ्रमाधिष्ठानस्य ब्रह्मण उपादानत्वकारणत्वे ।

**ननु मायोपादानमीश्वरो निमित्तम् । शुद्धं ब्रह्माधिष्ठानमिति चेन्न । अभिन्ननिमित्तोपादानत्वाभावेन त्वन्मते तदर्थस्य प्रकृत्यधिकरणादेरनुपपत्तेः ।**

ननु ब्रह्मणि प्रत्यक्षतस्तत्प्रतीत्यभावेऽपि श्रुतितः संभवतीत्याशंक्याह— **सच्चेति** ।। उदाहृतश्रुतेर्न रूपांतरापत्तिप्रतीतिविषयत्वरूपोपादानत्वप्रत्यायकत्वम्, तज्जन्यप्रतीतेः स्वविषयत्वप्रसंगादित्यर्थः। वस्तुतस्तु नेयं श्रुतिर्ब्रह्मणो वियदादिरूपांतरापत्तिप्रतीतिपरा किंतु ब्रह्मण एव तत्तदंतर्यामिरूपप्रतिपत्तिपरा । सत्त्वादिगुणाविर्भावप्रतिपत्तिपरा वेति न ततो रूपांतरापन्नत्वप्रतीतिरपीति ध्येयम् ।। **तदर्थस्येति** ।। अभिन्ननिमित्तोपादानत्वसाधनार्थे प्रवृत्तस्येत्यर्थः ।



**ಕಿಂಚ ರೂಪ್ಯೇऽಪಿ ರೂಪ್ಯಮಿದಮಿತಿ ಪ್ರತೀತೇಃ ಅವಿದ್ಯಾವಿಕಾರಭೂತಂ ರೂಪ್ಯಂ, ಇದಂ ರೂಪ್ಯತಾದಾತ್ಮ್ಯಂ ವಾऽಸ್ತು । ಇದಮೋ ರೂಪ್ಯರೂಪಾಪತ್ತಿ ರೂಪೋ ವಿಕಾರಸ್ತು ಕಥಂ? ನಹಿ 'ಇದಂ ರೂಪ್ಯರೂಪಮಾಪನ್ನಂ' ಇತಿ ಧೀರಸ್ತಿ । ನ ಚಾರೋಪಿತಮಪಿ ಆರೋಪಂ ವಿನಾ ಯುಕ್ತಂ ।**

'ಇದಂ ರಜತಂ' ಎಂಬ ಭ್ರಮದಲ್ಲಿ 'ರಜತಂ' ಎಂದು ರಜತವು ಪ್ರತೀತಿ ಸಿದ್ಧವಾಗಿದೆ. ಅಥವಾ 'ಇದಂ ರಜತಂ' ಎಂದು ಇದಂ ಪದಾರ್ಥದಲ್ಲಿ ರಜತ ತಾದಾತ್ಮ್ಯವು ಪ್ರತೀತಿಸಿದ್ಧವಾಗಿದೆ. ಪ್ರತೀತಿಯೇ ರಜತ ಮತ್ತು ರಜತತಾದಾತ್ಮ್ಯಗಳ ಸತ್ವ. ಬೇರೆ ಸತ್ವವಿಲ್ಲವೆಂದು ಅದ್ವೈತಿ ಹೇಳುತ್ತಾನೆ. ಪ್ರತೀತಿಯಲ್ಲಿ ಕಾಣುವ ಈ ರಜತ ಮತ್ತು ರಜತ ತಾದಾತ್ಮ್ಯಗಳು ಅವಿದ್ಯೆಯ ವಿಕಾರವಾಗಿದ್ದು ಪ್ರಾತಿಭಾಸಿಕ ಸತ್ಯವಾಗಿವೆ ಎನ್ನುವುದನ್ನು ಒಪ್ಪೋಣ. ಆದರೆ ಸತ್ಯವು ಅಸತ್ಯವಾಗಿ ಪರಿಣಮಿಸುವುದನ್ನು ಒಪ್ಪಲಾಗದು. ಅದು ಪ್ರತೀತಿಯಲ್ಲಿ ಎಲ್ಲಿಯೂ ಕಾಣುವುದಿಲ್ಲ. ಪ್ರಾತೀತಿಕ ಸತ್ಯತ್ವ ಅದಕ್ಕೆ ಇಲ್ಲ. 'ಇದಂ ರಜತಂ' ಎಂಬ ಪ್ರತೀತಿಯಲ್ಲಿ ರಜತ ಅಥವಾ ರಜತತಾದಾತ್ಮ್ಯ ಕಾಣುತ್ತಿದ್ದರೂ 'ಇದಂ ಪದಾರ್ಥವು ರಜತಾಕಾರವಾಗಿ ಪರಿಣಮಿಸಿದೆ' ಎಂದು ತೋರುವುದಿಲ್ಲ. ಈ ಪರಿಣಾಮವು ಆರೋಪಿತವಾಗಿ ಸತ್ಯವೆನ್ನಬೇಕಾದರೂ ಆರೋಪವಿಲ್ಲದೆ ಅದು ಶಕ್ಯವಿಲ್ಲ. ಸತ್ಯವು ಅಸತ್ಯರೂಪವಾಗಿ ಪರಿಣಮಿಸುವುದನ್ನು ತೋರಿಸುವ ಆರೋಪವೇ ಇಲ್ಲ.

**ವಿಶೇಷವಿಚಾರ**—'ಇದಂ ಪದಾರ್ಥವು ರಜತಾಕಾರವಾಗಿ ಪರಿಣಮಿಸುವುದನ್ನು ಅದ್ವೈತಿಯು ಒಪ್ಪಿಯೇ ಇಲ್ಲ. 'ಇದಂ ರಜತಂ' ಎಂಬ ಪ್ರತೀತಿಯಲ್ಲಿ ಈ ಪರಿಣಾಮ ತೋರುವು ದಿಲ್ಲವೆಂದು ದೂಷಿಸುವುದು ಅನುಕ್ತೋಪಾಲಂಭವಾಗುವುದು. ವಸ್ತುತಃ ಇದಂ ಪದಾರ್ಥಾವಚ್ಛಿನ್ನ

ಚೈತನ್ಯಾವರಕಾಜ್ಞಾನವು ರಜತಾಕಾರವಾಗಿ ಪರಿಣಮಿಸುತ್ತದೆ ಎಂದೇ ಅದ್ವೈತಸಿದ್ಧಾಂತ' ಎಂದು ಅದ್ವೈತಸಿದ್ಧಿಕಾರ ಹೇಳುತ್ತಾನೆ.

ಆದರೆ, ಅವನು ಹೇಳುವ ಈ ಅಜ್ಞಾನಪರಿಣಾಮವು ಹಿಂದೆ ಹೇಳಿದಂತೆ ಮೂರು ಬಗೆಯಿಂದ ಅದ್ವೈತಿಗಳಿಗೆ ಸಮ್ಮತವಾಗಿದೆ. ಇದಂ ಪದಾರ್ಥ ಪರಿಣಾಮವೂ ಹಾಗೇ ಮೂರು ಬಗೆಯಿಂದ ಅದ್ವೈತಕ್ಕೆ ಸಮ್ಮತವೆ. ಆದರಿಂದ ಸಿದ್ಧಿಕಾರ ಹೇಳುವುದು ಸ್ವವ್ಯಾಹತ, ಅಪಸಿದ್ಧಾಂತ.

**ಏತೇನ ರೂಪಾಂತರಾಪತ್ತಿ ಪ್ರತೀತಿ ವಿಷಯತ್ವಂ ಉಪಾದಾನತ್ವಂ। ಪ್ರತೀತೇಃ ಪ್ರಮಾತ್ವಾಪ್ರಮಾತ್ವಾಭ್ಯಾಂ ಪರಿಣಾಮ ವಿವರ್ತೌ ಇತಿ ನಿರಸ್ತಂ। ಶುಕ್ತಿರ್ವಾ ಬ್ರಹ್ಮ ವಾ, ರೂಪ್ಯತ್ವಂ ವಾ ಆಕಾಶತ್ವಂ ವಾ ಆಪನ್ನಮಿತಿ ಅಪ್ರತೀತೇಃ।**

'ಶುಕ್ತಿಯು ರಜತಾಕಾರವಾಗಿ ಪರಿಣಮಿಸಿದೆ' ಎಂಬ ಪ್ರತೀತಿಯು ಅಪ್ರಮಾ ಆಗಿದೆ, ಇದು ವಿವರ್ತ ಎಂದೂ 'ಮಣ್ಣು ಮಡಿಕೆಯಾಗಿ ಪರಿಣಮಿಸಿದೆ' ಎಂಬ ಪ್ರತೀತಿಯು ಪ್ರಮಾ, ಇದು ಪರಿಣಾಮ ಎಂದೂ ಕೆಲವು ಅದ್ವೈತಿಗಳು ಹೇಳುತ್ತಾರೆ. ಇದೂ ಸರಿಯಲ್ಲ. ಶುಕ್ತಿಯು ರಜತಾಕಾರವಾಗಿ ಪರಿಣಮಿಸಿತೆಂದಾಗಲಿ, ಬ್ರಹ್ಮವು ಆಕಾಶವಾಗಿ ಪರಿಣಮಿಸಿದೆ ಎಂದಾಗಲಿ ಪ್ರತೀತಿ ಇಲ್ಲ.

**'ಸಚ್ಚ ತ್ಯಚ್ಚಾಭವತ್' ಇತ್ಯಾದಿಶ್ರುತೇಃ ಆತ್ಮಾಶ್ರಯಪ್ರಸಂಗೇನ ಸ್ವಜನ್ಯ ರೂಪಾಂತರಾಪತ್ತಿಧೀವಿಷಯತ್ವ ಪ್ರತ್ಯಾಯಕತ್ವ–ಅಯೋಗಾತ್ ॥**

'ತೇಜೋಽಬನ್ನ' ಅಂದರೆ 'ತೇಜ ಜಲ ಪೃಥಿವೀ' ಎಂಬ ಭೂತತ್ರಯ 'ಸತ್' ಎನಿಸುತ್ತದೆ. 'ವಾಯ್ವಂತರಿಕ್ಷ' 'ವಾಯು ಆಕಾಶ'ಗಳೆಂಬ ಭೂತದ್ವಯವು 'ತ್ಯತ್' ಎನಿಸುತ್ತದೆ. 'ಪರಬ್ರಹ್ಮನು ಸೃಷ್ಟಿಮಾಡಲು ಸಂಕಲ್ಪಿಸಿ ತಾನೇ ಈ ಪಂಚಭೂತಗಳಾಗಿ ಆಕಾರ ತಳೆದನು' 'ಸಚ್ಚ ತ್ಯಚ್ಚಾಭವತ್' ಎಂದು ತೈತ್ತಿರೀಯಶ್ರುತಿ ಹೇಳುತ್ತದೆ. ಇದು ಪರಬ್ರಹ್ಮ ಪಂಚಭೂತಾತ್ಮಕ ಪ್ರಪಂಚಕ್ಕೆ ವಿವರ್ತೋಪಾದಾನವೆನ್ನುವಲ್ಲಿ ಪ್ರಮಾಣ ಎಂದು ಅದ್ವೈತಿಗಳು ಹೇಳುತ್ತಾರೆ.

ಆದರೆ, ಹಾಗೆ ಹೇಳಿದರೆ ಆತ್ಮಾಶ್ರಯದೋಷ ಬರುತ್ತದೆ—ಶ್ರುತಿಯಿಂದ ಬ್ರಹ್ಮನಲ್ಲಿ ಪಂಚಭೂತಗಳೆಂಬ ರೂಪಾಂತರಾಪತ್ತಿ ಪ್ರತೀತಿ ಬರುತ್ತದೆ. ಉಪಾದಾನತ್ವ ಬರುತ್ತದೆ. ಆಗಲೇ ಆ ಪ್ರತೀತಿ ವಿಷಯತ್ವರೂಪ ಉಪಾದಾನತ್ವವನ್ನು ಶ್ರುತಿಯು ಹೇಳುತ್ತದೆ. ಪ್ರತೀತಿ ಬರುತ್ತದೆ. ಅಂದರೆ, ಶ್ರುತಿಯು ಹೇಳಿದರೆ ಬ್ರಹ್ಮನ ಪೃಥಿವ್ಯಾದಿ ರೂಪಾಂತರಾಪತ್ತಿ ಪ್ರತೀತಿ ಬರುತ್ತದೆ, ಪೃಥಿವ್ಯಾದಿ ರೂಪಾಂತರಾಪತ್ತಿಪ್ರತೀತಿ ಬಂದರೆ ಶ್ರುತಿ ಅದನ್ನು ಹೇಳುತ್ತದೆ. ಶ್ರುತಿಯಿಂದ ಪ್ರತೀತಿ ಬಂದರೆ ಶ್ರುತಿಯಿಂದ ಪ್ರತೀತಿ ಬರುತ್ತದೆ ಎಂದಂತಾಯಿತು—ಇದು ಆತ್ಮಾಶ್ರಯ. ಆದರಿಂದ ಅಯುಕ್ತ. ವಸ್ತುತಃ ಈ ಶ್ರುತಿ ಪಂಚಭೂತಾಂತರ್ಯಾಮಿ ರೂಪಪರ ಅಥವಾ ಸತ್ತಾದಿ ಗುಣಾಭಿವ್ಯಕ್ತಿ ಪರ.

**ಏತೇನ ರೂಪಾಂತರಾಭೇದ ಧೀವಿಷಯತ್ವಂ ವಾ ಕಾರ್ಯಾಭೇದಧೀವಿಷಯತ್ವಂ**

**ವಾ ಉಪಾದಾನತ್ವಂ। ಪ್ರತೀತೇಃ ಪ್ರಮಾತ್ವ-ಅಪ್ರಮಾತ್ವಾಭ್ಯಾಂ ಪರಿಣಾಮ-ವಿವರ್ತೌ ಇತಿ ನಿರಸ್ತಂ। ಆದ್ಯೇ ತತ್ತ್ವಂ ಪದಾರ್ಥಯೋಃ ಕ್ಷೀರ ನೀರಯೋಃ ಖಂಡಗೋತ್ವಯೋಶ್ಚ ಉಪಾದಾನೋಪಾದೇಯತ್ವಾಪಾತಾತ್।**

'ರೂಪಾಂತರಾಭೇದಬುದ್ಧಿ ವಿಷಯತ್ವವೇ ಉಪಾದಾನತ್ವ. ಅಥವಾ ಕಾರ್ಯಾಭೇದ ಬುದ್ಧಿವಿಷಯತ್ವವೇ ಉಪಾದಾನತ್ವ. ಬುದ್ಧಿಯು ಪ್ರಮಾ ಆಗಿದ್ದರೆ ಅದು ಪರಿಣಾಮ ಎನಿಸುತ್ತದೆ. ಅಪ್ರಮಾ ಆಗಿದ್ದರೆ ವಿವರ್ತವೆನಿಸುತ್ತದೆ' ಎಂದು ಕೆಲವರು ಹೇಳುತ್ತಾರೆ. ಅದೂ ಸರಿಯಲ್ಲ. ಮೊದಲನೆ ಪಕ್ಷದಲ್ಲಿ ರೂಪಾಂತರಗಳಿಗೆ ಅಭೇದ ಬುದ್ಧಿಗೆ 'ತತ್ ತ್ವಂ ಅಸಿ' ಎನ್ನುವುದು ಉದಾಹರಣೆಯಾಗುತ್ತದೆ. ತತ್ತ್ವಂ ಪದಗಳಿಗೆ ಸಾಮಾನಾಧಿಕರಣ್ಯವಿರುವುದರಿಂದ ತತ್ಪದಾರ್ಥ ತ್ವಂಪದಾರ್ಥಗಳೆಂಬ ರೂಪಾಂತರಗಳಿಗೆ ಅಭೇದಬುದ್ಧಿ ಬರುತ್ತದೆ. ಅದು ಪ್ರಮಾ ಆಗಿದೆ. ಆದರೆ ಅವುಗಳಿಗೆ ಉಪಾದಾನ ಉಪಾದೇಯ ಭಾವವಿರುವುದಿಲ್ಲ. ಕಾರ್ಯವಾದ ಹಾಲು ನೀರು ಬೆರೆತಾಗ ಅವುಗಳಿಗೆ ಪ್ರಮಾರೂಪವಾದ ಅಭೇದಬುದ್ಧಿ ಬರುತ್ತದೆ. ಆದರೆ ಅವುಗಳಿಗೆ ಉಪಾದಾನೋಪಾದೇಯ ಭಾವವಿಲ್ಲ. 'ಖಂಡೋ ಗೌಃ' ಎಂದು ಅಭೇದವ್ಯವಹಾರವಿದೆ. ಆದರೆ 'ಖಂಡ-ಗೋವು'ಗಳಿಗೆ ಉಪಾದಾನೋಪಾದೇಯ ಭಾವವಿಲ್ಲ. 'ಖಂಡ' ಎಂದರೆ ಆಗತಾನೇ ತುಸು ಮೂಡಿದ ಕೊಂಬಿನ ಹಸು ಅಥವಾ ಎತ್ತು.

**ದ್ವಿತೀಯೇ ಸದೃಶೇ ಸನ್ನಿಹಿತೇ ನಿಮಿತ್ತೇಽಪಿ ಕಾರ್ಯಾಭೇದ ಭ್ರಮಸಂಭವೇನ ಅತಿವ್ಯಾಪ್ತೇಃ।**

ಅಪ್ರಮಾರೂಪವಾದ ಅಭೇದ ಬುದ್ಧಿವಿಷಯತ್ವ ಬಂದರೆ ಅದು ವಿವರ್ತ ಎನ್ನುವ ಎರಡನೇಪಕ್ಷದಲ್ಲಿ ಅಪ್ರಮಾರೂಪ ಕಾರ್ಯಾಭೇದ ಬುದ್ಧಿ ವಿಷಯತ್ವವೇ ವಿವರ್ತತ್ವ. ಸದೃಶವಾದ ಕಾರ್ಯ ಜೊತೆಗಿದ್ದಾಗ ಸಾದೃಶ್ಯನಿಮಿತ್ತಕವಾಗಿ ನಿಮಿತ್ತದಲ್ಲಿಯೂ ಕಾರ್ಯಾಭೇದ ಬುದ್ಧಿ ಬರುವ ಸಂಭವವಿದೆ. ತಂದೆಯಂತೇ ಮಗನಿದ್ದರೆ, ತಂದೆಯನ್ನೇ ಮಗನೆಂದುಕೊಳ್ಳಬಹುದು. ಇದು ಭ್ರಮ. ಇಂಥ ಸ್ಥಳಗಳಲ್ಲಿ ನಿಮಿತ್ತವು ವಿವರ್ತವೆನಿಸುವುದಿಲ್ಲವಾದ್ದರಿಂದ ವ್ಯಭಿಚಾರ. ವಿವರ್ತಲಕ್ಷಣಕ್ಕೆ ನಿಮಿತ್ತದಲ್ಲಿ ಅತಿವ್ಯಾಪ್ತಿ.

**ತಸ್ಮಾತ್ ಅಕಾರಣಸ್ಯ ಅತೀತಾದೇಃ, ಅತ್ಯಂತಾಸತಶ್ಚ, ಭ್ರಮಾಧಿಷ್ಠಾನತ್ವ ದರ್ಶನಾತ್, ಭ್ರಮಾಧಿಷ್ಠಾನೇ ಚ ಶುಕ್ತ್ಯಾದೌ ಕಾರಣತ್ವ-ಉಪಾದಾನತ್ವಯೋಃ ಅವ್ಯವಹಾರಾತ್ ನ ಪರಪಕ್ಷೇ ಭ್ರಮಾಧಿಷ್ಠಾನಸ್ಯ ಬ್ರಹ್ಮಣಃ ಉಪಾದಾನತ್ವಕಾರಣತ್ವೇ।**

ಅತೀತ ಅನಾಗತಗಳು ಮತ್ತು ಅತ್ಯಂತಾಸತ್ತುಗಳು ಯಾವುದಕ್ಕೂ ಕಾರಣವಲ್ಲ. ಅವು ಭ್ರಮಾಧಿಷ್ಠಾನವಾಗುವುದು ಕಂಡಿದೆ. ಅವು ಉಪಾದಾನಗಳಲ್ಲ. ಭ್ರಮಾಧಿಷ್ಠಾನವಾಗಿ ಕಂಡಿರುವ ಶುಕ್ತ್ಯಾದಿಗಳನ್ನು ರಜತಾದಿಗಳಿಗೆ ಕಾರಣವೆಂದಾಗಲಿ ರಜತಾದಿಗಳ ಉಪಾದಾನವೆಂದಾಗಲಿ

ವ್ಯವಹರಿಸುವುದಿಲ್ಲ. ಆದರಿಂದ ಅದ್ವೈತಪಕ್ಷದಲ್ಲಿ ಭ್ರಮಾಧಿಷ್ಠಾನವೆನಿಸಿರುವ ಬ್ರಹ್ಮವನ್ನು ಪ್ರಪಂಚಕ್ಕೆ ಉಪಾದಾನವೆಂದಾಗಲಿ ಕಾರಣವೆಂದಾಗಲಿ ಹೇಳುವುದು ಯುಕ್ತವಲ್ಲ.

**ನನು ಮಾಯಾ ಉಪಾದಾನಂ, ಈಶ್ವರೋ ನಿಮಿತ್ತಂ, ಶುದ್ಧಂ ಬ್ರಹ್ಮ ಅಧಿಷ್ಠಾನಂ ಇತಿ ಚೇನ್ನ। ಅಭಿನ್ನ ನಿಮಿತ್ತೋಪಾದನತ್ವಾಭಾವೇನ ತ್ವನ್ಮತೇ ತದರ್ಥಸ್ಯ ಪ್ರಕೃತ್ಯಧಿಕರಣಾದೇರಸುಪಪತ್ತೇಃ।**

ಪ್ರಪಂಚಕ್ಕೆ ಮಾಯೆಯು ಉಪಾದಾನ, ಈಶ್ವರನು ನಿಮಿತ್ತ ಮತ್ತು ಶುದ್ಧಬ್ರಹ್ಮವು ಅಧಿಷ್ಠಾನ ಎಂದೂ ಅದ್ವೈತಿಗಳು ಹೇಳುತ್ತಾರೆ. ಆದರೆ ಹೀಗೆ ಹೇಳಿದರೆ, ಪ್ರಕೃತ್ಯಧಿಕರಣಾದಿಗಳಲ್ಲಿ ಉಪಾದಾನ-ನಿಮಿತ್ತ-ಅಧಿಷ್ಠಾನಗಳೆಲ್ಲವೂ ಒಂದೇ ಬ್ರಹ್ಮ ಎಂದು ಅವರೇ ನಿರೂಪಿಸುವುದು ಯುಕ್ತವಾಗಲಾರದು.



# ಪರಮತೇ ಬ್ರಹ್ಮಣೋ ನಿಮಿತ್ತತ್ವಭಂಗಃ

किंचेदं कर्तृत्वं किं परिभाषया शुक्त्यादिवदधिष्ठानत्वमात्रम्, भ्रांतवदध्यासद्रष्टृत्वं वा, मायाविवद्व्यामोहकत्वं वा, कुलालादिवदुपादानादिगोचरप्रयत्नादिमत्त्वं वा ।

नाद्यः । त्वन्मतेऽधिष्ठानत्वातिरिक्तोपादानत्वाभावेन कर्तृत्वोपादानत्वयोः सामानाधिकरण्योक्त्ययोगात् । ''तदैक्षत नामरूपे व्याकरोत्'' इत्यादि श्रुत्यनुपपत्तेश्च । नहि चेतनोऽचेतनो वा स्वस्मिन्नारोपितं संकल्प्य करोति ।

अत एव न द्वितीयः । भ्रांतस्य प्रेक्षापूर्वकारोपितकर्तृत्वाभावात् । ब्रह्मणोऽभ्रांतत्वेनाकर्तृत्वस्य जीवस्य भ्रांतत्वेन जगत्कर्तृत्वस्य चापातात् । नचेष्टापत्तिः । श्रुत्यादिविरोदात् । जगत ईश्वरं मुक्त्वा संसारिण उत्पत्त्यादि संभावयितुमपि न शक्यमित्यादि त्वद्भाष्यविरोधाच्च । ननु शुद्धस्याभ्रांतत्वेऽपि मायाशबलितः कर्तेश्वरो भ्रांत इति चेन्न । ईश्वरस्य भ्रांतत्वे जीववत्संसाराद्यापातेन बहुश्रुत्यादिविरोधात् ।

किंच पक्षद्वयेऽपि वैषम्यनैर्घृण्ये न सापेक्षत्वादित्यादिसूत्रेषु कर्मसापेक्षत्वेन वैषम्यादिपरिहारो न युक्तः स्यात् । अधिष्ठानत्वादिना तदप्रसक्तेः ।

न तृतीयः । व्यामोहनीयजीवादर्शने व्यामोहकत्वायोगात् । दर्शने च भ्रांतत्वापत्तेः । व्यामोहकत्वस्यापि आरोपितत्वेनान्योन्याश्रयाच्च । नामरूपे व्याकरवाणीत्यादिश्रुत्यनुपपत्तेश्च । नहि मायावी गजादिकं करवाणीति संकल्प्य करोति, किंतु दर्शयानीति संकल्प्य दर्शयति ।

**किंच पक्षत्रयेऽपि जन्मादिसूत्रेऽर्थलब्धसार्वज्ञादिस्फोरणार्थं शास्त्रयोनिसूत्रमिति यत्परमतं तद्भंगः स्यात् । भ्रमाधिष्ठानत्वादिना सार्वज्ञालाभात् ।**

**न चतुर्थः । कल्पिततत्वे तस्यायोगात् । नहि घटादिकं कुलालेनेव कल्पितं रूप्यादि भ्रांतेन वान्येन वा क्रियते । विस्तृतं चैतत्पुरस्तात् ।**

**तस्मात् ''अधिष्ठाने तथा भ्रांते भ्रामके च न कर्तृता ।**
**लौकिकी कृतिमत्ता तु न दृष्टाऽऽरोपितं प्रति ।।''**

।। **सामानाधिकरण्योक्त्ययोगादिति** ।। तस्य भेदघटितत्वादिति भावः ।। श्रुतिविरोधादिति ।। ''आत्माप्यनीशः सुखदुःखहेतोः'' इत्यादिश्रुतिविरोधादित्यर्थः ।। **अधिष्ठानत्वादिनेति** ।। प्रेक्षापूर्वककर्तुरेव हि वैषम्यादिप्रसक्तिरिति भावः ।। **भ्रांतत्वादिति** ।। स्वव्यतिरिक्तवस्त्वंतराभावेन तद्दर्शने भ्रांतत्वापत्तिरिति भावः ।। **व्यामोहकत्वस्यापीति** ।। तस्यापि व्यामोहकत्वमितीतरसापेक्षत्वेनान्योन्याश्रया-दित्यर्थः । संगृह्णाति— **अधिष्ठानेति** ।।



**ಅದ್ವೈತಿಯ ಬ್ರಹ್ಮನು ಜಗತ್ತಿಗೆ ಕರ್ತನಲ್ಲ**

**ಕಿಂಚೇದಂ ಕರ್ತೃತ್ವಂ? ಕಿಂ ಪರಿಭಾಷಯಾ ಶುಕ್ತ್ಯಾದಿವತ್ ಅಧಿಷ್ಠಾನತ್ವ ಮಾತ್ರಂ? ಭ್ರಾಂತವತ್ ಅಧ್ಯಾಸದ್ರಷ್ಟೃತ್ವಂ ವಾ? ಮಾಯಾವಿವದ್ ವ್ಯಾಮೋಹಕತ್ವಂ ವಾ? ಕುಲಾಲಾದಿವತ್ ಉಪಾದಾನಾದಿಗೋಚರ ಪ್ರಯತ್ನಾದಿಮತ್ತ್ವಂ ವಾ?**

ಅದ್ವೈತದಲ್ಲಿ ಜಗದುಪಾದಾನವೇ ಜಗತ್ತಿಗೆ ಕರ್ತೃ. ಈ ಕರ್ತೃತ್ವದ ಸ್ವರೂಪವೇನು? ಶುಕ್ತ್ಯಾದಿಗಳು ರಜತಾದಿಗಳಿಗೆ ಅಧಿಷ್ಠಾನವಾಗುವಂತೆ ಬ್ರಹ್ಮನೂ ಪ್ರಪಂಚಾರೋಪಾಧಿಷ್ಠಾನ ವಾಗುತ್ತಾನೆ. ಕೇವಲ ಈ ಅಧಿಷ್ಠಾನತ್ವವೇ ಅದ್ವೈತಪರಿಭಾಷೆಯಲ್ಲಿ ಕರ್ತೃತ್ವವೆನಿಸುವುದೆ? ಭ್ರಾಂತಿಗೊಂಡವನಂತೆ ಈಶ್ವರನು ಪ್ರಪಂಚಾರೋಪವನ್ನು ಕಾಣುವುದೇ ಕರ್ತೃತ್ವವೆ? ಮಾಯಾವಿಯಂತೆ ಈಶ್ವರನು ಜೀವರಿಗೆ ಪ್ರಪಂಚಭ್ರಮ ಉಂಟುಮಾಡುವುದೇ ಕರ್ತೃತ್ವವೆ? ಅಥವಾ ಘಟಕ್ಕೆ ಕುಲಾಲನಂತೆ ಜಗತ್ತಿನ ಉಪಾದಾನಾದಿ ವಿಷಯದಲ್ಲಿ ಪ್ರಯತ್ನಾದಿಗಳನ್ನು ಮಾಡುವುದೇ ಕರ್ತೃತ್ವವೆ?

**ನಾದ್ಯಃ। ತ್ವನ್ಮತೇ ಅಧಿಷ್ಠಾನತ್ವಾತಿರಿಕ್ತ-ಉಪಾದಾನತ್ವಾಭಾವೇನ ಕರ್ತೃತ್ವ-ಉಪಾದಾನತ್ವಯೋಃ ಸಾಮಾನಾಧಿಕರಣ್ಯೋಕ್ತ್ಯಯೋಗಾತ್ ।**

ಮೇಲೆ ಹೇಳಿದ ನಾಲ್ಕು ಪಕ್ಷಗಳಲ್ಲಿ ಮೊದಲನೆಯದು ಸರಿಯಲ್ಲ. ಅದ್ವೈತದಲ್ಲಿ ಅಧಿಷ್ಠಾನತ್ವಕ್ಕಿಂತ ಬೇರೆಯಾಗಿ ಉಪಾದಾನತ್ವವೆಂಬುದಿಲ್ಲ. ಆ ಅಧಿಷ್ಠಾನತ್ವವನ್ನೇ ಕರ್ತೃತ್ವವೆಂದು ಹೇಳಿದರೆ ಉಪಾದಾನತ್ವವೂ ಕರ್ತೃತ್ವವೂ ಒಂದೇ ಆಗುತ್ತವೆ, ಅವುಗಳಿಗೆ ಸಾಮಾನಾಧಿಕರಣ್ಯವಿದೆ ಎಂದು ಅದ್ವೈತಿಯು ಹೇಳುವುದು ಕೂಡಲಾರದು. ಒಂದೇ ವಸ್ತು ತನ್ನ ಜೊತೆಗೆ ತಾನಿದೆ ಎಂದು ವ್ಯವಹಾರವಿಲ್ಲ.

'ಅಧಿಷ್ಠಾನತ್ವಕ್ಕಿಂತ ಬೇರೆಯಾಗಿ ಪರಿಣಾಮಿತ್ವರೂಪ ಉಪಾದಾನತ್ವವಿದೆ. ಇವುಗಳಿಗೆ ಭೇದವಿರುವುದರಿಂದ ಸಾಮಾನಾಧಿಕರಣ್ಯವು ಕೂಡುವುದು' ಎಂದರೆ ಅದು ಸರಿಯಲ್ಲ, ಮಾಯಾ ವಿಶಿಷ್ಟನಲ್ಲಿ ಪರಿಣಾಮಿತ್ವವಿರುತ್ತದೆ. ಅವನಲ್ಲಿ ಅಧಿಷ್ಠಾನತ್ವವಿಲ್ಲ. 'ಯಥಾ ಸರ್ಪಸ್ಯೋಪಾದಾನಂ ರಜ್ಜುಃ' ಎಂದು ಭಾಮತಿಯಲ್ಲಿ ಅಧಿಷ್ಠಾನತ್ವರೂಪ ಉಪಾದಾನತ್ವಕ್ಕೇ ಕರ್ತೃತ್ವಸಾಮಾನಾಧಿಕರಣ್ಯ ಪ್ರಕೃತ್ಯಧಿಕರಣದಲ್ಲಿ ಉಕ್ತವಾಗಿದೆ. ಪರಿಣಾಮಿತ್ವರೂಪ ಉಪಾದಾನತ್ವಕ್ಕಲ್ಲ ಅದರಿಂದ ಸಾಮಾನಾಧಿಕರಣ್ಯ ಕೂಡುವುದಿಲ್ಲ.

**'ತದೈಕ್ಷತ' 'ನಾಮರೂಪೇ ವ್ಯಾಕರೋತ್' ಇತ್ಯಾದಿ ಶ್ರುತ್ಯನುಪಪತ್ತೇಶ್ಚ। ನಹಿ ಚೇತನೋಽಚೇತನೋ ವಾ ಸ್ವಸ್ಮಿನ್ ಆರೋಪಿತಂ ಸಂಕಲ್ಪ್ಯ ಕರೋತಿ ।**

'ತದೈಕ್ಷತ' ಎಂದು ಸೃಷ್ಟಿಸಂಕಲ್ಪವನ್ನು ಹೇಳಿ 'ನಾಮರೂಪೇ ವ್ಯಾಕರೋತ್' ನಾಮರೂಪಾತ್ಮಕ ಪ್ರಪಂಚವನ್ನು ಬ್ರಹ್ಮನು ಸಂಕಲ್ಪಪೂರ್ವಕವಾಗಿ ಸೃಷ್ಟಿ ಮಾಡಿದ್ದು ಉಪನಿಷತ್ತಿನಲ್ಲಿ ಕಂಡಿದೆ. ಇದು ಕೂಡುವುದಿಲ್ಲ. ಅಧಿಷ್ಠಾನತ್ವವೇ ಕರ್ತೃತ್ವವೆಂಬ ಈ ಪಕ್ಷದಲ್ಲಿ ಅಧಿಷ್ಠಾನವು ಚೇತನವಿರಲಿ ಅಚೇತನವಿರಲಿ ತನ್ನಲ್ಲಿ ಆರೋಪಿತವಾದ ಕಾರ್ಯವನ್ನು ಸಂಕಲ್ಪಪೂರ್ವಕವಾಗಿ ಸೃಷ್ಟಿಮಾಡುವುದಿಲ್ಲ. ಆದರಿಂದ ಶ್ರುತಿವಿರೋಧ ಬರುತ್ತದೆ.

**ಅತ ಏವ ನ ದ್ವಿತೀಯಃ। ಭ್ರಾಂತಸ್ಯ ಪ್ರೇಕ್ಷಾಪೂರ್ವಕ-ಆರೋಪಿತ-ಕರ್ತೃತ್ವಾಭಾವಾತ್। ಬ್ರಹ್ಮಣೋಽಭ್ರಾಂತತ್ವೇನ ಅಕರ್ತೃತ್ವಸ್ಯ, ಜೀವಸ್ಯ ಭ್ರಾಂತತ್ವೇನ ಜಗತ್ಕರ್ತೃತ್ವಸ್ಯ ಚ ಆಪಾತಾತ್ ।**

ಭ್ರಾಂತಿಗೊಂಡ ಜೀವನಂತೆ, ಈಶ್ವರನೂ ಪ್ರಪಂಚವನ್ನು ಭ್ರಾಂತಿಯಲ್ಲಿ ಕಾಣುವುದೇ ಪ್ರಪಂಚಕರ್ತೃತ್ವವೆನ್ನುವ ಎರಡನೇ ಪಕ್ಷವೂ ಸರಿಯಲ್ಲ. ಈ ಪಕ್ಷದಲ್ಲಿ ಈಶ್ವರನು ಭ್ರಾಂತಿಗೊಂಡವನು, ಆರೋಪ್ಯವನ್ನು ಕೇವಲ ಕಾಣುತ್ತಾನೆ ಹೊರತು ಪ್ರೇಕ್ಷಾಪೂರ್ವಕವಾಗಿ ಅದನ್ನು ಸೃಷ್ಟಿಮಾಡುವುದಿಲ್ಲ.

'ಭ್ರಾಂತಿಯೇ ಸೃಷ್ಟಿ, ಭ್ರಾಂತಿಗೊಂಡವನೇ ಕರ್ತ' ಎನ್ನುವುದಾದರೆ ಶುದ್ಧಬ್ರಹ್ಮನಿಗೆ ಭ್ರಾಂತಿ

ಇಲ್ಲದ್ದರಿಂದ ಅವನು ಕರ್ತನಲ್ಲವೆಂದಾದೀತು. ಜೀವನು ಭ್ರಾಂತಿ ಉಳ್ಳವನಾದ್ದರಿಂದ ಅವನೇ ಜಗತ್ಕರ್ತನೆಂದಾದೀತು.

**ನ ಚ ಇಷ್ಟಾಪತ್ತಿಃ। ಶ್ರುತ್ಯಾದಿವಿರೋಧಾತ್। 'ಜಗತಃ ಈಶ್ವರಂ ಮುಕ್ತ್ವಾ ಸಂಸಾರಿಣಃ ಉತ್ಪತ್ತ್ಯಾದಿ ಸಂಭಾವಯಿತುಮಪಿ ನ ಶಕ್ಯಂ' ಇತ್ಯಾದಿ ತ್ವದ್‌ಭಾಷ್ಯ ವಿರೋಧಾಚ್ಚ।**

'ಜೀವನು ಬ್ರಹ್ಮಾಭಿನ್ನನಾದ್ದರಿಂದ, ಅವನೇ ಜಗತ್ಕರ್ತನೆಂದಾಗಲಿ ಎಂದರೆ ಇಷ್ಟಾಪತ್ತಿ' ಎಂದು ಅದ್ವೈತಿ ಹೇಳಿದರೆ 'ಆತ್ಮಾಪ್ಯನೀಶಃ ಸುಖದುಃಖಹೇತೋಃ' 'ಜೀವನು ಸುಖದುಃಖಗಳಿಗೆ ಕರ್ತನಲ್ಲ' ಇತ್ಯಾದಿ ಎಲ್ಲ ಶ್ರುತಿಸ್ಮೃತ್ಯಾದಿಗಳ ವಿರೋಧ ಬರುತ್ತದೆ. ಈ ಶ್ರುತ್ಯಾದಿಗಳಲ್ಲಿ ಎಲ್ಲಕಡೆ ಬ್ರಹ್ಮನೇ ಜಗತ್‌ಕರ್ತನೆಂದು ಹೇಳಿದೆ. ಮತ್ತು ಅದ್ವೈತಭಾಷ್ಯದಲ್ಲಿಯೂ 'ಜಗತ್ತಿಗೆ ಈಶ್ವರನನ್ನು ಬಿಟ್ಟರೆ ಸಂಸಾರಿಜೀವನಿಂದ ಉತ್ಪತ್ತ್ಯಾದಿಗಳು ಉಂಟಾಗಬಹುದೆಂದು ಕಲ್ಪಿಸಿಕೊಳ್ಳುವುದೂ ಶಕ್ಯವಿಲ್ಲ' ಎಂದೇ ಹೇಳಿದೆ. ಅದರ ವಿರೋಧವಿದೆ.

**ನನು ಶುದ್ಧಸ್ಯ ಅಭ್ರಾಂತತ್ವೇಽಪಿ ಮಾಯಾಶಬಲಿತಃ ಕರ್ತಾ ಈಶ್ವರೋ ಭ್ರಾಂತಃ ಇತಿ ಚೇನ್ನ। ಈಶ್ವರಸ್ಯ ಭ್ರಾಂತತ್ವೇ ಜೀವವತ್ ಸಂಸಾರಾದ್ಯಾಪಾತೇನ ಬಹುಶ್ರುತ್ಯಾದಿ ವಿರೋಧಾತ್।**

'ಶುದ್ಧ ಬ್ರಹ್ಮನಿಗೆ ಭ್ರಾಂತಿ ಇಲ್ಲದಿದ್ದರೂ ಮಾಯಾಯುಕ್ತನಾದ ಈಶ್ವರನು ಭ್ರಾಂತಿ ಉಳ್ಳವನಾಗಿದ್ದು ಜಗತ್ಕರ್ತನೆನಿಸಬಹುದು' ಎನ್ನುವುದು ಅಸಂಗತ. ಈಶ್ವರನಿಗೆ ಭ್ರಾಂತಿ ಉಂಟೆಂದರೆ ಅವನಿಗೆ ಜೀವನಂತೆಯೇ ಭ್ರಾಂತಿಮೂಲಕವಾದ ರಾಗದ್ವೇಷಾದಿಪ್ರಯುಕ್ತ ಸಂಸಾರಾದಿಗಳಿರ ಬೇಕಾದೀತು. ಆಗ ಇನ್ನೂ ಹೆಚ್ಚೇ ಶ್ರುತಿಸ್ಮೃತ್ಯಾದಿ ವಿರೋಧಗಳು ಬರುತ್ತವೆ.

**ಕಿಂಚ ಪಕ್ಷದ್ವಯೇಽಪಿ 'ವೈಷಮ್ಯ ನೈರ್ಘೃಣ್ಯೇ ನ ಸಾಪೇಕ್ಷತ್ವಾತ್' ಇತ್ಯಾದಿ ಸೂತ್ರೇಷು ಕರ್ಮಸಾಪೇಕ್ಷತ್ವೇನ ವೈಷಮ್ಯಾದಿ ಪರಿಹಾರೋ ನ ಯುಕ್ತಃ ಸ್ಯಾತ್। ಅಧಿಷ್ಠಾನತ್ವಾದಿನಾ ತದಪ್ರಸಕ್ತೇಃ।**

'ಭ್ರಮಾಧಿಷ್ಠಾನತ್ವವೇ ಕರ್ತೃತ್ವ' 'ಭ್ರಮುವಿರುವುದೇ ಕರ್ತೃತ್ವ' ಎಂಬ ಎರಡೂ ಪಕ್ಷಗಳಲ್ಲಿ 'ಈಶ್ವರನಿಗೆ ವೈಷಮ್ಯ ನೈರ್ಘೃಣ್ಯಗಳೆಂಬ ದೋಷಗಳಿಲ್ಲ, ಏಕೆಂದರೆ ಅವನು ಜೀವರಿಗೆ ಅವರ ಕರ್ಮಾದ್ಯನುಸಾರವಾಗಿಯೇ ಸುಖದುಃಖ ಕಾರಕನಾಗಿರುತ್ತಾನೆ' ಎಂದೆನ್ನುವ ಬ್ರಹ್ಮಸೂತ್ರದ ವಿರೋಧ ಬರುತ್ತದೆ. ಭ್ರಾಂತಿಯ ಅಧಿಷ್ಠಾನದಲ್ಲಾಗಲಿ, ಭ್ರಾಂತಿಯನ್ನು ನೋಡುವವನಲ್ಲಾಗಲಿ ಜೀವರ ವಿಷಯದಲ್ಲಿ ಪಕ್ಷಪಾತ, ಕ್ರೌರ್ಯಾದಿ ದೋಷಗಳಿಗೆ ಪ್ರಸಕ್ತಿ ಇಲ್ಲ. ಪ್ರೇಕ್ಷಾಪೂರ್ವಕವಾಗಿ ಮಾಡುವವನಲ್ಲಿಯೇ ಪಕ್ಷಪಾತಾದಿ ಪ್ರಸಕ್ತಿ.

**ನ ತೃತೀಯಃ। ವ್ಯಾಮೋಹನೀಯ ಜೀವಾದರ್ಶನೇ ವ್ಯಾಮೋಹಕತ್ವಾ ಯೋಗಾತ್। ದರ್ಶನೇ ಚ ಭ್ರಾಂತತ್ವಾಪತ್ತೇಃ।**

ಮೂರನೆ ಪಕ್ಷದಲ್ಲಿ ಮಾಯಾವಿದ್ಯೆಬಲ್ಲವನು ಮುಗ್ಧಪ್ರೇಕ್ಷಕರಿಗೆ ಮೋಡಿ ಮಾಡುವಂತೆ ಈಶ್ವರನೂ ಜೀವರಿಗೆ, ಇಲ್ಲದ ಪ್ರಪಂಚವನ್ನು ತೋರಿಸುವುದೇ ಪ್ರಪಂಚಕರ್ತೃತ್ವ. ಈ ಪಕ್ಷದಲ್ಲಿ ಇಲ್ಲದ ಪ್ರೇಕ್ಷಕರಾದ ಜೀವರನ್ನು ಈಶ್ವರನು ಭ್ರಾಂತಿಯಿಂದ ಕಾಣದಿದ್ದರೆ ಅವರಿಗೆ ಮೋಡಿ ಮಾಡುವುದು ಶಕ್ಯವಿಲ್ಲ. ಕಂಡರೆ ಅದು ಅವನ ಭ್ರಾಂತಿಯೇ ಆಗುವುದರಿಂದ ಹಿಂದೆ ಹೇಳಿದ ದೋಷ ಅಪರಿಹಾರ್ಯವಾಗುವುದು.

**ವ್ಯಾಮೋಹಕತ್ವಸ್ಯಾಪಿ ಆರೋಪಿತತ್ವೇನ ಅನ್ಯೋನ್ಯಾಶ್ರಯಾಚ್ಚ ।**

ಈಶ್ವರನು ಮಾಯಾಪ್ರದರ್ಶನಕ್ಕಾಗಿ ಪ್ರೇಕ್ಷಕರನ್ನು ತನ್ನ ಮುಂದೆ ಕಲ್ಪಿಸಿಕೊಂಡರೇ ಆ ಪ್ರೇಕ್ಷಕರು ಈಶ್ವರನನ್ನು ಪ್ರದರ್ಶಕನೆಂದು ಕಲ್ಪಿಸಿಕೊಳ್ಳುತ್ತಾರೆ ಇದು ಅನ್ಯೋನ್ಯಾಶ್ರಯ.

**'ನಾಮರೂಪೇ ವ್ಯಾಕರವಾಣಿ' ಇತ್ಯಾದಿಶ್ರುತ್ಯನುಪಪತ್ತೇಶ್ಚ । ನಹಿ ಮಾಯಾವೀ 'ಗಜಾದಿಕಂ ಕರವಾಣಿ' ಇತಿ ಸಂಕಲ್ಪ್ಯಕರೋತಿ । ಕಿಂತು ದರ್ಶಯಾನಿ ಇತಿ ಸಂಕಲ್ಪ್ಯ ದರ್ಶಯತಿ ।**

'ನಾಮರೂಪೇ ವ್ಯಾಕರವಾಣಿ' 'ನಾಮರೂಪಾತ್ಮಕ ಪ್ರಪಂಚಸೃಷ್ಟಿ ಮಾಡುತ್ತೇನೆ' ಎಂದು ಸಂಕಲ್ಪಿಸಿ ಈಶ್ವರನು 'ನಾಮರೂಪೇ ವ್ಯಾಕರೋತ್' ಸೃಷ್ಟಿಮಾಡುತ್ತಾನೆ' ಎಂದು ಶ್ರುತಿಯು ಈಶ್ವರಸಂಕಲ್ಪ ಪೂರ್ವಕವಾದ ಸೃಷ್ಟಿಯನ್ನು ಹೇಳುತ್ತಿದೆ. ಅದರ ವಿರೋಧವೂ ಬರುತ್ತದೆ. ಏಕೆಂದರೆ, ಮಾಯಾವಿಯು ಇಲ್ಲದ ಆನೆ ಮುಂತಾದುವನ್ನು 'ಸೃಷ್ಟಿಮಾಡುತ್ತೇನೆ' ಎಂದು ಸಂಕಲ್ಪಿಸಿ ಸೃಷ್ಟಿ ಮಾಡುವುದಿಲ್ಲ. ಇಲ್ಲದ ಆನೆ ಮುಂತಾದುವನ್ನು 'ಪ್ರದರ್ಶನ ಮಾಡುವೆನೆಂದೇ' ಸಂಕಲ್ಪಿಸಿ ಪ್ರದರ್ಶನವನ್ನೇ ಮಾಡುತ್ತಾನೆ.

**ಕಿಂಚ ಪಕ್ಷತ್ರಯೇಽಪಿ ಜನ್ಮಾದಿಸೂತ್ರೇ ಅರ್ಥಲಬ್ಧ ಸಾರ್ವಜ್ಞಾದಿ ಸ್ಫೋರಣಾರ್ಥಂ ಶಾಸ್ತ್ರಯೋನಿ ಸೂತ್ರಮಿತಿ ಯತ್ ಪರಮತಂ ತದ್‌ಭಂಗಃ ಸ್ಯಾತ್ । ಭ್ರಮಾಧಿ ಷ್ಠಾನತ್ವಾದಿನಾ ಸಾರ್ವಜ್ಞಾಲಾಭಾತ್ ।**

ಮೇಲೆ ಹೇಳಿದ ಮೂರೂ ಪಕ್ಷಗಳಲ್ಲಿಯೂ ಸಾಮಾನ್ಯವಾಗಿ ಬರುವ ದೋಷ— ಜನ್ಮಾದಿ ಸೂತ್ರ ಮತ್ತು ಶಾಸ್ತ್ರಯೋನಿ ಸೂತ್ರಗಳ ವಿರೋಧ. ಅದ್ವೈತ ಪ್ರಕಾರ 'ಜನ್ಮಾದ್ಯಸ್ಯ ಯತ' ಎಂಬ ಸೂತ್ರದಲ್ಲಿ ಜಗಜ್ಜನ್ಮಾದಿಕರ್ತೃತ್ವದಿಂದ ಅರ್ಥಾತ್‌ಉಕ್ತವಾದ ಸರ್ವಜ್ಞತ್ವವನ್ನೇ 'ಶಾಸ್ತ್ರಯೋನಿತ್ವಾತ್' ಎಂಬ ಸೂತ್ರವು ಸ್ಪಷ್ಟವಾಗಿ ಹೇಳುತ್ತದೆ. ಆದರೆ ಭ್ರಾಂತಿಯ ಅಧಿಷ್ಠಾನದಲ್ಲಾಗಲಿ ಭ್ರಾಂತಿ ಕಾಣುವವನಲ್ಲಾಗಲಿ ಮಾಯಾಪ್ರದರ್ಶಕನಲ್ಲಾಗಲಿ ಜಗದ್‌ಭ್ರಮಾಧಿಷ್ಠಾನತ್ವರೂಪವಾದ ಜಗಜ್ಜನ್ಮಾದಿಕರ್ತೃತ್ವಕ್ಕೆ ಸರ್ವಜ್ಞತ್ವ ಬೇಕಿಲ್ಲ. ಅದು ಕರ್ತೃತ್ವದಿಂದ ಅರ್ಥಾತ್ ಆಕ್ಷಿಪ್ತವಾಗುವುದಿಲ್ಲ. ಅದನ್ನು ಶಾಸ್ತ್ರಯೋನಿ ಸೂತ್ರವು ಸ್ಪಷ್ಟವಾಗಿ ಹೇಳುವ ಪ್ರಸಕ್ತಿ ಇಲ್ಲ.

**ನ ಚತುರ್ಥಃ । ಕಲ್ಪಿತತ್ವೇ ತಸ್ಯಾಯೋಗಾತ್ । ನಹಿ ಘಟಾದಿಕಂ ಕುಲಾಲೇನೇವ**

**ಕಲ್ಪಿತಂ ರೂಪ್ಯಾದಿ ಭ್ರಾಂತೇನ ವಾ ಅನ್ಯೇನ ವಾ ಕ್ರಿಯತೇ। ವಿಸ್ತೃತಂ ಚೈತತ್ ಪುರಸ್ತಾತ್ ।**

ನಾಲ್ಕನೆ ಪಕ್ಷದಲ್ಲಿ ಈಶ್ವರನು, ಘಟಕ್ಕೆ ಕುಂಬಾರನಂತೆ, ಪ್ರಪಂಚಸೃಷ್ಟಿಗೆ ಅದರ ಉಪಾದಾನಾದಿ ವಿಷಯದಲ್ಲಿ ಪ್ರಯತ್ನ ಚೇಷ್ಟಾದಿಗಳನ್ನು ಮಾಡುವುದೇ ಕರ್ತೃತ್ವ. ಪ್ರಪಂಚ ಕಲ್ಪಿತವಾಗಿದ್ದರೆ, ಕುಂಬಾರನು ಘಟಾದಿ ಸೃಷ್ಟಿಗೆ ಅದರ ಉಪಾದಾನಾದಿಗಳ ವಿಷಯದಲ್ಲಿ ಪ್ರಯತ್ನ ಚೇಷ್ಟಾದಿಗಳನ್ನು ಮಾಡುವಂತೆ, ಈಶ್ವರನು ಕಲ್ಪಿತವಾದ ಪ್ರಪಂಚಸೃಷ್ಟಿಗೆ ಅದರ ಉಪಾದಾನಾದಿಗಳ ವಿಷಯದಲ್ಲಿ ಪ್ರಯತ್ನ ಚೇಷ್ಟಾದಿಗಳನ್ನು ಮಾಡಲಾರ. ಕಲ್ಪಿತವಾದ ರಜತಾದಿಗಳನ್ನು ರಜತಭ್ರಾಂತಿ ಉಳ್ಳವನಾಗಲಿ ಭ್ರಾಂತಿರಹಿತನಾಗಲಿ ಯಾರೂ ಕುಂಬಾರನಂತೆ ಪ್ರಯತ್ನಪಟ್ಟು ಸೃಷ್ಟಿ ಮಾಡುವುದಿಲ್ಲ. 'ರಜತಕ್ಕೆ ಸಾಕ್ಷಿಯೇ ಕರ್ತ. ಅವನು ಕಾಣುವುದಿಲ್ಲವೆಂದರೆ, ಜಗತ್ಕರ್ತನೂ ಕಾಣುವುದಿಲ್ಲ' ಎನ್ನುತ್ತಾನೆ ಸಿದ್ಧಿಕಾರ. ಆದರೆ, ಕರ್ತೃತ್ವವೆಂದರೆ 'ಕುಂಬಾರನಂತೇ ಪ್ರಯತ್ನಪೂರ್ವಕರ್ತೃತ್ವ' ಎಂದು ಒಪ್ಪಿಕೊಂಡು ಸಿದ್ಧಿಕಾರ ಅಪ್ರಯತ್ನ ಸಿದ್ಧವಾಗುವ ರಜತಕ್ಕೆ ಸಾಕ್ಷಿಯೇ ಕರ್ತ ಎನ್ನುತ್ತಾನೆ! ಇದನ್ನು ಹಿಂದೆಯೇ ವಿಸ್ತಾರವಾಗಿ ಹೇಳಿದ್ದೇವೆ.

**ತಸ್ಮಾತ್, ಅಧಿಷ್ಠಾನೇ ತಥಾ ಭ್ರಾಂತೇ ಭ್ರಾಮಕೇ ಚ ನ ಕರ್ತೃತಾ ।**
**ಲೌಕಿಕೀ ಕೃತಿಮತ್ತಾ ತು ನ ದೃಷ್ಟಾಽಽರೋಪಿತಂ ಪ್ರತಿ ॥**

ಆದರಿಂದ, ಆರೋಪಾಧಿಷ್ಠಾನವಾಗಲಿ ಭ್ರಾಂತನಾಗಲಿ ಭ್ರಾಮಕನಾಗಲಿ ಕರ್ತೃ ಅಲ್ಲ. ಸರ್ವಲೋಕಸಿದ್ಧವಾದ ಕೃತಿಮತ್ತ್ವವೂ ಕೂಡ ಕಲ್ಪಿತ ಪದಾರ್ಥಗಳ ಸೃಷ್ಟಿಗೆ ಕಂಡಿಲ್ಲ.

**ಪರಮತದಲ್ಲಿ ಬ್ರಹ್ಮನಿಗೆ ನಿಮಿತ್ತತ್ವಭಂಗ ಇಲ್ಲಿಗೆ ಮುಗಿಯಿತು.**

# ಬ್ರಹ್ಮಣ ಉಪಾದಾನತ್ವೇ ಪ್ರಮಾಣಭಂಗಃ

किंचोपादानत्वे न तावत् ''आत्मन आकाशः संभूतः'' ''यतो वा'' इत्यादि पंचमीश्रुतिर्मानम्, तस्या अनेकार्थत्वात्। अपादानार्थत्वेऽपि ''ध्रुवमपायेऽपादानम्'' इत्यनेनापादानसंज्ञासंभवाच्च ।

''जनिकर्तुः'' इत्यनेनापादानसंज्ञायामपि वृत्तौ ''पुत्रात्प्रमोदो जायते'' इत्यस्याप्युदाहृतत्वात् । न्यासेऽपि प्रकृतिपदं हेतुमात्रपरमित्याश्रित्य असति प्रकृतिग्रहणे उपादानस्यैव स्यात्, प्रत्यासत्तेः, नेतरस्य, प्रकृतिग्रहणात् सर्वस्य कारणस्य भवतीति प्रकृतिपदं ''पुत्रात्प्रमोदो जायत'' इत्यादावनुपादानेऽप्यपादानसंज्ञार्थमित्युक्तत्वात् ।

''शृंगाच्छरो जायते गोलोमाविलोमभ्यो दूर्वा जायंते'' इत्यादावपि शरांकुरं प्रत्युपादानभूतो यः शृंगैकदेशः तत्संसृष्टं श्रृंगैकदेशांतरं शरांकुरनिमित्तमस्ति । माषांकुरोपादानभूतो यस्तुषांतरवस्थितो माषभागस्तत्संसृष्टो माषांकुरनिमित्तभूतस्तुषभाग इवापरिणतशृंगभागस्यानुभवात् । तदेव शृंगादिति पंचम्यंतेनोच्यते । अत एव महाभाष्ये ''अयमपि योगः शक्योऽवक्तुम् । गोलोमाविलोमभ्यो दूर्वा जायंते । अपक्रामंति तास्तेभ्यः'' इत्यादिना लोमादीनां दूर्वादीन्प्रत्यवधित्वात् ''ध्रुवमपायेऽपादानम्'' इत्यनेनैवापादानसंज्ञासिद्धेरिदं सूत्रं प्रत्याख्यातम् ।

कैयटेऽपि यथा बिलाद्दीर्घभोगो भोगी निष्क्रामन्नप्यविच्छेदात्तत्रोपलभ्यते तथा दूर्वा अपीत्यादिनाऽवधित्वमेवोपपादितम् ।

तदुक्तम्, ''शृंगाच्छरोऽविलोमभ्यो दूर्वा गोमयतस्तथा ।
वृश्चिकश्चेत्येवमाद्येष्वपादानत्वमिष्यते ।।'' इति ।

**।। अनेकार्थत्वादिति ।।** उपादानत्ववद्धेतुत्वस्यापि पंचम्यर्थत्वात् । नचानुशासनाभावः । ''तदशिष्यं संज्ञाप्रमाणत्वात्'' ''कृत्त्वं कस्मान्न भवति भूत्वात्''इत्यादिपाणिनिभाष्यकारादिप्रयोगप्रमाणबलेन हेतुत्वस्यापि पंचम्यर्थत्वावगमादिति । **वृत्ताविति** ।। तथाच प्रकृतिपदं हेतुमात्रपरं न तूपादानपरमिति न तवेष्टसिद्धिरिति भावः । ननु ''श्रृंगाच्छरो जायत'' इत्यादौ पंचम्या उपादानत्वं प्रतीयत इत्याशंक्याह— **शृंगादित्यादिना । अत एवेति ।।** उपादानत्वेन पंचम्यर्थत्वाभावादित्यर्थः । अवक्तुमितिच्छेदः ।



**ಬ್ರಹ್ಮ ಜಗದುಪಾದಾನವೆಂಬಲ್ಲಿ ಪ್ರಮಾಣವಿಲ್ಲ**

**ಕಿಂಚ ಉಪಾದಾನತ್ವೇ ನ ತಾವತ್ 'ಆತ್ಮನ ಆಕಾಶಃ ಸಂಭೂತಃ' 'ಯತೋ ವಾ' ಇತ್ಯಾದಿ ಪಂಚಮೀಶ್ರುತಿಃ ಮಾನಂ । ತಸ್ಯಾ ಅನೇಕಾರ್ಥತ್ವಾತ್ ।।**

ಉಪಾದಾನತ್ವ ವಿಷಯದಲ್ಲಿ ಪ್ರಮಾಣ ಲಭ್ಯವಿಲ್ಲ. ಮೊದಲಿಗೆ, 'ಆತ್ಮನಿಂದ ಆಕಾಶ ಉಂಟಾಯಿತು' 'ಯಾವ ಬ್ರಹ್ಮನಿಂದ ಸೃಷ್ಟಿಯಾಗುವುದೋ ಅವನ ಬಗ್ಗೆ ವಿಚಾರ ಮಾಡಬೇಕು' ಎಂಬ ಶ್ರುತಿವಾಕ್ಯಗಳಲ್ಲಿ 'ಆತ್ಮನಃ' ಆತ್ಮನಿಂದ ಎಂದೂ, 'ಯತಃ' ಯಾವ ಬ್ರಹ್ಮನಿಂದ ಎಂದೂ ಪಂಚಮೀವಿಭಕ್ತಿ ಉಪಾದಾನತ್ವವನ್ನು ಹೇಳುತ್ತದೆ, ಬ್ರಹ್ಮನು ಪ್ರಪಂಚಕ್ಕೆ ಉಪಾದಾನ ಎನ್ನುತ್ತದೆ. ಏಕೆಂದರೆ 'ಜನಿಕರ್ತುಃ ಪ್ರಕೃತಿಃ' ಎಂಬ ಪಾಣಿನಿಸೂತ್ರವು 'ಜನಿಸುವ ವಸ್ತುವಿಗೆ 'ಪ್ರಕೃತಿ' ಉಪಾದಾನಕಾರಣವಾದ ಹೇತು ಏನಿದೆಯೋ ಅದು ಅಪಾದಾನವೆನಿಸುತ್ತದೆ' ಎಂದು ಉಪಾದಾನಕ್ಕೆ ಅಪಾದಾನ ಸಂಜ್ಞೆಯನ್ನು ವಿಧಾನ ಮಾಡಿದೆ. 'ಅಪಾದಾನೇ ಪಂಚಮೀ' ಎಂದು ಸೂತ್ರವು ಅಪಾದಾನಾರ್ಥದಲ್ಲಿ ಪಂಚಮೀವಿಭಕ್ತಿಯನ್ನು ವಿಧಾನ ಮಾಡಿದೆ. 'ಬ್ರಹ್ಮಣಃ ಪ್ರಜಾಃ ಪ್ರಜಾಯಂತೇ' 'ಬ್ರಹ್ಮನಿಂದ ಪ್ರಾಣಿಗಳು ಹುಟ್ಟುತ್ತವೆ' ಎಂದು ಉದಾಹರಣೆ. ಇಲ್ಲಿ ಪಂಚಮಿಯು 'ಹುಟ್ಟುವ ಪ್ರಾಣಿಗಳಿಗೆ ಬ್ರಹ್ಮನು ಉಪಾದಾನ' ಎಂದು ತಿಳಿಸುತ್ತಿದೆ. ಹೀಗಾಗಿ ಬ್ರಹ್ಮನು ಜಗತ್ತಿಗೆ ಉಪಾದಾನವೆನ್ನುವಲ್ಲಿ ಶ್ರುತಿಗಳಲ್ಲಿ ಬರುವ ಪಂಚಮೀ ವಿಭಕ್ತಿಯೇ ಪ್ರಮಾಣ' ಎಂದು ಅದ್ವೈತಿಗಳು ಹೇಳುತ್ತಾರೆ.

ಇದು ಸರಿಯಲ್ಲ. ಪಂಚಮೀ ವಿಭಕ್ತಿಗೆ ಅನೇಕ ಅರ್ಥಗಳಿವೆ. ಉಪಾದಾನ ಒಂದೇ ಅರ್ಥವಲ್ಲ. 'ತದಶಿಷ್ಯಂ ಸಂಜ್ಞಾಪ್ರಮಾಣತ್ವಾತ್' 'ಲೋಕವ್ಯವಹಾರವೇ ಪ್ರಮಾಣವಾಗುವುದರಿಂದ ಶಾಸ್ತ್ರವು ಲಿಂಗಸಂಖ್ಯೆಗಳನ್ನು ಬೇರೆ ಹೇಳಬೇಕಾಗಿಲ್ಲ' ಎಂದು ಪಾಣಿನಿಯು ಹೇತ್ವರ್ಥದಲ್ಲಿ ಪಂಚಮೀಪ್ರಯೋಗ ಮಾಡಿದ್ದಾನೆ. 'ಕೃತ್ತ್ವಂ ಕಸ್ಮಾನ್ನ ಭವತಿ ಭೂತ್ವಾತ್' ಎಂದು ಭಾಷ್ಯಕಾರನೂ

ಪ್ರಯೋಗ ಮಾಡಿದ್ದಾನೆ. 'ಹಿಮವತೋ ಗಂಗಾ ಪ್ರಭವತಿ' 'ಹಿಮಾಲಯದಿಂದ ಗಂಗಾನದಿ ಉದ್ಭವಿಸುತ್ತದೆ' ಎಂಬಲ್ಲಿ 'ಹಿಮವತಃ' ಎಂಬ ಪಂಚಮಿಯು ಉಪಾದಾನಾರ್ಥದಲ್ಲಿ ಬಂದಿಲ್ಲ. 'ಭುವಃ ಪ್ರಭವಃ' ಉದ್ಭವಿಸುವ ವಸ್ತುವಿಗೆ ಉದ್ಭವಸ್ಥಾನವೆನಿದೆಯೋ, ಅದು ಅಪಾದಾನವೆನಿಸುತ್ತದೆ ಎಂದು ಪಾಣಿನಿ ಸೂತ್ರದಿಂದ ಉದ್ಭವಸ್ಥಾನವೆಂಬ ಅರ್ಥದಲ್ಲಿ ಅಪಾದಾನ ಸಂಜ್ಞೆ ಬಂದಿದೆ.

'ಪುಣ್ಯಾತ್ ಸುಖಂ' ಪುಣ್ಯದಿಂದ ಸುಖ, 'ಧೂಮಾದ್ ಅಗ್ನಿಮಾನ್' ಹೊಗೆಯಿಂದ ಬೆಂಕಿ ತಿಳಿದುಬರುತ್ತದೆ', 'ನಾಸ್ತಿ ಘಟೋಽನುಪಲಬ್ಧೇಃ' 'ಘಟ ಕಾಣಿಸುತ್ತಿಲ್ಲವಾದ್ದರಿಂದ ಇಲ್ಲ' ಇತ್ಯಾದಿ ಕಡೆಗಳಲ್ಲಿ ಕೇವಲ ಜ್ಞಾಪಕ ಹೇತು ಎಂಬ ಅರ್ಥದಲ್ಲಿ ಪಂಚಮಿವಿಭಕ್ತಿಯು 'ವಿಭಾಷಾ ಗುಣೇಽಸ್ತ್ರಿಯಾಂ' ಎಂಬ ಸೂತ್ರದಿಂದ ವಿಹಿತವಾಗಿದೆ.

ಹೀಗೆ ಪಂಚಮಿಗೆ ಉಪಾದಾನ ಮಾತ್ರವಲ್ಲದೆ ಬೇರೆಯೂ ಅನೇಕ ಅರ್ಥಗಳಿವೆ. ಆದರಿಂದ 'ಯತೋ ವಾ' ಎಂಬಲ್ಲಿ ಪಂಚಮೀವಿಭಕ್ತಿ ಇದ್ದಮಾತ್ರಕ್ಕೇ ಉಪಾದಾನ ಉಕ್ತವಾಗಿದೆ ಎನ್ನುವಂತಿಲ್ಲ.

**ಅಪಾದಾನಾರ್ಥತ್ವೇಽಪಿ 'ಧ್ರುವಮಪಾಯೇಽಪಾದಾನಂ' ಇತ್ಯನೇನ ಅಪಾದಾನ ಸಂಜ್ಞಾ ಸಂಭವಾಚ್ಚ ।**

ಅಪಾದಾನಾರ್ಥತ್ವವಿಟ್ಟುಕೊಂಡರೂ 'ಧ್ರವಮಪಾಯೇಽಪಾದಾನಂ' ಎಂಬ ಸೂತ್ರದಲ್ಲಿ 'ಧ್ರುವಂ' ಎಂಬ ಅವಧಿತ್ವವನ್ನೇ ಅಪಾದಾನ ಪಂಚಮ್ಯರ್ಥ ಎಂದಿದೆ. ಪಂಚಮಿಗೆ ಈ ಅರ್ಥವಿಟ್ಟುಕೊಂಡರೂ ಈ ಅವಧಿತ್ವವು ಬ್ರಹ್ಮನಿಗೆ ಯುಕ್ತವೆ. 'ಬ್ರಹ್ಮಣಃ ಪ್ರಜಾಃ ಪ್ರಜಾಯಂತೇ' ಎಂಬಲ್ಲಿ ಪ್ರಜೆಗಳಿಗೆ ಚತುರ್ಮುಖ ಬ್ರಹ್ಮನಿಂದ ವಿಶ್ಲೇಷವಿಟ್ಟುಕೊಂಡು ಅವಧಿ ಎನ್ನಲು ಬರುತ್ತದೆ. ಪರಬ್ರಹ್ಮನನ್ನು ಉಪಾದಾನವೆಂದಿಟ್ಟುಕೊಳ್ಳಬೇಕಾಗಿಲ್ಲ.

'ಜನಿಕರ್ತುಃ ಪ್ರಕೃತಿಃ' ಎಂಬ ಸೂತ್ರದಿಂದ 'ಪ್ರಕೃತಿ'ಗೆ ಅಂದರೆ ಉಪಾದಾನಕ್ಕೆ ಅಪಾದಾನಸಂಜ್ಞೆ ಇಟ್ಟುಕೊಂಡು ಯತ್‌ಶಬ್ದಕ್ಕೆ ಪಂಚಮೀವಿಭಕ್ತಿಯನ್ನು ಸೇರಿಸಿದರೆ ಪರಬ್ರಹ್ಮನಿಗೆ ಉಪಾದಾನತ್ವವು ಸುಲಭವಾಗಿ ಶ್ರುತಿಯಲ್ಲಿ ಲಭ್ಯವಾಗುತ್ತದೆ. ಸೂತ್ರದಲ್ಲಿ ಪ್ರಕೃತಿಶಬ್ದದ ಮುಖ್ಯಾರ್ಥವು ಉಪಾದಾನವೇ ಹೊರತು ಸಾಮಾನ್ಯ ಹೇತುವಲ್ಲ. ಹೇತುಸಾಮಾನ್ಯ ಎಂಬ ಅರ್ಥ ಸಿಗಬೇಕಾದರೆ ಪ್ರಕೃತಿಶಬ್ದಕ್ಕೆ ಲಕ್ಷಣಾ ಮಾಡಬೇಕಾಗುತ್ತದೆ' ಎಂದು ಅದ್ವೈತಿಗಳು ಹೇಳಿದರೆ ಅದು ವೈಯಾಕರಣರಿಗೇ ಸಮ್ಮತವಾಗುವುದಿಲ್ಲ—

**'ಜನಿಕರ್ತುಃ' ಇತ್ಯನೇನ ಅಪಾದಾನ ಸಂಜ್ಞಾಯಾಮಪಿ ವೃತ್ತೌ 'ಪುತ್ರಾತ್ ಪ್ರಮೋದೋ ಜಾಯತೇ' ಇತ್ಯಸ್ಯಾಪಿ ಉದಾಹೃತತ್ವಾತ್ ।**

'ಜನಿಕರ್ತುಃ ಪ್ರಕೃತಿಃ' ಎಂಬ ಸೂತ್ರದಿಂದಲೇ ಅಪಾದಾನ ಸಂಜ್ಞೆ ಇಟ್ಟುಕೊಂಡರೂ ಅದು ಉಪಾದಾನಕ್ಕೇ ವಿಹಿತವೆನ್ನುವಂತಿಲ್ಲ. ನಿಮಿತ್ತಕ್ಕೂ ವಿಹಿತವಾಗಬಹುದು. ಏಕೆಂದರೆ ಪಾಣಿನಿಸೂತ್ರ ಕಾಶಿಕಾವೃತ್ತಿಯಲ್ಲಿ ಈ ಸೂತ್ರಕ್ಕೆ ಉದಾಹರಣೆ ಕೊಡುವಾಗ 'ಪುತ್ರಾತ್ ಪ್ರಮೋದೋ ಜಾಯತೇ'

'ಮಗನಿಂದ ಸಂತೋಷ ಉಂಟಾಗುತ್ತದೆ' ಎಂದು ಉದಾಹರಣೆ ನೀಡಿದ್ದಾರೆ. ಇಲ್ಲಿ ಮಗನು ತಂದೆಯ ಸಂತೋಷಕ್ಕೆ ನಿಮಿತ್ತಕಾರಣವೇ ಹೊರತು ಉಪಾದಾನಕಾರಣವಲ್ಲ. ಆದರಿಂದ 'ಯತೋ ವಾ' ಶ್ರುತಿಯಲ್ಲಿ ಬರುವ ಪಂಚಮೀವಿಭಕ್ತಿಯು 'ಬ್ರಹ್ಮನು ಜಗದುಪಾದಾನ'ವೆನ್ನುವಲ್ಲಿ ಪ್ರಮಾಣವಾಗುವುದಿಲ್ಲ. 'ಬ್ರಹ್ಮನು ಜಗತ್ತಿಗೆ ನಿಮಿತ್ತ' ಎಂದೇ ಶ್ರುತಿ ಹೇಳುತ್ತಿರಬಹುದು.

**ನ್ಯಾಸೇಽಪಿ 'ಪ್ರಕೃತಿಪದಂ ಹೇತುಮಾತ್ರಪರಂ' ಇತ್ಯಾಶ್ರಿತ್ಯ 'ಅಸತಿ ಪ್ರಕೃತಿ ಗ್ರಹಣೇ ಉಪಾದಾನಸ್ಯೈವ ಸ್ಯಾತ್ । ಪ್ರತ್ಯಾಸತ್ತೇಃ । ನೇತರಸ್ಯ । ಪ್ರಕೃತಿಗ್ರಹಣಾತ್ ಸರ್ವಸ್ಯ ಕಾರಣಸ್ಯ ಭವತಿ ಇತಿ, ಪ್ರಕೃತಿ ಪದಂ 'ಪುತ್ರಾತ್ ಪ್ರಮೋದೋ ಜಾಯತೇ'ಇತ್ಯಾದೌ ಅನುಪಾದಾನೇಽಪಿ ಅಪಾದಾನಸಂಜ್ಞಾರ್ಥಂ' ಇತ್ಯುಕ್ತತ್ವಾತ್ ।**

ಕಾಶಿಕಾವೃತ್ತಿ ವ್ಯಾಖ್ಯಾನವಾದ ನ್ಯಾಸದಲ್ಲಿಯೂ, ಸೂತ್ರದಲ್ಲಿ ಪ್ರಕೃತಿಶಬ್ದವು ಹೇತುಮಾತ್ರ ಪರವಾದ್ದರಿಂದ ಪ್ರಕೃತಿಶಬ್ದದಿಂದ ನಿಮಿತ್ತಕಾರಣವನ್ನೂ ಇಟ್ಟುಕೊಳ್ಳಬಹುದು, ಎಂಬ ಅಭಿಪ್ರಾಯ ವಿಟ್ಟುಕೊಂಡು ಹೇಳಿದೆ—'ಸೂತ್ರದಲ್ಲಿ 'ಪ್ರಕೃತಿ' ಶಬ್ದವನ್ನು ಹೇಳದೆ, ಅದರ ಬದಲು 'ಹೇತು' ಎಂದಿದ್ದರೆ, ಅದಕ್ಕೆ ಉಪಾದಾನ ಎಂದೇ ಅರ್ಥವಾಗುತ್ತಿತ್ತು. ಉಪಾದಾನಕ್ಕೇ ಅಪಾದಾನ ಸಂಜ್ಞೆ, ಹೊರತು ನಿಮಿತ್ತಕಾರಣಕ್ಕೆ ಅಲ್ಲ ಎಂದ ಹೇಳಿದಂತಾಗುತ್ತಿತ್ತು. ಏಕೆಂದರೆ 'ಹೇತು' ಎಂದರೆ ಮುಖ್ಯವಾಗಿ ಉಪಾದಾನವೆ. ಉಪಾದಾನವೇ ಕಾರ್ಯಕ್ಕೆ ಹತ್ತಿರದ ಸಂಬಂಧಿ. ನಿಮಿತ್ತವು ದೂರದ ಸಂಬಂಧಿ. ಹೀಗಾಗಿ ಸೂತ್ರದಲ್ಲಿ 'ಹೇತು' ಎಂದು ಹೇಳದೆ 'ಪ್ರಕೃತಿ' ಎಂದೇ ಹೇಳಿದೆ. 'ಪ್ರಕೃತಿ' ಎಂದಿದ್ದರಿಂದ ಹೇತುಸಾಮಾನ್ಯಲಕ್ಷಣಯಾ ಹೇತುಸಾಮಾನ್ಯಗ್ರಹಣ ಮಾಡುವುದು ಶಕ್ಯವಿದೆ' ಎಂದು.

**'ಶೃಂಗಾತ್ ಶರೋ ಜಾಯತೇ' 'ಗೋಲೋಮಾವಿಲೋಮಭ್ಯೋ ದೂರ್ವಾ ಜಾಯಂತೇ' ಇತ್ಯಾದಾವಪಿ ಶರಾಂಕುರಂ ಪ್ರತಿ ಉಪಾದಾನಭೂತೋ ಯಃ ಶೃಂಗೈಕ ದೇಶಃ, ತತ್ಸಂಸೃಷ್ಟಂ ಶೃಂಗೈಕದೇಶಾಂತರಂ ಶರಾಂಕುರನಿಮಿತ್ತಮಸ್ತಿ । ಮಾಷಾಂಕುರೋಪಾದಾನಭೂತೋ ಯಃ ತುಷಾಂತಃ ಅವಸ್ಥಿತೋ ಮಾಷಭಾಗಃ ತತ್ಸಂಸೃಷ್ಟೋ ಮಾಷಾಂಕುರನಿಮಿತ್ತಭೂತಃ ತುಷಭಾಗ ಇವ ಅಪರಿಣತ ಶೃಂಗಭಾಗಸ್ಯ ಅನುಭವಾತ್ । ತದೇವ ಶೃಂಗಾದಿತಿ ಪಂಚಮ್ಯಂತೇನೋಚ್ಯತೇ ।**

ಇಲ್ಲಿ ಬಾಲಮನೋರಮಾಕಾರ ಹೇಳುತ್ತಾನೆ—

'ಜನಿಕರ್ತುಃ ಪ್ರಕೃತಿಃ' ಎಂಬ ಸೂತ್ರಕ್ಕೆ 'ಪುತ್ರಾತ್ ಪ್ರಮೋದೋ ಜಾಯತೇ' ಎಂದು ವೃತ್ತಿಕಾರನು ಉದಾಹರಣೆ ಕೊಟ್ಟಿದ್ದು ಸರಿಯಲ್ಲ.

ಈ ಸೂತ್ರವು ಉಪಾದಾನಕ್ಕೇ ಅಪಾದಾನಸಂಜ್ಞೆ ಎನ್ನುತ್ತಿದೆ. ನಿಮಿತ್ತಕಾರಣಕ್ಕೆ ಅಪಾದಾನಸಂಜ್ಞೆ ವಿಧಾನಮಾಡುತ್ತಿದ್ದರೆ ಅದು ವ್ಯರ್ಥವಾಗುತ್ತದೆ. ನಿಮಿತ್ತಕಾರಣಕ್ಕೆ ಕಾರ್ಯದಿಂದ

ಪ್ರತ್ಯಕ್ಷ ವಿಭಾಗಾವಧಿತ್ವವೇ ಇರುವುದರಿಂದ 'ಧ್ರುವಮಪಾಯೇಽಪಾದಾನಂ' ಎಂಬ ಸೂತ್ರ ದಿಂದಲೇ ಅಪಾದಾನಸಂಜ್ಞೆ ಬಂದೀತು. ಆದರಿಂದ ಈ ಸೂತ್ರ ವ್ಯರ್ಥವಾದೀತು.

ಈ ಅಭಿಪ್ರಾಯ ಮಹಾಭಾಷ್ಯ ಕೈಯಟಗ್ರಂಥಕ್ಕೂ ಇದೆಯಾದ್ದರಿಂದಲೆ ಅಲ್ಲಿ 'ಗೋಲೋಮಾವಿಲೋಮಭ್ಯೋ ದೂರ್ವಾ ಜಾಯಂತೇ' ಇತ್ಯಾದಿ ಉದಾಹರಣೆ ಕೊಟ್ಟಿದ್ದಾರೆ. ಗೋಲೋಮಾದಿಗಳು ಉಪಾದಾನಕಾರಣವಾಗಿರುವುದರಿಂದ ಅವುಗಳಿಗೆ ಕಾರ್ಯವಿಭಾಗಾವಧಿ ತ್ವವಿಲ್ಲ. 'ಧ್ರುವಮಪಾಯೇಽಪಾದಾನಂ' ಎಂಬ ಸೂತ್ರದಿಂದ ಈ ಉಪಾದಾನಕ್ಕೆ ಅಪಾದಾನಸಂಜ್ಞೆ ಬರುವುದಿಲ್ಲ. ಆದರಿಂದ 'ಜನಿಕರ್ತುಃ ಪ್ರಕೃತಿಃ' ಎಂಬ ಸೂತ್ರ ಬೇಕಾಯಿತು.

ಹಾಗಾದರೆ 'ಜನಿಕರ್ತುಃ ಪ್ರಕೃತಿಃ' ಎಂಬ ಸೂತ್ರವನ್ನು ಬೇಡವೆಂದು ಭಾಷ್ಯದಲ್ಲಿ ನಿರಾಕರಿಸಿದ್ದು ಹೇಗೆ ಎಂದರೆ, ಉಪಾದಾನಕ್ಕೂ ಕೂಡ ಕಾರ್ಯದಿಂದ ಬುದ್ಧಿಕೃತ ವಿಶ್ಲೇಷಾವಧಿತ್ವವು ಯುಕ್ತವಾಗುವುದರಿಂದ 'ಧ್ರವಮಪಾಯೇಽಪಾದಾನಂ' ಸೂತ್ರವೇ ಸಾಕು' ಎಂಬ ಅಭಿಪ್ರಾಯ ಎಂದು ಬಾಲಮನೋರಮಾಕಾರ ಹೇಳುತ್ತಾನೆ.

ವಸ್ತುತಃ ವಿಚಾರಮಾಡಿದರೆ ಉಪಾದಾನಸ್ಥಳದಲ್ಲಿಯೂ ಕೂಡ ಕಾರ್ಯಕ್ಕೆ ಪ್ರತ್ಯಕ್ಷವಿಶ್ಲೇಷವೇ ಇದೆ. ಬೌದ್ಧಿಕ ವಿಶ್ಲೇಷವಲ್ಲ. ಏಕೆಂದರೆ, 'ಶೃಂಗಾತ್ ಶರೋ ಜಾಯತೇ' ಎಂದರೆ ಎಮ್ಮೆಯ ಕೊಂಬು ಮಣ್ಣಲ್ಲಿ ಸೇರಿದರೆ ಅದರ ಒಂದು ಭಾಗ ಮಾತ್ರ 'ಶರ' ಎಂಬ ದರ್ಭೆ ಹುಲ್ಲಿನ ಅಂಕುರವಾಗಿ ಜನಿಸುತ್ತದೆ. ಇನ್ನೊಂದು ಭಾಗ ಹಾಗೇ ಇರುವುದು ಅನುಭವ ಸಿದ್ಧವಾಗಿದೆ. 'ಗೋಲೋಮಾ ವಿಲೋಮಭ್ಯೋ ದೂರ್ವಾಜಾಯಂತೇ' ಎಂದರೂ ಹಸು ಆಡು ಕುರಿಗಳ ರೋಮಗಳು ಮಣ್ಣಲ್ಲಿ ಸೇರಿದಾಗ ಅವುಗಳಲ್ಲಿ ಕೆಲವು ಅಂಶ ಮಾತ್ರ ದೂರ್ವೆಯಾಗಿ ಪರಿಣಮಿಸುತ್ತವೆ. ಹೀಗಾಗಿ ಶೃಂಗ ಲೋಮಗಳು ಪೂರ್ತಿಯಾಗಿ ಶರಾಂಕುರ ದೂರ್ವಾಂಕುರಗಳಾಗುವುದಿಲ್ಲ. ಇದಕ್ಕೆ ಉದಾಹರಣೆ— ಉದ್ದಿನಕಾಳನ್ನು ಭೂಮಿಯಲ್ಲಿ ಬಿತ್ತಿದರೆ ಅದರ ಒಳಗಿನ ಒಂದು ಭಾಗ ಮಾತ್ರವೇ ಅಂಕುರಿಸುತ್ತದೆ, ಹೊರಗಿನ ಹೊಟ್ಟಿನ ಭಾಗ ಹಾಗೇ ಇರುವುದು ಕಂಡಿದೆ.

ಇಲ್ಲಿ ಎಲ್ಲ ಕಡೆ ಕಾರ್ಯರೂಪವಾಗಿ ಪರಿಣಮಿಸಿದ ಒಂದು ಭಾಗ ಮಾತ್ರ ಕಾರ್ಯಕ್ಕೆ ಉಪಾದಾನ ಕಾರಣ. ಉಳಿದ ಇನ್ನೊಂದು ಭಾಗ ನಿಮಿತ್ತವೆ. ನಿಮಿತ್ತಕ್ಕೆ ಕಾರ್ಯದಿಂದ ಪ್ರತ್ಯಕ್ಷ ವಿಶ್ಲೇಷವೇ ಇದೆ. ಅದು ಕೇವಲ ಬೌದ್ಧಿಕ ವಿಶ್ಲೇಷವಲ್ಲ. ಆದರಿಂದ 'ಧ್ರುವಮಪಾಯೇಽಪಾದಾನಂ' ಸೂತ್ರದಿಂದಲೇ ಅದಕ್ಕೆ ಅಪಾದಾನ ಸಂಜ್ಞೆ ಬರುತ್ತಿರುವಾಗ 'ಜನಿಕರ್ತುಃ ಪ್ರಕೃತಿಃ' ಎಂಬ ಸೂತ್ರ ವ್ಯರ್ಥವೇ ಎಂದು ಭಾಷ್ಯಕೈಯಟಗಳ ಅಭಿಪ್ರಾಯ.

'ಶೃಂಗಾತ್' ಎಂದರೆ ಪೂರ್ತಿಯಾಗಿ ಕೊಂಬು ವಿವಕ್ಷಿತವಲ್ಲ. ಶರಾಂಕುರವಾಗಿ ಪರಿಣಮಿಸದಿರುವ ಕೊಂಬಿನ ಭಾಗವು ವಿವಕ್ಷಿತ. ಅದು ಶರಾಂಕುರಕ್ಕೆ ವಿಶ್ಲೇಷಾವಧಿ ನಿಮಿತ್ತಕಾರಣ ಎಂದರ್ಥ. ಅದು ಶರಾಂಕುರದ ವಿಶ್ಲೇಷಕ್ಕೆ ಅವಧಿಯಾಗಿರುವುದರಿಂದಲೇ 'ಶೃಂಗಾತ್' ಎಂದು ಪಂಚಮೀವಿಭಕ್ತಿಯು ಅಪಾದಾನಾರ್ಥದಲ್ಲಿ ಸಂಗತವಾಗುತ್ತದೆ.

ಶರಾಂಕುರವಾಗಿ ಪರಿಣಮಿಸುವ ಶೃಂಗದ ಇನ್ನೊಂದು ಉಪಾದಾನಭಾಗವನ್ನು 'ಶೃಂಗಾತ್' ಎಂಬಲ್ಲಿ 'ಶೃಂಗ' ಶಬ್ದ ಹೇಳುವುದೇ ಇಲ್ಲ. ಹೇಳಿದರ ಅಪಾದಾನಸಂಜ್ಞೆ ಅದಕ್ಕೆ ಬರಲಾರದು, ಪಂಚಮೀ ಬರಲಾರದು. ಉಪಾದಾನ ಬೇರೆ, ಅಪಾದಾನವೇ ಬೇರೆ. ಅವುಗಳು ವಿರುದ್ಧಾರ್ಥಪದಗಳು. ಉಪಾದಾನವೆಂದರೆ ಸ್ವೀಕಾರ. ಅಪಾದಾನವೆಂದರೆ ತಿರಸ್ಕಾರ, ತ್ಯಾಗ. ಕಾರ್ಯವು ತನ್ನೊಳಗೆ ಉಪಾದಾನವನ್ನು ಸ್ವೀಕರಿಸುತ್ತದೆ, ಅಪಾದಾನವನ್ನು ಬಿಟ್ಟು ಬಿಡುತ್ತದೆ.

'ಜನಿಕರ್ತುಃ ಪ್ರಕೃತಿ' ಎಂಬಲ್ಲಿ ಪ್ರಕೃತಿ ಪದವು ಉಪಾದಾನ ಮತ್ತು ಅಪಾದಾನ ಸಾಧಾರಣವಾಗಿ ಹೇತುಸಾಮಾನ್ಯ ಅರ್ಥದಲ್ಲಿ ಲಾಕ್ಷಣಿಕ ಎಂದು ಹಿಂದೆ ನಾವು ಹೇಳಿದ್ದು ಅಭ್ಯುಪಗಮವಾದ. 'ಪುತ್ರಾತ್ ಪ್ರಮೋದೋ ಜಾಯತೇ' ಇತ್ಯಾದಿ ಉದಾಹರಣೆಗಳಲ್ಲಿ ಪಂಚಮೀ ವಿಭಕ್ತಿಯನ್ನು 'ಹೇತುಸಾಮಾನ್ಯಾರ್ಥದಲ್ಲಿ ಇಟ್ಟುಕೊಂಡರೂ ಕೂಡಿಸಬಹುದು' ಎಂದು ಅಭಿಪ್ರಾಯ. ವಸ್ತುತಃ ಉಪಾದಾನಾರ್ಥದಲ್ಲಿ ಪಂಚಮೀಪ್ರಯೋಗವೇ ಇಲ್ಲ. ಹಾಲಿನಿಂದ ಮೊಸರು ಹುಟ್ಟುವುದಿಲ್ಲ. ಹಾಲೇ ಮೊಸರಾಗುತ್ತದೆ.

**ಅತ ಏವ ಮಹಾಭಾಷ್ಯೇ 'ಅಯಮಪಿ ಯೋಗಃ ಶಕ್ಯಃ ಅವಕ್ತುಂ। ಗೋಲೋಮಾವಿಲೋಮಭ್ಯೋ ದೂರ್ವಾ ಜಾಯಂತೇ ಅಪಕ್ರಾಮಂತಿ ತಾಸ್ತೇಭ್ಯಃ' ಇತ್ಯಾದಿನಾ ಲೋಮಾದೀನಾಂ ದೂರ್ವಾದೀನ್ ಪ್ರತಿ ಅವಧಿತ್ವಾತ್ ಧ್ರುವಮಪಾಯೇಽಪಾದಾನಂ ಇತ್ಯನೇನೈವ ಅಪಾದಾನ ಸಂಜ್ಞಾಸಿದ್ಧೇಃ ಇದಂ ಸೂತ್ರಂ ಪ್ರತ್ಯಾಖ್ಯಾತಂ।**

ಈ ಅಭಿಪ್ರಾಯದಿಂದಲೇ ಮಹಾಭಾಷ್ಯದಲ್ಲಿ ಹೇಳಿದೆ—'ಅಯಮಪಿ ಯೋಗಃ' 'ಜನಿಕರ್ತುಃ ಪ್ರಕೃತಿಃ' ಎಂಬ ಈ ಸೂತ್ರವನ್ನೂ ಕೂಡ 'ಶಕ್ಯಃ ಅವಕ್ತುಂ' ಅಷ್ಟಾಧ್ಯಾಯಿಯಲ್ಲಿ ಹೇಳದಿರಲು ಶಕ್ಯವಿದೆ. ಏಕೆಂದರೆ 'ಹಸು ಆಡು ಕುರಿಗಳ ರೋಮಗಳಿಂದ ದೂರ್ವೆ ಹುಲ್ಲು ಹುಟ್ಟುತ್ತವೆ' ಎಂದರೆ 'ದೂರ್ವೆಯಾಗಿ ಪರಿಣಮಿಸದಿದ್ದ ಲೋಮಭಾಗದಿಂದ, ಪರಿಣಮಿಸಿದ ಭಾಗಗಳು 'ಅಪಕ್ರಾಮಂತಿ' ಈಚೆಗೆ ಬರುತ್ತವೆ' ಎಂದರ್ಥ ಎಂದು. ದೂರ್ವೆಯಾಗಿ ಪರಿಣಮಿಸದಿದ್ದ ಲೋಮಭಾಗಗಳು ದೂರ್ವೆಗೆ ವಿಶ್ಲೇಷಾವಧಿಯಾದ್ದರಿಂದ 'ಧ್ರುವಮಪಾಯೇಽ-ಪಾದಾನಂ' ಎಂಬ ಸೂತ್ರದಿಂದಲೇ 'ಲೋಮಭ್ಯಃ' ಎಂದು ಲೋಮಗಳಿಗೆ ಅಪಾದಾನಸಂಜ್ಞೆ ಸಿದ್ಧವಾಗುವಾಗ 'ಜನಿಕರ್ತುಃ ಪ್ರಕೃತಿಃ' ಎಂಬ ಸೂತ್ರ ಬೇರೆ ಬೇಕಾಗಿಲ್ಲ ಎಂದಿದೆ.

**ಕೈಯಟೇಽಪಿ 'ಯಥಾ ಬಿಲಾದ್ ದೀರ್ಘಭೋಗೋ ಭೋಗೀ ನಿಷ್ಕ್ರಾಮನ್ನಪಿ ಅವಿಚ್ಛೇದಾತ್ ತತ್ರೋಪಲಭ್ಯತೇ ತಥಾ ದೂರ್ವಾ ಅಪಿ' ಇತ್ಯಾದಿನಾ ಅವಧಿತ್ವಮೇವ ಉಪಪಾದಿತಂ।**

ಒಂದು ಉದ್ದದ ಹಾವು ಭಾಗಶಃ ಬಿಲದಿಂದ ಸ್ವಲ್ಪ ಹೊರಗೆ ಬಂದಿದ್ದಾಗಲೂ ಕೂಡ 'ಹಾವು ಬಿಲದಲ್ಲಿದೆ' ಎನ್ನುತ್ತೇವೆ. ಹೊರಗೆ ಬಂದ ಭಾಗವು ಒಳಗಿರುವ ಭಾಗದಿಂದ ಬೇರ್ಪಡದಿರುವುದು

ಇದಕ್ಕೆ ಕಾರಣ. ಇದು ಲೋಕದಲ್ಲಿ ಕಂಡಿದೆ. ಹಾಗೇ ದೂರ್ವೆಯು ಕೂಡ ನಿಮಿತ್ತವಾದ ರೋಮಭಾಗದಿಂದ ಈಚೆಗೆ ಬಂದಿದ್ದರೂ ಅಲ್ಲೇ ಇದೆ ಎಂದು ನಾವು ಹೇಳುವುದಕ್ಕೂ ಉಪಾದಾನ ಭಾಗವು ನಿಮಿತ್ತ ಭಾಗದಿಂದ ಬೇರ್ಪಡದಿರುವುದೇ ಕಾರಣ. 'ತಾರ್ಕಿಕರು ನಿಮಿತ್ತ ಭಾಗದಿಂದ ಉಪಾದಾನ ಭಾಗ ಈಚೆಗೆ ಬರುವುದೇ ಇಲ್ಲ ಎಂದು ತಪ್ಪಾಗಿ ತಿಳಿದಿದ್ದಾರೆ. ಅದನ್ನೇ ನಂಬಿ, 'ಅಪಕ್ರಾಮಂತಿ ತಾಸ್ತೇಭ್ಯಃ' ಎಂದು ಭಾಷ್ಯಕಾರ ಹೇಳಿದ್ದನ್ನೇ ತಪ್ಪೆಂದು ನಾವು ತಿಳಿಯಬಾರದು' ಎನ್ನುತ್ತಾನೆ ಕೈಯಟ! ನಿಮಿತ್ತಭಾಗಕ್ಕೆ ಅವಧಿತ್ವವನ್ನು ಸೋದಾಹರಣವಾಗಿ ಆತ ಸಮರ್ಥಿಸುತ್ತಾನೆ.

ತದುಕ್ತಂ—

ಶೃಂಗಾಚ್ಛರೋಽವಿಲೋಮಭ್ಯೋ ದೂರ್ವಾ ಗೋಮಯತಸ್ತಥಾ ।
ವೃಶ್ಚಿಕಶ್ಚೇತ್ಯೇವಮಾದ್ಯೇಷ್ವಪಾದಾನತ್ವಮಿಷ್ಯತೇ ॥ ಇತಿ ।

ಪ್ರಕೃತ್ಯಧಿಕರಣ ಅನುವ್ಯಾಖ್ಯಾನದಲ್ಲಿ ಇದನ್ನು ಹೀಗೆ ಹೇಳಿದ್ದಾರೆ—ಶೃಂಗದಿಂದ ಶರ, ಕುರಿ ರೋಮಗಳಿಂದ ದೂರ್ವೆ, ಗೋಮಯದಿಂದ ಚೇಳು ಇತ್ಯಾದಿ ಉದಾಹರಣೆಗಳಲ್ಲಿ ಪಂಚಮಿ ವಿಭಕ್ತಿಯಿಂದ ಶೃಂಗ-ರೋಮ-ಗೋಮಯಗಳಿಗೆ ಹುಲ್ಲು-ದೂರ್ವೆ-ಚೇಳುಗಳ ಅಪಾದಾನ ಕಾರಣತ್ವವೇ ಉಕ್ತವಾಗಿದೆ. ಅದೇ ಬ್ರಹ್ಮ ಜಗತ್ತಿಗೆ ಅಪಾದಾನವೆನ್ನುವಲ್ಲಿ ಉದಾಹಣೆ ಎಂದು.



अत एवाकाशाद्वायुरित्याद्युपादानपंचमीसाहचर्यात् आत्मन इत्यप्युपादानपंचमीति निरस्तम् । आकाशादित्यादावपि निमित्तांशस्यैव पंचमीनिर्देशात् । अन्यथा संभूतइत्ययुक्तम् । नहि शुक्ते रूप्यं संभूतमित्युच्यते ।

नापि ''सोऽकामयत बहु स्यां प्रजायेयेति स तपोऽतप्यत स तपस्तप्त्वा इदं सर्वमसृजत यदिदं किंच तत्सृष्ट्वा तदेवानु प्राविशत् तदनु प्रविश्य सच्च त्यच्चाभवत्'' इतिश्रुतिस्तत्र मानम् । सदादिभवनस्य जगत्सृष्टितदनुप्रवेशानंतरभावित्वेन जगत्सृष्टित्वा-नुपपत्त्या परमेश्वरस्य सत्त्वादिगुणाभिव्यक्ति परत्वात् । अन्यथाऽभवदित्ययुक्तम् । नहि शुक्तौ रूप्यमभवदित्युच्यते । मूर्तामूर्तात्मकप्रपंचस्य सत्त्यत्पदाभ्यामेवोक्तत्वेन ''निरुक्तं चानिरुक्तं च निलयनं चानिलयनं च'' इत्यादिवाक्यशेषस्थ-

**निरुक्तादिपदवैयर्थ्यं च । ''सोऽकामयत बहु स्याम्'' इत्यादि तु परमेश्वरस्य ''अजायमानो बहुधा विजायते'' ''यदेकमव्यक्त-मनंतरूपम्'' इत्यादिश्रुतिसिद्धतत्तदनन्तपदार्थप्रेरकानंतरूपैर्बहु-भावसंकल्पमाह । न च स्वस्यानंतरूपैर्बहुभावं संकल्प्य ''इदं सर्वमसृजत'' इति प्रपंचसर्जनानुपपत्तिः । नियामकरूपैर्बहुभावस्य नियम्यसापेक्षत्वात् नियम्यं सर्वं सृष्ट्वा नियामकरूपैः प्रवेशोत्त्युपपत्तेः ।**

**उक्तं हि- ''बहु स्यामिति संकल्प्य तेजः प्रभृतिसर्जनम् ।**
**गुरुः स्यामिति संकल्प्य शिष्यसंपादनादिवत् ।।''**
**इति ।**

**अन्यथा स्यामिति सत्त्वोक्तिरयुक्ता । स्यामिति संकल्पितस्य सत्त्यदादिभवनस्य ''सच्च त्यच्चाभवत्'' इत्यनेनैवोक्तत्वेनेदं सर्वमसृ-जतेत्यादिवैयर्थ्यं च । सृष्टेः पूर्वमंतःकरणाभावेन तद्विशिष्टाहमर्था-भावादुत्तमपुरुषानुपपत्तिश्च । एतेन ''तदैक्षत बहु स्यां प्रजायेय'' इत्येतदपि व्याख्यातम् ।**

ननु यदि ''सच्च त्यच्चाभवत्'' इति वाक्येन ब्रह्मणः प्रपंचभावेन बहुरूपत्वं न स्यात्, तर्हि बहु स्यामिति बहुभावसंकल्पो न स्यादित्याशंक्याह— **सोऽकामयतेति। अन्यथेति** ।। बहु स्यामिति संकल्पस्य प्रपंचरूपेण बहुभावपरत्वे प्रपंचस्यासत्त्वेन स्यामिति सत्त्वोक्तिरयुक्ता स्यादित्यर्थः ।। **सत्त्वोक्तिरिति** ।। भूतकालसंबंधवाचकलङा धातुमात्रेण वा कालसंबंधित्वरूपसत्तायाः प्रतीतत्वा-दिति ।।



ಅತ ಏವ 'ಆಕಾಶಾದ್ ವಾಯುಃ' ಇತ್ಯಾದ್ಯುಪಾದಾನ ಪಂಚಮೀ ಸಾಹಚರ್ಯಾತ್ 'ಆತ್ಮನಃ' ಇತ್ಯಪಿ ಉಪಾದಾನಪಂಚಮೀತಿ ನಿರಸ್ತಂ। 'ಆಕಾಶಾದ್' ಇತ್ಯಾದಾವಪಿ ನಿಮಿತ್ತಾಂಶಸ್ಯೈವ ಪಂಚಮೀನಿರ್ದೇಶಾತ್ ।

ಅದ್ವೈತಿ ಹೇಳುತ್ತಾನೆ— 'ಆಕಾಶಾದ್ ವಾಯುಃ ವಾಯೋರಗ್ನಿಃ' ಎಂದು ಮುಂತಾಗಿ ಆಕಾಶಾದಿಗಳು ವಾಯ್ವಾದಿಗಳಿಗೆ ಉಪಾದಾನ ಎಂದು ಪಂಚಮಿವಿಭಕ್ತಿಯು ಹೇಳುವುದರಿಂದ ಅವುಗಳ ಸಾಹಚರ್ಯದಿಂದ 'ಆತ್ಮನಃ ಆಕಾಶಃ ಸಂಭೂತಃ' ಎಂದು ಶ್ರುತಿಯಲ್ಲಿ ಕಾಣುವ ಪಂಚಮೀವಿಭಕ್ತಿಯೂ ಕೂಡ ಉಪಾದಾನಾರ್ಥಕವೇ ಆಗಬೇಕು. ಆದರಿಂದ ಅದು ಬ್ರಹ್ಮನು ಜಗದುಪಾದಾನ ಎಂಬ ವಿಷಯದಲ್ಲಿ ಪ್ರಮಾಣವಾಗುವುದು''ಎಂದು.

ಇಷ್ಟರವರೆಗೆ ಕೊಟ್ಟಿರುವ ವಿವರಣೆಯಿಂದ ಇದೂ ಸರಿಯಲ್ಲ ಎಂದು ಹೇಳಿದಂತಾಯಿತು. ಏನೆಂದರೆ 'ಆಕಾಶಾತ್ ವಾಯುಃ' ಎಂಬಲ್ಲಿಯೂ ಆಕಾಶವು ಪೂರ್ತಿಯಾಗಿ ವಾಯುವಾಗಿ ಪರಿಣಮಿಸಲಿಲ್ಲ. ಭಾಗಶಃ ಪರಿಣಮಿಸಿದೆ. ಪರಿಣಮಿಸದಿದ್ದ ಭಾಗ ಬೇರೆಯೇ ಇದೆ. ಅದು ಉಪಾದಾನವಲ್ಲ. ನಿಮಿತ್ತವಾಗಿದೆ, ಅಪಾದಾನವಾಗಿದೆ. ಅದನ್ನೇ ಪಂಚಮೀವಿಭಕ್ತಿ ಹೇಳುತ್ತದೆ.

**ಅನ್ಯಥಾ 'ಸಂಭೂತಃ' ಇತ್ಯಯುಕ್ತಂ । ನಹಿ 'ಶುಕ್ತೇಃ ರೂಪ್ಯಂ ಸಂಭೂತಂ' ಇತಿ ಉಚ್ಯತೇ ।**

ಇಡೀ ಶುಕ್ತಿಯೇ ರಜತಕ್ಕೆ ವಿವರ್ತ ಉಪಾದಾನವಾಗುವಂತೆ ಇಡೀ ಆತ್ಮವೇ ಆಕಾಶಕ್ಕೆ ವಿವರ್ತ ಉಪಾದಾನವೆಂದು ಪಂಚಮೀವಿಭಕ್ತಿಯು ಹೇಳಿದರೆ ಆಗ 'ಆಕಾಶಃ ಸಂಭೂತಃ' 'ಆಕಾಶ ಹುಟ್ಟಿತು' ಎಂದು 'ಸಂಭೂತ' ಶಬ್ದವು ಕೂಡುವುದಿಲ್ಲ. ಶುಕ್ತಿಯಿಂದ ರಜತವು 'ಹುಟ್ಟಿತು' ಎನ್ನುವುದಿಲ್ಲ. 'ಶುಕ್ತಿಯು ರಜತವಾಗಿ ಕಾಣಿಸಿಕೊಂಡಿತು' ಎಂದೇ ವ್ಯವಹಾರ. ಪರಿಣಾಮ್ಯುಪಾದಾನದಿಂದ ಕಾರ್ಯವು ಹುಟ್ಟಿದರೂ ವಿವರ್ತೋಪಾದಾನದಿಂದ ಅದು ಹುಟ್ಟುವುದಿಲ್ಲ. ವಿವರ್ತೋಪಾದಾನವು ತಾನೇ ಕಾರ್ಯರೂಪದಿಂದ ಕಾಣಿಸಿಕೊಳ್ಳುತ್ತದೆ. ಶ್ರುತಿಯಲ್ಲಿ ಕಾರ್ಯವು 'ಹುಟ್ಟಿತು' ಎಂದಿರುವುದರಿಂದ ಇಲ್ಲಿ ಪಂಚಮೀವಿಭಕ್ತಿಯು ಪರಿಣಾಮಿ ಉಪಾದಾನಾರ್ಥಕವಲ್ಲ.

**ನಾಪಿ 'ಸೋಽಕಾಮಯತ ಬಹು ಸ್ಯಾಂ ಪ್ರಜಾಯೇಯ ಇತಿ । ಸ ತಪೋಽತಪ್ಯತ । ಸ ತಪಸ್ತಪ್ತ್ವಾ । ಸ ಇದಂ ಸರ್ವಮಸೃಜತ । ಯದಿದಂ ಕಿಂ ಚ । ತತ್ ಸೃಷ್ಟ್ವಾ । ತದೇವಾನುಪ್ರಾವಿಶತ್ । ತದನು ಪ್ರವಿಶ್ಯ । ಸಚ್ಚ ತ್ಯಚ್ಚ ಅಭವತ್' ಇತಿ ಶ್ರುತಿಃ ತತ್ರ ಮಾನಂ ।**

'ಪರಮಾತ್ಮನು ತಾನು ಬಹುರೂಪನಾಗಬೇಕೆಂದು ಬಯಸಿದ. ಅವನು ತಪಸ್ಸು ಮಾಡಿದ. ತಪಸ್ಸು ಮಾಡಿ ಎಲ್ಲವನ್ನೂ ಸೃಜಿಸಿದ. ಎಲ್ಲವನ್ನೂ ಸೃಜಿಸಿ ಅದನ್ನೇ ಪ್ರವೇಶಿಸಿದ. ಪ್ರವೇಶಿಸಿ ಪೃಥಿವಿ ಅಪ್‌ತೇಜಗಳೂ ವಾಯು ಆಕಾಶಗಳೂ ತಾನೇ ಆದ' ಎಂಬ ಶ್ರುತಿಯು ಬ್ರಹ್ಮನು ಜಗತ್ತಾಗಿದ್ದಾನೆ ಎನ್ನುವಲ್ಲಿ ಪ್ರಮಾಣವಾಗಿದೆ' ಎಂದು ಅದ್ವೈತಿಯು ಹೇಳುವುದೂ ಯುಕ್ತವಲ್ಲ.

**ಸದಾದಿಭವನಸ್ಯ ಜಗತ್ಸೃಷ್ಟಿ ತದನುಪ್ರವೇಶ–ಅನಂತರ ಭಾವಿತ್ವೇನ ಜಗತ್ಸೃಷ್ಟಿತ್ವಾನುಪಪತ್ತ್ಯಾ ಪರಮೇಶ್ವರಸ್ಯ ಸತ್ತ್ವಾದಿಗುಣಾಭಿವ್ಯಕ್ತಿ ಪರತ್ವಾತ್ ॥**

ಬ್ರಹ್ಮನಿಗೆ 'ಸತ್‌ತ್ಯತ್ ಭವನ' ಎಂದರೆ ಪಂಚಭೂತಗಳ ಅಭೇದವು, ಮೊದಲಿಗೆ ಜಗತ್‌ಸೃಷ್ಟಿ ಮತ್ತು ಜಗತ್ತಿನಲ್ಲಿ ಪ್ರವೇಶಗಳಾದ ಬಳಿಕ ಉಕ್ತವಾದ್ದರಿಂದ, ಪಂಚಭೂತಾಭೇದವೆ ಜಗತ್‌ಸೃಷ್ಟಿ ಎನ್ನುವುದು ಕೂಡುವುದಿಲ್ಲ. ಅದರಿಂದ ಈ ವಾಕ್ಯವು ಅಭೇದೇನ ಸೃಷ್ಟಿಹೇತುತ್ವರೂಪ ಉಪಾದಾನತ್ವವನ್ನು ಬ್ರಹ್ಮನಿಗೆ ಹೇಳುತ್ತಿಲ್ಲ. ಅದರ ಅರ್ಥ ಬೇರೆಯೇ ಇದೆ. ಸೃಷ್ಟಿಯ ಅನಂತರ 'ಬ್ರಹ್ಮನು ಸತ್-ತ್ಯತ್ ಆದನು' ಎಂದರೆ ಬ್ರಹ್ಮನ ಸತ್ವಾದಿಗುಣ ಅಭಿವ್ಯಕ್ತವಾಯಿತೆಂದರ್ಥ.

**ಅನ್ಯಥಾ 'ಅಭವತ್' ಇತಿ ಅಯುಕ್ತಂ। ನಹಿ ಶುಕ್ತಿಃ ರೂಪ್ಯಂ ಅಭವತ್ ಇತ್ಯುಚ್ಯತೇ ।**

ವಿವರ್ತಾಭಿಪ್ರಾಯದಿಂದ 'ಬ್ರಹ್ಮವು ಸತ್‌ತ್ಯತ್ ಆಯಿತು' ಎಂದರೆ ಅಸಂಗತವಾಗುವುದು. 'ಶುಕ್ತಿಯು ರಜತವಾಯಿತು' ಎಂದು ವ್ಯವಹಾರವಿಲ್ಲ. ಆದರೆ 'ಮಣ್ಣು ಘಟವಾಯಿತು' ಎಂದು ವ್ಯವಹಾರವಿದೆ. 'ಮಣ್ಣಿನಲ್ಲಿ ಶಕ್ತಿರೂಪದಿಂದ ಮೊದಲೇ ಇದ್ದ ಘಟಾಕಾರವು ವ್ಯಕ್ತವಾಯಿತು' ಎಂದರ್ಥ.

**ಮೂರ್ತಾಮೂರ್ತಾತ್ಮಕ ಪ್ರಪಂಚಸ್ಯ 'ಸತ್' 'ತ್ಯತ್' ಪದಾಭ್ಯಾಮೇವ ಉಕ್ತತ್ವೇನ 'ನಿರುಕ್ತಂ ಚ ಅನಿರುಕ್ತಂ ಚ ನಿಲಯನಂ ಚ ಅನಿಲಯನಂ ಚ' ಇತ್ಯಾದಿ ವಾಕ್ಯಶೇಷಸ್ಥನಿರುಕ್ತಾದಿ ಪದ ವೈಯರ್ಥ್ಯಂ ಚ ।**

ಮೂರ್ತ ಅಮೂರ್ತ ಎಂಬ ಎರಡು ವಿಭಾಗಗಳಲ್ಲಿಯೇ ಸಮಸ್ತ ಪ್ರಪಂಚ ಅಡಗಿರುವಾಗ 'ಸಚ್ಚ ತ್ಯಚ್ಚ ಅಭವತ್' ಎಂದು ಸತ್‌ತ್ಯತ್ ಪದಗಳಿಂದಲೇ ಮೂರ್ತಅಮೂರ್ತಾತ್ಮಕ ಪ್ರಪಂಚ ಉಕ್ತವಾಗಿರುವುದರಿಂದ, ಅದರ ಉಪಾದಾನತ್ವವನ್ನು ಬ್ರಹ್ಮನಲ್ಲಿ ಹೇಳಿಯಾಗಿರುವುದರಿಂದ, ತಿರುಗಿ 'ನಿರುಕ್ತನಾದನು ಅನಿರುಕ್ತನಾದನು' ಎಂದು ಅದೇ ಪ್ರಪಂಚದ ಉಪಾದಾನತ್ವವನ್ನು ಬ್ರಹ್ಮನಿಗೆ ಹೇಳುವುದು ವ್ಯರ್ಥಪುನರುಕ್ತಿ. ಸಂಕ್ಷೇಪವಿಸ್ತರ ಎನ್ನುವುದು ಅಗತಿಕಾಗತಿ. ವೈಯರ್ಥ್ಯ ಪರಿಹಾರವಾಗುವುದಿಲ್ಲ. ನಿರುಕ್ತತ್ವ ಅನಿರುಕ್ತತ್ವ ಮುಂತಾದ ಅನೇಕ ಗುಣಾಭಿವ್ಯಕ್ತಿಗಳನ್ನು ಹೇಳುವ ಪಕ್ಷದಲ್ಲಿ ಪುನರುಕ್ತಿ ಇಲ್ಲ. ಹೆಚ್ಚು ಹೆಚ್ಚು ಗುಣಗಳ ಅಭಿವ್ಯಕ್ತಿಯನ್ನು ಹೇಳುವುದರಲ್ಲಿಯೇ ಶ್ರುತಿಗೆ ಆದರವಿದೆ.

**'ಸೋಽಕಾಮಯತ ಬಹುಸ್ಯಾಂ' ಇತ್ಯಾದಿ ತು ಪರಮೇಶ್ವರಸ್ಯ 'ಅಜಾಯಮಾನೋ ಬಹುಧಾ ವಿಜಾಯತೇ' 'ಯದೇಕಮವ್ಯಕ್ತಮನಂತರೂಪಂ' ಇತ್ಯಾದಿ ಶ್ರುತಿ ಸಿದ್ಧತತ್ತದನಂತ ಪದಾರ್ಥಪ್ರೇರಕ-ಅನಂತರೂಪೈಃ ಬಹುಭಾವಸಂಕಲ್ಪಮಾಹ ।**

'ಸೋಽಕಾಮಯತ ಬಹು ಸ್ಯಾಂ ಪ್ರಜಾಯೇಯ' ಎನ್ನುವುದು 'ಬಹುಪ್ರಪಂಚವಾಗಿ ಪರಿಣಮಿಸುತ್ತೇನೆ' ಎಂದು ಉಪಾದಾನತ್ವಸಂಕಲ್ಪವನ್ನು ಹೇಳುವ ಅಭಿಪ್ರಾಯದ್ದು' ಎಂದರೆ ಅದೂ ಸರಿಯಲ್ಲ. ಈ ವಾಕ್ಯಕ್ಕೆ ಹಾಗೆ ಅರ್ಥವಲ್ಲ.

'ಅಜಾಯಮಾನೋ ಬಹುಧಾವಿಜಾಯತೇ' 'ಉತ್ಪತ್ತಿರಹಿತನಾದ ಪರಮಾತ್ಮ ಬಹುರೂಪಗಳಿಂದ ವ್ಯಕ್ತನಾಗುತ್ತಾನೆ' 'ಯದೇಕಮವ್ಯಕ್ತಮನಂತರೂಪಂ' 'ಒಬ್ಬನೇ ಆದ ಪರಮಾತ್ಮ ಅನಂತರೂಪಗಳಿಂದ ವ್ಯಕ್ತನಾಗುತ್ತಾನೆ' ಎಂದು ಶ್ರುತಿಸಿದ್ಧವಾಗಿರುವ, ಅನಂತ ಪದಾರ್ಥಗಳೊಳಗೆ ಪ್ರೇರಕವಾಗಿರುವ, ತನ್ನ ಅನಂತರೂಪಗಳಿಂದ ತಾನು ಬಹುರೂಪನಾಗುವೆನೆಂದು ಸಂಕಲ್ಪಿಸುತ್ತಾನೆ, ಪರಮಾತ್ಮ ಎನ್ನುತ್ತದೆ 'ಸೋಽಕಾಮಯತ ಬಹುಸ್ಯಾಂ ಪ್ರಜಾಯೇಯ' ಎಂಬ ಶ್ರುತಿ.

**ನಚ ಸ್ವಸ್ಯ ಅನಂತರೂಪೈಃ ಬಹುಭಾವಂ ಸಂಕಲ್ಪ್ಯ 'ಇದಂ ಸರ್ವಂ ಅಸೃಜತ' ಇತಿ ಪ್ರಪಂಚ ಸರ್ಜನಾನುಪಪತ್ತಿಃ। ನಿಯಾಮಕರೂಪೈಃ ಬಹುಭಾವಸ್ಯ ನಿಯಮ್ಯ ಸಾಪೇಕ್ಷತ್ವಾತ್ ನಿಯಮ್ಯಂ ಸರ್ವಂ ಸೃಷ್ಟ್ವಾ ನಿಯಾಮಕರೂಪೈಃ ಪ್ರವೇಶೋಕ್ತ್ಯು-ಪಪತ್ತೇಃ।**

'ತಾನು ಬಹುರೂಪನಾಗಲು ಬಯಸಿ 'ಈ ಎಲ್ಲ ಪ್ರಪಂಚವನ್ನು ಸೃಜಿಸಿದ' ಎಂದು ಬಹುಪ್ರಪಂಚವನ್ನು ಸೃಜಿಸುವುದು ಉಪಾದಾನತ್ವ ಪಕ್ಷದಲ್ಲಿ ಉಪಾದಾನವು ಕಾರ್ಯದಿಂದ ಅಭಿನ್ನವಾಗಿರುವುದರಿಂದ ಕೂಡುತ್ತದೆ. ನಿಮಿತ್ತ ಕಾರಣತ್ವ ಪಕ್ಷದಲ್ಲಿ ಕಾರ್ಯದಿಂದ ತಾನು ಭಿನ್ನವಾಗುವುದರಿಂದ, 'ತನ್ನ ಬಹುರೂಪತ್ವಕ್ಕಾಗಿ ಪ್ರಪಂಚದ ಬಹುಪದಾರ್ಥವನ್ನು ಸೃಜಿಸುವುದು' ಕೂಡುವುದಿಲ್ಲ' ಎಂದು ಅದ್ವೈತಿ ಹೇಳಿದರೆ, ಅದು ಸರಿಯಲ್ಲ. ತಾನು ನಿಯಾಮಕ, ಪ್ರಪಂಚವು ನಿಯಮ್ಯ. ತಾನು ನಿಯಾಮಕವಾದ ಬಹುರೂಪಗಳನ್ನು ವ್ಯಕ್ತಮಾಡಿಕೊಳ್ಳುವುದಕ್ಕೆ ಮೊದಲಿಗೆ, ನಿಯಮ್ಯ ಬಹುಪ್ರಪಂಚವನ್ನು ತಾನೇ ನಿರ್ಮಿಸಬೇಕಾಗುತ್ತದೆ. ನಿಯಮ್ಯ ಬಹುಪ್ರಪಂಚವನ್ನು ಸೃಜಿಸಿ ನಿಯಾಮಕ ಬಹುರೂಪಗಳಿಂದ ಪ್ರವೇಶಿಸುವುದು ಯುಕ್ತವೆ.

**ಉಕ್ತಂಹಿ— ಬಹು ಸ್ಯಾಮಿತಿ ಸಂಕಲ್ಪ್ಯ ತೇಜಃ ಪ್ರಭೃತಿ ಸರ್ಜನಂ।**
**ಗುರುಃ ಸ್ಯಾಮಿತಿ ಸಂಕಲ್ಪ್ಯ ಶಿಷ್ಯಸಂಪಾದನಾದಿವತ್॥ ಇತಿ।**

'ಗುರುವು ತಾನು ಗುರುವಾಗಬೇಕೆಂದು ಸಂಕಲ್ಪಿಸಿ ಶಿಷ್ಯಸಂಪಾದನಾದಿಗಳನ್ನು ಮಾಡುವಂತೆಯೆ ಪರಮಾತ್ಮನು ತಾನು ನಿಯಾಮಕ ಬಹುರೂಪಗಳಿಂದ ವ್ಯಕ್ತನಾಗುವೆನೆಂದು ಸಂಕಲ್ಪಿಸಿ ನಿಯಮ್ಯವಾದ ತೇಜ ಅಪ್ ಅನ್ನಗಳನ್ನು ಸೃಜಿಸಿದನು' ಎಂದು ಇದನ್ನು ಉದಾಹರಣೆ ಕೊಟ್ಟು ಸಮರ್ಥಿಸಿದ್ದಾರೆ.

**ಅನ್ಯಥಾ ಸ್ಯಾಮಿತಿ ಸತ್ತ್ವೋಕ್ತಿರಯುಕ್ತಾ। ಸ್ಯಾಮಿತಿ ಸಂಕಲ್ಪಿತಸ್ಯ ಸತ್‌ತ್ಯತ್-ಆದಿಭವನಸ್ಯ 'ಸಚ್ಚ ತ್ಯಚ್ಚ ಅಭವತ್' ಇತ್ಯನೇನೈವ ಉಕ್ತತ್ವೇನ 'ಇದಂ ಸರ್ವ ಅಸೃಜತ' ಇತ್ಯಾದಿ ವೈಯರ್ಥ್ಯಂ ಚ।**

ನಿಯಾಮಕ ಬಹುರೂಪಾಭಿವ್ಯಕ್ತಿಯ ಅಭಿಪ್ರಾಯವನ್ನು ಬಿಟ್ಟು ಬಹುಪ್ರಪಂಚೋ-ಪಾದಾನತ್ವಾಭಿ ಪ್ರಾಯವನ್ನೇ ಇಟ್ಟುಕೊಳ್ಳುವ ಪಕ್ಷದಲ್ಲಿ 'ಬಹು ಸ್ಯಾಂ' 'ಬಹುರೂಪನಾಗಿರುವೆನು'

ಎನ್ನುವುದು ಕೂಡಲಾರದು. ಬಹುರೂಪವು ವಿವರ್ತ. ವಿವರ್ತವು ಸತ್ಯವಲ್ಲ, ಅದು ಇರುವುದಿಲ್ಲ, ಕಾಣಿಸಿಕೊಳ್ಳುತ್ತದಷ್ಟೆ. ಆದರೆ ಶ್ರುತಿ ಅಸಭುವಿ ಧಾತುವಿನಿಂದ 'ಬಹು ಸ್ಯಾಂ' ಬಹುರೂಪ ಉಳ್ಳವನಾಗಿ ಇರುವೆನು' ಎಂದು ಬಹುರೂಪಕ್ಕೆ ಸತ್ಯತ್ವವನ್ನು ಹೇಳುತ್ತದೆ 'ಸೋಽಕಾಮಯತ' ಎಂದು ಭೂತಕಾಲವಾಚಕ ಲಙ್‌ನಿಂದಲೂ ಕಾಲಸಂಬಂಧವನ್ನು ಹೇಳುತ್ತದೆ. ಅದು ಅಯುಕ್ತವಾದೀತು. ಬಹುರೂಪದವನಾಗಿ ಕಾಣಿಸಿಕೊಳ್ಳುವೆನು ಎನ್ನಬೇಕಾಗಿತ್ತು.

ವಿವರ್ತಪಕ್ಷದಲ್ಲಿ 'ಸ್ಯಾಂ' ಎಂದು ಸಂಕಲ್ಪಿಸಿರುವ ಸತ್ ತ್ಯತ್ ಮುಂತಾದ ವಿವರ್ತವು 'ಸಚ್ಚ ತ್ಯಚ್ಚ ಅಭವತ್' ಎಂಬ ವಾಕ್ಯದಿಂದಲೇ ಉಕ್ತವಾಗುತ್ತಿದೆ. 'ಇದಂ ಸರ್ವಂ ಅಸೃಜತ' ಎಂದು ಮುಂತಾಗಿ ಅದನ್ನೇ ಪುನಃ ಹೇಳುವುದು ವ್ಯರ್ಥ. ಸತ್‌ತ್ಯದಾದಿರೂಪನಾಗುವುದೂ ಸರ್ವಸೃಷ್ಟಿಯೂ ಒಂದೇ ವಿವರ್ತ. ಬಹುರೂಪಾಭಿವ್ಯಕ್ತಿಯ ಅಭಿಪ್ರಾಯದಲ್ಲಿ, ಸತ್‌ತ್ಯದಾದಿರೂಪನಾಗುವುದು ನಿಯಾಮಕ ಬಹುರೂಪಗಳ ಅಭಿವ್ಯಕ್ತಿ, ಸರ್ವಸೃಷ್ಟಿಯು ನಿಯಮ್ಯ ಬಹುಪದಾರ್ಥಸೃಷ್ಟಿ. ಆದರಿಂದ ಎರಡೂ ಬೇರೆಬೇರೆ. ಸಾರ್ಥಕ.

**ಸೃಷ್ಟೇಃ ಪೂರ್ವಂ ಅಂತಃಕರಣಾಭಾವೇನ ತದ್ವಿಶಿಷ್ಟ-ಅಹಮರ್ಥಾಭಾವಾತ್ ಉತ್ತಮ ಪುರುಷಾನುಪಪತ್ತಿಶ್ಚ ।**

**ಏತೇನ 'ತದೈಕ್ಷತ ಬಹುಸ್ಯಾಂ ಪ್ರಜಾಯೇಯ' ಇತ್ಯೇತದಪಿ ವ್ಯಾಖ್ಯಾತಂ ।**

ಸೃಷ್ಟಿಗೆ ಪೂರ್ವದಲ್ಲಿ 'ಬ್ರಹ್ಮನು 'ಅಹಂ' ತಾನು ಬಹುರೂಪನಾಗುವೆನೆಂದು ಆಲೋಚಿಸಿದನು' ಎಂದು ಉತ್ತಮಪುರುಷ ಪ್ರಯೋಗ ಕೂಡುವುದಿಲ್ಲ. ಉತ್ತಮಪುರುಷ ಪ್ರಯೋಗದಲ್ಲಿ ಕರ್ತೃವು ಅಹಮರ್ಥ. 'ಅಹಂ' ಎಂಬುದು ಅದ್ವೈತಮತದಲ್ಲಿ ಅಂತಃಕರಣವೃತ್ತಿ. ಅಂತಃಕರಣವೇ ಇನ್ನೂ ಸೃಷ್ಟಿಯಾಗಿಲ್ಲ. ತತ್ಪೂರ್ವದಲ್ಲಿ ಅಂತಃಕರಣ ವೃತ್ತಿ ಇರಲಾರದು. ಅದು ಆಲೋಚನಕ್ರಿಯೆಗೆ ಕರ್ತೃವಾಗಲಾರದು.

'ಅವಿದ್ಯಾವೃತ್ತಿಯೇ ಅಹಮರ್ಥ ಎನ್ನುತ್ತೇನೆ, ಅದು ಅನಾದಿ, ಸೃಷ್ಟಿಗೆ ಪೂರ್ವದಲ್ಲಿಯೂ ಇದೆ' ಎಂದರೆ ಅದು ಸರಿಯಲ್ಲ. ಅವಿದ್ಯೆಯೇ ಸ್ವರೂಪೇಣ ಅನಾದಿಯಲ್ಲ, ಪ್ರವಾಹತೋಽನಾದಿ ಎಂದು ಅದ್ವೈತಿಗಳೇ ಹೇಳುತ್ತಾರೆ. ಸ್ವರೂಪತಃ ಅನಾದಿ ಎನ್ನುವ ಪಕ್ಷದಲ್ಲಿಯೂ ಅದರ ವೃತ್ತಿಯು ಸಾದಿಯೇ. ಸೃಷ್ಟಿಗಿಂತಪೂರ್ವದಲ್ಲಿ ಇಲ್ಲ. ಆದರಿಂದ 'ಸ್ಯಾಂ' ಎಂದು ಉತ್ತಮ ಪುರುಷ ಪ್ರಯೋಗ ಕೂಡುವುದಿಲ್ಲ.

ವಸ್ತುತಃ ಅವಿದ್ಯಾವೃತ್ತಿಯೇ ಅಹಮರ್ಥ ಎಂದರೆ ಸುಷುಪ್ತಿಯಲ್ಲಿ 'ಅಹಂ' ಎಂದು ಅನುಭವ ಬಂದೀತು. ಸುಪ್ತಿ ಎಂದರೆ ಅಂತಃಕರಣವಿಲಯ. ಅಂತಃಕರಣವಿಲಯವಾದ್ದರಿಂದ ಆಗ 'ಅಹಂ' ಅನುಭವವಿಲ್ಲವೆಂದೇ ಅದ್ವೈತಿಯು ಹೇಳುತ್ತಾನೆ.

ಹೀಗೆ 'ಸೋಽಕಾಮಯತ ಬಹು ಸ್ಯಾಂ ಪ್ರಜಾಯೇಯೇತಿ' ಎಂಬ ತೈತ್ತಿರೀಯವಾಕ್ಯವು

ವಿವರ್ತೋಪಾದಾನಾಭಿಪ್ರಾಯದ ಪಕ್ಷದಲ್ಲಿ ಕೂಡುವುದಿಲ್ಲವೆಂದು ಹೇಳಿದ್ದರಿಂದ ಛಾಂದೋಗ್ಯದಲ್ಲಿ ಬರುವ 'ತದೈಕ್ಷತ ಬಹುಸ್ಯಾಂ ಪ್ರಜಾಯೇಯೇತಿ ತತ್ತೇಜೋಽಸೃಜತ' ಎಂಬ ವಾಕ್ಯವೂ (ಛಾಂ.6.2.3) ಕೂಡ ಕೂಡುವುದಿಲ್ಲ ಎಂದು ಹೇಳಿದಂತಾಯಿತು.



किंच ''तत्तेजोऽसृजते''ति यत्तेजःप्रभृति सृज्यं तत्तदात्मना हि त्वया बहुभावो वाच्यः। तेजःप्रभृति च चेतनं । ''तत्तेज ऐक्षत तदपोऽसृजत ता आप ऐक्षन्त ता अन्नमसृजंत तिस्रो देवता'' इति ईक्षितृत्वस्रष्टृत्वदेवतात्वादीनां श्रवणात् । नच चेतनं प्रति उपादानता तवापीष्टा ।

एतेनैव ''असद्वा इदमग्र आसीत्ततो वै सदजायत तदात्मानं स्वयमकुरुत'' इत्येतदपि व्याख्यातम् । ''तदात्मानं सृजाम्यहम्, संभवामि युगे युगे'' इत्यादिवदुपपत्तेः । नह्यत्रात्मानमाकाशाद्यात्मनाऽकुरुतेति श्रूयते, अन्यथा अकुरुतेति सत्त्वोक्तिरयुक्ता ।

किंच परमते ''ततो वै सदजायत'' इति- पूर्ववाक्येनैव तच्छब्दनिर्दिष्टाद्ब्रह्मणः प्रपंचोत्पत्तेः सिद्धत्वात् ''तदात्मानम्'' इति व्यर्थम् ।



ಕಿಂಚ 'ತತ್ತೇಜೋಽಸೃಜತ' ಇತಿ ಯತ್ ತೇಜಃ ಪ್ರಭೃತಿ ಸೃಜ್ಯಂ ತತ್ತದಾತ್ಮನಾ ಹಿ ತ್ವಯಾ ಬಹುಭಾವೋ ವಾಚ್ಯಃ। ತೇಜಃಪ್ರಭೃತಿ ಚ ಚೇತನಂ। 'ತತ್ತೇಜ ಐಕ್ಷತ ತದಪೋಽಸೃಜತ ತಾ ಆಪ ಐಕ್ಷಂತ ತಾ ಅನ್ನಮಸೃಜಂತ..ತಿಸ್ರೋದೇವತಾಃ' ಇತಿ ಈಕ್ಷಿತೃತ್ವ ಸ್ರಷ್ಟೃತ್ವ ದೇವತಾತ್ವಾದೀನಾಂ ಶ್ರವಣಾತ್। ನಚ ಚೇತನಂ ಪ್ರತಿ ಉಪಾದಾನತಾ ತವಾಪೀಷ್ಟಾ।

ಛಾಂದೋಗ್ಯದಲ್ಲಿ 'ತತ್ತೇಜೋಽಸೃಜತ' ಎನ್ನುವುದಕ್ಕೆ ವಿವರ್ತಾಭಿಪ್ರಾಯವಿಟ್ಟುಕೊಂಡರೆ, ತೇಜ ಆದಿ ಸೃಜ್ಯಗಳ ರೂಪದಿಂದ ಬ್ರಹ್ಮ ಬಹುರೂಪ ತಾಳಿತೆಂದು ಹೇಳಬೇಕಾಗುತ್ತದೆ. ಆದರೆ ತೇಜ ಆದಿಗಳು ಚೇತನಗಳು. ಚೇತನಗಳಿಗೆ ಬ್ರಹ್ಮನು ವಿವರ್ತೋಪಾದಾನವಾಗುವುದಿಲ್ಲ ಎಂದು

ಅದ್ವೈತಮತವಿದೆ. 'ತತ್ ತೇಜ ಐಕ್ಷತ' ಆ ತೇಜವು ಅಪ್ ಸೃಷ್ಟಿ ಮಾಡುವೆನೆಂದು ಸಂಕಲ್ಪಿಸಿತು ಎಂದು ಸಂಕಲ್ಪ ಉಕ್ತವಾಗಿದೆ. 'ತದಪೋಽಸೃಜತ' ಆ ತೇಜವು ಅಪ್‌ಸೃಷ್ಟಿಮಾಡಿತು ಎಂದು ಸೃಷ್ಟಿಕರ್ತೃತ್ವ ಉಕ್ತವಾಗಿದೆ. 'ತಿಸ್ರೋ ದೇವತಾಃ' 'ತೇಜ ಅಪ ಅನ್ನ ಎಂದು ಮೂವರು ದೇವತೆಗಳು' ಎಂದು ದೇವತಾತ್ವವೂ ಉಕ್ತವಾಗಿದೆ, ಎಂದಮೇಲೆ ಇವು ಜಡವಲ್ಲ, ಚೇತನಗಳೇ ಆಗಿರುವುದರಿಂದ ಅವುಗಳಿಗೆ ಬ್ರಹ್ಮ ವಿವರ್ತವಾಗುವುದು ಶಕ್ಯವಿಲ್ಲ. ಅದು ಅದ್ವೈತಿಗೂ ಸಮ್ಮತವಲ್ಲ. ತೇಜ ಆದಿ ಇಲ್ಲಿ ಅಚೇತನವೇ. ವಿಶಿಷ್ಟ ಚೇತನವೇ ಜಡ, ವಿವರ್ತವೆಂದರೆ ಅದಕ್ಕೆ ಈಕ್ಷಣವು ಕೂಡಲಾರದದು.

**ಏತೇನೈವ 'ಅಸದ್ವಾ ಇದಮಗ್ರ ಆಸೀತ್ ತತೋ ವೈ ಸದಜಾಯತ ತದಾತ್ಮಾನಂ ಸ್ವಯಮಕುರುತ' ಇತ್ಯೇತದಪಿ ವ್ಯಾಖ್ಯಾತಂ ।**

ತೈತ್ತಿರೀಯದಲ್ಲಿಯೇ 'ತದಪ್ಯೇಷ ಶ್ಲೋಕೋ ಭವತಿ ಅಸದ್ವಾ ಇದಮಗ್ರ ಆಸೀತ್ ತತೋ ವೈ ಸದಜಾಯತ। ತದಾತ್ಮಾನಂ ಸ್ವಯಮಕುರುತ' ಎಂಬ ವಾಕ್ಯ ಬರುತ್ತದೆ. ಅದಕ್ಕೆ ಅದ್ವೈತಿಯು 'ಅಸದ್' ಸ್ಥೂಲಬುದ್ಧಿಗೆ ಅಗೋಚರವಾದ ಬ್ರಹ್ಮ ಮೊದಲಿಗೆ ಇತ್ತು, ಅದರಿಂದ 'ಸದ್' ಸ್ಥೂಲಬುದ್ಧಿಗೆ ಗೋಚರವಾಗುವ ಪ್ರಪಂಚ ಜನಿಸಿತು. ಬ್ರಹ್ಮವು ತಾನೇ ಪ್ರಪಂಚರೂಪದಿಂದ ತನ್ನನ್ನು ಸೃಜಿಸಿತು' ಎಂದು ಅದಕ್ಕೆ ವಿವರಣೆ ನೀಡುತ್ತಾನೆ. ಆದರೆ ನಾವು ಹೇಳುವಂತೆ ಬ್ರಹ್ಮನು ತನ್ನನ್ನು ಬಹುರೂಪಗಳಿಂದ ವ್ಯಕ್ತಗೊಳಿಸಿದನೆಂದು ವ್ಯಾಖ್ಯಾನಿಸುವುದೇ ಯುಕ್ತ.

ಏಕೆಂದರೆ ಗೀತೆಯಲ್ಲಿ 'ತದಾಽಽತ್ಮಾನಂ ಸೃಜಾಮ್ಯಹಂ' 'ಸಂಭವಾಮಿ ಯುಗೇಯುಗೇ' ಎಂದು ಮುಂತಾಗಿ ಸಮಾಖ್ಯೆ ಇರುವುದರಿಂದ ಪ್ರಕೃತದಲ್ಲಿ ವಿವರ್ತಾಭಿಪ್ರಾಯವನ್ನು ಹೇಳುವುದು ಯುಕ್ತವಲ್ಲ. ಆ ಸಮಾಖ್ಯೆಗೂ ವಿವರ್ತಾಭಿಪ್ರಾಯ ಹೇಳೋಣ ಎಂದರೆ ಅಲ್ಲಿ ಮೂಲರೂಪದ ವಿವರ್ತವು ಪ್ರಸ್ತುತವಾಗಿಲ್ಲ. 'ಪರಿತ್ರಾಣಾಯ ಸಾಧೂನಾಂ' ಎಂದು ಪ್ರತಿಯುಗದಲ್ಲಿ ಮಾಡುವ ಅವತಾರರೂಪಗಳ ಅಭಿವ್ಯಕ್ತಿಯೆ ಅಲ್ಲಿ ಪ್ರಸ್ತುತವಾಗಿದೆ.

ಮತ್ತು ಶ್ರುತಿಯಲ್ಲಿ ವಿವರ್ತಾಭಿಪ್ರಾಯವನ್ನು ಹೇಳಲು ಶಬ್ದವಿಲ್ಲ. 'ತತೋ ವೈ ಸತ್ ಅಜಾಯತ' ಎಂದಿದೆಯೇ ಹೊರತು 'ತತ್ ಸದಾತ್ಮನಾ ಆತ್ಮಾನಂ ಅಕುರುತ' ಎಂದು ಹೇಳಿಲ್ಲ. ಹಾಗೆ ಅಧ್ಯಾಹಾರ ಮಾಡಿಕೊಳ್ಳಲೂ ಕಾರಣವಿಲ್ಲ. ಹಾಗಿದ್ದರೂ ಸ್ವೇಚ್ಛೆಯಿಂದ ಅಧ್ಯಾಹಾರ ಮಾಡಿದರೆ ಅತಿಪ್ರಸಕ್ತಿ ಉಂಟಾದೀತು ಮತ್ತು 'ಅಕುರುತ' ಎಂದು ಕೃತಿವಿಷಯತ್ವದಿಂದ ಸತ್ವವನ್ನು ವಿವರ್ತಕ್ಕೆ ಹೇಳುವುದೂ ಅಯುಕ್ತವಾದೀತು—

**'ತದಾತ್ಮಾನಂ ಸೃಜಾಮ್ಯಹಂ' 'ಸಂಭವಾಮಿ ಯುಗೇಯುಗೇ' ಇತ್ಯಾದಿವತ್ ಉಪಪತ್ತೇಃ' ನಹ್ಯತ್ರ ಆತ್ಮಾನಮಾಕಾಶಾದ್ಯಾತ್ಮನಾ ಅಕುರುತ ಇತಿ ಶ್ರೂಯತೇ। ಅನ್ಯಥಾ ಅಕುರುತೇತಿ ಸತ್ವೋಕ್ತಿರಯುಕ್ತಾ ।**

ಯದಾಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ ।
ಅಭ್ಯುತ್ಥಾನಮಧರ್ಮಸ್ಯ ತದಾಽಽತ್ಮಾನಂ ಸೃಜಾಮ್ಯಹಂ ॥ (4.7)
ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಂ ।
ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇಯುಗೇ ॥ (4.8)

ಇತ್ಯಾದಿ ಗೀತಾವಚನಗಳಲ್ಲಿ ಪರಮಾತ್ಮನು ತನ್ನ ಅವತಾರರೂಪಗಳ ಅಭಿವ್ಯಕ್ತಿಯನ್ನು ಮಾಡಿಕೊಳ್ಳುವುದೇ ಉಕ್ತವಾಗಿದೆ ಹೊರತು ಪ್ರಪಂಚರೂಪವಾದ ವಿವರ್ತವು ಉಕ್ತವಾಗಿಲ್ಲ. ಹಾಗೇ ಶ್ರುತಿಯಲ್ಲಿಯೂ 'ತದಾತ್ಮಾನಮಕುರುತ' ಎನ್ನುವುದು ಸ್ವರೂಪಾಭಿವ್ಯಕ್ತಿಯ ಅಭಿಪ್ರಾಯದಿಂದ ಎಂದೇ ತಿಳಿಯಬೇಕು. ಇಲ್ಲದಿದ್ದರೆ ವಿವರ್ತಕ್ಕೆ ಕೃತಿವಿಷಯತ್ವರೂಪವಾದ ಸತ್ವವನ್ನು ಹೇಳುವುದು ಅಯುಕ್ತವಾದೀತು.

**ಕಿಂಚ ಪರಮತೇ 'ತತೋ ವೈ ಸದಜಾಯತ' ಇತಿ ಪೂರ್ವವಾಕ್ಯೇನೈವ ತಚ್ಛಬ್ದ ನಿರ್ದಿಷ್ಟಾತ್ ಬ್ರಹ್ಮಣಃ ಪ್ರಪಂಚೋತ್ಪತ್ತೇಃ ಸಿದ್ಧತ್ವಾತ್ 'ತದಾತ್ಮಾನಂ' ಇತಿ ವ್ಯರ್ಥಂ ।**

ವಿವರ್ತಮತದಲ್ಲಿ 'ತತೋ ವೈ ಸದ್ ಅಜಾಯತ' ಎಂಬ ಪೂರ್ವವಾಕ್ಯದಿಂದಲೇ 'ತತಃ' ಆ ಬ್ರಹ್ಮನಿಂದ 'ಸತ್' ಸ್ಥೂಲಬುದ್ಧಿಗೋಚರವಾಗುವ ವಿವರ್ತ ಪ್ರಪಂಚ ಉತ್ಪನ್ನವಾಯಿತು ಎಂದು ವಿವರ್ತವು ಉಕ್ತವಾಗಿದೆ. ಪುನಃ 'ತದಾತ್ಮಾನಂ ಸ್ವಯಮಕುರುತ' ಎಂದು ಆ ಬ್ರಹ್ಮವು ಸದಾತ್ಮನಾ ವಿವರ್ತ ಹೊಂದಿತು. ಪ್ರಪಂಚರೂಪದಿಂದ ತನ್ನನ್ನು ಸೃಷ್ಟಿಮಾಡಿಕೊಂಡಿತು ಎನ್ನುವುದು ವ್ಯರ್ಥವಾಗುವುದು.

'ಪೂರ್ವವಾಕ್ಯದಲ್ಲಿ ಬ್ರಹ್ಮನು 'ನಿಮಿತ್ತ'ವೆಂದೂ ಉತ್ತರವಾಕ್ಯದಲ್ಲಿ 'ಉಪಾದಾನ'ವೆಂದೂ ಹೇಳುವುದರಿಂದ ಅಭಿನ್ನನಿಮಿತ್ತೋಪಾದಾನತ್ವ ಉಕ್ತವಾಗುತ್ತಿದೆ' ಎಂದರೆ ಅದೂ ಸರಿಯಲ್ಲ. ಏಕೆಂದರೆ ಪೂರ್ವವಾಕ್ಯದಲ್ಲಿ ನಿಮಿತ್ತಕಾರಣತ್ವವನ್ನು ಹೇಳಲು ಶಕ್ಯವಿದ್ದರೂ, ಉತ್ತರವಾಕ್ಯದಲ್ಲಿ ಉಪಾದಾನಕಾರಣತ್ವವನ್ನು ಹೇಳಲು 'ಆತ್ಮಾನಂ ಸದಾತ್ಮನಾ ಅಕುರುತ' ಎಂಬ ಶಬ್ದವು ಇಲ್ಲವೆಂದು ದೋಷವಿದ್ದೇ ಇದೆ. 'ಆತ್ಮಾನಂ ಸ್ವಯಂ ಅಕುರುತ' ಎಂದರೆ 'ತಾನು ಸ್ವತಃ ತನ್ನ ಕೃತಿಗೆ ವಿಷಯ' 'ಕಾರ್ಯ' ಎಂದಂತಾಗುವುದರಿಂದ 'ಕುಲಾಲಃ ಘಟಂ ಕರೋತಿ' ಎಂಬಂತೆ ಕರ್ತ ತಾನೆಂದು ತಿಳಿಯುತ್ತದೆ ಹೊರತು 'ಸದಾತ್ಮನಾ ಅಭವತ್' ಉಪಾದಾನ ಕಾರಣ ತಾನೆಂದು ತಿಳಿದು ಬರುವುದೂ ಇಲ್ಲ. ಅದರಿಂದ 'ತದಾತ್ಮಾನಂ ಅಕುರುತ' ಎಂಬ ವಾಕ್ಯ ವ್ಯರ್ಥವಾಗುವುದು.



**नापि "सर्वाणि ह वा इमानि भूतानि आकाशादेव समुत्पद्यंते आकाशं प्रत्यस्तं यंति" इति ब्रह्मण्येव सृष्टिलयोक्तिस्तत्र मानम्, निमित्ते कार्यस्य लयाभावादिति युक्तम् । निमित्तेऽप्यूर्णनाभौ**

**तंतोर्लयदर्शनात् । ब्रह्मणोऽप्यूर्णनाभिवदेव संहर्तृत्वस्य ''यथोर्ण-नाभिः'' इत्यादिश्रुतिसिद्धत्वात् ।**

**नचोर्णनाभिरवि तंतुकोशादीन्प्रत्युपादानम् । ऊर्णनाभिनाशेऽपि तंतूपलंभात् । नच दधि कुंडलं वा क्षीरं स्वर्णं वा प्रत्यस्तं यातीत्युच्यते ।**

**नापि ''यथोर्णनाभिः सृजते गृह्णते च, यथा सतः पुरुषात्केशलोमानि, ससर्ज मातापितृवत्'', इत्यादिदृष्टांतकथना-दुपादानता । ऊर्णनाभिदेहधातुविशेषस्यैव तंतूपादानत्वात्, केशादीन् जडोपादानकान् प्रति चेतनस्य निमित्तमात्रत्वात् । पितृदेहधातोः पुत्रदेहं प्रत्युपादानत्वेऽपि पितृचेतनस्य निमित्तमात्रत्वात् ।**

**नाप्येकमेवाद्वितीयमिति वस्त्वंतरनिषेधादात्मन एवोपादान-त्वम् । त्वन्मतेऽप्यवियादेः सत्त्वात् ।**

**नापीति** ।। युक्तमित्यनेन संबध्यते ।। **यथोर्णनाभिरिति** ।।

''यथोर्णनाभिः सृजते गृह्णते च यथा पृथिव्यामोषधयः संभवंति ।
यथा सतः पुरुषात्केशलोमानि तथाक्षरात्संभवतीह विश्वम् ।।''

इति श्रुतिसिद्धत्वादित्यर्थः । यद्यप्यत्र संहर्तृत्वं ब्रह्मणो न प्रतीयते, तथापि ऊर्णनाभिदृष्टांतानुसारेण तदप्यत्र श्रुत्यभिप्रेतमित्यत्र तात्पर्यम् ।। **नापीति** ।। यद्यप्ययं दृष्टांतः प्रागेव विघटितः । तथापि युक्त्यन्तरप्रदर्शनार्थं पुनरुपादानमिति ध्येयम् ।



**ನಾಪಿ 'ಸರ್ವಾಣಿ ಹ ವಾ ಇಮಾನಿ ಭೂತಾನಿ ಆಕಾಶಾದೇವ ಸಮುತ್ಪದ್ಯಂತೇ ಆಕಾಶಂ ಪ್ರತ್ಯಸ್ತಂ ಯಂತಿ' ಇತಿ ಬ್ರಹ್ಮಣ್ಯೇವ ಸೃಷ್ಟಿಲಯೋಕ್ತಿಃ ತತ್ರ ಮಾನಂ, ನಿಮಿತ್ತೇ ಕಾರ್ಯಸ್ಯ ಲಯಾಭಾವಾತ್' ಇತಿ ಯುಕ್ತಂ। ನಿಮಿತ್ತೇಽಪಿ ಊರ್ಣನಾಭೌ ತಂತೋಃ ಲಯದರ್ಶನಾತ್ ।**

'ಈ ಲೋಕಕ್ಕೆ ಆಶ್ರಯ ಯಾವುದು? ಎಂದರೆ, 'ಆಕಾಶ' ಎನ್ನುತ್ತಾನೆ. ಏಕೆಂದರೆ ಈ ಎಲ್ಲ

ಪ್ರಪಂಚವು ಆಕಾಶದಿಂದಲೇ ಹುಟ್ಟುತ್ತದೆ. ಆಕಾಶದಲ್ಲಿಯೇ ಲಯ ಹೊಂದುತ್ತದೆ' (ಛಾಂದೋಗ್ಯ 1.9.1.) ಎಂದು ಬ್ರಹ್ಮನಲ್ಲಿಯೇ ಪ್ರಪಂಚದ ಸೃಷ್ಟಿ-ಲಯಗಳನ್ನು ಶ್ರುತಿಯಲ್ಲಿ ಹೇಳಿದ್ದು ಬ್ರಹ್ಮ ಪ್ರಪಂಚಕ್ಕೆ ಉಪಾದಾನಕಾರಣವೆನ್ನಲು ಪ್ರಮಾಣ. ಏಕೆಂದರೆ ಕಾರ್ಯವು ಉಪಾದಾನದಲ್ಲಿ ಲಯ ಹೊಂದುತ್ತದೆ ಹೊರತು ನಿಮಿತ್ತದಲ್ಲಿ ಲಯಹೊಂದುವುದಿಲ್ಲ' ಎಂದು ಅದ್ವೈತಿ ಹೇಳುತ್ತಾನೆ. ಅದೂ ಸರಿಯಲ್ಲ. ಕಾರ್ಯವು ಉಪಾದಾನದಲ್ಲಿಯೇ ಲಯ ಹೊಂದುತ್ತದೆ ಎಂದು ನಿಯಮವಿಲ್ಲ. ಜೇಡರಹುಳು ಬಲೆಗೆ ನಿಮಿತ್ತವಾದರೂ ಆದರಲ್ಲಿ ಬಲೆ ಲಯ ಹೊಂದುವುದು ಕಂಡಿದೆ.

**ಬ್ರಹ್ಮಣೋಽಪಿ ಊರ್ಣನಾಭಿವದೇವ ಸಂಹರ್ತೃತ್ವಸ್ಯ 'ಯಥೋರ್ಣನಾಭಿಃ' ಇತ್ಯಾದಿ ಶ್ರುತಿಸಿದ್ಧತ್ವಾತ್ ।**

'ಜೇಡರಹುಳು ಬಲೆಯನ್ನು ಲಯಮಾಡುವುದಿಲ್ಲ. ಹೊಟ್ಟೆಯೊಳಗೆ ಸೇರಿಸಿಕೊಳ್ಳುತ್ತದಷ್ಟೆ. ಬ್ರಹ್ಮ ಹಾಗಲ್ಲ' ಎಂದರೆ, ಬ್ರಹ್ಮನೂ ಕೂಡ ಜೇಡರಹುಳುವಿನಂತೆಯೇ ಕಾರ್ಯ ಲಯ ಮಾಡುವುದು ಶ್ರುತಿ ಸಿದ್ಧವಾಗಿದೆ. ಜೇಡರಹುಳುವಿಗಿಂತ ಬ್ರಹ್ಮನಲ್ಲಿ ವೈಲಕ್ಷಣ್ಯವನ್ನು ಒಪ್ಪಿದರೆ ಶ್ರುತಿವಿರೋಧ ಬರುತ್ತದೆ—

ಯಥೋರ್ಣನಾಭಿಃ ಸೃಜತೇ ಗೃಹ್ಣತೇ ಚ
ಯಥಾ ಪೃಥಿವ್ಯಾಮೋಷಧಯಃ ಸಂಭವಂತಿ ।
ಯಥಾ ಸತಃ ಪುರುಷಾತ್ಕೇಶ ಲೋಮಾನಿ
ತಥಾಕ್ಷರಾತ್ ಸಂಭವತೀಹ ವಿಶ್ವಂ ॥ (ಮುಂಡಕ 1.1.7)

'ಹೇಗೆ ಜೇಡರಹುಳುವು ದಾರದಂತೆ ಎಳೆಯಾದ ವಸ್ತುವನ್ನು ತನ್ನುದರದಿಂದ ಹೊರಗೆ ಹಾಕುವುದೋ ಮತ್ತು ಉದರದೊಳಗೆ ಸೇರಿಸಿಕೊಳ್ಳುವುದೋ, ಹೇಗೆ ಭೂಮಿಯಲ್ಲಿ ಸಸ್ಯಗಳುಂಟಾಗುವುವೋ, ಮತ್ತು ಹೇಗೆ ಮಾನವನ ಮೈಯಿಂದ ಕೂದಲು ರೋಮಗಳುಂಟಾಗುವುವೋ ಹಾಗೇ ಅವಿನಾಶಿಯಾದ ಪರಮಾತ್ಮನಿಂದ ಪ್ರಪಂಚ ಜನಿಸುತ್ತದೆ'.

ಯದ್ಯಪಿ ಈ ಮಂತ್ರದಲ್ಲಿ 'ಅಕ್ಷರಬ್ರಹ್ಮದಿಂದ ವಿಶ್ವ ಉತ್ಪನ್ನವಾಗುತ್ತದೆ' ಎಂದು ಹೇಳುವುದರಿಂದ ಬ್ರಹ್ಮನಿಂದ ಸೃಷ್ಟಿ ಎನ್ನುವುದು ಮಾತ್ರ ಉಕ್ತವಾಗಿದೆ, ಲಯ ಉಕ್ತವಾಗಿಲ್ಲ. ಆದರೂ ಊರ್ಣನಾಭಿ ದೃಷ್ಟಾಂತದಿಂದ ಲಯವೂ ಬ್ರಹ್ಮನಿಂದಾಗುತ್ತದೆ ಎಂದು ತಿಳಿದು ಬರುತ್ತದೆ. ಏಕೆಂದರೆ ಯಥೋರ್ಣನಾಭಿಃ ಸೃಜತೇ ಗೃಹ್ಣತೇಚ' ಎಂದಿದೆ. ಇಲ್ಲಿ 'ಸೃಜತೇ' ಎಂದು ಸೃಷ್ಟಿ 'ಗೃಹ್ಣತೇ' ಎಂದು ಲಯ ಸೂಚಿತವಾಗುತ್ತದೆ.

**ನ ಚೋರ್ಣನಾಭಿರಪಿ ತಂತುಕೋಶಾದೀನ್ ಪ್ರತಿ ಉಪಾದಾನಂ । ಊರ್ಣನಾಭಿನಾಶೇಽಪಿ ತಂತೂಪಲಂಭಾತ್ ।**

'ಜೇಡರಹುಳು ಕೂಡ ಬಲೆಗೆ ಉಪಾದಾನ'ವೆನ್ನಲಾಗದು. ಹುಳು ನಾಶವಾದರೂ ಬಲೆ ಹಾಗೇ ಇರುವುದು ಕಂಡಿದೆ. ಉಪಾದಾನ ನಾಶವಾದರೆ ಕಾರ್ಯ ನಾಶವಾಗದಿರುವುದಿಲ್ಲ.

**ನಚ ದಧಿ ಕುಂಡಲಂ ವಾ ಕ್ಷೀರಂ ಸ್ವರ್ಣಂ ವಾ ಪ್ರತಿ ಅಸ್ತಂ ಯಾತೀತ್ಯುಚ್ಯತೇ ।**

'ಮೊಸರು ಹಾಲಿನಲ್ಲಿ ಅಥವಾ ಕುಂಡಲವು ಬಂಗಾರದಲ್ಲಿ ಲಯ ಹೊಂದುತ್ತದೆ' ಎನ್ನುವುದು ಕಂಡಿಲ್ಲ. ಆದರಿಂದ ಕಾರ್ಯವು ಉಪಾದಾನದಲ್ಲಿ ಲಯ ಹೊಂದುತ್ತದೆ ಎನ್ನುವ ನಿಯಮವಿಲ್ಲ. ನಿಮಿತ್ತದಲ್ಲಿಯೂ ಲಯವನ್ನು ಹೇಳಬಹುದು.

**ನಾಪಿ 'ಯಥೋರ್ಣನಾಭಿಃ ಸೃಜತೇ ಗೃಹ್ಣತೇ ಚ' 'ಯಥಾ ಸತಃ ಪುರುಷಾತ್ ಕೇಶಲೋಮಾನಿ' 'ಸಸರ್ಜ ಮಾತಾಪಿತೃವತ್' ಇತ್ಯಾದಿ ದೃಷ್ಟಾಂತ ಕಥನಾತ್ ಉಪಾದಾನತಾ । ಊರ್ಣನಾಭಿ ದೇಹ ಧಾತುವಿಶೇಷಸ್ಯೈವ ತಂತೂಪಾದಾನತ್ವಾತ್ । ಕೇಶಾದೀನ್ ಜಡೋಪಾದಾನಕಾನ್ ಪ್ರತಿ ಚೇತನಸ್ಯ ನಿಮಿತ್ತಮಾತ್ರತ್ವಾತ್ । ಪಿತೃದೇಹಧಾತೋಃ ಪುತ್ರದೇಹಂ ಪ್ರತಿ ಉಪಾದಾನತ್ವೇಽಪಿ ಪಿತೃಚೇತನಸ್ಯ ನಿಮಿತ್ತ ಮಾತ್ರತ್ವಾತ್ ।**

'ಜೇಡರಹುಳು ಬಲೆಯನ್ನು ಹೊರಗೆ ಹಾಕುತ್ತದೆ, ಒಳಗೆ ತೆಗೆದುಕೊಳ್ಳುತ್ತದೆ' ಎಂಬ ದೃಷ್ಟಾಂತದಿಂದಲೂ, 'ಮಾನವನ ಶರೀರದಿಂದ ಕೂದಲು ರೋಮಗಳುಂಟಾಗುತ್ತವೆ' ಎಂಬ ದೃಷ್ಟಾಂತದಿಂದಲೂ, 'ತಂದೆತಾಯಿಗಳಂತೆ ಪರಮಾತ್ಮ ಸೃಷ್ಟಿಮಾಡುತ್ತಾನೆ' ಎಂಬ ದೃಷ್ಟಾಂತ ದಿಂದಲೂ ಪರಮಾತ್ಮನು ಪ್ರಪಂಚಕ್ಕೆ ಉಪಾದಾನ ಕಾರಣ ಎಂಬುದು ಸಿದ್ಧವಾಗುತ್ತದೆ' ಎಂದು ಅದ್ವೈತಿ ಹೇಳುತ್ತಾನೆ. ಅದು ಸರಿಯಲ್ಲ.

ಜೇಡರಹುಳು ಪರಮಾತ್ಮನು ಉಪಾದಾನ ಎನ್ನುವಲ್ಲಿ ದೃಷ್ಟಾಂತವಲ್ಲ, ನಿಮಿತ್ತ ಎನ್ನುವಲ್ಲಿಯೇ ದೃಷ್ಟಾಂತ. ನಿಮಿತ್ತದಲ್ಲಿ ಕಾರ್ಯಲಯ ಎನ್ನುವಲ್ಲಿಯೆ 'ಊರ್ಣನಾಭಿಃ ಗೃಹ್ಣತೇ' ಎಂದು ದೃಷ್ಟಾಂತ ನೀಡಲಾಗಿದೆ. ಆದರಿಂದ ಉಪಾದಾನಲ್ಲಿಯೇ ಕಾರ್ಯಲಯ ಎನ್ನುವ ನಿಯಮವಿಲ್ಲ ಎಂದು ಹಿಂದೆಯೇ ಹೇಳಿದ್ದಾಗಿದೆ.

ಜೇಡರಹುಳು ಉಪಾದಾನವಲ್ಲ ಎನ್ನಲು ಇನ್ನು ಒಂದು ಕಾರಣವಿದೆ—ಜೇಡರಹುಳು ಚೇತನ. ಚೇತನವು ಜಡಕ್ಕೆ ಉಪಾದಾನ ಕಾರಣವಲ್ಲ. ಚೇತನವು ಎಂದೂ ಜಡವಾಗಿ ಪರಿಣಮಿಸುವುದಿಲ್ಲ ಎನ್ನುವುದು ಅದ್ವೈತಿಗೂ ಸಮ್ಮತವೆ. ಆದರಿಂದ ಚೇತನವು ಕಾರ್ಯರೂಪವಾಗಿ ಪರಿಣಮಿಸುವುದಿಲ್ಲ, 'ಕಾರ್ಯರೂಪವಾಗಿ ಗೋಚರಿಸುತ್ತದೆ, ಆದರಿಂದ ಚೇತನ ಆರೋಪಾಧಿ ಷ್ಠಾನ, ವಿವರ್ತಕಾರಣ' ಎಂದೇ ಅದ್ವೈತಿ ಒಪ್ಪಿದ್ದಾನೆ. ಆದರಿಂದ ಜೇಡರಹುಳು ಬಲೆಯಾಗಿ ತಾನೇ ಪರಿಣಮಿಸುವುದಿಲ್ಲ, ಬಲೆಗಿಂತ ಬೇರೆಯಾಗಿಯೇ ಅದು ಗೋಚರವಾಗುತ್ತದೆ. ಹುಳು ನಾಶವಾದ ಬಳಿಕವೂ ಬಲೆ ಇರುತ್ತದೆ. ಆದರಿಂದ ಹುಳುವಿನ ಮೈಯ ಧಾತು ವಿಶೇಷವೇ ಬಲೆಯಾಗಿ ಪರಿಣಮಿಸುತ್ತದೆ, ಧಾತುವಿಶೇಷವೆ ಉಪಾದಾನ, ಹುಳು ಶರೀರದಲ್ಲಿರುವ ಚೇತನ ಕೇವಲ ನಿಮಿತ್ತಕಾರಣ ಎನ್ನಲೇಬೇಕು. ಈ ಜೇಡರಹುಳುವಿನ ದೃಷ್ಟಾಂತದಿಂದ ಬ್ರಹ್ಮವು ನಿಮಿತ್ತಕಾರಣವೆಂದೇ ಸಿದ್ಧವಾಗುತ್ತದೆ ಹೊರತು ಉಪಾದಾನಕಾರಣವೆಂದಲ್ಲ.

ಮಾನವಶರೀರದಿಂದ ಕೂದಲು ರೋಮಗಳು ಉದ್ಭವಿಸುವುದೂ ಕೂಡ ಹೀಗೇ ಬ್ರಹ್ಮವು ಪ್ರಪಂಚಕ್ಕೆ ಉಪಾದಾನಕಾರಣವೆನ್ನುವಲ್ಲಿ ದೃಷ್ಟಾಂತವಲ್ಲ, ನಿಮಿತ್ತಕಾರಣವೆನ್ನುವಲ್ಲಿಯೇ ದೃಷ್ಟಾಂತ. ಮಾನವ ಶರೀರ ಧಾತುವೇ ಕೂದಲು ರೋಮಗಳಾಗಿ ಪರಿಣಮಿಸುವುದರಿಂದ ಶರೀರ ಧಾತುವೇ ಉಪಾದಾನ, ಮಾನವಚೇತನ ಜಡವಾಗಿ ಪರಿಣಮಿಸದಿರುವುದರಿಂದ ನಿಮಿತ್ತ ಮಾತ್ರ. ಹೀಗಾಗಿ ಮಾನವದೃಷ್ಟಾಂತದಿಂದ ಬ್ರಹ್ಮವು ನಿಮಿತ್ತಕಾರಣವೆಂದೇ ಸಿದ್ಧವಾಗುತ್ತದೆ ಹೊರತು ಉಪಾದಾನಕಾರಣವೆಂದಲ್ಲ.

ತಂದೆತಾಯಿಗಳೂ ಹೀಗೇ ಚೇತನರಾದ್ದರಿಂದ ಪುತ್ರರೂಪದಿಂದ ಪರಿಣಮಿಸುವುದಿಲ್ಲ. ಜಡವಾದ ಅವರ ಶರೀರ ಧಾತುವೇ ಪುತ್ರಶರೀರರೂಪವಾಗಿ ಪರಿಣಮಿಸುತ್ತದೆ. ಅವರ ಚೇತನಗಳು ಕೇವಲ ಪುತ್ರೋತ್ಪತ್ತಿಗೆ ನಿಮಿತ್ತಕಾರಣವಾಗಿವೆ. ಅದರಿಂದ 'ಸಸರ್ಜ ಮಾತಾ ಪಿತೃವತ್' ಎಂಬ ದೃಷ್ಟಾಂತದಿಂದಲೂ ಬ್ರಹ್ಮ ಜಗದುಪಾದಾನವೆಂದು ಸಿದ್ಧವಾಗುವುದಿಲ್ಲ.

**ನಾಪಿ 'ಏಕಮೇವಾದ್ವಿತೀಯಂ' ಇತಿ ವಸ್ತ್ವಂತರನಿಷೇಧಾತ್ ಆತ್ಮನ ಏವ ಉಪಾದಾನತ್ವಂ । ತ್ವನ್ಮತೇಽಪ್ಯವಿದ್ಯಾದೇಃ ಸತ್ತ್ವಾತ್ ।**

ಸೃಷ್ಟಿಗೆ ಪೂರ್ವದಲ್ಲಿ ಏಕಮೇವ ಅದ್ವಿತೀಯ ಬ್ರಹ್ಮವಿತ್ತು ಬೇರಾವ ಕಾರಣವಿರಲಿಲ್ಲ. ಬ್ರಹ್ಮದಿಂದಲೆ ಎಲ್ಲ ಪ್ರಪಂಚ ಜನಿಸಿತು' ಎಂದು ಉಪನಿಷತ್ತು ಹೇಳುವುದರಿಂದ ಬ್ರಹ್ಮವು ಉಪಾದಾನಕಾರಣ ಎಂದೂ ಅದ್ವೈತಿ ಹೇಳುತ್ತಾನೆ. ಇದೂ ಸರಿಯಲ್ಲ. ಬ್ರಹ್ಮನಿಗಿಂತ ಬೇರೆ ಸತ್ಯವಿರಲಿಲ್ಲ ಎನ್ನಬೇಕು. ಮಿಥ್ಯೆಯಾದ ಅನಾದಿ ಅವಿದ್ಯೆ ಇತ್ತು. 'ತಮ ಆಸೀತ್ ತಮಸಾ ಗೂಹ್ಯಮಗ್ರೇ' ಎಂದು ನಾಸದೀಯಸೂಕ್ತದಲ್ಲಿ ಹೇಳುವಂತೆ 'ತಮಸ್ಸು' ಅಂದರೆ ಅವಿದ್ಯೆ ಇತ್ತು, ಇದು ಪ್ರಪಂಚ ಸೃಷ್ಟಿಗೆ ಉಪಾದಾನಕಾರಣ, ಕಾಲಕರ್ಮಾದಿಗಳು ನಿಮಿತ್ತಕಾರಣ ಎಂದು ಅದ್ವೈತಿಯೆ ಒಪ್ಪಿದ್ದಾನೆ.



**''यद्भूतयोनिम्'' इति योनिशब्दस्तु ''योनिष्ट इंद्र निषदे इत्यादिप्रयोगान्नोपादानत्वे नियत इति परैरप्यंगीकृतम् ।**

**नाप्येकविज्ञानेन सर्वविज्ञानानुपपत्तिरुपादानत्वे मानम्, सादृश्यप्राधान्याभ्यामेव तदुपपत्तेरुक्तत्वात् । नापि ''सर्वं खल्विदं ब्रह्म'' इत्यादिसामानाधिकरण्यानुपपत्तिस्तत्र मानम्। सर्वं समाप्नोषि ततोऽसि सर्वः'' इतिस्मृत्यैवान्यथा व्याख्यातत्वात् । प्रकृत्यधिकरणं**

**तु भाष्य एवाऽन्यथा व्याख्यातम् । एतेन ब्रह्मण एव परिणाम इति भास्करादिमतमपास्तम् ।**

ननु यदि ब्रह्मोपादानं न स्यात्कथं तर्हि ''यद्भूतयोनिं परिपश्यंति धीरा'' इत्यादौ योनिशब्दप्रयोगः इत्याशंक्याह— **भूतयोनिमिति ।।** योनिशब्दप्रयोगस्य ''योनिष्ट इंद्र निषदे अकारि तमा नृभिः पुरुहूत प्रयाहि''इत्यादाविव स्थानपरत्वेनाप्युपपत्तिः । अंगीकृतं च त्वया ''योनिश्च हि गीयते'' इति सूत्रभाष्ये योनिष्ट इत्यादौ योनिशब्दस्य स्थानपरत्वमिति । न तद्बलेनोपादानत्वसिद्धिरिति भावः ।। **उक्तत्वादिति ।।** वाचारंभणश्रुत्यर्थकथनावसर इति शेषः ।। **सामानाधिकरण्यानुपपत्तिरिति ।।** कार्यकारणयोः सामानाधिकरण्यप्रयोगस्य उपादानोपादेयतां विनानुपपत्तेरिति भावः । ननु यदि ब्रह्म जगदुपादानं न स्यात्तर्हि प्रकृत्यधिकरणविरोध इत्याशंक्याह— **प्रकृत्यधिकरणं त्विति। अन्यथाव्याख्यातमिति ।।** प्रकृतिशब्दोपलक्षितस्त्रीलिंगशब्दसमन्वयपरतया व्याख्यातमित्यर्थः ।।



ಯತ್‌ತದದ್ರೇಶ್ಯಮಗ್ರಾಹ್ಯಮಗೋತ್ರಮವರ್ಣಂ
ಅಚಕ್ಷುಃ ಶ್ರೋತ್ರಂ ತದಪಾಣಿಪಾದಂ ।
ನಿತ್ಯಂವಿಭುಂ ಸರ್ವಗತಂ ಸುಸೂಕ್ಷ್ಮಂ ತದವ್ಯಯಂ
ತದ್‌ಭೂತಯೋನಿಂ ಪರಿಪಶ್ಯಂತಿ ಧೀರಾಃ ।। (ಮುಂಡಕ 1.1.6)

'ವೇದಗಳಿಂದ ಹೊರತು ಬೇರೆ ಪ್ರಮಾಣಗಳಿಂದ ತಿಳಿಯಲಾಗದುದು, ಗೋತ್ರ–ವರ್ಣ–ಚಕ್ಷುರಾದಿ ಇಂದ್ರಿಯಗಳಿಂದ ರಹಿತ, ನಿತ್ಯ, ಸರ್ವಶಕ್ತ, ಸರ್ವವ್ಯಾಪ್ತ, ಅತ್ಯಂತ ಸೂಕ್ಷ್ಮ, ನಾಶರಹಿತ. ಇಂಥ ಬ್ರಹ್ಮವನ್ನು ಜ್ಞಾನಿಗಳು ವೇದದಿಂದ ಜಗತ್‌ಕಾರಣವೆಂದು ತಿಳಿಯುತ್ತಾರೆ. 'ಈ ಶ್ರುತಿಯನ್ನು ಬ್ರಹ್ಮ ಜಗದುಪಾದಾನ ಕಾರಣವೆನ್ನಲು ಆಧಾರವಾಗಿ 'ಯೋನಿಶ್ಚ ಹಿ ಗೀಯತೇ' ಎಂಬ ಬ್ರಹ್ಮಸೂತ್ರ(1.4.28)ದಲ್ಲಿ ಅದ್ವೈತಿಗಳು ಸ್ವೀಕರಿಸಿದ್ದಾರೆ. ಆದರೆ ಇಲ್ಲಿ ಬರುವ 'ಯೋನಿ' ಶಬ್ದವು ಉಪಾದಾನ ಮಾತ್ರಾರ್ಥಕವಲ್ಲ ಎನ್ನುವುದು ಅದ್ವೈತಿಗೂ ಸಮ್ಮತ.

ಯೋನಿಷ್ಟ ಇಂದ್ರ ನಿಷದೇ ಅಕಾರಿ
ತಮಾ ನೃಭಿಃ ಪುರುಹೂತ ಪ್ರಯಾಹಿ ।
ಅಸೋ ಯಥಾ ನೋಽವಿತಾ ವೃಧೇ ಚ
ದದೋ ವಸೂನಿ ಮಮದಶ್ಚ ಸೋಮ್ಯೈಃ ।। (ಋಗ್ವೇದ 1.104.1)

'ಹೇ ಪುರುಹೂತ ಇಂದ್ರನೆ, ನಿನಗಿದೋ 'ನಿಷದೇ' ಕುಳಿತುಕೊಳ್ಳಲು 'ಯೋನಿಃ ಅಕಾರಿ' ಸ್ಥಾನವನ್ನು ಸಿದ್ಧಪಡಿಸಿದ್ದೇನೆ. 'ನೃಭಿಃ' ಮರುತರೊಂದಿಗೆ ಈ ಸ್ಥಾನಕ್ಕೆ 'ಆ ಪ್ರಯಾಹಿ' ಬಾ, 'ನಃ ಅವಿತಾ' ನಮಗೆ ರಕ್ಷಕನಾಗಿ 'ಅಸಃ' ಆಗುವಿ. 'ವೃಧೇ ಅಸಃ' ಸಮೃದ್ಧಿ ಉಂಟುಮಾಡುವಿ. 'ವಸೂನಿ ದದಃ' ಧನಸಂಪತ್ತುಗಳನ್ನು ನೀಡುವಿ. 'ಸೋಮ್ಯೈಃ ಮಮದಃ' ನಮ್ಮ ಸೋಮರಸಗಳಿಂದ ಪ್ರಸನ್ನನಾಗು'. ಈ ಮಂತ್ರವನ್ನು ಶಾಂಕರಭಾಷ್ಯದಲ್ಲಿ ಉದಾಹರಿಸಿ 'ಯೋನಿ ಶಬ್ದವು ಕ್ವಚಿತ್ ಸ್ಥಾನವಾಚಕವೂ ಆಗಿದೆ' ಎಂದಿದೆ. ಆದರಿಂದ 'ಯಥೋರ್ಣನಾಭಿಃ' ಇತ್ಯಾದಿ ವಾಕ್ಯಶೇಷ ಬಲದಿಂದಲೇ 'ತದ್‌ಭೂತಯೋನಿಂ' ಎಂಬಲ್ಲಿ 'ಯೋನಿ'ಶಬ್ದವು ಉಪಾದಾನಕಾರಣಪರವೆಂದು ಸಿದ್ಧಾಂತಮಾಡಿದೆ. ಹೀಗಾಗಿ ಯೋನಿಶಬ್ದ ಉಪಾದಾನ ಕಾರಣಾರ್ಥಕವಲ್ಲ, ನಿಮಿತ್ತ ಕಾರಣಾರ್ಥಕವೆಂದೇ ತಿಳಿಯಬೇಕು—

**ಯದ್‌ಭೂತಯೋನಿಂ ಇತಿ ಯೋನಿಶಬ್ದಸ್ತು 'ಯೋನಿಷ್ಟ ಇಂದ್ರ ನಿಷದೇ' ಇತ್ಯಾದಿಪ್ರಯೋಗಾತ್ ನೋಪಾದಾನತ್ವೇ ನಿಯತ ಇತಿ ಪರೈರಪ್ಯಂಗೀಕೃತಂ ।**

ವಿಶೇಷಾಂಶ—'ಯೋನಿಷ್ಟೇ' ಎಂಬ ಮಂತ್ರ ಋಗ್ವೇದದಲ್ಲಿ 1.7.18 ಮತ್ತು 5.3.8 ಈ ಎರಡು ಕಡೆ ಬರತ್ತದೆ. 1.7.18ರಲ್ಲಿ 'ಯೋನಿಷ್ಟ ಇಂದ್ರನಿಷದೇ' ಎಂದು ಪಾಠ. 5.3.8ರಲ್ಲಿ 'ಯೋನಿಷ್ಟ ಇಂದ್ರ ಸದನೇ' ಎಂದು ಪಾಠ. ನ್ಯಾಯಾಮೃತ ಆಮೋದಗಳಲ್ಲಿ ಎರಡೂ ಕಡೆ 'ಸದನೇ' ಎಂದು ಪಾಠ ಕಾಣುತ್ತದೆ. ಆದರೆ ಶಾಂಕರಭಾಷ್ಯದಲ್ಲಿ 'ನಿಷದೇ' ಎಂದು ಪಾಠವಿದೆ. ಅದರಿಂದ ಅದನ್ನೇ ಪ್ರಕೃತ ಇಟ್ಟುಕೊಳ್ಳುವುದು ಉಚಿತ. 'ಸದನೇ' 'ನಿಷದೇ'ಗಳಿಗೆ ಅರ್ಥವ್ಯತ್ಯಾಸವಿಲ್ಲ.

'ಯಥಾ ಸೋಮ್ಯೈಕೇನ ಮೃತ್‌ಪಿಂಡೇನ ಸರ್ವಂ ಮೃನ್ಮಯಂ ವಿಜ್ಞಾತಂ ಸ್ಯಾತ್' (ಛಾಂದೋಗ್ಯ.ಉ. 6.1.4,5,6) ಎಂದು ಮುಂತಾಗಿ ಏಕವಿಜ್ಞಾನೇನ ಸರ್ವವಿಜ್ಞಾನವನ್ನು ಹೇಳಿದ್ದು ಬ್ರಹ್ಮವು ಜಗದುಪಾದಾನವಲ್ಲದಿದ್ದರೆ ಕೂಡಲಾರದು. ಬ್ರಹ್ಮವು ಸರ್ವೋಪಾದಾನ ವಾದ್ದರಿಂದಲೇ ಬ್ರಹ್ಮ ಒಂದನ್ನು ತಿಳಿದರೆ ಸರ್ವವನ್ನು ತಿಳಿದಂತಾಗುತ್ತದೆ. ಹೀಗಾಗಿ ಬ್ರಹ್ಮವು ಸರ್ವಪ್ರಪಂಚಕ್ಕೆ ಉಪಾದಾನ ಕಾರಣವೆನ್ನಲು ಏಕವಿಜ್ಞಾನೇನ ಸರ್ವವಿಜ್ಞಾನವೇ ಪ್ರಮಾಣ' ಎಂದು ಅದ್ವೈತಿಗಳು ಹೇಳುತ್ತಾರೆ.

ಇದೂ ಸರಿಯಲ್ಲ. ಬ್ರಹ್ಮ ಒಂದನ್ನು ತಿಳಿದರೆ ಸರ್ವವನ್ನು ತಿಳಿದಂತಾಗಬೇಕೆಂದರೆ ಬ್ರಹ್ಮವು ಸರ್ವೋಪಾದಾನವಾಗಬೇಕಿಲ್ಲ. ಸಾದೃಶ್ಯದಿಂದಲೇ ಏಕವಿಜ್ಞಾನದಿಂದ ಸರ್ವವಿಜ್ಞಾನ ಶಕ್ಯ. ಪ್ರಾಧಾನ್ಯದಿಂದಲೇ ಏಕವಿಜ್ಞಾನದಿಂದ ಸರ್ವವಿಜ್ಞಾನ ಫಲ ಲಭ್ಯ ಎಂದು ನಾವು ಹಿಂದೆಯೇ 'ವಾಚಾರಂಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಂ' ಎಂಬ ಶ್ರುತ್ಯರ್ಥವರ್ಣನದ ಸಂದರ್ಭದಲ್ಲಿ ಹೇಳಿದ್ದೇವೆ—

**ನಾಪ್ಯೇಕ ವಿಜ್ಞಾನೇನ ಸರ್ವವಿಜ್ಞಾನಾನುಪಪತ್ತಿಃ ಉಪಾದಾನತ್ವೇ ಮಾನಂ । ಸಾದೃಶ್ಯ ಪ್ರಾಧಾನ್ಯಾಭ್ಯಾಮೇವ ತದುಪಪತ್ತೇಃ ಉಕ್ತತ್ವಾತ್ ।**

'ಸರ್ವಂ ಖಲ್ವಿದಂ ಬ್ರಹ್ಮ ತಜ್ಜಲಾನಿತಿ ಶಾಂತ ಉಪಾಸೀತ' (ಛಾಂದ್ಯೋಗ್ಯ 3.14.1) 'ಈ ಬ್ರಹ್ಮ ಎಲ್ಲರೊಳಗಿದೆ. ಅದನ್ನು 'ಜಲಾನ್' ಪ್ರಳಯಜಲದಲ್ಲಿ ಕ್ರೀಡಿಸುವನೆಂದು ಉಪಾಸನೆ ಮಾಡಬೇಕು' ಈ ಮಂತ್ರದಲ್ಲಿ 'ಬ್ರಹ್ಮನು ಜಗದುಪಾದಾನ' ಎಂದಿದೆ ಎಂದು ಅದ್ವೈತಿ ಹೇಳುತ್ತಾನೆ–

'ಜ-ಲ-ಅನ್' 'ಜಲಾನ್' ಜಗತ್ತು ಬ್ರಹ್ಮನಲ್ಲಿ 'ಜ' ಜನಿಸುತ್ತದೆ. 'ಲ' ಲಯ ಹೊಂದುತ್ತದೆ. 'ಅನ್' ಚೇಷ್ಟೆ ಮಾಡುತ್ತದೆ, ಜನ್ಮಲಯಗಳು ಒಂದೆಡೆ ಆಗಬೇಕೆಂದರೆ ಅದು ಉಪಾದಾನದಲ್ಲಿಯೇ ಎಂದು ಇಟ್ಟುಕೊಂಡು ಬ್ರಹ್ಮನನ್ನು ಜಗದುಪಾದಾನನೆಂದು 'ಜಲಾನ್' ಶಬ್ದವು ಹೇಳುತ್ತದೆ ಎಂದೂ, 'ಸರ್ವಂ ಬ್ರಹ್ಮ' ಎಂದು ಕಾರ್ಯಕಾರಣಗಳಿಗೆ 'ಸಾಮಾನಾಧಿಕರಣ್ಯ' ಅಭೇದ ಬರಬೇಕಾದರೆ ಕಾರಣವು ಉಪಾದಾನವೇ ಆಗಿರಬೇಕೆಂದೂ ಅದ್ವೈತಿಗಳು ಹೇಳುತ್ತಾರೆ. ಅಭೇದವನ್ನು ಹೇಳಿದ್ದೇ ಉಪಾದಾನತ್ವದಲ್ಲಿ ಪ್ರಮಾಣ. ಉಪಾದಾನತ್ವವಿಲ್ಲದೆ ಅಭೇದ ಕೂಡಲಾರದು ಎನ್ನುತ್ತಾರೆ. ಅದೂ ಸರಿಯಲ್ಲ.

ನಮಃ ಪುರಸ್ತಾದಥ ಪೃಷ್ಠತಸ್ತೇ
ನಮೋಽಸ್ತು ತೇ ಸರ್ವತ ಏವ ಸರ್ವ ।
ಅನಂತ ವೀರ್ಯಾಮಿತವಿಕ್ರಮಸ್ತ್ವಂ
ಸರ್ವಂ ಸಮಾಪ್ನೋಷಿ ತತೋಽಸಿ ಸರ್ವಃ (ಗೀತಾ 11.40)

'ನಿನಗಿದೋ ಮುಂದೆಯೂ ನಮಸ್ಕಾರ. ಹಿಂದೆಯೂ ನಮಸ್ಕಾರ' ಎಲ್ಲ ಪಾರ್ಶ್ವಗಳಲ್ಲಿ ನಮಸ್ಕಾರ. ನೀನು ಸರ್ವಶಕ್ತ ಅಮಿತಪರಾಕ್ರಮಿ. ಸರ್ವವ್ಯಾಪ್ತ. ಆದರಿಂದಲೇ 'ಸರ್ವಂ ಖಲ್ವಿದಂ ಬ್ರಹ್ಮ' ಇತ್ಯಾದಿಶ್ರುತಿಗಳಲ್ಲಿ 'ಸರ್ವ' ಎನಿಸಿರುವಿ ಎಂದು ಗೀತಾವಚನವೇ 'ಸರ್ವ ಖಲ್ವಿದಂ ಬ್ರಹ್ಮ' ಎಂಬ ಶ್ರುತಿಯನ್ನು ವ್ಯಾಖ್ಯಾನಿಸಿದೆ. ಯದ್ಯಪಿ 'ಸಮಾಪ್ನೋಷಿ' ಎಂಬಲ್ಲಿ 'ಆಪ್ನೋಷಿ' ಎಂಬುದರಿಂದಲೇ ವ್ಯಾಪ್ತಿ ಉಕ್ತವಾಗುತ್ತಿರುವಾಗ 'ಸಂ' ಶಬ್ದ ವ್ಯರ್ಥ. ಮತ್ತು ಸರ್ವವ್ಯಾಪಿತ್ವ ಆಕಾಶಾದಿಗಳಲ್ಲಿಯೂ ಇರುವುದರಿಂದ 'ಸರ್ವ'ಶಬ್ದ ಪ್ರವೃತ್ತಿ ನಿಮಿತ್ತವು ಆಕಾಶಾದಿಗಳಲ್ಲಿ ಅತಿಪ್ರಸಕ್ತವಾಗಿದೆ ಎಂಬ ಆಕ್ಷೇಪ ಬರಬಹುದು. ಅದಕ್ಕೆ 'ಸಂ' ಎಂದರೆ ಸಮ್ಯಕ್, ಚೆನ್ನಾಗಿ ಅಂದರೆ ಸರ್ವನಿಯಾಮಕನಾಗಿಯೇ ಸರ್ವವ್ಯಾಪಕನಾಗಿದ್ದಾನೆ ಎಂದು ವ್ಯಾಖ್ಯಾನಿಸಬೇಕು—

**ನಾಪಿ ಸರ್ವಂ ಖಲ್ವಿದಂ ಬ್ರಹ್ಮ ಇತ್ಯಾದಿ ಸಾಮಾನಾಧಿಕರಣ್ಯಾನುಪಪತ್ತಿಃ ತತ್ರ ಮಾನಂ। 'ಸರ್ವಂ ಸಮಾಪ್ನೋಷಿ ತತೋಽಸಿ ಸರ್ವಃ' ಇತಿ ಸ್ಮೃತ್ಯೈವ ಅನ್ಯಥಾ ವ್ಯಾಖ್ಯಾತತ್ವಾತ್ ।**

ಬ್ರಹ್ಮ ಜಗದುಪಾದಾನವಲ್ಲದಿದ್ದರೆ ಬ್ರಹ್ಮಸೂತ್ರ ಪ್ರಕೃತ್ಯಧಿಕರಣ ವಿರೋಧ ಬರುತ್ತದೆ. 'ಪ್ರಕೃತಿಶ್ಚ ಪ್ರತಿಜ್ಞಾದೃಷ್ಟಾಂತಾನುಪರೋಧಾತ್' ಎಂಬ ಬ್ರಹ್ಮಸೂತ್ರ (1.4.23)ದಲ್ಲಿ ಬ್ರಹ್ಮ ಜಗತ್ತಿಗೆ ಕೇವಲ ನಿಮಿತ್ತಕಾರಣವಲ್ಲ, ಉಪಾದಾನಕಾರಣವೂ ಆಗಿದೆ ಎಂದು ಅದ್ವೈತಭಾಷ್ಯ ಸಿದ್ಧಾಂತ ಮಾಡಿದೆ. 'ಉತ ತಮಾದೇಶಮಪ್ರಾಕ್ಷ್ಯಃ ಯೇನಾಶ್ರುತಂ ಶ್ರುತಂ ಭವತಿ ಅಮತಂ ಮತಂ

ಅವಿಜ್ಞಾತಂ ವಿಜ್ಞಾತಂ' (ಛಾಂದೋಗ್ಯ. 6.1.2) ಎಂದು ಪ್ರತಿಜ್ಞೆ. 'ಯಥಾ ಸೋಮ್ಯ ಏಕೇನ ಮೃತ್‌ಪಿಂಡೇನ ಸರ್ವಂ ಮೃನ್ಮಯಂ ವಿಜ್ಞಾತಂ ಸ್ಯಾತ್ ವಾಚಾರಂಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಂ' ಎಂದು ದೃಷ್ಟಾಂತ. ಬ್ರಹ್ಮನನ್ನು ತಿಳಿದರೆ ಎಲ್ಲವನ್ನೂ ತಿಳಿದಂತೆಯೆ ಎಂದು ಪ್ರತಿಜ್ಞೆಮಾಡಿ ಅದಕ್ಕೆ ಒಂದು ಮಣ್ಣುಮುದ್ದೆಯನ್ನು ತಿಳಿದರೆ ಎಲ್ಲ ಮೃಣ್ಮಯದ ಜ್ಞಾನವೂ ಬರುತ್ತದೆ ಎಂದು ದೃಷ್ಟಾಂತ ಉಕ್ತವಾಗಿದೆ. ಈ ಪ್ರತಿಜ್ಞಾದೃಷ್ಟಾಂತಗಳು ಕೂಡಬೇಕಾದರೆ ಬ್ರಹ್ಮವನ್ನು ಕೇವಲ ನಿಮಿತ್ತವಲ್ಲ, ಉಪಾದಾನವೂ ಆಗಿದೆ ಎಂದು ಒಪ್ಪಲೇಬೇಕು. ಉಪಾದಾನವಾಗದಿದ್ದರೆ ಕೇವಲ ನಿಮಿತ್ತವೇ ಆಗಿದ್ದರೆ ಕಾರ್ಯಕಾರಣಗಳು ಬೇರೇಬೇರೇ ಆಗಿರುವುದರಿಂದ ಕಾರಣವನ್ನು ತಿಳಿದಮಾತ್ರಕ್ಕೆ ಕಾರ್ಯಜ್ಞಾನ ಬರಲಾರದು. ಉಪಾದಾನವಾದರೆ ಕಾರ್ಯಕಾರಣಗಳಿಗೆ ಅಭೇದ ಬರುವುದರಿಂದ ಕಾರಣವನ್ನು ತಿಳಿದ ಮಾತ್ರಕ್ಕೇ ಕಾರ್ಯಜ್ಞಾನ ಸುಲಭ. ಅದರಿಂದ ಸೂತ್ರವು ಹೇಳುತ್ತದೆ— 'ಬ್ರಹ್ಮವು ಜಗತ್ತಿಗೆ ಕೇವಲ ನಿಮಿತ್ತವಲ್ಲ, 'ಪ್ರಕೃತಿಶ್ಚ' ಉಪಾದಾನಕಾರಣವೂ ಆಗಿದೆ. ಏಕೆಂದರೆ 'ಉತ ತಮಾದೇಶಮಪ್ರಾಕ್ಷ್ಯಃ' ಎಂಬ ಪ್ರತಿಜ್ಞೆಯೂ 'ಯಥಾ ಏಕೇನ ಮೃತ್ಪಿಂಡೇನ' ಎಂದು ದೃಷ್ಟಾಂತವೂ ಉಪಾದಾನತ್ವ ಪಕ್ಷದಲ್ಲಿ 'ಅನುಪರೋಧಾತ್' ವಿರೋಧವಿಲ್ಲದಂತೆ ಕೂಡುತ್ತವೆ' ಎಂದು.

ಅದ್ವೈತಿಗಳ ಈ ಅಧಿಕರಣ ರಚನೆ ಬಹಳ ಅಸಂಗತವಾಗಿದೆ. ಬ್ರಹ್ಮವು ಜಗತ್ತಿಗೆ ನಿಮಿತ್ತವೂ ಆಗಿದೆ. ಉಪಾದಾನವೂ ಆಗಿದೆ ಎನ್ನುವುದು ಪರಸ್ಪರ ವಿರುದ್ಧ. ನಿಮಿತ್ತವೆಂದರೆ ಕಾರ್ಯಕ್ಕಿಂತ ಭಿನ್ನ. ಉಪಾದಾನವು ಕಾರ್ಯಕ್ಕಿಂತ ಅಭಿನ್ನ. ನಿಮಿತ್ತತ್ವವನ್ನು ಒಪ್ಪಿದರೆ ಲೋಕದೃಷ್ಟಿಯಿಂದ ಕಾರ್ಯ ಕಾರಣಗಳಿಗೆ ಭೇದ ಬರುವುದರಿಂದ ಏಕವಿಜ್ಞಾನೇನ ಸರ್ವವಿಜ್ಞಾನ ಕೂಡುವುದಿಲ್ಲ. ಲೋಕದೃಷ್ಟಿ ಯನ್ನು ಬಿಟ್ಟು ಶ್ರುತಿಬಲದಿಂದಲೇ ನಿಮಿತ್ತತ್ವಪಕ್ಷದಲ್ಲಿಯೂ ಏಕವಿಜ್ಞಾನೇನ ಸರ್ವವಿಜ್ಞಾನ ಕೂಡುತ್ತದೆ ಎಂದರೆ ಉಪಾದಾನತ್ವವನ್ನು ಒಪ್ಪದ ಪಕ್ಷದಲ್ಲಿಯೂ ಏಕವಿಜ್ಞಾನೇನ ಸರ್ವವಿಜ್ಞಾನವು ಶ್ರುತಿಬಲದಿಂದಲೇ ಏಕೆ ಕೂಡಬಾರದು? ಮತ್ತು ಉಪಾದಾನತ್ವವನ್ನು ಒಪ್ಪುವುದು ವಿವರ್ತವಾದಿಯಾದ ಅದ್ವೈತಿಗೆ ಪ್ರತಿಕೂಲವೂ ಆಗಿದೆ.

ಆದರಿಂದ ನಮ್ಮ ಭಾಷ್ಯದಲ್ಲಿ ಅಧಿಕರಣರಚನೆ ಬೇರೆಯೇ ಆಗಿದೆ. 'ಪ್ರಕೃತಿ' ಮುಂತಾದ ಎಲ್ಲ ಸ್ತ್ರೀಲಿಂಗ ಶಬ್ದಗಳೂ ಪರಮಾತ್ಮವಾಚಕವೇ ಆಗಿವೆ. 'ಹಂತ್ಯೈತಮೇವ ಪುರುಷಂ ಸರ್ವಾಣಿ ನಾಮಾನಿ ಅಭಿವದಂತಿ' 'ಎಲ್ಲ ಶಬ್ದಗಳೂ ಪರಮಾತ್ಮನನ್ನೇ ಮುಖ್ಯವಾಗಿ ಹೇಳುತ್ತವೆ' ಎಂದು ಪ್ರತಿಜ್ಞೆ. ಇದಕ್ಕೆ ದೃಷ್ಟಾಂತ—'ಯಥಾ ನದ್ಯಃ ಸ್ಯಂದಮಾನಾಃ ಸಮುದ್ರಾಯಣಾಃ ಸಮುದ್ರಮಭಿವಿಶಂತಿ' 'ಎಲ್ಲ ನದಿಗಳೂ ಸಮುದ್ರವನ್ನೇ ಹೋಗಿ ಸೇರುವಂತೆ' ಎಂದು ದೃಷ್ಟಾಂತ. ಈ ಪ್ರತಿಜ್ಞಾದೃಷ್ಟಾಂತಗಳು ಕೂಡಬೇಕಾದರೆ ಸ್ತ್ರೀಲಿಂಗಶಬ್ದಗಳನ್ನೂ ಕೂಡ ಪರಮಾತ್ಮವಾಚಕವೆಂದೇ ಅಂಗೀಕರಿಸಬೇಕು. ಇಲ್ಲದಿದ್ದರೆ ವಿರೋಧ ಉಂಟಾಗುವುದು' ಎಂದು.

ಏಕವಿಜ್ಞಾನೇನ ಸರ್ವವಿಜ್ಞಾನ ಪ್ರತಿಜ್ಞೆಯೂ ಮೃತ್ಪಿಂಡಾದಿ ದೃಷ್ಟಾಂತಗಳೂ ಪ್ರಧಾನವನ್ನು

ತಿಳಿದರೆ ಅಪ್ರಧಾನಜ್ಞಾನದ ಫಲ ಸಿದ್ಧವಾಗುವುದೆಂಬ ಅಭಿಪ್ರಾಯದವುಗಳೆಂದು 'ಅನ್ಯಾರ್ಥಂ ತು ಜೈಮಿನಿಃ ಪ್ರಶ್ನವ್ಯಾಖ್ಯಾನಾಭ್ಯಾಂ ಅಪಿ ಚೈಕೇ'(1.4.19) ಕರ್ಮಾದಿ ಸರ್ವಜ್ಞಾನವೂ ಪ್ರಧಾನವಾದ ಪರಮಾತ್ಮಜ್ಞಾನಕ್ಕಾಗಿಯೇ ಇರುತ್ತದೆ. ಪರಮಾತ್ಮನನ್ನು ತಿಳಿದರೇ ಕರ್ಮಾದಿಗಳ ಜ್ಞಾನ ಸಫಲವಾಗುವುದು ಎಂದು ಭಾಷ್ಯದಲ್ಲಿ ಸಮಂಜಸವಾಗಿ ನಿರೂಪಿತವಾಗಿದೆ.

ಪ್ರಪಂಚವು ಬೇರೆಯಲ್ಲ, ಬ್ರಹ್ಮನದೇ ಪರಿಣಾಮ ಎನ್ನುವ ಭಾಸ್ಕರಾದಿ ಮತವೂ ಇದರಿಂದಲೇ ನಿರಾಕೃತವಾಯಿತು—

ಪ್ರಕೃತ್ಯಧಿಕರಣಂ ತು ಭಾಷ್ಯ ಏವ ಅನ್ಯಥಾ ವ್ಯಾಖ್ಯಾತಂ ।
ಏತೇನ ಬ್ರಹ್ಮಣ ಏವ ಪರಿಣಾಮ ಇತಿ ಭಾಸ್ಕರಾದಿಮತಮಪಾಸ್ತಂ ।



नापि महाभूतानि सद्वस्तुप्रकृतिकानि सत्स्वभावानुरक्तत्वे सति विविधविकारत्वात् । मृदनुस्यूतघटादिवदिति विवरणोक्तमनुमानं मानम्। विवर्तमते उपादानता न युक्तेत्युक्तत्वात् । सत्प्रधान-प्रकृतिकत्वस्य मन्मतेऽपि सत्त्वाच्च । खंडो गौर्मुंडो गौरिति गोस्वभावानुरक्ते खंडादौ व्यभिचाराच्च । सदनुपादानकत्वेऽपि सद्ब्रह्मेतिवत्सती पृथिवीत्यादि प्रतीतेरुपपत्त्याऽप्रयोजकत्वाच्च । अत्रेदानीं सन् घट इतिवत् अत्रेदानीमसन् घट इत्यपि प्रतीत्या घटादेः, असन्नृशृंगं असत्खपुष्पमित्यादिप्रतीत्या नृशृंगादीनामप्यसदु-पादानकत्वापाताच्च ।

ब्रह्म न द्रव्योपादानं चेतनत्वाच्चैत्रवत् । जगन्नानंदप्रकृतिकम् तत्स्वभावाननुरक्तत्वात् यद्यत्स्वभावाननुरक्तं न तत्तत्प्रकृतिकम् । यथा घटस्वभावाननुरक्तः पटो न घटोपादानक इत्यादिना सत्प्रतिपक्षत्वाच्च ।

यच्च जगदभिन्ननिमित्तोपादानकं प्रेक्षापूर्वकजनितकार्यत्वात् सुखदुःखादिवदिति विवरणोक्तमनुमानम् तन्न, विवर्तमते उपादानत्वानुपपत्तेरुक्तत्वात् । कार्यत्वादित्येतावत एव हेतुत्व-

**संभवाच्च । त्वन्मते दुःखादीनामंतःकरणोपादानकत्वेन साध्यवैकल्याच्च ।**

**जगदुपादानं न कर्तृ द्रव्योपादानत्वान्मृद्वत् । जगत्कर्ता वा न द्रव्योपादानं कर्तृत्वात्कुलालवदित्यादिना सत्प्रतिपक्षत्वाच्च ।**

**एतेन विमतमभिन्ननिमित्तोपादानकं कार्यत्वात् सर्वकार्यनिमित्तकालघटसंयोगवदिति निरस्तम् ।**

**तस्माद् ब्रह्म जगत्कर्तृत्वादिनैव श्रुत्यादिवेद्यं न तूपादानत्वेनेति ।**

**महाभूतानीति** ।। सत्प्रकृतिकमित्यत्र किं सच्छब्देन ब्रह्मोच्यते उताबाधितमिति विकल्प्याद्य आह— **विवर्त इति** ।। द्वितीय आह— **सत्प्रधानेति** ।। चैत्रात्मनोऽपि गुणाद्युपादानतया दृष्टांते साध्यवैकल्यपरिहारायाह– **द्रव्येति** ।। दृष्टांते साध्यसत्त्वज्ञापनाय सर्वकार्यनिमित्तेति कालविशेषणम् ।



**ನಾಪಿ 'ಮಹಾಭೂತಾನಿ ಸದ್ವಸ್ತು ಪ್ರಕೃತಿಕಾನಿ ಸತ್‌ಸ್ವಭಾವಾನುರಕ್ತತ್ವೇ ಸತಿ ವಿವಿಧ ವಿಕಾರತ್ವಾತ್ ಮೃದನುಸ್ಯೂತಘಟಾದಿವತ್' ಇತಿ ವಿವರಣೋಕ್ತಂ ಅನುಮಾನಂ ಮಾನಂ।**

ಬ್ರಹ್ಮನು ಜಗದುಪಾದಾನನೆನ್ನುವಲ್ಲಿ ವಿವರಣಕಾರನು ಹೇಳಿದ ಅನುಮಾನವೂ ಪ್ರಮಾಣ ವಾಗಲಾರದು.

ಆ ಅನುಮಾನ ಹೀಗಿದೆ– ಮಹಾಭೂತಗಳು ಸತ್ಯವಾದ ಬ್ರಹ್ಮವಸ್ತುವಿನ ಪರಿಣಾಮವಾಗಿವೆ. ಬ್ರಹ್ಮನ ಸತ್ಯತ್ವಸ್ವಭಾವದಿಂದ ಯುಕ್ತವಾಗಿದ್ದು ನಾನಾ ವಿಕಾರ ಗಳಾಗಿರುವುದರಿಂದ, ಮಣ್ಣಿನ ಸ್ವಭಾವದಿಂದ ಯುಕ್ತವಾದ ಘಟಪಟಾದಿಗಳಂತೆ. ಘಟಪಟಾದಿಗಳು ಮಣ್ಣಿನ ಸ್ವಭಾವದಿಂದ ಯುಕ್ತವಾಗಿದ್ದು ಘಟಪಟ ಮುಂತಾದ ನಾನಾ ವಿಕಾರಗಳಾಗಿವೆ. ಆದರಿಂದ ಮಣ್ಣಿನ ಪರಿಣಾಮಗಳಾಗಿವೆ. ಹಾಗೇ ಪಂಚಮಹಾಭೂತಗಳು ಕೂಡ 'ಪೃಥಿವೀ ಸತೀ' 'ಜಲಂ ಸತ್' ಇತ್ಯಾದಿ ಬ್ರಹ್ಮನ ಸತ್ಯತ್ವಸ್ವಭಾವದಿಂದ ಯುಕ್ತವಾಗಿವೆ, ಪೃಥಿವೀ ಮುಂತಾದ ನಾನಾ ವಿಕಾರಗಳಾಗಿವೆ. ಆದರಿಂದ ಸತ್ಯನಾದ ಬ್ರಹ್ಮನ ಪರಿಣಾಮಗಳಾಗಿವೆ ಎಂದು. ಈ ಅನುಮಾನ ಸರಿಯಲ್ಲ. ಆದರಿಂದ ಬ್ರಹ್ಮನು ಜಗದುಪಾದಾನ ಎನ್ನುವಲ್ಲಿ ಇದು ಪ್ರಮಾಣವಾಗುವುದಿಲ್ಲ.

**ವಿವರ್ತಮತೇ ಉಪಾದಾನತಾ ನ ಯುಕ್ತಾ ಇತಿ ಉಕ್ತತ್ವಾತ್ ।**

ವಿವರ್ತಮತದಲ್ಲಿ ಮಹಾಭೂತಗಳು ಬ್ರಹ್ಮನ ಪರಿಣಾಮವಲ್ಲ, ಬ್ರಹ್ಮನ ವಿವರ್ತ ಎಂದು ಹೇಳಿದ್ದೇವೆ. ಆದರಿಂದ ಪರಿಣಾಮ ಎಂದು ಸಾಧನೆ ಮಾಡಿದರೆ ಬಾಧದೋಷ.

**ಸತ್‌ಪ್ರಧಾನಪ್ರಕೃತಿಕತ್ವಸ್ಯ ಮನ್ಮತೇಽಪಿ ಸತ್ವಾಚ್ಚ ।**

ಸದ್‌ವಸ್ತು ಪ್ರಕೃತಿಕತ್ವವು ಸಾಧ್ಯ. ಸದ್ವಸ್ತು ದ್ವೈತಮತದಲ್ಲಿ ಅಬಾಧ್ಯವಾಗಿರುವ ಪ್ರಧಾನ, ಮೂಲಪ್ರಕೃತಿ ಆಗಬಹುದು. ಏಕೆಂದರೆ ಸತ್ ಎಂದರೆ ಅಬಾಧಿತ. ಹೀಗಾಗಿ ಪಂಚಭೂತಗಳು ಪ್ರಧಾನದ ಪರಿಣಾಮಗಳಾದ್ದರಿಂದ ಸದ್‌ವಸ್ತು ಪ್ರಕೃತಿಕತ್ವಸಾಧನೆ ಮಾಡಿದರೆ ಸಿದ್ಧಸಾಧನದೋಷ.

**ಖಂಡೋ ಗೌಃ ಮುಂಡೋ ಗೌಃ ಇತಿ ಗೋಸ್ವಭಾವಾನುರಕ್ತೇ ಖಂಡಾದೌ ವ್ಯಭಿಚಾರಾಚ್ಚ ।**

ಘಟಃ ಸನ್ ಪಟಃ ಸನ್ ಎಂದು ಸದ್‌ವಸ್ತು ಘಟಪಟಾದಿಗಳಲ್ಲಿ ಎಲ್ಲ ಕಡೆ ಅನುಸ್ಯೂತವಾಗಿ ಕಾಣುವಂತೆ, ಖಂಡೋ ಗೌಃ ಮುಂಡೌ ಗೌಃ ಎಂದು ಗೋ ವಸ್ತುವು ಖಂಡ ಮುಂಡಾದಿಗಳಲ್ಲಿ ಅನುಗತವಾಗಿ ಕಾಣುತ್ತಿದ್ದರೂ ಅವು ಗೋವಿಕಾರಗಳಲ್ಲ, ಗೋ ಪ್ರಕೃತಿಕವಾಗಿಲ್ಲ, ಗೋವುಗಳೇ ಆಗಿವೆ. ಆದರಿಂದ ಸಾಧ್ಯ ಇಲ್ಲ ಹೇತುವಿದೆ, ವ್ಯಭಿಚಾರ. ಅದಕ್ಕೆ 'ತದನುರಕ್ತತ್ವೇ ಸತಿ ತದ್ವಿಕಾರತ್ವಾತ್' ಎಂದು ಹೇತುಮಾಡಬೇಕು. ಎತ್ತು ತುಸು ಕೊಂಬುಗಳು ಮೂಡಿದ್ದರೆ 'ಖಂಡ', ಇನ್ನೂ ಕೊಂಬುಗಳೇ ಮೂಡಿಲ್ಲದಿದ್ದರೆ 'ಮುಂಡ' ಎನಿಸುತ್ತದೆ. ಖಂಡವೂ ಗೋವು, ಮುಂಡವೂ ಗೋವೆ. ಹೀಗಾಗಿ 'ಖಂಡ' 'ಮುಂಡ'ಗಳಲ್ಲಿ ಗೌಃ ಗೌಃ ಎಂದು ಗೋ ಅನುರಕ್ತತ್ವಬಂದರೂ ಗೋವಿಕಾರತ್ವ ಬರುವುದಿಲ್ಲವಾದ್ದರಿಂದ ಹೇತು ಬರಲಿಲ್ಲ, ವ್ಯಭಿಚಾರವಿಲ್ಲ ಎನ್ನಬೇಕು. ಆದರೆ ಆಗ ಮಹಾಭೂತ ಎಂಬ ಪಕ್ಷದಲ್ಲಿ ಸದನುರಕ್ತತ್ವ ಬಂದ್ದರೂ ಸದ್‌ವಿಕಾರತ್ವವಿಲ್ಲ. ಅದು ದ್ವೈತಮತದಲ್ಲಿ ಅಂಗೀಕೃತವಾಗಿಲ್ಲ. ಮಹಾಭೂತಗಳು ಬ್ರಹ್ಮನ ವಿಕಾರ ಎಂದು ನಾವು ಒಪ್ಪುವುದಿಲ್ಲ. ಹೀಗಾಗಿ ಅಸಿದ್ಧಿದೋಷ ಮತ್ತು ಸತ್‌ಪ್ರಕೃತಿಕತ್ವರೂಪ ಸಾಧ್ಯಕ್ಕೆ ಸದ್‌ವಿಕಾರತ್ವವು ಹೇತು ಸಾಕು. ಅದಕ್ಕೆ ಸದನುರಕ್ತತ್ವವಿಶೇಷಣ ಕೊಟ್ಟಿದ್ದೇ ವ್ಯರ್ಥ ಎಂದು ವಿಶೇಷಣ ವೈಯರ್ಥ್ಯ ದೋಷ.

**ಸದನುಪಾದಾನಕತ್ವೇಽಪಿ 'ಸದ್ ಬ್ರಹ್ಮ' ಇತಿವತ್ 'ಸತೀ ಪೃಥಿವೀ' ಇತ್ಯಾದಿ ಪ್ರತೀತೇಃ ಉಪಪತ್ತ್ಯಾ ಅಪ್ರಯೋಜಕತ್ವಾಚ್ಚ ।**

'ಸತ್‌ಬ್ರಹ್ಮ' ಎಂದು ಪ್ರತೀತಿ ಇರುವುದರಿಂದ ಬ್ರಹ್ಮವು ಸದ್ವಸ್ತುವಿನಿಂದ ಅನುರಕ್ತವೇ ಆಗಿದ್ದರೂ ಸದ್‌ವಸ್ತುಪ್ರಕೃತಿಕವಾಗಿಲ್ಲ. ಬ್ರಹ್ಮವು ಬ್ರಹ್ಮದ ಪರಿಣಾಮವಲ್ಲದಿದ್ದರೂ ಬ್ರಹ್ಮಾನುರಕ್ತ ವಾಗುವಂತೆಯೆ 'ಸತೀ ಪೃಥಿವೀ' 'ಪೃಥಿವಿಯು ಬ್ರಹ್ಮಪ್ರಕೃತಿಕವಲ್ಲದಿದ್ದರೂ 'ಬ್ರಹ್ಮಾನುರಕ್ತವಾಗಿದೆ' ಎಂಬ ಪ್ರತೀತಿ ಕೂಡುವುದರಿಂದ ಸದನುರಕ್ತತ್ವಹೇತು ಅಪ್ರಯೋಜಕ.

**'ಅತ್ರ ಇದಾನೀಂ ಸನ್ ಘಟಃ' ಇತಿವತ್ 'ಅತ್ರ ಇದಾನೀ ಅಸನ್ ಘಟಃ' ಇತ್ಯಪಿ ಪ್ರತೀತ್ಯಾ ಘಟಾದೇಃ, 'ಅಸತ್ ನೃಶೃಂಗಂ ಅಸತ್ ಖಪುಷ್ಪಂ' ಇತ್ಯಾದಿ ಪ್ರತೀತ್ಯಾ ನೃಶೃಂಗಾದೀನಾಮಪಿ ಅಸದುಪಾದಾನಕತ್ವಾಪಾತಾಚ್ಚ ।**

'ಅತ್ರ ಇದಾನಿಂ ಸನ್ ಘಟಃ' 'ಇಲ್ಲಿ ಈಗ ಘಟವು 'ಸತ್' ಎಂಬಂತೆ 'ಇಲ್ಲಿ ಈಗ ಘಟವು ಅಸತ್' ಎಂದೂ ಪ್ರತೀತಿ ಇರುವುದರಿಂದ ಘಟಾದಿಗಳಿಗೆ ಅಸದುಪಾದಾನಕತ್ವ ಬರಬೇಕಾದೀತು. 'ನೃಶೃಂಗವು ಅಸತ್, ಖಪುಷ್ಪವು ಅಸತ್' ಎಂದು ಪ್ರತೀತಿ ಇರುವುದರಿಂದ ನೃಶೃಂಗಾದಿಗಳಿಗೂ ಅಸದುಪಾದಾನಕತ್ವ ಬರಬೇಕಾದೀತು ಎಂದು ಪ್ರತಿಕೂಲತರ್ಕ ಪರಾಹತಿ ದೋಷ.

**ಬ್ರಹ್ಮ ನ ದ್ರವ್ಯೋಪಾದಾನಂ ಚೇತನತ್ವಾತ್ ಚೈತ್ರವತ್ । ಜಗತ್ ನ ಆನಂದ ಪ್ರಕೃತಿಕಂ ತತ್ಸ್ವಭಾವಾನನುರಕ್ತತ್ವಾತ್ । ಯತ್ ಯತ್ಸ್ವಭಾವಾನನುರಕ್ತಂ ನ ತತ್ ತತ್ಪ್ರಕೃತಿಕಂ । ಯಥಾ ಘಟಸ್ವಭಾವಾನನುರಕ್ತಃ ಪಟಃ ನ ಘಟೋಪಾದಾನಕಃ । ಇತ್ಯಾದಿನಾ ಸತ್ಪ್ರತಿಪಕ್ಷತ್ವಾಚ್ಚ ।**

'ಬ್ರಹ್ಮವು ದ್ರವ್ಯಕ್ಕೆ ಉಪಾದಾನವಾಗುವುದಿಲ್ಲ, ಚೇತನವಾದ್ದರಿಂದ, ಚೈತ್ರನಂತೆ' ಎಂದು ಸತ್ಪ್ರತಿಪಕ್ಷ. ಚೈತ್ರನು ತನ್ನಲ್ಲಿರುವ ಗುಣಕ್ಕೆ ಉಪಾದಾನವಾದರೂ ದ್ರವ್ಯಕ್ಕೆ ಉಪಾದಾನವಾಗುವುದಿಲ್ಲ. 'ಜಗತ್ತು ಆನಂದ ಉಪಾದಾನಕವಲ್ಲ, ಆನಂದಸ್ವಭಾವದಿಂದ ಯುಕ್ತವಲ್ಲದ್ದರಿಂದ, ಯಾವುದು ಯಾವುದರ ಸ್ವಭಾವಯುಕ್ತವಾಗಿಲ್ಲವೋ ಅದು ಅದರ ಪರಿಣಾಣಮವಾಗಿರುವುದಿಲ್ಲ, ಘಟಸ್ವಭಾವ ಯುಕ್ತವಲ್ಲದ ಪಟವು ಘಟೋಪಾದಾನಕವಲ್ಲ ಹೇಗೋ ಹಾಗೆ, ಆದರಿಂದ ಜಗತ್ತು ಆನಂದ ಸ್ವರೂಪವಾದ ಬ್ರಹ್ಮದ ಪರಿಣಾಮವಲ್ಲ' ಎಂದು ಮುಂತಾಗಿ ಸತ್ಪ್ರತಿಪಕ್ಷದೋಷವಿರುವುದರಿಂದಲೂ ಈ ಅನುಮಾನವು ಬ್ರಹ್ಮನ ಜಗದುಪಾದಾನತ್ವಕ್ಕೆ ಸಾಧಕವಾಗುವುದಿಲ್ಲ.

ಯದ್ಯಪಿ 'ಕಪಾಲಂ ಘಟಃ' ಎಂದು ಪ್ರತೀತಿ ಇಲ್ಲದ್ದರಿಂದ ಕಪಾಲಸ್ವಭಾವಾನನುರಕ್ತವಾದ ಘಟದಲ್ಲಿ ವ್ಯಭಿಚಾರ' ಎಂದು ಸಿದ್ಧಿಕಾರ ಹೇಳುತ್ತಿದ್ದಾನೆ. ಆದರೆ 'ತಂತವಃ ಪಟಃ' ಎಂಬಂತೆಯೇ 'ಕಪಾಲಂ ಘಟಃ' ಎಂದು ಪ್ರತೀತಿ ಇರುವುದರಿಂದ ಅದನ್ನು ಅಪಲಾಪ ಮಾಡುತ್ತಿದ್ದಾನೆ. ಘಟಕ್ಕೆ ಕಪಾಲ ಪ್ರಕೃತಿಕತ್ವವನ್ನು ಅವನೂ ಸಾಧನೆ ಮಾಡಬೇಕು, ಸಾಧನ ಮಾಡಬೇಕಾದರೆ ಕಪಾಲಸ್ವಭಾವಾನುರಕ್ತತ್ವ ವನ್ನು ಘಟಕ್ಕೆ ಅವನು ಹೇಳಲೇಬೇಕು.

**ಯಚ್ಚ ಜಗದ್ ಅಭಿನ್ನನಿಮಿತ್ತೋಪಾದಾನಕಂ ಪ್ರೇಕ್ಷಾಪೂರ್ವಕ ಜನಿತಕಾರ್ಯತ್ವಾತ್ ಸುಖದುಃಖಾದಿವತ್ ಇತಿ ವಿವರಣೋಕ್ತಂ ಅನುಮಾನಂ, ತನ್ನ । ವಿವರ್ತಮತೇ ಉಪಾದಾನತ್ವಾನುಪಪತ್ತೇರುಕ್ತತ್ವಾತ್ । ಕಾರ್ಯತ್ವಾತ್ ಇತ್ಯೇತಾವತ ಏವ ಹೇತುತ್ವಸಂಭವಾಚ್ಚ । ತ್ವನ್ಮತೇ ದುಃಖಾದೀನಾಂ ಅಂತಃಕರಣೋಪಾದಾನಕತ್ವೇನ ಸಾಧ್ಯವೈಕಲ್ಯಾಚ್ಚ ।**

'ಜಗತ್ತು ಪರಸ್ಪರ ಅಭಿನ್ನವಾದ ನಿಮಿತ್ತ ಉಪಾದಾನಗಳಿಂದ ಹುಟ್ಟಿದೆ, ಸಂಕಲ್ಪಪೂರ್ವಕ ಜನಿತವಾದ ಕಾರ್ಯವಾದ್ದರಿಂದ, ಸುಖದುಃಖಾದಿಗಳಂತೆ' ಎಂದು ಇನ್ನೊಂದು ಅನುಮಾನ ವಿವರಣದಲ್ಲಿದೆ. ಅದೂ ಸರಿಯಲ್ಲ.

ವಿವರ್ತಮತದಲ್ಲಿ ಬ್ರಹ್ಮನಿಗೆ ಉಪಾದಾನತ್ವವಿಲ್ಲ ಎಂದು ದೋಷವನ್ನು ಹಿಂದೆಯೇ ಹೇಳಿದ್ದೇವೆ.

ಹೇತುವಿನಲ್ಲಿ 'ಪ್ರೇಕ್ಷಾಪೂರ್ವಕಜನಿತ' ಎಂಬ ವಿಶೇಷಣ ವ್ಯರ್ಥ. 'ಕಾರ್ಯತ್ವಾತ್' ಎಂದಿಷ್ಟೇ ಸಾಕು.

ಅದಕ್ಕೆ ಸಿದ್ಧಿಕಾರ ಹೇಳುತ್ತಾನೆ 'ಪ್ರೇಕ್ಷಾಪೂರ್ವಕತ್ವಾತ್' 'ಕಾರ್ಯತ್ವಾತ್' ಎಂದು ಹೇತು ದ್ವಯದಲ್ಲಿ ತಾತ್ಪರ್ಯ' ಎಂದು. ಆದರೆ 'ಪ್ರೇಕ್ಷಾಪೂರ್ವಕತ್ವ'ವೆಂದರೆ 'ಪ್ರೇಕ್ಷಾಕಾರ್ಯತ್ವ'ವೆ! ಹೀಗಾಗಿ 'ಕಾರ್ಯತ್ವಾತ್' ಎಂದೇ ಸಾಕು, 'ಪ್ರೇಕ್ಷಾಕಾರ್ಯತ್ವಾತ್' ಎಂದು ವಿಶೇಷಣ ಕೊಟ್ಟು ಹೇಳುವುದು ವ್ಯರ್ಥ ಎಂಬ ದೋಷ ಪುನಃ ಇದ್ದೇ ಇದೆ. ಇದು ಘಟ್ಟಕುಟೀ ಪ್ರಭಾತ.

ಸುಂಕ ತೆರುವುದನ್ನು ತಪ್ಪಿಸಲು ರಾತ್ರಿಯೆಲ್ಲ ದಾರಿತಪ್ಪಿ ಬೇರೇಬೇರೆ ದಾರಿಯಲ್ಲಿ ತಿರುಗಿ, ಬೆಳಗಾದಾಗ ತಿರುಗಿ ಅದೇ ಸುಂಕದಕಟ್ಟೆಗೆ ಬಂದಂತಾಯಿತು. ಎಂದು ತರಂಗಿಣೀಕಾರರು ಹೇಳುತ್ತಾರೆ.

'ಪ್ರೇಕ್ಷಾಪೂರ್ವಕ ಜನಿತ ಕಾರ್ಯತ್ವ' ಹೇತುವಿನ ದೃಷ್ಟಾಂತವಾದ ಸುಖದುಃಖಾದಿಗಳಲ್ಲಿ ಸಾಧ್ಯವೈಕಲ್ಯವೂ ದೋಷ. ಸುಖದುಃಖಾದಿಗಳಿಗೆ ಅಂತಃಕರಣವು ಉಪಾದಾನ, ಆತ್ಮನು ನಿಮಿತ್ತ. ಉಪಾದಾನ ನಿಮಿತ್ತಗಳು ಬೇರೆಬೇರೆಯೆ, ಅಭಿನ್ನವಾಗಿಲ್ಲ.

'ನಿಮಿತ್ತನಾದ ಆತ್ಮನಲ್ಲಿಯೇ ಸುಖದುಃಖಗಳು ಆರೋಪಿತವಾದ್ದರಿಂದ ಆತ್ಮನು ವಿವರ್ತೋಪಾದಾನವೂ ಆಗಿದ್ದಾನೆ. ಅದರಿಂದ ಅಭಿನ್ನನಿಮಿತ್ತಉಪಾದಾನಕತ್ವರೂಪ ಸಾಧ್ಯವಿದೆ' ಎಂದು ಅದ್ವೈತಿ ಹೇಳಿದರೆ ದ್ವೈತಿಗೆ ಅದು ಅಸಿದ್ಧವಾದ್ದರಿಂದ ದೃಷ್ಟಾಂತದಲ್ಲಿ ಸಾಧ್ಯವೈಕಲ್ಯ ಪರಿಹಾರವಾಗುವುದಿಲ್ಲ.

**ಜಗದುಪಾದಾನಂ ನ ಕರ್ತೃ । ದ್ರವ್ಯೋಪಾದಾನತ್ವಾತ್ । ಮೃದ್ವತ್ । ಜಗತ್ಕರ್ತಾ ವಾ ನ ದ್ರವ್ಯೋಪಾದಾನಂ ಕರ್ತೃತ್ವಾತ್ ಕುಲಾಲವತ್ । ಇತ್ಯಾದಿನಾ ಸತ್ಪ್ರತಿಪಕ್ಷತ್ವಾಚ್ಚ ।**

ಜಗದುಪಾದಾನವು ಕರ್ತೃ ಆಗುವುದಿಲ್ಲ. ದ್ರವ್ಯೋಪಾದಾನವಾದ್ದರಿಂದ ಮಣ್ಣಿನಂತೆ. ಮಣ್ಣು ಘಟರೂಪದ್ರವ್ಯಕ್ಕೆ ಉಪಾದಾನವಾಗುತ್ತದೆ, ಕರ್ತೃ ಆಗುವುದಿಲ್ಲ. ಜಗತ್ಕರ್ತನು ದ್ರವ್ಯೋಪಾದಾನವಾಗುವುದಿಲ್ಲ ಕರ್ತನಾದ್ದರಿಂದ ಕುಲಾಲನಂತೆ. ಇತ್ಯಾದಿ ಸತ್ಪ್ರತಿಪಕ್ಷಗಳಿವೆ.

**ಏತೇನ 'ವಿಮತಂ ಅಭಿನ್ನ ನಿಮಿತ್ತೋಪಾದಾನಕಂ, ಕಾರ್ಯತ್ವಾತ್ ಸರ್ವಕಾರ್ಯ ನಿಮಿತ್ತ ಕಾಲಘಟಸಂಯೋಗವತ್ ಇತಿ ನಿರಸ್ತಂ ।**

ವಿಪ್ರತಿಪನ್ನವಾದ ಪ್ರಪಂಚವು ಅಭಿನ್ನನಿಮಿತ್ತೋಪಾದಾನಕವಾಗಿದೆ. ಕಾರ್ಯವಾದ್ದರಿಂದ, ಸರ್ವಕಾರ್ಯನಿಮಿತ್ತಕಾಲಘಟ ಸಂಯೋಗದಂತೆ' ಎಂಬ ಅನುಮಾನವು ಕೂಡ ಹಿಂದೆ ಹೇಳಿದ ದೋಷಗಳಿಂದ ನಿರಸ್ತವಾಗಿದೆ.

ಇಲ್ಲಿ ಕಾಲಘಟಸಂಯೋಗವು ದೃಷ್ಟಾಂತ. ಅದರಲ್ಲಿ ಸಾಧ್ಯಾನುಗಮವಿದೆ ಎಂದು ತಿಳಿಸಲು ಸರ್ವಕಾರ್ಯನಿಮಿತ್ತ ಎಂದು ಕಾಲಕ್ಕೆ ವಿಶೇಷಣ ಹೊರತು ಅದು ವ್ಯಾವರ್ತಕ ವಿಶೇಷಣವಲ್ಲ.

'ವಿವರ್ತಮತೇ ಉಪಾದಾನತ್ವಾನುಪಪತ್ತೇರುಕ್ತತ್ವಾತ್' ಎಂದು ವಿವರಣೋಕ್ತ ಅನುಮಾನಕ್ಕೆ ಹಿಂದೆ ದೋಷ ಹೇಳಿದ್ದರಿಂದ ಈ ಅನುಮಾನವೂ ಅದರಿಂದಲೇ ನಿರಸ್ತವಾಗಿದೆ.

ಮತ್ತು 'ಸರ್ವಕಾರ್ಯನಿಮಿತ್ತ' ಎಂದು ವಿಶೇಷಣದಿಂದ ಕಾಲಘಟಸಂಯೋಗದಲ್ಲಿ ಸಾಧ್ಯಸತ್ವವನ್ನು ಹೇಳಲೂ ಶಕ್ಯವಾಗುವುದಿಲ್ಲ. ಏಕೆಂದರೆ ಕಾಲ-ಘಟ ಸಂಯೋಗಕ್ಕೆ ಉಪಾದಾನವಾದ ಕಾಲವು ಅದಕ್ಕೆ ನಿಮಿತ್ತವಾಗಬಹುದು, ಕರ್ತೃ ಆಗುವುದಿಲ್ಲ. ಅದಕ್ಕೆ ಪ್ರೇಕ್ಷಾವತ್ತ್ವವಿಲ್ಲ. ಅಭಿನ್ನಕರ್ತ್ರುಪಾದಾನಕತ್ವವು ಇಲ್ಲಿ ಸಾಧ್ಯವಾಗಿ ಅಭಿಪ್ರೇತವಾಗಿದೆ. 'ವಿಮತಂ' ಎಂದು ಹೇಳಿದ ವಿಮತಿ ಇರುವುದು ಅಭಿನ್ನಕರ್ತ್ರುಪಾದಾನಕತ್ವ ವಿಷಯದಲ್ಲಿ ಹೊರತು ಅಭಿನ್ನ ನಿಮಿತೋಪಾದಾನಕತ್ವದಲ್ಲಿ ಅಲ್ಲ. ಅದರಿಂದ ಸಾಧ್ಯವೈಕಲ್ಯ ಪರಿಹಾರವಾಗಿಲ್ಲ.

ಮತ್ತು ಹಿಂದೆ ಹೇಳಿದ 'ಜಗದುಪಾದಾನಂ ನ ಕರ್ತೃ ದ್ರವ್ಯೋಪಾದಾನತ್ವಾತ್, ಮೃದ್ವತ್'। 'ಜಗತ್ಕರ್ತಾ ನ ದ್ರವ್ಯೋಪಾದಾನಂ, ಕರ್ತೃತ್ವಾತ್, ಕುಲಾಲವತ್' ಇತ್ಯಾದಿ ಸತ್ಪ್ರತಿಪಕ್ಷಾನುಮಾನಗಳು ಈ ಅನುಮಾನಕ್ಕೂ ದೋಷವಾಗುತ್ತವೆ.

**ತಸ್ಮಾತ್ ಜಗತ್ಕರ್ತೃತ್ವಾದಿನೈವ ಶ್ರುತ್ಯಾದಿ ವೇದ್ಯಂ, ನತೂಪಾದಾನತ್ವೇನೇತಿ ॥**

ಆದರಿಂದ ಬ್ರಹ್ಮನು ಜಗತ್ಕರ್ತೃತ್ವಾದಿ ವಿಶಿಷ್ಟನಾಗಿಯೇ ಶ್ರುತ್ಯಾದಿ ಪ್ರಮಾಣವೇದ್ಯ ನಾಗಿದ್ದಾನೆ ಹೊರತು ಜಗದುಪಾದಾನನಾಗಿ ಅಲ್ಲ ಎಂದು ಸಿದ್ಧವಾಗುವುದು.

**ಬ್ರಹ್ಮನ ಉಪಾದಾನತ್ವದಲ್ಲಿ ಪ್ರಮಾಣಭಂಗ ಇಲ್ಲಿಗೆ ಮುಗಿಯಿತು.**

# ಶ್ರೀಗುರುಸಾರ್ವಭೌಮ ಸಂಶೋಧನಾ ಮಂದಿರದಿಂದ ಇತ್ತೀಚಿನ ಪ್ರಕಟನೆಗಳು.

ಸಂಸ್ಕೃತ ಗ್ರಂಥಗಳು

1. ರಾಘವೇಂದ್ರ ವಿಜಯ – ಮೂರು ವ್ಯಾಖ್ಯಾನಗಳ ಸಹಿತ
2. ಕೃಷ್ಣಾಚಾರ್ಯ ಸ್ಮೃತಿಮುಕ್ತಾವಳೀ – ಸಮಗ್ರ ಸಂಪುಟ
3. ವಿಷ್ಣುತತ್ವ ನಿರ್ಣಯ ಟೀಕಾ (ಶ್ರೀವಿಜಯೀಂದ್ರತೀರ್ಥ ವಿರಚಿತ)
4. ಶೃತ್ಯರ್ಥಸಾರ (ಶ್ರೀವಿಜಯೀಂದ್ರತೀರ್ಥ ವಿರಚಿತ)
5. ಶ್ರೀವೇಂಕಟೇಶ ಮಹಾತ್ಮೆ – ಎರಡು ವ್ಯಾಖ್ಯಾನಸಹಿತ
   (ಭವಿಷ್ಯೋತ್ತರ ಪುರಾಣಾಂತರ್ಗತ)
6. ತರ್ಕಸಂಗ್ರಹ ಶಾಬ್ದಬೋಧ – ವಿದ್ವಾನ್ ರಾಜಾ ಎಸ್. ಗಿರಿ ಆಚಾರ್ಯರು

ಕನ್ನಡ ಗ್ರಂಥಗಳು

1. ತತ್ತ್ವಪ್ರಕಾಶಿಕಾ ಭಾವದೀಪ – ಕನ್ನಡ ಅನುವಾದ ಸಹಿತ 10 ಸಂಪುಟಗಳು
2. ತರ್ಕತಾಂಡವ ವಿಶ್ವರೂಪ – 8, 9 ಸಂಪುಟಗಳು
3. ಸ್ಮೃತಿಮುಕ್ತಾವಳಿ–
   ಕಾಲನಿರ್ಣಯಪ್ರಕರಣ, ಷೋಡಶಪ್ರಕರಣ, ಶ್ರಾದ್ಧಪ್ರಕರಣ.
4. ಭೇದೋಜ್ಜೀವನ
   ಮೂಲ ಹಾಗೂ ಕಾಶಿಕಾಟಿಪ್ಪಣಿ ಅನುವಾದಸಹಿತ.

ತೆಲುಗು ಗ್ರಂಥಗಳು

1. ರಾಘವೇಂದ್ರವಿಜಯ – ತೆಲುಗು ಅನುವಾದ ಸಹಿತ
2. ರಾಮಚಾರಿತ್ರ್ಯಮಂಜರೀ – ತೆಲುಗು ಅನುವಾದ ಸಹಿತ
3. ರಾಘವೇಂದ್ರವಿಜಯ – ಹಿಂದೀ ಅನುವಾದ ಸಹಿತ